# ಪದ್ಮ ಮಹಾಪುರಾಣ

## ಭಾಗ – ೩

## ಉತ್ತರಖಂಡ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಪದ್ಮ ಮಹಾಪುರಾಣ ಭಾಗ-3

: ಉತ್ತರಖಂಡ


ಅನುವಾದ- ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 22956505, 22956573

ಫ್ಯಾಕ್ಸ್ : 0091-80-22956570

# ಪ್ರಸ್ತಾವನೆ

ಪುರಾಣಗಳು ಭಾರತೀಯ ಸಂಸ್ಕೃತಿಯ ಅಮೂಲ್ಯ ನಿಧಿ. ಸನಾತನ ಧರ್ಮದ ಆಚಾರ ವಿಚಾರಗಳ ಆಗರ. ಹಿಂದೂದೇಶದ ಅಂದಿನ ಜನಜೀವನಕ್ಕೆ ಹಿಡಿದ ಕನ್ನಡಿ. ನಮ್ಮ ನಾಡಿನ ಹಿರಿಯರು ಬಾಳಿ ಬದುಕಿದ ಬಗೆಯನ್ನು ತಿಳಿಸಿ ಮುಂದಾದರೂ ಮಾನವರ ಜೀವನರಥವು ನ್ಯಾಯನೀತಿಗಳ ಆದರ್ಶಪಥದಲ್ಲಿ ಹೇಗೆ ಮುಂದುವರಿಯ ಬೇಕೆಂಬುದನ್ನು ಈ ಪುರಾಣಗಳು ತಿಳಿಸಿಕೊಡುತ್ತವೆ.

ಒಟ್ಟು ಪುರಾಣಗಳು ಹದಿನೆಂಟು. ಈ ಪುರಾಣಗಳು ಭಗವಂತನ ಮುಖದಿಂದ ವೇದಗಳಿಗಿಂತ ಮೊದಲು ಹೊರಬಂದವು.

ಹದಿನೆಂಟು ಪುರಾಣಗಳಲ್ಲಿ ಗುಣಗಾತ್ರಗಳಲ್ಲಿ ಅತಿದೊಡ್ಡದಾದ ಸ್ಕಂದ ಪುರಾಣ ಬೃಹತ್ತಮ. ಅದರನಂತರ ಪದ್ಮಪುರಾಣವೇ ದೊಡ್ಡದಾಗಿ ಗಾತ್ರದಲ್ಲಿ ಬೃಹತ್ತರವೂ ಗುಣದಿಂದ ಮಹತ್ತರವೂ ಎನಿಸಿದೆ. ಇದರ ಗ್ರಂಥ ಸಂಖ್ಯೆ ಐವತ್ತೈದು ಸಾವಿರದಷ್ಟಿದೆ.

''ಪದ್ಮಂ ತತ್ ಪಂಚಪಂಚಾಶತ ಸಹಸ್ರಾಣೀಹ ಪಠ್ಯತೇ''

ಎಂಬ ವಚನಾನುಸಾರ ಇದರ ಶ್ಲೋಕ ಸಂಖ್ಯೆ ಅರ್ಧ ಲಕ್ಷಕ್ಕೂ ಮಿಕ್ಕಿದೆ. ಇದರಲ್ಲಿ ಸೃಷ್ಟಿ ಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ ಎಂದು ಐದುಖಂಡ ಗಳಿವೆ. ಇವುಗಳಲ್ಲಿ ಮೊದಲಿನ ನಾಲ್ಕು ಖಂಡಗಳು ಎರಡು ಸಂಪುಟಗಳಲ್ಲಿ ಮುದ್ರಿಸಿದ್ದೇವೆ. ಈಗ ಐದನೆಯ ಉತ್ತರಖಂಡದ ಅನುವಾದವನ್ನು ಕನ್ನಡ ಪದ್ಮಪುರಾಣದ ಮೂರನೇಯ ಸಂಪುಟದಲ್ಲಿ ಮಾಡಿಕೊಡಲಾಗಿದೆ. ಉತ್ತರಖಂಡವು ಮತ್ತು (ಕೊನೆಯ)ಕ್ರಿಯಾಯೋಗಸಾರ ಖಂಡವು ದೊಡ್ಡದಿದ್ದು ಮುಂದಿನ ನಾಲ್ಕನೇಯ ಸಂಪುಟದಲ್ಲಿ ಪೂರ್ಣಗೊಳ್ಳುವುದು.

## ಉತ್ತರ ಖಂಡದಲ್ಲಿ

ಶ್ರೀ ವೇದವ್ಯಾಸ ಪ್ರಣೀತವಾದ ಹದಿನೆಂಟು ಪುರಾಣಗಳಲ್ಲಿ ಪದ್ಮಪುರಾಣ ವಿಶಿಷ್ಟ ಹಾಗೂ ಶ್ರೇಷ್ಠ. ಬಗೆಬಗೆಯ ನೀತಿಬೋಧಕವಾದ ನಿದರ್ಶನ ಹಾಗೂ ಬೋಧಪ್ರದವಾದ ಅನೇಕ ಆಖ್ಯಾನ ಉಪಾಖ್ಯಾನಗಳ ಮುಖಾಂತರ ಜನರಲ್ಲಿ ಭಕ್ತಿಭಾವವನ್ನು ಬೆಳೆಸಿ ನೈತಿಕ ನೆಲೆಗಟ್ಟಿನ ಮೇಲೆ ಧರ್ಮಪ್ರಧಾನವಾದ ಸುಂದರ ಬಾಳಿನ ಹಂದರವನ್ನು ಹಬ್ಬಿಸುವಲ್ಲಿ ಈ ಪುರಾಣವು ಯಶಸ್ವಿಯಾಗಿದೆ. ಪದ್ಮಪುರಾಣದ ಈ ಉತ್ತರಖಂಡ- ಕ್ರಿಯಾಯೋಗಸಾರ ಖಂಡದಲ್ಲಿ ಅನೇಕಾನೇಕ ತೀರ್ಥಕ್ಷೇತ್ರಗಳ ಪ್ರಭಾವ ಹಾಗೂ ಮಾಹಾತ್ಮ್ಯದ ನಿರೂಪಣೆಯಲ್ಲದೆ, ಭಗವದ್ಗೀತೆ ಹಾಗೂ ಭಾಗವತದಂಥ ಭಾರತೀಯ ಸಾರಸ್ವತ ನಿಧಿಯ ಪ್ರಭಾವ ಪರಿಚಯವನ್ನು ಕೂಡ ಬಗೆಬಗೆಯ ಅನುಭವ ಅವಿಷ್ಕಾರದೊಂದಿಗೆ ಹೃದ್ಯವಾಗಿ ನಿರೂಪಿಸಲಾಗಿದೆ.

ಪರ್ವತಾಖ್ಯಾನ, ಜಾಲಂಧರನ ಕಥೆ, ಶ್ರೀಶೈಲಾದಿಕ್ಷೇತ್ರ, ಸಮುದ್ರ, ಗಂಗಾ ಪ್ರಯಾಗ, ಕಾಶಿ, ಗಯಾ ಮುಂತಾದ ತೀರ್ಥಕ್ಷೇತ್ರಗಳ ಬಣ್ಣನೆ, ಇಪ್ಪತ್ತನಾಲ್ಕು ಏಕಾದಶೀ ವ್ರತಗಳ ಮಹಿಮೆ ವರ್ಣನೆ, ವಿಷ್ಣುಧರ್ಮ, ವಿಷ್ಣು ಸಹಸ್ರನಾಮ, ಕಾರ್ತಿಕ ವ್ರತ, ಮಾಘಸ್ನಾನ, ನರಸಿಂಹವೃತ್ತಾಂತ, ವಿಷ್ಣು ಮತ್ತು ಶಿವರ ಪೂಜಾದಿಗಳು, ವಿಷ್ಣು ಮತ್ತು ರಾಮಸಹಸ್ರನಾಮಗಳಂತಹ ಸಹಸ್ರನಾಮಗಳ ಮಹಿಮೆ ಕರ್ಮ ಮತ್ತು ಅದರ ಫಲ ದೇವಶರ್ಮಾಖ್ಯಾನ, ಗೀತಾ ಮಹಾತ್ಮ್ಯ, ಭಾಗವತ ಮಹಾತ್ಮ್ಯ, ಮಂತ್ರರತ್ನಾಭಿಧಾನ,

ಮತ್ಸ್ಯಾದಿ ದಶಾವತಾರ ಕಥಾ, ರಾಮನಾಮ ಮಹಾತ್ಮ್ಯ, ಭೃಗುಕೃತ ವಿಷ್ಣು ವೈಭವ ಪರೀಕ್ಷಾ ಮುಂತಾಗಿ ಅನೇಕ ವಿಷಯ ವಿಶೇಷಗಳು ಪ್ರತಿಪಾದಿತವಾಗಿವೆ.

ಮುಖ್ಯವಾಗಿ ಈ ಪದ್ಮ ಪುರಾಣವು ವೈಷ್ಣವ ಪುರಾಣವಾಗಿದೆ. ಇದರ ಬಹು ಭಾಗವು ಶ್ರೀವಿಷ್ಣುವಿನ ಪರಮೋತ್ಕರ್ಷವನ್ನು ಅನೇಕ ಆಖ್ಯಾನ ಉಪಾಖ್ಯಾನ ಸಂವಾದ ಉಪದೇಶ ಮುಂತಾದವುಗಳಿಂದ ಪ್ರತಿಪಾದಿಸಲಿಕ್ಕಾಗಿಯೇ ಹೊರಟಿದೆ. ಅನೇಕ ಸಂದರ್ಭದಲ್ಲಿ ಮಹಾದೇವರ ಹಾಗು ಬ್ರಹ್ಮದೇವರ ಮಹಾ ಮಹಿಮೆಗಳೂ ಚೆನ್ನಾಗಿಯೇ ಪ್ರತಿಪಾದಿಸಲ್ಪಟ್ಟಿವೆ. ಅನೇಕ ಸಂದರ್ಭಗಳಲ್ಲಿ ಸ್ಪಷ್ಟವಚನಗಳಿಂದ ಒಬ್ಬನೇ ಪರಮಾತ್ಮನು. ಬ್ರಹ್ಮ, ಶಿವ, ಹರಿರೂಪಿಯಾಗಿ ಅವರವರಲ್ಲಿ ನಿಂತು ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಮಾಡುವನೆಂದು ಹೇಳಲಾಗಿದೆ.

ಈ ಪದ್ಮ ಪುರಾಣದ ಶೈಲಿ, ರಚನೆ, ಪಾತ್ರಸೃಷ್ಟಿ, ಧರ್ಮದೃಷ್ಟಿ, ರಸಪುಷ್ಟಿಗಳ ಬಗೆಗೆ ಬಹಳಷ್ಟು ಹೇಳಲಿಕ್ಕಿದ್ದರೂ ಈಗಾಗಲೇ ಈ ಪೂರ್ವಪೀಠಿಕೆಯು ಪರ್ಯಾಪ್ತ ಮಾತ್ರೆಯಲ್ಲಿ ಅತಿಲಂಬಿಸಿರುವುದರಿಂದ ಅದೆಲ್ಲವನ್ನು ಈ ಪದ್ಮಪುರಾಣದ ಮುಂದಿನ ಭಾಗದಲ್ಲಿ ನಿರೂಪಿಸಲಾಗಿದೆ.

ಪ್ರಕೃತ ಪದ್ಮಪುರಾಣವು ಗಾತ್ರದಿಂದ ಬೃಹತ್ತರವೂ ವಿಷಯ ವೈಶಾಲ್ಯದಿಂದ ಮಹತ್ತರವೂ ಆದ ಶ್ರೇಷ್ಠ ಪುರಾಣವಾಗಿದೆ. ಇದರ ಗ್ರಂಥ ಸಂಖ್ಯೆ ಐವತ್ತೈದು ಸಾವಿರದಷ್ಟು. ಐದು ಖಂಡಗಳು ಇದರಲ್ಲಿ ಇರುತ್ತವೆ. ಸೃಷ್ಟಿಖಂಡ-ಭೂಮಿಖಂಡ-ಸ್ವರ್ಗಖಂಡ-ಪಾತಾಳಖಂಡ-ಉತ್ತರಖಂಡ-(ಕ್ರಿಯಾಯೋಗಸಾರಖಂಡ) ಇದರಲ್ಲಿ ಮೊದಲನೆಯದಾದ ಸೃಷ್ಟಿಖಂಡದಲ್ಲಿ ಐದು ಪರ್ವಗಳಿರುತ್ತವೆ.

ಈ ಐದುಖಂಡಗಳನ್ನು ನಾಲ್ಕು ಭಾಗಗಳಲ್ಲಿ ಇತ್ತೀಚಿಗೆ ಅಂದರೆ ೨೦೦೫ನೇ ಇಸವಿಯಲ್ಲಿ ದ್ವಿತೀಯ ಮುದ್ರಣ ಮಾಡಿ ಪ್ರಕಟಿಸಿದ್ದೇವೆ. ಅದರಲ್ಲಿ ಪದ್ಮಮಹಾಪುರಾಣ ಭಾಗ-೧ ಸೃಷ್ಟಿಖಂಡ, ಪದ್ಮಮಹಾಪುರಾಣ ಭಾಗ-೨ರಲ್ಲಿ ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಪದ್ಮಮಹಾಪುರಾಣ ಭಾಗ-೩ರಲ್ಲಿ ಉತ್ತರಖಂಡ ಶುರುವಾಗಿ ಪದ್ಮಮಹಾಪುರಾಣ ಭಾಗ-೪ರಲ್ಲಿ ಉತ್ತರಖಂಡ ಸಂಪೂರ್ಣವಾಗುವುದರೊಂದಿಗೆ ವೇದವ್ಯಾಸರಚಿತ ಬೃಹತ್ ಪದ್ಮಮಹಾಪುರಾಣ ಕನ್ನಡಾನುವಾದವು ಭಾಗ-೧, ಭಾಗ-೨, ಭಾಗ-೩, ಭಾಗ-೪ ಒಟ್ಟು ನಾಲ್ಕು ಭಾಗದಲ್ಲಿ ಹಾಗೂ ಕ್ರಿಯಾಯೋಗಸಾರ ಖಂಡ ಸಂಪೂರ್ಣವಾಗಿ ಮುದ್ರಣಗೊಂಡಿದೆ. (ಈ ಹಿಂದೆ ಈ ಐದು ಖಂಡಗಳೂ ಒಟ್ಟು ಏಳು ಭಾಗದಲ್ಲಿ ಮುದ್ರಣವಾಗಿದ್ದು ಸರಿಯಷ್ಟೆ. ಈ ಹಿಂದೆ ಏಳು ಭಾಗದಲ್ಲಿ ಮುದ್ರಣವಾಗಿದ್ದನ್ನೇ, ಒಂದರಕ್ಷರವೂ ಬಿಡದಂತೆ ಯಥಾವತ್ತಾಗಿ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಮುದ್ರಣಕಾರರಾದ ಶ್ರೀವೆಂಕಟೇಶ್ವರ ಪ್ರಿಂಟರ್ಸ್ ಮಾಲೀಕರಾದ ಚಿರಂಜೀವಿ ಕೆ.ವಿ. ಸತ್ಯನಾರಾಯಣರವರ ಶ್ರದ್ಧೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ ಹಾಗೂ ಆಸಕ್ತಿಯಿಂದ ಬರೀ ನಾಲ್ಕು ಭಾಗಗಳಲ್ಲೇ ಮುದ್ರಣ ಪೂರ್ಣಗೊಳಿಸಲಾಗಿದೆ).

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 24 – 02 – 2006 — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತು ಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತು ಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ 'ನ ಭೂತೋ ನ ಭವಿಷ್ಯತಿ' ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜನಿಯರಿಂಗ್ ವ್ಯಾಸಂಗಮಾಡಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳಿಗೆ ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸ ದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಕೂಲಂಕುಷವಾಗಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ಸದ್ಯ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ ಶ್ರೇಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪದ್ಮಪುರಾಣ ಗ್ರಂಥದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, 3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ, ಸುಶೀಲ ರಸ್ತೆ, ಬೆಂಗಳೂರು-4 ಇದರ ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೆಂಟು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಈ ಹಿಂದೆ ಅಕ್ಷರಜೋಡಣೆ ವಿಧಾನದಿಂದ ಮುದ್ರಣಗೊಂಡ ಐದು ಖಂಡಗಳನ್ನೊಳಗೊಂಡ (ಸೃಷ್ಟಿಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ) ಏಳು ಸಂಪುಟಗಳನ್ನೂ ಯಥಾವತ್ತಾಗಿ ಒಂದಕ್ಷರವೂ ಬಿಡದೆ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ, ಆಸಕ್ತಿಯಿಂದ ನಾಲ್ಕು ಸಂಪುಟಗಳಲ್ಲೇ ಈ ಪದ್ಮಮಹಾಪುರಾಣವನ್ನು ಪೂರ್ಣಗೊಳಿಸಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕಾಪಾಡಲಿ ಎಂದು ಆಶಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ
ಪಂ. ಪಂಢರೀನಾಥಾಚಾರ್ಯಗಲಗಲಿ
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

ಹುಬ್ಬಳ್ಳಿ
ದಿನಾಂಕ 24 – 2 – 2006

# ಪದ್ಮಪುರಾಣ ಭಾಗ - ೩

## ಉತ್ತರಖಂಡ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ



—○—

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚುಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆದ ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ದಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ. ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾಥಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿ ಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

**ಕೆ.ಎಲ್. ಶ್ರೀಹರಿ ಖೋಡೆ**
ಪ್ರಕಾಶಕರು, ಖೋಡೆ ಫೌಂಡೇಶನ್,
ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ,
ಶೇಷಾದ್ರಿ ರಸ್ತೆ, ಗಾಂಧಿನಗರ,
ಬೆಂಗಳೂರು-560 009

॥ ಶ್ರೀ ವೇದವ್ಯಾಸಾಯ ನಮಃ ॥

# ಪದ್ಮಮಹಾಪುರಾಣ ಭಾಗ - ೩

# ಉತ್ತರ ಖಂಡ

## ಮಹೇಶ ನಾರದ ಸಂವಾದ — ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥**

ಸಮುದ್ರದ ನೀರಿನಲ್ಲಿ ಪವಡಿಸಿದ. ಎಲ್ಲ ಸದ್ಗುಣಗಳಿಗೆ ಆಶ್ರಯನಾದ ಲಕ್ಷ್ಮೀಪತಿಯಾದ ನಾರಾಯಣ ದೇವರನ್ನು ವಂದಿಸಿ, ಅನಂತರ ವಾಯುದೇವರನ್ನೂ, ಶೇಷದೇವರನ್ನೂ ನಮಿಸಿ, ಮಹಾಲಕ್ಷ್ಮೀದೇವಿಯನ್ನು ಸ್ಮರಿಸಿ ವಿದ್ಯಾಧಿದೇವತೆಯಾದ ಸರಸ್ವತೀದೇವಿಗೆ ಪ್ರಣಾಮಗೈದು ಅನಂತರ ವೇದವ್ಯಾಸ ದೇವರನ್ನು ನಮಸ್ಕರಿಸಿ ಪುರಾಣವನ್ನು ಪಠಿಸಬೇಕು.

**"ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।**
**ಚಕ್ಷುರುನ್ಮೀಲಿತಂ ಏನ ತಸ್ಮೈಶ್ರೀ ಗುರವೇ ನಮಃ ॥"**

ಅಜ್ಞಾನವೆಂಬ ಕತ್ತಲೆಯಿಂದ ಕುರುಡರಂತಾದ ಜನರ ಕಣ್ಣನ್ನು ಜ್ಞಾನವೆಂಬ ಅಂಜನ ಶಲಾಕೆಯಿಂದ ತೆರೆದು ಯಾರು ಬೆಳಕನ್ನು ಬೀರಿರುವರೋ ಅಂಥ ಗುರುಗಳಿಗೆ ನಮಸ್ಕಾರ.

**ಋಷಿಗಳು:-** ಪಂಡಿತ ಶ್ರೇಷ್ಠನಾದ ಸೂತಾಚಾರ್ಯ, ನೀನು ನಮಗೆ ಅನೇಕ ಆಖ್ಯಾನ ಉಪಾಖ್ಯಾನಗಳಿಂದೊಡಗೂಡಿದ ಪದ್ಮಪುರಾಣದ ಪಾತಾಳಖಂಡವನ್ನು ನಿರೂಪಿಸಿದೆ. ಇವೆಲ್ಲವನ್ನೂ ನಾವು ಆಲಿಸಿದೆವು ಪರಮಾನಂದದಿಂದ. ಇನ್ನು ಪದ್ಮಪುರಾಣದ ಉಳಿದ ಭಾಗವನ್ನೂ ಕೇಳಬೇಕು ಎಂದು ನಮ್ಮ ಹೆಬ್ಬಯಕೆ. ಈ ಪದ್ಮಪುರಾಣದ ಶ್ರವಣದಿಂದ ನಮಗೆ ಭಗವಂತನ ವಿಷಯದಲ್ಲಿ ಅಧಿಕಾಧಿಕವಾದ ಭಕ್ತಿ ಉಂಟಾಗಿದೆ. ದಯವಿಟ್ಟು ಪದ್ಮಮಹಾಪುರಾಣದ ಶೇಷಭಾಗನ್ನು ಹೇಳು.

**ಸೂತ:-** ಮುನಿಗಳೇ, ಕೇಳಿರಿ. ಹಿಂದೆ ನಾರದ ಮುನಿಯು ಶಂಕರನಿಗೆ ಇದೇ ಪ್ರಶ್ನೆ ಕೇಳಿದ. ಅದಕ್ಕೆ ಉತ್ತರರೂಪವಾಗಿ ಮಹಾದೇವನು ನಾರದರಿಗೆ ಹೇಳಿದುದನ್ನೇ ನಾನು ನಿಮಗೆ ಈಗ ನಿರೂಪಿಸುತ್ತೇನೆ.

ಪೂರ್ವಕಾಲದಲ್ಲಿ ಒಂದು ಸಲ ನಾರದ ಮಹರ್ಷಿಯು ಲೋಕ ಸಂಚಾರಗೈಯುತ್ತ ಮಂದರ ಪರ್ವತಕ್ಕೆ ಮಹಾದೇವರನ್ನು ಭೇಟಿ ಮಾಡಬೇಕೆಂದು ತೆರಳಿದ. ಮಂದರ ಪರ್ವತದ ಒಂದು ಸುಂದರ ಸ್ಥಾನದಲ್ಲಿ ಮಂಡಿಸಿದ್ದ ಉಮಾನಾಥ. ಅವನಿಗೆ ವಂದಿಸಿದ ಆ ದೇವಮುನಿ.

ಶಿವನ ಆದೇಶದಂತೆ ಅವನ ಎದುರು ಇದ್ದ ಒಂದು ಆಸನದ ಮೇಲೆ ಆಸೀನನಾದ. ಈಗ ನೀವು ನನಗೆ ಕೇಳಿದ ಪ್ರಶ್ನೆಯನ್ನೇ ನಾರದ ಮುನಿ ಆ ಗೌರೀಪತಿಗೆ ಕೇಳಿದ.

**ನಾರದ:-** ಪಾರ್ವತೀಪತಿಯೆ, ನೀನು ಜಗದ್ಗುರು. ನಮಗೆ ಪರಮಾತ್ಮ ತತ್ವದ ದಿವ್ಯ ಜ್ಞಾನವು ಆಗುವಂತೆ ಉಪದೇಶವನ್ನು ನೀಡು.

**ಮಹಾದೇವ:-** ನಾರದ, ಭಗವತ್ ತತ್ವವನ್ನು ನಿಜವಾಗಿ ಅರಿಯಬೇಕಾದರೆ ವೇದ ಸಮ್ಮತವಾದ ಪದ್ಮಪುರಾಣವನ್ನು ತಿಳಿದುಕೊಳ್ಳಬೇಕು. ಅದರಿಂದ ಎಲ್ಲ ಪಾಪಗಳಿಂದ ಬಿಡುಗಡೆ. ಸರ್ವಪುಣ್ಯ ಪ್ರಾಪ್ತಿ. ಪದ್ಮಪುರಾಣದ ಈ ಉತ್ತರಖಂಡದಲ್ಲಿ ಪರ್ವತಾಖ್ಯಾನ ಜಾಲಂಧರನ ಆಖ್ಯಾನ, ಶ್ರೀಶೈಲ ಬಣ್ಣನೆ, ಹರಿದ್ವಾರದ ಮಹಿಮೆ, ಪ್ರಯಾಗತೀರ್ಥ, ದಶಾಶ್ವಮೇಧ ತೀರ್ಥಗಳ ವಿವರ ನಿರೂಪಣೆಯನ್ನು ಮಾಡುತ್ತೇನೆ. ಪದ್ಮಪುರಾಣದ ಈ ಉತ್ತರ ಖಂಡದಲ್ಲಿ ಇದಲ್ಲದೇ ತುಳಸಿಯ ಮಹಿಮೆ, ಶಂಖ, ಚಕ್ರ ಗದಾದಿ ಮಹಿಮೆ, ದ್ವಾರಕೆಯ ವಿವರಣ, ಉತ್ಸವಾದಿಗಳ ವಿಧಾನ, ಕೆರೆ, ಬಾವಿ, ಜಲಾಶಯಗಳ ನಿರ್ಮಾಣ ಪುಣ್ಯ, ನೀರಿನ ಅರವಟ್ಟಿಗೆಯನ್ನು ಇರಿಸುವದರ ಪುಣ್ಯ, ಗಾಣಪತ್ಯಾಗಮ, ವೈಷ್ಣವಾಗಮ, ಜೀರ್ಣೋದ್ಧಾರದ ಮಾಹಾತ್ಮ್ಯ, ಗಂಗಾಸಮಾಗಮ, ಸ್ತ್ರೀಧರ್ಮ, ಶೂದ್ರ ಧರ್ಮ, ಉಮಾಮಹೇಶ ಸಂವಾದ, ವಿಷ್ಣು ಸಹಸ್ರನಾಮದ ಮಾಹಾತ್ಮ್ಯ, ಸ್ತ್ರೀ ಶೂದ್ರರೂ ಕೂಡಾ ಪಠಿಸಬಹುದಾದ ಈ ಸ್ತೋತ್ರದಿಂದ ಬರುವ ಮಹಾಪುಣ್ಯ, ವಿಷ್ಣು ಸಹಸ್ರನಾಮದ ಪ್ರಭಾವ, ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಸ್ಥಾನ, ಸ್ತ್ರೀಯರ ಕರ್ತವ್ಯ, ವರುಷದಲ್ಲಿ ಬರುವ ಇಪ್ಪತ್ತ ನಾಲ್ಕು ಏಕಾದಶಿ, ದ್ವಾದಶಿಗಳ ಮಾಹಾತ್ಮ್ಯ, ಗೋದಾವರಿಯ ಮಹಾತ್ಮ್ಯ, ಶಂಖ, ಚಕ್ರಾದಿ ಧಾರಣ, ಬ್ರಾಹ್ಮಣರು ಆ ವಿಷ್ಣುಚಿಹ್ನೆಗಳನ್ನು ಧರಿಸುವ ವಿಶೇಷ ವಿಧಿ. ಯಮುನಾ, ಗಂಡಕೀ, ವೇತ್ರವತೀ ಮುಂತಾದ ನದಿಗಳ ಮಾಹಾತ್ಮ್ಯ. ಗಿಲ್ಲಿ ತೀರ್ಥದಿಂದ ಉದ್ಭವಿಸಿದ ಶಿಲಾಕ್ಷೇತ್ರದ ಮಾಹಾತ್ಮ್ಯ ಮೊದಲಾದವುಗಳನ್ನೆಲ್ಲ ಈ ಉತ್ತರ ಖಂಡದಲ್ಲಿ ನಾನು ಹೇಳುತ್ತೇನೆ.

ಅರ್ಬುದೇಶ್ವರ ಮಹಿಮೆ, ಸರಸ್ವತೀ ಸಿದ್ಧಕ್ಷೇತ್ರಗಳ ಮಹಿಮೆ, ಪದ್ಮನಾಭ ಸಮತಪ್ತಿ, ತುಳಸೀಧಾರಣ, ಗೋಪೀಚಂದನ ಮಾಹಾತ್ಮ್ಯ, ಪಟ್ಟಪೂಜೆ, ನಿರಂಜನ ಮಹಾತ್ಮ್ಯ ಅಲ್ಲಿ ದೀಪದಾನ, ಧೂಪದಾನ, ಕಾರ್ತೀಕ ಮಾಸ ಮಾಹಾತ್ಮ್ಯ, ಮಾಘ ಮಾಹಾತ್ಮ್ಯ, ಎಲ್ಲ ವ್ರತಗಳ ವಿಧಿ ವಿಧಾನ ಮಾಹಾತ್ಮ್ಯಗಳನ್ನು ಇಲ್ಲಿ ಹೇಳುತ್ತೇನೆ. ಹಾಗೂ ಬ್ರಹ್ಮಹತ್ಯಾದಿ ಪಾಪಗಳನ್ನು ದೂರಮಾಡುವ ಜಗನ್ನಾಥ ಕ್ಷೇತ್ರದ ಮಹಾಮಹಿಮೆಯನ್ನು ಹಾಗೂ ಅಲ್ಲಿಯ ಪೂಜೆಯ ಮಹಿಮೆಯನ್ನೂ ಹೇಳುತ್ತೇನೆ. ವಿಷ್ಣುಪೂಜೆ, ಗೋಪೂಜೆ, ಸಿದ್ಧಪೂಜೆಗಳ ಪುಣ್ಯಫಲವನ್ನು ಮತ್ತು ಬಾಳೆಯ ಬಳ್ಳಿಯ ಫಲವನ್ನೂ ಮತ್ತು ಗೋದಾನ, ಅಶ್ವದಾನ, ಗಜದಾನ, ವೃಕ್ಷದಾನಗಳ ಪುಣ್ಯವನ್ನು ಹೇಳುತ್ತೇನೆ. ಜಪದ ಮಹಿಮೆಯನ್ನು ಬಣ್ಣಿಸುತ್ತೇನೆ. ಮಂತ್ರದೀಕ್ಷೆ, ಗುರುವಿನ ಲಕ್ಷಣ, ಶಿಷ್ಯನ ಲಕ್ಷಣ, ಪಾದೋದಕದ ಮಹಿಮೆ, ಪಿತೃಶ್ರಾದ್ಧ, ನೀಲೋತ್ಸರ್ಗ, ಗ್ರಹಣಕಾಲದ ದಾನ, ಸಾಲಿಗ್ರಾಮದ ದಾನ, ಶ್ರೀಹರಿಯ ನಿರ್ಮಾಲ್ಯ, ಗಂಧ, ತುಳಸಿ, ಹೂಹಾರಗಳ ಮಹಿಮೆ, ದಶಮಿ, ಏಕಾದಶಿ, ವೇಧ ದ್ವಾದಶಿ ಹರಿವಾಸರಗಳ ಮಹಿಮೆಯನ್ನೂ, ರುದ್ರದೇವರ ನಾಮಗಳನ್ನೂ, ಮಧುರಾ ಕುರುಕ್ಷೇತ್ರ, ಸೇತುಬಂಧ, ರಾಮೇಶ್ವರ, ಪಂಚವಟೀ, ದಂಡಕಾರಣ್ಯ, ನೃಸಿಂಹ

ಉತ್ಪತ್ತಿ, ಗೀತಾಮಾಹಾತ್ಮ್ಯ, ಭಾಗವತ ಮಾಹಾತ್ಮ್ಯ, ಇಂದ್ರಪ್ರಸ್ಥ ಮಾಹಾತ್ಮ್ಯ, ರುಕ್ಮಾಂಗದ ಚರಿತ್ರ, ವಿಷ್ಣುಭಕ್ತರ ಮಹಿಮೆ, ವಿಷ್ಣುಭಕ್ತರಿಗೆ ಭೋಜನ ಮಾಡಿಸಿದ ಫಲ, ವೈಷ್ಣವಧರ್ಮ ಮಾಹಾತ್ಮ್ಯ, ವಿಷ್ಣುನಿಂದೆಯಪಾಪ, ಜ್ವಾಲಾಮುಖಿಯ ಸ್ಥಾನ ಓಮತ್ರೈಲೇಕ್ಷಣ, ಬ್ರಹ್ಮೋತ್ಪತ್ತಿದೇಶ, ಕಾಯಸ್ಥೋತ್ಪತ್ತಿ ಗಯಾಖ್ಯಾನ, ಗದಾಧರ ಸ್ವರೂಪ, ಫಲ್ಗುವರ್ಣನ, ಮಹಾಬೋಧ ಸ್ವರೂಪ, ರಾಮಗಯಾ ಮಾಹಾತ್ಮ್ಯ, ಬ್ರಹ್ಮಶಿಲಾ, ಅಕ್ಷಯವಟಶ್ರಾದ್ಧ ಪುಣ್ಯ, ಮಹಾದೇವಕೃತ ವಿಷ್ಣು ಭಕ್ತಿ, ಕಾಶೀ ವಿಶ್ವನಾಥನ ಜಪ, ಸಮುದ್ರ ಮಹಿಮೆ, ತಿಲತರ್ಪಣ, ತುಲಸೀದಲಯುಕ್ತ ತರ್ಪಣ, ಶಂಖನಾದದ ಮಹಿಮೆ, ರವಿವಾರ, ವೈಧೃತಿ ವ್ಯತೀ ಪಾತಗಳ ಮಹಿಮೆ ಮುಂತಾದವುಗಳನ್ನೆಲ್ಲ ಈ ಪದ್ಮಪುರಾಣದ ಉತ್ತರ ಖಂಡದಲ್ಲಿ ನಿರೂಪಿಸುತ್ತೇನೆ. ಅನ್ನದಾನ, ವಸ್ತ್ರದಾನ, ಶಯ್ಯಾದಾನ, ಭೂಮಿದಾನ, ಗೋದಾನ, ಜನ್ಮಾಷ್ಠಮಿ ಮಾಹಾತ್ಮ್ಯ, ಮತ್ಸ್ಯಕೂರ್ಮ ಮಾಹಾತ್ಮ್ಯ, ವರಾಹಮಾಹಾತ್ಮ್ಯ ಪ್ರಲ್ಹಾದಾದಿಭಕ್ತ ಮಾಹಾತ್ಮ್ಯ, ಜಾಗರ ದೀಪದಾನ, ಪ್ರಹರಪೂಜೆಗಳ ಪುಣ್ಯಫಲ, ಪರಶುರಾಮ ಚರಿತ್ರ, ನರ್ಮದಾಖ್ಯಾನ, ವೇದಪುರಾಣಗಳ ದಾನ, ಆಶ್ರಮಗಳ ನಿರೂಪಣೆ, ಬಂಗಾರದ ದಾನ, ಬ್ರಹ್ಮಾಂಡದಾನ ಪದ್ಮಪುರಾಣ ದಾನಗಳ ಮಹಿಮೆ ಮುಂತಾದವುಗಳನ್ನೆಲ್ಲ ಈ ಉತ್ತರ ಖಂಡದಲ್ಲಿ ನಿರೂಪಿಸುತ್ತೇನೆ. ಈ ಪದ್ಮಪುರಾಣವು ೧)ಸೃಷ್ಟಿಖಂಡ ೨) ಭೂಮಿಖಂಡ ೩) ಸ್ವರ್ಗಖಂಡ ೪) ಬ್ರಹ್ಮಖಂಡ ೫) ಪಾತಾಳಖಂಡ ೬) ಉತ್ತರಖಂಡ ೭) ಕ್ರಿಯಾಯೋಗಸಾರಖಂಡ ಎಂದು ಏಳು ಖಂಡಾತ್ಮಕವಾಗಿ ಪದ್ಮಪುರಾಣವು ಶ್ರೀ ವೇದವ್ಯಾಸರಿಂದ ರಚಿತವಾಗಿದೆ. ಬ್ರಾಹ್ಮಣ ಹಾಗೂ ಸ್ತ್ರೀ ಶೂದ್ರರಿಗೆ ಶ್ರೇಯಸ್ಸನ್ನು ಉಂಟುಮಾಡಲಿಕ್ಕೆ ರಚಿತವಾದ ಈ ಪುರಾಣದ ಪಠಣ ಶ್ರವಣದಿಂದ ದುಃಖದಾರಿದ್ರ್ಯ ದೂರಾಗುವದು. ಕೊನೆಗೆ ಮೋಕ್ಷ ದೊರಕುವದು. ವಿಧಿಪೂರ್ವಕವಾಗಿ ಈ ಪುರಾಣವನ್ನು ದಾನ ಕೊಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಮೊದಲನೇಯ ಅಧ್ಯಾಯ ಮುಗಿದುದು*

—o—

ಶಿವ ನಾರದ ಸಂವಾದ

ಅಧ್ಯಾಯ - ೨

## ಬದರೀನಾರಾಯಣ ಮಾಹಾತ್ಮ್ಯೆ

**ಮಹೇಶ್ವರ:-** ಒಟ್ಟು ಈ ಭೂಖಂಡದಲ್ಲಿ ಒಂದು ಲಕ್ಷ ಇಪ್ಪತ್ತೈದು ಸಾವಿರ ಪರ್ವತಗಳು ಇರುತ್ತವೆ. ಅದರಲ್ಲಿ ಹಿಮಾಲಯವು ಸರ್ವಶ್ರೇಷ್ಠ. ಅದರಲ್ಲಿ ಬದರಿಕಾಶ್ರಮವು ಅತ್ಯುತ್ತಮ. ಭಗವಾನ್ ಶ್ರೀಮಹಾವಿಷ್ಣುವು ನರನಾರಾಯಣ ರೂಪದಿಂದ ನೆಲೆಸಿದ್ದಾನೆ. ಆ ಪುಣ್ಯಾರಣ್ಯದಲ್ಲಿ ಆ ನರನಾರಾಯಣ ದೇವರ ಸ್ವರೂಪ ಮತ್ತು ತೇಜಸ್ಸನ್ನು ಹೇಳುತ್ತೇನೆ ಕೇಳಿ.

ನಾರದ, ಉತ್ತುಂಗವಾದ ಆ ಹಿಮಗಿರಿಯ ಶೃಂಗದಲ್ಲಿ ನರ-ನಾರಾಯಣ ಎಂಬ ಇಬ್ಬರು ಪುಣ್ಯಪುರುಷರು ನೆಲೆಸಿರುತ್ತಾರೆ. ಅವರಿಬ್ಬರಲ್ಲಿ ಒಬ್ಬನು ಅಚ್ಚ ಬಿಳಿ ಬಣ್ಣದ ಶ್ವೇತವರ್ಣದಿಂದ ಶೋಭಿಸುತ್ತಿದ್ದರೆ ಇನ್ನೊಬ್ಬನು ಕಪ್ಪುದೇಹದ ಕಾಂತಿಯಿಂದ ಒಪ್ಪುವನು. ಅವರಲ್ಲಿ ಕೃಷ್ಣ ವರ್ಣ ಕಪ್ಪು ಮನುಷ್ಯನೇ ಸಾಕ್ಷಾತ್ ನಾರಾಯಣ. ಜಗತ್ತಿನ ಹುಟ್ಟು, ಲಯ ರಕ್ಷಣಗಳಿಗೆ ಮೂಲ ಕಾರಣನಾದ ಮಹಾಪ್ರಭು. ಅವನಿಗೆ ನಾಲ್ಕು ಬಾಹುಗಳು. ಜಟಾಧಾರಿಯಾದ ಆ ನಾರಾಯಣ ದೇವರ ಪೂಜೆ ಉತ್ತರಾಯಣ ಕಾಲದಲ್ಲಿ ಶುರುವಾಗಿ ಆರು ತಿಂಗಳು ಮಾತ್ರ ನೆರವೇರುವದು. ಚಳಿಗಾಲದಲ್ಲಿ ನಿರಂತರ ಹಿಮಪಾತದಿಂದ ಈ ಬದರೀ ಕ್ಷೇತ್ರವು ಮುಚ್ಚಿ ಹೋಗುವದು. ಆ ಆರು ತಿಂಗಳು ಹಿಮಾಚ್ಛಾದಿತವಾದ ಈ ಬದರೀಕ್ಷೇತ್ರದಲ್ಲಿ ಈ ನಾರಾಯಣ ದೇವರಿಗೆ ಮಾನವರ ಪೂಜೆಯು ಇರುವದಿಲ್ಲ. ಇಂಥ ಪುಣ್ಯಕ್ಷೇತ್ರವೂ ಮತ್ತು ಮಹತ್ತಮನಾದ ದೇವನೂ ಹಿಂದೆ ಆಗಿಲ್ಲ. ಮುಂದೆ ಆಗುವದಿಲ್ಲ. ಇದು ಎಲ್ಲ ದೇವತೆಗಳ ನೆಲೆ. ಮಹಾ ಮಹರ್ಷಿಗಳ ಆಶ್ರಮಗಳು ಇದರ ಸುತ್ತಲೂ ಇರುತ್ತವೆ. ಅಗ್ನಿಹೋತ್ರಾದಿ ಯಜ್ಞಕಾರ್ಯಗಳು ಇಲ್ಲಿ ನಿರಂತರ ನಡೆದಿರುತ್ತವೆ. ವೇದಮಂತ್ರಗಳ ಮಂಜುಳಘೋಷ ಯಾವಾಗಲೂ ಕೇಳಿ ಬರುತ್ತದೆ ಇಲ್ಲಿಯ ಪುಣ್ಯಾರಣ್ಯಗಳಲ್ಲಿ.

ಇಂಥ ಪರಮಪಾವನವಾದ ಬದರಿಕಾಶ್ರಮದ ದರ್ಶನವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು ಮಾನವರಾಗಿ ಹುಟ್ಟಿದವರು ಇಲ್ಲಿ ಹರಿಯುವ ದೇವಗಂಗೆಗೆ ಅಲಕನಂದಾ ಎಂದು ಹೆಸರು. ಅಲ್ಲಿ ಸ್ನಾನ, ನಾರಾಯಣನ ದರ್ಶನ ಎರಡೂ ದುರ್ಲಭ. ಕೋಟಿ ಪಾಪ ಪರಿಹಾರಕ.

ನಾರದ, ಹಿಂದೆ ನಾನು ಒಮ್ಮೆ ಈ ಬದರೀ ಕ್ಷೇತ್ರದಲ್ಲಿ ನಿಂತು ಘೋರ ತಪಸ್ಸನ್ನು ಆಚರಿಸಿದೆ. ನನ್ನ ತಪಸ್ಸಿಗೆ ಮೆಚ್ಚಿದ ಕರುಣೆಯ ಖಣಿಯಾದ ಆ ನಾರಾಯಣ ಗರುಡಾ ರೂಢನಾಗಿ ಆಗಮಿಗಿಸಿದ ಆ ಜಗದೀಶ್ವರ. ಆ ಮಹಾಪ್ರಭು ನನಗೆ ಪ್ರಸನ್ನನಾಗಿ ನುಡಿದ.

**ನಾರಾಯಣ:-** ಮಹಾದೇವ, ನೀನು ಕೈಲಾಸ ಪತಿ. ಜಗತ್ಪಾಲಕನಾದ ಮಹಾರುದ್ರ. ನಿನಗೆ ಬೇಕಾದ ವರವನ್ನು ಬೇಡು. ನೀನು ಬಯಸಿದ್ದನ್ನು ನೀಡುತ್ತೇನೆ.

**ಮಹಾದೇವ:-** ಜನಾರ್ಧನ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ಎರಡು ವರಗಳನ್ನ ದಯಪಾಲಿಸು.

**"ತವಭಕ್ತಿ ಸದೈವಾಸ್ತು ಭಕ್ತರಾಜೋ ಭವಾಮ್ಯಹಂ ।**
**ತವ ಪ್ರಸಾದಾದ ದೇವೇಶ ಮುಕ್ತಿ ದಾತಾ ಭವಾಮ್ಯಹಂ ॥**

**ವಿಷ್ಣು ಭಕ್ತ ಇಥಿ ಖ್ಯಾತೋ ಲೋಕೇ ಚೈವ ಭವಾಮ್ಯಹಂ ।**
**ಸರ್ವೇ ಲೋಕಾ ಬ್ರುವಂತ್ವೇ ಮಯಂ ಭಕ್ತಃ ಸದೈವಹಿ ।**
**ಯಸ್ಮಾಹಂ ವರದಾತಾತು ತಸ್ಯ ಮುಕ್ತಿರ್ಭವೇತ್ ಪ್ರಭೋ"**

ಭಗವನ್, ನನಗೆ ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿ ಇರಲಿ. ನಾನು ವಿಷ್ಣುಭಕ್ತರಲ್ಲಿ ಸರ್ವಶ್ರೇಷ್ಠ ಎನಿಸಲಿ. ಮತ್ತು ನಿನ್ನ ಪ್ರಸಾದದಿಂದ ನಾನು ಮುಕ್ತಿ ಪ್ರದಾತನೂ ಆಗಲಿ. ಎಲ್ಲ ಜನರು **'ಹರನೇ ನಿಜವಾದ ಹರಿಯ ಭಕ್ತ'** ಎಂದು ನನ್ನನ್ನು ಕರೆಯಲಿ. ಮತ್ತು ನಾನು ಯಾರಿಗೆ ವರ ಕೊಡುತ್ತೇನೋ ಅವರು ಮುಕ್ತಿಯನ್ನು ಹೊಂದುವಂತೆ ಆಗಲಿ. ನಾನು ಕೂಡ ಈ ಬದರೀ ಕ್ಷೇತ್ರದಲ್ಲಿ ಭಸ್ಮವನ್ನು ಲೇಪಿಸಿಕೊಂಡು ಜಟಾಧಾರಿಯಾಗಿ ನಿನ್ನ ಸನ್ನಿಧಾನದಲ್ಲಿಯೇ ನೆಲಿಸಿ ನಿನ್ನ ಪ್ರಸಾದದಿಂದ ಲೋಕದಲ್ಲಿ ಖ್ಯಾತಿಯನ್ನು ಪಡೆಯುವಂತಾಗಲಿ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶಿವ ನಾರದ ಸಂವಾದ ಬದರೀನಾರಾಯಣ ಮಾಹಾತ್ಮ್ಯ ಎಂಬ ಎರಡನೇಯ ಅಧ್ಯಾಯ ಮುಗಿದುದು*

—o—

## ನಾರದ ಧರ್ಮರಾಜ ಸಂವಾದ ಜಾಲಂಧರನ ಉತ್ಪತ್ತಿ

**ಅಧ್ಯಾಯ - ೩**

**ಸೂತ:-** ಒಮ್ಮೆ ನಾರದ ಮುನಿಯು ವನವಾಸದಲ್ಲಿ ಇದ್ದ ಪಾಂಡವರನ್ನು ಕಾಣಬೇಕೆಂದು ಕಾಮ್ಯಕ ವನಕ್ಕೆ ಪ್ರಯಾಣಿಸಿದರು. ಆಗ ಧರ್ಮರಾಜನು ಯಥೋಚಿತವಾಗಿ ಅವರಿಗೆ ಸ್ವಾಗತ ನೀಡಿದ. ಸತ್ಕಾರ ಮಾಡಿದ. ವಿನಯದಿಂದ ವಂದಿಸಿ ಪ್ರಶ್ನಿಸಿದ.

**ಧರ್ಮರಾಜ:-** ನಾರದರೇ ನಮಗೆ ಈಗ ಒದಗಿ ಬಂದಿವೆ. ದಾರುಣವಾದ ದುಃಖ. ಇಂಥ ಕಡುಕಷ್ಟ ಬರಲು ಏನು ಕಾರಣ? ಇದನ್ನು ಹೇಳಿರಿ.

**ನಾರದ :-** ಪಾಂಡುನಂದನ, ನೀನು ದುಃಖಿಸಬೇಡ. ಸುಖದುಃಖಗಳ ಕಲಸುಮೋಲೋಗರವೇ ಈ ಸಂಸಾರ. ಈ ಪ್ರಪಂಚದಲ್ಲಿ ಯಾವ ಮನುಷ್ಯನು ಸುಖಿಯಾಗಿರುತ್ತಾನೆ? ಭಗವಂತನಿಗೂ ಕೂಡ ಬಿಟ್ಟಿಲ್ಲ. ಈ ಸಂಸಾರದಲ್ಲಿ ದುಃಖರಹಿತನಾದ ಪರಮಾತ್ಮನಿಗೂ ಕೂಡ ಬೇರೆ ಬೇರೆ ದೇಹಗಳನ್ನು ಹೊಂದಿ ಪೀಡೆಯನ್ನು ಅನುಭವಿಸಬೇಕಾಗುವದು. ಈ ಜಗತ್ತಿನಲ್ಲಿ ದುಃಖವು ಇಲ್ಲದ ಒಂದು ಪ್ರಾಣಿಯೂ ಇಲ್ಲ. ಸಾಕ್ಷಾತ್ ಸೂರ್ಯನ ದೇಹವನ್ನು ರಾಹು ಗ್ರಹಣಮಾಡುತ್ತಾನೆ. ಆ ರಾಹುವಿನ ತಲೆಯನ್ನು ಅಮೃತ ಪ್ರಾಶನಮಾಡುವಾಗ ಕತ್ತರಿಸಿ ಹಾಕಿದ ಮಹಾವಿಷ್ಣು. ಆ ವಿಷ್ಣುವನ್ನು ವೀರನಾದ ಜಾಲಂಧರನು ಸಾಗರದ ಒಡಲಿನಲ್ಲಿ ಎಸೆದುಬಿಟ್ಟ. ಆ ಜಾಲಂಧರನನ್ನೂ ಕೂಡ ಮಹಾದೇವನು ಸಂಹರಿಸಿ ಬಿಟ್ಟ. ಹೀಗೆ ಈ ಪ್ರಪಂಚದಲ್ಲಿ ಯಾವದೂ ಶಾಶ್ವತ ಅಲ್ಲ. ದುಃಖ ಬವಣೆ, ಗೋಳು ಯಾರಿಗೂ ತಪ್ಪಿದ್ದಲ್ಲ.

**ಧರ್ಮರಾಜ:-** ಮಹಾಮುನಿಗಳೇ, ಯಾರು ಈ ಜಾಲಂಧರ? ಅವನ ತಂದೆ ಯಾರು ? ಆ ಜಾಲಂಧರನನ್ನು ಯುದ್ಧದಲ್ಲಿ ಹೇಗೆ ಕೊಂದ ಆ ಮಹಾದೇವ? ಇದೆಲ್ಲವನ್ನು ನೀವು ನನಗೆ ತಿಳಿಸಿರಿ.

**ನಾರದ:-** ಧರ್ಮರಾಜ, ಪರಮೇಶ್ವರ ಮತ್ತು ಜಾಲಧರರ ನಡುವೆ ನಡೆದ ಸಂಗ್ರಾಮದ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಹಿಂದೆ ಒಂದು ಸಲ ದೇವೇಂದ್ರನು ತನ್ನ ಅನುಯಾಯಿಗಳಾದ ಅನೇಕ ದೇವತೆಗಳಿಂದಲೂ ಅಪ್ಸರೆಯರಿಂದಲೂ ಕೂಡಿಕೊಂಡು ಮಹಾದೇವರನ್ನು ಸ್ತೋತ್ರ ಮಾಡಲು ಕೈಲಾಸ ಪರ್ವತಕ್ಕೆ ತೆರಳಿದ. ತಂತೀವಾದ್ಯದಲ್ಲಿ ನಿಪುಣರಾದ ಅನೇಕ ಗಂಧರ್ವರು ಅವರನ್ನು ಹಿಂಬಾಲಿಸಿದ್ದರು. ರಂಭಾ, ತಿಲೋತ್ತಮಾ, ಕರ್ಪೂರಾ, ಮದನಾ, ಭಾರತೀ ಮೊದಲಾದ ಸ್ವರ್ಗಲೋಕದ ಗಂಧರ್ವ ಸುಂದರಿಯರೂ ಕುಣಿಯುವ ಕಲೆಯಲ್ಲಿ ಕುಶಲರಾದ ಸುರಲೋಕದ ಕನ್ಯಾಮಣಿಗಳೂ ಆ ಸುರೇಂದ್ರನೊಂದಿಗೆ ಕೈಲಾಸ ಪರ್ವತಕ್ಕೆ ಆಗಮಿಸಿದರು. ಅವರೆಲ್ಲರೂ ನಿಸರ್ಗ ಸೌಂದರ್ಯದ ನೆಲೆವೀಡಾದ ಆ ಮಹಾದೇವರ ಬೃಹದಾಕಾರದ ಬೆಟ್ಟದ ಬಳಿಗೆ ಬಂದು, ವಿಮಾನದಿಂದ ಇಳಿದು, ಆ ಶೈಲಶ್ರೀಯನ್ನು ಕಂಡು ವಿಸ್ಮಯ ಚಕಿತರಾದರು. ಕೈಲಾಸಗಿರಿಯ ಬಾಗಿಲಲ್ಲಿ ಕುಳಿತ ದ್ವಾರಪಾಲಕನಾದ ನಂದಿಯನ್ನು ಕುರಿತು ದೇವೇಂದ್ರ ನುಡಿದ.

**ಇಂದ್ರ:-** ಶಿವಗಣಾಧೀಶನಾದ ನಂದಿಯೇ, ನಾನು ನನ್ನ ಪರಿವಾರದೊಂದಿಗೆ ಮಹಾದೇವನಿಗೆ ನರ್ತನ ಸೇವೆಯನ್ನು ಸಲ್ಲಿಸಲು ಬಂದಿದ್ದೇನೆ. ಪರಮೇಶ್ವರನಿಗೆ ಹೋಗಿ ತಿಳಿಸು.

ನಂದಿಯು ಒಳಗೆ ಹೋಗಿ ಪರಮೇಶ್ವರನಿಗೆ ಇಂದ್ರನ ಆಗಮನವನ್ನು ತಿಳಿಸಿದ. ಅವನ ಅಪ್ಪಣೆಯಂತೆ ದೇವೇಂದ್ರನು ಒಳಗೆ ಹೋಗಿ ಮಹಾದೇವರನ್ನು ಕಂಡು ಸಾಷ್ಟಾಂಗ ವಂದನೆಗೈದು ಸ್ತೋತ್ರಮಾಡಿದ. ರಂಭಾ, ತಿಲೋತ್ತಮ ಮದನಾ ಮುಂತಾದ ಸುರಲೋಕದ ಸುಂದರಿಯರು ತಬಲ ತಂಬೂರಿ ಕೊಳಲು ಮುಂತಾದ ವಾದ್ಯಗಳನ್ನೂ ತಾಳ ತಮ್ಮಟೆಗಳನ್ನೂ ತೆಗೆದುಕೊಂಡು ಸಂಗೀತದ ತಾನ ವಿತಾನ ರಾಗಗಳಿಗೆ ಅನುಗುಣವಾಗಿ ಬಾರಿಸುತ್ತ ಪರಮೇಶ್ವರನ ಮಹಿಮೆಯನು ಸುಸ್ವರ ಸಂಗೀತದಿಂದ ಹಾಡುತ್ತ ಕುಣಿದು ಕೊಂಡಾಡಿದರು. ಸ್ವಯಂ ದೇವೇಂದ್ರನೂ ಕೂಡ ಭಕ್ತಿಪರವಶತೆಯಿಂದ ತಾಳಲಯಬದ್ಧವಾಗಿ ಭಕ್ತಿಯಿಂದ ನರ್ತನ ಸೇವೆಯನ್ನು ಸಲ್ಲಿಸಿದ. ಆದರಿಂದ ಮಹಾದೇವ ಪರಮ ಪ್ರಸನ್ನನಾದ. ಇಂದ್ರನನ್ನು ಕುರಿತು ನುಡಿದ.

**ಮಹಾದೇವ:-** ದೇವೇಂದ್ರ, ನಾನು ನಿನ್ನ ಈ ನೃತ್ಯ ಸೇವೆಯಿಂದ ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಬೇಡು.

ದೇವೇಂದ್ರನಿಗೆ ಎಂದಿನಿಂದಲೂ ತಾನು ಮಹಾಪರಾಕ್ರಮಿ ಎಂಬ ಅಹಂಕಾರ. ಪರಮೇಶ್ವರನ ಎದುರು ಅವನ ಈ ಗರ್ವಾಂಧತೆಯು ಹೊರಹೊಮ್ಮಿತು. ಅವನ ತನ್ನ ಈ ತೊಳತೀಟೆಯ ತವಕದಿಂದ ವರವನ್ನು ಕೇಳಿದ.

**ಇಂದ್ರ:-** ಪರಮೇಶ್ವರ, ನನಗೆ ನೀನು ಪ್ರಸನ್ನನಾಗಿದ್ದರೆ ನಿನ್ನಂಥ ವೀರವರೇಣ್ಯ ನೊಂದಿಗೆ ಯುದ್ಧವನ್ನು ದಯಪಾಲಿಸು.

**ಮಹಾದೇವ:-** ತಥಾಸ್ತು. ಹಾಗೇ ಆಗಲಿ.

ಇಂದ್ರನು ಶಂಕರನಿಂದ ವರ ಪಡೆದು ತೆರಳಿದ ಬಳಿಕ ತನ್ನ ಗಣಾಧೀಶರನ್ನು ಕರೆದು ಹೇಳಿದ ಆ ಕೈಲಾಸಪತಿ.

**ಶಿವ:-** ಗಣಾಧೀಶರೇ, ದೇವೇಂದ್ರ ಇಲ್ಲಿಯವರೆಗೆ ಬಂದು ನನ್ನ ಎದುರು ಗರ್ವ ಮಾತುಗಳನ್ನು ಆಡಿದ. ನನ್ನ ಮುಂದೆ ಇಂಥ ಮದ ಪ್ರದರ್ಶನವೇ?

ಹೀಗೆ ಮಾತನಾಡುತ್ತಿರುವಾಗಲೇ ಆ ಮಹಾದೇವನಲ್ಲಿ ಕೋಪ ಕೆರಳಿತು. ಕ್ರುದ್ಧನಾದ ಆ ಕಾಳಿಕಾಪತಿಯ ದೇಹದಿಂದ ಮೂರ್ತಿಮಂತ ಕ್ರೋಧವೇ ಹೊರಹೊಮ್ಮಿ ಅವನ ಮುಂಭಾಗದಲ್ಲಿ ಮೈದಾಳಿ ನಿಂತಿತು. ಕಗ್ಗತ್ತಲೆಯಂತೆ ಕಪ್ಪು ಕಪ್ಪಾಗಿ ದಪ್ಪ ದಪ್ಪಾಗಿ ಧಡೂತಿ ದೇಹರೂಪವಾಗಿ ಮೂಡಿ ಬಂದ ಆ ಕ್ರೋಧವು ಶಂಕರನನ್ನು ಕುರಿತು ಕೈಂಕರ್ಯದಿಂದ ಬಾಗಿ ಕೇಳಿಕೊಂಡಿತು.

**ಕ್ರೋಧ:-** ಪ್ರಭೋ, ನಾನು ಏನು ಮಾಡಲಿ? ನಾನು ನಿನ್ನ ಅಜ್ಞಾಧಾರಕ. ನನಗೆ ಅಪ್ಪಣೆ ನೀಡು.

**ಮಹಾದೇವ :-** ನೀನು ಆಕಾಶಗಂಗೆ ಇದ್ದಲ್ಲಿ ಹೋಗು. ಹಾಗೂ ಸಮುದ್ರದಲ್ಲಿಯೂ ಪ್ರವೇಶಮಾಡು. ದೇವೇಂದ್ರನನ್ನು ಗೆದ್ದುಕೊಂಡು ಬಾ.

ಮಹಾದೇವರು ಹೀಗೆ ಹೇಳಿದ ಬಳಿಕ ಅದೃಶ್ಯವಾಯಿತು. ಅವನ ಮೂರ್ತಿವಂತ ಕ್ರೋಧ. ಶಿವಗಣಾಧೀಶರಿಗೆಲ್ಲ ಈ ಕೌತುಕದ ಘಟನೆಯನ್ನು ನೋಡಿ ಅತ್ಯಾಶ್ಚರ್ಯ ಆಯಿತು.

ಈಶಾನ ಕಲ್ಪದಲ್ಲಿ ಆಕಾಶಗಂಗೆಯು ಸಮುದ್ರದೊಡನೆ ಸಂಗಮಿಸಿದಳು. ಆ ಆಕಾಶಗಂಗೆಗೆ ಆಗ ಒಳ್ಳೇ ಪ್ರಾಯ. ಯೌವನದ ಕಾವು ಮೈ ತುಂಬ ಹರಿದಾಡುತ್ತಿತ್ತು. ಅವಳ ಉಕ್ಕುವ ಈ ಪ್ರಾಯದ ಸಿರಿ, ಹರೆಯದ ಪರಿ, ಪ್ರಕಾರಗಳನ್ನು ಕಂಡು ಸಮುದ್ರರಾಜನು ಅಲ್ಲೋಲ ಕಲ್ಲೋಲ ಭರಿತನಾದ. ಆ ಕಾಲದಲ್ಲಿ ನಡೆದ ಸಾಗರಸಂಗಮದಿಂದ ದೇವನಡಿಯು ರಮಾರಮಣಳಾಗಿ ಪರಮಾನಂದವನ್ನು ಹೊಂದಿದಳು. ಆ ಸಮುದ್ರ ಸಂಗಮದಿಂದ ಸುರ ನದಿಗೆ ಮಹಾಬಲಿಷ್ಠನಾದ ಒಬ್ಬ ಮಗನು ಜನಿಸಿದ. ಗಂಗಾಸಾಗರ ಸಂಗಮದಿಂದ ಜನಿಸಿದ ಆ ಮಗು ಹುಟ್ಟಿದಾಗ ಮಾಡಿದ ರೋದನೆ ಧ್ವನಿಯಿಂದ ಮೂರು ಲೋಕಗಳೇ ನಡುಗಿಹೋದವು. ಭೂಮಿಯಲ್ಲಿ ಕಂಪನ ಹುಟ್ಟಿತು. ಆಗ ಚತುರ್ಮುಖ ಬ್ರಹ್ಮ ಯೋಗಸಮಾಧಿಯನ್ನು ಬಿಟ್ಟು ಒಮ್ಮೆಲೆ ಎಚ್ಚೆತ್ತು ನಿಂತುಕೊಂಡ. ಮೂರು ಲೋಕಗಳೆಲ್ಲವೂ ಭಯಭ್ರಾಂತವಾಗಿ ಕಂಪಾಯಮಾನವಾಗ ತೊಡಗಿದ್ದವು. ಅದನ್ನು ಕಂಡು ದೇವೇಂದ್ರನಿಂದ ಎಲ್ಲ ಸಮಾಚಾರ ತಿಳಿದು ತನ್ನ ವಾಹನವಾದ ಅರಸಂಚೆಯನ್ನು ಏರಿಕೊಂಡು ಸಮುದ್ರದೆಡೆಗೆ ಬಂದ ಆ ಚತುರ್ಮುಖ. ಆ ಪಿತಾಮಹನನ್ನು ಕಂಡು ಆ ಸಮುದ್ರರಾಜ ಅವನಿಗೆ ಯಥೋಚಿತವಾದ ಸ್ವಾಗತ ಸತ್ಕಾರ ಮಾಡಿದ.

**ಬ್ರಹ್ಮ:-** ಸಮುದ್ರ, ಹೀಗೇಕೆ ವ್ಯರ್ಥವಾಗಿ ಗರ್ಜನೆ ಮಾಡುತ್ತಲಿರುವಿ?

**ಸಮುದ್ರ:-** ದೇವೋತ್ತಮ, ನಾನು ಗರ್ಜಿಸುವದೂ ಇಲ್ಲ ಗುಡುಗುವದೂ ಇಲ್ಲ. ನನಗೆ ಒಬ್ಬ ಬಲಿಷ್ಠನಾದ ಮಗ ಹುಟ್ಟಿದ್ದಾನೆ. ಆ ನನ್ನ ಗಂಡು ಕೂಸನ್ನು ನೀನು ರಕ್ಷಣೆಮಾಡು. ನಿನ್ನ ದರ್ಶನವೇ ದುರ್ಲಭ. ತಾವು ಇತ್ತ ದಯಮಾಡಿಸುವುದು

ಅಪರೂಪ. ಅನಾಯಾಸವಾಗಿ ನನ್ನ ಪುತ್ರ ಜನನೋತ್ಸವಕಾಲದಲ್ಲಿ ಆಗಮಿಸಿದ್ದೀರಿ. ನನ್ನ ಕೂಸನ್ನು ನೋಡಿಕೊಂಡು ಹೋಗಿರಿ.

ಹೀಗೆ ನುಡಿದು ಆ ನದೀನಾಥನು ತನ್ನ ನೆಚ್ಚಿನ ನಲ್ಲೆಯಾದ ಗಂಗಾದೇವಿಗೆ ತಮ್ಮ ಮಗುವನ್ನು ಬ್ರಹ್ಮದೇವನಿಗೆ ತಂದು ತೋರಿಸಲು ಹೇಳಿದ. ಅವನ ಆದೇಶದಂತೆ ಆ ದೇವತರಂಗಿಣಿಯು ತನ್ನ ಕೂಸನ್ನು ಎತ್ತಿಕೊಂಡು ಬಂದು ಬ್ರಹ್ಮದೇವರ ತೊಡೆಯ ಮೇಲೆ ಮಲಗಿಸಿ ಆ ಪಿತಾಮಹನ ಪಾದಗಳಿಗೆ ವಂದಿಸಿದಳು. ಅತ್ಯದ್ಭುತನಾದ ಗಂಗಾಕುಮಾರನನ್ನು ಕಂಡು ಮಹದಾಶ್ಚರ್ಯ ಆ ಚತುರ್ಮುಖನಿಗೆ. ಬ್ರಹ್ಮನ ತೊಡೆಯ ಮೇಲೆ ಆಡುತ್ತಲಿದ್ದ ಆ ನದೀಕುಮಾರ ಒಮ್ಮೆಲೇ ಬ್ರಹ್ಮದೇವರ ಗಡ್ಡವನ್ನು ತನ್ನ ಹಿಡಿ ಮುಷ್ಟಿಯಲ್ಲಿ ಬಲವಾಗಿ ಹಿಡಿದು ಬಿಟ್ಟ. ಗಟ್ಟಿಯಾಗಿ ಗಡ್ಡ ಹಿಡಿದು ಜಗ್ಗತೊಡಗಿದಾಗ ಬ್ರಹ್ಮದೇವನಿಗೆ ವೇದನೆಯಾಯಿತು. ಆ ಬಾಲಕನ ಕಪಿಮುಷ್ಟಿಯಿಂದ ತನ್ನ ನಿಡಿದಾದ ಗಡ್ಡವನ್ನು ಬಿಡಿಸಿಕೊಳ್ಳಲು ಬೇಕಾದಷ್ಟು ಪ್ರಯತ್ನಮಾಡಿದರೂ ಆ ಮಗು ಬಿಡಲೇ ಇಲ್ಲ ದಾಡಿಯನ್ನು. ಅದನ್ನು ನೋಡಿ ಸಮುದ್ರನಿಗೆ ನಗೆ ಬಂದಿತು. ಅವನು ಧಾವಿಸಿ ಹೋಗಿ ಮಹಾಪ್ರಯತ್ನದಿಂದ ತನ್ನ ಮಗನ ಮುಷ್ಟಿಯಿಂದ ಬ್ರಹ್ಮದೇವರ ಗಡ್ಡವನ್ನು ಬಿಡಿಸಿದ ಅದನ್ನು ನೋಡಿ ಆ ಶಿಶುವಿನ ಶಕ್ತಿಸಾಮರ್ಥ್ಯವನ್ನು ತಿಳಿದು ಬ್ರಹ್ಮದೇವರು ಅವನಿಗೆ ಜಾಲಂಧರ ಎಂದು ಹೆಸರನ್ನು ಇಟ್ಟರು ಮತ್ತು ಪ್ರೀತಿಯಿಂದ ವರವನ್ನು ನೀಡುತ್ತ ನುಡಿದರು.

**ಬ್ರಹ್ಮ:-** ಇವನು ಇಂದಿನಿಂದ ಜಾಲಂಧರ ಎಂದು ಪ್ರಸಿದ್ಧನಾಗಲಿ. ಯಾವ ದೇವತೆಗಳೂ ಇವನನ್ನು ಗೆಲ್ಲಲು ಶಕ್ಯವಿಲ್ಲ. ಇವನು ಪಾತಾಳವನ್ನು ಆಳಲಿ. ಸ್ವರ್ಗವನ್ನೂ ಭೋಗಿಸಲಿ. ನನ್ನ ದಯೆಯಿಂದ ವೀರವರೇಣ್ಯನಾಗಿ ಮೆರೆಯಲಿ. ಹೀಗೆ ಹೇಳಿ ಬ್ರಹ್ಮದೇವರು ಅಲ್ಲಿಯೇ ಅಂತರ್ಧಾನ ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ನಾರದ ಧರ್ಮರಾಜ ಸಂವಾದ ಜಾಲಂಧರನ ಉತ್ಪತ್ತಿ ಎಂಬ ಮೂರನೇಯ ಅಧ್ಯಾಯ ಮುಗಿದುದು*

—o—

**ನಾರದ:-** ದೇವನದಿ, ಹಾಗೂ ಸಮುದ್ರರಾಜರ ನೆಚ್ಚಿನ ಮಗನಾದ ಜಾಲಂಧರ ಕ್ರಮೇಣ ಬೆಳೆಯತೊಡಗಿದ. ತಾಯಿಯ ತೊಡೆಯಿಂದ ಹಾರಿ, ಸಮುದ್ರದಲ್ಲಿ ಜಿಗಿದು ಜಲಕೇಳಿ ಆಡುತ್ತಿದ್ದ. ನೆಲದ ಮೇಲೆ ಬಂದು ಹುಲಿ ಸಿಂಹ ಮದ್ದಾನೆಗಳ ಮರಿಗಳೊಂದಿಗೆ ಯುದ್ಧದ ಆಟ ಅವುಗಳನ್ನೆಲ್ಲ ಮರ್ದಿಸುತ್ತಿದ್ದ. ಬಾಲಲೀಲೆಯಲ್ಲಿಯೇ ಮುಗಿಲಿಗೆ ನೆಗೆದು ಅಂತರಿಕ್ಷ ಜೀವಿಗಳನ್ನು ನೆಲಕ್ಕೆ ಎಸೆಯುತ್ತಿದ್ದ. ತನ್ನ ಗರ್ಜನೆ, ಹುಡುಗಾಟ ಗುಡುಗಾಟಗಳಿಂದ ಸಮುದ್ರದ ಘನ ಗರ್ಜನೆಯನ್ನು ಕೂಡ ಅಡಗಿಸಿ ಬಿಡುತ್ತಿದ್ದ. ಸಾಗರ ಗರ್ಭದಲ್ಲಿಯ ತಿಮಿತಿಮಿಂಗಿಲುಗಳು ಆ ಜಾಲಂಧರನಿಗೆ ಹೆದರಿ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದವು. ಅವನ ಭಯದಿಂದ ಸಾಗರದ ಜಲಗರ್ಭದಲ್ಲಿ ಅಡಗಿದ ವಡವಾಗ್ನಿಯು ಹೆದರಿ ಹಿಮಾಲಯದ ಪದರಿನಲ್ಲಿ ಅಡಗಿತು.

ಬೆಳೆದು ದೊಡ್ಡವನಾದ ಆ ಜಾಲಂಧರ. ಪ್ರಾಯ ಅವನ ಕಾಯದಲ್ಲಿ ಬಲವನ್ನೂ ಮದವನ್ನೂ ಉಕ್ಕಿಸಿತು. ತಾರುಣ್ಯದ ಮದದಿಂದ ಉನ್ಮತ್ತನಾದ ಆ ಸಾಗರ ಕುಮಾರ ಸ್ವರ್ಗವನ್ನು ಆಕ್ರಮಿಸಿದ. ಒಂದು ದಿವಸ ಅವನು ತನ್ನ ತಂದೆಯ ಬಳಿಗೆ ಬಂದು ಹೇಳಿದ.

**ಜಾಲಂಧರ:-** ತಾತ, ನನಗೆ ವಾಸಮಾಡಲು ಅತ್ಯಂತ ವಿಸ್ತಾರವಾದ ಒಂದು ಉಚಿತವಾದ ಸ್ಥಾನವನ್ನು ಕೊಡು.

ಮಗನ ಈ ಮಾತನ್ನು ಕೇಳಿ ಸಮುದ್ರರಾಜನು ''ಹಾಗೆಯೇ ಆಗಲಿ. ನಿನಗೆ ಈ ಭೂಲೋಕದಲ್ಲಿ ಅತ್ಯುತ್ತಮವಾದ ಸ್ಥಾನವನ್ನು ನೀಡುತ್ತೇನೆ'' ಎಂದು ಹೇಳಿದ.

ಅದೇ ವೇಳೆಯಲ್ಲಿ ದೈತ್ಯರ ಕುಲಗುರುಗಳಾದ ಶುಕ್ರಾಚಾರ್ಯರು ಅಲ್ಲಿಗೆ ಆಗಮಿಸಿದರು. ಆ ದೈತ್ಯಗುರುಗಳನ್ನು ಕಂಡು ಆ ಸಮುದ್ರರಾಜನು ಸಂಭ್ರಮದಿಂದ ಎದ್ದು ಸ್ವಾಗತ ನೀಡಿ, ಸತ್ಕಾರ ಮಾಡಿ ವಿಧಿಪೂರ್ವಕವಾಗಿ ಪೂಜಿಸಿದ. ಆ ಅಸುರಕುಲದ ಆಚಾರ್ಯರು ಆಗ ಆ ಸಾಗರಸಾರ್ವಭೌಮನು ನೀಡಿದ ರತ್ನಪೀಠದಲ್ಲಿ ಕುಳಿತು ಕೊಂಡರು. ಶರಧಿ ಸಮ್ರಾಟನು ಕೈ ಜೋಡಿಸಿ ತಲೆಬಾಗಿಸಿ ಕೇಳಿಕೊಂಡ.

**ಸಾಗರ:-** ಪೂಜ್ಯರೇ, ತಾವು ಇಲ್ಲಿಗೆ ಬಂದದ್ದು ನಮ್ಮ ಭಾಗ್ಯ ನಾನು ತಮ್ಮ ಯಾವ ಸೇವೆಯನ್ನು ಮಾಡಲಿ. ಅಪ್ಪಣೆ ನೀಡಿರಿ.

**ಶುಕ್ರಾಚಾರ್ಯ :-** ತಾಯಿಯ ಯೌವನವನ್ನು ಹಾಳುಮಾಡುವ ನಿರ್ವೀರ್ಯರಾದ ಮಕ್ಕಳನ್ನು ತೆಗೆದುಕೊಂಡು ಏನು ಮಾಡುವದು? ಧ್ವಜಪಟದಂತೆ ಯಾವನು ತನ್ನ ವಂಶದ ಮೇಲುಮಟ್ಟದಲ್ಲಿ ವಿರಾಜಿಸುವದಿಲ್ಲವೋ ಅಂಥ ಮಾನವನು ಜನಿಸಿದರೂ ವ್ಯರ್ಥವೇ ಸರಿ. ನಿನ್ನ ಈ ಪುತ್ರನು ತನ್ನ ಪರಾಕ್ರಮದಿಂದ ಮೂರು ಲೋಕಗಳನ್ನೆಲ್ಲ ಭೋಗಿಸುತ್ತಾನೆ. ಜಂಬೂ ದ್ವೀಪದಲ್ಲಿ ಯೋಗಿನಿಯರ ಗುಂಪಿನಿಂದ ಸೇವಿತವಾದ ಮಹಾಪೀಠ ಒಂದಿದೆ. ಅದು ಈಗ ನಿನ್ನ ಸಾಗರ ಸಲಿಲದಿಂದ ಮುಳುಗಿಹೋಗಿದೆ. ಅದನ್ನು ನಿನ್ನ ಮಗನಿಗೆ ಬಿಟ್ಟುಕೊಡು. ಅಲ್ಲಿಯೇ ಇವನು ತನ್ನ ರಾಜ್ಯವನ್ನು ನಿರ್ಮಿಸಲಿ.

ಅದಕ್ಕೆ ಜಾಲಂಧರಾಲಯ ಎಂದು ಹೆಸರು ಬರಲಿ. ಅಲ್ಲಿ ನೆಲೆಸಿದ ಈ ನಿನ್ನ ಮಗನನ್ನು ಯಾರೂ ಗೆಲ್ಲಲಾರರು. ಯಾರೂ ಕೊಲ್ಲಲಾರರು.

ದೈತ್ಯಗುರು ಶುಕ್ರಾಚಾರ್ಯರ ಈ ಮಾತನ್ನು ಕೇಳಿ ಸಂತಸವಾಯಿತು. ಆ ಸಮುದ್ರನಾಥನಿಗೆ. ಅವನು ಶುಕ್ರರ ಆದೇಶದಂತೆ ತಾನು ಹಿಂದೆ ಸರಿದು, ಜಂಬೂದ್ವೀಪದ ಮಹಾಪೀಠವನ್ನು ನೀರಿನಿಂದ ತೆರವು ಮಾಡಿ ತನ್ನ ಮಗನಿಗಾಗಿ ಬಿಟ್ಟುಕೊಟ್ಟ. ಐನೂರುಯೋಜನ ಉದ್ದ, ಮುನ್ನೂರು ಯೋಜನ ಅಗಲವಾದ ಆ ಜಾಲಂಧರ ಪುಣ್ಯ ಪ್ರದೇಶವನ್ನು ತನ್ನ ಮಗನಿಗೆ ತೋರಿಸಿ ಇಲ್ಲಿ ನಿನ್ನ ರಾಜ್ಯವನ್ನು ಕಟ್ಟಿಕೋ ಎಂದು ಹೇಳಿದ. ಹಾಗೂ ದೈತ್ಯಶ್ರೇಷ್ಠನಾದ ಮಯಾಸುರನನ್ನು ಕರೆದು ''ಈ ಜಾಲಂಧರ ಪೀಠದಲ್ಲಿ ನನ್ನ ಮಗನಾದ ಜಾಲಂಧರನಿಗಾಗಿ ಒಂದು ಸುಂದರವಾದ ನಗರವನ್ನು ನಿರ್ಮಿಸು'' ಎಂದು ಅಪ್ಪಣೆ ನೀಡಿದ.

ಸಮುದ್ರರಾಜನ ಆದೇಶದಂತೆ ಮಯಾಸುರನು ಒಂದು ಅತ್ಯುತ್ತಮವಾದ ರತ್ನಮಯವಾದ ನಗರವನ್ನೇ ಸಿದ್ಧಪಡಿಸಿದ. ಭದ್ರವಾದ ಪ್ರಾಕಾರ, ಗಗನ ಚುಂಬಿತ ಗೋಪುರ ಮೆಟ್ಟಲಗಳುಳ್ಳ ಎತ್ತರವಾದ ಪ್ರಾಸಾದ ಪಂಕ್ತಿಗಳು ಇಂದ್ರನೀಲಮಣಿಯ ನೆಲಗಟ್ಟಣೆ, ಬಂಗಾರದ ಕಂಬಗಳು, ರತ್ನದ ಗೋಡೆಗಳು ಮಾಣಿಕ್ಯದ ಭವನಗಳು, ಸುವರ್ಣಪೀಠಗಳು, ಪಚ್ಚೆಕಲ್ಲಿನ ಕಟ್ಟೆಗಳು ಮುತ್ತಿನ ಮಂಟಪಗಳು, ಮಣಿಮಯ ಮಂದಿರಗಳು ಶೋಭಿಸುತ್ತಿದ್ದವು. ಇಂಥ ದಿವ್ಯ ಭವ್ಯವಾದ ಪಟ್ಟಣದಲ್ಲಿ ಸಮುದ್ರನಾಥನು ತನ್ನ ಮಗನಿಗೆ ಶುಕ್ರಾಚಾರ್ಯರ ಪೌರೋಹಿತ್ಯದಲ್ಲಿ ರಾಜ್ಯಾಭಿಷೇಕವನ್ನು ಮಂಗಳ ವಾದ್ಯಗಳ ಮಧ್ಯದಲ್ಲಿ ನೆರವೇರಿಸಿದ. ಬ್ರಹ್ಮದೇವರು ಆ ಕಾಲದಲ್ಲಿ ದೈತ್ಯ ಗುರು ಶುಕ್ರಾಚಾರ್ಯರೊಂದಿಗೆ ಮಂತ್ರೋಚ್ಚಾರಣ ಪೂರ್ವಕವಾಗಿ ಆ ಜಾಲಂಧರನಿಗೆ ಮಂಗಳಾಶೀರ್ವಾದವನ್ನು ನೀಡಿದರು. ಸಮುದ್ರರಾಜನು ತನ್ನ ಮಗನಿಗೆ ಅಸಂಖ್ಯ ವೀರಸೈನಿಕರನ್ನು ಸಹಾಯಕರನ್ನಾಗಿ ನೀಡಿದನು. ಶುಕ್ರಾಚಾರ್ಯರು ಅವನಿಗೆ ಬಗೆ ಬಗೆಯ ಶಸ್ತ್ರಾಸ್ತ್ರಗಳನ್ನು ನೀಡುವದಲ್ಲದೇ ಸತ್ತವರನ್ನು ಬದುಕಿಸುವ ಮೃತ ಸಂಜೀವಿನಿ ವಿದ್ಯೆಯನ್ನು ಕೂಡ ದಯಪಾಲಿಸಿದರು. ಆಗ ಪಾತಾಳದಲ್ಲಿದ್ದ ಕಾಲನೇಮಿ ಮುಂತಾದ ವೀರಧೀರವರೇಣ್ಯರಾದ ದೈತ್ಯ ಧುರೀಣರೆಲ್ಲರೂ ಜಾಲಂಧರನನ್ನು ಬಂದು ಕೂಡಿಕೊಂಡರು. ಶಂಭಾಸುರ ಎಂಬ ದಾನವವೀರನನ್ನು ಸೇನಾಪತಿಯನ್ನಾಗಿ ಮಾಡಿದ. ಹೀಗೆ ತಂದೆಯಿಂದ ಕೊಡಲ್ಪಟ್ಟ ಜಲರಾಜ್ಯ, ಸ್ಥಲರಾಜ್ಯವನ್ನೆಲ್ಲ ತನ್ನ ಸ್ವಾಧೀನಪಡಿಸಿಕೊಂಡು ವೈಭವದಿಂದ ಆಳತೊಡಗಿದ ಆ ಗಂಗಾಸಾಗರ ಪುತ್ರನಾದ ಜಾಲಂಧರ.

ಹಿಂದೆ ಸ್ವರ್ಗ ಲೋಕದಲ್ಲಿ ಸ್ವರ್ಣಾ ಎಂಬ ಹೆಸರಿನ ಪರಮ ಸುಂದರಿಯಾದ ಒಬ್ಬ ಅಪ್ಸರೆಯಿದ್ದಳು. ಅವಳಿಗೆ ಕ್ರೌಂಚನ ಪ್ರಸಾದದಿಂದ ವೃಂದಾ ಎಂಬ ಮಗಳು ಹುಟ್ಟಿದಳು. ಈ ಪ್ರಪಂಚದಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ಬಿಡಿ ಬಿಡಿಯಾಗಿ ಇದ್ದ ಸೌಂದರ್ಯ ದ್ರವ್ಯವನ್ನೆಲ್ಲ ಬ್ರಹ್ಮ ಒಂದೆಡೆ ಸೇರಿಸಿ, ಕೂಡಿಸಿ, ಜೋಡಿಸಿ ಒಂದು ಹೆಣ್ಣು ರೂಪವನ್ನು ನಿರ್ಮಿಸಿದ್ದ. ಅವಳೇ ವೃಂದಾ. ಅವಳು ಸರ್ವಾಂಗ ಸುಂದರಿ. ಬ್ರಹ್ಮದೇವರು ತನ್ನ ಮನಸ್ಸಿಗೆ ಮೆಚ್ಚಿಗೆಯಾಗುವಂತೆ ಪರಮ ಕೌಶಲ್ಯದಿಂದ ನಿರ್ಮಿಸಿದ ಚೆಲುವಿಕೆಯ ಪುತ್ಥಳಿ. ಬ್ರಹ್ಮದೇವರು ನಿರ್ಮಿಸಿದ ಸ್ತ್ರೀಕುಲದಲ್ಲಿಯೇ ಅವಳೊಂದು ಅಪೂರ್ವ ರತ್ನ.

ಜಗನ್ಮೋಹಕ ಅವಳ ಸೌಂದರ್ಯ. ಇಂಥ ತ್ರಿಭುವನ ಮೋಹಿನಿಯಾದ ಆ ಕನ್ಯಾಮಣಿಯನ್ನು ಜಾಲಂಧರನಿಗೆ ಮದುವೆ ಮಾಡಿಕೊಡು ಎಂದು ಶುಕ್ರಾಚಾರ್ಯರು ಸ್ವರ್ಣಾದೇವಿಯನ್ನು ಯಾಚನೆಮಾಡಿದರು. ಮತ್ತು ಅನಿಂದ್ಯ ಸುಂದರಿಯಾದ ಆ ವೃಂದೆಯನ್ನು ತಮ್ಮ ಬಳಿಗೆ ಕರೆದು ಹೇಳಿದರು.

**ಶುಕ್ರ:-** ವೃಂದೆ, ನಿನ್ನ ರೂಪ, ಕಾಮನ ಒಂದು ಅಮೋಘ ಶಸ್ತ್ರ, ಅತ್ಯಂತ ಆಶ್ಚರ್ಯಕಾರಕವಾದ ಚೆಲುವು ನಿನ್ನ ಸೋತ್ತು. ನಿನ್ನನ್ನು ನಿರ್ಮಿಸಿದ ಬ್ರಹ್ಮನಿಗೇ ನಿನ್ನ ಈ ಸೌಂದರ್ಯರಾಶಿಯನ್ನು ಕಂಡು ಆಶ್ಚರ್ಯ ಎನಿಸಿದೆ. ತನ್ನ ಸೃಷ್ಟಿಕಾರ್ಯದ ಪರಿಶ್ರಮದ ನಿನ್ನ ನಿರ್ಮಾಣದಿಂದ ಸಾರ್ಥಕತೆಯ ಕಳಸವನ್ನೇ ತಲುಪಿಸಿರುತ್ತಾನೆ. ಇಂಥ ನೀನು ಈ ನಿನ್ನ ದಿವ್ಯವಾದ ರೂಪದಿಂದ ದೀರ್ಘಾಯುಷ್ಯವನ್ನು ಪಡೆದು ಬಹುಕಾಲ ಸುಖದಿಂದ ಇರು. ಇಂಥ ಸೌಂದರ್ಯಶಾಲಿನಿಯಾದ ನೀನು ಅತ್ಯಂತ ಸುಂದರನಾದ ವಿಶಾಲನೇತ್ರದ ಶೂರನಾದ ಜಾಲಂಧರನನ್ನು ಪತಿಯನ್ನಾಗಿ ಹೊಂದು. ಈ ಜಾಲಂಧರನು ಕಣ್ಣಿಗೆ ಕಾಣದಿದ್ದಾಗ ಸ್ತ್ರೀಯರು ಕಾಮನೇ ಸುಂದರ ಪುರುಷ, ಪುರಷ ಸೌಂದರ್ಯದ ಪರಮಸೀಮೆ, ಚರಮ ಅವಧಿ, ಎಂದು ಹೇಳುತ್ತಾರೆ.

> **ರೂಪೇಣಾನೇನ ರಂಭೋರು ದೀರ್ಘಾಯುಸ್ಸುಖಿನೀ ಭವ**
> **ನಿರ್ಮಾಯ ಸ್ವಯಮೇವ ವಿಸ್ಮಿತಮನಾಃ ಸೌಂದರ್ಯ ಸಾರೇಣಯಂ**
> **ಸ್ವವ್ಯಾಪಾರ ಪರಿಶ್ರಮಸ್ಯ ಕುಶಂ ವೇಧಾಃ ಸಮಾರೋಪಯತ್ ॥**
> **ಕಂದರ್ಪಂ ಪುರುಷಂ ಸ್ತ್ರಿಯೋ ವಿದಧತೇ ಯಸ್ಮಿನ್ನದೃಷ್ಟೇ ಸತಿ**
> **ದೃಪ್ಪವ್ಯಾವಧಿ ರೂಪ ಮಾಪ್ನುಹಿ ಪತಿಂ ತಂ ದೀರ್ಘ ನೇತ್ರ**
> **ಭಟಮ್ ॥**

**ನಾರದ:-** ಶುಕ್ರಾಚಾರ್ಯರ ಮಾತಿನಿಂದ ವೃಂದೆಯ ತಾಯಿ ಜಾಲಂಧರನ ಜೊತೆಗೆ ಮಗಳ ವಿವಾಹ ಕಾರ್ಯಕ್ಕೆ ಅನುಮತಿಯನ್ನು ನೀಡಿದಳು. ಅನಂತರ ಜಾಲಂಧರನು ವೃಂದೆಯನ್ನು ಗಾಂಧರ್ವ ವಿಧಿಯಿಂದ ಮದುವೆ ಮಾಡಿಕೊಂಡ. ವೃಂದಾ ಜಾಲಂಧರರು ಆದರ್ಶ ದಂಪತಿಗಳಾಗಿ ತಮ್ಮ ವೈವಾಹಿಕ ಜೀವನವನ್ನು ನಡೆಸಿದರು. ಸ್ತ್ರೀ ಸಹಜವಾದ ಚಾಂಚಲ್ಯವನ್ನು ವೃಂದೆ ಎಂದೂ ತನ್ನ ಸನಿಹ ಸುಳಿಯದಂತೆ ದೂರ ಇರಿಸಿದಳು. ಜಾಲಂದರನು ಪರಸ್ತ್ರೀಯರನ್ನು ಎಂದೂ ಕಣ್ಣೆತ್ತಿ ಕೂಡ ನೋಡಲಿಲ್ಲ.

ಒಂದು ದಿನ ಜಾಲಂಧರ ತನ್ನ ರಾಜ ಸಭೆಯಲ್ಲಿ ಆಸೀನನಾಗಿದ್ದ. ಆಗ ಅವನ ಕಣ್ಣಿಗೆ ದೇಹವಿಲ್ಲದೇ ರುಂಡರೂಪವಾಗಿ ಮಾತ್ರ ಉಳಿದ ರಾಹುವಿನ ಶಿರಸ್ಸು ಕಾಣಿಸಿತು. ಆಗ ಜಾಲಂಧರನು ತನ್ನ ಗುರು ಶುಕ್ರಾಚಾರ್ಯರಿಗೆ "ಈ ರಾಹುವು ಕೆಳಗಿನ ಶರೀರವಿಲ್ಲದೇ ಕೇವಲ ಶಿರೋರೂಪವಾಗಿ ಏಕೆ ಉಳಿದಿದ್ದಾನೆ?" ಎಂದು ಕೇಳಿದ ಆಗ ಶುಕ್ರಾಚಾರ್ಯರು ಅವನಿಗೆ ಹಿಂದೆ ದೇವ ದೈತ್ಯರು ಕೂಡಿ ವಾಸುಕಿ ಹಾವನ್ನೇ ಹಗ್ಗವನ್ನಾಗಿ ಮಾಡಿ ಹಾಲಿನಗ್ಗಡಲನ್ನು ಮಂದರ ಬೆಟ್ಟ ಇಟ್ಟು ಕಡೆದು ಅಮೃತವನ್ನು ಪಡೆದ ಸಮಾಚಾರವನ್ನೆಲ್ಲ ಅದ್ಯಂತವಾಗಿ ವಿವರಿಸಿದರು. ಅಮೃತದ ಕಾರಣಕ್ಕಾಗಿ ಭಿನ್ನಭಿನ್ನವಾದ ಕೇತುವಿನ ಕಂಬಂಧ ಹಾಗೂ ರಾಹು ಶಿರಸ್ಸುಗಳು ಸಮಾಚಾರವನ್ನು ತಿಳಿಸಿದರು. ಅದನ್ನು ಕೇಳಿ ಜಾಲಂಧರನಿಗೆ ರಾಹುವಿನ ಮೇಲೆ ಕರುಣೆ ಉಕ್ಕಿ ಬಂದಿತು. ಆಗ ಅವನು ರಾಹುವಿನಿಗೆ

ಮನಬಂದ ರೂಪಧರಿಸುವ ಕಾಮರೂಪಿ ಆಗು ಎಂದು ಹಾರೈಸಿ ಶುಭಾಪಶಂಸನೆಗೈದ. ಮತ್ತು ಶುಕ್ರಾಚಾರ್ಯರ ಜೊತೆಗೆ ಮಂತ್ರಾಲೋಚನೆಯನ್ನು ಮಾಡಿ ತನ್ನ ಕಕ್ಕನನ್ನು ನೆನೆದು ದೇವತೆಗಳೊಂದಿಗೆ ಕಲಿತನದಿಂದ ಕಾದಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವೃಂದೆಯೊಂದಿಗೆ ಜಾಲಂಧರನ ವಿವಾಹ ಎಂಬ ನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಜಾಲಂಧರ ದೇವೇಂದ್ರನ ಬಳಿಗೆ ದೂತನನ್ನು ಕಳಿಸಿದುದು

**ಅಧ್ಯಾಯ - ೫**

**ಧರ್ಮರಾಜ:-** ಜಾಲಂಧರನ ಕಕ್ಕನು ಯಾರು? ಯುದ್ಧ ಮಾಡಲು ಅವನಿಗೆ ಏನು ಆಗಿದ್ದಿತು? ಜಾಲಂಧರನು ಹೇಗೆ ಯುದ್ಧ ಮಾಡಿದ? ಇದೆಲ್ಲವನ್ನು ನಾರದರೇ ನನಗೆ ಹೇಳಿರಿ.

**ನಾರದ:-** ರಾಜಶ್ರೇಷ್ಠನೇ, ನಿನ್ನ ಪ್ರಶ್ನೆಗೆ ನಾನು ಉತ್ತರನೀಡುತ್ತೇನೆ ಕೇಳು. ಭಗವಂತನು ನಿರ್ಮಿಸಿದ್ದ ಸಮುದ್ರಗಳು ಏಳು. ಅವುಗಳಲ್ಲಿ ಮುಖ್ಯವಾದವುಗಳು ನೀರಸಾಗರ. ಕ್ಷೀರಸಾಗರ ಎಂದು ಇಬ್ಬರು ಸಹೋದರರು. ನೀರಿನ ಸಮುದ್ರನ ಮಗನಾದ ಜಾಲಂಧರನಿಗೆ ಹಾಲಿನ ಸಮುದ್ರ ಕಕ್ಕನಾಗಬೇಕು. ಸರಿತಾನೆ? ಈ ನೀರಸಾಗರದ ಅಣ್ಣನಾದ ಕ್ಷೀರಸಾಗರವನ್ನು ಹಿಂದೆ ದೇವತೆಗಳು ಕಡೆದು ಅನೇಕ ರತ್ನಗಳನ್ನು ಪಡೆದರು. ಲಕ್ಷ್ಮಿ, ಚಂದ್ರ, ಐರಾವತ, ಉಚ್ಚೈಶ್ರವ, ಅಮೃತ ಮುಂತಾದ ರತ್ನಗಳನ್ನು ದೇವದಾನವರು ಹಾಲಿನಗ್ಗಡಲನ್ನು ಕಡೆದು ಪಡೆದದ್ದು ವಿಶ್ವ ವಿಶ್ರುತ. ಇದನ್ನು ಕೇಳಿ ತಿಳಿದ ಜಾಲಂಧರನು ದೇವತೆಗಳ ಜೊತೆಗೆ ವೈರ ಬೆಳೆಸಿದ.

ಒಂದು ದಿನ ಆ ಜಾಲಂಧರನು ದುರ್ವಾರಣ ಎಂಬ ತನ್ನ ಒಬ್ಬ ಶೂರ ಸೇನಾಪತಿಗೆ ಹೇಳಬೇಕಾದುದನ್ನೆಲ್ಲ ಹೇಳಿ ದೇವೇಂದ್ರನ ಮನೆಗೆ ದೂತನನ್ನಾಗಿ ಕಳಿಸಿಕೊಟ್ಟ. ಆ ದುರ್ವಾರಣನು ನೇರವಾಗಿ ನಾಕ ಲೋಕಕ್ಕೆ ಹೋದ. ಸಗ್ಗದ ಆಗಸೆಯ ಬಾಗಿಲಲ್ಲಿಯೇ ಅವನನ್ನು ತಡೆದು ನಿಲ್ಲಿಸಿದರು ದೇವದೂತರು. ಅವರ ಮುಖಾಂತರ ''ನಾನು ಜಾಲಂಧರನ ದೂತ. ದೇವೇಂದ್ರನಿಗೆ ನಮ್ಮ ರಾಜನ ಸಂದೇಶವನ್ನು ತಿಳಿಸಲು ಬಂದಿದ್ದೇನೆ'' ಎಂದು ಹೇಳಿಕಳಿಸಿದ. ಕೂಡಲೇ ದೇವೇಂದ್ರನು ಅವನನ್ನು ಬರಮಾಡಿಕೊಂಡ ಅತ್ಯಾದರದಿಂದ. ಆಗ ದುರ್ವಾರಣನು ಆ ದೇವ ಸಭೆಯಲ್ಲಿ ಪ್ರವೇಶಿಸಿ ಬಂಗಾರದ ಪೀಠದಲ್ಲಿ ಕುಳಿತುಕೊಂಡು ಶಚಿಯ ಪ್ರೇಮರಸದಿಂದ ಅರಳಿದ ಸಾವಿರ ತಾವರೆಗಣ್ಣಿನ ಆ ಸುರೇಂದ್ರನನ್ನು ನೋಡಿ ಗರ್ವದಿಂದಲೇ ನಮಸ್ಕರಿಸಿದ. ಆಗ ದೇವೇಂದ್ರನು ''ನೀನು ಯಾರು? ಯಾರು ನಿನ್ನನ್ನು ಇಲ್ಲಿಗೆ ಕಳಿಸಿದ್ದಾರೆ? ಏನು ಕಾರಣ ?'' ಎಂದೆಲ್ಲ ಪ್ರಶ್ನೆ ಮಾಡಿದರು.

**ದುರ್ವಾರಣ:-** ಪುರಂದರನೇ, ನಾನು ಸರ್ವಲೋಕಗಳ ರಾಜನಾದ ಜಾಲಂಧರನ ದೂತ. ಅವನು ನಿನಗೆ ಆಜ್ಞೆಯನ್ನು ಮಾಡಿದ್ದಾನೆ. ಅವನ ಅಪ್ಪಣೆಯನ್ನು ನಿನಗೆ ಹೇಳುತ್ತೇನೆ ಕೇಳು. ನೀನು ಹಿಂದೆ ನನ್ನ ಕಕ್ಕನಾದ ಕ್ಷೀರಸಾಗರನನ್ನು ಏಕೆ ಕಡೆದೆ? ಮಂದರ ಬೆಟ್ಟವನ್ನು ಇಟ್ಟು ಸಂಪದ್ಭರಿತವಾದ ನನ್ನ ಕಕ್ಕನ ಭಂಡಾರವೆಲ್ಲವನ್ನು ನೀನು ಕಿತ್ತಿಕೊಂಡು ಬಿಟ್ಟಿರುವೆ. ಆದುದರಿಂದ ನೀನು ಈಗ ಕೂಡಲೇ ಹಾಲಿನಗ್ಗಡಲನ್ನು ಹಾವಿನ ಹಗ್ಗಹಾಕಿ ಜಗ್ಗಿ ಕಡೆದು ಪಡೆದ ಲಕ್ಷ್ಮೀ, ಚಂದ್ರ, ಅಮೃತ, ಐರಾವತ, ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಮೊದಲಾದ ಎಲ್ಲ ರತ್ನಗಳನ್ನೂ ನನಗೆ ತಂದು ಒಪ್ಪಿಸು. ಮತ್ತು ಬೇಗನೆ ನೀನು ಈ ಸ್ವರ್ಗ ಸಿಂಹಾಸನವನ್ನು ಬಿಟ್ಟುಬಿಡು. ಸ್ವರ್ಗ ಸಾಮ್ರಾಜ್ಯವನ್ನೆಲ್ಲ ನಮಗೆ ಕೊಟ್ಟುಬಿಡು.

**''ಕಿಂ ಕೇಕೀವ ಶಿಖಂಡ ಮಂಡಿತ ತನುಃ**
**ಸಾರೀವ ಕಿಂ ಸುಸ್ವರಃ**
**ಕಿಂವಾಹಂತ ಶಕುಂತ ಪಾಲಕ ಪಿತುಃ ಕರಣಾಮೃತಸ್ಯಂದನಃ ಕಿಂವಾ**
**ಹಂಸ ಇವಾಂಗನಾ ಗತಿ ಗುರುಃ ಕಿಂಕೀರವತ್ ಪಾಠಕಃ**
**ರಾಕಃ ಕೇನ ಗುಣೇನ ಕಾಂಚನ ಮಯೇಽಲಂಕಾರಿತಃ ಪಂಜರೇ''**

ಈ ಕಾಗೆಯನ್ನು ಈ ಬಂಗಾರದ ಪಂಜರಲ್ಲಿ ಏಕೆ ಇಟ್ಟಿರುವಿರಿ? ಇದರಲ್ಲಿ ಯಾವ ಗುಣವು ಇದೆ? ಇದಕ್ಕೆ ನವಿಲಿನಂತೆ ಸುಂದರವಾದ ಗರಿಗೆದರಿದ ಶರೀರವುಂಟೆ? ಕೋಗಿಲೆಯಂತೆ ಮಧುರ ಕಂಠವಿದೆಯೆ? ಶಕುಂತ ಪಕ್ಷಿಯಂತೆ ಕಿವಿಗೆ ಇಂಪಾದ ಸೊಂಪಿನ ನುಡಿ ಉಂಟೆ ? ಹಂಸದಂತೆ ನಾರಿಯರಿಗೆ ನಡಿಗೆಯನ್ನು ಕಲಿಸುವಂಥ ಮಂದಗಮನವುಂಟೆ ? ಗಿಳಿಯಂತೆ ಪಠನಶಕ್ತೀಉಂಟೆ? ಏತಕ್ಕಾಗಿ ಈ ಕಾಗೆಯನ್ನು ಬಂಗಾರದ ಪಂಜರಲ್ಲಿ ತಂದು ಕೂಡಿಸಿರುವಿರಿ?

ಇದಿಷ್ಟು ನಮ್ಮ ದೊರೆ ನಿಮಗೆ ನೀಡಿದ ಕಟ್ಟಪ್ಪಣೆ. ನೀನು ಬದುಕಬೇಕು ಎಂದು ಇಚ್ಛಿಸುತ್ತಿದ್ದರೆ ನೀನು ಮೊದಲು ನಮ್ಮ ಪ್ರಭುವಿನ ಬಳಿ ಬಂದು ಅವನ ಕ್ಷಮೆಯನ್ನು ಕೇಳಿಕೋ ಮತ್ತು ಅವನು ಹೇಳಿದ್ದನ್ನೆಲ್ಲ ಯಥೋಚಿತವಾಗಿ ಬೇಗನೇ ಮಾಡು.

ದಾರ್ವಾರಣನ ಈ ದರ್ಪದ ನುಡಿಯನ್ನು ಕೇಳಿ ದೇವೇಂದ್ರ ನಕ್ಕು ಬಿಟ್ಟ. ಬಳಿಕ ನುಡಿದ.

**ಇಂದ್ರ:-** ದೂತನೇ, ನಾವು ಆ ಹಾಲಿನ ಕಡಲನ್ನು ವ್ಯರ್ಥವಾಗಿ ಕಡೆಯಲಿಲ್ಲ. ಅದಕ್ಕೆ ಒಂದು ಕಾರಣವುಂಟು. ಅದನ್ನು ಹೇಳುತ್ತೇನೆ ಕೇಳು. ಹಿಂದೆ ಹಿಮಾಲಯ ಪರ್ವತಕ್ಕೆ ಮೈನಾಕ ಎಂಬ ಒಬ್ಬ ಮಗನಿದ್ದ. ಅವನು ನನ್ನ ಶತ್ರು. ಅವನಿಗೆ ಈ ಮೂರ್ಖನಾದ ಸಮುದ್ರನು ಆಶ್ರಯಕೊಟ್ಟ. ತನ್ನ ಒಡಲಿನಲ್ಲಿ ತನ್ನಹೊಟ್ಟೆಯಲ್ಲಿಯೇ ಆ ಬೃಹದ್ ಬೆಟ್ಟವನ್ನು ಆಶ್ರಯ ಕೊಟ್ಟು ಇಟ್ಟುಕೊಂಡ ಮತ್ತು ಚರಾಚರಪ್ರಪಂಚವನ್ನೆಲ್ಲ ಸುಟ್ಟುಹಾಕಿದ ವಡವಾರೂಪಿಯಾದ ಅಗ್ನಿಗೂ ದುರಾತ್ಮನಾದ ಸಾಗರನು ತನ್ನ ಉದಕದಲ್ಲಿ ಇಂಬು ಇತ್ತು ಇಟ್ಟುಕೊಂಡ. ಧರ್ಮದ್ರೋಹಿಗಳಾದ ದಾನವರೆಲ್ಲರಿಗೂ ಈ ಕ್ಷೀರಸಾಗರ ಆಶ್ರಯದಾತ ಆಗಿದ್ದಾನೆ. ದೈತ್ಯಾಧಮರಿಗೆಲ್ಲ ಬಲ ಶಕ್ತಿ ಉತ್ಸಾಹವನ್ನು ನೀಡುವ ಹಾಲು,

ಮೊಸರು, ಬೆಣ್ಣೆ, ತುಪ್ಪ ಮುಂತಾದ ಪೌಷ್ಟಿಕ ಪದಾರ್ಥಗಳನ್ನು ಈ ಕ್ಷೀರಸಾಗರನು ಅವಿರತವಾಗಿ ಪೂರೈಸುತ್ತಲೇ ಇರುತ್ತಾನೆ. ಆದುದರಿಂದ ಎಲ್ಲ ದೇವತೆಗಳೊಂದಿಗೆ ಕೂಡಿಕೊಂಡು ಆ ಹಾಲ್ಗಡಲನ್ನು ದಂಡಿಸಬೇಕೆಂದು ಬೆಟ್ಟ ಇಟ್ಟು ಕಡೆದು ಅವನಲ್ಲಿ ಇದ್ದ ರತ್ನಗಳನ್ನೆಲ್ಲ ಕಸಿದುಕೊಂಡೆ. ಹಾಗೂ ಕುಂಭದಿಂದ ಹುಟ್ಟಿದ ನಮ್ಮ ಸಂಬಂಧಿಕನಾದ ಅಗಸ್ತ್ಯ ಮುನಿಯಿಂದ ಅವನನ್ನು ಪಾನಮಾಡಿ ಒಣಗಿಸಿ ಬಿಟ್ಟೆ. ಇಷ್ಟಾದರೂ ಅವನು ದುಷ್ಟ ದಾನವರ ದುಸ್ಸಂಗದಿಂದ ಬುದ್ಧಿಗೆಟ್ಟು ತನ್ನ ಸೇನಾಪರಿವಾರದೊಂದಿಗೆ ನಮ್ಮ ಜೊತೆಗೆ ಯುದ್ಧಕ್ಕೆ ಬಂದರೆ ಆಗಲೇ ಅವನಿಗೆ ಸರ್ವನಾಶ ಖಂಡಿತ.

ಈ ಎಲ್ಲ ದೇವೇಂದ್ರನ ದರ್ಪೋಕ್ತಿಯನ್ನು ಒಂದು ಅಕ್ಷರ ಬಿಡದೇ ಆ ದುರ್ವಾರಣನು ಜಾಲಂಧರನ ಬಳಿಗೆ ಬಂದು ಹೇಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಉತ್ತರಖಂಡದಲ್ಲಿನ ಜಾಲಂಧರ ದೇವೇಂದ್ರನ ಬಳಿಗೆ ದೂತನನ್ನು ಕಳಿಸಿದುದು ಎಂಬ ಐದನೇಯ ಅಧ್ಯಾಯ ಮುಗಿದುದು*



## ದೈತ್ಯಸೇನೆಯೊಂದಿಗೆ ದೇವಸೇನೆಯ ಯುದ್ಧ — ಅಧ್ಯಾಯ - ೬

**ನಾರದ:-** ತನ್ನ ದೂತನ ಮುಖಾಂತರ ದೇವೇಂದ್ರನ ದರ್ಪಿಷ್ಠ ನುಡಿಯನ್ನು ಒರಟು ಉತ್ತರವನ್ನೂ ಕೇಳಿ ಕಿಡಿಕಿಡಿಯಾದ ಜಾಲಂಧರ. ಭೂಲೋಕ ಹಾಗೂ ರಸಾತಳದಲ್ಲಿ ಇರುವ ಎಲ್ಲ ದೈತ್ಯವೀರರನ್ನು ಆಜ್ಞೆಕೊಟ್ಟು ತನ್ನಲ್ಲಿಗೆ ಬರಮಾಡಿಕೊಂಡ. ಶಸ್ತ್ರಾಸ್ತ್ರಬಲಸಂಪನ್ನವಾದ ಪ್ರಚಂಡ ಸೈನ್ಯವನ್ನು ದೇವತೆಗಳ ಮೇಲಿನ ದಾಳಿಗಾಗಿ ಸಜ್ಜುಗೊಳಿಸಿದ. ಸಮುದ್ರಪುತ್ರನ ಚಂಡಪ್ರಚಂಡವಾದ ದೈತ್ಯಸೇನೆಯ ತತ್ತುಳಿದಾಟದಿಂದ ಭೂ ಮಂಡಲವೇ ತತ್ತರಿಸಿ ಹೋಯಿತು. ಭೂವಿವರವನ್ನು ಸೀಳಿಕೊಂಡು ರಸಾತಳ ಪಾತಾಳದಿಂದ ನುಗ್ಗಿಬಂದ ದೈತ್ಯ ವಿಕಾರ ಮುಖದ ಭೀಕರಾಕಾರದ ಸೇನೆಯನ್ನು ನೋಡಿಯೇ ಎಲ್ಲ ಪ್ರಾಣಿಗಳೂ ಭಯಭೀತವಾಗುತ್ತಿದ್ದವು. ಅವರಲ್ಲಿ ಅನೇಕರು ಸಿಂಹದ ಮೋರೆಯವರು. ಹಲವರು ಹುಲಿಯ ಮೊಗದವರು, ಕೆಲವರು ಆನೆಯ ಆಕಾರದವರು. ಇನ್ನೂ ಎಷ್ಟೆಷ್ಟೋ ದುಷ್ಟ ದೈತ್ಯರು ಕುದುರೆಯ ಮೂತಿಯವರು, ಒಂಟೆಯ ಗೋಣಿನವರು, ಬೆಕ್ಕಿನ ಮುಖದವರು, ಮಿಂಚಿನ ಕಣ್ಣಿನವರು ಮತ್ತು ಚಿತ್ರವಿಚಿತ್ರವಾದ ವಿಕಾರ ಧ್ವನಿಯುಳ್ಳವರು, ಹಾವಿನ ಕೂದಲಿನವರೂ, ಮುಳ್ಳಿನ ಮೈಗೂದಲಿನವರೂ, ವಿಕಟ ಅಟ್ಟಹಾಸ ಮಾಡುತ್ತ ನಡೆದಿದ್ದರು. ಆ ದೈತ್ಯಸೇನೆಗೆ ಯಾವ ಅಂಕೆ ಸಂಖ್ಯೆ ಇತಿ ಮಿತಿ ಇರಲಿಲ್ಲ. ಇಂಥ ಭಯಾನಕವಾದ ರಾಕ್ಷಸ ಸೈನ್ಯದೊಂದಿಗೆ ಜಾಲಂಧರನು ವಿಮಾನಾರೂಢನಾಗಿ ಹೊರಟು ಮೊದಲು ದಿನ ಮಧ್ಯಾಹ್ನದಲ್ಲಿ ಮಂದರ ಬೆಟ್ಟಕ್ಕೆ ಬಂದನು. ಜಾಲಂಧರನ ವಿಮಾನವನ್ನು ಕೋಟಿ ಹಂಸ ಹಕ್ಕಿಗಳು ಹೊತ್ತು ಹಾರುತ್ತಿದ್ದವು. ನೂರು ಯೋಜನ ವಿಸ್ತಾರ ಅವನ ಆ ಗಗನಯಾನ. ಅದರಲ್ಲಿ ಎಲ್ಲ ವಸ್ತುಗಳೂ ಅಪರಿಮಿತ ಐಶ್ವರ್ಯವೂ, ಸಕಲವಿಧ ಸುಖಸೌಕರ್ಯವೂ, ಸಮಸ್ತ ಶಸ್ತ್ರಾಸ್ತ್ರಗಳೂ ತುಂಬಿದ್ದವು. ಹೀಗೆ ಮೊದಲನೆಯ ದಿನ ಮಂದರ ಶೈಲದಲ್ಲಿ ಆ ದೈತ್ಯಸೇನೆ ಬೀಡು ಬಿಟ್ಟು

ಬಿಡಾರ ಮಾಡಿ ಆ ಮಂದರದ ಸುಂದರ ಕಂದರಗಳನ್ನು ಮನೋಹರ ಶಿಖರಗಳನ್ನೂ ತುಳಿದು ಅಳಿದು ಪುಡಿಮಾಡಿ ಎರಡನೆಯ ದಿನ ಮೇರು ಪರ್ವತಕ್ಕೆ ಬಂದರು. ಅನಂತರ ಇರಾವೃತ ಎಂಬ ಅದರ ಶಿಖರದಲ್ಲಿ ತಂಗಿ ಅಲ್ಲಿರುವ ದೇವತೆಗಳ ನಂದನವನಕ್ಕೆ ಹಲವಾರು ದೈತ್ಯವೀರರು ಲಗ್ಗೆಯಿಟ್ಟರು. ಸುಂದರವಾದ ಆ ಸ್ವರ್ಗದ ಉದ್ಯಾನವನ್ನು ಅಲ್ಲಿಯ ತರುಲತಾ ಕುಂಜ ನಿಕುಂಜಗಳನ್ನು ದಿವ್ಯವಾದ ಮಂದಾರಾದಿ ತರುಗಳ ಪುಂಜಗಳನ್ನು ತರಿದು ಮುರಿದು ಒಟ್ಟಿ ಮೂರಾಬಟ್ಟಿಮಾಡಿದರು. ಮತ್ತೆ ಹಲವು ರಸಿಕ ದಾನವ ಯುವಕರು ಕಲ್ಪವೃಕ್ಷದ ಟೊಂಗೆಗಳಿಗೆ ತೂಗು ಮಂಚಗಳನ್ನು ಕಟ್ಟಿ ಸಿದ್ಧ ಸುಂದರಿಯರೊಂದಿಗೆ ಉಯ್ಯಾಲೆಯ ಆಟಗಳನ್ನು ಆಡಿದರು.

ಅಲ್ಲಿಂದ ದೈತ್ಯಸಾರ್ವಭೌಮ ಜಾಲಂಧರನು ಮಹೇಂದ್ರ ಶಿಖರಕ್ಕೆ ಜಯ ಘೋಷದೊಂದಿಗೆ ಪ್ರಯಾಣ ಮಾಡಿದನು. ಸುಮೇರು ಪರ್ವತದ ಪೂರ್ವ ದಿಕ್ಕಿನಲ್ಲಿ ಇರುವ ದೇವತೆಗಳ ಭವನೋದ್ಯಾನ ವಿಹಾರ ವನಗಳನ್ನು ಹಾಳುಮಾಡಿದಂತೆ ಅದರ ದಕ್ಷಿಣ ದಿಕ್ಕಿನಲ್ಲಿರುವ ಯಮನ ವಾಸವನ್ನೂ ವರುಣನ ವಾಸ ಭೂಮಿಯನ್ನೂ ಕುಬೇರನ ವಿಹಾರ ಸ್ಥಳವನ್ನೂ ತುಳಿದು ಅಳಿದು ಅಲ್ಲಿಯ ಸುಂದರ ವಸ್ತುಗಳನ್ನೆಲ್ಲ ತೂರಾಡಿ ಸೂರಾಡಿದರು. ಅನಂತರ ಅವರೆಲ್ಲರೂ ದೇವೇಂದ್ರನ ರಾಜಧಾನಿಯಾದ ಅಮರಾವತಿಗೆ ದಾಳಿಯಿಟ್ಟರು. ಆ ಪ್ರಚಂಡ ದೈತ್ಯಸೇನೆಯ ಪಾದವಿಕ್ಷೇಪದಿಂದ ಎದ್ದ ಧೂಳಿದಾಳಿಯ ರಜೋರಾಶಿಯಿಂದಲೇ ಆ ದೇವಪುರಿಯಲ್ಲಿ ಕತ್ತಲೆ ಕವಿದಂತಾಯಿತು. ಇಂದ್ರನ ಕೈಯಲ್ಲಿಯ ವಜ್ರವು ಕಳೆಗೆಟ್ಟು ಕೆಳಗೆ ಬಿದ್ದಿತು. ಆ ಅಪಶಕುನವನ್ನು ಕಂಡು ಭಯಭ್ರಾಂತನಾದ ಇಂದ್ರನು ಧಾವಿಸಿದ ಗುರು ಬೃಹಸ್ಪತ್ಯಾಚಾರ್ಯರ ಕಡೆಗೆ ಮುಂದೆ ಏನೂ ಮಾಡಲು ತೋಚದ ಆ ಗೀರ್ವಾಣ ಗುರು.

**ಚರಣಾ ಯಾಹಿ ಶರಣಂ ವಿಷ್ಣೋರ್ವೈಕುಂಠ ವಾಸಿನಃ**

''ವೈಕುಂಠ ಪತಿಯಾದ ವಿಷ್ಣುವಿನ ಚರಣಗಳಿಗೆ ಶರಣು ಹೋಗು'' ಎಂದು ಸಲಹೆ ಮಾಡಿದ. ಕೂಡಲೇ ಓಡಿ ಬಂದ ಆ ಸುರನಾಥ ವೈಕುಂಠ ಮಂದಿರಕ್ಕೆ ದ್ವಾರಪಾಲಕನಾದ ವಿಜಯ ಒಳಗೆ ಬಂದು ಹರಿಗೆ ಅರುಹಿದ ಇಂದ್ರನ ಆಗಮನವನ್ನು. ಆಗ ಅಲ್ಲಿಯೇ ಕುಳಿತ ಶ್ರೀದೇವಿ ಪತಿಯನ್ನು ಕುರಿತು ಸಲುಗೆಯಿಂದ ನುಡಿದಳು - ''ಪ್ರಭು, ನೀವು ದೇವತೆಗಳ ಪಕ್ಷವಹಿಸಿ ಯುದ್ಧಕ್ಕೆ ಹೋದಾಗ ಸಮುದ್ರಕುಮಾರನೂ ನನ್ನ ತಮ್ಮನೂ ಆದ ಜಾಲಂಧರನನ್ನು ಮಾತ್ರ ಕೊಲ್ಲಬಾರದು. ಇದು ನನ್ನ ಆಣೆ.

ಶ್ರೀದೇವಿಯ ವಚನವನ್ನು ಕೇಳಿಕೊಂಡು ಆ ಮಹಾವಿಷ್ಣು ಗರುಡನ ಹೆಗಲನ್ನು ಆರೋಹಣಮಾಡಿದ. ಯುದ್ಧ ಭೂಮಿಗೆ ಆಗಮಿಸಿದ. ಅವನನ್ನು ಕಂಡು ಎಲ್ಲ ದೇವತೆಗಳೂ ಸಾಷ್ಟಾಂಗ ವಂದನಗೈದರು. ದೇವೇಂದ್ರನು ಶ್ರೀಹರಿಯನ್ನು ಸ್ತೋತ್ರಮಾಡಿ ಜಾಲಂಧರನು ಬಂದು ಸ್ವರ್ಗವನ್ನು ಆಕ್ರಮಿಸಿದ ಸಮಾಚಾರ ತಿಳಿಸಿದ. ಆಗ ಶ್ರೀಹರಿಯು ಅವರಿಗೆಲ್ಲ ಅಭಯದಾನವಿತ್ತು ದೇವಸೇನೆಯು ಮುಂಚೂಣಿಯಲ್ಲಿ ನಿಂತುಕೊಂಡ. ವಿಷ್ಣುವಿನ ಮುಂದೆ ವಜ್ರಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ರಥಾರೂಢನಾಗಿ ದೇವೇಂದ್ರ ಮುನ್ನಡೆದ. ವಿಷ್ಣುವಿನ ಬಲಬದಿಯಲ್ಲಿ ಅಡಿನ ಮೇಲೆ ಕುಳಿತು ಕೊಂಡು ಕ್ರಮಿಸಿದ ಇಂದ್ರನ ಮಗನಾದ ಜಯಂತ ಐರಾವತವನ್ನು ಏರಿಕೊಂಡು ಯುದ್ಧಕ್ಕೆ

ಮುಂದುವರಿದ. ದೇವೇಂದ್ರನ ಮುಂದೆ ದ್ವಾದಶ ಆದಿತ್ಯರು ನಿಂತುಕೊಂಡರು. ಧಾತಾ, ಅರಿಯಮ, ಮಿತ್ರ, ವರುಣ, ವಂಶ, ಭಗ, ಇಂದ್ರ, ಯುವಸ್ವಾನ್ ಪೂಷ, ಪರ್ಜನ್ಯ, ತ್ವಷ್ಟಾ, ವಿಷ್ಣು ಹೀಗೆ ಇವರೇ ಹನ್ನೆರಡು ಆದಿತ್ಯರು. ವೀರಭದ್ರ, ಶಂಭು, ಗಿರೀಶ, ಅಜೈಕಪಾಲ, ಅಹಿರ್‌ಬುದ್ಧ್ನ್ಯ, ವಿರಾಕಿ, ಅಪರಾಜಿತ, ಭುವನಾಧೀಶ್ವರ, ಕಪಾಲಿ, ಸ್ಥಾನು, ಭಗ ಎಂಬ ಹೆಸರಿನ ಹನ್ನೊಂದು ರುದ್ರರು, ಶ್ವಸನ, ಸ್ಪರ್ಶನ, ವಾಯು, ಅನಿಲ, ಮಾರುತ, ಪ್ರಾಣ, ಅಪಾನ, ಸುಜೀವ ಎಂಬ ಎಂಟು ಮರುತರೂ ನಡೆದಿದ್ದರು. ದೇವೇಂದ್ರನ ಮುಂಭಾಗದಲ್ಲಿ ದೇವಸೇನೆಯ ಮುಂದೆ ಪಲ್ಲಕ್ಕಿಯಲ್ಲಿ ಕುಬೇರನೂ ಮಂದಗತಿಯಲ್ಲಿ ಸಾಗಿದ್ದನು. ಏಕಾದಶ ರುದ್ರರೆಲ್ಲರೂ ಎತ್ತನ್ನು ಹತ್ತಿಕೊಂಡು ವೃಷಭಾರೂಢರಾಗಿ ಚಲಿಸುತ್ತಿದ್ದರು. ಎಂಟು ಮರುತರು ಚಿಗರೆಗಳ ಮೇಲೆ ಆರೋಹಣ ಮಾಡಿ ಮುಂದುವರೆದಿದ್ದರು. ಹೀಗೆ ಪ್ರಚಂಡವಾದ ದೈವಸೇನಿಕರು ಪೂರ್ವ ಪಶ್ಚಿಮ ಸಮುದ್ರಗಳ ಅಂತರವನ್ನೆಲ್ಲ ಆಕ್ರಮಿಸಿದರು. ಅವರೆಲ್ಲರಿಗೂ ವರಾಹರೂಪಿಯಾದ ಶ್ರೀಹರಿಯು ನೇತಾರನಾಗಿದ್ದ. ಹೀಗೆ ಸುಮೇರು ಪರ್ವತದ ಉತ್ತರ ಭಾಗದಲ್ಲಿ ನರೋತ್ತಮರ ಸೇನಾ ಸಮೂಹವು ನಿಂತುಕೊಂಡಿತು. ಇದೇ ಪರ್ವತದ ದಕ್ಷಿಣ ಭಾಗದಲ್ಲಿ ಜಾಲಂಧರನ ಅಪರಂಪಾರ ಸೇನೆಯು ಸಮುದ್ರದಂತೆ ಭೋರ್ಗರೆಯುತ್ತ ಯುದ್ಧಕ್ಕೆ ಸನ್ನದ್ಧವಾಗಿ ನಿಂತುಕೊಂಡಿತ್ತು. ಮೇರು ಮಂದರದ ಮಧ್ಯಭೂಮಿಯನ್ನೇ ಯುದ್ಧಭೂಮಿಯನ್ನಾಗಿ ಗುರುಶುಕ್ರರ ಆದೇಶದಂತೆ ನಿರ್ಧರಿಸಲಾಗಿತ್ತು. ಆ ಭೂಮಿ ನಿಮಗೆ ಗೆಲುವನ್ನು ತಂದುಕೊಡುವ ವಿಜಯಸ್ಥಳ ಎಂಬ ಶುಕ್ರಾಚಾರ್ಯರ ಮಾತಿನಂತೆ ದೈತ್ಯರು ಆ ಸ್ಥಳವನ್ನು ಯುದ್ಧಕ್ಕಾಗಿ ಆಯ್ಕೆ ಮಾಡಿದ್ದರು. ಇಬ್ಬರೂ ಗುರುಗಳ ಆಜ್ಞೆಯಾದ ಕೂಡಲೇ ದೈತ್ಯ ದಾನವರಲ್ಲಿ ಶುರುವಾಯಿತು ಘನಘೋರ ಸಂಗ್ರಾಮ. ಚತುರಂಗ ಬಲಸಹಿತವಾದ ಪ್ರಚಂಡ ದೇವದಾನವ ಸೈನಿಕರು ಘೋರತರವಾದ ತೀಕ್ಷ್ಣ ಶಸ್ತ್ರಾಸ್ತ್ರಗಳ ಎಸೆದಾಟ ಮಸೆದಾಟದಿಂದ ನಿರ್ಭತ್ಸನೆಯ ನುಡಿಗಳೊಂದಿಗೆ ಕಿಡಿಗಳನ್ನು ಹಾರಿಸುತ್ತ ಹೋರತೊಡಗಿದರು. ಇಷ್ಟು ಜನ ವೈರಿಗಳನ್ನು ಕೊಲ್ಲುವ ಸದವಕಾಶ ತನಗೆ ಮೊಟ್ಟ ಮೊದಲು ದೊರಕಿದ್ದಕ್ಕಾಗಿ ಕಾಲನೇಮಿಯು ಸಂತೋಷದ ಉನ್ಮಾದದಿಂದ ಯುದ್ಧದ ಮಧ್ಯದಲ್ಲಿಯೇ ಕುಣಿಯತೊಡಗಿದ. ಅದನ್ನು ಕಂಡು ಪರಮ ಕೋಪ ಬಂದಿತು ವಿಷ್ಣುವಿಗೆ. ಆಗ ಅವನು ಕಾಲನೇಮಿಯನ್ನು ಅಟ್ಟಿಸಿಕೊಂಡು ಹೋದ. ಯಮನು ದುರ್ವಾರಣನ ಮೇಲೆ ಎರಗಿದ. ರಾಹು ಚಂದ್ರ-ಸೂರ್ಯರನ್ನು ಮುತ್ತಿದ. ಕೇತುವನ್ನು ಅಗ್ನಿಯು ಕಬಳಿಸ ಹೊರಟ. ಅಶ್ವಿನೀ ದೇವತೆಗಳು ಅಂಗಾರಪರ್ಣ ದೈತ್ಯನನ್ನೂ, ಕುಬೇರನು ನಿರ್‌ಹಾದನನ್ನೂ, ರುದ್ರರು ನಿಶುಂಬನನ್ನೂ ಜಂಭನನ್ನು ವಿಶ್ವೇದೇವತೆಗಳೂ, ಮರುತರು ವಜ್ರಲೋಮನನ್ನೂ ಯಮದೇವರು ಮಯಾಸುರನನ್ನೂ ದೇವೇಂದ್ರನು ನಮುಚಿಯನ್ನೂ ಬೆನ್ನಟ್ಟಿ ಹೋಗಿ ಹೋರತೊಡಗಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ದೈತ್ಯಸೇನೆಯೊಂದಿಗೆ ದೇವಸೇನೆಯ ಯುದ್ಧ ಎಂಬ ಆರನೇಯ ಅಧ್ಯಾಯ ಮುಗಿದುದು*

—o—

## ಹರಿ ಮತ್ತು ಕಾಲನೇಮಿ ಮುಂತಾದವರ ಯುದ್ಧ | ಅಧ್ಯಾಯ - ೭

**ನಾರದ:-** ಹೀಗೆ ದೈತ್ಯದಾನವ ಧುರೀಣರು ಒಬ್ಬರಿಗೊಬ್ಬರು ಸಂಧಿಸಿ ಅಬ್ಬರಿಸಿ ಯುದ್ಧಮಾಡುತ್ತಿರುವಾಗ ಶ್ರೀ ಹರಿಯು ಕ್ರುದ್ಧನಾಗಿ ಕಾಲನೇಮಿಯ ತಲೆಯ ಮೇಲೆ ತನ್ನ ಗದೆಯಿಂದ ಕುಟ್ಟಿದ. ಒಂದು ಕ್ಷಣ ಮೂರ್ಛೆಯ ಮಡಿಲಲ್ಲಿ ಮಲಗಿ ಮತ್ತೆ ಚೇತರಿಸಿಕೊಂಡು ಎದ್ದ ಕಾಲನೇಮಿ. ಅಸಂಖ್ಯ ಬಾಣಗಳನ್ನು ಧಾರಾಕಾರವಾಗಿ ಹರಿಯು ನಿಂತನಿಟ್ಟಿನಲ್ಲಿ ತೂರಿದ ಆ ಕಾಲನೇಮಿ. ಅದನ್ನು ಕಂಡು ಕೆರಳಿ ಕೆಂಡವಾದ ಮಹಾವಿಷ್ಣು ತನ್ನ ಅಮೋಘ ಬಾಣ ಹೂಡಿ ಹೆದೆಯನ್ನು ತೀಡಿ ಗುರಿಯಿಟ್ಟು ವೈರಿಯ ಶಿರ ಹಾರಿಸಿದ. ಚಂದ್ರನು ಖಡ್ಗದಿಂದ ರಾಹುವನ್ನು ಪ್ರಹರಿಸಿದ. ಆಗ ರಾಹು ಅಲ್ಲಿಂದ ಕಾಲ್ತೆಗೆದು ಸೂರ್ಯನ ಕಡೆಗೆ ಧಾವಿಸಿದ. ತನ್ನ ಅಮೋಘ ಆಯುಧಗಳಿಂದ ಸೂರ್ಯನನ್ನು ಸೋಲಿಸಿ ರಾಹು ಮತ್ತೆ ಚಂದ್ರನ ಕಡೆಗೆ ಧಾವಿಸಿ ಬಂದ. ಆಗ ಚಂದ್ರನು ತನ್ನ ಹರಿತವಾದ ಖಡ್ಗದಿಂದ ವೇಗದಿಂದ ಪ್ರಹರಿಸಿದ ರಾಹುವನ್ನು. ಆದರೆ ವಜ್ರಕಠೋರವಾದ ರಾಹುವಿನ ದೇಹದಲ್ಲಿ ಬಿದ್ದ ಚಂದ್ರನ ಖಡ್ಗವು ಪುಡಿಪುಡಿಯಾಯಿತು. ಆಗ ಆ ರಾಹುವು ವಜ್ರಕಠೋರವಾದ ತನ್ನ ಮುಷ್ಟಿಯಿಂದ ಚಂದ್ರನನ್ನು ಹೊಡೆದ. ಅವನ ಬಲವಾದ ಪ್ರಹಾರವನ್ನು ತಾಳದೇ ಮೂರ್ಛಿತನಾದ ಚಂದ್ರ. ಹೀಗೆ ರಣರಂಗದಲ್ಲಿ ಅರಿವುಗೆಟ್ಟು ಕೆಳಗೆ ಬಿದ್ದ ಚಂದ್ರನನ್ನು ರಾಹುವು ನುಂಗಿಬಿಟ್ಟ. ಅದರಿಂದ ದೇವಸೇನೆಯಲ್ಲಿ ಹಾಹಾಕಾರವುಂಟಾಯಿತು. ಅನಂತರ ರಾಹುವು ತಾನು ನುಂಗಿದ ಚಂದ್ರನನ್ನು ಮತ್ತೆ ಬಾಯಿಂದ ಹೊರಗೆ ಉಗುಳಿಬಿಟ್ಟ. ಅನಂತರ ಆ ರಾಹುವು ಉಚ್ಚೈಶ್ರವ ಕುದುರೆಯನ್ನು ಎತ್ತಿಕೊಂಡು ಒಯ್ದು ಜಾಲಂಧರನ ಎದುರು ನಿಲ್ಲಿಸಿ ಅವನಿಗೆ ಅರ್ಪಿಸಿದ. ದುರ್ವಾರಣನು ರಣದಲ್ಲಿ ಕ್ರುದ್ಧನಾಗಿ ಯಮನನ್ನು ಗದೆಯಿಂದ ಹೊಡೆದ. ಆಗ ಕೋಪ ಕೆರಳಿದ ಯಮ ತನ್ನ ಯಮದಂಡದಿಂದ ದುರ್ವಾರಣನನ್ನು ಹೊಡೆದು ಧಾರಾತೀರ್ಥನನ್ನು ಮಲಗಿಸಿದ. ಇಂದ್ರನ ಮಗನಾದ ಜಯಂತ ನಿಶಿತವಾದ ಬಾಣಗಳಿಂದ ಸಂಹ್ಲಾದನನ್ನು ಹೊಡೆದು ಗಾಯಗೊಳಿಸಿದ. ಸಂಹ್ಲಾದನು ಕೆರಳಿ ತನ್ನ ಪರಿಘಾಯುಧದಿಂದ ಹೊಡೆದು ಜಯಂತನನ್ನು ಮೂರ್ಛೆಗೊಳಿಸಿದ. ಕುಬೇರನು ಯುದ್ಧದಲ್ಲಿ ನಿಲ್ಹಾದವನ್ನು ಹೊಡೆದು ಬೀಳಿಸಿದ. ರುದ್ರಗಣದವರೆಲ್ಲರೂ ಕೂಡಿ ತಮ್ಮ ತ್ರಿಶೂಲಾಯುಧಗಳಿಂದ ನಿಷುಂಭನನ್ನು ಪ್ರಹರಿಸಿದರು. ಶುಂಭಾಸುರನು ದೇವತೆಗಳ ಮೇಲೆ ಬಾಣಗಳ ಮಳೆಯನ್ನೇ ಕರೆದನು. ಮತ್ತು ಪರಮ ಮಾಯಾವಿಯಾದ ಆ ಶುಂಭಾಸುರ ತನ್ನ ಪಾಶಗಳಿಂದ ಮೃತ್ಯುವನ್ನು ತಡೆದು ಹಿಡಿದು ಹೊಡೆದು ಪಾಶಗಳಿಂದ ಬಿಗಿದು ಜಾಲಂಧರನ ಕಡೆಗೆ ಒಯ್ದು ಅವನನ್ನು ಒಪ್ಪಿಸಿದ. ಜಾಲಂಧರನು ಅವನನ್ನು ಪಾರುವ ಮುನಿಗೆ ಒಪ್ಪಿಸಿದ. ಪಾರುವ ಮುನಿಯು ಸಮುದ್ರಕ್ಕೆ ನೀಡಿದ. ಆಗ ಸಮುದ್ರರಾಜನು ಆ ಮೃತ್ಯುವನ್ನು ಲೋಕಕ್ಕೆ ಕ್ಷೇಮವಾಗಲಿ ಎಂದು ನುಡಿದು ತನ್ನ ಬಾಯಿಯಲ್ಲಿ ಹಾಕಿ ಕೊಂಡುಬಿಟ್ಟ. ಇತ್ತ ದೇವೇಂದ್ರನು ತನ್ನ ಪಾಶಗಳಿಂದ ನಮುಚಿ ದೈತ್ಯನನ್ನು ಬಂಧಿಸಿ ರಸಾತಳಕ್ಕೆ ಒಯ್ದ. ಅನಂತರ ದೇವೇಂದ್ರನಿಗೂ ಬಲ ಎಂಬ

ದೈತ್ಯನಿಗೂ ದಾರುಣತರವಾದ ಸಂಗ್ರಾಮವು ಮಸಗಿತು. ಆ ಬಲದೈತ್ಯನ ದೇಹಕಾಂತಿ ಸೂರ್ಯಪ್ರಭೆಯಂತೆ ದಶದಿಕ್ಕುಗಳನ್ನೂ ಪ್ರಕಾಶಮಾನವಾಗಿ ಮಾಡಿದವು. ದೇವೇಂದ್ರನು ಬಲಾಸುರನ ಮೇಲೆ ಪ್ರಯೋಗಿಸಿದ ಎಲ್ಲ ಶಸ್ತ್ರಗಳೂ ನಿಷ್ಫಲವಾದವು. ಅಸ್ತ್ರಗಳು ತಾವೇ ಮುರಿದು ಪುಡಿಪುಡಿಯಾದವು. ಆಗ ಕುಪಿತನಾದ ದೇವೇಂದ್ರ ಮುದ್ಗರ ಆಯುಧವನ್ನು ತೆಗೆದುಕೊಂಡು ಬಲಾಸುರನ ಎದೆಯ ಮೇಲೆ ಒಂದು ಬಲವಾದ ಪೆಟ್ಟುಕೊಟ್ಟು ಸಿಂಹನಾದ ಮಾಡಿದ. ಅದನ್ನು ನೋಡಿ ಆ ಬಲದೈತ್ಯನು ನಕ್ಕು ಬಿಟ್ಟ. ನಗುವಾಗ ಬಲನ ಮುಖದಿಂದ ಎಷ್ಟೋ ಮುತ್ತುಗಳು ಉದುರಿದವು. ಅದನ್ನು ಕಂಡು ದೇವೇಂದ್ರನು ಅವನ ಜೊತೆಗೆ ಯುದ್ಧವನ್ನು ನಿಲ್ಲಿಸಿಬಿಟ್ಟ. ಮತ್ತು ಅವನನ್ನು ಮುಕ್ತಕಂಠದಿಂದ ಪ್ರಶಂಸೆಮಾಡಿದ. ಅದನ್ನು ಕೇಳಿ ಸಂತೋಷವಾಯಿತು ಆ ದೈತ್ಯರಾಜನಿಗೆ. ಅವನು ಇಂದ್ರನಿಗೆ ಹೇಳಿದ.

**ಬಲ:-** ಸುರರಾಜ, ನಿನಗೆ ಏನಾದರೂ ವರ ಬೇಕಿದ್ದರೆ ಕೇಳು.

**ಇಂದ್ರ:-** ದೈತ್ಯರಾಜ, ನೀನು ನನ್ನ ಮೇಲೆ ನಿಜವಾಗಿಯೂ ಸಂತುಷ್ಟನಾಗಿದ್ದರೆ ನಿನ್ನ ದೇಹವನ್ನು ನನಗೆ ಕೊಟ್ಟುಬಿಡು.

**ಬಲ:-** ಹಾಗೇ ಆಗಲಿ. ಆದರೆ ನೀನು ನಿನ್ನ ಶಸ್ತ್ರಗಳಿಂದ ನನ್ನನ್ನು ಹೊಡೆದು ಸೀಳಿ ನನ್ನ ದೇಹವನ್ನು ತೆಗೆದುಕೋ.

ಅದನ್ನು ಕೇಳಿ ಇಂದ್ರನಿಗೆ ಪರಮ ಸಂತೋಷವಾಯಿತು.

**ಕಿಮದೇಯಂ ಮಹಾತ್ಮನಾಂ**

ದೊಡ್ಡವರು ಕೊಡದೇ ಇರುವದು ಯಾವುದಿದೆ?

**ಗೀರಿವ ಶೋತ್ರಹೀನಸ್ಯ ಲೋಲಾಕ್ಷೀವ ವಿಚಕ್ಷಷಃ**
**ಪರಾಸೋಃ ಪುಷ್ಪ ಮಾತೀವ ಶ್ರೀಃ ತದರ್ಯಸ್ಯ ನಿಷ್ಫಲಾ**

ಕಿವಿ ಇಲ್ಲದ ಕೆಪ್ಪನ ಮುಂದೆ ಹೇಳಿದ ಮಾತು ವ್ಯರ್ಥ. ಕಣ್ಣಿಲ್ಲದ ಕುರುಡನಿಗೆ ಚೆಲುವಿನ ಹೆಂಡತಿ ಇದ್ದು ವ್ಯರ್ಥ. ಸತ್ತ ಮನುಷ್ಯನ ಹೆಣಕ್ಕೆ ಹೂವಿನ ಹಾರ ಹಾಕುವದು ವ್ಯರ್ಥ. ಜಿಪುಣನಿಗೆ ಐಶ್ವರ್ಯ ಬಂದರೆ ಅದೂ ವ್ಯರ್ಥ.

**ಮಹಾತಾನೋನು ಗೃಹ್ಣಂತಿ ಹಿಂಸಮಾನಾನ್ ರಿಪ್ಯನಪಿ**
**ಸಪತ್ನೀಃ ಪ್ರಾಪಯಂತ್ಯಂಬ್ಧಿಂ ಸಿಂಧವೋ ನಗನಿಮ್ನಗಾಃ**

ತಮ್ಮನ್ನು ಹಿಂಸೆ ಮಾಡುವ ವೈರಿಗಳ ಮೇಲೆ ಕೂಡ ದೊಡ್ಡವರು ಅನುಗ್ರಹವನ್ನೇ ಮಾಡುತ್ತಾರೆ. ದೊಡ್ಡ ದೊಡ್ಡ ನದಿಗಳೂ ಕೂಡ ತಮ್ಮ ಸವತಿಯರಾದ ಬೇರೆ ನದಿಗಳನ್ನೂ ಕೂಡ ತಮ್ಮ ಪತಿ ಸಮುದ್ರರಾಜನ ಬಳಿಗೆ ತಂದು ತಲುಪಿಸುತ್ತವೆ.

**ಸುಜನೋ ನಯಾತಿ ವಿಕೃತಿಂ**
**ಪರಹಿತಂ ನಿರತೋ ವಿನಾಶಕಾಲೇಪಿ**
**ಛಿನೋಪಿ ಚಂದನ ತರುಃ ಸುರಭಯತಿ ಮುಖಂ ಕುಠಾರಯಸ್ಯ**

ಸಜ್ಜನನು ಯಾವಾಗಲೂ ಹೆರವರಿಗೆ ಹಿತಮಾಡುವದರಲ್ಲಿಯೇ ಅಸಕ್ತನಾಗಿರುತ್ತಾನೆ. ಎಂಥ ಸಂಕಟ ಸಮಯ ಬಂದರೂ ಅವನ ಈ ಪರೋಪಕಾರ ಸ್ವಭಾವವು

ಬದಲಾಗುವದಿಲ್ಲ. ಚಂದನದ ಮರವು ತನ್ನನ್ನು ಕಡಿದು ಕೊಚ್ಚಿ ಹಾಕಿದ ಕೊಡಲಿಯ ಬಾಯಿಯನ್ನು ಸುಂಗಧಿತವನ್ನಾಗಿಯೇ ಮಾಡುತ್ತದೆ.

**ದೈವಾತ್ ಪರಮ ವಿನಶ್ಯತಿ ತನುರಪಿ ನ ಶ್ರೀರಿವೇದಿ ತಾ ಸತ್ಸು**
**ಅವಶಿಷ್ಯತೇ ಹಿಮಾಂಶೋಃ ಸೈವಕಲಾ ಶಿರಸಿಯಾ ಶಂಭೋಃ**

ದುರ್ದೈವವು ಒದಗಿದಾಗ ಮನುಷ್ಯನದು ಎಲ್ಲವೂ ನಾಶಹೊಂದುತ್ತದೆ. ಆದರೆ ಸಜ್ಜನರಿಗೆ ನೀಡಿದ ಅತ್ಯಲ್ಪ ಸಂಪತ್ತು ಮಾತ್ರ ನಾಶವಾಗುವದಿಲ್ಲ. ಚಂದ್ರನ ಪೂರ್ಣ ಬಿಂಬವು ನಾಶವಾದರೂ ಮಹಾದೇವರಿಗಾಗಿ ನೀಡಿದ ಚಂದ್ರಕಲೆಯು ಮಾತ್ರ ನಾಶವಾಗದೇ ಉಳಿದುಕೊಂಡಿರುತ್ತದೆ.

ಇದರಂತೆ ವಿನಾಶ ಕಾಲದಲ್ಲಿಯೂ ಪರೋಪಕಾರ ನಿರತನಾದ ಬಲಾಸುರನ ಸೂಚನೆಯನ್ನು ಮನ್ನಿಸಿ ದೇವೇಂದ್ರನು ಮುದ್ಗರಾಯುಧವನ್ನು ಎತ್ತಿ ಬಲಾಸುರನನ್ನು ಹೊಡೆದನು. ಆದರೂ ಅವನ ದೇಹ ಸೀಳಲಿಲ್ಲ. ಸಿಡಿಯಲಿಲ್ಲ, ಹೊಡೆಯಲಿಲ್ಲ. ಆಗ ಚಿಂತೆಯಾಯಿತು ಆ ಶಚೀಪತಿಗೆ. ಆಗ ಅಲ್ಲಿಯೇ ನಿಂತ ಮಾತಲಿ ಬಲನ ದೇಹದ ಮೇಲೆ ವಜ್ರದಿಂದ ಪ್ರಹಾರ ಮಾಡಲು ಸೂಚಿಸಿದ. ಕೂಡಲೇ ದೇವೇಂದ್ರ ವಜ್ರಾಯುಧವನ್ನು ಎತ್ತಿ ಬಲನ ದೇಹದ ಮೇಲೆ ಹೊಡೆತ ಹಾಕಿದ. ಆ ವಜ್ರಘಾತದಿಂದ ಬಲನ ದೇಹವು ಸೀಳಿ ಹೋಳಾಯಿತು. ಅವನ ದೇಹ ಸೀಳಿದ ಒಂದು ಹೋಳು ಸುವರ್ಣಗಿರಿಯಲ್ಲಿ ಎರಡನೆಯ ಹೋಳು ಹಿಮಾಲಯದಲ್ಲಿಯೂ ಮೂರನೆಯ ಭಾಗ ಗೋನಗ ಪರ್ವತದಲ್ಲಿಯೂ ನಾಲ್ಕನೆಯ ದೇಹದ ತುಂಡು ದೇವಗಂಗೆಯಲ್ಲಿಯೂ ಐದನೆಯ ಶರೀರದ ತುಣುಕು ಮಂದರಾಚಲದಲ್ಲಿ ಆರನೆಯದು ವಜ್ರಾಕರದಲ್ಲಿಯೂ ಬಿದ್ದವು.

ಈ ಬಲಾಸುರನು ಜಾತಿಯಿಂದ ಶುದ್ಧ. ಜನ್ಮದಿಂದ ಪರಿಶುದ್ಧ. ಅವನು ಮಾಡುವ ಧರ್ಮಕರ್ಮಗಳೆಲ್ಲವೂ ಪರಮ ಶುದ್ಧ. ಅವನು ಈ ವರೆಗೆ ಮಾಡಿದ ಪುಣ್ಯಕರ್ಮಗಳಿಂದ ಅವನ ಅಂಗಾಂಗಳೆಲ್ಲವೂ ರತ್ನಬೀಜ ಆಗಿರುತ್ತವೆ.

ಆ ಬಲಾಸುರನ ಮೂಳೆಗಳಿಂದ ವಜ್ರಗಳು, ಆರು ಏಣಿನ ರತ್ನಗಳು ಹುಟ್ಟಿದವು. ಅವನ ಎರಡೂ ಕಣ್ಣುಗಳಿಂದ ಇಂದ್ರ ನೀಲ ರತ್ನಗಳು, ಅವನ ರಕ್ತದಿಂದ ಪದ್ಮರಾಗ ಮಣಿಗಳೂ, ಮೇದಸ್ಸಿನಿಂದ ಮರಕತ ಮಣಿಗಳೂ, ನಾಲಿಗೆಯಿಂದ ಪ್ರವಾಳಗಳೂ, ಹಲ್ಲಿನಿಂದ ಮುತ್ತುಗಳೂ ಉತ್ಪನ್ನವಾದವು. ಮಜ್ಜೆಯಿಂದ ಮರಕತ ರತ್ನವೂ, ನಾಡಿಯಿಂದ ಗಾರುತ್ಮತ ಎಂಬ ರತ್ನವೂ ಇದರಂತೆ ಬಲಾಸುರನ ಮಲದಿಂದ ಕಂಚು, ವೀರ್ಯದಿಂದ ಬೆಳ್ಳಿ, ಮೂತ್ರದಿಂದ ತಾಮ್ರ, ಅವನ ದೇಹವನ್ನು ಉಜ್ಜಿಮಾಡಿದ ಸ್ನಾನದಿಂದ ಹಿತ್ತಾಳೆಯು, ನಾದದಿಂದ ವೈಡೂರ್ಯವೂ ಹಾಗೂ ಉಳಿದ ರತ್ನಗಳೂ, ಉಗುರುಗಳಿಂದ ಬಂಗಾರವು, ಮೇದಸ್ಸಿನಿಂದ ಸ್ಫಟಿಕವು, ಮಾಂಸದಿಂದ ಪ್ರವಾಳವೂ ಮೂಡಿಬಂದವು. ಒಟ್ಟು ಈ ಭೂಲೋಕದಲ್ಲಿ ಇರುವ ಎಲ್ಲ ರತ್ನಗಳೂ ಬಲಾಸುರನ ದೇಹದಿಂದಲೇ ಹುಟ್ಟಿ ಬಂದಿರುತ್ತವೆ.

ಅನಂತರ ಇಂದ್ರನಿಂದ ಬಲಾಸುರನು ಕೊಲ್ಲಲ್ಪಟ್ಟ ಸಮಾಚಾರವನ್ನು ಕೇಳಿ ಅವನ ಪಟ್ಟರಾಣಿಯಾದ ಪ್ರಭಾವತಿಯು ಅಲ್ಲಿಗೆ ಧಾವಿಸಿ ಬಂದಳು. ತನ್ನ ಪತಿಯ ದೇಹವನ್ನು ಅಪ್ಪಿಕೊಂಡು ದುಃಖಾರ್ತಳಾಗಿ ಶೋಕಿಸತೊಡಗಿದಳು.

**ಪ್ರಭಾವತಿ:-** ಪ್ರಭು, ಈಲೋಕದಲ್ಲಿ ಮುಪ್ಪು ಅಪ್ಪಿ ಹಿಡಿದಿರಲಿ, ರೋಗ ತಗಲಿರಲಿ, ಕುಷ್ಠದಿಂದ ಪಷ್ಪವಾಗಿರಲಿ ಏನಾದರೂ ಜನರು ತಮ್ಮ ದೇಹವನ್ನು ಬಿಡುವುದಿಲ್ಲ. ಎಂಥ ರೋಗಿಷ್ಠನೂ ತನ್ನ ನಾಶವನ್ನು ಬಯಸುವುದಿಲ್ಲ. ಆದರೆ ನಿನ್ನ ದೇಹವು ರೋಗ ಮುಕ್ತ, ಶಕ್ತಿಯುಕ್ತ, ಕಾಂತಿಯುಕ್ತ. ಇಂಥ ದಿವ್ಯ ಸುಂದರವಾದ ದೇಹವನ್ನು ಏಕೆ ಬಿಟ್ಟೆ, ಯಾರಿಗೆ ಕೊಟ್ಟೆ? ವ್ಯರ್ಥವಾಗಿ ಇಂಥ ದಿವ್ಯ ಶರೀರವನ್ನು ನೀನು ಬಿಟ್ಟದ್ದಾದರೂ ಏಕೆ? ನೀನು ಯುದ್ಧಕ್ಕೆ ಹೋಗುವಾಗ ಅವಸರದಲ್ಲಿ ಅರ್ಧಹಾಕಿದ ನನ್ನ ಕೂದಲಿನ ಹೆಳಲು ಹಾಗೆಯೇ ನಿಂತಿದೆ. ಈಗ ಬಂದು ಅದನ್ನು ಪೂರ್ಣಗೊಳಿಸು.

ಹೀಗೆ ದಾರುಣವಾದ ದುಃಖದಿಂದ ದಂದ್ಯೆಹ್ಯಮಾನಳಾಗಿ ವಿಲಾಪಗೈಯುವ ಆ ಪ್ರಭಾವತಿಯನ್ನು ಕಂಡು ಜಾಲಂಧರನಿಗೂ ಬಹಳ ದುಃಖವಾಯಿತು. ಅವನು ತನ್ನ ಗುರು ಶುಕ್ರಾಚಾರ್ಯನಿಗೆ ವಿಜ್ಞಾಪಿಸಿದ.

**ಜಾಲಂಧರ:-** ಗುರುಗಳೇ, ನಿಮ್ಮ ಸಂಜೀವಿನಿ ವಿದ್ಯೆಯ ಪ್ರಭಾವದಿಂದ ಮರಣ ಹೊಂದಿದ ಈ ಪ್ರಭಾವತಿಯ ಗಂಡನನ್ನು ಹೇಗಾದರೂ ಮಾಡಿ ಬದುಕಿಸಿರಿ.

**ಶುಕ್ರಾಚಾರ್ಯರು :-** ಜಾಲಂಧರ, ಬಲಾತ್ಕಾರದಿಂದ ಅಥವಾ ದ್ವೇಷದಿಂದ ಇನ್ನೊಬ್ಬರಿಂದ ಹೊಡೆದು ಬಡೆದು ಜೀವಹೋದವರನ್ನು ನಾನು ಹೇಗಾದರೂ ಮಾಡಿ ಬದುಕಿಸಬಹುದು. ಆದರೆ ಈ ಬಲರಾಜನು ಸ್ವಯಂ ಇಚ್ಛೆಯಿಂದಲೇ ಮರಣವನ್ನು ತಂದುಕೊಂಡಿರುವನು. ಹೀಗೆ ಇಚ್ಛಾಮರಣ ಹೊಂದಿರುವವರನ್ನು ನಾನು ಹೇಗೆ ಮರಳಿ ಬದುಕಿಸಲಿ? ಆದರೂ ನನ್ನ ಮಂತ್ರ ಸಾಮರ್ಥ್ಯದಿಂದ ಅವನ ಬಾಯಿಂದಲೇ ಮಾತನ್ನು ಆಡಿಸುತ್ತೇನೆ. ಹೀಗೆ ಹೇಳಿ ಶುಕ್ರಾಚಾರ್ಯರು ಒಂದು ಕ್ಷಣ ಕಣ್ಣು ಮುಚ್ಚಿ ಧ್ಯಾನ ಲೀನರು ಆದರು. ಆಗ ಮೃತನಾದ ಬಲಾಸುರನ ಬಾಯಿಂದ ಶಬ್ದವು ಹೊರಬಂದಿತು. ಆ ಧ್ವನಿಯು ಕೇಳಲು ಒಳ್ಳೇ ಇಂಪಾಗಿದ್ದಿತು.

**ಬಲಾಸುರ:-** ಪ್ರಭಾವತಿ, ನೀನು ನಿನ್ನ ದೇಹವನ್ನು ನನ ಅಂಗಾಂಗಗಳಲ್ಲಿ ಲಯವಾಗುವಂತೆ ಮಾಡು.

ಪತಿಯ ಮುಖದಿಂದಲೇ ಬಂದ ಈ ಶವ ಸಂದೇಶವನ್ನು ಕೇಳಿ ತಕ್ಷಣವೇ ಪ್ರಭಾವತಿಯು ನದಿಯಾಗಿ ನೀರಾಗಿ ಹರಿದು ಹೊಮ್ಮಿದಳು. ತನ್ನ ಪತಿ ಬಲಾಸುರನ ಅಂಗಾಂಗಳಲ್ಲಿ ಲೀನಳಾಗಿ ಪೂರ್ವವಾಹಿನಿ ನದಿಯಾಗಿ ಹೊಮ್ಮಿ ಹರಿದಳು. ಅವಳ ನೀರಿನಿಂದ ರತ್ನಗಳ ಕಾಂತಿಯು ಅತ್ಯುತ್ತಮವಾಗಿ ಬೆಳಗತೊಡಗಿತು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಹರಿ ಮತ್ತು ಕಾಲನೇಮಿ ಮುಂತಾದವರ ಯುದ್ಧ ಎಂಬ ಏಳನೇಯ ಅಧ್ಯಾಯ ಮುಗಿದುದು*

—o—

## ಜಾಲಂಧರನಿಂದ ಇಂದ್ರನ ಪರಾಜಯ

ಅಧ್ಯಾಯ - ೮

**ನಾರದ:**- ದೇವೇಂದ್ರನು ಬಲಾಸುರನನ್ನು ಕೊಂದುದನ್ನು ಕಂಡು ಬ್ರಹ್ಮಾಂಡ ಕೋಪ ಬಂದಿತು ಜಾಲಂಧರನಿಗೆ. ಅವನು ಇಂದ್ರನ ಎದುರು ಬಂದು ''ರಣಹೇಡಿಯಾದ ದೇವೇಂದ್ರ, ಕಪಟದಿಂದ ಬಲದಾನವನನ್ನು ಕೊಂದು ನೀನು ಎಲ್ಲಿ ಹೋಗುವೆ? ದುರ್ಬಲನಾದ ನಿನ್ನಂಥ ಅಧಮನನ್ನು ನಾನು ಬಿಡುವೆನೆ? ಎಂದು ಗರ್ಜಿಸಿ ಬಾಣಗಳ ಮಳೆಗರೆದು ಇಂದ್ರನ ರಥ, ಕುದುರೆ, ಸಾರಥಿ ಎಲ್ಲವನ್ನೂ ಮುಚ್ಚಿಹಾಕಿದ. ಸ್ವಯಂ ಸುರನಾಥ ಮೂರ್ಛೆಯ ಮಡಿಲಲ್ಲಿ ಮರವುಗೆಟ್ಟು ಒರಗಿದ. ತನ್ನ ಬಾಣಗಳಿಂದ ಗಾಯಗೊಂಡು ತನ್ನ ತೇರಿನ ಅಂಗಣದಲ್ಲಿಯೇ ಬಿದ್ದುಕೊಂಡ ಶಚೀಪತಿಯನ್ನು ಕಂಡು ಜಯಘೋಷ ಮಾಡಿದ ಜಾಲಂಧರ. ಮರುಚಣದಲ್ಲಿ ಮೂರ್ಛೆ ತಿಳಿದು ಎದ್ದ ಆ ದೇವರಾಜ ಸಂಕೃದ್ಧನಾಗಿ ಜಾಲಂಧರನ ಮೇಲೆ ಬಲವಾಗಿ ಬೀಸಿದ ತನ್ನ ವಜ್ರಾಯುಧವನ್ನು. ಬೆಟ್ಟಗಳನ್ನು ಕುಟ್ಟಿ ಪುಡಿಮಾಡುವ ಆ ಅಮೋಘ ವಜ್ರಾಸ್ತ್ರವನ್ನು ಲೀಲೆಯಿಂದ ಹಾರಿ ಹಿಡಿದ ಜಾಲಂಧರ. ಅದನ್ನು ತನ್ನ ಬಗಲಲ್ಲಿ ಇಟ್ಟುಕೊಂಡು ರಥದಿಂದ ಕೆಳಗೆ ಧುಮ್ಮಿಕ್ಕಿ ಇಂದ್ರನನ್ನು ಹಿಡಿಯಬೇಕೆಂದು ಅವನ ರಥದತ್ತ ಧಾವಿಸಿದ. ಅದನ್ನು ಕಂಡು ಹೆದರಿ ಹೋದ ಸಹಸ್ರಾಕ್ಷ. ರಥದಿಂದ ಹಾರಿಕೊಂಡು ಆ ಸುರೇಶ್ವರ ಅಲ್ಲಿಂದ ಪಲಾಯನಗೈದ. ಸುರಪತಿಯು ತೆರವು ಮಾಡಿದ ಆ ತೇರನ್ನು ಜಾಲಂಧರನು ಆಢ್ಯತೆಯಿಂದ ಏರಿದ. ಅವನ ಮನೋರಥವು ಪೂರ್ಣವಾಗಿತ್ತು. ಸುರಸಮ್ರಾಟನ ಪಲಾಯನ, ಅವನ ಗೆಲುವಿನ ಸೂಚಕವಾಗಿತ್ತು. ಇಂದ್ರನು ಓಡಿಹೋದ ದಿಕ್ಕಿನತ್ತ ಅವನ ರಥವನ್ನು ನೂಕಲು ಅವನು ಇಂದ್ರನ ಸಾರಥಿಯಾದ ಮಾತಲಿಗೆ ಅಣತಿ ಇತ್ತ. ಅವನನ್ನು ಬೆನ್ನಟ್ಟಿದ. ಅದನ್ನು ಕಂಡು ಶ್ರೀಹರಿಗೆ ಕೋಪ ಬಂದು ಅವನು ತನ್ನ ಖಡ್ಗವಾದ ನಂದಕವನ್ನು ಹಿರಿದ. ಕಂಡ ಕಂಡ ದೈತ್ಯರ ರುಂಡಗಳನ್ನು ಚೆಂಡಾಡಿದ. ದೈತ್ಯ ಸೇನೆಯಲ್ಲಿ ಹಾಹಾಕಾರ ಎದ್ದಿತು ನೆತ್ತರಿನ ಹೊಳೆಯೇ ಹರಿಯಿತು. ಅದನ್ನು ಕಂಡು ಕೋಪೋದ್ರಿಕ್ತನಾದ ಶೈಲರೋಮ ಎಂಬ ದೈತ್ಯವೀರನು ವಿಷ್ಣುವನ್ನು ಎದುರಿಸಿದ. ಬಾಣಗಳ ಜಡಿಮಳೆಯನ್ನೇ ಹರಿಯ ಮೇಲೆ ಸುರಿಸಿದ. ಆಗ ವಿಷ್ಣು ತನ್ನ ನಂದಕ ಖಡ್ಗದಿಂದ ಶೈಲರೋಮನ ತಲೆಯನ್ನು ಹಾರಿಸಿದ. ಆದರೂ ರುಂಡ ಹಾರಿದ ಅವನ ದಂಡವು ಅರ್ಥಾತ್ ಕಬಂಧವು ತನ್ನ ಎರಡೂ ತೋಳುಗಳನ್ನು ಚಾಚಿ ಗರುಡನ ಎರಡೂ ರೆಕ್ಕೆಗಳನ್ನು ಹಿಡಿದು ಜಗ್ಗಿತು. ಹರಿಯ ಖಡ್ಗದಿಂದ ವಿಚ್ಛಿನ್ನವಾದ ಅವನ ರುಂಡವು ಕೂಡ ಗರುಡನ ಮೇಲೆ ಬಿದ್ದು ಅವನನ್ನು ಕೆಳಗೆ ಕೆಡವಿತು. ಆಗ ಹರಿಯು ತನ್ನ ಮುಂಗೈಯಿಂದ ಹೊಡೆದು ಆ ಶೈಲರೋಮನ ರುಂಡ, ದಂಡ ಎರಡನ್ನೂ ನೆಲದ ಮೇಲೆ ಬೀಳಿಸಿದ.

ಇದನ್ನು ದೂರದಿಂದಲೇ ನೋಡಿದ ಜಾಲಂಧರ. ತನ್ನ ಸಾರಥಿಯಾದ ಖಡ್ಗರೋಮನಿಗೆ ವಿಷ್ಣುವಿನ ಎದುರು ತನ್ನ ರಥವನ್ನು ಒಯ್ದು ನಿಲ್ಲಿಸಲು ಅಪ್ಪಣೆ ಮಾಡಿದ. ಅರೆಚಣದಲ್ಲಿ ಹರಿಯ ಎದುರು ಸಾರಥಿಯು ರಥವನ್ನು ತಂದು ನಿಲ್ಲಿಸಿದ ಬಳಿಕ ಪ್ರಾಣಾಂತಕವಾದಬಾಣಗಳಿಂದ ಶ್ರೀಹರಿಯ ಮೇಲೆ ಪ್ರಹಾರಗೈದ. ಅವನು ಬಿಟ್ಟ

ನೂರಾರು ಬಾಣಗಳಿಂದ ಎಚ್ಚರತಪ್ಪಿ ಬಿದ್ದ ಗರುಡ. ಕೂಡಲೇ ನಾರಾಯಣ ತನ್ನ ವೈಕುಂಠದಲ್ಲಿಯ ದಿವ್ಯ ರಥವನ್ನು ನೆನೆದ. ವೈಕುಂಠದಿದ ಆಗಲೇ ಅವನ ಹೊಸ ತೇರು ಬಂದಿತು. ಗರುಡನನ್ನು ಎಚ್ಚರಿಸಿ ಹೊಸ ರಥದ ಸಾರಥ್ಯದಲ್ಲಿ ನಿಯೋಜಿಸಿದ. ತನ್ನ ತಲೆಯ ಮೇಲಿನ ಕಿರೀಟವನ್ನು ಸರಿಪಡಿಸಿಕೊಂಡು ಹೃದಯದಲ್ಲಿ ಕೌಸ್ತುಭವನ್ನು ಧರಿಸಿ ನಾಕು ಪುರುಷಾರ್ಥಗಳನ್ನೇ ತನ್ನ ಕುದುರೆಗಳನ್ನಾಗಿ ಹೂಡಿ ರಥಾರೂಢನಾಗಿ ಜಾಲಂಧರನ ಮೇಲೆ ಏರಿ ಹೋದ ಶ್ರೀಹರಿ. ತನ ಘೋರವಾದ ಶರಜಾಲಗಳಿಂದ ದೈತ್ಯಸೇನೆಯಲ್ಲೆಲ್ಲ ಆ ಮುರಾರಿಯು ಕೊಚ್ಚತೊಡಗಿದ. ಅವನ ಬೆಂಬಲಿಗನಾಗಿ ಇಂದ್ರನ ಆಜ್ಞೆಯಿಂದ ಅನಲ ದೇವನು ಆಗಮಿಸಿ ದಾನವರ ದಂಡಿನಲ್ಲಿ ಅಗ್ನಿ ತಾಂಡವವನ್ನೇ ನಡೆಸಿದ ಹೀಗೆ ವಿಷ್ಣು ಹಾಗೂ ವಂಧ್ಯ ಇವರಿಬ್ಬರ ಚಾಪ, ತಾಪ, ಪ್ರತಾಪದಿಂದ ದೈತ್ಯಸೇನೆ ಎಲ್ಲವೂ ದಗ್ಧಮುಗ್ಧವಾಗಿ ಹೋಯಿತು. ಜಾಲಂಧರನು ಸುತ್ತಲೂ ಕಣ್ಣಾಡಿಸಿ ನೋಡಿದ. ತನ್ನ ಸೈನ್ಯದಲ್ಲಿ ಉಳಿದವರಿಗಿಂತ ಅಳಿದವರೇ ಹೆಚ್ಚು ಎಂದು ಅವನಿಗೆ ತಿಳಿದುಬಂತು. ಆಗ ಅವನು ಉದ್ಭ್ರಾಂತನಾಗಿ ಶುಕ್ರಾಚಾರ್ಯನನ್ನು ಬೇಡಿಕೊಂಡ - "ಗುರುಗಳೇ, ನೀವು ಮಂತ್ರತಂತ್ರ ವಿಶಾರದರು. ನಿಮ್ಮ ನೈತೃತ್ವದಲ್ಲಿಯೇ ನಡೆದಿದೆ ಈ ಹಣಾಹಣಿ ಹೋರಾಟ ಸುರಸೈನಿಕರೊಂದಿಗೆ. ದೈತ್ಯಸೇನೆಯ ತುಂಬ ಹೆಣಗಳ ಹಡದಿಯನ್ನೇ ಹಾಸಿದ್ದಾನೆ. ಅಸುರರ ಜನ್ಮ ವೈರಿಯಾದ ಆ ಹರಿ. ನಿಮ್ಮ ಕಣ್ಣೆದುರೇ ರಾಕ್ಷಸ ಸೇನೆ ಎಲ್ಲವೂ ಮಣ್ಣುಗೂಡಿ ಹೋಗುತ್ತಿದೆ ಎಂದ ಬಳಿಕ ನಿಮ್ಮ ಮಂತ್ರವಿದ್ಯೆಯಿಂದ ಏನು ಉಪಯೋಗ? ದುಃಖಿತರಾದವರನ್ನು ಹಾಗೂ ಸಾಯಲಿರುವವರನ್ನು ಸಂರಕ್ಷಿಸದ ವಿದ್ಯೆಯಿಂದಾಗಲೀ, ಬಲದಿಂದಾಗಲೀ, ಏನು ಪ್ರಯೋಜನ ಶರಣಾಗತರನ್ನು ರಕ್ಷಿಸದಿರುವ ಬಲವಿದ್ಯೆಗಳು ಎರಡೂ ವ್ಯರ್ಥ.

**ಶುಕ್ರಾಚಾರ್ಯ :-** ರಾಜನೇ, ಈ ರಣರಂಗದಲ್ಲಿ ಈಗ ನೋಡು ನನ್ನ ಪರಾಕ್ರಮವನ್ನು, ಬ್ರಾಹ್ಮಣರ ಶಕ್ತಿ ಎಷ್ಟು ಮತ್ತು ಎಂಥದು ಎಂಬುದನ್ನು ನಿನಗೆ ಈಗಲೇ ತೋರಿಸಿ ಬಿಡುತ್ತೇನೆ.

ಹೀಗೆ ನುಡಿದ ಶುಕ್ರಾಚಾರ್ಯರು ಆ ರಣಭೂಮಿಯಲ್ಲಿಯೇ ನೀರಿನಿಂದ ಆಚಮನ ಮಾಡಿದರು. ಮಂತ್ರವನ್ನು ಪಠಿಸಿದರು. ಓಂಕಾರವನ್ನು ಮಾಡಿದರು. ಮರುಚಣದಲ್ಲಿಯೇ ಅಚ್ಚರಿಗೆ ಗರಿ ಮೂಡಿಸಿದಂತೆ ಸತ್ತುಬಿದ್ದ ದೈತ್ಯಸೇನೆ ಎಲ್ಲವೂ ಮತ್ತೆ ಎದ್ದು ನಿಂತಿತು. ಪುನಃಶ್ಚೇತನ ಪಡೆದ ದಾನವರ ಸೈನಿಕರ ದಂಡು ಎಲ್ಲವೂ ಹಿಂಡು ಹಿಂಡಾಗಿ ಎದ್ದುನಿಂತು ಪ್ರಚಂಡ ಜಯಘೋಷವನ್ನು ಮಾಡಿತು. ತಮ್ಮ ಬಿಲ್ಲು ಬಾಣಗಳನ್ನು ಉತ್ಸಾಹದಿಂದ ತೆಗೆದುಕೊಂಡು ದೇವಸೇನೆಯ ಮೇಲೆ ಅಹಂಕಾರದಿಂದ ಹೂಂಕರಿಸಿ ಬಾಣಪ್ರಯೋಗ ಮಾಡತೊಡಗಿದರು. ಅದರಿಂದ ಜರ್ಜರಿತರಾದರು ಎಲ್ಲ ನಿರ್ಜರ ವೀರರು. ಅವರ ದೇಹಗಳು ಕ್ಷತವಿಕ್ಷತವಾದವು ದೇವತೆಗಳು ಅಮರರು ಸಾವು ಇಲ್ಲದವರು ಅದರಿಂದ ಅದರ ಪ್ರಾಣ ಹೋಗದಿದ್ದರೂ ಪ್ರಾಣಾಂತಿಕವಾದ ಮರ್ಮಸ್ಥಾನಗಳಿಗೆ ತಗಲಿದ ಪೆಟ್ಟಿನಿಂದ ತ್ರಾಣ ಹೋಗಿ ಕ್ಷೀಣರಾಗಿ ಗತಪ್ರಾಣರಂತೆಯೇ ನಿಶ್ಚೇಷ್ಟರಾಗಿ ರಣಭೂಮಿಯಲ್ಲಿ ಕುಸಿದರು.

ಅದನ್ನು ಕಂಡು ಭಗವಾನ್ ನಾರಾಯಣನು ಬೃಹಸ್ಪತಿಗೆ ನುಡಿದ.

**ನಾರಾಯಣ :-** ಸುರಾಚಾರ್ಯ, ನಿನ್ನ ಶಕ್ತಿಗೆ ಧಿಕ್ಕಾರವಿರಲಿ. ನೀನು ಸುರಸಮೂಹಕ್ಕೆಲ್ಲ ಗುರು. ನಿನ್ನ ಶಿಷ್ಯರೆಲ್ಲರೂ ದೈತ್ಯರ ಬಾಣಾಘಾತದಿಂದ ಸಾವಿಗಿಂತಲೂ ಮಿಗಿಲಾದ ನೋವು, ಬಾವು ಬವಣೆಗಳನ್ನು ಅನುಭವಿಸುತ್ತಿದ್ದಾರೆ. ಈ ಅಪಾಯದಿಂದ ಅವರನ್ನು ಬೇಗನೆ ಪಾರುಮಾಡು.

**ಬೃಹಸ್ಪತ್ಯಾಚಾರ್ಯ:-** ಜಗನ್ನಾಥ, ನಿನ್ನ ಅಪ್ಪಣೆಯಂತೆ ನಾನು ನನ್ನ ಈ ಎಲ್ಲ ಸುರಶಿಷ್ಯರನ್ನು ಔಷಧಗಳಿಂದ ಮರಳಿ ಬದುಕಿಸುತ್ತೇನೆ.

ಹೀಗೆ ಹೇಳಿ ಆ ಸುರಗುರು ತ್ವರಿತದಿಂದ ಹಾಲ್ಗಡಲಿಗೆ ಹೋದ. ಅಲ್ಲಿಯ ಒಂದು ಶೈಲಶ್ರೇಣಿಯ ದರಿಕೊರೆಯಲ್ಲಿರುವ ಸಂಜೀವಿನಿ ಔಷಧವನ್ನು ತಂದ. ಅದರಿಂದ ಎಲ್ಲ ದೇವತೆಗಳ ಶಸ್ತ್ರಾಘಾತದ ಗಾಯಗಳನ್ನೆಲ್ಲ ಮಾಯಿಸಿ ಎಲ್ಲರನ್ನೂ ಎಬ್ಬಿಸಿ ಕೂಡಿಸಿದ. ಅದರಿಂದಾಗಿ ಆ ಸುರವೀರರೆಲ್ಲರೂ ನವತರುಣರಂತೆ ಉತ್ಸಾಹದ ಚೆಲುಮೆಗಳಾಗಿ ಪುಟಿದೆದ್ದು ನಿಂತುಕೊಂಡರು. ಮತ್ತು ತಮ್ಮ ಅಮೋಘವಾದ ಶಸ್ತ್ರಾಸ್ತ್ರಗಳಿಂದ ದೈತ್ಯವೀರರನ್ನೆಲ್ಲ ಕಡಿದು ಕೊಚ್ಚಿಹಾಕತೊಡಗಿದರು. ಅದನ್ನು ನೋಡಿ ಜಾಲಂಧರನು ಶುಕ್ರಾಚಾರ್ಯರನ್ನು ಪ್ರಶ್ನಿಸಿದ.

**ಜಾಲಂಧರ :-** ಅಸುರಚಾರ್ಯ, ಸಂಜೀವಿನಿ ವಿದ್ಯೆ ನಿನಗೊಬ್ಬನಿಗೆ ಮಾತ್ರ ಗೊತ್ತು. ಅದಿಲ್ಲದೇ ರಣಭೂಮಿಯಲ್ಲಿ ಧರಾಶಾಯಿಗಳಾದ ಈ ದೇವತೆಗಳು ಅದೆಂತು ಎದ್ದು ನಿಂತರು.

**ಶುಕ್ರಾಚಾರ್ಯ:-** ಸಿಂಧುಕುಮಾರ, ಹಾಲ್ಗಡಲಿನ ನಟ್ಟನಡುವೆ ದ್ರೋಣ ಎಂಬ ಒಂದು ಬೆಟ್ಟವಿದೆ. ಅಲ್ಲಿ ಸತ್ತವರನ್ನು ಮರಳಿ ಬದುಕಿಸುವ ಕೆಲವು ಗಿಡಮೂಲಿಕೆಗಳು ಇರುತ್ತವೆ. ಸುರಾಚಾರ್ಯನಾದ ಬೃಹಸ್ಪತಿ ಆ ಕ್ಷೀರಸಮುದ್ರದ ಮಧ್ಯದಲ್ಲಿ ಇರುವ ದ್ರೋಣಗಿರಿಯಿಂದ ಆ ವನಸ್ಪತಿಯನ್ನು ತಂದು ಹತಪ್ರಾಯರಾಗಿ ಬಿದ್ದ ಸುಪರ್ವಸೈನಿಕರನ್ನೆಲ್ಲ ಎಬ್ಬಿಸಿ ನಿಲ್ಲಿಸಿದ್ದಾನೆ.

ಇದನ್ನು ಕೇಳಿ ಜಾಲಂಧರನು ಶುಂಭಾಸುರನನ್ನು ಕರೆದ. ಅವನ ಹೆಗಲ ಮೇಲೆ ಹೋರಾಟದ ಹೊಣೆಗಾರಿಕೆಯ ಹೊರೆಯನ್ನು ಹೊರಿಸಿ ತಾನು ಹಾಲಿನ ಹೆಗ್ಗಡಲಿನ ಕಡೆಗೆ ಹಾರಿದ. ಅಲ್ಲಿ ಹೋಗಿ ಮೊದಲು ಆ ದುಗ್ಧ ಸಾಗರದ ಮಧ್ಯದಲ್ಲಿ ಪ್ರವಿಷ್ಟನಾದ. ಅಲ್ಲಿಯ ದಿವ್ಯವಾದ ಮಹಾಕಾಂತಿಯಿಂದ ಕಳಕಳಿಸುವ ಒಂದು ಮಹಾಪ್ರಾಸಾದವನ್ನು ಪ್ರವೇಶಿಸಿದ. ಅಲ್ಲಿ ಒಂದು ಸುಂದರವಾದ ಅಡುಂಬೊಲ. ಅದು ತಂಪೂ ಅಲ್ಲ ಸಕೆಯೂ ಅಲ್ಲ. ಅಲ್ಲಿ ಗಾಳಿ ಸುಳಿಯದು. ಕತ್ತಲೆ ಹರಡದು. ಅಲ್ಲಿ ಹಲವಾರು ಚೆಲುವಿನ ಚಿಟ್ಟೆಗಳಂತಿದ್ದ ಸುಂದರ ತರಳೆಯರ ಕುಣಿತ, ಮಣಿತ, ಸಂಗೀತ, ಅಲ್ಲಿಗೆ ಹೋದ ಈ ಸಿಂಧುಸುತನಾದ ಜಾಲಂಧರ. ಅಲ್ಲಿ ಹಾಲಿನ ಸಮುದ್ರವು ಮೂರ್ತಿಮಂತಾಗಿ ಆ ವಿಲಾಸಿನಿಯರೊಂದಿಗೆ ಕೇಲಿಲೋಲನಾಗಿದ್ದ. ಅದನ್ನು ನೋಡಿ ಜಾಲಂಧರನು ಅವನಿಗೆ ಸಾಷ್ಟಾಂಗ ವಂದನೆಗೈದ. ಕೈ ಮುಗಿದು ಹೇಳಿದ.

**ಜಾಲಂಧರ :-** ಕ್ಷೀರಸಮುದ್ರನೇ, ನೀನು ನನಗೆ ಕಕ್ಕನಾಗಬೇಕು. ನಿನ್ನ ಹೊಟ್ಟೆಯಲ್ಲಿ ಇದ್ದ ದ್ರೋಣಾಚಲ ಎಂಬ ಬೆಟ್ಟದಲ್ಲಿ ಅಸಂಖ್ಯ ಔಷಧ ವನಸ್ಪತಿಗಳು ತುಂಬಿದೆ. ನೀನು ಅವುಗಳನ್ನೆಲ್ಲ ಆ ಬೆಟ್ಟ ಸಹಿತವಾಗಿ ನಿನ್ನ ತೆರೆಗಳಲ್ಲಿ ಮುಳುಗಿಸಿಬಿಡು.

**ಕ್ಷೀರಸಾಗರ:-** ವತ್ಸ, ಆ ದ್ರೋಣಶೈಲವು ನನಗೆ ಶರಣು ಬಂದಿದೆ. ಶರಣಾಗತರನ್ನು ರಕ್ಷಿಸುವುದು ನಮ್ಮ ಕರ್ತವ್ಯ. ಅದನ್ನು ನಾನು ಹೇಗೆ ನೀರಿನಿಂದ ಮುಳುಗಿಸಲಿ? ಯಾವನು ಶರಣಾಗತರನ್ನು ಹಿಂಸಿಸುವನೋ, ಅವನನ್ನು ಮುನಿಗಳು ಎಂದೂ ಪ್ರಶಂಸಿಸುವದಿಲ್ಲ.

ತನ್ನ ಕಕ್ಕನಾದ ಕ್ಷೀರಸಿಂಧುವು ನುಡಿದದ್ದನ್ನು ಕೇಳಿ ಜಾಲಂಧರನಿಗೆ ಕೋಪೋದ್ರೇಕ ಆಯಿತು. ರೊಚ್ಚಿಗೆದ್ದ ಆ ರಾಕ್ಷಸನು ತನ್ನ ಮುಂಗೈ ವೇಗದಿಂದ ಬಲವಾಗಿ ಪ್ರಹರಿಸಿದ. ಜಾಲಂಧರನ ಈ ಪ್ರಹಾರದಿಂದ ಆ ದ್ರೋಣಗಿರಿಯು ಭಯಭ್ರಾಂತನಾಗಿ ಮನುಷ್ಯರೂಪವನ್ನು ತಳೆದು ಅವನ ಎದುರು ಬಂದು ಬೇಡಿಕೊಂಡಿತು.

**ದ್ರೋಣಗಿರಿ:-** ಗಿರಿರಾಜ, ನಾನು ನಿನ್ನ ದಾಸ. ಬಹುಕಾಲ ಪೂರ್ವದಲ್ಲಿಯೇ ನಾನು ನಿನ್ನ ದಾಸನಾಗಿದ್ದೇನೆ. ನಿನ್ನನ್ನೇ ಮೊರೆಹೊಕ್ಕಿದ್ದೇನೆ. ನೀನು ನನ್ನನ್ನು ಕಾಪಾಡು. ನಾನು ಈಗ ನಿನ್ನ ಅಪ್ಪಣೆಯಿಂದ ರಸಾತಳಕ್ಕೆ ಹೋಗುವೆನು. ನೀನು ಈ ಭೂಲೋಕದ ರಾಜ್ಯವನ್ನು ಆಳುವವರೆಗೆ ನಾನು ಅಲ್ಲಿಯೇ ಇರುವೆನು.

ಹೀಗೆ ನುಡಿದು ಆ ದ್ರೋಣಗಿರಿಯು ಕ್ಷೀರಸಾಗರದಿಂದ ಎದ್ದು ಪಾತಾಳಕ್ಕೆ ಹೋಯಿತು. ಅನಂತರ ಜಾಲಂಧರನು ರಣಭೂಮಿಗೆ ಆಗಮಿಸಿದ. ರಥದಲ್ಲಿ ಕುಳಿತುಕೊಂಡ ಶ್ರೀಹರಿಯನ್ನು ನೋಡಿ ನಕ್ಕು "ನಾನು ವೈರಿಗಳನ್ನೆಲ್ಲ ಈಗಲೇ ಹೊಡೆದು ಹಾಕುವೆನು. ನೀನು ನೋಡುತ್ತ ಇದೇ ರಥದಲ್ಲಿ ಕುಳಿತುಕೊಂಡಿರು." ಎಂದು ನುಡಿದು ದೇವಸೇನೆಯನ್ನು ಕಲಿತನದಿಂದ ಕಾದಿ ಪ್ರಹರಿಸತೊಡಗಿದ. ಸುರ ಸೈನಿಕರ ಸಮೂಹದಲ್ಲಿ ಒಮ್ಮೆಲೇ ಕೋಲಾಹಲ. ತ್ರಾಹಿ, ತ್ರಾಹಿ ರಕ್ಷಿಸಿರಿ, ರಕ್ಷಿಸಿರಿ ಎಂದು ಎಲ್ಲರೂ ಬೃಹಸ್ಪತ್ಯಾಚಾರ್ಯರಿಗೆ ಮೊರೆ ಇಟ್ಟರು. ಕೂಡಲೇ ಆ ಸುರ ಗುರು ಹಾರಿದ ಹಾಲಿನ ಹೆಗ್ಗಡಲಿಗೆ. ಅಲ್ಲಿ ನೋಡಿದ. ಆ ದ್ರೋಣಗಿರಿ ತನ್ನ ಮೊದಲಿನ ಸ್ಥಾನ ಬಿಟ್ಟು ಹೋಗಿ ಬಿಟ್ಟಿದ್ದಿತು. ಲಗುಬಗೆಯಿಂದ ನಿರಾಶನಾದ ಆ ನಿರ್ಜರರ ಗುರು ಸಂಗ್ರಾಮದ ರಂಗಭೂಮಿಗೆ ಬಂದ - "ಸುರಸೈನಿಕರೇ, ಹಾಗೂ ಅಮರಾವತಿಯ ನಾಗರಿಕರೇ, ಎಲ್ಲರೂ ಓಡಿರಿ. ಪಲಾಯಗೈದು ಪ್ರಾಣ ಉಳಿಸಿಕೊಳ್ಳಿರಿ. ನಮ್ಮ ಸಂಜೀವಿನಿ ಗುಡ್ಡವಾದ ಆ ದ್ರೋಣಾದ್ರಿಯು ನಷ್ಟವಾಗಿ ಹೋಗಿದೆ." ಎಂದು ಸಾರಿ ಸಾರಿ ಚೀರಿ ಕೂಗಿ ಹೇಳಿದ. ಆಗ ಜಾಲಂಧರ ಇದನ್ನು ನೋಡಿದ. ಧಾವಿಸಿ ಬಂದು ಬೃಹಸ್ಪತ್ಯಾಚಾರ್ಯರನ್ನು ಹಿಡಿದ. ಅಟ್ಟಹಾಸಗೈದು ಅವರ ಯಜ್ಞೋಪವೀತವನ್ನು ಕಡಿದ. ಕೂದಲು ಕಿತ್ತಿದ. ಆಗ ಆ ಗೀರ್ವಾಣ ಗುರು ಗಾಬರಿಯಾಗಿ ಗಡಿಬಿಡಿಯಿಂದ ಪ್ರಾಣ ಉಳಿಸಿಕೊಳ್ಳಲು ಓಡಿಹೋದ. ಉಳಿದೆಲ್ಲ ದೇವತೆಗಳು ಕಂಗೆಟ್ಟು ದಿಕ್ಕೆಟ್ಟು ಓಟ ಕಿತ್ತಿದ್ದರು.

ಹೀಗೆ ಸುಪರ್ವಸೈನಿಕರನ್ನೆಲ್ಲ ಬಡಿದೋಡಿಸಿ ಸಿಂಧುಪುತ್ರನಾದ ಜಾಲಂಧರ ಹೃಷಿಕೇಶನನ್ನು ಎದುರಿಸಿದ ಅವರಿಬ್ಬರ ನಡುವೆ ತುರುಸಿನ ಹಾಗೂ ಬಿರುಸಿನ ಸಮರ ಮಸಗಿತು. ವಾಸುದೇವನು ನಿಶಿತತರವಾದ ತನ್ನ ಶರಜಾಲಗಳಿಂದ ಜಾಲಂಧರನ ಶರೀರವನ್ನು ಗಾಯಗೊಳಿಸಿದ. ವಿಷ್ಣುಶರದಿಂದ ತಾಡಿತಪೀಡಿತನಾದ ಆ ಸಿಂಧುಪುತ್ರ ರಥದಿಂದ ಕೆಳಗೆ ಧುಮುಕಿ ಹರಿ ನಿಂತ ಕಡೆ ನಡೆದ. ವಿಷ್ಣು ಬಿಡುತ್ತಲೇ ಇದ್ದ ಬಿಲ್ಲಿನಿಂದ ಬಾಣಗಳನ್ನು. ಅವುಗಳ ಹೊಡೆತ ಬಡೆತಗಳನ್ನು ತಾಳುತ್ತ ಕೈಗೆ ಬಂದವುಗಳನ್ನು ಮೈಯಿಂದ ಕೀಳುತ್ತ ಮುಂದುವರೆದ ಜಾಲಂಧರ. ಕೇಶವ ಕುಳಿತ ರಥದ ಬಳಿ ಸಾರಿ

ಬಂದು ಒಂದು ಕೈಯಿಂದ ಗರುಡನನ್ನು ಇನ್ನೊಂದು ಕೈಯಿಂದ ವಿಷ್ಣುವಿನ ರಥವನ್ನು ಹಿಡಿದು ಗರಗರ ಗಿರಿಗಿರಿ ತಿರುಗಿಸಿ ಮುಗಿಲಿನಲ್ಲಿ ತೂರಿದ ಶ್ವೇತದ್ವೀಪದ ಕಡೆಗೆ. ಜಾಲಂಧರನು ಬೀಸಿ ಒಗೆದ ಗರುಡನು ಕ್ರೌಂಚದ್ವೀಪದಲ್ಲಿ ಹೋಗಿಬಿದ್ದ. ವಿಶ್ರಾಂತಿಗೆಂದು ಕೆಲಸಮಯ ಅಲ್ಲಿಯೇ ಇದ್ದ. ಜಾಲಂಧರನು ಇನ್ನೊಂದು ಕೈಯಿಂದ ಅತರಿಕ್ಷಕ್ಕೆ ತೂರಿದ ತೇರಿನಿಂದ ಪ್ರಚುಯ್ತನಾದ ಅಚ್ಯುತ ಮತ್ತೆ ರಣಭೂಮಿಗೆ ಬಂದು "ದುಷ್ಟದಾನವ ನಿಲ್ಲು" ಎಂದು ಗದರಿಸಿ ಅವನ ಎದುರು ಬಂದು ನಿಂತ ಮತ್ತೆ ಅವರಿಬ್ಬರ ನಡುವೆ ಯುದ್ಧ ಪ್ರಾರಂಭ. ಮತ್ತೆ ಬಾಣಗಳ ಜಡಿಮಳೆ. ಜಾಲಂದರನ ಘನಘೋರ ಗರ್ಜನೆ. ಅದನ್ನು ಕೇಳಿ ಕೆರಳಿದ ಕೇಶವ ಶಕ್ತ್ಯಾಯುಧವನ್ನು ಬೀಸಿದ. ಅದರ ಅಘಾತವನ್ನು ತಾಳದೇ ಜಾಲಂದರ ರಥದಲ್ಲಿಯೇ ಕುಸಿದುಬಿದ್ದ. ಆಗ ಸಾರಥಿಯು ರಣರಂಗದಿಂದ ರಥವನ್ನು ತಿರುಗಿಸಿ ಮನೆಗೆ ಅವನನ್ನು ಕರೆತಂದ. ಮನೆಯಲ್ಲಿ ಮೂರ್ಛೆ ತಿಳಿದು ಎದ್ದು ಆ ಸಾಗರಪುತ್ರ ತನ್ನನ್ನು ಯುದ್ಧಭೂಮಿಯಿಂದ ಮರಳಿ ತಂದುದಕ್ಕಾಗಿ ಸಾರಥಿಯನ್ನು ಹಳಿದು ಮತ್ತೆ ರಣರಂಗಕ್ಕೆ ಧಾವಿಸಿ ಬಂದು ಗೋವಿಂದನೊಡನೆ ಕಲಿತನದಿಂದ ಕಾದಿದ. ಜಗದೀಶ್ವರನಾದ ಶ್ರೀ ವಿಷ್ಣುವಿನ ಮುಂದೆ ಈ ಜಾಲಂಧರ ತೃಣಪ್ರಾಯ. ಆದರೂ ಲಕ್ಷ್ಮೀದೇವಿಯು ಮನೆಯಿಂದ ಬರುವಾಗ ಮಾಡಿಕೊಂಡ ಬಿನ್ನಹವನ್ನು ಮನ್ನಿಸಿ ಶ್ರೀಹರಿಯು ಆ ದೈತ್ಯನನ್ನು ಕೊಲ್ಲಲಿಲ್ಲ. ಹತನಾದಾನು ಎಂಬ ಶಂಕೆಯಿಂದ ಬಿರುಸಾಗಿ ಒಡೆಯಲಿಲ್ಲ. ಮೆತ್ತಗೆ ಹರಿಹಾಯ್ದು ಏರಿಬರುತ್ತಿದ್ದ. ಲೋಕವಿಡಂಬನಕ್ಕಾಗಿ ಆ ಪ್ರಪಂಚದ ಪ್ರಭು ಮಹಾವಿಷ್ಣು ಜಾಲಂಧರನ ಶರಜಾಲಗಳಿಂದ ಅಹತನಾಗಿ ನೆಲದ ಮೇಲೆ ಬಿದ್ದ ಧರಾಶಾಯಿಯಾದ ಆ ದಾಮೋದರನನ್ನು ಜಾಲಂಧರ ಎತ್ತಿಕೊಂಡು ತನ್ನ ರಥವನ್ನು ಏರಿದ.

ಆ ಕ್ಷಣದಲ್ಲಿ ಪತಿಯ ಇಚ್ಛೆಗೆ ಅನುಗುಣವಾಗಿ ಲೋಕವಿಡಂಬನೆಗೈಯುವ ಮಹಾಸತಿ ಲಕ್ಷ್ಮೀದೇವಿಯು ಕಣ್ಣೀರು ಕರೆಯುತ್ತ ಅಲ್ಲಿಗೆ ಬಂದಳು. ತನ್ನ ನೆಚ್ಚಿನ ನಲ್ಲ ನೆಲದ ಮೇಲೆ ಬಿದ್ದುದನ್ನು ಕಂಡು ಅವಳ ಸತಿ ಹೃದಯ ವ್ಯಾಕುಲಿತವಾಗಿತ್ತು. ತನ್ನ ಪತಿಯ ದೇಹವನ್ನು ಎತ್ತಿತಂದು ರಥದಲ್ಲಿ ಇಟ್ಟು ಮನೆಗೆ ಒಯ್ಯುತ್ತಿರುವ ಜಾಲಂಧರನನ್ನು ತಡೆದು ಹೇಳಿದಳು - "ಜಾಲಂಧರ, ನೀನು ನನ್ನ ಸಹೋದರ, ನನ್ನ ಪತಿಯಾದ ಶ್ರೀಹರಿಯನ್ನು ಗೆದ್ದು ರಥದಲ್ಲಿ ಕೊಂಡೊಯ್ಯುತ್ತಿರುವೆ. ನಿನ್ನ ಸಹೋದರಿಯಾದ ನನಗೆ ನೀನು ಪತಿಭಿಕ್ಷೆಯನ್ನು ನೀಡು. ಮಾಂಗಲ್ಯವನ್ನು ಉಳಿಸು.

ಇಂದಿರೆಯ ಈ ಮಾತನ್ನು ಕೇಳಿ ಜಾಲಂಧರನು ವಿಷ್ಣುವನ್ನು ಕೂಡಲೇ ಬಿಟ್ಟುಕೊಟ್ಟು ಮತ್ತು ಸಹೋದರಿಯಾದ ಕಮಲಾದೇವಿಯ ಚರಣಗಳಿಗೆ ಬಾಗಿ ವಂದಿಸಿದ. ಆಗ ಅಲ್ಲಿಗೆ ವಿಷ್ಣು ಎದ್ದು ಬಂದು ಪ್ರಸನ್ನ ಮುಖದಿಂದ ಜಾಲಂಧರನಿಗೆ ಹೇಳಿದ.

**ವಿಷ್ಣು:-** ಜಾಲಂಧರ, ಈ ನಿನ್ನ ವೀರವಿಕ್ರಮದಿಂದ ನಾನು ಪರಿತುಷ್ಟ. ನಿನಗೆ ಇಷ್ಟವಾದ ವರವನ್ನು ಕೇಳಿಕೋ ನೀನು ಬಯಸಿದ್ದನ್ನು ನೀಡುವೆ.

**ಜಾಲಂಧರ:-** ಕೇಶವ, ನಿನಗೆ ನನ್ನ ನಮಸ್ಕಾರ. ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ನೀನು ನನ್ನ ತಂದೆಯಾದ ಈ ಕ್ಷೀರಸಾಗರದ ಪ್ರದೇಶದಲ್ಲಿಯೇ ನನ್ನ ಹಿರಿಯ ಅಕ್ಕ ಲಕ್ಷ್ಮಿಯೊಂದಿಗೆ ನಿರಂತರ ವಾಸಮಾಡು.

ಜಾಲಂಧರನ ಬಿನ್ನಹಕ್ಕೆ ಮನ್ನಣೆ ಇತ್ತು ಆ ಮದೂಸೂದನು ತಥಾಸ್ತು ಎಂದು ಹೇಳಿದ. ಗರುಡನನ್ನು ನೆನೆದ ಅವನು ಬಂದಕೂಡಲೇ ಕಮಲೆಯೊಂದಿಗೆ ಆ ಹಕ್ಕಿಯ ಹೆಗಲಮೇಲೆ ಕುಳಿತುಕೊಂಡು ಹಾಲ್ಗಡಲಿನಲ್ಲಿ ಬಂದು ನೆಲೆಸಿದ. ಲಕ್ಷ್ಮೀದೇವಿಗೂ ಇದೇ ಬೇಕಾಗಿತ್ತು. ಅವಳ ಅಪೇಕ್ಷೆಯನ್ನು ಪೂರೈಸುವದಕ್ಕಾಗಿಯೇ ಜಾಲಂಧರನ ಬಿನ್ನಹವನ್ನು ನೆಪಮಾಡಿಕೊಂಡು ಮಾವನ ಮನೆಯಲ್ಲಿ ನಿರಂತರ ವಾಸ್ತವ್ಯಹೂಡಿದ ಆ ವಾಸುದೇವ ರೂಪಿಯಾದ ಮಹಾವಿಷ್ಣು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಜಾಲಂಧರನಿಂದ ಇಂದ್ರನ ಪರಾಜಯ ಎಂಬ ಎಂಟನೇಯ ಅಧ್ಯಾಯ ಮುಗಿದುದು*



## ಜಾಲಂಧರನ ಸುಖ ಸಾಮ್ರಾಜ್ಯ — ಅಧ್ಯಾಯ - ೯

**ಧರ್ಮರಾಜ:-** ನಾರದರೇ, ಯುದ್ಧದಲ್ಲಿ ದೇವತೆಗಳನ್ನು ಓಡಿಸಿ ವಿಷ್ಣುವನ್ನು ಮಾವನ ಮನೆಯಲ್ಲಿ ಕೂಡಿಸಿ ಜಾಲಂಧರನು ಏನು ಮಾಡಿದ?

**ನಾರದ:-** ಶುಂಭನೇ ಮೊದಲಾದ ತನ್ನ ಅನುಯಾಯಿ ವೀರರಿಗೆ ವಿಪುಲವಾದ ಐಶ್ವರ್ಯವನ್ನೂ ಅಧಿಕಾರವನ್ನು ನೀಡಿ ಸಂತೋಷಪಡಿಸಿ ಜಾಲಂಧರನು ಸ್ವರ್ಗಕ್ಕೆ ಪ್ರಯಾಣ ಮಾಡಿದ. ಆ ಸುರಲೋಕದಲ್ಲಿ ನಂದನವನದ ಮಂದಾರಾದಿ ಮರಗಳು ಭೂಲೋಕದಲ್ಲಿ ಅಶ್ವಮೇಧಾದಿ ಯಾಗಗಳನ್ನು ಮಾಡಿ ಪುಣ್ಯರಾಶಿಯನ್ನು ಸಂಪಾದಿಸಿ ಬಂದ ಮಾನವರಿಗೆ ಬಯಸಿದ ಭಾಗ್ಯ ಭೋಗ್ಯ ಬಂಗಾರ, ಭೋಗಾನುಭೋಗಗಳನ್ನೆಲ್ಲ ನೀಡುತ್ತಲಿದ್ದವು. ಕರ್ಮಭೂಮಿಯಾದ ಭರತಖಂಡದಲ್ಲಿ ಗೋದಾನ, ಭೂದಾನ, ಸುವರ್ಣದಾನ, ಗೃಹದಾನ, ಗಜದಾನ, ವಸ್ತ್ರದಾನ, ಕನ್ಯಾದಾನ ಮುಂತಾದ ಬಗೆಬಗೆಯ ದಾನ ಧರ್ಮ ಮಾಡಿದ ಪುಣ್ಯಪುರುಷರು ಆ ಸುರಲೋಕದಲ್ಲಿ ಬಂದು ನೆಲೆಸಿ ನಕ್ಕು ನಲಿಯುವದನ್ನು ಅವನು ನೋಡಿದ. ಚಳಿಗಾಲದಲ್ಲಿ ಬೆಚ್ಚಗಿನ ಬಟ್ಟೆ ಮನೆ, ಕಂಬಳಿ ದಾನ ಮಾಡಿದವರು, ಬೇಸಗೆ ಕಾಲದಲ್ಲಿ ಅರವಟ್ಟಿಗೆ ಇಟ್ಟು ನೀರು ಕೊಟ್ಟು ಮೊಸರನ್ನು ದಾನಮಾಡಿದವರು, ಹರಿಮಂದಿರ, ಹರಮಂದಿರಗಳಲ್ಲಿ ವಾದ್ಯಗಳನ್ನು ಬಾರಿಸುವವರು ದೇವರಿಗೆ ಡೋಲೋತ್ಸವ ಮಾಡಿಸಿದವರು ಮತ್ತು ಬೇರೆಬೇರೆ ವಿಶೇಷ ಧರ್ಮಾಕರ್ಮಾನುಷ್ಠಾನ ತಪೋನುಷ್ಠಾನ, ಯಜ್ಞಾನುಷ್ಠಾನ ಮಾಡಿದ ಹುತಾತ್ಮರೂ ಆ ಅಮರಾವತಿಗೆ ಬಂದು ರಂಭಾ, ಉರ್ವಶಿ, ಮೇನಕಾ, ತಿಲೋತ್ತಮಾ, ಘೃತಾಚಿ, ಪುಂಜಿಕಸ್ಥವಿ, ಮಂಜುಘೋಷ ಮಾಲಿನಿ, ಸುಕೇಶಿ, ಸುಮುಶಿ, ಸುಖದಾ, ತಿಲಪ್ರಭಾ, ಮುಂತಾದ ಅಪ್ಸರಾ ಲಲನೆಯರೊಂದಿಗೆ ಮಂದಾರಾದಿ ತರುವೃಂದಗಳ ಸಾಂದ್ರಛಾಯೆಯಲ್ಲಿ ಆನಂದದಿಂದ ಸ್ವಚ್ಛಂದ ವಿಹಾರ ಮಾಡುತ್ತಿರುವದನ್ನು ಜಾಲಂಧರನು ನೋಡಿದ. ಇಂಥ ಅಮರಾವತಿಯಲ್ಲಿ ಶುಂಭ ಎಂಬ ದೈತ್ಯನನ್ನು ಅಧಿಕಾರಿಯನ್ನಾಗಿ ನೇಮಿಸಿ ನಿಷುಂಭನನ್ನು ಯುವರಾಜನನ್ನಾಗಿ ಮಾಡಿ ಸ್ವಯಂ ಸಮ್ರಾಟ್ ಪಟ್ಟದಲ್ಲಿ ಅಭಿಷಿಕ್ತನಾಗಿ ಕೆಲವು ದಿನ ಅಲ್ಲಿ ಅಧಿಕಾರದಲ್ಲಿದ್ದು ಕೆಲವು ದಿನ

ಸ್ವರ್ಗಸುಖವನ್ನು ಅನುಭವಿಸಿ ಮತ್ತೆ ಮರಳಿ ಭೂಲೋಕಕ್ಕೆ ಬಂದ. ಇಲ್ಲಿ ಎರಡು ಅರ್ಬುದ ವರ್ಷಗಳ ವರೆಗೆ ಭೂಲೋಕದ ಸಾರ್ವಭೌಮ ಪೀಠದಲ್ಲಿ ಮಂಡಿಸಿ ಅಖಂಡ ಭೂಮಂಡಲವನ್ನು ಆಳಿದ. ತನಗೆ ಮನಸ್ಸು ಬಂದಾಗ ಸ್ವರ್ಗಲೋಕಕ್ಕೂ ಹೋಗಿ ಅಲ್ಲಿಯೂ ಸರಿಯಾದ ವ್ಯವಸ್ಥೆಯನ್ನು ಏರ್ಪಡಿಸಿ ಬರುತ್ತಿದ್ದ. ಚಿತ್ರಸೇನ ಮೊದಲಾದ ಗಂಧರ್ವರು ಸುರಸಾರ್ವಭೌಮ ಪದವಿಯಲ್ಲಿ ಪ್ರತಿಷ್ಠಿತನಾದ ಆ ಅಸುರೇಶ್ವನನ್ನು ಸೇವಿಸುತ್ತಿದ್ದರು. ಅವನು ಋಷಿಮುನಿಗಳು ನೀಡಿದ ಯಜ್ಞಭಾಗಗಳನ್ನು ಸ್ವೀಕರಿಸುವದಲ್ಲದೇ ದೇವದಾನವರು ಹಿಂದೆ ಸಮುದ್ರವನ್ನು ಕಡೆದು ಪಡೆದ ಎಲ್ಲ ರತ್ನಗಳನ್ನು ದೇವತೆಗಳಿಂದ ತಾನೇ ಕಸಿದುಕೊಂಡು ಭೋಗಿಸಿದ.

ಭೂಲೋಕ ಸ್ವರ್ಗಲೋಕಗಳಲ್ಲಿ ಜಾಲಂಧರನ ಶಾಸನ ನಡೆದಾಗ ಯಾರಿಗೂ ಸಾವು, ನೋವು ದುಃಖದಾರಿದ್ರ್ಯ, ದುರವಸ್ಥೆಗಳು ಒದಗುತ್ತಿದ್ದಿಲ್ಲ. ನರಕಕ್ಕಂತೂ ಯಾರೂ ಹೋಗುತ್ತಿದ್ದಿಲ್ಲ. ಪ್ರೇಮಕಲಹ ಹೊರತು ಅವನ ರಾಜ್ಯದಲ್ಲಿ ಕಲಹವೇ ಇರಲಿಲ್ಲ. ಭೋಗದಿಂದಾಗುವ ಕರ್ಮಕ್ಷಯದ ಹೊರತು ಬೇರೆ ಕ್ಷಯ ಇರಲಿಲ್ಲ. ಬಂಜೆ ಹೆಣ್ಣು ಇಲ್ಲ. ಬಡವ ಗಂಡು ಇಲ್ಲ. ಕುರೂಪಿ ಕನ್ಯೆಗಳು ಇಲ್ಲ. ದುಷ್ಟ ಮಕ್ಕಳು ಇಲ್ಲ. ವಿಧವೆಯರು, ನಿರ್ಧನರು ಜಿಪುಣರು, , ಭಿಕ್ಷೆ ಬೇಡುವವರು, ರೋಗಿಗಳು ಸ್ವಾರ್ಥಿಗಳು ವಂಚಕರು ಜಾಲಂಧರನ ರಾಜ್ಯದಲ್ಲಿ ಹುಡುಕಿದರೂ ಸಿಗುತ್ತಲಿರಲ್ಲ. ಮನೆಮನೆಗಳಲ್ಲಿ ತಾರುಣ್ಯ, ಲಾವಣ್ಯಗಳಿಂದ ನಳನಳಿಸುವ ನಳಿನಾಕ್ಷಿಯರು. ಮನೆಮನೆಗಳಲ್ಲಿ ಸಮೃದ್ಧವಾದ ಹಾಲು, ಮೊಸರು, ಬೆಣ್ಣೆ, ತುಪ್ಪ, ಧನ, ಧಾನ್ಯ, ಐಶ್ವರ್ಯ, ವೈಭವ, ಭೋಗ, ರಾಗ, ಉಪಭೋಗ, ಮಂಗಲ, ಸಂತಸ, ಸಂತಾನ, ಸೌಭಾಗ್ಯಗಳು ತುಂಬಿ ತುಳುಕುತ್ತಿದ್ದವು. ರಾಜ್ಯದ ತುಂಬ ಹಾಲು ಹೆಜ್ಜೇನುಗಳ ಹೊಳೆಗಳೇ ಹೊಮ್ಮಿ ಚಿಮ್ಮಿ ಹರಿಯುತ್ತಿದ್ದವು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಜಾಲಂಧರನ ಸುಖ ಸಾಮ್ರಾಜ್ಯ ಎಂಬ ಒಂಬತ್ತನೇಯ ಅಧ್ಯಾಯ ಮುಗಿದುದು*

—೦—

## ಜಾಲಂಧರನಿಂದ ಸೋತ ದೇವತೆಗಳು | ಅಧ್ಯಾಯ - ೧೦

**ಧರ್ಮರಾಜ :**-ದ್ವಿಜಶ್ರೇಷ್ಠನಾದ ನಾರದರೇ, ಜಾಲಂಧರನಿಂದ ಸೋತ ದೇವತೆಗಳು ರಾಜ್ಯಾಧಿಕಾರವನ್ನೆಲ್ಲ ಕಳೆದುಕೊಂಡು ಸ್ಥಾನ ಭ್ರಷ್ಟರಾದ ಬಳಿಕ ಏನು ಮಾಡಿದರು?

**ನಾರದ:**- ಸ್ವರ್ಗದಿಂದ ಚ್ಯುತರಾದ ಬಳಿಕ ಮೃತರಾದಂತೆಯೇ ಆದರು ಆ ಎಲ್ಲ ಸುರಸತ್ತಮರು. ಸ್ವರ್ಗವನ್ನು ತೊರದಂದಿನಿಂದ ಅವರಿಗೆ ಉಣ್ಣಲು ಯಜ್ಞಾನ್ನವಿಲ್ಲ ಕುಡಿಯಲು ಅಮೃತವಿಲ್ಲ. ಇರಲು ನೆಲೆ ಇಲ್ಲ. ಮನಸ್ಸಿನಲ್ಲಿ ಸಮಾಧಾನವಿಲ್ಲ. ಕೊನೆಗೆ ಅವರು ಉಪಾಯಗಾಣದೇ ಬ್ರಹ್ಮನ ಬಳಿಗೆ ಬಂದರು. ಸತ್ಯಲೋಕದಲ್ಲಿ ಬ್ರಹ್ಮದೇವ ತನ್ನ ಭವ್ಯ ಭವನದಲ್ಲಿ ದೇವತೆಗಳು ಬಂದಾಗ ಪ್ರಾಣಾಯಾಮ ಪರಾಯಣನಾಗಿ ಕುಳಿತುಕೊಂಡಿದ್ದ ಅವನ ಧ್ಯಾನಯೋಗ ಸಮಾಧಿ ಮುಗಿದ ಬಳಿಕ ಅವನನ್ನು ಭಕ್ತಿಯಿಂದ ವಂದಿಸಿ ತಮ್ಮ ದಾರುಣವಾದ ದುಃಖ ದುರವಸ್ಥೆಗಳನ್ನು ತಮ್ಮ ಮುಂದೆ ತೋಡಿಕೊಂಡರು. ಆಗ ಆ ಪಿತಾಮಹನು ಆ ಎಲ್ಲ ಕಶ್ಯಪಕುಮಾರರ ಕಡುಕಷ್ಟದ ವ್ಯಥೆ ಕಥೆಯನ್ನು ಕೇಳಿ ಮನಸ್ಸಿನಲ್ಲಿಯೇ

ಮರುಗಿದ. ಕರುಳಿನಲ್ಲಿಯೇ ಕರಗಿದ. ಅವರೆಲ್ಲರನ್ನೂ ಕರೆದುಕೊಂಡು ಕೈಲಾಸ ಪರ್ವತಕ್ಕೆ ಬಂದ. ಆಗ ಎಲ್ಲ ದೇವತೆಗಳೂ ತಮ್ಮ ಆಗಮನವನ್ನು ನಂದಿಯ ಮುಖಾಂತರ ಸೂಚಿಸಿದರು. ಅದನ್ನು ಕೇಳಿ ಮಹಾದೇವರು ಕೂಡಲೇ ಎಲ್ಲ ವಿಬುಧವರೇಣ್ಯರನ್ನೂ ಒಳಗೆ ಕರೆದುಕೊಂಡು ಬಾ ಎಂದು ನಂದಿಗೆ ಆದೇಶ ನೀಡಿದರು. ಆಗ ನಂದಿ ಆನಂದದಿಂದ ವೃಂದಾರಕರನ್ನು ಒಳಗೆ ಕರೆದುಕೊಂಡು ಹೋದ. ಎಲ್ಲ ದೇವತೆಗಳೂ ಮಹಾದೇವನಿಗೆ ಭಕ್ತಿಯಿಂದ ವಂದಿಸಿದರು. ಆಗ ಬ್ರಹ್ಮದೇವರು ಮುಂದೆ ಬಂದು ಇಂದ್ರಾದಿದೇವತೆಗಳ ದುರ್ದೆಶೆಯನ್ನು, ಜಾಲಂಧರನಿಂದ ಪರಾಭವವನ್ನು ತಿಳಿಸಿ ದೇವತೆಗಳ ಮೇಲೆ ಕೃಪೆಮಾಡು ಎಂದು ಹೇಳಿದರು. ಆಗ ಪಾರ್ವತೀದೇವಿಯು ಇಂದ್ರಾದಿ ದೇವತಾಕಾರ್ಯವನ್ನು ಸಾಧಿಸಲಿಕ್ಕಾಗಿ ಜಾಲಂಧರನನ್ನು ವಧಿಸಬೇಕು ಎಂದು ಕೇಳಿಕೊಂಡಳು.

**ಮಹಾದೇವ:-** 'ಪಿತಾಮಹ, ಮೊದಲು ನಿರ್ಮಿಸಿದ ವಜ್ರವೇ ಮೊದಲಾದ ಘೋರ ಆಯುಧಗಳಿಂದ ಹಾಗೂ ಸಾಕ್ಷಾತ್ ವಿಷ್ಣುವಿನಿಂದ ವಧಿಸಲಾಗದ ಜಾಲಂಧರನನ್ನು ನಾನು ಹೇಗೆ ಕೊಲ್ಲಬಲ್ಲೆ? ಆದ್ದರಿಂದ ದೇವತೆಗಳೇ ವಿಚಾರ ಮಾಡಿ ಒಂದು ಹೊಸ ಅಸ್ತ್ರವನ್ನು ಆ ಜಾಲಂಧರನನ್ನು ಸಂಹರಿಸಲು ನಿರ್ಮಿಸಲಿ.

**ಬ್ರಹ್ಮ:-** ಮಹಾದೇವ, ನಿನ್ನ ಬಲವನ್ನು ನೀನೆ ತಿಳಿದಿರುವೆ. ಆದ್ದರಿಂದ ನೀನೇ ಒಂದು ಮಹಾ ಶಸ್ತ್ರವನ್ನು ನಿರ್ಮಿಸು.

**ರುದ್ರ:-** ಬ್ರಹ್ಮನ್, ನೀನು ನಿನ್ನ ಕ್ರೋಧದಿಂದ ಕೂಡಿಸಿ ಒಂದು ತೇಜಸ್ಸನ್ನು ಹೊರಬಿಡು.

ಮಹಾದೇವನ ಸೂಚನೆಯಂತೆ ಬ್ರಹ್ಮನು ಬ್ರಹ್ಮಾಸ್ತ್ರ ಸೂಚಕದ ಒಂದು ತೇಜಸ್ಸನ್ನು ಹೊರಹೊಮ್ಮಿಸಿದ. ಮಹಾದೇವನು ತನ್ನ ಮೂರನೆಯ ಕಣ್ಣಿನಿಂದ ಒಂದು ತೇಜೋರಾಶಿಯನ್ನು ವಿಸರ್ಜಿಸಿದ. ಹೀಗೆ ಎಲ್ಲ ದೇವತೆಗಳು ತಮ್ಮ ತಮ್ಮ ಕ್ರೋಧಗಳೊಂದಿಗೆ ತೇಜೋರಾಶಿಗಳನ್ನು ಹೊರಹೊಮ್ಮಿಸಿದರು.

ಇದೇ ವೇಳೆಯಲ್ಲಿ ಮಹಾದೇವರು ಮಧುಸೂದನನ್ನು ನೆನೆದರು. ನೆನೆದ ಮಾತ್ರಕ್ಕೆ ನಾರಾಯಣ ಪ್ರತ್ಯಕ್ಷ. ಮತ್ತು ಶಂಕರನನ್ನು ಕೇಳಿದ.

**ನಾರಾಯಣ:-** ಶಂಕರ, ನನ್ನನ್ನು ನೆನೆದದ್ದು ಏಕೆ? ನಾನು ಏನು ಮಾಡಬೇಕು.

**ಶಿವ:-** ಕೇಶವ, ನೀನು ಸಂಗ್ರಾಮದಲ್ಲಿ ಜಾಲಂಧರನನ್ನು ಏಕೆ ಕೊಲ್ಲಲಿಲ್ಲ? ಸಮರ ಭೂಮಿಯಲ್ಲಿ ಸೋಲು, ಸಾವು ನೋವುಗಳನ್ನು ಅನುಭವಿಸುವ ಸುರರ ಸಮೂಹವನ್ನೆಲ್ಲ ಬಿಟ್ಟು ನೀನು ಮಾವನ ಮನೆಗೆ ಹೋಗಿ ಏಕೆ ನಿಶ್ಚಿಂತೆಯಿಂದ ಮಲಗಿಕೊಂಡೆ?

**ವಿಷ್ಣು:-** ಮಹಾದೇವ, ಆ ಜಾಲಂಧರ ನನ್ನ ಮಡದಿಯಾದ ಕಮಲೆಯ ಸೋದರ. ನಾನು ಅವನನ್ನು ಕೊಂದರೆ ನನ್ನ ಕಾಂತೆಗೆ ಕೋಪ ಬರಲಿಕ್ಕಿಲ್ಲವೇ? ಅದ್ದರಿಂದ ನಾನು ಆ ಜಾಲಂಧರನನ್ನು ಲೀಲಾಜಾಲವಾಗಿ ಸಂಹರಿಸಬಲ್ಲೆನಾದರೂ ಸಂಹರಿಸಿಲ್ಲ. ನೀನು ಅವನನ್ನು ಸಮರದಲ್ಲಿ ಸೋಲಿಸು.

ಆಗ ಮಹಾದೇವರು - ''ಎಲ್ಲ ದೇವತೆಗಳಂತೆ ನೀನೂ ನಿನ್ನ ಕೋಪದೊಂದಿಗೆ ತೇಜಸ್ಸನ್ನು ವಿಸರ್ಜಿಸು'' ಎಂದು ಬಿನ್ನವಿಸಿದ.

ಪರಮೇಶ್ವರನ ಸಲಹೆಯಂತೆ ಶ್ರೀಹರಿಯು ತನ್ನ ದಿವ್ಯವಾದ ತೇಜಸ್ಸನ್ನು ಹೊರಹೊಮ್ಮಿಸಿದ. ಅದು ಕೂಡಲೇ ತನ್ನ ತೇಜೋದೀಪ್ತಿಯಿಂದ ದೇದೀಪ್ಯಮಾನವಾಗಿ ಬೆಳಗತೊಡಗಿತು. ಅದನ್ನು ನೋಡಿ ಮಹಾದೇವರು ಸಂಭ್ರಮದಿಂದ ಹೇಳಿದರು. ಈ ವಿಷ್ಣುವಿನ ಪ್ರಖರವಾದ ತೇಜಸ್ಸಿನಿಂದಲೇ ಕೂಡಲೇ ನನಗೆ ಒಂದು ಮಹಾ ಅಸ್ತ್ರವನ್ನು ಮಾಡಿಕೊಡಿರಿ.

ಮಹಾದೇವರ ಈ ಮಾತನ್ನು ಕೇಳಿ ಅಲ್ಲಿಯೇ ನಿಂತ ವಿಶ್ವಕರ್ಮ ಮೊದಲಾದವರು ಒಬ್ಬರಿಗೊಬ್ಬರು ಮುಖ ನೋಡತೊಡಗಿದರು. ಏನು ಮಾಡಬೇಕು? ಹೇಗೆ ಮಾಡಬೇಕು ? ಎಂಬ ವಿಚಾರ ಅವರ ತಲೆಯಲ್ಲಿ ಚಕ್ರವಾಗಿ ತಿರುಗತೊಡಗಿತು. ವಿಷ್ಣುವಿನ ಅತ್ಯದ್ಭುತವಾದ ಆ ತೇಜಸ್ಸಿನ ಬೆಟ್ಟವನ್ನು ದೇವತೆಗಳಿಗೆ ನೋಡಲಿಕ್ಕೆ ಕೂಡ ಆಗಲಿಲ್ಲ. ಅದನ್ನು ಹಿಡಿದು ಅಸ್ತ್ರವನ್ನು ಮಾಡುವ ಹವಣಿಕೆಯಂತೂ ದೂರವೇ ಉಳಿಯಿತು. ಆಗ ಮಹಾದೇವನು ಅಟ್ಟಹಾಸ ಮಾಡಿ ಆ ತೇಜಸ್ಸಿನ ಮೇಲೆ ಹಾರಿ ನಿಂತು ಕುಣಿಯತೊಡಗಿದ. ಆ ತೇಜೋರಾಶಿಯ ಮೇಲೆ ನಿಶ್ಶಂಕವಾಗಿ ನರ್ತನ ಮಾಡುವ ಶಂಕರನನ್ನು ನೋಡಿ ಎಲ್ಲ ದೇವತೆಗಳೂ, ಅದಕ್ಕೆ ಅನುಗುಣವಾಗಿ ತಾಳ, ತಂಬೂರಿ, ತಬಲ, ಕೊಳಲು ಮುಂತಾದ ವಾದ್ಯಗಳನ್ನು ನುಡಿಸತೊಡಗಿದರು. ಅಂದಿನಿಂದ ನೃತ್ಯಗಳಲ್ಲಿ ಮಹಾದೇವರ ಅಂದಿನ ಆ ತಾಂಡವದ ವಿಶಿಷ್ಠ ಪ್ರಕಾರವನ್ನು ಅನುಸರಿಸಿ ಭ್ರಾಮರೀಚಯ ಎಂಬ ನರ್ತನವು ಮಾಡಲ್ಪಡುತ್ತದೆ. ಮಹಾದೇವನ ಕುಣಿತದ ರಭಸದಿಂದ ಆ ತೇಜೋಮೊತ್ತದ ರಾಶಿಯಿಂದ ಒಂದು ಅತ್ಯದ್ಭುತವಾದ ಚಕ್ರವು ಉತ್ಪನ್ನವಾಯಿತು. ಮಹಾದೇವರ ಅಡಿದಾವರೆಯ ತೊಕುಳಿದಾಟದಿಂದ ಸುತ್ತಲೂ ಸಿಡಿದು ಹೋದ ಕಣಗಳಿಂದ ವಿಶ್ವಕರ್ಮನು ಅಸ್ತ್ರವನ್ನು, ವಿಮಾನಗಳನ್ನು ನಿರ್ಮಿಸಿದ. ಆ ಚಕ್ರಕ್ಕೆ ಸುದರ್ಶನ ಎಂದು ಹೆಸರನ್ನು ಇಡಲಾಯಿತು. ಅದನ್ನು ನೋಡಿ ಭಯಭ್ರಾಂತರಾದ ದೇವತೆಗಳು ತ್ರಾಹಿ, ತ್ರಾಹಿ ಎಂದು ಭಗವಂತನಿಗೆ ಮೊರೆ ಇಟ್ಟರು. ನೆಲದ ಹಾಗೂ ಕಬ್ಬಿಣಗಳ ಮತ್ತು ಕಲ್ಲುಗಳ ಕಾಠಿಣ್ಯವನ್ನೆಲ್ಲ ತೆಗೆದು ವಿಶ್ವಕರ್ಮನು ರಚಿಸಿದ ಕೋಶವೆಲ್ಲವೂ ಆ ಸುದರ್ಶನ ಚಕ್ರದಿಂದ ಕ್ಷಣಾರ್ಧದಲ್ಲಿ ಉರಿದು ಬೂದಿಯಾಯಿತು. ಮತ್ತು ಆ ಚಕ್ರದಿಂದ ಕಾಲವು ಕೂಡ ನಿರ್ದಗ್ಧವಾಗಿ ಕೆಳಗೆ ಬಿದ್ದಿತು. ಅನಂತರ ಮಹಾದೇವನು ಆ ಸುದರ್ಶನ ಚಕ್ರವನ್ನು ಬ್ರಹ್ಮದೇವರ ಕೈಯಲ್ಲಿ ಕೊಟ್ಟ. ಆಗ ಬ್ರಹ್ಮದೇವರ ಕೈಯಲ್ಲಿ ಇರುವ ಆ ಸುದರ್ಶನ ಚಕ್ರದ ಪ್ರಖರವಾದ ಜ್ವಾಲೆಗಳ ಮಾಲೆಗಳಿಂದ ಬ್ರಹ್ಮದೇವರ ಗಡ್ಡದ ಕೂದಲುಗಳೆಲ್ಲ ಸುಟ್ಟುಹೋದವು. ಆಗ ಶಿವನು ಅವಸರದಿಂದ ಅದನ್ನು ಬ್ರಹ್ಮನ ಹಸ್ತದಿಂದ ಎತ್ತಿಕೊಂಡು ತನ್ನ ಬಗಲಲ್ಲಿ ಎತ್ತಿ ಇಟ್ಟುಕೊಂಡನು. ಅದರಿಂದ ಮೂರ್ಖನಿಗೆ ಕೊಟ್ಟ ದಾನದ ಫಲವು ಕಾಣದಿರುವಂತೆ ಶಿವನ ಬಗಲಿನ ಬದಿ ಬದುವಿನಲ್ಲಿ ಬಚ್ಚಿಟ್ಟ ಆ ಚಕ್ರವು ಯಾರ ಕಣ್ಣಿಗೂ ಕಾಣದಂತಾಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಜಾಲಂಧರನಿಂದ ಸೋತ ದೇವತೆಗಳು ಎಂಬ ಹತ್ತನೇಯ ಅಧ್ಯಾಯ ಮುಗಿದುದು*

—o—

## ಜಾಲಂಧರನ ಮುಂದೆ ನಾರದರಿಂದ ಪಾರ್ವತಿಯ ಸೌಂದರ್ಯ ವರ್ಣನೆ

ಅಧ್ಯಾಯ - ೧೧

**ನಾರದ:-** ಇದರ ಮಧ್ಯಂತರ ಕಾಲದಲ್ಲಿ ನಾನು ಜಾಲಂಧರನ ಕಡೆಗೆ ಹೋಗಿದ್ದೆ. ಅವನನ್ನು ರಹಸ್ಯವಾಗಿ ಕರೆದು ಒಂದು ಗುಟ್ಟುಮಾತು ಹೇಳಿದೆ - ''ಜಾಲಂಧರ, ನೀನೇನೋ ವೀರರಲ್ಲಿ ವೀರ, ಶೂರರಲ್ಲಿ ಶೂರ. ಆದರೆ ರುದ್ರದೇವರು ನಿನ್ನನ್ನು ಕೊಂದು ಹಾಕಲು ಪ್ರತಿಜ್ಞೆಗೈದಿದ್ದಾನೆ'' ಎಂದು ತಿಳಿಸಿದೆ. ಈ ನನ್ನ ಮಾತನ್ನು ಕೇಳಿ ಜಾಲಂಧರನು ನನಗೇ ಪ್ರಶ್ನೆ ಮಾಡಿದ.

**ಜಾಲಂಧರ:-** ನಾರದನೇ, ಮಹಾದೇವನ ಮನೆಯಲ್ಲಿ ಇರುವ ರತ್ನಗಳು ಎಷ್ಟು? ಅವನ ಐಶ್ವರ್ಯ ಏನು? ಎಂಥದು? ಇವುಗಳನ್ನು ನನಗೆ ತಿಳಿಸಿರಿ. ನಾನು ಬರಿಯ ಬಾಯಿಮಾತಿನಿಂದ ಶಿವನ ಮೇಲೆ ಸಮರವನ್ನು ಸಾರುವದಿಲ್ಲ. ಅದರಿಂದ ಏನಾದರೂ ನನಗೆ ಮುತ್ತು ರತ್ನ ಮುಂತಾದ ಐಶ್ವರ್ಯಗಳ ಲಾಭ ಗಿಟ್ಟುವಂತಿದ್ದರೆ ಮಾತ್ರ ನಾನು ಆ ಶಿವನನ್ನು ಎದುರಿಸಿ ಯುದ್ಧವನ್ನು ಹೂಡುತ್ತೇನೆ.

ಜಾಲಂಧರನ ಯುದ್ಧೋದ್ಯಮದ ಉದ್ದೇಶ ತಿಳಿದು ನಾನು ನಕ್ಕು ನುಡಿದೆ.

**ನಾರದ - ಜಾಲಂಧರ ಆ ಶಂಕರನ ವೈಭವ ಅನ್ಯಾದೃಶ.**

**ಭೂತಿರ್ಗಾತ್ರೇ ಋಷೋಜೀರ್ಣಃ ಫಣಿನೋಂಗೇ ಗಂಗದೇವಿಷಂ ।**
**ಭಿಕ್ಷಾಪಾತ್ರಂ ಕರೆ ಪುತ್ರೌ ಗಜಾನನ ಷಡಾನನೌ ॥**

ಮೈತುಂಬ ಬೂದಿ, ಒಂದು ಮುದಿ ಎತ್ತು, ಅಂಗಾಂಗಗಳಲ್ಲಿ ಹರಿದಾಡುವ ಹಾವುಗಳು, ಕೊರಳಲ್ಲಿ ವಿಷ, ಇಬ್ಬರು ಮಕ್ಕಳು, ಒಬ್ಬನು ಆನೆಯ ಮೋರೆಯವ, ಇನ್ನೊಬ್ಬ ಆರು ಮುಖದವ, ಕೈಯಲ್ಲಿ ಭಿಕ್ಷಾಪಾತ್ರೆ ಇದೇ ಆ ಭವನ ವೈಭವ. ಇದರ ಮೇಲಿಂದ ಅವನೊಬ್ಬ ದಟ್ಟದರಿದ್ರ ಎಂದು ಯಾರಿಗಾದರೂ ಮನದಟ್ಟಾಗಲು ಸಾಕು ಆದರೆ ದೈತ್ಯರಾಜ, ಆ ಮಹಾದೇವನ ಬಳಿಯಲ್ಲಿ ಒಂದು ಅಪೂರ್ವನಿಧಿ ಇದೆ. ಅದೆಂದರೆ ಹಿಮಾಲಯನಂದಿನಿಯಾದ ಪಾರ್ವತಿ. ಅವಳೊಂದು ಸೌಂದರ್ಯದ ನಿಧಿ. ಚೆಲುವಿಕೆಯ ಪುತ್ಥಳಿ. ರೂಪದ ಖಣಿ, ಶಿವ ಕಾಮನನ್ನು ಸುಟ್ಟು ಹಾಕಿದರೂ ಅವಳ ರೂಪವನ್ನು ನೋಡಿದಾಗ ಕಾಮಾಂಧನಾದ. ಅವಳ ಮನಸ್ಸನ್ನು ಮೆಚ್ಚಸಲಿಕ್ಕಾಗಿ ಆ ಶಂಭು ಪ್ರತಿನಿತ್ಯವೂ ಹಾಡಿಪಾಡುವ. ಕುಣಿದು ಕುಪ್ಪಳಿಸುವ. ಹೀಗೆ ಮಾಡುವಾಗ ಜನರು ನಕ್ಕಾರು ಎಂಬ ಪರಿವೆಯೇ ಅವನಿಗಿರುವದಿಲ್ಲ. ಅವಳನ್ನು ನಕ್ಕು, ನಗಿಸಿ, ಒಲಿಸಿ ಓಲೈಸುವುದೊಂದೇ ಅವನ ಹೆಗ್ಗುರಿ. ಅದಕ್ಕಾಗಿ ಈ ಲೋಕದಲ್ಲಿ ಅವನೊಬ್ಬ ವಿದೋಷಕನಂತಾಗಿದ್ದಾನೆ. ಆ ಸೌಂದರ್ಯದ ಅಧಿದೇವತೆಗೆ ಪಾರ್ವತಿ ಎಂದು ಹೆಸರು. ಸ್ವರ್ಗಲೋಕದ ಅಪ್ಸರೆಯರು ನಿನ್ನ ಸುಂದರಿಯಾದ ಮಡದಿ ವೃಂದೆಯು ಆ ಗಿರಿರಾಜ ನಂದಿನಿಯು ಸೌಂದರ್ಯದ ಹದಿನಾರರ ಒಂದು ಅಂಶವನ್ನೂ ಹೋಲಲಾರರು.

ಹೀಗೆ ಜಾಲಂಧರನ ಎದುರು ಆ ಜಗದಂಬೆಯ ಜಗನ್ಮೋಹಕವಾದ ಮೋಹಕ ಸೌಂದರ್ಯದ ಬಣ್ಣನೆಯನ್ನು ಮಾಡಿ ಅಲ್ಲಿಂದ ಅಂತರ್ಧಾನವನ್ನು ಹೊಂದಿದೆ.

ನಾರದರ ಕಾರ್ಯ ಯಶಸ್ವಿಯಾಗಿತ್ತು. ಅವರ ರಸಾಳವಾಣಿಯಲ್ಲಿ ಆ ರುದ್ರ ರಮಣೀಯ ರೂಪದ ಬಣ್ಣನೆಯನ್ನು ಕೇಳಿದ ಆ ದೈತ್ಯನ ಮನಸ್ಸು ಕಾಣದ ಕಾಮಿನಿಗಾಗಿ ಕಾಮಾತುರವಾಗಿ ಕುಣಿಯತೊಡಗಿತು. ಆಗ ಅವನು ಸಿಂಹಿಕೆಯ ಮಗನಾದ ರಾಹುವನ್ನು ಕರೆದು ಶಂಕರನ ಬಳಿಗೆ ಕಳಿಸಿದ. ಇಷ್ಟರೊಳಗಾಗಿಯೇ ವಿಷ್ಣುವು ಶಂಕರನಿಂದ ಬೀಳ್ಕೊಟ್ಟವನಾಗಿ ತನ್ನ ಹಾಲ್ಗಡಲಿನ ನಿವಾಸಕ್ಕೆ ತೆರಳಿದ. ರಾಹು ಜಾಲಂಧರನ ಸಂದೇಶವನ್ನು ಹೊತ್ತು ಶಿವನ ದೇಶಕ್ಕೆ ಬಂದ. ಶಂಕರನ ಸ್ಥಾನವನ್ನು ತಲುಪಿದ. ಒಮ್ಮೆಲೇ ಒಳಗೆ ಪ್ರವೇಶಿಸಬೇಕೆಂದು ನುಗ್ಗಿದಾಗ ದ್ವಾರಪಾಲಕರು ಅವನನ್ನು ತಡೆದರು. ತಡೆದರೂ ಕೇಳದೇ ಹಾಗೆಯೇ ಬಲಾತ್ಕಾರದಿಂದ ಒಳಗೆ ತೂರಿಕೊಳ್ಳಲು ಯತ್ನಿಸಿದಾಗ ಆ ಬಾಗಿಲು ಕಾಯುವ ಗಣಾಧೀಶರು ಆ ರಾಹುವನ್ನು ಹೊಡೆದು ಹೊರಗಟ್ಟಲು ತಮ್ಮ ಆಯುಧವನ್ನು ಹಿರಿದರು. ಆಗ ನಂದಿ ಬಂದು ಗಣಾಧೀಶರನ್ನು ತಡೆದ. ರಾಹುವನ್ನು ಕುರಿತು ಕೇಳಿದ.

**ನಂದಿ:-** ಎಲೈ ಅನಾಗರೀಕನೇ, ನೀನು ಯಾರು? ಎಲ್ಲಿಂದ ಬಂದೆ? ಏತಕ್ಕೆ ಬಂದೆ ? ಏನು ಕೆಲಸ? ಬೇಗನೇ ಹೇಳು. ತಡಮಾಡಿದರೆ ಈ ಗಣಗಳು ನಿನ್ನನ್ನು ಮುಗಿಸಿಬಿಡುವವು.

**ರಾಹು:-** ನಾನು ಜಾಲಂಧರನ ದೂತ, ನನ್ನನ್ನು ನೀನು ನೇರವಾಗಿ ಶಿವನ ಬಳಿಗೆ ಕರೆದುಕೊಂಡು ಹೋಗು. ನಾನು ಒಂದು ಗುಪ್ತ ಸಂದೇಶವನ್ನು ಜಾಲಂಧರನಿಂದ ತಂದಿದ್ದೇನೆ ಚಂದ್ರಶೇಖರನಿಗೆ. ಅದನ್ನು ಯಾರಿಗೂ ಹೇಳುವಂತಿಲ್ಲ.

ಆ ದೂತನ ನುಡಿಯನ್ನು ಕೇಳಿ ನಂದಿಯು ಒಳಗೆ ಹೋದ. ದಂಡಪ್ರಣಾಮ ಮಾಡಿದ. ಶಂಕರನಿಗೆ ನಿವೇದಿಸಿದ.

**ನಂದಿ:-** ಪ್ರಭು, ಬಾಗಿಲ ಬಳಿಯಲ್ಲಿ ಸಿಂಹಿಕೆಯ ಮಗ ರಾಹು ನಿಂತಿದ್ದಾನೆ. ತಮ್ಮ ಬಳಿಯಲ್ಲಿ ಏನೋ ಗುಟ್ಟಾದ ಕಾರ್ಯವಂತೆ. ಅವನು ಒಳಗೆ ಬರಬೇಕೋ ಅಥವಾ ಮರಳಿ ಹೋಗಬೇಕೋ? ತಮ್ಮ ಅಪ್ಪಣೆ ಆಗಬೇಕು.

ಆಗ ಶಂಕರನಿಗೆ ಗಡಿಬಿಡಿ ಹುಟ್ಟಿತು. ಅವನ ಅಂತಃಪುರದಲ್ಲಿ ಪಾರ್ವತೀ ದೇವಿಯು ಮಲಗಿ ವಿಶ್ರಮಿಸುತ್ತಿದ್ದಳು. ಶಿವನು ಅವಸರದಿಂದ ಬಂದು ಪಾರ್ವತಿಯನ್ನು ಎಬ್ಬಿಸಿ ಸಖಿಯರೊಂದಿಗೆ ಅವಳನ್ನು ಒಳಗೆ ಕಳಿಸಿದ. ಅನಂತರ ಬಾಗಿಲಲ್ಲಿ ನಿಂತ ನಂದಿಗೆ ಜಾಲಂಧರನ ದೂತನನ್ನು ಒಳಗೆ ಬಿಡು ಎಂದು ಅಪ್ಪಣೆ ನೀಡಿದ. ಆಗ ನಂದಿಯು ರಾಹುವಿನ ಕೈ ಹಿಡಿದು ಅವನನ್ನು ಒಳಗೆ ಕರೆತಂದ ದೇವತೆಗಳ ಮಧ್ಯದಲ್ಲಿ ಕುಳಿತ ಮಹಾದೇವನನ್ನು ಬೆರಳು ಮಾಡಿ ತೋರಿಸಿದ ಇವನೇ ಶಂಕರ ಎಂದು. ರಾಹು ತನ್ನ ಕಣ್ಣು ಎತ್ತಿ ದೃಷ್ಟಿಯನ್ನು ಆಗಲಿಸಿ ಪರಮೇಶ್ವರನನ್ನು ನಿರುಕಿಸಿದ. ಐದು ಮುಖಗಳು, ಹತ್ತು ತೋಳು, ಹಾವಿನ ಜನಿವಾರ, ತಲೆಯ ಮೇಲೆ ಚಂದ್ರಕೋರೆ, ಮೈ ತುಂಬ ಹರಿದಾಡುವ ಹಾವು, ಸುತ್ತಲೂ ಕೋಟಿ ಕೋಟಿ ಗಣಗಳು, ಸೇವೆಗೆ ಸನ್ನದ್ಧರಾಗಿ ನಿಂತ ದೇವಗಣ.

ಇಂಥ ತೇಜೋಮೂರ್ತಿಯಾದ ಪರಶಿವನನ್ನು ನೋಡುತ್ತ ನಿಬ್ಬೆರಗಾಗಿ ನಿಂತ ಆ ರಾಹುವನ್ನು ಕುರಿತು ಆ ನೀಲಕಂಠ ನಸುನಗುತ್ತ ನುಡಿದ - ''ಬಂದ ಕಾರಣ ಏನು? ಹೇಳು'' ಎಂದು.

**ರಾಹು:-** ದೇವ, ಜಾಲಂಧರನು ನನ್ನನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ಅವನ ಮಾತನ್ನು ನೀನು ಕೇಳಿ ಅವನ ಅಪ್ಪಣೆಯನ್ನು ತಡಮಾಡದೇ ಪಾಲಿಸು. ಗಿರೀಶ, ನೀನು, ಯಾವಾಗಲೂ ತಪಸ್ಸಿನಲ್ಲಿಯೇ ನಿರತ. ನಿನಗೆ ತಾಯಿ ಇಲ್ಲ ತಂದೆ ಇಲ್ಲ. ಹಣ ಇಲ್ಲ ಗುಣ

ಇಲ್ಲ. ಗೋತ್ರ ಇಲ್ಲ ಕ್ಷೇತ್ರ ಇಲ್ಲ. ಆದರೆ ಜಾಲಂಧರನು ಮಾತ್ರ ತನ್ನ ಬಾಹುಬಲದಿಂದ ಮೂರು ಲೋಕಗಳನ್ನು ಆಕ್ರಮಿಸಿ ಭೋಗಿಸುತ್ತಿದ್ದಾನೆ. ನೀನು ಕೂಡ ಅವನ ಅಧೀನನೇ. ಅದರಿಂದ ಅವನು ಹೇಳಿದ್ದನ್ನು ಮಾಡು. ನೀನು ಪುರಾಣಪುರುಷ. ಸಾಕಷ್ಟು ಮುದುಕನಾಗಿರುವೆ. ನಡೆಯಲು ಆಗದೇ ಈ ಮುದಿ ಎತ್ತನ್ನು ಹತ್ತಿ ಓಡಾಡುತ್ತಲಿರುವೆ. ಇಷ್ಟು ವಯಸ್ಸಾದರೂ ನಿನಗೆ ಕಾಮ ಕಡಿಮೆ ಆಗಿಲ್ಲ. ಆದರೆ ಇಂಥ ಮುಪ್ಪಿನ ಮುದುಕನಾದ ನೀನು ಹೇಗೆ? .................................

ಹೀಗೆ ರಾಹುವು ಏನನ್ನೋ ಹೇಳಬೇಕೆಂದು ತೊದಲುತ್ತ ಇರುವಾಗಲೇ ಶಿವನ ಮಕ್ಕಳಾದ ಸ್ಕಂದ ಹಾಗೂ ಗಣಪತಿ ಇಬ್ಬರೂ ಅಲ್ಲಿಗೆ ಬಂದರು. ಆಗ ಮಹಾದೇವನು ಮಾತನಾಡದೇ ಕೈ ಸನ್ನೆಯಿಂದಲೇ ಅವರಿಬ್ಬರಿಗೆ ಸುಮ್ಮನಿರಲು ಸೂಚಿಸಿದ. ಕೈ ಮಾಡಿ ಅವರನ್ನು ಸುಮ್ಮನಿರಿಸಲು ತನ್ನ ಮೈಯನ್ನು ಒದರಿಕೊಂಡ. ಅದರಿಂದ ಮೈ ಕೈ ಮೇಲೆ ಹರಿದಾಡುವ ವಾಸುಕಿ ಸರ್ಪವು ಪಟ್ಟೆಂದು ನೆಲಕ್ಕೆ ಬಿದ್ದಿತು. ಗಣಪತಿಯ ವಾಹನವಾದ ಇಲಿಯ ಬಾಲದ ಬದಿಗೇ ವಾಸುಕಿ ಬಿದ್ದದ್ದರಿಂದ ಇಲಿ ಆ ಹಾವಿನ ಕಣ್ಣಿಗೆ ಬಿದ್ದಿತು. ಕೂಡಲೇ ಆ ವಾಸುಕಿಯು ಇಲಿಯನ್ನು ನುಂಗತೊಡಗಿತು. ಆಗ ಗಣಪತಿಯು ಧಾವಿಸಿಬಂದು ''ಬಿಡು, ಬಿಡು, ಇದು ನನ್ನ ವಾಹನವಾದ ಮೂಷಕ. ಇದನ್ನು ತಿನ್ನಬೇಡ'' ಎಂದು ಕೂಗಿಕೊಂಡ. ಅಷ್ಟರಲ್ಲಿ ಸ್ಕಂದನ ವಾಹನವಾದ ನವಿಲು ಪ್ರಕ್ಷೋಭಗೊಂಡು ಕೇಕೆ ಹಾಕಿತು. ಆ ನವಿಲ ದನಿಯನ್ನು ಕೇಳಿದ ಕೂಡಲೇ ವಾಸುಕಿಯು ಹೆದರಿ ತಾನು ನುಂಗತೊಡಗಿದ ಇಲಿಯನ್ನು ಉಗುಳಿ ಬಿಟ್ಟಿತು. ಅನಂತರ ಆ ವಾಸುಕಿ ಸರ್ಪವು ಮಹಾದೇವರ ಮೈ ಮೇಲೆ ಏರಿ ಕೊರಳನ್ನು ಸುತ್ತಿ ಹೆಡೆಯೆತ್ತಿ ಹೆಗಲ ಮೇಲೆ ಕುಳಿತುಕೊಂಡಿತು. ಅದರ ನಿಟ್ಟುಸಿರಿನಿಂದ ಅಗ್ನಿ ಹುಟ್ಟಿಕೊಂಡಿತು. ಅದರ ಝಳದಿಂದ ಶಿವನ ಜಟಾಜೂಟದಲ್ಲಿರುವ ಚಂದ್ರಬಿಂಬವು ಕರಗಿ ಅಮೃತದ ಧಾರೆಯನ್ನು ಸುರಿಸತೊಡಗಿತು. ಆ ಅಮೃತ ಧಾರೆಗಳಿಂದ ಮಹಾದೇವರ ಕೊರಳಲ್ಲಿ ಹಾಕಿಕೊಂಡ ರುಂಡಮಾಲೆಗಳೆಲ್ಲವೂ ಸಿಂಚಿತಾಂಚಿತವಾಗಿ ಮರಳಿ ಬದುಕಿದವು. ಅನಂತರ ಆ ಎಲ್ಲ ರುಂಡಗಳು ತಾವು ಹಿಂದೆ ಪಠಿಸಿ ಪಾರಾಯಣ ಮಾಡಿದ ವೇದಶಾಸ್ತ್ರ ಮಂತ್ರಗಳನ್ನು ಪಠಿಸತೊಡಗಿದವು. ಆ ಎಲ್ಲ ರುಂಡಮುಂಡಗಳಲ್ಲಿ ಪರಸ್ಪರ ಅಭಿಪ್ರಾಯ ಭೇದದಿಂದ ವಾದ ವಿವಾದ ನಡೆಯಿತು. - ''ನಾನೇ ಆದಿ, ನಾನೇ ಅಂತ್ಯ, ನಾನೇ ಸರ್ವಶ್ರೇಷ್ಠ. ಈ ಪ್ರಪಂಚಕ್ಕೆಲ್ಲ ಸೃಷ್ಟಿ ಸ್ಥಿತ್ಯಾದಿಗಳನ್ನೆಲ್ಲ ಮಾಡುವವ ನಾನು'' ಎಂದು ಆ ಶಿವನ ಕೊರಳೊಳಗಿನ ಮುಂಡಮಾಲೆಯಲ್ಲಿನ ರುಂಡಗಳೆಲ್ಲವೂ ಪರಸ್ಪರ ವಾದಿಸಿ ತಮ್ಮ ತಮ್ಮ ಮತವನ್ನು ಸಾಧಿಸತೊಡಗಿದವು. ಮತ್ತು ಅವು - ''ನಾವು ಹಿಂದೆ ಸರಿಯಾಗಿ ದಾನ ಕೊಡಲಿಲ್ಲ. ಹೋಮ ಮಾಡಲಿಲ್ಲ. ಲೋಭದಿಂದ ಬ್ರಾಹ್ಮಣರಿಗೆ ದಾನ ದಕ್ಷಿಣೆಯನ್ನು ನೀಡಲಿಲ್ಲ. ಎಂದು ಪಶ್ಚಾತ್ತಾಪ ಪಡತೊಡಗಿದವು'' ಅನಂತರ ಆ ಶಂಕರನ ಜಟಾಜೂಟದಿಂದ ಕೀರ್ತಿಮುಖ ಎಂಬ ಒಬ್ಬ ಗಣಾಧೀಶನು ಹುಟ್ಟಿ ಬಂದ. ಅವನಿಗೆ ಮೂರು ಬಾಯಿ, ಮೂರು ಕಾಲು ಮೂರು ಬಾಲ, ಏಳು ಕೈ, ತಲೆಯ ಮೇಲೆ ತುಂಬು ಜಟೆ. ಹೊಂಬಣ್ಣದ ಕೆಂಭೂತದಂತಿರುವ ಆ ಗಣಾಧೀಶನ ಹೆಸರು ಕೀರ್ತಿಮುಖ. ಅವನನ್ನು ಕಂಡಕೂಡಲೇ ಜೀವಂತವಾದ ಆ ಕೊರಳ ಮಾಲೆಯ ರುಂಡಗಳೆಲ್ಲವೂ ಭಯಭ್ರಾಂತವಾಗಿ ಸತ್ತಂತೆ ತೆಪ್ಪಗೆ ಕುಳಿತವು. ಆ ಕೀರ್ತಿಮುಖವು ತನ್ನ ಗಣದೊಂದಿಗೆ ಮಹಾದೇವನನ್ನು ವಂದಿಸಿ - ''ಪ್ರಭು ನನಗೆ ವಿಪರೀತ ಹಸಿವೆ. ತಿನ್ನಲು ಏನಾದರೂ ಕೊಡು ಎಂದು ಅಂಗಲಾಚಿದ.

**ಶಂಕರ:**-ನಿನಗೆ ಹಸಿವೆಯಾದರೆ ಯುದ್ಧದಲ್ಲಿ ಮಡಿದು ಬಿದ್ದವರನ್ನು ಹಿಡಿದು ತಿನ್ನು.

ಶಿವನ ಈ ಆಜ್ಞೆಯನ್ನು ಕೇಳಿ ಆ ಗಣಾಧೀಶ ಒಂದು ಕ್ಷಣ ವಿಚಾರಿಸಿದ. ಅತ್ತಿತ್ತ ನೋಡಿದ. ಅಲ್ಲಿ ಅವನಿಗೆ ಯಾವ ರಣಭೂಮಿಯೂ ಕಾಣಲಿಲ್ಲ. ಮಡಿದು ಬಿದ್ದವರೂ ತೋರಲಿಲ್ಲ. ಹಸಿದು ಕಂಗಾಲಾದ ಅವನು ಬುಭುಕ್ಷಿತನಾಗಿ ಬ್ರಹ್ಮನನ್ನೇ ಭಕ್ಷಿಸಲು ಓಡಿಬಂದ. ಆಗ ತಡೆದು ನಿಲ್ಲಿಸಿದ ಮಹಾದೇವ. ಆಗ ಆ ಕೀರ್ತಿಮುಖನು ತಿನ್ನಲು ಎಲ್ಲಿಯೂ ಏನನ್ನೂ ಕಾಣದೇ ಕ್ಷುದಾಕ್ರಾಂತನಾಗಿ ತನ್ನ ಅವಯವಗಳನ್ನೇ ತಾನು ತಿನ್ನತೊಡಗಿದ. ಆಗ ಮಹಾದೇವ ಅವನ ಮೇಲೆ ಕರುಣೆದೋರಿ ನುಡಿದ - ''ನೀನು ನನ್ನ ಮನೆಯಲ್ಲಿಯೇ ಇರು. ನನ್ನ ಈ ಕೈಲಾಸದಲ್ಲಿ ನಿನ್ನನ್ನು ನೆನೆಯದವರು ಕೂಡಲೇ ಪತಿತರಾಗಲಿ'' ಹೀಗೆ ಹೇಳಿದ. ಅನಂತರ ಅರಚಣದಲ್ಲಿ ಆ ಕೀರ್ತಿ ಮುಖ ಅದೃಶ್ಯನಾದ. ಆಗ ಆಕಾಶದಿಂದ ಮಹಾದೇವನ ತಲೆಯ ಮೇಲೆ ಪುಷ್ಪವೃಷ್ಟಿ ಆಯಿತು. ಅದನ್ನು ನೋಡಿ ರಾಹು ಆಶ್ಚರ್ಯಭರಿತನಾಗಿ ಮಹಾದೇವರನ್ನು ಕೇಳಿದ.

**ರಾಹು:**- ಮಹಾದೇವ, ನೀನು ಬ್ರಹ್ಮಾದಿ ಲೋಕಪಾಲಕರ ಪೂಜೆಯನ್ನು ಸ್ವೀಕರಿಸುವಿ. ಆದರೆ ನೀನು ಮಾತ್ರ ಯಾರನ್ನು ಪೂಜಿಸುವುದಿಲ್ಲ. ನೀನು ಈಶ್ವರನಾಗಿರುವೆ. ಆದರೂ ಭಿಕ್ಷೆಯನ್ನು ಬೇಡುತ್ತಲಿರುವೆ. ಈ ಲೋಕದಲ್ಲಿ ಭಿಕ್ಷುಕರಿಗೆ ಯಾವದೇ ಸ್ಥಾನಮಾನವಿಲ್ಲ. ಆದರೂ ಪರಮ ಸುಂದರಿಯಾದ ಗೌರಿಯನ್ನು ನೀನು ಗುಟ್ಟಾಗಿ ಇಟ್ಟುಕೊಂಡಿರುವೆ, ಅವಳನ್ನು ನೀನು ನನಗೆ ಒಪ್ಪಿಸಿಬಿಡು. ಅನಂತರ ನೀನು ನಿಶ್ಚಿಂತನಾಗಿ ಭಿಕ್ಷೆ ಬೇಡುತ್ತ ತಿರುಗಾಡು. ಏಕೆಂದರೆ ನಿನ್ನ ಮಗ ಒಬ್ಬನು ಆರು ಮುಖದವ ಇನ್ನೊಬ್ಬವ ಲಂಬೋದರ. ಭಿಕ್ಷೆ ಬೇಡದೇ ನೀನು ಈ ಇಬ್ಬರು ಮಕ್ಕಳ ಹೊಟ್ಟೆ ತುಂಬಿಸುವದು ಎಂತು ?

ರಾಹುವಿನ ಈ ಮಾತು ಕೇಳಿ ಉತ್ತರವನ್ನೇ ಕೊಡಲಿಲ್ಲ ಪರಮೇಶ್ವರ. ಅವನು ಮೌನವಾಗಿ ಕುಳಿತದ್ದನ್ನು ಕಂಡು ರಾಹು ನಂದಿಯನ್ನು ಪ್ರಶ್ನಿಸಿದ.

**ರಾಹು:**- ಶಂಕರನ ವಾಹನನಾದ ನಂದಿಯೇ ಈ ನಿನ್ನ ಒಡೆಯನಾದ ಶಿವ ಆಚಾರ ಭ್ರಷ್ಟ. ಅವನನ್ನು ಸರಿಯಾಗಿ ಶಿಕ್ಷಿಸುವುದು ನಿನ್ನ ಕರ್ತವ್ಯ. ಇಲ್ಲದಿದ್ದರೆ ನಾವು ನಿನ್ನನ್ನು ಕೂಡ ಯುದ್ಧದಲ್ಲಿ ಹೊಡೆದು, ಬಡಿದು ಕಡಿದು ಹಾಕುವೆವು. ಹಿಂದೆ ದೇವೇಂದ್ರ ರಣಾಂಗಣದಲ್ಲಿ ನಮ್ಮಿಂದ ಹೊಡೆತ ತಿಂದು ಓಡಿಹೋದದ್ದು ನಿನಗೆ ತಿಳಿದಿದೆಯಷ್ಟೆ?

ಆಗ ನಂದಿಯು ಈ ಶತಮೂರ್ಖನಿಗೆ ಏನು ಮಾಡಬೇಕು. ಎಂದು ಪ್ರಶ್ನೆ ಗರ್ಭಿತವಾಗಿ ಪರಶಿವನನ್ನು ನೋಡಿದ. ಅವನ ಕಣ್ಣ ಸನ್ನೆಯಿಂದಲೇ ನಂದಿಯು ಮಹಾದೇವನ ಅಭಿಪ್ರಾಯವನ್ನು ತಿಳಿದುಕೊಂಡು ಅದಕ್ಕೆ ಅನುಗುಣವಾಗಿ ಆ ರಾಹುವನ್ನು ಪೂಜಿಸಿದ ಸತ್ಕರಿಸಿದ ಮತ್ತು ಗೌರವಿಸಿ ಕಳಿಸಿಕೊಟ್ಟ.

ಅನಂತರ ಆ ರಾಹುವು ಜಾಲಂಧರನ ಬಳಿಗೆ ಹೋಗಿ ಎಲ್ಲ ಸಮಾಚಾರ ತಿಳಿಸಿದ ಮತ್ತು ಗೌರಿಯ ರೂಪ ನಾನು ನೀನು ತಿಳಿದದ್ದಕ್ಕಿಂತ ನಾರದ ಬಣ್ಣಿಸಿದಕ್ಕಿಂತ ಸಾವಿರ ಪಾಲು ಮಿಗಿಲಾದದ್ದು ಎಂದು ಬಣ್ಣಿಸಿ ಹೇಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜಾಲಂಧರನ ಮುಂದೆ ನಾರದರಿಂದ ಪಾರ್ವತಿಯ ಸೌಂದರ್ಯ ವರ್ಣನೆ ಎಂಬ ಹನ್ನೊಂದನೇಯ ಅಧ್ಯಾಯ ಮುಗಿದುದು.*

—o—

**ನಾರದ:-** ಅನಂತರ ಜಾಲಂಧರನು ರಾಹುವಿನ ಮಾತನ್ನು ಕೇಳಿ ತನ್ನ ಸೈನ್ಯವನ್ನೆಲ್ಲ ಸಜ್ಜುಗೊಳಿಸಿಕೊಂಡು ತನ್ನ ಯುದ್ಧಕ್ಕಾಗಿ ಹೊರಟುನಿಂತ. ಅವನ ಪ್ರಚಂಡಸೇನೆಯ ಜಯಘೋಷದ ಧ್ವನಿಯಿಂದ ಹಾಗೂ ಕಲಕಲ ಕೋಲಾಹಲದಿಂದ ಮಂದರಾದಿ ಗಿರಿಕಂದರಗಳಲ್ಲಿ ಹಾಗೂ ಮೇರುಪರ್ವತದ ಗುಹಾಗೌಹರಗಳಲ್ಲಿ ಮಲಗಿದ ಕಿನ್ನರರು ಹುಲಿಸಿಂಹ ಆನೆಗಳು ಗಡಬಡಿಸಿ ಎದ್ದವು. ಎಲ್ಲ ಜನರ ಕಿವಿಗಳು ಗಡಚಿಕ್ಕಿದವು. ಅವನು ಸೈನಿಕರು ಬಾರಿಸಿದ ದುಂಧುಭಿನಾದದಿಂದ ಗುಡ್ಡಗಳೂ ಕೂಡ ಗದಗದ ನಡುಗಿದವು. ಅರಮನೆಗಳು ಹೊಯ್ದಾಡಿದವು. ಸಪ್ತಸಾಗರಗಳ ಗರ್ಭದಿಂದ ದೈತ್ಯದಾನವರು ಎದ್ದು ಬಂದು ಯುದ್ಧ ಸನ್ನದ್ಧರಾಗಿ ಜಯಘೋಷ ಮಾಡುತ್ತ ನಿಂತರು. ಅವನ ಚದುರಂಗ ಸೈನ್ಯವು ಭೂಮಿಯೆಲ್ಲ ವ್ಯಾಪಿಸಿ ದಿಗಂತವನ್ನೆಲ್ಲ ತುಂಬಿಕೊಂಡಿತು. ಆಗ ಜಾಲಂಧರನು ಆ ಸೈನ್ಯವನ್ನೆಲ್ಲ ಅಲ್ಲಿಯೇ ನಿಲ್ಲಿಸಿ ತಾನು ಕ್ಷೀರಸಾಗರದಲ್ಲಿ ಪವಡಿಸಿದ ಮಹಾವಿಷ್ಣುವಿನ ಬಳಿಗೆ ಬಂದು ನಮಸ್ಕಾರ ಮಾಡಿ ಕೇಳಿಕೊಂಡ.

**ಜಾಲಂಧರ:-** ಭಗವನ್, ನಿನ್ನ ಭೋಗಕ್ಕಾಗಿ ನಾನು ಏನು ಕೊಡಲಿ ಹೇಳು. ಆಗ ಅದಕ್ಕೆ ಪ್ರತಿಯಾಗಿ ನಾರಾಯಣನು ಕೂಡ ತಿರುಗಿ ಕೇಳಿದ - ''ಸಿಂಧು ಪುತ್ರ, ನಾನು ನಿನಗೆ ಪ್ರಿಯವಾದುದನ್ನು ಏನನ್ನು ಮಾಡಲಿ? ಯಾವುದನ್ನು ನೀಡಲಿ?'' ಹೇಳು.

**ಜಾಲಂಧರ:-** ಭಗವನ್, ನೀನು ನನಗೆ ಏನು ಮಾಡುವದೂ ಬೇಡ. ನೀನು ಈ ಕ್ಷೀರಸಾಗರದಲ್ಲಿಯೇ ಪವಡಿಸು. ನಾನು ಯುದ್ಧಕ್ಕಾಗಿ ರಣಭೂಮಿಗೆ ತೆರಳುತ್ತೇನೆ'' ಹೀಗೆ ಹೇಳಿ ಹೊರಟುನಿಂತ ಆ ಜಾಲಂಧರನಿಗೆ ಅವನ ಸೋದರಿಯಾದ ಲಕ್ಷ್ಮೀದೇವಿಯು ಅಕ್ಷತೆಯನ್ನು ಇಟ್ಟು ಅನುಗ್ರಹಿಸಿದಳು. ಕೇಶವನು ಅವನನ್ನು ಗೌರವಿಸಿದ.

ಹೀಗೆ ಲಕ್ಷ್ಮೀನಾರಾಯಣರಿಂದ ಸತ್ಕೃತನಾಗಿ ಆ ಜಾಲಂಧರ ಅಲ್ಲಿಂದ ಹೊರಟು ಸಮುದ್ರನಾಥನ ಬಳಿಗೆ ಬಂದ. ಅವನಿಗೆ ನಮಸ್ಕರಿಸಿ ಕೈ ಮುಗಿದು ಕೇಳಿಕೊಂಡ.

**ಜಾಲಂಧರ :-**ತಂದೆಯೆ, ನಿನಗೆ ವಂದನೆ. ನಾನು ಮಹಾದೇವರೊಡನೆ ಯುದ್ಧ ಮಾಡಿ ಗೆದ್ದು ಬರಬೇಕೆಂದು ಬಹುದೂರ ಹೊರಟಿದ್ದೇನೆ. ನೀನು ಅನುಮತಿ ನೀಡು.

ಮಗನ ಈ ಮಾತನ್ನು ಕೇಳಿ ಖಿನ್ನವಾದ ಸಮುದ್ರನ ನುಡಿದ - ''ಪುತ್ರ, ಆ ಮಹಾದೇವನ ತಂಟೆಗೆ ಹೋಗಬೇಡ. ಅವನೊಬ್ಬ ತಪಸ್ವಿ ತೇಜಸ್ವಿ. ಅವನ ವಿಜಿಗೀಷೆಯನ್ನು ಬಿಟ್ಟುಬಿಡು. ನಾನು ಕೊಟ್ಟ ವಿಶಾಲವಾದ ರಾಜ್ಯವನ್ನು ಆಳು. ನಿನ್ನ ಸಾಮರ್ಥ್ಯ ಅತ್ಯದ್ಭುತ. ನಿನಗೆ ಸಮಾನರಾದವರು ಈ ಭೂಮಿಯಲ್ಲಿ ಯಾರೂ ಇಲ್ಲ. ನಿನ್ನಿಂದಾಗಿ ನಾಕಕ್ಕಿಂತ ಮಿಗಿಲಾಗಿದೆ ಈ ನೆಲ. ನಿನ್ನ ರಾಜ್ಯದಲ್ಲಿ ಇಡೀ ಭೂಖಂಡವೆಲ್ಲವೂ ವೈಕುಂಠ ಲೋಕದಂತೆ ಕಂಗೊಳಿಸುತ್ತಿದೆ. ಯಾವ ದೈತ್ಯದಾನವರಿಂದಲೂ ಗೆಲ್ಲಲು ಬಾರದ ಶ್ರೀ ಹರಿಯನ್ನು ಲಕ್ಷ್ಮಿಯೊಂದಿಗೆ ಎಳೆದು ತಂದು ಶಾಶ್ವತವಾಗಿ ನನ್ನ ಮನೆಯಲ್ಲಿ ನೆಲೆಸಿ ನಿಲ್ಲುವಂತೆ ಮಾಡಿರುವೆ. ನೀನು ಕೂಡ ನನ್ನ ಬಳಿಯಲ್ಲಿಯೇ ಇರು. ಆ ಭಿಕ್ಷುಕನಾದ ಶಂಕರನನ್ನು ಬಿಟ್ಟುಬಿಡು. ಅವನನ್ನು ಗೆಲ್ಲುವ ಹಂಬಲವನ್ನೂ ಕೊಲ್ಲುವ ಹವ್ಯಾಸವನ್ನು ತೊರೆದು ಬಿಡು.''

ಎಂದು ಮುಂತಾಗಿ ಹಲವಾರು ರೀತಿಯಿಂದ ಜಾಲಂಧರನ ಹೃದಯದಲ್ಲಿ ಸದ್ಬುದ್ಧಿ ಹುಟ್ಟುವಂತೆ ಪ್ರಯತ್ನಿಸಿದ. ಆದರೆ ಆ ದುಷ್ಟದಾನವನ ಹೃದಯದಲ್ಲಿ ಗೌರಿಯ ಪ್ರತಿಮೆ ಮೂಡಿಬಿಟ್ಟಿತ್ತು. ಅವನ ಮತ್ತ ಚಿತ್ತದಲ್ಲಿ ಆ ಪಾರ್ವತಿಯ ಚೆಲುವಿನ ಚಿತ್ತಾರ ಗಟ್ಟಿಯಾಗಿ ನೆಟ್ಟುಹೋಗಿತ್ತು. ಆದ್ದರಿಂದ ಅವನು ತಂದೆಯ ಮಾತನ್ನು ಕೇಳಲಿಲ್ಲ. ಸಮುದ್ರನ ಸಲಹೆ ಸೂಚನೆಗಳನ್ನು ಧಿಕ್ಕರಿಸಿ ಯುದ್ಧಕ್ಕೆ ಹೊರಟುನಿಂತ ಜಾಲಂಧರ. ಆಗ ಅವನ ಸುಂದರಾಂಗಿಯಾದ ವೃಂದಾದೇವಿಯು ಅವನ ಬಳಿಗೆ ಬಂದು ಮುಗ್ಧ ಹೃದಯದಿಂದ ಮಾತನಾಡಿದಳು.

**ವೃಂದಾ:-** ಪ್ರಾಣನಾಥ, ನೀನು ರಾಜರಿಗೆಲ್ಲ ಇಂದ್ರ. ಆ ಶಂಕರ ಒಬ್ಬ ಯಃಕಶ್ಚಿತ ಯೋಗಿ. ಅವನ ಜೊತೆಗೆ ನಿನಗೆ ಯುದ್ಧ ಶೋಭಿಸದು. ನಿನ್ನ ಮನಸ್ಸು ಈಗ ಹರನ ಹರಿಣಾಕ್ಷಿಯಾದ ಪಾರ್ವತಿಯ ಕಡೆಗೆ ಹರಿದು ಹೋಗುತ್ತಲಿದೆ. ಆ ಗೌರಿಯನ್ನು ನೀನು ಏಕೆ ಬಯಸುವೆ? ಯಾವ ವಿಷಯದಲ್ಲಿ ಅವಳು ನನಗಿಂತ ಮಿಗಿಲಾಗಿರುವಳು? ಮೇಲಾಗಿ ಅವಳು ಶಿವೈಕ ನಿಷ್ಠಳು. ಅವಳಿಗೆ ಮಕ್ಕಳಿಲ್ಲ. ಬಂಜೆ. ಗಣಪತಿ, ಸ್ಕಂದ ಎಂಬ ಎರಡು ಮಕ್ಕಳನ್ನು ಮನೆಯಲ್ಲಿ ತಂದು ಸಾಕಿದ್ದಾಳೆ. ಅವಳು ಬರಡು ದನ, ಕಲಹಪ್ರಿಯನಾದ ನಾರದ ವ್ಯರ್ಥವಾಗಿ ನಿನ್ನ ಮುಂದೆ ಅವಳನ್ನು ಹೊಗಳಿದ್ದಾನೆ. ಅವಳನ್ನು ಬಿಡು. ಅವಳ ಆಸೆಯನ್ನು ತ್ಯಜಿಸು. ನನ್ನನ್ನು ಪ್ರೀತಿಸು.

**ಜಾಲಂಧರ:-** ವೃಂದ, ನೀನು ಏನು ಹೇಳಿದರೂ ನನ್ನ ಮನಸ್ಸು ಪಾರ್ವತಿಯನ್ನು ಬಿಟ್ಟು ಕದಲಲಾರದು. ಏನಾದರೂ ಮಾಡಿ ನಾನು ಪಾರ್ವತಿಯನ್ನು ಪಡೆಯಲು ಪರಮೇಶ್ವರ ನೊಡನೆ ಯುದ್ಧವನ್ನು ಸಾರುತ್ತೇನೆ. ಅವನ ಜೊತೆಗೆ ಹಣಾಹಣಿ ಹೋರಾಡುತ್ತೇನೆ. ಒಂದು ವೇಳೆ ಹರನೊಡನೆ ನಡೆಸಿದ ಈ ಹೋರಾಟದಲ್ಲಿ ನನಗೆ ಮರಣ ಬಂದರೆ ಈ ನನ್ನ ರಾಜ್ಯವನ್ನೂ ರಾಜಧಾನಿಯನ್ನೂ ನೀನೇ ಪಾಲಿಸು. ನನ್ನನ್ನು ಆಗಾಗ ನೆನೆಯುತ್ತ ಇರು.

ಗಂಡನ ಈ ಮಾತನ್ನು ಕೇಳಿ ವೃಂದೆಗೆ ನಗೆ ಬಂದಿತು. ಆಗ ಅವಳು ನಿರಾಶಳಾಗಿ ಪಲ್ಲಕ್ಕಿಯಲ್ಲಿ ಕುಳಿತು ತನ್ನ ಅಂತಃಪುರಕ್ಕೆ ತೆರಳಿದಳು.

ಇತ್ತ ಜಾಲಂಧರನು ಅರವತ್ತು ಸಾವಿರ ಮಹಾಪದ್ಮದ ಸಂಖ್ಯೆಯಲ್ಲಿ ಇರುವ ತನ್ನ ಸೇನಾಸನ್ನಾಹದೊಂದಿಗೆ ಕೈಲಾಸ ಪರ್ವತಕ್ಕೆ ಬಂದಿಳಿದ. ಆಗ ಅಲ್ಲಿ ಮಹೇಶ್ವರನು ಇರಲಿಲ್ಲ. ತನ್ನ ಮಡದಿ, ಮಕ್ಕಳು ಹಾಗೂ ಗಣಂಗಳೊಂದಿಗೆ ಮಾನಸೋತ್ತರ ಪರ್ವತಕ್ಕೆ ಪಯಣಿಸಿದ್ದ. ಆಗ ಜಾಲಂಧರನು ಆ ಕೈಲಾಸ ಪರ್ವತದ ನಿಸರ್ಗ ಸೌಂದರ್ಯ, ಆ ಸ್ಥಾನದ ರಮಣೀಯತೆಯನ್ನು ಕಣ್ಣಾರೆ ಕಾಣಬೇಕೆಂದು ಕುತೂಹಲದಿಂದ ತನ್ನ ದಂಡಯಾತ್ರೆಯ ಮೊದಲದಿನದಂದು ಅಲ್ಲಿಯೇ ಉಳಿದುಕೊಂಡ. ಸಿದ್ಧಾಂಗನೆಯರ ಕಸ್ತೂರಿ ಚಂದನ ಶ್ರೀಗಂಧ ಲಿಪ್ತವಾದ ಹೃದಯದ ಮೇಲೆ ಬೀಸಿ, ಮಾನಸ ಸರೋವರದ ಅರವಿಂದ ವನಗಳಲ್ಲಿ ಸೂಸಿ, ಮಂದಾರ, ಮಾಲತಿ, ಮಲ್ಲಿಕಾ, ಕುಂದ, ನಂದ್ಯಾವರ್ತಾದಿ ತರುವೃಂದಗಳ ಮಕರಂದದ ತುಂತುರಗಳನ್ನು ಕಂಪಿನಂಜಲಿಯಲ್ಲಿ ಹೊತ್ತು ಬೀಸುವ ಅಲ್ಲಿಯ ತಂಗಾಳಿಗೆ ಮೈ ಒಡ್ಡಿ ಅವನ ಸೈನಿಕರು ತಮ್ಮ ಮಾರ್ಗಾಯಾಸವನ್ನು ಮರೆತು ಆನಂದಿಸಿದರು. ಸರ್ವರತ್ನಗಳ ಆಶ್ರಯಭೂತವಾದ ಆ ಕೈಲಾಸ ಪರ್ವತದ ನಿಸರ್ಗ

ಸೌಂದರ್ಯವನ್ನು ಪ್ರಕೃತಿಯ ರಮಣೀಯಕವನ್ನೂ ಕಂಡು ಸಂತಸದಿಂದ ಜಾಲಂಧರನು ತನ್ನ ಕುಲಗುರುವಾದ ಶುಕ್ರಾಚಾರ್ಯನಿಗೆ ಒಂದು ಪ್ರಶ್ನೆ ಮಾಡಿದ.

**ಜಾಲಂಧರ:-** ಗುರುಗಳೆ, ನಿಮ್ಮಂಥ ಪಂಡಿತರು ಆ ಪರಮೇಶ್ವರನನ್ನು ತಾಪಸ ಎಂದು ಕರೆಯಲು ಏನು ಕಾರಣ? ಗೌರಿಯಂಥ ಹೆಂಡತಿ, ಕೈಲಾಸದಂಥ ಮನೆ, ಇದೆಲ್ಲವನ್ನು ಬಿಟ್ಟು ಎಲ್ಲಿ ಹೋಗಿರಬಹುದು. ಆ ಶಂಭು? ಏಕೆ ಇಲ್ಲಿಂದ ತೆರಳಿರಬಹುದು? ಅವನು ನನ್ನ ಹೆದರಿಕೆಯಿಂದಲೇ ಈ ಕೈಲಾಸವನ್ನು ಬಿಟ್ಟು ಹೋಗಿದ್ದಾನೆ. ಇದು ನಿಶ್ಚಿತ. ಆದರೆ ಅವನು ನನಗೇಕೆ ಇಷ್ಟು ಹೆದರಬೇಕು?

**ಶುಕ್ರಾಚಾರ್ಯ:-** ಆ ಮಾನಸೋತ್ತರ ಶೈಲವು ಇತರರಿಂದ ಅಗಮ್ಯ. ಅಲ್ಲಿ ಯಾರೂ ಹೋಗಲಾರರು. ಆದ್ದರಿಂದಲೇ ಅವನು ಅಲ್ಲಿಗೆ ಹೋಗಿದ್ದಾನೆ.

**ಜಾಲಂಧರ:-** ಯಾರೂ ಹೋಗದಿದ್ದರೂ ನಾನು ಅಲ್ಲಿಗೆ ಹೋಗುತ್ತೇನೆ. ನನ್ನ ಹಿಂದೆ ನೀವೂ ಕೂಡ ನಮ್ಮ ಎಲ್ಲ ಸೈನ್ಯದೊಂದಿಗೆ ಬನ್ನಿರಿ.

ಹೀಗೆ ನುಡಿದು ಜಾಲಂಧರನು ಮಹಾದೇವನು ನೆಲೆಸಿದ ಮಾನಸೋತ್ತರ ಮಹಾಶೈಲಕ್ಕೆ ಮುನ್ನಡೆದ. ಆ ಗಿರಿಶ್ರೇಷ್ಠ ಅರವತ್ತು ಸಾವಿರ ಯೋಜನ ಎತ್ತರ. ಇಂಥ ಮುಗಿಲುಮುಖಕ್ಕೆ ಮುತ್ತಿಡುವ ಆ ಮಹಾಗಿರಿಯನ್ನು ಜಾಲಂಧರನ ಆಜ್ಞೆಯಿಂದ ಎಲ್ಲ ದೈತ್ಯರು ಏರಿ ಹಾರಿ ಸಾರಿಬಂದರು. ಉತ್ತುಂಗವಾದ ಗಿರಿ ಶೃಂಗಗಳನ್ನು ಲಂಘಿಸಿ ಬಂದ ಜಾಲಂಧರನ ಪ್ರಚಂಡ ಸೇನೆಯ ಕಲಕಲ ಕೋಲಾಹಲದಿಂದ ಭೂಮ್ಯಾಕಾಶಗಳು ಬಿರಿಯುವಂತಾದವು. ಇದನ್ನೆಲ್ಲ ಮೇಲೆ ನಿಂತು ನೋಡಿದ ಮಹಾದೇವ ಆ ಮಹಾಶೈಲದ ಅತ್ಯಂತ ಉಚ್ಚತಮವಾದ ಒಂದು ಶಿಖರದ ತುತ್ತು ತುದಿಯಲ್ಲಿ ಸಖಿಯರೊಂದಿಗೆ ಪಾರ್ವತಿಯನ್ನು ಕೂಡಿಸಿ ತಾನು ಮೂವತ್ತು ಅಬ್ಬ ಸಂಖ್ಯೆಯ ಸಹಸ್ರ ಸಹಸ್ರ ಗಣಾಧೀಶರಿಂದ ಕೂಡಿಕೊಂಡು ಯುದ್ಧಕ್ಕಾಗಿ ಸಜ್ಜಾಗಿ ನಿಂತ. ಮತ್ತು ಶಿವಗಣಾಧೀಶ್ವರನಾದ ನಂದೀಶ್ವರನನ್ನು ಕುರಿತು ನುಡಿದ.

**ಮಹಾದೇವ:-** ಗಣನಾಯಕ, ಜಾಲಂಧರ ದುರ್ಲಂಘ್ಯವಾದ ಈ ಮಹಾಗಿರಿಯ ಉತ್ತುಂಗ ಶೃಂಗಗಳನ್ನೆಲ್ಲ ಲಂಘಿಸಿ ಸೈನ್ಯದೊಂದಿಗೆ ಇಲ್ಲಿ ಬಂದಿದ್ದಾನೆ. ಅವನು ಮಹಾವೀರ. ಅವನಿಗೆ ಇಲ್ಲಿ ಸರಿಯಾಗಿ ಏಟ ಹಾಕಿ ಪಾಠ ಕಲಿಸಬೇಕು. ನೀನು ಮಹಾಕಾಲ ಮೊದಲಾದ ವೀರರಿಂದ ಕೂಡಿಕೊಂಡು ಹೋಗಿ ಸಂಗ್ರಾಮದ ರಂಗಭೂಮಿಯಲ್ಲಿ ಧೈರ್ಯದಿಂದ ಹಾಗೂ ಶೌರ್ಯದಿಂದ ಅವನನ್ನು ಎದುರಿಸು. ನಾನು ಆ ಧೀರ ದೈತ್ಯನನ್ನು ಯುದ್ಧದಲ್ಲಿ ಗೆಲ್ಲುವವರೆಗೆ ನೀವು ಎಲ್ಲರೂ ಒಟ್ಟಾಗಿ ಮಹಾಪರಾಕ್ರಮದಿಂದ ಅವನ ವೀರಾಧೀವೀರರಾದ ಶೂರ ಸೈನಿಕರನ್ನೆಲ್ಲ ಕಡಿದು ಹೊಡೆದು ಕೊಚ್ಚಿ ಹೆಚ್ಚಿ ಹಾಕುತ್ತಲಿರಿ.

ಮಹಾದೇವರ ಈ ಮಹದಾಜ್ಞೆಯನ್ನು ತಲೆಯಲ್ಲಿ ಹೊತ್ತು ತನ್ನ ಸಾರಥಿಗೆ ನುಡಿದ ನಂದೀಶ್ವರ.

**ನಂದೀಶ್ವರ :-** ಸಾರಥಿ, ಕೂಡಲೇ ನನ್ನ ಕಾಕತುಂಡ ರಥವನ್ನು ಇಲ್ಲಿಗೆ ತೆಗೆದುಕೊಂಡು ಬಾ.

ನಂದಿಯ ಆದೇಶದಂತೆ ಅವನ ಸೂತನು ಮೂವತ್ತೆರಡು ಯೋಜನ ಉದ್ದವಾದ, ಮೂವತ್ತೆರಡು ಕುದುರೆಗಳನ್ನು ಹೂಡಿದ, ಹದಿನಾರು ಗಾಲಿಗಳುಳ್ಳ, ಅರವತ್ತು ಧ್ವಜಗಳಿಂದ ಶೋಭಿಸುವ, ಎಲ್ಲ ಬಗೆಯ ಶಸ್ತ್ರಾಸ್ತ್ರಗಳಿಂದ ತುಂಬಿದ ಅತ್ಯದ್ಭುತವಾದ

ರಥವನ್ನು ನಂದಿಯ ಎದುರು ತಂದು ನಿಲ್ಲಿಸಿದ. ಆ ಗಣನಾಯಕನ ರಥದ ಗಾಲಿಯ ರಕ್ಷಣೆಗಾಗಿ ಸ್ವಯಂ ಶಿವಕುಮಾರರಾದ ಸ್ಕಂದ ಹಾಗೂ ಗಣಪತಿ ಇಬ್ಬರೂ ಜಾಗರೂಕರಾಗಿ ನಿಂತುಕೊಂಡರು. ತಮ್ಮ ತಮ್ಮ ವಾಹನಗಳಾದ ಮೂಷಕ ಹಾಗೂ ನವಿಲುಗಳನ್ನು ಏರಿಕೊಂಡು. ಅನಂತರ ಎಲ್ಲ ಶಸ್ತ್ರಾಸ್ತ್ರ ಸಂಪನ್ನರಾದ ಶಿವಗಣಗಳಿಂದ ಕೂಡಿ ನಂದೀಶ್ವರನು ಪರಮೇಶ್ವರನ ಪೂಜೆಯನ್ನು ಮಂತ್ರಸ್ತೋತ್ರ ಪ್ರಾರ್ಥನೆಗಳಿಂದ ಮಾಡಿ ಹೊರಟ.

ಅವನ ತಲೆಯ ಮೇಲೆ ಹನ್ನೆರಡು ಯೋಜನ ವಿಸ್ತಾರದವಾದ ಮಹಾಛತ್ರವು ಕಂಗೊಳಿಸುತ್ತಿತ್ತು. ಇಷ್ಟರಲ್ಲಿ ಆ ಬೃಹದ್ ಬೆಟ್ಟವನ್ನು ಮೆಟ್ಟಿ ಮೇಲೆ ಬಂದ ದೈತ್ಯ ಸೇನಾಧುರೀಣರೆಲ್ಲರೂ ಯುದ್ಧಕ್ಕೆ ಸನ್ನದ್ಧರಾಗಿ ಜಯಘೋಷವನ್ನು ಮಾಡಿದರು. ಆಗ ನಂದಿಯು ತನ್ನ ಶಿವಗಣಗಳ ಜೊತೆಗೆ ಮಹಾದೇವರ ಹೆಸರಿನಿಂದ ಜಯಘೋಷವನ್ನು ಗೈದು ದೈತ್ಯ ಸೈನಿಕರನ್ನೆಲ್ಲ ಹಣಿಯತೊಡಗಿದ. ಶಿವಗಣಂಗಳ ಭೀಕರವಾದ ಶಸ್ತ್ರಾಘಾತದಿಂದ ಛಿನ್ನವಿಚ್ಛಿನ್ನ ಗಾತ್ರರಾದ ದೈತ್ಯರು ಆ ಮಹಾಶೈಲದ ಶೃಂಗ ಶಿಖರಗಳ ತುದಿಗಳಿಂದ ಉರುಳಿ ನೆಲದ ಮೇಲೆ ಹೊರಳಿ ಬಿದ್ದರು. ಆಗ ಶಿವಗಣಾಧೀಶರು ಕೆಳಗೆ ಇಳಿದು ಬಂದು ಮತ್ತೆ ಸಮ ನೆಲದಲ್ಲಿಯೇ ದೈತ್ಯರೊಂದಿಗೆ ಯುದ್ಧವನ್ನು ಪ್ರಾರಂಭಿಸಿದರು. ಆ ಸಮರಭೂಮಿಯಲ್ಲಿ ಕಲಿತನದಿಂದ ಹೋರಾಡುವ ದೈತ್ಯ ಸೈನಿಕರ ಮೇಲೆ ಶಿವಸೇನೆಯು ಏರಿ ಹಾರಿ ಮುಗಿಬಿದ್ದು ರಥಿಕರನ್ನೂ ಕುದುರೆ ಸವಾರರನ್ನೂ ಕಾಲಾಳುಗಳನ್ನೂ, ಕಡಿಕಡಿದು ಚೆಲ್ಲಿದರು. ಸಮರಾಂಗಣವೆಲ್ಲವೂ ದೈತ್ಯದಾನವರ ರುಂಡ ದಂಡ ಮುಂಡಗಳಿಂದ ತುಂಬಿಹೋಯಿತು. ನೆತ್ತರು ಮಡುಗಟ್ಟಿ ಮಧ್ಯದಲ್ಲಿ ರುಂಡವಿಲ್ಲದ ದಂಡಗಳು ತೇಲಾಡತೊಡಗಿದವು. ಶಿವನ ಸೈನಿಕರ ಹೊಡೆತ ತಾಳಲಾರದೇ ನೆಲಕ್ಕೆ ಉರುಳಿ ನರಳಿ ಚೀರುತ್ತಲಿರುವ ದಾನವರ ಕರುಣೆಯ ಆಕ್ರಂದನವು ಹಾಗೂ ಚೀತ್ಕಾರವು ದಿಗಂತವನ್ನು ಸೀಳಿ ಅಂತರಿಕ್ಷದಲ್ಲಿ ಮೊರೆಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಜಾಲಂಧರನ ದಂಡಯಾತ್ರೆ, ಎಂಬ ಹನ್ನೆರಡನೇಯ ಅಧ್ಯಾಯ ಮುಗಿದುದು*



## ಶುಂಭ ಮೊದಲಾದ ದೈತ್ಯರೊಂದಿಗೆ ನಂದಿ ಮುಂತಾದ ಶಿವಗಣಾಧೀಶರ ಯುದ್ಧ

ಅಧ್ಯಾಯ - ೧೩

**ನಾರದ:-** ಪ್ರಚಂಡವಾದ ಶಿವಸೇನೆಯಿಂದ ದೈತ್ಯಸೇನೆಯ ದಂಡಾಳುಗಳೆಲ್ಲ ಖಂಡತುಂಡವಾಗಿ ತುಂಡರಿಸಲ್ಪಟ್ಟು ಅಲ್ಲಲ್ಲಿ ಎಲ್ಲ ಕಡೆಗೂ ಕೊಲ್ಲಲ್ಪಟ್ಟರು. ಚೆಲ್ಲಲ್ಪಟ್ಟಿದ್ದನ್ನು ಕಂಡು ಶುಂಭ ಮೊದಲಾದ ದೈತ್ಯ ಸೇನಾಪತಿಗಳು ಕೆರಳಿ ಕೆಂಡವಾದರು. ಆಗ ಒಮ್ಮೆಲೇ ಶುಂಭನು ನಂದಿಯ ಮೇಲೆ ಏರಿ ಬಂದ. ನಿಶುಂಭ ಮಹಾಕಾಲನನ್ನು ಎದುರಿಸಿದ. ಶೈಲರೋಮನು ಪುಷ್ಪದಂತನೊಡನೆ ಹೋರಾಟಕ್ಕೆ ಇಳಿದ. ಮಹಾಮಾರ ಎಂಬ ದೈತ್ಯನು ಮಾಲ್ಯವಂತ ಎಂಬ ಶಿವಭಕ್ತನನ್ನು ಯುದ್ಧದಲ್ಲಿ ತಡೆದು ನಿಲ್ಲಿಸಿದ ಭಯಾನವಕನು ಚೆಂಡನೊಡನೆ ಪ್ರಚಂಡ ಪರಾಕ್ರಮದೊಡನೆ ಹೋರಾಡಿದ. ರಾಹವು ಸ್ಕಂದನೊಡನೆ ಸಂಧಿಸಿದ. ಸರ್ಪರೋಮನು ಕೂಷ್ಮಾಂಡನೊಡನೆ, ಘರ್ಘರನು ರೌಮನೊಡನೆ, ಕೇತುಮುಖನು ಶುಭ್ರನೊಡನೆ, ಜಂಭನು ವಿನಾಯಕನೊಡನೆ, ರೋಮಕಂಟಕನು ಭೃಂಗೀಶನೊಡನೆ, ಪಾತಾಲಕೇತನು ಹಾಸನೊಡನೆ ಸಂಧಿಸಿ ಘನಘೋರವಾಗಿ ಕಾದತೊಡಗಿದರು. ಹೀಗೆ ಕೋಟಿ ಕೋಟಿ ಸಂಖ್ಯೆಯಲ್ಲಿದ್ದ ರುದ್ರರು ತಮ್ಮ ಸಮ ಸಂಖ್ಯಾತರಾದ ದೈತ್ಯ ದಾನವ ಸೈನಿಕರೊಡನೆ ತಮ್ಮ ಪೌರುಷವನ್ನು ಪಣಕ್ಕೆ ಹಚ್ಚಿ ಕೆಚ್ಚಿದೆಯಿಂದ ಕಾದತೊಡಗಿದರು.

ವೀರಾಗ್ರಣಿಯಾದ ನಂದಿಯು ಅತ್ಯಂತ ಹದನವಾದ ಬಾಣಗಳನ್ನು ಶುಂಭನ ಮೇಲೆ ಬಿಟ್ಟು ಅವನ ಮುಖವನ್ನೆಲ್ಲ ಮುಚ್ಚಿಬಿಟ್ಟ. ಆಗ ಶುಂಭನು ತನ್ನ ಕೈಯಲ್ಲಿಯ ಬಿಲ್ಲು ಬಾಣಗಳನ್ನು ಅಲ್ಲಿಯೇ ಚೆಲ್ಲಿ ಆ ಪರ್ವತದ ಒಂದು ದೊಡ್ಡ ಶೃಂಗವನ್ನೇ ಕಿತ್ತಿ ತನ್ನ ಕೈಯಿಂದ ಎತ್ತಿ ತೂರಿ ನಂದಿಯ ಮೇಲೆ ಒಗೆದ. ಆ ಗಿರಿಶಿಖರವು ನಂದಿಯ ರಥವನ್ನು ಪುಡಿಗಟ್ಟಿ ಅವನ ಎದೆಯ ಮೇಲೆ ಹೊಡಿಸಿತು. ಅದರಿಂದ ನಂದಿ ಮೂರ್ಚ್ಛಿತನಾಗಿ ನೆಲದ ಮೇಲೆ ಹೊರಳಿ ಬಿದ್ದ. ಮರುಚಣದಲ್ಲಿ ಮೂರ್ಚ್ಛೆ ತಿಳಿದು ಎದ್ದು ಭಯಭ್ರಾಂತನಾಗಿ ರಣರಂಗದಿಂದ ಓಡಿ ಹೋದ.

ಮಹಾಕಾಲ ಎಂಬ ಶಿವಸೇನೆಯ ಸೇನಾಪತಿಯು ನಿಶುಂಭನ ಮುದ್ಗರ ಪ್ರಹಾರದಿಂದ ಕ್ರುದ್ಧನಾಗಿ ತನ್ನ ಗದೆಯಿಂದ ವೈರಿಯ ಮಣಿಮುಕುಟದ ಮೇಲೆ ಕುಟ್ಟಿ ಒಂದು ಬಲವಾದ ಪೆಟ್ಟುಕೊಟ್ಟ. ನಿಶುಂಭನು ಮಹಾಕಾಲನ ಈ ಪ್ರಬಲ ಪ್ರಹಾರವನ್ನು ಲಕ್ಷವಿಲ್ಲದಂತೆ ತಾಳಿಕೊಂಡು. ಧೈರ್ಯದಿಂದ ಮುನ್ನುಗಿ ಮಹಾಕಾಲನ ಎರಡೂ ಕಾಲುಗಳನ್ನು ಹಿಡಿದು ಅವನನ್ನು ಗರಗರ ತಿರುಗಿಸಿ ತೂರಿ ಒಗೆದುಬಿಟ್ಟ. ಶೈಲರೋಮನು ಮುಷ್ಟಿಯಿಂದ ಹೊಡೆದು ಪುಷ್ಪದಂತನನ್ನು ರಣಾಂಗಣದಲ್ಲಿ ಕುಸಿದು ಬೀಳುವಂತೆ ಮಾಡಿದ. ಆಗ ಮಹಾಬಲನು ಧಾವಿಸಿ ಬಂದು ತನ್ನ ಮುದ್ಗರ ಎಂಬ ಆಯುಧದಿಂದ ಪುಷ್ಪದಂತನನ್ನು ಹೊಡೆದು ಕೆಡವಿದ. ಮರುಚಣದಲ್ಲಿ ಪುಷ್ಪದಂತನು ಎದ್ದು ಮಹಾಬಲನ ಶಿರಸ್ಸನ್ನು ಕತ್ತರಿಸಿದ. ಮತ್ತು ಕೈಯಲ್ಲಿ ಖಡ್ಗವನ್ನು ಹಿಡಿದು ಆ ಮಹಾಬಲನ ದೇಹವನ್ನು

ಸೀಳಬೇಕೆಂದು ಪುಷ್ಪದಂತನು ಮುಂದೆ ನಡೆದ. ಕತ್ತರಿಸಿ ಒಗೆಯಲ್ಪಟ್ಟ ಆ ಮಹಾಬಲನ ಶಿರಸ್ಸು ಪುಷ್ಪದಂತನನ್ನು ಕುರಿತು ನುಡಿಯಿತು - ''ರಣಹೇಡಿಯೇ, ನನ್ನೊಡನೆ ಯುದ್ಧಮಾಡುವದನ್ನು ಬಿಟ್ಟು ರುಂಡವಿಲ್ಲದ ಆ ನನ್ನ ದೇಹವನ್ನು ಸೀಳಲು ಹೊರಟ ನಿನಗೆ ನಾಚಿಕೆಯಾಗುವದಿಲ್ಲವೇ?''

ಹೀಗೆ ಅವನ ರುಂಡವು ಮಾತನಾಡುತ್ತಿರುವಾಗಲೇ ಅದರ ದಂಡವು ತನ್ನ ಎರಡೂ ಕಾಲುಗಳಲ್ಲಿ ಪುಷ್ಪದಂತನನ್ನುಗಟ್ಟಿಯಾಗಿ ಬಿಗಿದು ಹಿಡಿಯಿತು. ಆಗ ಪುಷ್ಪದಂತನು ಆ ಕಬಂಧದ ಹೊಟ್ಟೆಯನ್ನು ತನ್ನ ಖಡ್ಗದಿಂದ ಇರಿದು ಹರಿದ. ಆಗ ಆ ದೈತ್ಯಕಾಯದ ಕಬಂಧದ ಕುಕ್ಷಿಯೊಳಗಿಂದ ಅದೇ ಮಹಾಬಲ ದೈತ್ಯನು ಮತ್ತೆ ನೂರು ತಲೆಗಳನ್ನು ಹೊತ್ತು, ಇನ್ನೂರು ತೋಳು ಎರಡು ನೂರು ಕಣ್ಣುಗಳಿಂದ ಎದ್ದು ನಿಂತುಕೊಂಡ. ಪುಷ್ಪದಂತನು ಮೊದಲು ಕತ್ತರಿಸಿ ಒಗೆದ ಮತ್ತು ಆ ರಣರಂಗದಲ್ಲಿಯೇ ಬಿದ್ದು ಹೊರಳಾಡುತ್ತಲಿದ್ದ ರುಡಂವು ಉರುಳುತ್ತ ಉರುಳುತ್ತ ಆ ದಂಡದ ಬಳಿಗೆ ಬಂದಿತು. ಅದನ್ನು ನೋಡಿ ಪುಷ್ಪದಂತನು ತನ್ನ ಖಡ್ಗದಿಂದ ಆ ರುಂಡವನ್ನು ಹೊಡೆದು ಹೋಳುಮಾಡಿದ. ಆಗ ಭೂಕಂಪನ ಎಂಬ ಜ್ವರವೂ ಭಯಾವಹ ಎಂಬ ಒಬ್ಬ ದೈತ್ಯನೂ ಪುಷ್ಪದಂತನನ್ನು ಮುತ್ತಿ ಮತ್ತೆ ಮತ್ತೆ ಸುತ್ತು ಸುತ್ತಾಡಿ ಶಸ್ತ್ರಾಸ್ತ್ರಗಳಿಂದ ಚಚ್ಚತೊಡಗಿದರು. ಆಗ ಪುಷ್ಪದಂತನು ಭಯಭ್ರಾಂತನಾಗಿ ಯುದ್ಧ ಭೂಮಿಯಿಂದ ಪಲಾಯನ ಸೂತ್ರವನ್ನು ಪಠಿಸಿದ.

ಇದರಂತೆ ಕೋಲಾಹಲ ಎಂಬ ಮಹಾದೈತ್ಯನು ಮಾಲ್ಯವಂತ ಎಂಬ ಶಿವಗಣಾಧೀಶನನ್ನು ಜ್ವಲನ ಎಂಬ ಜ್ವರದ ಸಹಾಯದಿಂದ ಮಾಯಾರೂಪವನ್ನು ತೆಗೆದುಕೊಂಡು ಓಡಿಸಿಬಿಟ್ಟ. ಭಯಾನಕ ದೈತ್ಯನು ಚಂಡ ಎಂಬ ಶಿವಗಣಾಧೀಶನನ್ನು ಪಾಶದಿಂದ ಹೊಡೆದು, ಕೈಯಲ್ಲಿ ಹಿಡಿದು, ಕೈಕಾಲು ಬಿಗಿದು ಸಮುದ್ರದಲ್ಲಿ ಎಸೆದುಬಿಟ್ಟ.

ಶಿವಪುತ್ರನಾದ ಸ್ಕಂದ ಹದನ ಬಾಣಗಳಿಂದ ರಾಹುವನ್ನು ಹೊಡೆದು ಗಾಯಗೊಳಿಸಿದ. ಆಗ ರಾಹುವು ಇವನ ಯಾವ ಬಾಣಗಳನ್ನೂ ಲಕ್ಷಿಸದೇ ಸಿಂಹನಾದ ಮಾಡಿದಾಗ, ಸ್ಕಂದನು ಕೆರಳಿ ಉರಿಯುತ್ತಿರುವ ತನ್ನ ಮಹಾಶಕ್ತಿಯನ್ನೇ ಅವನ ಮೇಲೆ ಉಪಯೋಗಿಸಿದ. ಆಗ ರಾಹುವು ಒಮ್ಮೆಲೇ ಗಕ್ಕನೇ ಗಗನಕ್ಕೆ ಹಾರಿ ಆ ಶಕ್ತಿಪಾಶವನ್ನು ತಪ್ಪಿಸಿಕೊಂಡು ಆ ಶಕ್ತಿ ಆಯುಧವನ್ನು ತಿರುಗಿ ಸ್ಕಂದನ ಮೇಲೆಯೇ ತಿರುಗುಬಾಣವಾಗಿ ಬಿಟ್ಟುಬಿಟ್ಟ. ಆ ಶಕ್ತ್ಯಾಯುಧ ಮರಳಿ ಬಂದ ಅಸ್ಫೋಟನದಿಂದ ಸ್ಕಂದನ ಎದೆ ಬಲವಾಗಿ ಆಹತವಾಗಿ ಅವನ ದೇಹದಿಂದ ನೆತ್ತರು ಸುರಿಯತೊಡಗಿತು. ಹೀಗೆ ತನ್ನ ನೆತ್ತರದ ನದಿಯಲ್ಲಿ ಬಿದ್ದು ಒದ್ದಾಡಿ ಕೊನೆಗೆ ಸ್ಕಂದ ಎದ್ದು ಯುದ್ಧ ಬಿಟ್ಟು ಮನೆಗೆ ತೆರಳಿದ. ಸರ್ಪರೋಮ ಎಂಬ ದೈತ್ಯನು ಕೂಷ್ಮಾಂಡನನ್ನು ನೆತ್ತಿಯ ಮೇಲೆ ಕುಟ್ಟಿ ನೆಲಕ್ಕೆ ಬೀಳಿಸಿದ ಪಾತಾಲಕೇತು ದೈತ್ಯನು ಹಾಸ ಎಂಬ ಶೈವ ಭಕ್ತನನ್ನು ಮುದ್ಗರಾಯುಧದಿಂದ ಹೊಡೆದು ಗಾಯಗೊಳಿಸಿದ. ಆಗ ಹಾಸನ ದೇಹದಿಂದ ಒಂದು ಆನೆಯು ಹೊರಬಿದ್ದು ಪಾತಾಲಕೇತುವಿನ ಮುದ್ಗರ ಆಯುಧವನ್ನೇ ನುಂಗಿಬಿಟ್ಟಿತು. ಆಗ ಪಾತಾಲಕೇತು ಸಿಟ್ಟಿಗೆದ್ದು ಆ ಹಾಸನ ಆನೆ ಸೊಂಡೆಯನ್ನು ಹಿಡಿದು ಎಳೆದಾಡಿ ನೆಲಕ್ಕೆ ಕೆಡವಿ ಮುಷ್ಟಿಯಿಂದ ಗುದ್ದಿ ಅದನ್ನು ಕೊಂದುಹಾಕಿದ. ರೋಮಕಂಟಕನು ಶಿವನ ಅಂಗರಕ್ಷಕನಾದ ಭೃಂಗಿಯ ಮೇಲೆ

ತನ್ನ ಬಗೆಬಗೆಯ ಆಯುಧಗಳನ್ನು ಪ್ರಯೋಗಿಸಿ ನಿಶಿತವಾದ ಬಾಣಗಳನ್ನು ಬಿಟ್ಟು ಅವನ ದೇಹವನ್ನು ಜರ್ಜರಿತವನ್ನಾಗಿ ಮಾಡಿದ.

ಶುಭ್ರ ಎಂಬ ಶೈವ ವೀರನು ಕೇತು ದೈತ್ಯನೊಡನೆ ಯುದ್ಧ ಮಾಡುವಾಗ ಆ ಕೇತುವು ಬಾಯಿ ತೆರೆದು ಭೀಕರ ದೇಹದ ಆ ಶುಭ್ರನನ್ನು ನುಂಗಿಹಾಕಿದ. ಅದರಿಂದ ಶಿವಸೇನೆಯಲ್ಲಿ ಭಯಂಕರ ಕೋಲಾಹಲವಾಯಿತು.

ಜೃಂಭನಿಗೂ, ಗಣಪತಿಗೂ ಭಯಂಕರವಾದ ಯುದ್ಧವು ನಡೆಯಿತು. ಜೃಂಭನು ತನ್ನ ಕಠೋರವಾದ ಕೊಡಲಿಯಿಂದ ಗಣಪತಿಯ ಸೊಂಡೆಯನ್ನೇ ಕತ್ತರಿಸಿದ ಮತ್ತು ತನ್ನ ಶಕ್ತ್ಯಾಯುಧದಿಂದ ಆ ಲಂಬೋದರನ ಹೊಟ್ಟೆಯಲ್ಲಿ ಇರಿದ. ಅವನ ವಾಹನವಾದ ಇಲಿಯು ಬಾಣಗಳಿಂದ ಹೊಡೆತ ತಿಂದು ಗುಹೆಯಲ್ಲಿ ಓಡಿಹೋಯಿತು. ಆಗ ಗಣಪತಿಯು ರಣಭೂಮಿಯಲ್ಲಿ ಬಿದ್ದು ಹೊರಳಾಡಿ ಅಳತೊಡಗಿದ. ''ಓಹ ! ತಾಯಿ ಪಾರ್ವತಿಯೇ, ತಂದೆ ಪರಮೇಶ್ವರನೇ, ಅಣ್ಣ ಸ್ಕಂದನೇ, ವಾಹನವಾದ ಮೂಷಕವೇ ! ನನ್ನ ಬಿಟ್ಟು ಎಲ್ಲಿ ಹೋದಿರಿ?'' ಎಂದು ಗಣಪತಿಯ ರೋದನದ ಈ ಕರುಣಾಕ್ರಂದನ ರೂಪವಾದ ದನಿಯನ್ನು ಕೇಳಿ ಪಾರ್ವತಿಯ ಕರುಳು ಕುದಿದುಹೋದವು. ಆಗ ಅವಳು ತಾನಿದ್ದ ಗಿರಿ ಶಿಖರದಿಂದ ಎದ್ದು ಪರಮೇಶ್ವರನು ಇದ್ದಲ್ಲಿಗೆ ಬಂದು ಅವನಿಗೆ ಹೇಳಿದಳು.

**ಪಾರ್ವತಿ:-** ''ನಾಥ, ದೈತ್ಯರು ನನ್ನ ಮಗನಾದ ಗಣಪತಿಯನ್ನು ಕೊಲ್ಲುತ್ತಿದ್ದಾರೆ. ಸ್ಕಂದನನ್ನು ಹೊಡೆದು ಕಳಿಸಿದ್ದಾರೆ. ನೀನು ಇಲ್ಲಿಯೇ ಶಿಖರದಲ್ಲಿ ಆಟವಾಡುತ್ತ ಕುಳಿತಿರುವೆಯಲ್ಲ? ಓಡು. ಆ ಇಬ್ಬರೂ ಮಕ್ಕಳನ್ನು ರಕ್ಷಿಸು. ತ್ರಿಶೂಲ, ಪಾಶುಪತ, ಕೈವಾಸ್ತ್ರ ಮುಂತಾದ ಘೋರಾಯುಧಗಳನ್ನು ನೀನು ಇಷ್ಟು ದಿನ ಹೊತ್ತು ಬೆಳೆಸಿದ್ದು ಏತಕ್ಕಾಗಿ? ಅವುಗಳನ್ನು ಉಪಯೋಗಿಸುವ ಕಾಲ ಈಗ ಒದಗಿಬಂದಿದೆ. ಇಂಥ ಕ್ಷಣದಲ್ಲಿ ಆ ಘೋರಾಸ್ತ್ರಗಳನ್ನೆಲ್ಲ ಬಳಸು. ನನ್ನ ಮಕ್ಕಳನ್ನು ಉಳಿಸು'' ಗೌರಿಯ ಈ ನುಡಿಗಳನ್ನು ಕೇಳಿ ಮಹಾದೇವನು ವೀರಭದ್ರನನ್ನು ಕರೆದು ''ನನ್ನ ರಣವಾಹನವಾದ ಎತ್ತನ್ನು ಯುದ್ಧಕ್ಕೆ ಹೋಗಲು ಸಿದ್ಧಪಡಿಸು''. ಎಂದು ಅಪ್ಪಣೆಯನ್ನು ನೀಡಿದ. ಅವನ ಮಾತಿನಂತೆ ವೀರಭದ್ರನು ಶಿವನ ವಾಹನವಾದ ವೃಷಭದ ಎರಡೂ ಕೋಡುಗಳಿಗೆ ಕಿರೀಟ ಇಟ್ಟ. ಕೊರಳಲ್ಲಿ ನೂರು ಗಂಟೆಗಳ ಒಂದು ಮಾಲೆಯನ್ನು ಕಟ್ಟಿದ. ಎರಡೂ ಕಿವಿಗಳಿಗೆ ಕನ್ನಡಿ ಇಡಿಸಿದ. ಹೆಗಲ ಮೇಲೆ ಒಂದು ಕಿರುಗಂಟೆಗಳ ಜಾಲವುಳ್ಳ ಮಾಲೆಯನ್ನು ಹರವಿದ. ನಾಲ್ಕೂ ಕಾಲುಗಳಲ್ಲಿ ಪೈಜಣಗಳನ್ನು ಜೋಲಾಡಿಸಿ ಅದರ ಮುಖದಲ್ಲಿ ಎಂಟು ಪಾಶಗಳನ್ನು ಮಾಲಾಕಾರವಾಗಿ ಜೋತುಬಿಟ್ಟ. ಆಗ ಸ್ವಯಂ ಪಾರ್ವತಿದೇವಿಯು ಆ ಎಂಟು ಪಾಶಗಳನ್ನು ಹಿಡಿದುಕೊಂಡು ಖಡ್ಗಪಾಣಿಯಾಗಿ ಮಹಾದೇವರ ಪಕ್ಕದಲ್ಲಿ ತಾನು ಮಹಾಕಾಳಿ ರೂಪದಿಂದ ನಿಂತುಕೊಂಡಳು. ಹೀಗೆ ಶಿವನ ಯುದ್ಧವಾಹನವು ಸನ್ನದ್ಧವಾಯಿತು. ಆಗ ಪಾರ್ವತಿಯು ತನ್ನ ಕೈಯಿಂದಲೇ ಒಂದು ಘಂಟಾಮಾಲೆಯನ್ನು ತಂದು ಅದರ ಕೊರಳಿಗೆ ಹಾಕಿದಳು. ತನ್ನ ಕೈಯಿಂದಲೇ ಅದರ ಹಣೆಗೆ ತಿಲಕವಿಟ್ಟಳು. ಮತ್ತು ಅದಕ್ಕೆ ಹೇಳಿದಳು.

**ಪಾರ್ವತಿ:-** ವೃಷಭರಾಜ, ಯುದ್ಧದಲ್ಲಿ ಎಂಥ ಪ್ರಸಂಗ ಬಂದರೂ ನೀನು ಪರಮೇಶ್ವರನನ್ನು ಬಿಟ್ಟು ಬರಬೇಡ. ಎಲ್ಲ ವೈರಿಗಳನ್ನು ಗೆದ್ದು ಶಂಕರನನ್ನು ಹೆಗಲಮೇಲೆ ಹೊತ್ತುಕೊಂಡು ವಿಜಯಶಾಲಿಯಾಗಿ ಮನೆಗೆ ಮರಳಿ ಬಾ.

ಅನಂತರ ಮಹಾದೇವನು ಸಾವಿರಾರು ಆಯುಧಗಳನ್ನು ತನ್ನೊಡನೆ ತೆಗೆದುಕೊಂಡು ತನ್ನ ವಾಹನವಾದ ವೃಷಭನನ್ನು ಆರೋಹಣ ಮಾಡಿದ. ಮತ್ತು ಪಾರ್ವತಿಗೆ ಹೇಳಿದ - ''ದೇವಿ, ನಾನು ಯುದ್ಧಕ್ಕೆ ತೆರಳುತ್ತಿದ್ದೇನೆ. ನೀನು ಮನೆಯಲ್ಲಿ ಒಬ್ಬಳೇ ಇರುವೆ. ದೈತ್ಯರು ಬಹಳ ನೀಚ ಸ್ವಭಾವದವರು. ಅವರು ಹೊಂಚು ಹಾಕಿ ಕುಳಿತಿದ್ದಾರೆ. ಹೇಗಾದರೂ ಮಾಡಿ ನಿನ್ನನ್ನು ವಶಪಡಿಸಿಕೊಳ್ಳಬೇಕು ಎಂಬ ಹಂಚಿಕೆಯಲ್ಲಿ ಇರುತ್ತಾರೆ. ನಿನ್ನ ಮೇಲಿನ ಆಶೆಯಿಂದ ಅವರು ಏನು ಮಾಡಲಿಕ್ಕೂ ಹಿಂದೆ ಮುಂದೆ ನೋಡಲಾರರು. ಆದುದರಿಂದ ನೀನು ಜಾಗರೂಕಳಾಗಿರು. ನಿನ್ನ ರಕ್ಷಣೆಯನ್ನು ನೀನೇ ಮಾಡಿಕೋ'' ಹೀಗೆ ಪ್ರೀತಿಯಿಂದ ನುಡಿದು ಪರಮೇಶ್ವರನು ರಣಾಂಗಣಕ್ಕೆ ವೃಷಭಾರೂಢನಾಗಿ ಹೊರಹೊರಟ. ಮೂವತ್ತು ಸಾವಿರ ಅಬ್ಜಪ್ರಮಥರೂ ಗಣಾಧೀಶರೂ ಅವನನ್ನು ಹಿಂಬಾಲಿಸಿದರು. ಸಿಂಹವನ್ನು ಹೂಡಿದ ಒಂದು ಮಹಾರಥವನ್ನುಹತ್ತಿಕೊಂಡು ವೀರಭದ್ರನು ಪರಮೇಶ್ವರನ ಎಡಬದಿಯ ರಕ್ಷಕನಾಗಿ ನಡೆದ. ಅಶ್ವಾರೂಢನಾದ ಮಣಿಭದ್ರ ಆ ವಿರೂಪಾಕ್ಷನ ದಕ್ಷಿಣ ಪಾರ್ಶ್ವ ರಕ್ಷಕನಾಗಿ ಯುದ್ಧಕ್ಕೆ ಹೊರಟ. ಹೀಗೆ ವೃಷಭಾರೂಢನಾಗಿ ಪರಮೇಶ್ವರನು ಉತ್ತುಂಗವಾದ ಶೈಲ ಶೃಂಗದಿಂದ ಇಳಿದು ರಣರಂಗಕ್ಕೆ ಬಂದುದನ್ನು ಕಂಡು ದೈತ್ಯರೆಲ್ಲರೂ ಜಾಲಂಧರನ ಹೆಸರಿನಿಂದ ಜಯಘೋಷ ಮಾಡಿದರು. ಇಷ್ಟು ಹೊತ್ತಿನವರೆಗೆ ದೈತ್ಯರಿಂದ ಪರಾಜಿತರಾಗಿ ಓಡಿಹೋದ ಶಿವಸೇನೆಯ ಧುರೀಣರೆಲ್ಲರೂ ಆ ಚಂಡೀಪತಿಯನ್ನು ಕಂಡು ಉತ್ಸಾಹಗೊಂಡು ರಣಕ್ಷೇತ್ರಕ್ಕೆ ಮರಳಿ ಬಂದರು. ನಂದಿ, ಮಹಾಕಾಲ, ಸ್ಕಂದ, ಮಾಲ್ಯವಂತ, ಪುಷ್ಪದಂತ, ಚಂಡ, ಮದನ, ಕೂಷ್ಮಾಂಡ ಮೊದಲಾದ ಯುದ್ಧದಲ್ಲಿ ಭಗ್ನಭುಗ್ನರಾದ ಪ್ರಮಥ ಗಣಾಧೀಶರು ಮರಳಿ ಉತ್ಸಾಹದಿಂದ ಶಿವನ ಸಮೀಪಕ್ಕೆ ಬಂದು ದೈತ್ಯರೊಡನೆ ಮತ್ತೆ ಕಲಿತನದಿಂದ ಕಾದತೊಡಗಿದರು. ಮಹಾದೇವರ ಸಮಕ್ಷಮದಲ್ಲಿ ಪುನಃ ಭಯಂಕರವಾದ ಹೋರಾಟವು ದೈತ್ಯಸೇನೆ ಶಿವಸೇನೆಗಳ ಮಧ್ಯದಲ್ಲಿ ಭೀಕರವಾಗಿ ನಡೆಯಿತು. ದೈತ್ಯರೂ ಕೂಡ ಜಾಲಂಧರನಿಂದ ಪ್ರೋತ್ಸಾಹಿತರಾಗಿ ಘೋರವಾದ ಶಸ್ತ್ರಾಸ್ತ್ರಗಳಿಂದ ಶಿವಸೈನಿಕರನ್ನೆಲ್ಲ ಕೆಚ್ಚಿನಿಂದ ಕೊಚ್ಚಿಹಾಕಿದರು. ರೊಚ್ಚಿನಿಂದ ಹೊಡೆದು ಉರುಳಿಸತೊಡಗಿದರು. ಅದನ್ನು ನೋಡಿ ಕೈಲಾಸಪತಿಯು ಕ್ರುದ್ಧ ಕ್ಷುಬ್ಧನಾಗಿ ತನ್ನ ಬಾಣಗಳಿಂದ ದೈತ್ಯರನ್ನು ಹೊಡೆದು ಅಶ್ವಮೇಧವು ಎಲ್ಲ ಪಾಪಗಳನ್ನು ನಾಶಪಡಿಸುವಂತೆ ಈ ಪಾಪಿಗಳನ್ನು ನಾಶಪಡಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶುಂಭ ಮೊದಲಾದ ದೈತ್ಯರೊಂದಿಗೆ ನಂದಿ ಮುಂತಾದ ಶಿವಗಣಾಧೀಶರ ಯುದ್ಧ ಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*

—o—

## ಶಿವ ಮತ್ತು ಜಾಲಂಧರರಲ್ಲಿ ಯುದ್ಧ

**ಅಧ್ಯಾಯ - ೧೪**

**ನಾರದ :-** ಸಾಕ್ಷಾತ್ ಶಿವನೇ ಬಂದು ರಣಭೂಮಿಯಲ್ಲಿ ತನ್ನ ಸೈನಿಕರನ್ನು ಸಂಹರಿಸುತ್ತಿರುವನು ಎಂದು ತಿಳಿದು ಜಾಲಂಧರ ತಾನೇ ಬಂದ ರಣರಂಗಕ್ಕೆ ಮತ್ತು ತನ್ನ ಸಾರಥಿಯಾದ ಖಡ್ಗರೋಮನಿಗೆ ಹೇಳಿದ.

**ಜಾಲಂಧರ:-** ಸಾರಥಿ, ಸಾವಿರ ಕುದುರೆ ಹೂಡಿದ ಈ ನನ್ನ ರಥವನ್ನು ಶಿವನ ಎದುರು ಒಯ್ದು ನಿಲ್ಲಿಸು. ನಾನು ತಾಪಸನಾದ ಆ ಶಿವನನ್ನು ಕೊಂದು ಬಿಡುತ್ತೇನೆ. ಜಡೆ, ಬೂದಿ, ಮೂಳೆಗಳನ್ನು ಧರಿಸಿದ ಆ ಶಂಕರನಿಗೆ ನನ್ನೊಡನೆ ಹೋರಾಡಲು ಶಕ್ತಿ ಎಲ್ಲಿದೆ? ಎತ್ತಿನ ಹೆಗಲ ಮೇಲೆ ಹತ್ತಿ ತಿರುಗಾಡುವ ಅವನೊಬ್ಬ ಕಾಲಿಲ್ಲದ ಕುಂಟನಂತೆ. ಅವನಿಗೆ ನನ್ನ ಎದುರು ನಿಲ್ಲುವ ಶಕ್ತಿಯಾದರೂ ಎಲ್ಲಿದೆ? ಹೀಗೆ ನುಡಿದು ಕೈಯಲ್ಲಿ ಘೋರ ಬಿಲ್ಲು ಬಾಣ ಹಿಡಿದು ರಥದಿಂದ ಓಡುತ್ತ ಬಂದ ಆ ಜಾಲಂಧರ ಶಿವನಿದ್ದಲ್ಲಿಗೆ. ಆಗ ಶಿವನ ಅಂಗರಕ್ಷಕರಾದ ವೀರಭದ್ರನು ಮತ್ತು ಮಣಿಭದ್ರನು ಜಾಲಂಧರನ ಮೇಲೆ ಬಾಣವೃಷ್ಟಿಯನ್ನು ಕರೆದು ಅವನನ್ನು ಇದ್ದಲ್ಲಿಯೇ ನಷ್ಟಗೊಳಿಸಲು ಪ್ರಯತ್ನಿಸಿದರು. ಅವುಗಳನ್ನೆಲ್ಲ ಲೀಲಾಜಾಲವಾಗಿ ಪರಿಹರಿಸಿಕೊಂಡು ಜಾಲಂಧರನು ಈಶ್ವರನ ಸಮೀಪಕ್ಕೆ ಬಂದು ನುಡಿದ.

**ಜಾಲಂಧರ:-** ಮಹಾದೇವ, ನೀನು ಎಂದಾದರೂ ಶಸ್ತ್ರಾಭ್ಯಾಸ ಮಾಡಿದ್ದರೆ ನನ್ನ ಜೊತೆ ಯುದ್ಧಕ್ಕೆ ಬಾ. ಮೊದಲು ನೀನೇ ನನ್ನ ಮೇಲೆ ಶಸ್ತ್ರಪ್ರಹಾರವನ್ನು ಮಾಡು. ನೀನು ಎಷ್ಟಾದರೂ ಜಟಧಾರಿಯಾದ ತಾಪಸ. ಜಟಾಧಾರಿಗಳನ್ನು ನಾನು ಮೊದಲು ಹೊಡೆಯಲಾರೆ. ನೀನು ಮೊದಲು ಹೊಡೆದ ಬಳಿಕ ನಿನ್ನನ್ನು ಒಂದು ಕೈ ನಾನು ನೋಡುತ್ತೇನೆ.

ಹೀಗೆ ಗರ್ವದಿಂದ ನುಡಿಯುವ ಜಾಲಂಧರನ್ನು ನೋಡಿ ರುದ್ರ ಪಾರ್ಶ್ವದ ದೂತರಾದ ವೀರಭದ್ರ ಮಣಿಭದ್ರರು ಕ್ರುದ್ಧರಾಗಿ ಜಾಲಂಧರನ ಸೈನ್ಯವನ್ನು ತಮ್ಮ ಭೀಕರ ಶಸ್ತ್ರಾಸ್ತ್ರಗಳಿಂದ ಕೊಚ್ಚತೊಡಗಿದರು. ರೋಷ ರೌಸು, ರೊಚ್ಚು ಕಿಚ್ಚಿನಿಂದ ಹುಚ್ಚೆದ್ದು ದೈತ್ಯಸೇನೆಯನ್ನೆಲ್ಲ ಆ ಇಬ್ಬರೂ ವೀರರು ಅಬ್ಬರಿಸಿ ಕಡಿಕಡಿದು ಒಟ್ಟಿದಾಗ ರಣಭೂಮಿಯಲ್ಲಿ ಹೆಣಗಳ ಒಂದು ಬೆಟ್ಟವನ್ನೇ ಕಟ್ಟಿದಂತಾಯಿತು. ರಥಗಳ ಮೇಲೆ ರಥಗಳನ್ನು ತೂರಿದರು. ಕುದುರೆಗಳ ಮೇಲೆ ಕುದುರೆಗಳನ್ನು ಹೇರಿದರು. ಆನೆಗಳ ಮೇಲೆ ಆನೆಗಳನ್ನು ಪೇರಿಸಿದರು. ನೆಲದ ತುಂಬ ಹೆಣಗಳ ಹಡದಿ ಹಾಸಿದರು. ಅಲ್ಲಲ್ಲಿ ನೆತ್ತರಿದ ಹೊಂಡಗಳನ್ನು ನಿರ್ಮಿಸಿದರು. ಆ ಶೈಲಾಗ್ರದ ವಿಶಾಲವಾದ ರಣಕ್ಷೇತ್ರದಲ್ಲಿ ನೋಡಿದಲ್ಲೆಲ್ಲ ರುಂಡಗಳು, ಕಂಡಲ್ಲೆಲ್ಲ ಮುಂಡಗಳು. ಎಲ್ಲ ಕಡೆಗೂ ಖಂಡಿತವಾದ ಬಾಹು ದಂಡಗಳು. ತುಂಡರಿಸಿ ಒಗೆಯಲ್ಪಟ್ಟ ಆನೆಯ ಸೊಂಡೆ, ಕುಂಭ, ಕುದುರೆಯ ಗೋಣುಗಳು, ನಡು ಎದೆ ತಲೆ ಬಾಲಗಳು ಹೀಗೆ ಶಿವನ ಅಂಗರಕ್ಷಕರಾದ ಮಣಿಭದ್ರ ವೀರಭದ್ರರ ಕದನ ಕೋಲಾಹಲವನ್ನೂ, ಕ್ಷಣಾರ್ಧದಲ್ಲಿ ಅವರು ಮಸಣಗಟ್ಟೆಯಾಗಿ ಮಾರ್ಪಡಿಸಿದ ಸಂಗ್ರಾಮ ರಂಗಭೂಮಿಯನ್ನೂ ಕಂಡು ಜಾಲಂಧರ ಚಿಂತೋದ್ಭ್ರಾಂತರಾಗಿ ನಿಂತುಕೊಂಡ. ಶಂಕರನ ಕಿಂಕರರೇ ಇಷ್ಟು ಭಯಂಕರರಾಗಿದ್ದಾಗ ಸ್ವಯಂ ಆ ಶಿವ ಇನ್ನೆಷ್ಟು ವೀರವರೇಣ್ಯನಾಗಿ ಇರಬೇಡು ! ಹೀಗೆಂದು ವಿಚಾರಿಸಿ ಆ ಜಾಲಂಧರ ಪರಮೇಶ್ವರನತ್ತ ಮುಖ ತಿರುಗಿಸಿ ನೋಡಿದ. ಆ ತೇಜೋಮೂರ್ತಿಯ

ಮುಖಮುದ್ರೆಯೇ ಬೇರೆ. ಆ ಜಗಚ್ಚಾಲಕ ಶಕ್ತಿಯು ನಿಂತ ನಿಲುವು, ಬೆಳಗುವ ಜ್ಯೋತಿಷ್ಪುಂಜ, ದೇದಿಪ್ಯಮಾನವಾಗಿ ಬೆಳಗುವ ಕಾಂತಿಪೂರ. ಎಲ್ಲವೂ ಅನನ್ಯ ಸಾಮಾನ್ಯ ಎಂದು ಎನಿಸಿತು ಆ ದೈತ್ಯರಾಜನಿಗೆ. ತನ್ನ ಮನದಲ್ಲಿಯೇ ಜಾಲಂಧರ ಹೀಗೆ ಯೋಚಿಸಿದ-

**"ತೇಜೋನ್ಯದೇವ ನಕ್ಷತ್ರ ಶಶಾಂಕ ಸಕಲಾದಿಷು ।**
**ಉದ್ಘಾಟಿತ ಜಗತ್‌ಕೋಶ ಮನ್ಯದೇವರವೇರ್ಮಹಃ ॥**

ಮುಗಿಲು ಮಂಟಪದಲ್ಲಿಯ ಗ್ರಹ, ನಕ್ಷತ್ರ ತಾರೆ, ನೀಹಾರಿಕೆ, ಚಂದ್ರ ಮುಂತಾದ ಜ್ಯೋತಿಷ್ಪೋಮಗಳಲ್ಲಿ ಮಿಂಚುವ ಕಾಂತಿಯೇ ಬೇರೆ. ಆದರೆ ಜಗತ್ತಿನ ಕೋಶವನ್ನು ಉದ್ಘಾಟಿಸುವ ಸೂರ್ಯನ ಬೆಳಕಿನ ಬೆಟ್ಟದಂತಿರುವ ತೇಜಸ್ಸಿನ ಪ್ರಕಾರವೇ ಬೇರೆ. ಆದರೆ ನಾನು ಈಗ ಈ ಶಿವನ ಮಹಿಮೆಯನ್ನು ಚಿಂತಿಸುತ್ತ ಕೂಡಲು ಸಮಯವಿಲ್ಲ. ನಾನು ಇಲ್ಲಿಯೇ ಶಂಕರ ಹಾಗೂ ಅವನ ವೀರ ಕಿಂಕರರೊಡನೆ ಯುದ್ಧ ಮಾಡುತ್ತ ನಿಂತುಕೊಂಡರೆ ಆ ಗೌರಿಯನ್ನು ನೋಡುವದೆಂತು? ಕಣ್ಮನಗಳನ್ನು ತಣಿಸುವ ಅವಳ ಲೋಕೋತ್ತರ ಲಾವಣ್ಯದ ಬಗ್ಗೆ ನಾರದ ಬಹಳಷ್ಟು ಬಣ್ಣಿಸಿ ಮಾಡಿ ಹೇಳಿದ್ದ. ಅವಳನ್ನು ಹೇಗಾದರೂ ಮಾಡಿ ನಾನು ಈಗಲೇ ನೋಡಬೇಕೆಂದು ನನ್ನ ಹೃದಯ ತುಡಿಯುತ್ತಿದೆ. ಕಣ್ಣು ತವಕಿಸುತ್ತಿದೆ. ಈಗ ನಾನು ಈ ಮಹಾದೇವನ ಪ್ರಚಂಡ ಸೇನೆಯೊಂದಿಗೆ ಹೋರಾಡುತ್ತ ಈ ರಣರಂಗದಲ್ಲಿ ನಿಂತರೆ ಶೃಂಗಾರಮೂರ್ತಿಯಂತಿದ್ದ ಆ ಅಂಗನಾಮಣಿಯನ್ನು ನೋಡಿ ನನ್ನ ಕಂಗಳಿಗೆ ಪಾರಣೆಯನ್ನು ಮಾಡುವದೆಂತು? ಬಿಟ್ಟು ಹೋದರೆ ಇಲ್ಲಿ ಯುದ್ಧದ ಗತಿ ಏನು? ಅದಕ್ಕಾಗಿ ಈಗ ಒಂದು ಹಂಚಿಕೆಯನ್ನು ಮಾಡಬೇಕು. ಮೊದಲು ಈಗ ಆ ರೂಪರಾಣಿಯನ್ನು ಮನದಣಿಯ ನಾನು ನೋಡಿ ಬರಬೇಕು. ಅನಂತರ ಈ ಕಪಾಲಿಯೊಡನೆ ಕಲಿತನದಿಂದ ಕಾದಿ ಅವನನ್ನು ಕೊಲ್ಲಬೇಕು." ಹೀಗೆ ಮನಸ್ಸಿನಲ್ಲಿ ಅವನು ನಿರ್ಧರಿಸಿದ. ಅನಂತರ ಆ ಜಾಲಂಧರನು ಶುಂಭನನ್ನು ಕರೆದು ಹೇಳಿದ.

**ಜಾಲಂಧರ:-** ದೈತ್ಯಾಗ್ರೇಸರನಾದ ಶುಂಭ, ನೀನು ವೀರವರೇಣ್ಯ. ನಿನ್ನ ಪರಾಕ್ರಮವು ನನ್ನ ಶೌರ್ಯಕ್ಕೆ ಸರಿಸಮಾನವಾಗಿಯೇ ಇದೆ. ಸಮರಾಂಗಣದಲ್ಲಿ ಗೆಲುವಿನ ಮಾಲೆಯನ್ನು ಪಡೆಯಲು ನೀನು ನನ್ನಂತೆಯೇ ಚಂಡಪ್ರಚಂಡ. ಆದ್ದರಿಂದ ಈಗ ನೀನು ನನ್ನಂತೆಯೇ ರೂಪವನ್ನು ತೆಗೆದುಕೊಂಡು ನೀನೇ ನಾನಾಗಿ ಈ ಶಿವಸೇನೆಯೊಂದಿಗೆ ಹೋರಾಟವನ್ನು ನಡೆಸು. ಈ ಯುದ್ಧದ ಭಾರವನ್ನೆಲ್ಲ ನಿನ್ನ ತಲೆಯ ಮೇಲೆಯೇ ಇರಿಸಿದ್ದೇನೆ. ನನ್ನ ಸೈನ್ಯ ರಕ್ಷಣೆಯ ಹೊರೆಯನ್ನು ನಿನ್ನ ಮೇಲೆಯೇ ಹೊರಿಸಿದ್ದೇನೆ. ನಾನು ಈಗ ನನ್ನ ಮನಸ್ಸನ್ನು ಕದ್ದ ಆ ಪಾರ್ವತಿಯನ್ನು ನೋಡಲು ಹೋಗಬೇಕಾಗಿದೆ. ನನ್ನ ಮನಸ್ಸು ಎಂದೋ ಅವಳ ಬಳಿ ಹೋಗಿದೆ. ಈಗ ನನ್ನ ದೇಹ ಕೂಡ ಮನಸ್ಸು ಇದ್ದಲ್ಲಿ ಹೋಗಿ ಅವಳನ್ನು ಕಣ್ಣು ತುಂಬ ನೋಡಲು ತವಕಿಸುತ್ತಿದೆ. ನೀನು ಮಾತ್ರ ಈ ಸಂಗ್ರಾಮಂಗಣದಲ್ಲಿ ನನ್ನದೇ ರೂಪ, ವೇಷ, ಭಾಷೆ, ಅಲಂಕಾರ ಎಲ್ಲವನ್ನೂ ಧರಿಸಿ ನೀನೇ ನಾನಾಗಿ ಈ ಮಹಾಯುದ್ಧವನ್ನು ಮುಂದುವರೆಸು.

ಹೀಗೆ ಹೇಳಿ ಜಾಲಂಧರನು ತನ್ನ ಮೈಮೇಲೆ ಹಾಕಿಕೊಂಡ ಪಟ್ಟೆ, ಪೀತಾಂಬರ, ಅಲಂಕಾರ, ವಸ್ತ್ರ, ವಡವೆ ಕಿರೀಟ, ಕುಂಡಲ, ಕವಚ, ಅಸ್ತ್ರ, ಶಸ್ತ್ರ, ಸಾರಥಿ, ರಥ ಎಲ್ಲವನ್ನೂ ಶುಂಭ ದೈತ್ಯನಿಗೆ ತೆಗೆದುಕೊಟ್ಟು ತಾನು ದುರ್ವಾರಣ ಎಂಬ ತನ್ನ ಮೆಚ್ಚಿನ ಸೇವಕನೊಂದಿಗೆ

ಯುದ್ಧಕ್ಷೇತ್ರವನ್ನು ಬಿಟ್ಟು ಮಾನಸೋತ್ತರ ಶೈಲದ ಮೇಲುಭಾಗದಲ್ಲಿ ಇದ್ದ ಗುಪ್ತವಾದ ಗುಹಾ ಪ್ರದೇಶಕ್ಕೆ ನಡೆದು ಬಂದ. ಜಾಲಂಧರನು ಪರಮೇಶ್ವರನ ರೂಪವನ್ನೂ, ದುರ್ವಾರಣನು ನಂದಿಯ ರೂಪವನ್ನು ಧರಿಸಿ ಆ ಮಾನಸೋತ್ತರ ಶೈಲವನ್ನೂ ಏರಿ ಹೋದರು. ಈ ಛದ್ಮವೇಷದ ನಂದಿ ಕಪಟ ನಂಜುಂಡ ಇಬ್ಬರೂ ಪಾರ್ವತಿದೇವಿಯು ಗೆಳತಿಯರೊಡನೆ ವಾಸಮಾಡಿದ ಮಾನಸೋತ್ತರ ಶಿಖರಪ್ರದೇಶಕ್ಕೆ ಮೆಲ್ಲಮೆಲ್ಲನೇ ಆಗಮಿಸಿದರು. ಈ ಮಾಯಾವಿಮಹದೇವನ ಮೈ ಎಲ್ಲವೂ ಬಾಣಪ್ರಹಾರದಿಂದ ಛಿನ್ನಭಿನ್ನವಾಗಿತ್ತು. ಉಟ್ಟುಕೊಂಡ ಬಟ್ಟೆ ಎಲ್ಲವೂ ನೆತ್ತರಿನಲ್ಲಿ ನೆಂದು ರಕ್ತದಲ್ಲಿಯೇ ಮಿಂದು ಬಂದಂತಾಗಿತ್ತು. ಯುದ್ಧದಲ್ಲಿಯ ಶಸ್ತ್ರಾಸ್ತ್ರ ಪ್ರಹಾರದಿಂದ ಗಾಯಗೊಂಡು ಆ ಮಹಾದೇವ ನಂದಿಯ ಹೆಗಲನ್ನು ಹಿಡಿದುಕೊಂಡು ಮೆಲ್ಲಮೆಲ್ಲನೇ ಕುಂಟುತ್ತ ಕುಸಿಯುತ್ತ ನಿತ್ರಾಣನಾಗಿ ಕ್ಷೀಣ ಕ್ಷೀಣನಾಗಿ ಬರುತ್ತಿರುವದನ್ನು ದೂರದಿಂದಲೇ ಪಾರ್ವತಿ ನೋಡಿ ಆಶ್ಚರ್ಯಚಕಿತಳಾದಳು ಅವಳ ಜಯಾ ಮೊದಲಾದ ಗೆಳತಿಯರು ಸಂಭ್ರಮದಿಂದ ಮಾಯಾಶಂಕರನಿದ್ದಲ್ಲಿಗೆ ಓಡಿಬಂದು ದುಃಖದಿಂದ ಬಿಕ್ಕುತ್ತ ಕೇಳಿದರು.

**ಸಖಿಯರು:-** ದೇವತೆಗಳ ಒಡೆಯನಾದ ಪರಮೇಶ್ವರ, ನಿನಗೆ ಏನು ಆಗಿದೆ? ನಿನ್ನನ್ನು ಸಂಗ್ರಮದಲ್ಲಿ ಯಾರು ಸೋಲಿಸಿದರು? ಮೈತುಂಬ ಗಾಯಗಳನ್ನು ಮಾಡಿಕೊಂಡು ಸಂಸಾರಿ ಮನುಷ್ಯನಂತೆ ನೀನು ಕೂಡ ಅಳುತ್ತಲಿರುವೆಯಲ್ಲ? ಇದು ಹೇಗೆ?

ಗೌರಿಯ ಗೆಳತಿಯರ ಈ ಒಲವಿನ ನುಡಿಗಳನ್ನು ಕೇಳಿ ದೀನವದನನಾದ ಆ ಗಿರಿಜಾ ರಮಣನು ತನ್ನ ಮೈ ಮೇಲಿನ ವಾಸುಕಿ, ಚಂದ್ರ ಮುಂತಾದ ಆಭರಣಗಳನ್ನೆಲ್ಲ ಒಂದೊಂದಾಗಿ ತೆಗೆದು ಆ ಗೆಳತಿಯರ ಕೈಯಲ್ಲಿ ಕೊಟ್ಟ. ಮತ್ತು ಕಡಿದು ಒಗೆದ ಸ್ಕಂದ ಹಾಗೂ ಗಣಪತಿಯರ ಎರಡು ರುಂಡಗಳನ್ನೂ, ಹರಿದ ಹೊಟ್ಟೆಗಳನ್ನೂ ಪಾರ್ವತಿಯ ಮುಂದೆ ಇರಿಸಿದ. ಅದನ್ನು ನೋಡಿ ಅಂಬಿಕಾದೇವಿಯು- 'ಹಾ ಸ್ಕಂದ ! ಅಯ್ಯೋ ಗಣೇಶ ! ಹಾ ! ರುದ್ರ ! ಎಂದು ಮುಂತಾಗಿ ದೀನ ದೀನಳಾಗಿ ರೋದಿಸಿದಳು. ಅದನ್ನು ನೋಡಿ ಸತೀದೇವಿಯ ಎಲ್ಲ ಸಖಿಯರೂ ದುಃಖತಪ್ತರಾಗಿ ವಿಲಪಿಸಿದರು.

ಆಗ ಕಪಟ ನಂದಿಯು ಜಯಾ ಎಂಬ ಪಾರ್ವತಿಯ ಸಖಿಗೆ ಹೇಳಿದ.

**ನಂದಿ:-** ಮಣಿಭದ್ರ, ವೀರಭದ್ರ, ಪುಷ್ಪದಂತ, ಚಂಡೀ, ಭೃಂಗೀ, ಕಿಟ, ಮಹಾಕಾಲ, ದಂಭನ, ಧೂಮತಿಮಿರ, ಕೂಷ್ಮಾಂಡ, ಶೃಂಖಲೀ, ಕಿರೀಟ ಮುಂತಾದ ಶಿವಸೇನೆಯ ಸೇನಾಪತಿಗಳೆಲ್ಲರೂ ರಣಾಂಗಣದಲ್ಲಿ ಹತಪಚಿತರಾಗಿ ಬಿದ್ದಿದ್ದಾರೆ. ಸಮರಭೂಮಿಯಲ್ಲಿ ನಾನು ಸಂಚರಿಸುವಾಗ ಅಲ್ಲಿಯೇ ಸತ್ತುಬಿದ್ದ. ಈ ಸ್ಕಂದ ಹಾಗೂ ಗಣಪತಿಗಳ ಶಿರಸ್ಸನ್ನೂ, ಉರಸ್ಸನೂ ನಾನು ಎತ್ತಿಕೊಂಡು ಬಂದೆ. ನಮ್ಮ ನಿಮ್ಮ ಪುಣ್ಯದಿಂದ ಶಸ್ತ್ರಾಘಾತದಿಂದ ಗಾಯಗೊಂಡರೂ ಬದುಕಿ ಉಳಿದ ಈ ಶಂಕರನನ್ನು ನಾನು ಹೇಗೋ ಪಾರು ಮಾಡಿಕೊಂಡು ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ. ಇನ್ನು ಮೇಲೆ ಈ ಶಿವನನ್ನು ರಕ್ಷಣೆ ಮಾಡುವ ಭಾರ ನಿಮ್ಮ ಮೇಲೆ.

ಹೀಗೆ ನುಡಿದು ಆ ಕಪಟ ನಂದಿಯು ಸ್ಕಂದ ಗಣೇಶರ ಛಿನ್ನವಿಚ್ಛಿನ್ನವಾದ ದೇಹದ ಭಾಗಗಳನ್ನು ಪಾರ್ವತಿಯ ಎದುರು ಇಟ್ಟ. ಆಗ ಆ ಅಂಬಿಕಾದೇವಿಯು ಆ ತನ್ನ ಇಬ್ಬರೂ ಮಕ್ಕಳ ತಲೆಗಳನ್ನು ಕೈಯಲ್ಲಿ ಹಿಡಿದುಕೊಂಡು ತೊಡೆಯ ಮೇಲೆ ಇಟ್ಟುಕೊಂಡು ದೊಡ್ಡ ಧ್ವನಿಯಿಂದ ಅತ್ತು ಶೋಕ ಮಾಡತೊಡಗಿದಳು.

**ಪಾರ್ವತಿ:-** ತಾರಕನ ವೈರಿಯಾದ ಸ್ಕಂದ, ನಿನ್ನಂಥ ವೀರಾಧಿವೀರನನ್ನು ಆ ಜಾಲಂಧರನು ಯುದ್ಧದಲ್ಲಿ ಹೇಗೆ ಗೆದ್ದ? ನೀನು ಹೇಗೆ ಬಿದ್ದೆ? ನೀನು ಮೂರು ದಿನಗಳ ಹಸುಗೂಸು ಆಗಿದ್ದಾಗಲೇ ದೇವತೆಗಳು ಸೇನಾಪತಿ ಪಟ್ಟದಲ್ಲಿ ನಿನಗೆ ಅಭಿಷೇಕ ಮಾಡಿದರು. ಆ ಎಳೆಕಂದನಾದ ನೀನು ಪ್ರಚಂಡ ಪರಾಕ್ರಮಿಯಾದ ತಾರಕಾಸುರನನ್ನು ತುಂಡರಿಸಿ ಹಾಕಿದೆ. ಅಂಥ ನೀನು ಈಗ ಈ ಜಾಲಂಧರನಿಂದ ಸೋಲನ್ನು ಹೇಗೆ ಅಪ್ಪಿದೆ? ಈ ನೀಲಕಂಠನು ಪುತ್ರನಾದ ನಿನ್ನನ್ನು ಯುದ್ಧದಲ್ಲಿ ರಕ್ಷಿಸಲಿಲ್ಲವೆ? ಪುತ್ರ, ಸೊಸೆಯ ಮುಖವನ್ನು ಕಾಣುವ ಭಾಗ್ಯ ನನಗೆ ಇನ್ನು ಇಲ್ಲದಂತಾಯಿತು. ವಿಘ್ನರಾಜನಾದ ಗಣಪತಿಯೇ, ಸರ್ವಸಿದ್ಧರಿಂದ ಪೂಜಿತನಾದ ನಿನ್ನನ್ನು ಗೆದ್ದವರಾದರೂ ಯಾರು? ಕೊಂದವನಾದರೂ ಯಾರು? ನಿನ್ನ ವಾಹನವಾದ ಆ ಇಲಿಯನ್ನು ಯಾರು ಹಿಂಸಿಸಿದರು?

ಹೀಗೆ ಬಗೆಬಗೆಯಿಂದ ರೋದಿಸಿ ಆ ರುದ್ರಾಣಿಯು ಅತ್ಯಂತ ದುಃಖಿತನಾದ ಮಹಾದೇವನನ್ನು ಕುರಿತು ಹೇಳಿದಳು.

**ಪಾರ್ವತಿ:-** ಭಗವನ್, ನೀನು ಸಾಕ್ಷಾತ್ ರುದ್ರ. ದೇವತೆಗಳಿಗೆಲ್ಲ ಒಡೆಯ. ಪ್ರಾಣಿಗಳನ್ನೆಲ್ಲ ಸಂಹಾರ ಮಾಡುವವನು ನೀನೇ. ನಿನಗೆ ಎತರ ಭಯ. ಜಾಲಂಧರನಿಂದ ಹೊಡೆತ ತಿಂದ ಆ ನಿನ್ನ ಎತ್ತು ಎತ್ತ ಹೋಯಿತು? ಜಾಲಂಧರನ ನಿಶಿತವಾದ ಬಾಣಗಳಿಂದ ನಿನ್ನ ದೇಹವೆಲ್ಲವೂ ಜರ್ಜರಿತ ಆಗಿ ಹೋಗಿದೆ. ನಿನಗೆ ಪ್ರಿಯವಾಗುವಂತೆ ನಾನು ಏನು ಮಾಡಲಿ?

ಪಾರ್ವತಿಯ ಈ ನುಡಿಯನ್ನು ಕೇಳಿ ಮಾಯಾ ಶಂಕರನು ನಿಟ್ಟುಸುರು ಬಿಟ್ಟು ನುಡಿದ.

**ಕಪಟ ಶಂಕರ:-** ಪ್ರಿಯೆ, ಸತ್ತುಹೋದ ಪುತ್ರರನ್ನು ಕುರಿತು ಇಷ್ಟೇಕೆ ಶೋಕ ಮಾಡುವೆ? ಈಗ ನನ್ನ ಕಡೆಗೆ ನೋಡು. ಸತ್ತವರಂತೂ ಹೇಗೂ ಸತ್ತು ಹೋಗಿದ್ದಾರೆ. ಜೀವಂತವಿದ್ದ ನನ್ನ ದುಃಖವನ್ನು ಕಡಿಮೆ ಮಾಡು. ಈಗಲೇ ನಿನ್ನ ಅಂಗಸಂಗವನ್ನು ನೀಡು. ನಾನು ಆತುರನಾಗಿ ಬಂದಿದ್ದೇನೆ. ನಾನು ಬದುಕುವದೂ ನಿನ್ನ ಅಂಗಸಂಗದಿಂದಲೇ.

**ಪಾರ್ವತಿ:-** ದೇವ, ಈ ಮಾತು ನಿನಗೆ ಉಚಿತವಲ್ಲ.

**"ಮಹಾವಿಷಾದೇ ಪತಿತೇ ಭಯೇಚ ಕೃತೇ ಸಮಾಧೌ ವಮನೇ ಮಹಾಜ್ವರೇ**
**ಶ್ರಾದ್ಧೇ ಪ್ರಯಾಣೇ ಗುರುವೃದ್ಧ ಸನ್ನಿಧೌ ರತಿಂಬುಧಾಃ ಶಂಕರ ವರ್ಜಯಂತಿ"**

ಭಯಂಕರ ದುಃಖ, ಭಯ, ಅಪಾಯ, ತಪಸ್ಸಮಾಧಿ, ವಾಂತಿ, ಜ್ವರ, ಶ್ರಾದ್ಧ, ಪ್ರವಾಸ, ಗುರುಹಿರಿಯರ ಸನ್ನಿಧಾನ ಮುಂತಾದ ಸಂದರ್ಭಗಳಲ್ಲಿ ವಿವೇಕಿಗಳಾದವರು ರತಿವಿಹಾರಾದಿಗಳನ್ನು ವರ್ಜಿಸುತ್ತಿದ್ದಾರೆ. ಈಗ ಪುತ್ರಶೋಕದಿಂದ ಭಯಂಕರ ದುಃಖಸಂತಪ್ತಳಾಗಿ ಬಾಡಿದ ಮುಖದಿಂದ ಕಣ್ಣೀರಿನ ಕೋಡಿಯನ್ನು ಹರಿಸುತ್ತಿರುವ, ದೀನ ದೂನಳಾದ ನನ್ನನ್ನು ರತಿಕ್ರೀಡೆಗೆ ಬಾ ಎಂದು ಹೇಗೆ ಕರೆಯುತ್ತಲಿರುವೆ?

ಗೌರಿಯ ಮಾದಕ ಮೋಹಕವಾದ ಸೌಂದರ್ಯವನ್ನು ಕಂಡು ಮುಗ್ಧನಾಗಿ ಹೋದ ಆ ಮಾಯಾ ಮಹೇಶ್ವರನು ಅವಳ ಈ ಮಾತುಗಳನ್ನು ಕೇಳಿ ತುಸು ನಿಷ್ಠುರವಾಗಿಯೇ ನುಡಿದ.

**ಕಪಟ ಶಂಕರ:-** ಸುಂದರಿ, ಕಾಮಪೀಡಿತನಾದ ಪತಿಯ ರತಿಯ ಅಭಿಲಾಷೆಯನ್ನು ಪೂರೈಸದಿರುವ ಸ್ತ್ರೀಯರು ಘೋರವಾದ ರೌರವ ನರಕದಲ್ಲಿ ಬೀಳುತ್ತಾರೆ. ಇದರಲ್ಲಿ ಸಂದೇಹವೇ ಇಲ್ಲ ನಾನಂತೂ ಈ ಯುದ್ಧದಲ್ಲಿ ನನ್ನ ಪರಿವಾರವಾದ ಎಲ್ಲ ಗಣಗಳನ್ನೂ ಕಳೆದುಕೊಂಡಿದ್ದೇನೆ. ಪುತ್ರಶೂನ್ಯನಾಗಿದ್ದೇನೆ. ಬುದ್ಧಿಶೂನ್ಯನೂ ಆಗಿದ್ದೇನೆ. ಈಗ ನಿನ್ನ ಈ ನಿಷೇಧ ವಚನದಿಂದ ಪತ್ನೀಶೂನ್ಯನೂ ಆದಂತೆ ಆಯಿತು. ಒಟ್ಟಿನ ಮೇಲೆ ನಾನು ಈಗ ಸರ್ವ ಶೂನ್ಯ. ನಾನು ಇನ್ನು ಮೇಲೆ ಪ್ರಾಣಶೂನ್ಯನೇ ಆಗಿ ಬಿಡುತ್ತೇನೆ. ಪ್ರಾಣವನ್ನು ಪರಿತ್ಯಾಗ ಮಾಡುವ ಮುನ್ನ ನಿನ್ನನ್ನು ಒಂದು ಮಾತು ಕೇಳಿ, ಸಾಯುವ ಮುನ್ನ ಕೊನೆಯದಾಗಿ ನಿನ್ನ ಅಂಗಸಂಗವನ್ನು ಹೊಂದಿ ಜೀವವನ್ನು ಬಿಡಬೇಕೆಂದು ಬಂದಿದ್ದೆ. ಆ ನನ್ನ ಇಚ್ಛೆಯೂ ಪೂರ್ಣವಾಗಲಿಲ್ಲ. ಇನ್ನು ಮೇಲೆ ನನ್ನ ಮನೆಗೆ ಹೋಗಿ ಈ ಜೀವಿತವನ್ನು ಕೊನೆಗೊಳಿಸುತ್ತೇನೆ. ನಂದಿಯೇ ಏಳು. ತೀರ್ಥಕ್ಕೆ ಹೋಗಲು ದಾರಿ ತೋರಲು ಮುಂದಾಗು. ಪ್ರಾಣಕಾಂತೆಯೇ, ನೀನು ನಿನ್ನ ಇಚ್ಛೆಯಂತೆ ಬೇಕಾದಲ್ಲಿಗೆ ಹೋಗು. ನಿನ್ನ ಶರೀರವನ್ನಾದರೂ ತ್ಯಾಗ ಮಾಡು ಹೀಗೆ ಕಪಟ ಶಂಕರನು ನಿಷ್ಠುರ ನಿರ್ದಯ ನುಡಿಗಳನ್ನು ಕೇಳಿ ಪಾರ್ವತಿಗೆ ಭಯಂಕರ ದುಃಖವಾಯಿತು. ದೀರ್ಘವಾದ ನಿಟ್ಟಿಸಿರುಬಿಟ್ಟು ಶೋಕಾತಿರೇಕದಿಂದ ಅವಳು ಏನನ್ನೂ ಮಾತನಾಡದೇ ಕಲ್ಲಾಗಿ ಕುಳಿತುಬಿಟ್ಟಳು. ಅದರಿಂದ ಅವಳಿಗೆ ಯಾವ ದುಃಖದ ಕಲ್ಪನೆಯೂ ಬಾರದೇ ಹೋಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಿವ ಮತ್ತು ಜಾಲಂಧರರಲ್ಲಿ ಯುದ್ಧ ಎಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*



## ಜಾಲಂಧರನು ಪಾರ್ವತಿಗೆ ಮೋಸ ಮಾಡಿದ್ದನ್ನು ತಿಳಿದು ವಿಷ್ಣುವಿನ ಪ್ರತೀಕಾರದ ಉದ್ಯೋಗ | ಅಧ್ಯಾಯ - ೧೫

**ಧರ್ಮರಾಜ:-** ಕಪಟ ಶಿವನಿಂದ ಪಾರ್ವತಿಯು ಮೋಹಿತಳಾದ ಬಳಿಕ ಮುಂದೆ ಏನು ಆಯಿತು? ಅದನ್ನು ನನಗೆ ಹೇಳಿರಿ.

**ನಾರದ:-** ಹಾಲ್ಗಡಲಿನಲ್ಲಿ ಹಾಯಾಗಿ ಪವಡಿಸಿದ ಹರಿಯ ಹೃದಯ ಏಕೋ ಒಮ್ಮೆಲೇ ಪ್ರಕ್ಷುಬ್ಧವಾಯಿತು. ಕಣ್ಣುಗಳಲ್ಲಿ ನೀರು ತುಂಬಿದವು. ಬಗೆ ಬಗೆಯ ಅಪಶಕುನಗಳು ತಲೆದೋರಿದವು. ಒಮ್ಮೆಲೇ ಹಾವಿನ ಹಾಸಿಗೆಯಿಂದ ಎದ್ದು ಕುಳಿತ ಆ ಶ್ರೀ ಹರಿ. ಅವನ ಎದುರಿಗೆ ನಾನೂ ಹಾಗೂ ವಾಯು ಇಬ್ಬರೂ ನಿಂತುಕೊಂಡಿದ್ದೆವು. ಕೂಡಲೇ ಗರುಡನನ್ನು ನೆನೆದ ಆ ಗೋವಿಂದ. ಅವನ ನೆನೆಯುವಿಕೆಯ ನೆರಳನ್ನು ಹಿಡಿದೇ ಓಡಿ ಬಂದ ಆ ವೈನತೇಯ. ಕೈ ಮುಗಿದು ನಿಂತ. ಅವನಿಗೆ ಅಪ್ಪಣೆ ಮಾಡಿದ ಶ್ರೀ ರಮಣ.

**ಶ್ರೀಹರಿ:-** ಸುಪರ್ಣ, ನೀನು ಈಗ ಯುದ್ಧರಂಗಕ್ಕೆ ಹೋಗು. ಜಾಲಂಧರನು ಬದುಕಿರುವನೋ ಸತ್ತಿರುವನೋ? ಮಹಾದೇವನು ಆ ದೈತ್ಯನಿಂದ ಮೋಹಿತ ನಾಗಿರುವನೋ ಹೇಗೆ? ಇದೆಲ್ಲವನ್ನು ನನಗೆ ನೋಡಿಕೊಂಡು ಬಂದು ತಿಳಿಸು. ಜಾಲಂಧರ

ಹಾಗೂ ಮಹೇಶ್ವರರ ಯುದ್ಧವನ್ನು ನೋಡಲು ನೀನೊಬ್ಬನೇ ಸಮರ್ಥ. ಶಸ್ತ್ರಾಸ್ತ್ರಗಳಿಂದ ಭೀಕರವಾದ ಯುದ್ಧ ನಡೆದಾಗ ನೀನು ಅಲ್ಲಿಗೆ ಹೋಗಿ ಯಾರ ಶಸ್ತ್ರಾಸ್ತ್ರಗಳೂ ತಾಕದಂತೆ ಚತುರತೆಯಿಂದ ಎಲ್ಲ ಕಡೆಗೆ ತಿರುಗಾಡಿ ಪಾರ್ವತಿಯ ಪರಿಸ್ಥಿತಿಯನ್ನೂ ಕೂಡ ಅರಿತುಕೊಂಡು ಬಂದು ನನಗೆ ಎಲ್ಲ ಇತ್ಥಂಭೂತಿ ಸಮಾಚಾರವನ್ನು ಅರುಹು.

ಹೀಗೆ ಹೇಳಿ ಕೆಲವು ಗುಳಿಗೆಗಳನ್ನು ಗರುಡನಿಗೆ ಕೊಟ್ಟು ಹೇಳಿದ - ''ಗರುಡ, ನಾನು ಕೊಟ್ಟ ಈ ಸಿದ್ಧ ವಟಿಕೆಗಳನ್ನು ನೀನು ಬಾಯಲ್ಲಿ ಹಾಕಿಕೋ. ಇದರಿಂದ ನಿನಗೆ ಅದೃಶ್ಯರೂಪ ಬಂದು ಗುಪ್ತನಾಗಿದ್ದ ನಿನಗೆ ಯಾವದೇ ತರದ ಭ್ರಾಂತಿ, ಮಾಯ, ಮೋಹ ಉಂಟಾಗುವದಿಲ್ಲ.'' ಎಂದು ತಿಳಿಸಿದ ಶ್ರೀಹರಿಯ ಆದೇಶದಂತೆ ಗರುಡನು ಆ ಗುಳಿಗೆಯನ್ನು ನುಂಗಿ ಶ್ರೀಹರಿಗೆ ಪ್ರದಕ್ಷಿಣೆ ನಮಸ್ಕಾರ ಹಾಕಿ ಅಲ್ಲಿಂದ ಗಗನಕ್ಕೆ ಗಕ್ಕನೇ ನೆಗೆದ. ಅನಂತರ ಮುಗಿಲಿನ ಮಾರ್ಗದಿಂದಲೇ ಅತ್ಯದ್ಭುತವಾದ ವೇಗಗತಿಯಿಂದ ರಣಕ್ಷೇತ್ರಕ್ಕೆ ಬಂದ.ಅಲ್ಲಿ ನಡೆದ ಸಮಾಚಾರವನ್ನೆಲ್ಲ ಸೂಕ್ಷ್ಮವಾಗಿ ನೀರಿಕ್ಷಿಸಿದ. ಅವನು ಅಲ್ಲಿ ಇದ್ದದ್ದು ಮಾತ್ರ ಯಾರಿಗೂ ಗೊತ್ತಾಗಲಿಲ್ಲ. ಅಲ್ಲಿಂದ ಆ ಗರುಡನು ಮತ್ತೆ ಉಡ್ಡಾಣ ಮಾಡಿದ. ಮಾನಸೋತ್ತರ ಪರ್ವತದಲ್ಲಿ ಬಂದು ಇಳಿದ. ಆ ಶೈಲವು ಅತ್ಯಂತ ಎತ್ತರವಾಗಿದ್ದು ಗಾಳಿ ಕೂಡ ಅಲ್ಲಿ ಪ್ರವೇಶ ಮಾಡುವಂತಿರಲಿಲ್ಲ. ಅಲ್ಲಿ ಹೋಗಿ ಎಲ್ಲ ಕಡೆಗೂ ಹುಡುಕುಗಣ್ಣುಗಳಿಂದ ನಿರೀಕ್ಷಿಸಿದ. ಅವನಿಗೆ ಅಲ್ಲಿ ಎಲ್ಲಿಯೂ ಗೌರಿ ಇದ್ದ ಸ್ಥಾನ ಗೋಚರವಾಗಲಿಲ್ಲ. ಅವನು ಮತ್ತೆ ಮುಂದೆ ಹೋಗಿ ಹುಡುಕಾಡಿದ.

ಅಲ್ಲಿ ಒಂದು ಕಡೆಯಿಂದ ಕಲಲ ಧ್ವನಿಯು ಕೇಳಿಬಂದಿತು. ಧ್ವನಿ ಬರುವಲ್ಲಿಗೆ ಮೆಲ್ಲಮೆಲ್ಲನೆ ನಡೆದ ಆ ಪಕ್ಷಿರಾಜ. ಅಲ್ಲಿ ಅವನಿಗೆ ಕಪಟ ಶಂಕರ ಕಾಣಿಸಿದ. ಆಗ ಗರುಡನು ವಿಷ್ಣು ಕೊಟ್ಟ ಮತ್ತೊಂದು ಗುಟಿಕೆಯನ್ನು ಬಾಯಲ್ಲಿ ಹಾಕಿಕೊಂಡ ಅವನಿಗೆ ಅಲ್ಲಿ ನಡೆದ ಕಪಟನಾಟಕವೆಲ್ಲವೂ ಸ್ಪಷ್ಟವಾಗಿ ಗೋಚರವಾಯಿತು. ಇವನು ಮಹಾದೇವನು ಅಲ್ಲ. ಜಾಲಂಧರನೇ ಶಿವನ ವೇಷದಲ್ಲಿ ಬಂದಿದ್ದಾನೆ ಎಂದು ತಿಳಿಯಿತು. ಅಯ್ಯೋ ಎಂಥ ಕಷ್ಟಕಾಲ ಎಂದು ನುಡಿದು ಅಳುತ್ತ ಅವನು ಕ್ಷೀರಸಾಗರಕ್ಕೆ ಮರಳಿ ಬಂದ. ಭಗವಂತನ ಮುಂದೆ ಅಲ್ಲಿ ನಡೆದ ಸುದ್ದಿಯನ್ನೆಲ್ಲ ಹೇಳಿದ - ''ಭಗವನ್ ಪಾಪಿಯಾದ ಆ ಜಾಲಂಧರನು ಕಪಟ ಶಂಕರ ರೂಪದಿಂದ ಪಾರ್ವತೀದೇವಿಯನ್ನು ವಂಚಿಸಿದ್ದಾನೆ. ಈಗ ನೀನು ಆ ರಣಭೂಮಿಗೆ ಹೋಗು. ಜಾಲಂಧರನ ಜೊತೆಗೆ ಮಾಯಾ ಯುದ್ಧವನ್ನು ಮಾಡು. ಸತೀದೇವಿಯನ್ನು ಕಪಟಿ ಶಂಕರನ ವೇಷದಿಂದ ಆ ಜಾಲಂಧರನು ವಂಚಿಸಿದ್ದಾನೆ. ನೀನೂ ಕೂಡ ಅವನಿಗೆ ತಕ್ಕ ಪ್ರತೀಕಾರವನ್ನು ಮಾಡು. ಆ ಜಾಲಂಧರನ ಮಡದಿಯಾದ ವೃಂದೆಯನ್ನು ನೀನು ಅಪಹರಿಸು. ನೂರು ರಂಭೆ ಊರ್ವಶಿಯರಿಗಿಂತ ಮಿಗಿಲಾಗಿದೆ ಅವಳ ಸೌಂದರ್ಯ. ಪಾರ್ವತಿಗಿಂತಲೂ ಅವಳು ಬಹಳ ಚೆಲುವೆ. ಮನುಷ್ಯಲೋಕದಲ್ಲಿಯಾಗಲಿ ಪಾತಾಳಲೋಕದಲ್ಲಿಯಾಗಲಿ ವೃಂದೆಯಂಥ ಹೆಣ್ಣು ಎಲ್ಲಿಯೂ ಇಲ್ಲ. ಮನುಷ್ಯಲೋಕದಲ್ಲಿಯಂತೂ ಅಂಥ ರೂಪ ಅತ್ಯಂತ ಅಸಂಭಾವಿತ. ಅವಳ ದೇಹವನ್ನು ಸ್ಪರ್ಶ ಮಾಡಿದ ಪುರುಷನೇ ಕೃತಾರ್ಥ. ಆ ಜಾಲಂಧರನ ಜಲಜಾಕ್ಷಿಯನ್ನು ಅಪಹರಿಸಿ ಶಂಕರನಿಗೆ ಉಪಕಾರ ಮಾಡು. ಜಾಲಂಧರನಿಗೆ ಪ್ರತೀಕಾರ ಮಾಡು. ನೀನೂ ಕೂಡ ಸುಖವನ್ನು ಅನುಭವಿಸು.

**ನಾರದ:-** ಗರುಡನ ಈ ಮಾತನ್ನು ಆ ಲಕ್ಷ್ಮೀಪತಿಯಾದ ಶ್ರೀಹರಿಯು ಕೂಡಲೇ ನಿರ್ಭರ್ತ್ಸನೆಗೈದ ಮತ್ತು ತನ್ನ ಮನದಲ್ಲಿಯೇ ಇದಕ್ಕೆಲ್ಲ ಒಂದು ಉಪಾಯವನ್ನು ಕಂಡುಹಿಡಿದ. ಗರುಡನನ್ನೂ ಕಳಿಸಿಕೊಟ್ಟ. ಅನಂತರ ತಾನು ಪೀತಾಂಬರವನ್ನು ಹೊದ್ದುಕೊಂಡು ಮಂಚದ ಮೇಲೆ ಯಥಾಪ್ರಕಾರ ಮಲಗಿಕೊಂಡೇ ಇನ್ನೊಂದು ರೂಪದಿಂದ ಹೊರಟುಹೋದ. ಗರುಡನ ಮುಖದಿಂದ ವೃಂದೆಯ ಸೌಂದರ್ಯದ ಗುಣಗಾನವನ್ನು ಕೇಳಿ ಆ ಮಧುಸೂದನನು ಮುಗ್ಧನಾದಂತೆ ನಟಿಸಿದ. ಹೀಗೆ ಗುಪ್ತವೇಷದಿಂದ ಹೊರಟ ಶ್ರೀಹರಿಯ ಅಭಿಪ್ರಾಯವನ್ನು ಅರಿತ ಶೇಷನೂ ಕೂಡ ವೇಷವನ್ನು ಬದಲಿಸಿ ಅಲ್ಲಿಗೆ ಬಂದ. ಕೈ ಮುಗಿದು ಕೇಳಿದ.

**ಶೇಷ:-** ಪ್ರಭು, ಎಲ್ಲ ಕೆಲಸಕ್ಕೂ ನೀನೇ ಏಕೆ ಹೋಗುತ್ತೀ? ನಾವೆಲ್ಲ ನಿನ್ನ ಸೇವಕರು ಇಲ್ಲವೇ? ನನಗೆ ಅಪ್ಪಣೆ ಮಾಡು. ನಾನು ಎಲ್ಲಿ ಹೋಗಲಿ? ಏನು ಮಾಡಲಿ ? ಏನು ಕೆಲಸ?

**ಶ್ರೀಹರಿ:-** ಜಾಲಂಧರ ಹರನಿಗೆ ಮೋಸ ಮಾಡಿದ್ದಾನೆ. ಅದಕ್ಕಾಗಿ ನಾನು ಅವನ ಮಡದಿಯನ್ನು ಅಪಹರಿಸಿ ಅವನಿಗೆ ಮೋಸ ಮಾಡುತ್ತೇನೆ. ನನ್ನ ದೇಹವನ್ನು ಗೂಹನ ಮಾಡಿಕೊಂಡು ಪಾರ್ವತಿಗೆ ಉಪಕಾರ ಗೈಯುತ್ತೇನೆ. ನೀನೂ ನನ್ನ ಜೊತೆಗೆ ಬಾ. ಎಂದು ನುಡಿದು ಶೇಷನನ್ನು ಕರೆದುಕೊಂಡು ಹೊರಟ. ಮುಂದೆ ಹೋಗಿ ಒಂದು ವನ ಪ್ರದೇಶದಲ್ಲಿ ಒಂದು ಆಶ್ರಮವನ್ನು ಕಟ್ಟಿಕೊಂಡರು. ವಿಷ್ಣು ಶೇಷ ಇಬ್ಬರೂ ಜಡೆ ಬಿಟ್ಟು ನಾರು ಬಟ್ಟೆ ಉಟ್ಟು ಆ ಅರಣ್ಯಕ ಆಶ್ರಮದಲ್ಲಿ ಮಹರ್ಷಿಗಳಂತೆ ವಾಸಮಾಡಿದರು. ಅವರಿಗೆ ಕಾಮರೂಪಿಗಳಾದ ಅನೇಕ ಶಿಷ್ಯ ಪ್ರಶಿಷ್ಯರು. ಆ ಆಶ್ರಮದಲ್ಲಿ ಸಿಂಹ, ಹುಲಿ, ಹಂದಿ, ಕೋತಿ, ಕರಡಿ, ಪಶುಪಕ್ಷಿ ಎಲ್ಲವೂ ಪರಸ್ಪರ ವೈರ ತೊರೆದು ಸ್ನೇಹ ಸಹಕಾರದಿಂದ ಸೋದರರಂತೆ ಒಂದೆಡೆ ಕೂಡಿ ಆಡಿ ಪ್ರೀತಿಯಿಂದ ನೆಲೆಸಿದವು.

ಕಪಟನಾಟಕ ಸೂತ್ರಧಾರನಾದ ಆ ಶ್ರೀಹರಿಯು ತನ್ನ ಮಂತ್ರ ಪ್ರಭಾವದಿಂದ ವನಕ್ಕೆ ವೃಂದೆಯು ಬರುವಂತೆ ಮಾಡಿದ. ಅವಳ ಹೃದಯದಲ್ಲಿ ಸಂತಾಪವನ್ನು ಉಕ್ಕಿಸಿದ. ಈ ಕಾಲದಲ್ಲಿ ವೃಂದೆಯು ಪತಿಯ ವಿರಹದಿಂದ ಮನದಲ್ಲೇ ಬೇಯತೊಡಗಿದಳು ದಿವ್ಯಸ್ತ್ರೀಯರು ಅವಳಿಗೆ ಚಾಮರ ಬೀಸಿದರು. ತನ್ನ ಪತಿಯ ಆಗಮನವನ್ನೇ ಚಿಂತಿಸುತ್ತ ವಿರಹಾತುರಳಾಗಿ ಅವಳು ಅವನ ಮಾರ್ಗವನ್ನು ಪ್ರತೀಕ್ಷಿಸತೊಡಗಿದಳು. ವಿರಹ ವ್ಯಥೆಯಿಂದ ಅವಳು ಮೇಲಿಂದ ಮೇಲೆ ಮೂರ್ಛಿತಳಾಗುತ್ತಿದ್ದಳು. ಚತುರ್ದಶಿ ದಿನ ರಾತ್ರಿಯ ಕೊನೆಯ ಪ್ರಹರದಲ್ಲಿ ಆ ರಾಜಮಹಿಷಿಗೆ ಒಂದು ಕನಸು ಬಿದ್ದಿತು. ಅದು ಅವಳಿಗೆ ವೈಧವ್ಯದ ಸೂಚಕವೂ ಆಗಿದ್ದಿತು. ಜಾಲಂಧರನ ಒಣಗಿದ ತಲೆಯನ್ನು ಬಿಳಿ ಬೂದಿಯಿಂದ ಮರ್ದನ ಮಾಡಿದಂತೆ ಕಂಡಿತು. ಒಂದು ಹದ್ದು ಬಂದು ಆ ಜಾಲಂಧರನ ಕಣ್ಣನ್ನು ಕುಕ್ಕಿತು. ಕಿವಿಯನ್ನು ಕಚ್ಚಿತು. ಮೂಗನ್ನು ಸೀಳಿತು. ಮತ್ತು ಕಾಳೀದೇವಿಯು ಕೂದಲ ಹರವಿಕೊಂಡು ಕೆಂಪು ಬಣ್ಣ ಉಟ್ಟು, ಕೈಯಲ್ಲಿ ಗಡಿಗೆಯನ್ನು ಹಿಡಿದು ರಕ್ತವನ್ನು ಕುಡಿಯುತ್ತಿದ್ದಳು.

ಇಂಥ ಕನಸನ್ನು ಅವಳು ನೋಡಿ ಇದೆಲ್ಲವೂ ದೈತ್ಯರ ವಿನಾಶ ಸೂಚಕ ಎಂದು ತಿಳಿದುಕೊಂಡಳು. ವಂದಿಮಾಗಧರ ಗೀತವಾದ್ಯಗಳಿಂದ ಎಚ್ಚರಗೊಂಡ ಆ ಜಾಲಂಧರನ ಪಟ್ಟದರಸಿಯು ತನ್ನನ್ನು ಹೊಗಳಿ ಹಾಡಿದ ಆ ಚಾರಣರಿಗೂ ವಾದ್ಯವಾದಕರಿಗೂ

ಪುರಸ್ಕರಾ ಪಾರಿತೋಷಕಗಳನ್ನಿತ್ತು ಬಲ್ಲಿದರಾದ ಬ್ರಾಹ್ಮಣರನ್ನು ಕರೆದು ಅಂದಿನ ಬೆಳಗಿನ ಜಾವದಲ್ಲಿ ತಾನು ಕಂಡ ಕನಸನ್ನುನಿವೇದಿಸಿದಳು ಆ ವಿದ್ವಾಂಸರಿಗೆ.

**ಬ್ರಾಹ್ಮಣರಿಗೆ:-** ದೇವಿ, ಈ ನಿನ್ನ ಕನಸು ಬಹಳೇ ಕೆಟ್ಟ ಕನಸು. ಇದೊಂದು ನಿನ್ನ ಜೀವನದಲ್ಲಿ ಬರಲಿರುವ ಭೀಕರ ಗಂಡಾಂತರದ ಮುನ್‌ಸೂಚಕ. ದುರದೃಷ್ಟಕರ. ಅತುಗ್ರವಾದ ಈ ದುಃಸ್ವಪ್ನದ ಪರಿಹಾರಕ್ಕಾಗಿ ಈಗಲೇ ದ್ವಿಜರಿಗೆ ಧೇನುಗಳನ್ನು ದಾನ ನೀಡು. ಬಟ್ಟೆ, ಬರೆ, ಆನೆ, ರತ್ನ ಆಭರಣಗಳನ್ನು ದಾನ ಕೊಡು.

ಹೀಗೆ ಹೇಳಿ ಆ ಬ್ರಾಹ್ಮಣರು ಮಂತ್ರಪೂತ ಜಲದಿಂದ ಅವಳಿಗೆ ಅಭಿಷೇಕ ಮಾಡಿದರು. ಹೀಗೆ ಅವಳಿಗೆ ದುಃಸ್ವಪ್ನದ ದುಷ್ಫಲದ ಶಾಂತಿಗಾಗಿ ಶಾಸ್ತ್ರೋಕ್ತವಾದ ಉಪಶಮನದ ಉಪಾಯವನ್ನೆಲ್ಲ ಮಾಡಿ ಆ ವಿದ್ವದ್ ವಿಪ್ರರು ತಮ್ಮ ಸ್ಥಾನಗಳಿಗೆ ತೆರಳಿದರು.

ಇತ್ತ ಶ್ರೀಹರಿಯು ತನ್ನ ಆಕರ್ಷಣೆಯ ಶಕ್ತಿಯಿಂದ ಅವಳನ್ನು ಮೆಲ್ಲನೇ ಸೆಳೆಯತೊಡಗಿದ. ಬಲವತ್ತರವಾದ ಹರಿಯ ಮಾಯೆಗೆ ಬಲಿಬಿದ್ದ ಅವಳು ಅವನತ್ತ ಬಲವಾದ ಎಳೆತಕ್ಕೆ ಒಳಗಾದಳು. ಅವಳಿಗೆ ಮನೆಯಲ್ಲಿ ಕುಳಿತುಕೊಳ್ಳಲಿಕ್ಕೆ ಆಗಲಿಲ್ಲ. ಯಾವುದೋ ಅದೃಶ್ಯವಾದ ಶಕ್ತಿಯ ಸೆಳೆತದ ಕೈಗೊಂಬೆಯಾಗಿ ವೃಂದೆಯು ಮನೆ ಬಿಟ್ಟು ಹೊರಟಳು. ತನ್ನ ಕಾಮಸಚಿವೆಯಾದ ಓರ್ವ ಗೆಳತಿಯನ್ನು ಕರೆದುಕೊಂಡು ರಥವನ್ನು ಹೂಡಿಸಿ ಸೌಭಾಗ್ಯ ಕಾನನಕ್ಕೆ ಕೆಲವೇ ಸಮಯದಲ್ಲಿ ಆಗಮಿಸಿದಳು. ಬಗೆಬಗೆಯ ಹೂ, ಹಣ್ಣುಕಾಯಿಯ ಭಾರದಿಂದ ತೊನೆದಾಡುವ ತರುಲತೆಗಳಿಂದ ನಿಬಿಡವಾಗಿತ್ತು ಆ ಸೌಭಾಗ್ಯಕಾನನ. ಅಲ್ಲಿ ತಂಪಿಂಪುತೀಡುವ ತಂಗಾಳಿ, ವೃಕ್ಷಗಳ ರೆಂಬೆಕೊಂಬೆಗಳಲ್ಲಿ ಕುಕಿಲುವ ಪಕ್ಷಿಗಳ ಕಲಕಲನಾದ. ಹೂವಿನ ಕೋಶದಲ್ಲಿಯ ಇನಿಜೇನನ್ನು ಹೀರಿ ಝೇಂಕರಿಸುವ ದುಂಬಿಗಳ ಗೀತ ಗುಂಜಾರವ. ಅರೆಬಿರಿದು ಘಮಘಮಿಸುವ ಮಾಲತಿಮಂದಾರ ಮೊಗ್ಗೆಗಳ ಸುಗಂಧ, ಹಾಗೂ ಪರಿಸರ ಪ್ರದೇಶದ ನಿಸರ್ಗ ಸೌಂದರ್ಯ, ವೃಂದೆಯ ಮನಸ್ಸಿಗೆ ಅಪ್ಯಾಯಮಾನ ಎನಿಸಿದವು.

ಅಂಥ ಸುಗಂಧಬಂಧುರವಾದ ಸುಂದರ ಉಪವನ ಪ್ರದೇಶವನ್ನು ಕಂಡು ಆ ವೃಂದಾರಕೆಗೆ ತನ್ನ ಪತಿಯಾದ ಜಾಲಂಧರನ ನೆನಪಾಯಿತು. ಪತಿಯನ್ನು ಕಾಣದೇ ವ್ಯಾಕುಲಗೊಂಡ ಅವಳು ತನ್ನ ರಥವನ್ನು ಆ ವನಪ್ರದೇಶದಲ್ಲಿ ಇನ್ನೂ ಮುಂದೆ ಮುಂದೆ ನಡೆಯಲು ಅಜ್ಞಾಪಿಸಿದಳು. ಆ ಉಪವನದ ಮುಂದೆ ಅರಣ್ಯವು ನಿಬಿಡವಾಗುತ್ತ ಹೋಗಿ ಭೀಕರ ಗೊಂಡಾರಣ್ಯದ ಭಯಾನಕವಾದ ಬೆಂಗಾಡು ಬಾಯ್ತೆರೆದು ನಿಂತುಕೊಂಡಿತ್ತು. ಅಲ್ಲಿ ಘೋರವಾಗಿ ಗರ್ಜಿಸುವ ಹೆಬ್ಬುಲಿ, ಗುಡುಗು ಹಾಕುವ ಸಿಂಹ, ಘೀಳಿಡುವ ಆನೆ, ಘೋರಿಡುವ ಕಾಡುಹಂದಿ, ಮುಂತಾದ ಭೀಕರ ಪ್ರಾಣಿಗಳ ಕಿರಿಚಾಟ ಸಿಂಹನಾದಗಳಿಂದ ಆ ಕಗ್ಗಾಡು ಮತ್ತಿಷ್ಟು ಭಯಂಕರವಾಗಿ ಇದ್ದಿತು. ಮುಗಿಲು ಮುಖವನ್ನು ತಗಲುವ ಅಲ್ಲಿಯ ಸಾಂದ್ರನೀರಂಧ್ರ ತರುವೃಂದಗಳು ಪರಸ್ಪರ ಹೆಣೆದುಕೊಂಡು ಆ ಪ್ರಶಾಂತ ವನಾಂತರದ ಮಧ್ಯದಲ್ಲಿ ಗಾಡಾಂಧಕಾರವು ಹೆಪ್ಪುಗಟ್ಟುವಂತೆ ಮಾಡಿದ್ದವು. ಅದನ್ನು ಕಂಡು ಆ ವೃಂದಾರಿಕೆಗೆ ಗಾಬರಿಯಾಯಿತು. ಕೂಡಲೇ ಅವಳು ತನ್ನ ಕಾಮಸಖಿಯನ್ನು ಕುರಿತು - ''ಸ್ಮರದೂತಿ, ಇನ್ನು ಮುಂದೆ ಹೋಗುವುದು ಸಾಕು. ಇಲ್ಲಿ ಎಲ್ಲಿಯೂ ನನ್ನ ನಲ್ಲ ಜಾಲಂಧರ ಕಾಣಲೊಲ್ಲ. ಕ್ರೂರ ಶ್ವಾಪದಗಳಿಂದ ತುಂಬಿದ ಈ ಘೋರವನಾಂತ ಪ್ರದೇಶ

ಬಹಳ ಭಯಾಪಾಯಕಾರಕ ಎಂದು ನನಗೆ ಹೆದರಿಕೆ ಆಗುತ್ತದೆ. ಆದ್ದರಿಂದ ಈಗಲೇ ನಮ್ಮ ರಥವನ್ನು ತಿರುಗಿಸು. ಮನೆಯ ಕಡೆಗೆ ಹೋಗೋಣ.

**ಕಾಮದೂತಿ:-** ಸಖಿ, ನಾವು ಎಲ್ಲಿಗೆ ಬಂದಿದ್ದೇವೆ? ಎತ್ತ ಹೊರಟಿದ್ದೇವೆ? ಎಂಬುದು ನನಗೆ ತಿಳಿಯದಂತಾಗಿದೆ. ಇದು ಯಾವ ದಿಕ್ಕು ಎನ್ನುವದೇ ನನಗೆ ಅರಿವಿಲ್ಲ. ಕುದುರೆಗಳು ಕೂಡ ದಣಿದು ನಿತ್ರಾಣ ಆಗಿವೆ. ಮುಂದೆ ಮಾರ್ಗವಂತೂ ಕಾಣಲೊಲ್ಲದು. ದೈವದಿಂದ ಪ್ರೇರಿತವಾಗಿ ಈ ನಮ್ಮ ರಥವು ಎತ್ತ ಹೋದತ್ತ ಹೋಗಲಿ. ನಾವು ಈ ಕಾಡಿನ ಗೂಡಿನಲ್ಲಿ ಯಾವುದಾದರೂ ಹಿಂಸ್ರ ಪಶುವಿಗೆ ಆಹಾರವಾಗುವದರಲ್ಲಿ ಸಂಶಯವಿಲ್ಲ.

ಹೀಗೆ ಹೇಳಿ ಅವರು ತಮ್ಮ ರಥಕ್ಕೆ ಹೂಡಿದ ಹೆಣ್ಣುಕುದುರೆಗಳನ್ನು ಚಾವಟಿಯಿಂದ ಬಾರಿಸಿದರು. ಅಂಥ ಕಗ್ಗಾಡಿನಲ್ಲಿಯೇ ಆ ಕುದುರೆಗಳು ನಾಗಾಲೋಟ ಬಿಟ್ಟವು. ಅನಂತರ ಆ ಕುದುರೆಗಳು ಒಂದು ಸಿದ್ಧಾಶ್ರಮಕ್ಕೆ ಬಂದವು. ಅಲ್ಲಿ ಅನೇಕ ಜನ ಸಿದ್ಧರು ತಮ್ಮ ಸಾಧನದಲ್ಲಿ ನಿರತರಾಗಿದ್ದರು. ಅಲ್ಲಿ ಯಾವ ಬೆಳಕೂ ಕಾಣಲಿಲ್ಲ. ಯಾವ ಪಶುಪಕ್ಷಿಗಳ ಸೊಲ್ಲುಗುಲ್ಲೂ ಕೇಳಲಿಲ್ಲ. ಇನ್ನಿಷ್ಟು ಭೀಕರವಾಗಿದ್ದಿತು ಆ ಸಿದ್ಧಾಶ್ರಮದ ಮುಂದಿನ ಪ್ರದೇಶ. ಶಬ್ದವೇ ಮೂರ್ಛೆಗೊಂಡಂತಿತ್ತು ಅಲ್ಲಿಯ ಭೀಕರ ಮೌನ ವಾತಾವರಣದಲ್ಲಿ. ಅದೊಂದು ವಿಚಿತ್ರ ಸನ್ನಿವೇಶ. ಇವರ ರಥದ ಗಾಲಿಯ ಸಪ್ಪಳವಿಲ್ಲ. ರಥವನ್ನು ಎಳೆಯುವ ಕುದುರೆಗಳು ಹೇಕರಿಸುತ್ತಿದ್ದಿಲ್ಲ. ಕುದುರೆಗಳ ಕೊರಳಲ್ಲಿ ರಥದ ಮೇಲೆ, ಕೆಳಗೆ ಕಟ್ಟಿದ ಗಂಟೆಗಳು ಉಲಿಯಲಿಲ್ಲ. ಪತಾಕೆ ಹಾರಲಿಲ್ಲ. ಇದನ್ನು ನೋಡಿ ವೃಂದಾರಕೆಯು ಗೆಳತಿಯನ್ನು ಕೇಳಿದಳು.

**ವೃಂದಾರಿಕೆ:-** ಸಖೀ, ನಾವು ಎಲ್ಲಿಗೆ ಹೊರಟಿದ್ದೇವೆ? ಹುಲಿಸಿಂಹಗಳ ಭಯ ಹಾಗೂ ಅವುಗಳಿಂದ ಅಪಾಯದ ಭೀತಿ ಇನ್ನೂ ಹೆಚ್ಚಾಗುತ್ತಲಿದೆ. ಈ ಕಾಡಿನಲ್ಲಿ. ನನಗೆ ಮನೆಯಲ್ಲಿಯೂ ಸುಖವಾಗಲಿಲ್ಲ. ಇಲ್ಲಿ ಬಂದರೆ ಇಲ್ಲಿಯೂ ಶಾಂತಿ ದೊರಕಲಿಲ್ಲ.

**ಕಾಮಸಖಿ:-** ದೇವಿ, ಮುಂದೆ ನೋಡು. ಎಂತಹ ಭಯಂಕರ ಕಗ್ಗಾಡು ಬಾಯಿ ತೆರೆದು ನಿಂತುಕೊಂಡಿದೆ ! ಆ ಗೊಂಡಾರಣ್ಯದ ಭಯಾನಕತೆಯನ್ನು ಕಂಡೇ ನಮ್ಮ ಕುದುರೆಗಳು ಹೆದರಿಹೋಗಿವೆ. ಮುಂಜೆ ಹೆಜ್ಜೆ ಇಡಲೊಲ್ಲವು.

ಇದನ್ನು ಕೇಳಿ ವೃಂದೆಯು ತನ್ನ ಕೊರಳಲ್ಲಿ ಇರುವ ಹಾರವನ್ನು ನೋಡಿಕೊಂಡು ಒಮ್ಮೆಲೇ ರಥದಿಂದ ಎದ್ದು ನಿಂತಳು. ಅಷ್ಟರಲ್ಲಿ ಅವಳೆದುರು ಒಬ್ಬ ಭಯಂಕರನಾದ ರಾಕ್ಷಸ ಬಂದು ನಿಂತ. ಅವನಿಗೆ ಮೂರು ಕಾಲು, ಐದು ಕೈ, ಏಳು ಕಣ್ಣು, ಭೀಕರ ಆಕಾರ, ಹುಲಿಯ ಕಿವಿ, ಸಿಂಹದ ಹೆಗಲು, ಕೆಂಪು ಕೂದಲು, ಕಿಡಿ ಉಗಳುವ ಕಣ್ಣು, ನರಿಯಂಥ ಬಾಯಿ. ಅದನ್ನು ಕಂಡು ಮಹಾರಾಣಿಯು ಭಯದಿಂದ ಗದಗುಟ್ಟಿ ನಡುಗಿದಳು. ಅತ್ಯುಗ್ರವಾದ ಆ ಕ್ರೂರ ರಕ್ಕಸನನ್ನು ನೋಡಲಾರದೇ ಗಟ್ಟಿಯಾಗಿ ಚೀರಿ ಕಣ್ಣು ಮುಚ್ಚಿಕೊಂಡಳು. ಆ ಸ್ಮರದೂತಿಯು ಕೈಯಲ್ಲಿಯ ಚಾವಟಿಯನ್ನು ಕೆಳಗೆ ಒಗೆದು - ''ದೇವಿ, ಈ ರಾಕ್ಷಸ ನನ್ನನ್ನೇ ತಿನ್ನಲು ಬರುತ್ತಿದ್ದಾನೆ ನನ್ನನ್ನು ರಕ್ಷಿಸು'' ಎಂದು ಚೀರಿದಳು.

ಇಷ್ಟರಲ್ಲಿ ಆ ರಾಕ್ಷಸನು ಇವರ ರಥವು ಇದ್ದಲ್ಲಿಗೆ ಬಂದ. ದೀರ್ಘದಂಡದಂತಿರುವ ತನ್ನಕೈಯಿಂದ ರಾಣಿ ಹಾಗೂ ಅವಳ ಸಖಿ ಕುಳಿತ ರಥವನ್ನು ಕುದುರೆ ಸಹಿತವಾಗಿಯೇ ಎತ್ತಿದ. ಗಿರಿಗಿರಿ ತಿರುಗಿಸಿ ಆ ತೇರನ್ನು ತೂರಿ ಒಗೆದ. ಹುಲ್ಲೆಯಂತೆ ಭಯದಿಂದ ತಲ್ಲಣಿಸಿ

ಹೋದ ರಾಣಿಯು ರಥದಿಂದ ಉರುಳಿ ನೆಲದ ಮೇಲೆ ಬಂದು ಬಿದ್ದಳು. ಅವಳ ಗೆಳತಿಯೂ ಒಂದು ಗಿಡದಡಿಯಲ್ಲಿ ಕಡೆದೊಗೆದ ಮುತ್ತುಗದ ಬಳ್ಳಿಯಂತೆ ಪತಿತಳಾದಳು.

ಆಗ ಆ ರಕ್ಕಸನು ಅಟ್ಟಹಾಸ ಮಾಡುತ್ತ ಬಂದ. ಇವರ ರಥಕ್ಕೆ ಹೂಡಿದ ನಾಕು ಕುದುರೆಗಳನ್ನು ಕೊಂದು ತಿಂದು ಹಾಕಿದ. ಅನಂತರ ಸಿಂಹವು ಚಿಗರೆಯನ್ನು ಕಚ್ಚಿ ಹಿಡಿಯುವಂತೆ ಆ ವೃಂದಾದೇವಿಯನ್ನು ಒಂದು ಕೈಯಲ್ಲಿ ಹಿಡಿದು ಭಯಂಕರವಾಗಿ ನುಡಿದ - ''ನಿನ್ನ ಗಂಡ ಜಾಲಂಧರನನ್ನು ಮಹಾದೇವ ಕೊಂದುಹಾಕಿದ್ದಾನೆ ಎಂದು ನಾನು ಕೇಳಿದ್ದೇನೆ. ನಿನಗೆ ಬದುಕಬೇಕು ಎಂಬ ಇಚ್ಛೆ ಇದ್ದರೆ ನನ್ನ ಪತ್ನಿಯಾಗಿ ಬದುಕು. ಇಲ್ಲದೇ ಇದ್ದರೆ ನಾನು ಆ ಕುದುರೆಗಳನ್ನು ತಿಂದಂತೆ ಇಲ್ಲಿಯೇ ನಿನ್ನನ್ನೂ ಕೊಂದು ತಿಂದುಬಿಡುತ್ತೇನೆ. ಯುದ್ಧದಲ್ಲಿ ಹರನೊಂದಿಗೆ ಹೋರಾಡಿ ನಿನ್ನ ಪತಿಯಂತೂ ಮೃತನಾಗಿ ಹೋಗಿದ್ದಾನೆ. ನೀನೇಕೆ ದುಃಖಪಡುತ್ತಿ? ನನ್ನನ್ನೇ ಪತಿಯೆಂದು ವರಿಸಿ ಯಾವ ಭಯವೂ ಇಲ್ಲದೇ ಆನಂದದಿಂದ ಚಿರಕಾಲ ಬಾಳು. ನನ್ನ ಜೊತೆಗೆ ಮದ್ಯವನ್ನು ಕುಡಿಯಲು ಬಾ. ಯಥೇಚ್ಛವಾಗಿ ಈ ಮಧುರವಾದ ಸುರೆಯನ್ನು ಪಾನಮಾಡು. ಇದರ ಜೊತೆಗೇ ನಿನಗೆ ತಿನ್ನಲು ರುಚಿಕರವಾದ ಮಾಂಸ ಕೂಡ ಇರುತ್ತದೆ. ನನ್ನೊಡನೆ ಭೂಲೋಕ ಲಭ್ಯವಾದ ಎಲ್ಲ ಸುಖೋಪಭೋಗಗಳನ್ನು ಅನುಭವಿಸುತ್ತ ಬಹುಕಾಲ ಬಾಳಿಬದುಕು.''

ಆ ರಾಕ್ಷಸನ ಈ ಘೋರ ನುಡಿಗಳನ್ನು ಕೇಳಿ ವೃಂದೆಯು ಪ್ರಾಣಹೋದಂತೆ ಆಗಿ ನಿಶ್ಚೇಷ್ಟಳಾದಳು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಹದಿನೈದನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುವಿನಿಂದ ತಪಸ್ವಿಯ ವೇಷಧಾರಣೆ

ಅಧ್ಯಾಯ - ೧೬

**ನಾರದ :-** ಆಗ ನಾರಾಯಣನು ನಾರು ಬಟ್ಟೆ ಉಟ್ಟು ಜಡೆ, ಗಡ್ಡ ಬಿಟ್ಟು ಲೋಕವಿಡಂಬನಕ್ಕಾಗಿ ತಪಸ್ವಿಯ ವೇಷವನ್ನು ಧರಿಸಿದ. ಕೈಯಲ್ಲಿ ಹೂ ಹಣ್ಣುಗಳನ್ನು ಹಿಡಿದುಕೊಂಡು ಒಬ್ಬ ಅನುಚರ ಅವನನ್ನು ಹಿಂಬಾಲಿಸಿದ. ಅವರಿಬ್ಬರನ್ನು ಕಂಡು ವೃಂದೆಯ ಗೆಳತಿಯು ರೋದಿಸತೊಡಗಿದಳು. ಅದನ್ನು ಕೇಳಿ ಆ ನರನಾರಾಯಣರಿಬ್ಬರೂ ಅವಳನ್ನು ಸಂತೈಸುತ್ತ ನುಡಿದರು.

**ನರನಾರಾಯಣ:-** ಕಲ್ಯಾಣಿ, ಹೆದರಬೇಡ, ನಿಮ್ಮನ್ನು ರಕ್ಷಿಸಲಿಕ್ಕಾಗಿಯೇ ನಾವು ಇಲ್ಲಿಗೆ ಬಂದದ್ದು. ಇಂಥ ಘೋರವಾದ ಕಾನನಕ್ಕೆ ನೀವು ಏಕೆ ಬಂದಿರಿ? ನೀವು ಹೆದರಬೇಡಿರಿ. ನಾವು ನಿಮ್ಮನ್ನು ರಕ್ಷಿಸುತ್ತೇನೆ.

ಹೀಗೆ ನುಡಿದು ಅವರನ್ನು ಸಂತೈಸಿ ನಾರಾಯಣನು ಆ ರಾಕ್ಷಸನಿಗೆ ಹೇಳಿದ.

**ನಾರಾಯಣ :-** ಮೂರ್ಖನಾದ ದುಷ್ಟ ರಾಕ್ಷಸನೆ, ಮೊದಲು ಬಿಟ್ಟುಬಿಡು ಈ ಸಾಧ್ವಿಯನ್ನು, ದುರಾಚಾರಿಯೆ, ಕೋಮಲೆಯಾದ ಈ ಸುಂದರಿಯನ್ನು ಪಿಡಿದು ಏನು ಮಾಡಲು ಹೊರಟಿರುವೆ ? ಎಲ್ಲರ ಕಣ್ಣಿಗೆ ಹಬ್ಬವನ್ನುಂಟು ಮಾಡುವ

ಈ ಕೋಮಲಾಂಗಿಯನ್ನು ತಿನ್ನುವ ಹವಣಿಕೆಯಲ್ಲಿರುವೆಯೊ? ಈ ಜಗತ್ತಿನ ಪುಣ್ಯ ಪ್ರಭೆಯಂತಿರುವ ಈ ಭೂಲೋಕದ ರತ್ನವನ್ನು ನೀನು ಕೊಲ್ಲಲು ಹಂಚಿಕೆ ಹಾಕಿರುವೆಯಾ ? ಇವಳನ್ನು ನೀನು ಸಂಹರಿಸಿದರೆ ಈ ಭೂಲೋಕದ ಬೆಳಕೇ ಹೊರಟುಹೋದಂತೆ. ಕಾಮನ ದರ್ಪವು ಇಲ್ಲವಾದಂತೆ. ಆದ್ದರಿಂದ ನೀನು ಈಗಲೇ ಈ ವೃಂದಾರಕೆಯನ್ನು ಬಿಟ್ಟು ಬಿಡು.

**ರಾಕ್ಷಸ:-** ನೀನು ಯಾರು? ನನ್ನ ಕೈಯಿಂದ ಈ ವೃಂದೆಯನ್ನು ಬಿಡಿಸುವದು ಯಾರಿಗೂ ಶಕ್ಯವಿಲ್ಲ. ನಿನಗೆ ಶಕ್ಯವಿದ್ದರೆ ಮುಂದೆ ಬಾ ನೋಡುತ್ತೇನೆ.

ಆಗ ಮುನಿ ವೇಷಧಾರಿಯಾದ ನಾರಾಯಣನು ತನ್ನ ಕೆಂಪಡರಿದ ಕಣ್ಣುಗಳಿಂದ ಕುಪಿತನಾಗಿ ನೋಡಿದ ಆ ದುಷ್ಟರಕ್ಕಸನ ಕಡೆ. ತಕ್ಷಣದಲ್ಲಿಯೇ ಶುದ್ಧ ಮುಖ ಮುದ್ರೆಯ ಶ್ರೀಹರಿಯ ಕಣ್ಣಿನ ಕೆಂಗಿಡಿಯಿಂದ ಅರೆಚಣದಲ್ಲಿ ಸುಟ್ಟುಬೂದಿಯಾದ ಆ ದೈತ್ಯಾಧಮ. ಆಗ ದೂರದಲ್ಲಿ ಸಿಡಿದು ನಿಂತ ವೃಂದೆಯು ವಿಷ್ಣುವಿನ ಮಾಯೆಯಿಂದ ಮೋಹಿತಳಾಗಿ ಅವನ ಬಳಿಗೆ ಬಂದಳು. ಅವನಿಗೆ ಕೈ ಮುಗಿದು ಕೇಳಿದಳು.

**ವೃಂದಾ:-** ಸ್ವಾಮಿ, ತಾವು ಯಾರು? ನನ್ನ ಪಾಲಿನ ಕರುಣೆಯ ಸಮುದ್ರವೇ ತಾವು ಆಗಿರುವಿರಿ. ಮೃತ್ಯುವಿನಂತಿದ್ದ ಈ ದುಷ್ಟ ದೈತ್ಯನಿಂದ ನನ್ನನ್ನು ಕಾಪಾಡಿದಿರಿ. ನಿಮ್ಮ ದಯೆಯಿಂದ ನನ್ನ ಮನಸ್ಸಿನ ದುಗುಡ ದೂರವಾಗಿದೆ. ದೇಹದ ದುಃಖ ಶಮನವಾಗಿದೆ. ನಿಮ್ಮ ಮಧುರವಾದ ಮಾತುಗಳನ್ನು ಕೇಳಿ ನನ್ನ ಮನಸ್ಸು ಮುಗ್ಧವಾಗಿದೆ. ಪ್ರಶಾಂತ ಮೂರ್ತಿಯೆ, ನಾನು ನಿಮ್ಮ ಆಶ್ರಮದಲ್ಲಿ ಇದ್ದು ತಪಸ್ಸು ಮಾಡುತ್ತೇನೆ.

ವೃಂದೆಯ ಈ ಮಾತುಗಳನ್ನು ಕೇಳಿ ತಪಸ್ವಿ ವೇಷದಲ್ಲಿದ್ದ ಆ ನಾರಾಯಣನು ಮೆಲ್ಲನೇ ನುಡಿದ.

**ತಪಸ್ವಿ:-** ಮಹಾರಾಣಿ, ನಾನು ಭಾರದ್ವಾಜ ಮಹರ್ಷಿಯ ಮಗ. ನನ್ನ ಹೆಸರು ದೇವಶರ್ಮ. ನಾನು ಎಲ್ಲ ಭೋಗಗಳನ್ನು ತೊರೆದು ಈ ಘೋರವನಕ್ಕೇ ಬಂದಿದ್ದೇನೆ ಈ ನನ್ನ ಶಿಷ್ಯ ವಟುವಿನೊಂದಿಗೆ. ಇವನಲ್ಲದೇ ನನಗೆ ಅನೇಕ ಶಿಷ್ಯರು ಇರುವರು. ನನಗಿರುವ ಶಿಷ್ಯರೆಲ್ಲರೂ ಕಾಮರೂಪಿಗಳು. ಮನಬಂದ ರೂಪಧರಿಸುವ ಶಕ್ತಿ ಅವರಿಗೆ. ನಿನಗೆ ನಮ್ಮ ಆಶ್ರಮದಲ್ಲಿ ಇಧ್ದು ತಪಸ್ಸನ್ನು ಮಾಡಬೇಕು ಎಂದು ಇಚ್ಛೆ ಇದ್ದರೆ ನಿನಗೆ ಸುಸ್ವಾಗತ. ನೀನು ನಿರ್ಭಯವಾಗಿ ನಮ್ಮ ಆಶ್ರಮದಲ್ಲಿ ಇರಬಹುದು. ತಪಸ್ಸನ್ನು ಮಾಡಬಹುದು. ಬಾ ಹೋಗೋಣ ನಮ್ಮ ಆಶ್ರಮಕ್ಕೆ, ನಮ್ಮ ಆಶ್ರಮವು ಇಲ್ಲಿಂದ ತುಸು ದೂರದಲ್ಲಿ ಇರುವ ಒಂದು ವನಾಂತರದಲ್ಲಿ ಇರುತ್ತದೆ.

ಹೀಗೆ ನುಡಿದು ಆ ತಪಸ್ವಿಯು ತನ್ನ ಶಿಷ್ಯನಾದ ವಟುವಿನೊಂದಿಗೆ ಮುಂದೆ ನಡೆದ. ಅವನನ್ನು ತನ್ನ ಗೆಳತಿಯೊಂದಿಗೆ ವೃಂದಾರಿಕೆಯು ಕಣ್ಣೀರಿನ ಕಾದಂಬಿನಿಯಾಗಿ ಹಿಂಬಾಲಿಸಿದಳು, ದಾರಿಯಲ್ಲಿ ಅವಳ ಕಾಮದೂತಿಯು - ''ದೇವಿ, ನನ್ನ ಕಡೆಗೆ ಒಮ್ಮೆ ತಿರುಗಿ ನೋಡು. ಮನಸ್ಸನ್ನು ಸ್ತಿಮಿತದಲ್ಲಿ ಇಟ್ಟುಕೊ'' ಎಂದು ನುಡಿಯುತ್ತ ಅವಳ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ಬರುತ್ತಲಿದ್ದಳು. ಅಷ್ಟರಲ್ಲಿ ವಿಕಾರವಾದ ಭೀಕರ ಆಕಾರವುಳ್ಳ ಒಬ್ಬ ದುರಾಚಾರಿ ದುಷ್ಟನು ಆ ವನದಲ್ಲಿ ದೊಡ್ಡದಾದ ಒಂದು ಜಾಲವನ್ನು ಹಾಕಿಕೊಂಡು ಕುಳಿತಿದ್ದ. ಅಧರಲ್ಲಿ ಅನೇಕ ಪ್ರಾಣಿಗಳನ್ನು ಜಾಲಹಾಕಿ ಹಿಡಿದಿದ್ದ. ಒಮ್ಮೆಲೇ

ಆ ಜಾಲವನ್ನು ಎಳೆದುಕೊಂಡ. ಅದರಲ್ಲಿರುವ ಜೀವಿಗಳನ್ನೆಲ್ಲ ಒಂದೊಂದಾಗಿ ಬಿಡುಗಡೆ ಮಾಡಿದ. ಇವರಿಬ್ಬರೂ ಹೆಣ್ಣುಮಕ್ಕಳನ್ನು ನೋಡಿ ಜೀವಂತ ಪ್ರಾಣಿಗಳನ್ನು ತನ್ನ ಜಾಲದಲ್ಲಿ ಹಿಡಿಯುವ ತನ್ನ ಆ ಕಾರ್ಯವನ್ನು ಬಿಟ್ಟು ಇವರಿಬ್ಬರೂ ಸ್ತ್ರೀಯರ ಕಡೆಗೆ ನಡೆದು ಬರತೊಡಗಿದ. ಅದನ್ನು ನೋಡಿ ಕಾಮದೂತಿಯು ಹೆದರಿ ಹೌಹಾರಿ "ದೇವಿ, ನನ್ನನ್ನು ನುಂಗಲು ಬರುತ್ತಿದ್ದಾನೆ ಇಲ್ಲಿ ಓರ್ವ ದುಷ್ಟ. ನೀನು ನನ್ನನ್ನು ಕೈ ಹಿಡಿದು ಕರೆದುಕೊಂಡು ಹೋಗು." ಎಂದು ಕೂಗಿಕೊಂಡಳು. ಆಗ ವೃಂದಾರಿಕೆಯು ಕೂಡ ಆ ಕ್ರೂರ ಜಾಲಗಾರನನ್ನು ಕಂಡು ಭಯಭ್ರಾಂತಳಾಗಿ ಆ ಕಾಮದೂತೆಯೊಂದಿಗೆ ಓಡತೊಡಗಿದಳು ಅಲ್ಲಿಂದ ಮುಂದೆ ದೊಡ್ಡದಾದ ಒಂದು ಗುಹೆ. ಅದರಲ್ಲಿ ಅವರು ಒಳಗೆ ಹೋಗಿ ತುಸು ಅಂತರವನ್ನು ಸಾಗಿದ ಬಳಿಕ ಅದರಾಚೆ ಒಂದು ತಪೋವನ. ಆ ತಪೋವನದ ಮಧ್ಯದಲ್ಲಿ ಅತ್ಯುಚ್ಚವಾದ ಒಂದು ತಪಸ್ವಿಗಳ ಆಶ್ರಮ. ಅಲ್ಲಿ ಬಗೆಬಗೆಯ ಬಂಗಾರದ ಬಣ್ಣದ ಹಕ್ಕಿಗಳು. ನಾನಾಪಕ್ಷಿಗಳ ಮಧುರ ಶಬ್ದಗಳ ಕಲಕಲಕೂಜನ. ಆ ತಪೋವನದ ಒಂದು ಬದಿಯಲ್ಲಿ ಅರೆಬಿರಿದ ಹೊಂದಾವರೆಗಳಿಂದ ಸುಂದರವಾದ ಒಂದು ಹೊಕ್ಕರಣಿ. ಅದರ ಮೇಲಿನ ಭೂಮಿಯೆಲ್ಲವೂ ಬಂಗಾರದ ನೆಲಕಟ್ಟಣೆಯಿಂದ ಪರಮ ರಮಣೀಯ ಆ ತಪೋವನದ ಅಂಗಳದಲ್ಲಿಯೇ ಹರಿಯುವ ಒಂದು ಹಾಲು ಹೊಳೆ. ಆ ಸಿದ್ಧಾಶ್ರಮದ ಸುತ್ತುಮುತ್ತಲೂ ಗುತ್ತಾಗಿ ಬೆಳೆದ ಮರಗಳಿಂದ ಇನಿಜೇನು ಸೋನೆಗಚ್ಚಿ ಸುರಿಯುತ್ತಲಿದೆ. ಅಲ್ಲಿ ಒಂದು ಕಡೆ ಸಕ್ಕರೆಯ ರಾಶಿ. ಇನ್ನೊಂದು ಕಡೆ ಮೋದಕಗಳನ್ನು ಮಾಡಿ ರಾಶಿ ಹಾಕಿದ್ದಾರೆ. ಬಗೆಬಗೆಯ ಭಕ್ಷ್ಯಭೋಜ್ಯಗಳು ತಿನ್ನುವವರಿಗಾಗಿ ಕಾಯುತ್ತಲಿವೆ. ಅಲ್ಲಲ್ಲಿ ಮುತ್ತುರತ್ನಾದಿ ಆಭರಣಗಳು ಹಾಕಿಕೊಳ್ಳುವವರಿಲ್ಲದೇ ಅನಾಥವಾಗಿ ಬಿದ್ದಿವೆ. ಅಸಂಖ್ಯ ಶಸ್ತ್ರಾಸ್ತ್ರಗಳು, ಅನಂತ ದಿವ್ಯ ಅಲಂಕಾರಗಳು ಮುಗಿಲಿನಿಂದಲೇ ಉದುರಿಬಿದ್ದಂತೆ ಅಲ್ಲಲ್ಲಿ ಶೇಖರಿತವಾಗಿ ಕಾಣುತ್ತಲಿವೆ. ಆ ಆಶ್ರಮದ ಪರಿಸರದಲ್ಲಿ ಖಗಮೃಗಗಳು ಪಶುಪಕ್ಷಿಗಳು ಆನಂದದಿಂದ ವಿಹರಿಸುತ್ತಲಿವೆ. ಆ ಸಿದ್ಧಾಶ್ರಮದ ಮಧ್ಯದಲ್ಲಿ ನೆಲೆಯೆತ್ತಿ ನಿಂತಿದೆ ಒಂದು ಶ್ರೀಮಠ. ಅದರಲ್ಲಿ ಮಧ್ಯದಲ್ಲಿ ಒಂದು ಆಸನ. ಅದರ ಮೇಲೆ ಒಂದು ಹುಲಿ ತೊಗಲು ಹಾಸಿದೆ. ಅಲ್ಲಿ ಕುಳಿತಿದ್ದಾನೆ ತಪಸ್ವಿಯಾದ ಓರ್ವ ಮುನಿಪುಂಗವ. ಅವನನ್ನು ಕಂಡಕೂಡಲೆ ವೃಂದಾರಿಕೆಯು ಹೋಗಿ ಬೇಡಿಕೊಂಡಳು.

**ವೃಂದಾ:-** ಪ್ರಭು, ರಕ್ಷಿಸು, ರಕ್ಷಿಸು. ಈ ಪಾಪಿಯಾದ. ಜೀವಂತ ಪ್ರಾಣಿಗಳನ್ನು ಹಿಡಿಯುವ ಜಾಲಗಾರ ನಮ್ಮನ್ನು ಬೆನ್ನಟ್ಟಿ ಬರುತ್ತಿದ್ದಾನೆ. ಅವನಿಂದ ನಮ್ಮನ್ನು ಕಾಪಾಡಿರಿ. ಭಯಾಕ್ರಾಂತರಾಗಿ ನಾವು ನಿಮ್ಮನ್ನು ಶರಣುಬಂದಿದ್ದೇವೆ. ನಾವು ಇಷ್ಟು ಬಾಯ್ದೆರೆದು ಬೇಡಿಕೊಳ್ಳುತ್ತಿದ್ದರೂ ನೀವು ಮೌನವಾಗಿಯೇ ಕೂತಿದ್ದೀರಲ್ಲ ! ಶರಣು ಬಂದವರನ್ನು ಪೊರೆಯುವದೇ ತಪಸ್ವಿಗಳ ಮುಖ್ಯ ಕರ್ತವ್ಯ. ಅದನ್ನು ಬಿಟ್ಟು ದುಃಖದಲ್ಲಿದ್ದವರಿಗೆ ರಕ್ಷಣೆಯನ್ನು ಒದಗಿಸದೇ ತಮ್ಮಷ್ಟಕ್ಕೆ ತಾವು ಕುಳಿತು ಮಾಡುವ ಮೌನ, ಜಪ, ತಪಗಳಿಂದ ಏನು ಪ್ರಯೋಜನ? ಬೆದರಿ ಬಂದು ಮೊರೆ ಇಟ್ಟ ದೀನ ದುಃಖಿತರನ್ನು ಕಾಪಾಡುವದರ ಹೊರತು ಬೇರೆ ಧರ್ಮ ಇಲ್ಲ. ಭೀತರಾದವರನ್ನು ರಕ್ಷಿಸುವಂಥ ಪುಣ್ಯ ಮತ್ತೊಂದಿಲ್ಲ. ತಪೋಧನರೇ, ರಕ್ಷಿಸಿರಿ ರಕ್ಷಿಸಿರಿ." ಎಂದು ಭಯಭ್ರಾಂತಳಾದ ವೃಂದಾದೇವಿಯು ಗೆಳತಿಯೊಂದಿಗೆ ಆ ತಪಸ್ವಿಗೆ ಶರಣುಹೋದಳು.

ಅಪ್ಸರಲ್ಲಿ ಜೀವಂತ ಪ್ರಾಣಿಗಳನ್ನು ಜಾಲದಲ್ಲಿ ಹಿಡಿಯುವ ಆ ದುರುಳ ಜಾಲಗಾರ ಅಲ್ಲಿಗೆ ಆಗಮಿಸಿದ. ಅವನನ್ನು ಕಂಡಕೂಡಲೇ ವೃಂದಾರಿಕೆಯು ಮತ್ತಿಷ್ಟು ಹೆದರಿ ಭಯದಿಂದ ನಡುಗುತ್ತ ಅಲ್ಲಿಯೇ ಕುಳಿತ ತಪಸ್ವೀ ವೇಷದ ಶ್ರೀಮನ್ನಾರಾಯಣನನ್ನು ಭರದಿಂದ ಬಿಗಿದಪ್ಪಿಕೊಂಡಳು. ಆಗ ಹರಿರೂಪಿಯಾದ ಆ ಮುನಿಯು ತನ್ನನ್ನು ಕೊರಳಿನಲ್ಲಿ ಬಿಗಿದಪ್ಪಿ ಮೈ ಬಳಿಸಿಕೊಂಡು ಭಯಭೀತಳಾಗಿ ಕಂಪಿಸುತ್ತಿರುವ ಆ ವೃಂದೆಯನ್ನು ಸಂತೈಸುತ್ತ ನುಡಿದ.

**ಮುನಿ:-** ಶುಭಾಂಗಿ, ಈ ಮುಂದಿನ ಚಿತ್ರಶಾಲೆಯಲ್ಲಿ ಮಹಾದೇವನಿಂದ ಯುದ್ಧದಲ್ಲಿ ಸಂಹರಿಸಲ್ಪಟ್ಟ ನಿನ್ನ ಪತಿಯ ತಲೆಯು ಇರುತ್ತದೆ. ಅದು ತನ್ನ ಎಲ್ಲ ಕಳೆ ಕಾಂತಿ ಹಾಗೂ ಸೌಂದರ್ಯದಿಂದ ಒಡಗೂಡಿಯೇ ಇರುವುದು. ನೀನು ಹೋಗಿ ಅದನ್ನು ಆಲಿಂಗನ ಮಾಡಿಕೊಂಡರೆ ಅವನು ಮತ್ತೆ ಪುನರುಜ್ಜೀವಿತನಾಗುವನು. ಅದುದರಿಂದ ನೀನು ಆ ಚಿತ್ರಶಾಲೆಗೆ ನಡೆ.

ಹೀಗೆ ಹೇಳಿ ಆ ತಪಸ್ವಿಯು ವೃಂದೆಯನ್ನು ಕರೆದುಕೊಂಡು ಆ ಚಿತ್ರಶಾಲೆಗೆ ತೆರಳಿದ. ಅಲ್ಲಿ ಒಂದು ದಿವ್ಯವಾದ ಪರ್ಯಂಕದ ಮೇಲೆ ಹತ್ತಿಕುಳಿತು ಅಲ್ಲಿರುವ ತನ್ನ ಪತಿಯ ಶಿರಸ್ಸನ್ನು ತಬ್ಬಿಕೊಂಡಳು. ಅದನ್ನು ತನ್ನ ಕೈಯಲ್ಲಿಯೇ ತೆಗೆದುಕೊಂಡು ಅತ್ಯಂತ ಪ್ರೀತಿಯಿಂದ ಕಣ್ಣುಮುಚ್ಚಿ ಪುನಃ ಪುನಃ ಆ ಪತಿಯ ಅಧರವನ್ನು ಚುಂಬಿಸಿದಳು. ಲೋಲುಪತೆಯಿಂದ ಅದರ ಅಧರಪಾನ ಮಾಡಿದಳು. ಆ ಸತೀಮಣಿಯ ಚುಂಬನಾಲಿಂಗನದಿಂದ ಸತ್ತುಹೋದ ಆ ಜಾಲಂಧರನು ಒಮ್ಮೆಲೇ ತನ್ನ ಮೊದಲಿನ ಕೈ, ಕಾಲು, ಆಕಾರ, ರೂಪ, ಚೆಲುವು ನಿಲುವುಗಳನ್ನು ಆಂತು ಜೀವಂತನಾಗಿ ನಿಂತುಕೊಂಡ ತನ್ನ ಪ್ರೇಯಸಿಯ ಎದುರು ಜಗದೀಶ್ವರನಾದ ಆ ಸಾಕ್ಷಾತ್ ಜನಾರ್ದನನೇ ಜಾಲಂಧರನ ರೂಪ ತೆಗೆದುಕೊಂಡು ವೃಂದಾರಿಕೆಯ ಎದುರು ನಿಂತುಕೊಂಡಿದ್ದ. ಹೀಗೆ ತಾನು ಕುಳಿತ ಮಂಚದ ಮೇಲೆ ತನ್ನ ಪತಿಯ ನಿರ್ಜೀವವಾದ ರುಂಡವನ್ನು ತಾನು ಪ್ರೇಮೋದ್ರೇಕದಿಂದ ಸ್ಪರ್ಶನ ಚುಂಬನ ಮಾಡಿದ ತಕ್ಷಣ ಮತ್ತೆ ಜೀವಂತವಾಗಿ ಕೈ, ಕಾಲು, ದೇಹ ಎಲ್ಲವನ್ನು ಪಡೆದು ಮತ್ತೆ ತನ್ನ ಮೊದಲಿನ ಜಾಲಂಧರ ಮೈತಾಳಿ ಬಂದದ್ದನ್ನು ಕಂಡು ವೃಂದೆಗೆ ಪರಮಾನಂದವೂ ಆಯಿತು. ಪರಮಾಶ್ಚರ್ಯವೂ ಆಯಿತು. ಕಾಮ, ಪ್ರೇಮ, ಕೌತುಕ, ಅನುರಾಗ, ಪರಮಾನಂದಗಳಿಂದ ತುಂದಿಲಳಾದ ಆ ವೃಂದಾರಿಕೆಯು ತನ್ನ ಪತಿರೂಪಿಯಾದ ಶ್ರೀಹರಿಯನ್ನು ಕುರಿತು ನುಡಿದಳು. ''ಸ್ವಾಮಿ, ನಾನು ನಿನಗೆ ಏನು ಪ್ರಿಯವಾದುದನ್ನು ಮಾಡಲಿ? ನನ್ನ ಭಾಗ್ಯದಿಂದಲೇ ನೀನು ಮತ್ತೆ ಬದುಕಿ ಬಂದಿರುವಿ. ನೀನು ಯುದ್ಧಕ್ಕೆ ಹೋದ ಬಳಿಕ ಶಂಕರನೊಡನೆ ಹೇಗೆ ಯುದ್ಧ ಮಾಡಿದೆ? ಹೇಗೆ ಮರಣ ಹೊಂದಿದೆ? ಇದೆಲ್ಲ ಸಂಗ್ರಾಮದ ಸಮಾಚಾರವನ್ನು ತಿಳಿಸು.''

ಆಗ ಮಾಯೆಯಿಂದ ಜಾಲಂಧರನ ವೇಷಧರಿಸಿದ ಆ ಮಧುಸೂದನನು ತನ್ನ ಮೆಚ್ಚಿನ ಮಡದಿಯಾದ ವೃಂದಾರಿಕೆಯನ್ನು ಕುರಿತು ನುಡಿದ.

**ಮಾಯಾ ಜಾಲಂಧರ:-** ಪ್ರಿಯೆ, ರುದ್ರನು ತನ್ನ ಭೀಕರವಾದ ಚಕ್ರಾಯುಧದಿಂದ ಕತ್ತರಿಸಿ ಹಾಕಿದ ಯುದ್ಧದಲ್ಲಿ ನನ್ನ ತಲೆಯನ್ನು. ಆಗ ನಿನ್ನ ಸಿದ್ಧಿಯ ಹಾಗೂ ತಪಸ್ಸಿನ ಯೋಗದಿಂದ ನನ್ನ ಕಡೆಗೆ ನೀನು ಕಳಿಸಿದ ದೂತನು ಯುದ್ಧ ನಡೆದಲ್ಲಿಗೆ ಬಂದು ಶಿವನು

ಕಡೆದುಹಾಕಿದ ಆ ನನ್ನ ತಲೆಯನ್ನು ಇಲ್ಲಿಗೆ ತೆಗೆದುಕೊಂಡು ಬಂದಿದ್ದನು. ಈ ಪುಣ್ಯಾಶ್ರಮದಲ್ಲಿ ಇದ್ದ ಆ ನನ್ನ ರುಂಡವನ್ನು ಪ್ರೀತಿಯಿಂದ ನೀನು ಸ್ಪರ್ಶವನ್ನು ಮಾಡಿದೆ. ಪ್ರೇಮದಿಂದ ಚುಂಬಿಸಿದೆ. ಹಾಗೂ ಅಧರಪಾನಮಾಡಿ ಆಲಿಂಗಿಸಿದೆ ನಿನ್ನ ಅಂಗಸಂಗದ ಪ್ರಭಾವದಿಂದ ಹಾಗೂ ನಿನ್ನ ಚುಂಬನ ಸ್ಪರ್ಶದ ಮಹಿಮೆಯಿಂದ ರುಂಡ ಮಾತ್ರ ಶೇಷನಾದ ನಾನು ಮತ್ತೆ ಜೀವಂತನಾಗಿ ಪೂರ್ಣವಾದ ದೇಹವನ್ನು ಪಡೆದು ಬದುಕಿ ಬಂದೆ. ಈ ಅವಧಿಯಲ್ಲಿ ನೀನು ನನ್ನ ವಿರಹದಿಂದ ಬಹಳ ದುಃಖವನ್ನು ಅನುಭವಿಸಬೇಕಾಯಿತು. ಪ್ರೇಯಸಿ, ಕ್ಷಮಿಸು. ನಾನು ನಿನ್ನನ್ನು ಬಿಟ್ಟು ಯುದ್ಧಕ್ಕೆ ಹೋದದ್ದೇ ತಪ್ಪಾಯಿತು.

ಹೀಗೆ ಹೇಳಿ ಆ ಜಾಲಂಧರನು ವೃಂದೆಗೆ ರಣಾಂಗಣದಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳಿಸಿದ. ತಾನು ಅಲ್ಲಿ ಸತ್ತು ಮತ್ತೆ ಬದುಕಿ ಬಂದ ಬಗೆಯನ್ನು ಕೂಡ ವಿವರಿಸಿದ. ಅವಳೊಡನೆ ಬಗೆಬಗೆಯ ವಸ್ತ್ರಾಲಂಕಾರ ತಾಂಬೂಲಾದಿಗಳನ್ನು ಕೊಟ್ಟು ವಿನೋದ ವಚನವಾಡಿದ. ಹಾಗೂ ಸರಸಾಲಾಪಗಳಿಂದ ನಕ್ಕು ಸಂತೋಷಪಟ್ಟ. ಆಗ ವೃಂದೆಯು ಪುನರ್ಜೀವಿತನಾಗಿ ಬಂದ ತನ್ನ ರಮಣನನ್ನು ಗಾಢವಾಗಿ ಆಲಿಂಗಿಸಿದಳು. ಸರ್ವಭೋಗಗಳನ್ನೂ ರತಿವಿಲಾಸ ಸುಖ ಸೌಭಾಗ್ಯವನ್ನೂ ಅನುಭವಿಸಿದಳು. ಮೋಕ್ಷಕ್ಕಿಂತ ಅಧಿಕವಾದ ಆನಂದವನ್ನು ಹೊಂದಿದಳು.

ಆಗ ಜಾಲಂಧರ ವೇಷಧಾರಿಯಾದ ಆ ಭಗವಂತನು ಸಾಕ್ಷಾತ್ ತನ್ನ ಕಾಂತೆಯಾದ ಲಕ್ಷ್ಮೀದೇವಿಯನ್ನು ಕೂಡ ಮರೆತು ವೃಂದೆಯೊಡನೆ ಆನಂದದಿಂದ ಜಾಲಂಧರ ರೂಪದಿಂದ ವಿಹರಿಸಿದ. ಆಗ ಆ ವೃಂದಾರಿಕೆಯ ದೇಹದ ಬೆವರಿನ ಹನಿಯು ನೆಲದ ಮೇಲೆ ಬಿದ್ದು ಒಂದು ತುಳಸಿಯ ಗಿಡ ಹುಟ್ಟಿತು. ಆ ಸ್ಥಳವೇ ಮುಂದೆ ಬೃಂದಾವನ ಎಂದು ಪ್ರಸಿದ್ಧವಾಯಿತು. ಹೀಗೆ ಶಿವನ ಕಾರ್ಯಕ್ಕಾಗಿ ಜಾಲಂಧರನ ವೇಷದಿಂದ ವೃಂದೆಯೊಡನೆ ಕೂಡಿಕೊಂಡ ಶ್ರೀಹರಿಯು ಸರ್ವರಮಣನಾದರೂ ಲೋಕ ವಿಡಂಬನಾರ್ಥವಾಗಿ ಇಂಥ ಲೀಲೆಗೈದು ಕೆಲವು ಕಾಲ ಅಲ್ಲಿ ಕಳೆದ.

ಮುಂದೆ ಒಂದು ದಿನ ವೃಂದೆಯು ಸಾಕ್ಷಾತ್ ತನ್ನ ಪತಿಯೇ ಎಂದು ಭಾವಿಸಿ ವಿಹರಿಸಿದ ಆ ಜಾಲಂಧರನನ್ನು ತಬ್ಬಿಕೊಂಡು ಆನಂದದಿಂದ ಇರುವಾಗ ಒಮ್ಮೆಲೇ ಅವಳಿಗೆ ತನ್ನ ಅಲಿಂಗನದಲ್ಲಿ ಇದ್ದುದು ತಪಸ್ವಿಯಾದ ಓರ್ವಮುನಿಯ ದೇಹ ಎಂದು ತಿಳಿಯಿತು. ತನ್ನ ಪತಿ ಜಾಲಂಧರನ ಬದಲಾಗಿ ತಾನು ಮೊದಲು ಆಶ್ರಮದಲ್ಲಿ ಕಂಡ ಹಾಗೂ ತನ್ನನ್ನು ಈ ಚಿತ್ರಶಾಲೆಗೆ ಕರೆತಂದ ತಪಸ್ವೀಮುನಿಯ ಶರೀರವನ್ನೇ ತನ್ನ ಬಳ್ಳಿದೋಳುಗಳಿಂದ ತಾನು ಬಳಸಿ ಮಲಗಿದ್ದು ಅವಳಿಗೆ ತಿಳಿದು ಬಂದಿತು. ಕೂಡಲೇ ಅವಳು ಸಿಡಿದು ದೂರ ಸರಿದು ನಿಂತು. ಕೋಪದಿಂದ ಕೆರಳಿ ನುಡಿದಳು.

**ವೃಂದಾ:-** ''ದುಷ್ಟಮುನಿಯೆ, ನೀನು ತಪಸ್ವಿಯ ವೇಷದಿಂದ ನನ್ನನ್ನು ಮೋಸಮಾಡಲು ಬಂದೆಯೋ? ನೀನು ನನ್ನ ಪತಿರೂಪದಿಂದ ಬಂದುದರಿಂದ ನಾನು ನಿನಗೆ ಅಧೀನಳಾದೆ. ನಿನ್ನೊಡನೆ ರಮಿಸಿದೆ. ಆದರೆ ನೀನು ನನಗೆ ಮಾಡಿದ್ದು ಎಂಥ ಮೋಸ? ನನ್ನ ಸರ್ವಸ್ವವನ್ನೇ ಸೂರೆಗೊಂಡೆ. ಘಾತಮಾಡಿದೆ. ನೀನು ಯಾರು? ನಿಜ ಹೇಳು.

**ತಪಸ್ವಿ:-** ವೃಂದಾರಿಕೆ, ನಾನು ನಿನಗೆ ನಿಜವಾದ ವೃತ್ತಾಂತವನ್ನು ಹೇಳುತ್ತೇನೆ ಕೇಳು. ನಾನು ಲಕ್ಷ್ಮೀಪತಿಯಾದ ಸಾಕ್ಷಾತ್ ನಾರಾಯಣ. ನಿನ್ನ ಗಂಡನಾದ ಜಾಲಂಧರನು ಸತೀ ಶಿರೋಮಣಿಯಾದ ಶಿವನ ಪತ್ನಿ ಪಾರ್ವತಿಯನ್ನು ಮಾಯೆಯಿಂದ ವಂಚಿಸಿ ಹೊಂಚುಹಾಕಿದ. ಆದರಲ್ಲಿ ವಿಫಲನಾಗಿ ಪಾರ್ವತಿಗಾಗಿಯೇ ಶಿವನೊಡನೆ ಹೋರಾಡಿದ. ಯುದ್ಧದಲ್ಲಿ ಅವನಿಂದ ಹತನಾದ. ಶಿವ ಬೇರೆ ಅಲ್ಲ. ನಾನು ಬೇರೆ ಅಲ್ಲ. ಶಿವನ ಹೃದಯವೇ ನಾನು. ನನ್ನ ಹೃದಯವೇ ಶಿವ. ನಿನ್ನ ಪತಿಯು ಮಹಾದೇವನಿಗೆ ಮಾಡಿದ ಅಪಕಾರಕ್ಕೆ ನಾನು ನಿನ್ನ ಪತಿಯ ರೂಪದಿಂದ ನಿನ್ನ ಬಳಿಗೆ ಬಂದೆ. ಈಗ ನೀನು ಭಕ್ತಿಯಿಂದ ನನ್ನನ್ನು ಸೇವಿಸು.

**ವೃಂದಾರಿಕಾ:-** ನೀನು ಆ ಮಹಾವಿಷ್ಣುವೇ ! ನೀನು ಹಿಂದೆ ನನ್ನ ಪತಿಯಾದ ಜಾಲಂಧರನಿಂದ ಬದ್ಧನಾಗಿದೆ ಯುದ್ಧ ಭೂಮಿಯಲ್ಲಿ. ನನ್ನ ಪತಿಯು ತನ್ನ ತಂದೆಯಾದ ಸಮುದ್ರರಾಜನ ಮಾತು ಕೇಳಿ ನಿನ್ನನ್ನು ಬಂಧನದಿಂದ ಬಿಡುಗಡೆ ಮಾಡಿದ. ನಿನಗೆ ಅಸಂಖ್ಯ ರತ್ನಗಳನ್ನು ಕೊಟ್ಟು ಸತ್ಕಾರ ಮಾಡಿದ. ಇಂಥ ನಿನಗೆ ಉಪಕಾರವನ್ನು ಮಾಡಿದ ನನ್ನ ಪತಿ ಜಾಲಂಧರನ ಪತ್ನಿಯನ್ನು ನೀನು ಮೋಸದಿಂದ ಅಪಹರಿಸಿದೆ. ಸಾಕ್ಷಾತ್ ಜಗದೀಶ್ವರನಾದರೂ ನೀನು ಪರಸ್ತ್ರೀ ಸಹವಾಸವನ್ನು ಮಾಡಿದೆ. ದೇವರಾದರೂ ನೀನು ಮಾಡಿದ ಕರ್ಮ ನಿನ್ನನ್ನು ಬಿಡಲಾರದು. ನೀನು ಈಗ ಮಾಯಾ ತಪಸ್ವಿಯ ವೇಷದಿಂದ ನನ್ನನ್ನು ಮೋಸಗೊಳಿಸಿ ಅಪಹರಿಸಿದೆಯಲ್ಲವೆ? ನಿನ್ನ ಹೆಂಡತಿಯನ್ನು ಕೂಡ ಬೇರೊಬ್ಬ ದುಷ್ಟನು ಮಾಯಾ ತಪಸ್ವಿಯ ವೇಷದಿಂದ ಕದ್ದುಕೊಂಡು ಹೋಗಲಿ. ಹೀಗೆ ಶ್ರೀಹರಿಗೆ ಶಾಪ ಹಾಕಿದಳು ದುಃಖದಿಂದ ಬೆಂದುಹೋದ ಆ ವೃಂದೆ.

ಲೋಕವಿಡಂಬನಾರ್ಥವಾಗಿ ಆ ಭಗವಂತನು ಹೀಗೆಲ್ಲ ಲೀಲೆಗೈದು ಅಲ್ಲಿಯೇ ಅದೃಶ್ಯನಾದ. ಮತ್ತು ಅವನು ತನ್ನ ಮಾಯೆಯಿಂದ ನಿರ್ಮಿಸಿದ ಆ ಚಿತ್ರಶಾಲೆ, ಮಂಚ, ಭೋಗಸಾಮಗ್ರಿ, ಬಂಗಾರದ ಬಣ್ಣ ಮಂಗಗಳು, ಬಗೆಬಗೆಯ ಹೇಮ ವರ್ಣದ ಹಕ್ಕಿಗಳು, ಚಿನ್ನದ ಕಮಲಗಳಿಂದ ತುಂಬಿದ ಹೊಕ್ಕರಣಿಗಳು ಎಲ್ಲವೂ ಕೂಡಲೇ ಅದೃಶ್ಯವಾದವು. ಶೂನ್ಯವಾದ ಆ ಗೊಂಡಾರಣ್ಯದಲ್ಲಿ ಉಳಿದವರು ವೃಂದೆ ಹಾಗೂ ಅವಳ ಕಾಮದೂತಿ ಇಬ್ಬರೇ. ಆಗ ವೃಂದೆಯು ತನ್ನ ಕಾಮದೂತಿಯನ್ನು ಕುರಿತು ಹೇಳಿದಳು - ''ಸಖಿ, ಇದೆಲ್ಲವೂ ವಿಷ್ಣುಮಾಯೆ, ನಾನು ಅವನ ಮಾಯೆಯಿಂದ ಯಾವುದೋ ಒಂದು ಸೆಳೆತಕ್ಕೆ ಒಳಗಾಗಿ ಮನೆಮಾರು ತೊರೆದೆ. ರಾಜಧಾನಿಯನ್ನು ಬಿಟ್ಟೆ. ಈ ಕಗ್ಗಾಡಿಗೆ ಬಂದೆ. ಇಲ್ಲಿ ಮೃತನಾದ ನನ್ನ ಪತಿಯು ಮರಳಿ ಬಂದಿದ್ದನ್ನು ನೋಡಿದೆ. ಅವನು ನನ್ನ ಪತಿ ಜಾಲಂಧರನೇ ಎಂದು ತಿಳಿದು ಅವನೊಡನೆ ವಿವಿಧ ಕಾಮಕೇಳೀವಿಲಾಸವನ್ನು ಮಾಡಿದೆ. ಈಗ ಅದೇ ವಿಷ್ಣುವಿನ ಮಾಯೆಯಿಂದ ಗುಟ್ಟೆಲ್ಲವೂ ರಟ್ಟಾಯಿತು. ಇದೆಲ್ಲವೂ ಶುದ್ಧ ಮೋಸ ಎಂದು ಅರಿವಾಯಿತು. ಇನ್ನು ಎಲ್ಲಿ ಹೋಗಲಿ? ಇನ್ನು ನನಗೆ ಪತಿಯ ದರ್ಶನ ಕನಸಿನ ಮಾತು. ಇನ್ನು ಮೇಲೆ ನಾನು ಬದುಕಿ ಇದ್ದು ಏನು ಮಾಡುವುದು? ಮರಣವೇ ನನಗೆ ಶರಣು.''

ಹೀಗೆ ತನ್ನ ನಿರ್ಣಯವನ್ನು ತಿಳಿಸಿ ವೃಂದೆಯು ಅಲ್ಲಿಂದ ಎದ್ದು ಅಲ್ಲಿಯೇ ಮುಂದಿರುವ ಒಂದು ದೊಡ್ಡ ಸರೋವರಕ್ಕೆ ಬಂದಳು. ಆಗಿಹೋದ ಮಾತಿಗೆ ಇನ್ನು ದುಃಖಿಸಿ ಉಪಯೋಗವಿಲ್ಲ ಎಂದು ಮೈ ಕೊಡವಿಕೊಂಡು ಮೇಲೆದ್ದಳು. ಸರೋವರದಲ್ಲಿ

ತನ್ನ ಮೈ ತೊಳೆದುಕೊಂಡಳು. ಅಲ್ಲಿಯೇ ದಂಡೆಯ ಮೇಲೆ ಪದ್ಮಾಸನ ಹಾಕಿ ಕುಳಿತುಕೊಂಡು ತಪಸ್ಸನ್ನು ಆಚರಿಸಿದಳು. ಅತ್ಯುಗ್ರವಾದ ತಪಸ್ಸಿನಿಂದ ತನ್ನ ದೇಹವನ್ನು ಶೋಷಿಸಿದಳು. ಅವಳ ಸಖಿಯೂ ಅವಳೊಡನೆ ಕೈಕೊಂಡಳು ಉಗ್ರತಪಸ್ಸನ್ನು.

ವೃಂದೆಯ ತಪಸ್ಸಂತೂ ಅತ್ಯುಗ್ರ. ಮನಸ್ಸು ಅವ್ಯಗ್ರ. ಜಪ, ಉಪಾಸನೆ, ಉಪವಾಸ, ಅನುಷ್ಠಾನ, ಧ್ಯಾನ, ಎಲ್ಲವೂ ಸಾಗ್ರ, ಸಮಗ್ರ, ಊಟ, ನಿದ್ರೆ, ಆಹಾರ, ವಿಶ್ರಾಂತಿ, ಎಲ್ಲವನ್ನೂ ತೊರೆದು ಏಕಪ್ರಕಾರವಾಗಿ ಸಾಗಿತು ಅವಳ ಘೋರ ತಪಶ್ಚರ್ಯೆ. ಹಗಲಿರುಳೂ ಜಪಜಪಿಸಿ, ನಿರಂತರವೂ ತಪತಪಿಸಿ ಸೊರಗಿ ಸವೆದು ಕಟ್ಟಿಗೆಯಂತಾಯಿತು ಅವಳ ಸುಂದರವಾದ ಅಂದ ದೇಹ. ಆಗ ಸ್ವರ್ಗಲೋಕದಿಂದಲೇ ಅನೇಕ ಅಪ್ಸರೆಯರು ವೃಂದೆಯ ಬಳಿಗೆ ಬಂದರು. ಅವಳಿಗೆ ಹಿತೋಪದೇಶ ಮಾಡಿದರು.

**ಅಪ್ಸರೆಯರು :-** ವೃಂದಾರಿಕೆ, ನಿನ್ನ ಸುಂದರವಾದ ಈ ಶರೀರವನ್ನು ನೀನು ಬಿಡಬೇಡ. ನೀನು ಇದೇ ದೇಹದಿಂದಲೇ ಸ್ವರ್ಗಕ್ಕೆ ಬಾ. ಅಲ್ಲಿಯ ನಂದನವನದಲ್ಲಿ ಆನಂದದಿಂದ ವಿಹರಿಸು. ಸಾಕ್ಷಾತ್ ಲಕ್ಷ್ಮೀಪತಿಗೆ ಆನಂದವನ್ನು ನೀಡಿದ ಈ ನಿನ್ನ ದೇಹವು ಮೂರು ಲೋಕದಲ್ಲಿಯೇ ವಿಜಯಶಾಲಿಯಾಗಿದೆ. ಅಂಥ ಈ ನಿನ್ನ ದೇಹವನ್ನು ನೀನೇಕೆ ತೊರೆಯುವೆ ? ನಿನ್ನ ಪತಿಯು ಯುದ್ಧದಲ್ಲಿ ಮಹಾದೇವರ ತ್ರಿಶೂಲದಿಂದ ಹತನಾಗಿದ್ದಾನೆ. ನೀನು ಸ್ವದೇಹದಿಂದ ಹೀಗೆ ಸ್ವರ್ಗಕ್ಕೆ ಬಾ.

**ವೃಂದಾ:-** ದೇವಿಯೇ, ನನ್ನ ಪತಿ ಜಾಲಂಧರ ಮಹಾಪರಾಕ್ರಮಿ. ಅವನು ಸ್ವರ್ಗಾಧಿಪತಿಯಾದ ದೇವೇಂದ್ರನ ಪತ್ನಿ ಶಚೀದೇವಿಯನ್ನು ಗೆದ್ದು ತಂದು ಮತ್ತೆ ಮರಳಿ ಕಳಿಸಿದ. ಅಂಥ ಪತಿಯೊಡನೆ ಎಲ್ಲ ಸುಖ ಸೌಭಾಗ್ಯಗಳನ್ನು ಅನುಭವಿಸಿದ ನಾನು ಅವನಿಂದ ವಿರಹಿತಳಾಗಿದ್ದೇನೆ. ನಿಮ್ಮ ಯಾವ ಸ್ವರ್ಗಸುಖವೂ ಬೇಕಾಗಿಲ್ಲ. ನನಗೆ ಬೇಕಾಗಿದ್ದು ನನ್ನ ಪತಿ. ಅವನು ಎಲ್ಲಿಯೇ ಇರಲಿ, ಅವನು ಇದ್ದಲ್ಲಿ ಹೋಗಿ ಅವನನ್ನು ಕೂಡಿಕೊಳ್ಳಲಿಕ್ಕಾಗಿ ಅರ್ಥಾತ್ ಮರಣಾನಂತರದ ಅವನ ಮಧುರಮಿಲನಕ್ಕಾಗಿ ಈ ನನ್ನ ಮಾನವೀ ದೇಹವನ್ನು ಯೋಗಾಗ್ನಿಯಿಂದ ವಿಸರ್ಜಿಸುತ್ತೇನೆ. ಹೀಗೆ ಹೇಳಿ ತನ್ನನ್ನು ಕರೆಯಲು ಬಂದ ಗಂಧರ್ವ ಸುಂದರಿಯರನ್ನೆಲ್ಲ ತಿರುಗಿ ಕಳಿಸಿಕೊಟ್ಟು ತನ್ನ ತಪಸ್ಸನ್ನು ಮುಂದುವರೆಸಿದಳು. ವೃಂದೆಯ ಚಾರಿತ್ರ್ಯ ಹಾಗೂ ಪರಿಶುದ್ಧವಾದ, ಸತೀ ಶರಣೆಯ ವಿಚಾರಧಾರೆಯಿಂದ ತುಂಬ ಪ್ರಭಾವಿತರಾದರು ಆ ಸಗ್ಗದ ಬೆಲೆವೆಣ್ಣುಗಳು. ವೃಂದೆಯ ಮೇಲೆ ಇಮ್ಮಡಿಸಿತು. ಅವರ ಪ್ರೀತಿ ಮುಮ್ಮಡಿಸಿತು, ಅವರ ಸ್ನೇಹ, ಅವರು ನಿತ್ಯವೂ ಬಂದು ತಪಃಸಮಾಧಿನಿತರಳಾದ ವೃಂದೆಯ ಸಂದರ್ಶನ ಮಾಡಿಕೊಂಡು ಹೋಗುತ್ತಿದ್ದರು.

ಕೊನೆಗೆ ಒಂದು ದಿನ ವೃಂದೆಯು ಬಾಹ್ಯವಿಷಯಗಳಿಂದ ತನ್ನ ಮನಸ್ಸನ್ನು ಸೆಳೆದುಕೊಂಡು ಭಗವಂತನಲ್ಲಿಯೇ ನೆಟ್ಟಳು. ಜ್ಞಾನಾಗ್ನಿಯಿಂದ ಅದರಲ್ಲಿಯ ಕೋಪ, ಕಾಲುಷ್ಯ, ಅನ್ಯಥಾ ಭಾವ ಅಪರಾಧಿ ಭಾವ ಮುಂತಾದ ದುರ್ವಿಚಾರಗಳನ್ನೆಲ್ಲ ಸುಟ್ಟು ಭಗವಂತನಲ್ಲಿ ಕ್ಷಮಾಪಣೆಯನ್ನು ಕೇಳಿಕೊಂಡಳು. ಅಪತ್ಯಂತರ್ಗತನಾದ ಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯನ್ನು ಇಟ್ಟು ಯೋಗಾಭ್ಯಾಸದಿಂದ ತನ್ನ ಪಾಂಚಭೌತಿಕ ಶರೀರವನ್ನು ಪರಿತ್ಯಾಗ ಮಾಡಿದಳು. ಮರಣ ಕಾಲದಲ್ಲಿ ಅವಳಿಗೆ ಶ್ರೀಹರಿಯ ವಿಷಯದಲ್ಲಿ ಯಾವುದೇ ದುರ್ಭಾವನೆ ದ್ವೇಷ ಕೋಪ ತಾಪ ಉಳಿದಿರಲಿಲ್ಲ. ತಾನು ಕೊಟ್ಟ ಶಾಪಕ್ಕಾಗಿ

ಪಶ್ಚಾತಾತಪಪಟ್ಟು ಕ್ಷಮೆ ಕೇಳಿಕೊಂಡು 'ನೀನೇ ನನಗೆ ಗತಿ. ನೀನೇ ನನ್ನ ರಕ್ಷಕ' ಎಂದು ಬೇಡಿಕೊಂಡು ಅನನ್ಯ ದೃಢತರ ಭಕ್ತಿಯಿಂದ ಧ್ಯಾನ ಮಾಡಿದ್ದರಿಂದ ಆ ವೃಂದೆಗೆ ಯೋಗ್ಯವಾದ ಸದ್ಗತಿಯನ್ನು ಶ್ರೀಹರಿಯು ಕರುಣಿಸಿದ. ಮರಣ ಕಾಲದಲ್ಲಿ ಅವಳ ಪರಿಶುದ್ಧ ಭಾವ ಹಾಗೂ ಭಗವದ್ಭಕ್ತಿ ದಿವ್ಯ ಜ್ಞಾನಗಳನ್ನು ಕಂಡು ಸುರಲೋಕದ ಮಹಾತ್ಮರೆಲ್ಲರೂ ಅಪ್ಸರೆಯರೊಂದಿಗೆ ವೃಂದೆಯ ಶರೀರತ್ಯಾಗದ ವಿಚಿತ್ರ ಚರ್ಯೆಯನ್ನು ಕಂಡು ಆನಂದದಿಂದ ಅವಳ ದೇಹದ ಮೇಲೆ ಪುಷ್ಪವೃಷ್ಟಿ ಸುರಿಸಿದರು.

ಅನಂತರ ಅವಳ ಸಖಿಯಾದ ಕಾಮದೂತಿಯು ಅರಣ್ಯದಲ್ಲಿ ಒಣಗಿದ ಕಟ್ಟಿಗೆಯನ್ನು ಆಯ್ದುಕೊಂಡು ತಂದು ಚಿತೆಯನ್ನು ತಯಾರಿಸಿ ಅದರ ಮೇಲೆ ಸಖಿಯ ಶವವನ್ನು ಇಟ್ಟು ಆ ವೃಂದೆಯ ದೇಹಕ್ಕೆ ಬೆಂಕಿಕೊಟ್ಟಳು. ಅನಂತರ ತಾನು ಕೂಡ ಅದೇ ಚಿತಾಗ್ನಿಯಲ್ಲಿ ಪ್ರವೇಶಿಸಿ ಗೆಳತಿಯೊಡನೆ ದಗ್ಧಳಾಗಿಹೋದಳು.

ಅನಂತರ ಆ ವನದಲ್ಲಿ ಇರುವ ತಾಪಸರು ವೃಂದಾದೇವಿಯ ಚಿಂತೆಯ ಬೂದಿಯಿಂದಲೇ ಒಂದು ಕಟ್ಟೆಯನ್ನು ಕಟ್ಟಿ ಉಳಿದ ಮೂಳೆ ಹಾಗೂ ಭಸ್ಮವನ್ನು ಗಂಗೆಯಲ್ಲಿ ಹಾಕಿದರು. ವೃಂದಾದೇವಿಯು ದೇಹವನ್ನು ಬಿಟ್ಟು ಬ್ರಹ್ಮಮಾರ್ಗದಿಂದ ಪರಮಪದವನ್ನು ಪಡೆದ ಬಳಿಕ ಆ ಸ್ಥಳವೇ ಗೋವರ್ಧನ ಪರ್ವತದ ಬಳಿಯಲ್ಲಿ **'ವೃಂದಾವನ'** ಎಂದು ಪ್ರಸಿದ್ಧವಾಯಿತು.

ಸ್ವರ್ಗಲೋಕದಲ್ಲಿಯ ದೇವತೆಗಳೂ ದೇವತಾಸ್ತ್ರೀಯರು ಮಹಾದೇವರಿಂದ ಜಾಲಂಧರನು ಹತಪತಿತನಾದ ಸಮಾಚಾರವನ್ನು ಕೇಳಿ ಆನಂದದಿಂದ ದೇವ ದುಂದುಭಿಗಳನ್ನು ಮೊಳಗಿಸಿದರು. ಹಾಗೂ ನಿರ್ಭಯವಾಗಿ ಸುರಪತಿಯು ಸ್ವರ್ಗ ಸಿಂಹಾಸನದ ಮೇಲೆ ಆರೂಢನಾಗಿ ಸುರಸಮಾಜಕ್ಕೆಲ್ಲ ಸಂತಸವನ್ನೆಲ್ಲ ಉಂಟುಮಾಡಿದ. ಹಾಗೂ ಎಲ್ಲ ಸ್ವರ್ಗದ ಜನರು ನಿರ್ಭಯ ವಾತಾವರಣದಲ್ಲಿ ಮತ್ತೆ ಮೊದಲಿನಂತೆ ತಮ್ಮ ಸಾಮ್ರಾಜ್ಯದಲ್ಲಿ ಸಂತಸ ತುಂಬಿ ಶೋಭೆಯಿಂದ ವಿರಾಜಿಸತೊಡಗಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣುವಿನಿಂದ ತಪಸ್ವಿಯ ವೇಷಧಾರಣೆ ಎಂಬ ಹದಿನಾರನೇಯ ಅಧ್ಯಾಯ ಮುಗಿದುದು*

—೦—

## ಶಿವರೂಪ ಧರಿಸಿದ ಜಾಲಂಧರನ ನಿಜರೂಪವನ್ನು ಪರೀಕ್ಷಿಸಲಿಕ್ಕಾಗಿ ಪಾರ್ವತಿಯಿಂದ ಸಖೀಪ್ರೇಷಣ

ಅಧ್ಯಾಯ - ೧೭

**ಧರ್ಮರಾಜ:-** ಪಾರ್ವತಿಯನ್ನು ವಶಪಡಿಸಿಕೊಳ್ಳಲಿಕ್ಕಾಗಿ ಯುದ್ಧರಂಗ ಬಿಟ್ಟು ಬಂದು ಪರಮೇಶ್ವರನ ರೂಪಧರಿಸಿ ಮಾನಸೋತ್ತರ ಶೈಲಶಿಖರವನ್ನು ಸಾರಿದ ಜಾಲಂಧರನು ಗೌರಿಯನ್ನು ಕಂಡ ಬಳಿಕ ಮುಂದೆ ಏನು ಮಾಡಿದ? ಆ ಕಥಾಭಾಗವನ್ನು ವಿಸ್ತಾರವಾಗಿ ನನಗೆ ಹೇಳು.

**ನಾರದ:-** ಮಾಯೆಯಿಂದ ಶಿವನ ರೂಪಧರಿಸಿ ಜಾಲಂಧರ ರಣಾಂಗಣದಿಂದ ಅವಸರದಲ್ಲಿ ಪಾರ್ವತಿ ಇದ್ದಲ್ಲಿಗೆ ಬಂದು ಅವಳ ಅಂಗಸಂಗವನ್ನು ಪ್ರಾರ್ಥಿಸಿದ. ಮಕ್ಕಳಾದ ಸ್ಕಂದ ಗಣಪತಿ ಇಬ್ಬರೂ ಯುದ್ಧದಲ್ಲಿ ಸತ್ತು ಬಿದ್ದಿದ್ದಾರೆ ಎಂಬ ಸುದ್ಧಿಯನ್ನು ಕೇಳಿ, ಮತ್ತು ತನ್ನ ಮುಂದೆ ತಂದು ಆ ಮಾಯಾ ಶಿವನು ಇರಿಸಿದ ಅವರಿಬ್ಬರ ರುಂಡಗಳನ್ನು ಕಂಡು ದುಃಖೋದ್ರೇಕದಿಂದ ವಿಲಪಿಸುತ್ತಿರುವ ಗೌರಿಗೆ ಶಿವನ (ಜಾಲಂಧರನ) ಈ ರತಿ ಪ್ರಾರ್ಥನೆಯನ್ನು ಕೇಳಿ ವಿಚಿತ್ರ ಎನಿಸಿತು. ಮಹಾಸಂಯಮಿಯಾದ ಶಿವ ಇಂಥ ದಾರುಣವಾದ ದುಃಖ ಸನ್ನಿವೇಶದಲ್ಲಿ ಮಕ್ಕಳ ಕಡಿದು ರುಂಡಗಳು ಎದುರು ಬಿದ್ದಾಗ, ಆ ದುಃಖವನ್ನೆಲ್ಲ ಮರೆತು, ಸಾಮಾನ್ಯ ಪ್ರಾಕೃತ ಲಂಪಟ ಜನರೂ ಕೂಡ ಬಯಸದ ರತಿಕ್ರೀಡೆಗಾಗಿ ಬಯಸುತ್ತಿದ್ದುದನ್ನು ನೋಡಿ ಅವಳಿಗೆ ಆತ್ಯಾಶ್ಚರ್ಯವೂ ಭಯಂಕರ ಆಘಾತವೂ ಆಯಿತು. ಆಗ ಅವಳು

**ಮಹಾವಿಷಾದೇ ಪತಿತೇ ಭಯೇ ಚ ಕೃತೇ ಸಮಾಧೌ ವಮನೇ ಮಹಾಜ್ವರೇ ।**
**ಶ್ರಾದ್ಧೇ ಪ್ರಯಾಣೇ ಗುರುವೃದ್ಧಸನ್ನಿಧೌ ರತಿಂ ಬುಧಾಃ ಶಂಕರ ವರ್ಜಯಂತಿ ॥**

ಪರಮೇಶ್ವರ, ಮಹಾಸಂಕಟ, ಭಯಾಪಾಯ, ತಪಃಸಮಾಧಿ, ವಾಂತಿ, ಮಹಾಜ್ವರ, ಶ್ರಾದ್ಧ, ಪ್ರಯಾಣ ಗುರುಹಿರಿಯರ ಸನ್ನಿಧಾನ ಮುಂತಾದ ಕಡೆಗಳಲ್ಲಿ ರತಿವಿಹಾರವನ್ನು ಬಲ್ಲವರು ವರ್ಜಿಸುತ್ತಾರೆ ಹಾಗೆಯೇ ಶಾಸ್ತ್ರದಲ್ಲಿಯೂ ಹೇಳಿದ್ದಾರೆ. ಇದನ್ನೆಲ್ಲ ತಿಳಿದು ಪುತ್ರಶೋಕದಿಂದ ದಗ್ಧಳಾಗಿ ಕಣ್ಣೀರು ಕರೆಯುತ್ತಿರುವ ಹಾಗೂ ಶೋಕಾರ್ತಳಾದ ನನ್ನನ್ನು ನೀನು ರತಿವಿಲಾಸಕ್ಕೆ ಹೇಗೆ ಕರೆಯುತ್ತಿ? ಎಂದು ಜರಿದು ಅವನನ್ನು ನಿರಾಕರಿಸಿದ್ದಳು. ಆಗ ಆ ಮಾಯಾಶಂಕರನ ರೂಪಧರಿಸಿದ ಜಾಲಂಧರನು - ''ಪತಿಯ ಅಪೇಕ್ಷೆಯನ್ನು ಧಿಕ್ಕರಿಸಿದ ಸತಿಯರು ರೌರವ ನರಕಕ್ಕೆ ಹೋಗುತ್ತಾರೆ. ನನ್ನ ಅನುಚರರಾದ ಗಣಗಳು ಎಲ್ಲರೂ ಸತ್ತು ಹೋದರು. ಮಕ್ಕಳು ಮರಣಿಸಿದರು. ನನ್ನ ಬುದ್ಧಿಯೂ ಹಾಳಾಗಿಹೋಗಿದೆ. ಈಗ ನನ್ನ ಹೆಂಡತಿಯೂ ನನ್ನ ಪಾಲಿಗೆ ಇಲ್ಲದಂತಾಯಿತು. ನಾನು ಈಗ ಸರ್ವಶೂನ್ಯನೇ ಆದಂತಾಯಿತು. ಇನ್ನು ಮೇಲೆ ನಾನು ಬದುಕಿಯಾದರೂ ಏನು ಮಾಡುವದು? ಎಲ್ಲವನ್ನೂ ಎಲ್ಲರನ್ನೂ ಕಳೆದುಕೊಂಡ ನಾನು ಈ ನನ್ನ ದೇಹವನ್ನು ಕೂಡ ಬಿಟ್ಟು ಬಿಡುತ್ತೇನೆ.'' ಎಂದು ಹೇಳಿ ಅವನು ಅಲ್ಲಿಂದ ಹೊರಟು ಹೋಗಿದ್ದ. ಅವನು ಹೋದ ಬಳಿಕ ಪಾರ್ವತಿಗೆ ಮನಸ್ಸು ಪ್ರಕ್ಷುಬ್ಧವಾಗಿತ್ತು. ಅವಳು ತನ್ನ ಮನಸ್ಸಿನಲ್ಲಿ - ''ನನ್ನ ಪತಿಯಾದ ಶಿವ ಇಂಥ ಕಾಮುಕ ಅಲ್ಲ. ಹೀಗೆ ಎಂದೂ

ಚಪಲಚಿತ್ತನಾಗಿ ಲಂಪಟತೆಯನ್ನು ತೋರಿಸಲಾರ. ಆದ್ದರಿಂದ ಇವನು ಶಿವನು ಹೌದೋ ಅಲ್ಲವೋ ಎಂಬುದನ್ನು ಪರೀಕ್ಷಿಸಬೇಕು.'' ಎಂದು ನಿರ್ಧರಿಸಿ ಅಲ್ಲಿಂದ ಎದ್ದಳು.

ಆಗಲೇ ಅವಳ ಕಣ್ಣಿಗೆ ಆಕಾಶದಲ್ಲಿ ಹರಿಯುವ ದೇವಗಂಗೆ ಕಾಣಿಸಿಕೊಂಡಳು. ಅವಳನ್ನು ನೋಡಿ ಪಾರ್ವತಿಗೆ ಹಿಂದೆ ತಾನು ಇದೇ ಗಂಗೆಯ ತೀರದಲ್ಲಿ ನಿಂತು ತಪಸ್ಸನ್ನು ಮಾಡಿ ಪರಮೇಶ್ವರನ್ನು ಒಲಿಸಿಕೊಂಡದ್ದು ನೆನಪಿಗೆ ಬಂದಿತು. ಈಗಲೇ ಮತ್ತೊಮ್ಮೆ ಇದೇ ಗಂಗಾತೀರದಲ್ಲಿ ನೆಲೆನಿಂತು ಘೋರತಪಸ್ಸನ್ನು ಮಾಡಿ ತನ್ನ ಮೆಚ್ಚಿನ ಮನದನ್ನನನ್ನು ಮತ್ತೆ ಮೆಚ್ಚಿಸಬೇಕು ಎಂದು ಅವಳು ಮತ್ತೆ ನಿರ್ಧಾರ ಮಾಡಿದಳು.

ಅನಂತರ ತನ್ನ ದೂತಿಯೊಂದಿಗೆ ಅಲ್ಲಿಂದ ಹೊರಟು ಮಾನಸೋತ್ತರ ಪರ್ವತದ ಮೇಲ್ಭಾಗದಲ್ಲಿ ಗಗನಮಂಡಲದಿಂದ ಧೀಂಕಿಟ್ಟು ಧುಮುಕಿ ಸುರಿದು ಹರಿದು ಇಳಿದು ಬರುತ್ತಿರುವ ಗಂಗೆಯ ಪ್ರಪಾತದ ಬಳಿಯಲ್ಲಿ ಬಂದಳು. ಆಗಸದ ಅಂಗಳದಿಂದ ಕುಸುಮ ಮಾಲೆಯಂತೆ, ಬ್ರಹ್ಮದೇವರ ನಾಲ್ಕೂ ಮುಖಗಳಿಂದ ಉದುರುವ ವೇದ ವಚನಗಳ ಮಹಾಪೂರದ ಧಾರೆಯಂತೆ ಅಲ್ಲಿ ಮಂದಾಕಿನಿಯ ಪ್ರವಾಹವು ಅಜಸ್ರ ಸಹಸ್ರ ನೀರಧಾರಾರೂಪದಿಂದ ಹಾಲಿನ ಹೊಳೆಯ ಮಹಾಪ್ರವಾಹ ಹರಿದು ಬರುತಿತ್ತು. ಆ ದೇವಗಂಗೆಯ ಸ್ವಚ್ಛ ಶುಭ್ರವಾದ ಅಮೃತಪೂರದಂತಿರುವ ಮಹಾಪ್ರವಾಹವನ್ನು ಕಂಡು ಪಾರ್ವತಿಯ ಮನಸ್ಸಿಗೆ ಸಮಾಧಾನ ಎನಿಸಿತು. ಅವಳು ಕೂಡಲೇ ಬಂದು ಆ ಸಲಿಲ ರಾಶಿಯಲ್ಲಿ ಸ್ನಾನ ಮಾಡಿದಳು ಗೆಳತಿಯೊಂದಿಗೆ. ತನ್ನ ದೈನಂದಿನ ಕರ್ತವ್ಯವಾದ ಶಿವಪೂಜೆಯನ್ನು ಅದೇ ಸ್ವರ್ಣನದೀ ತಟಾಕದಲ್ಲಿ ಭಕ್ತಿಯಿಂದ ನೆರವೇರಿಸಿದಳು. ಅನಂತರ ತನ್ನ ಗೆಳತಿಯಾದ ಜಯಾ ಎಂಬ ಸಖಿಯನ್ನು ಕರೆದು ಹೇಳಿದಳು.

**ಪಾರ್ವತಿ:-** ''ಪ್ರಿಯ ಸಖೀ, ಈಗ ನೀನು ಒಂದು ಕೆಲಸಮಾಡು. ನನ್ನ ಮೇಲೆ ಕುಪಿತನಾಗಿ ಹೋದ ಆ ಪರಮೇಶ್ವರನ ಬಳಿಗೆ ನನ್ನ ರೂಪ ಧರಿಸಿಕೊಂಡೇ ಹೋಗು. ಅವನು ನಿಜವಾದ ಶಂಕರನೋ ಅಥವಾ ಶಂಕರನ ರೂಪ ಧರಿಸಿದ ಬೇರೆ ಯಾವನಾದರೂ ದೈತ್ಯನೋ? ಪರೀಕ್ಷಿಸು. ನೀನು ನನ್ನ ರೂಪದಿಂದಲೇ ಅವನ ಬಳಿಗೆ ಹೋಗಿ ಮಕ್ಕಳಾದ ಸ್ಕಂದ ಗಣಪತಿಗಳ ಮರಣಕ್ಕಾಗಿ ಬಿಕ್ಕಿ ಬಿಕ್ಕಿ ಅಳುತ್ತ ಅವನ ಎದುರು ನಿಂತುಕೋ. ಇಂಥ ಶೋಕವಿಕಲಳಾಗಿ ದುಃಖಿಸುತ್ತಲಿರುವ ನಿನ್ನನ್ನು ಅವನು ಕಾಮಾಂಧನಾಗಿ ಬಂದು ಚುಂಬನ, ಆಲಿಂಗನಾದಿಗಳನ್ನು ಮಾಡಿದರೆ ಅವನೊಬ್ಬ ಮಾಯಾವಿಯಾದ ದೈತ್ಯನೆಂದು ತಿಳಿ. ಅದನ್ನು ಬಿಟ್ಟು ಅವನು ನಿನ್ನ ಬಳಿಗೆ ಬಂದು ನನ್ನ ರೂಪಧಾರಿಣಿಯಾದ ನಿನ್ನ ದುಃಖವನ್ನು ಶಮನಗೊಳಿಸುತ್ತ, ಪುತ್ರಶೋಕದಿಂದ ವಿಲಪಿಸುವ ನಿನಗೆ ಸಮಾಧಾನ ಮಾಡಿ ಸಂತೈಸಲು ಬಂದರೆ ಸಾಕ್ಷಾತ್ ವಿರೂಪಾಕ್ಷ ಎಂದು ತಿಳಿ. ಅವನು ನನ್ನ ಹೃದಯವಲ್ಲಭನಾದ ಪರಮೇಶ್ವರನೇ ಅಹುದು ಎಂದು ನಿನಗೆ ನಿಶ್ಚಯವಾದರೆ ನನಗೆ ಬಂದು ತಿಳಿಸು.''

ಪಾರ್ವತೀದೇವಿಯ ಈ ಆದೇಶವನ್ನು ತಲೆಯ ಮೇಲೆ ಹೊತ್ತು ಅವಳ ಗೆಳತಿ ಜಯೆಯು ಗಂಗಾಧರನ ಬಳಿಗೆ ನಡೆದಳು. ಸಾಕ್ಷಾತ್ ಪಾರ್ವತಿಯೇ ತನ್ನ ಬಳಿಗೆ ನಡೆದು ಬರುತ್ತಿದ್ದಾಳೆ ಎಂದು ತಿಳಿದು ಮಾಯಾ ಶಿವನ ವೇಷ ಧರಿಸಿದ ಜಾಲಂಧರನಿಗೆ ಅತ್ಯಾನಂದವಾಯಿತು. ಕೂಡಲೇ ಅವನು ಪರಮೇಶ್ವರಿ ರೂಪಧಾರಿಣಿಯಾದ ಜಯಾಳ ಬಳಿಗೆ ಬಂದು ಕಾಮಾತುರನಾಗಿ ಅವಳನ್ನು ಆಲಿಂಗಿಸಿಕೊಂಡ ಕೂಡಲೇ ಅವನ

ವೀರ್ಯಪಾತವಾಯಿತು. ಅವಳು ಸಾಕ್ಷಾತ್ ಗೌರಿಯೆಂದೇ ಭಾವಿಸಿದ್ದ ಆ ರಕ್ಕಸ. ಆ ಕ್ಷಣದಲ್ಲಿ ಪಾರ್ವತೀಸಖಿಯಾದ ಜಯಾಳಿಗೆ ತಿಳಿದು ಹೋಯಿತು ಇವನು ಪರಮೇಶ್ವರ ಅಲ್ಲ ಎಂದು. ಹೀಗೆ ಅತ್ಯಲ್ಪಕಾಲೀನವಾದ ಆ ಪಾಪಿಯ ಕಾಮಚೇಷ್ಟೆಯಿಂದಲೇ ಅವನೊಬ್ಬ ಮಾಯಾವಿ ದಾನವ ಎಂದು ತಿಳಿದು ಅಲ್ಲಿಯೇ ಅವನನ್ನು ಧಿಕ್ಕರಿಸಿ ನುಡಿದಳು.

**ಜಯಾ:-** ಪಾಪಿಯೇ, ನೀನು ಖಂಡಿತವಾಗಿಯೂ ಶಂಕರನು ಅಲ್ಲ. ಶಂಕರನ ರೂಪ ಧರಿಸಿದ ಕಪಟದೈತ್ಯ. ಭವಾನಿಯ ಮೇಲಿನ ದುರಾಶೆಯಿಂದ ಈ ಮಾಯಾಶಂಕರನ ವೇಷವನ್ನು ತಳೆದು ಬಂದಿರುವೆ. ಈ ಪಾರ್ವತೀ ಪರಮೇಶ್ವರರಿಬ್ಬರನ್ನೂ ಮೋಸಮಾಡಿದ ಪಾಪದಿಂದ ನೀನು ಕೂಡಲೇ ಶಂಕರನಿಂದ ಸಂಹರಿಸಲ್ಪಡುವೆ. ನಿನ್ನ ಪಾಪವೇ ನಿನ್ನನ್ನು ಕೊಂದುಹಾಕಿದೆ. ಎಂದು ನುಡಿದು ಅವಳು ಅಲ್ಲಿಂದ ಎದ್ದು ಪಾರ್ವತಿ ಇರುವಲ್ಲಿಗೆ ಬಂದಳು. ಹಾಗೂ ಅವಳೆದುರು - ''ದೇವಿ, ಇವನೆಲ್ಲಿಯ ಶಿವ? ಶಿವನ ರೂಪ ಧರಿಸಿದ ಜಾಲಂಧರ, ನಿನ್ನ ಮೇಲಿನ ಆಶೆಯಿಂದ ನಿನ್ನನ್ನು ಮೋಸಗೊಳಿಸಲು ಬಂದಿದ್ದ. ನನ್ನ ದರ್ಶನ ಹಾಗೂ ಸ್ಪರ್ಶನ ಮಾತ್ರದಿಂದಲೇ ಗತವೀರ್ಯನಾಗಿ ನಿಂತುಕೊಂಡ. ಅವನನ್ನು ನಾನು ಅಲ್ಲಿಯೇ ಶಪಿಸಿ ಬಂದೆ.'' ಎಂದು ತಿಳಿಸಿದಳು.

ಜಯಾಸಖಿಯ ಈ ಮಾತನ್ನು ಕೇಳಿ ಪಾರ್ವತಿಗೆ ಮತ್ತಿಷ್ಟು ಗಾಬರಿಯಾಯಿತು. ಆ ಪಾಪಿಯು ಮತ್ತೆ ತಾನಿದ್ದಲ್ಲಿಗೆ ಬರಬಹುದು ಎಂಬ ಭಯದಿಂದ ಅವಳು ಅಲ್ಲಿಯೇ ಗಂಗೆಯ ತೀರದಲ್ಲಿರುವ ಕಮಲವನದಲ್ಲಿ ಪ್ರವೇಶಮಾಡಿದಳು. ಮತ್ತು ಅದರ ಮಧ್ಯದಲ್ಲಿ ಇರುವ ಒಂದು ಕಮಲಕೋಶದ ಒಳಗೆ ಸೂಕ್ಷ್ಮರೂಪದಿಂದ ಪ್ರವೇಶಮಾಡಿ ಜಾಲಂಧರನ ಭಯದಿಂದ ಅಡಗಿಕೊಂಡು ಕುಳಿತಳು. ಅವಳ ಗೆಳತಿಯರೆಲ್ಲರೂ ದುಂಬಿಗಳಾಗಿ ಆ ಕಮಲ ಕುಸುಮದ ಸುತ್ತಲೂ ಗೀತಗುಂಜನ ಗೈಯುತ್ತ ಹಾರಾಡ ತೊಡಗಿದರು. ಆ ಪಾರ್ವತಿಯ ಚಲನವಲನಗಳನ್ನು ನಿರೀಕ್ಷಿಸುತ್ತ ಅವಳು ಎಲ್ಲಿಯೂ ಹೋಗದಂತೆ ಗುಪ್ತವಾಗಿ ಕಾಯಲಿಕ್ಕಾಗಿ ನೇಮಿಸಿದ ಜಾಲಂಧರನ ರಕ್ಷಕರು ಪಾರ್ವತಿಯು ಒಮ್ಮೆಲೇ ಅದೃಶ್ಯಳಾದುದನ್ನು ಕಂಡು ಹೆದರಿ ರಣಭೂಮಿಗೆ ಬಂದರು. ಹೀಗೆ ಪಾರ್ವತಿಯನ್ನು ಕಾಯಲು ನಿಯಮಿಸಿದ ಸೈನಿಕರು ಮರಳಿ ಬಂದು ಶುಂಭಾಸುರನಿಗೆ ಎಲ್ಲ ಸಮಾಚಾರವನ್ನು ತಿಳಿಸಿದರು. ಜಾಲಂಧರನು ಶಂಕರನ ರೂಪಧರಿಸಿ ಗೌರಿಯನ್ನು ವಂಚಿಸಿ ಬಲಾತ್ಕರಿಸಿ ಹೊರಟಾಗ ಇತ್ತ ವಿಷ್ಣುವು ಅದಕ್ಕೆ ಪ್ರತೀಕಾರ ಮಾಡಲು ಜಾಲಂಧರನ ವೇಷಧರಿಸಿ ಅವನ ಹೆಂಡತಿಯಾದ ವೃಂದಾದೇವಿಯನ್ನು ಅಪಹರಿಸಿದ ಸಮಾಚಾರವೂ ಗುಪ್ತಚಾರರ ಮೂಲಕ ಶುಂಭಾಸುರನಿಗೆ ತಿಳಿದುಬಂದಿತ್ತು. ಆಗ ಅವನು ಚಂಡ ಮುಂಡ ಎಂಬ ಇಬ್ಬರು ಸೇನಾಪತಿಗಳನ್ನು ಈ ಎಲ್ಲ ಸಮಾಚಾರವನ್ನು ಜಾಲಂಧರನಿಗೆ ತಿಳಿಸಿ ಬರಲು ಮಾನಸೋತ್ತರ ಶಿಖರಕ್ಕೆ ಕಳಿಸಿಕೊಟ್ಟ. ಚಂಡಮುಂಡರಿಬ್ಬರೂ ಮಾನಸೋತ್ತರ ಪರ್ವತದಲ್ಲಿ ಪಾರ್ವತಿಯ ವಂಚನೆಗಾಗಿ ಪರಮೇಶ್ವರನ ರೂಪ ಧರಿಸಿದ ಜಾಲಂಧರನನ್ನು ಗುಟ್ಟಾಗಿ ಒಂದು ಗಿಡದ ಮರೆಯಲ್ಲಿ ಕರೆದುಕೊಂಡು ಹೋಗಿ ಹೇಳಿದರು.

**ಚಂಡಮುಂಡ:-** ಮಹಾರಾಜ, ನೀನು ಆ ಪಾರ್ವತಿಯ ಆಶೆಯನ್ನು ಬಿಟ್ಟುಬಿಡು. ಅದೊಂದು ದೇಶಾಂತರದಲ್ಲಿ ಇದ್ದ ಐಶ್ವರ್ಯ ಇದ್ದಂತೆ. ಪರಲೋಕದಲ್ಲಿ ಇದ್ದ ಸಂಪತ್ತು ನಮ್ಮ ಕೈಗೆ ದೊರಕದಿದ್ದ ಬಳಿಕ ಅದು ಎಷ್ಟಿದ್ದರೇನು? ಹೇಗಿದ್ದರೇನು? ಆ ಶಿವನ

ಅರ್ಧಾಂಗಿಯನ್ನು ಇಂದಿನವರೆಗೆ ಯಾವ ವೈರಿಯೂ ಹೊಂದಿಲ್ಲ. ನೀನು ಅವಳ ಆಶೆಗೆ ಬಿದ್ದು ವ್ಯರ್ಥವಾಗಿ ದಣಿದುಕಂಡೆ. ಅವಳೊಂದು ಕನಸಿನ ಕನ್ಯೆ, ಗಂಧರ್ವ ಸುಂದರಿ. ಕನಸಿನಲ್ಲಿ ಮಾತ್ರ ನೀನು ಅವಳನ್ನು ಕಾಣಬಲ್ಲೆ. ಅವಳು ಎಂದೂ ನಿನ್ನ ಕೈಗೆ ದೊರಕಳು. ಅವಳ ನಾದಕ್ಕೆ ಬಿದ್ದು ನೀನು ನಿನ್ನದೆಲ್ಲವನ್ನೂ ಕಳೆದುಕೊಳ್ಳುತ್ತಲಿರುವೆ. ನಿನ್ನ ಸೇನಾಪತಿಯಾದ ಶುಂಭಾಸುರನನ್ನು ಮಹಾದೇವನು ಗೆದ್ದಿದ್ದಾನೆ. ನಿನ್ನ ಮಹಾಸೈನ್ಯವನ್ನು ಕೊಂದು ಹಾಕಿದ್ದಾನೆ. ಜಾಲಂಧರ ಪೀಠದಲ್ಲಿ ಇದ್ದ ನಿನ್ನ ಪಟ್ಟದರಸಿಯಾದ ವೃಂದಾದೇವಿಯನ್ನು ಶ್ರೀಹರಿಯು ಅಪಹರಿಸಿ ಭೋಗಿಸಿದ್ದಾನೆ ಎಂದು ಸುದ್ದಿ ಬಂದಿದೆ. ಇನ್ನು ಮೇಲಾದರೂ ನೀನು ಆ ಪಾರ್ವತಿಯ ಹುಚ್ಚು ಹವ್ಯಾಸವನ್ನು ಬಿಟ್ಟು ಯುದ್ಧಕ್ಕೆ ಮರಳಿ ಬಾ. ಸಿಂಹದ ಪತ್ನಿಯಾದ ಸಿಂಹಿಣಿಯನ್ನು ನರಿಯು ಎಂದಾದರೂ ಹೊಂದಲು ಸಾಧ್ಯವುಂಟೆ? ಕಗ್ಗತ್ತಲೆಯು ಸೂರ್ಯನ ಕಾಂತಿಯನ್ನು ಬಲಾತ್ಕರಿಸುವುದು ಶಕ್ಯವುಂಟೆ? ನಿನ್ನದನ್ನು ನೀನು ನೋಡಿಕೋ. ಯುದ್ಧ ಭೂಮಿಗೆ ಮರಳಿ ಬಾ. ಮಹಾದೇವನ ಜೊತೆಗೆ ಯುದ್ಧಮಾಡು. ಅವನನ್ನು ಗೆದ್ದು ಈಶ್ವರನಿಗೂ ಈಶ್ವರನು ಆಗು. ಇಲ್ಲದಿದ್ದರೆ ಆ ರುದ್ರನ ಬಾಣಗಳಿಂದ ಹತನಾಗಿ ನೀನು ಶಿವಪದವನ್ನಾದರೂ ಹೊಂದು.

ಚಂಡಮುಂಡರ ಈ ಮಾತನ್ನು ಕೇಳಿ ಜಾಲಂಧರನ ಕಣ್ಣು ಕೆಂಪಾದವು. ಸಿಟ್ಟಿನಿಂದ ಹುಚ್ಚನಂತಾಗಿ ಅವನು ತಕ್ಷಣದಲ್ಲಿಯೇ ಆ ಮಾನಸೋತ್ತರ ಶಿಖರದಿಂದ ಹೊರಟು. ಇಷ್ಟು ಹೊತ್ತಿನವರೆಗೆ ತಾನು ತೊಟ್ಟ ಶಿವನ ರೂಪವನ್ನು ಬಿಟ್ಟುಕೊಟ್ಟು ರಣಭೂಮಿಗೆ ಮರು ಪ್ರಯಾಣ ಬೆಳೆಸಿದ. ದಾರಿಯಲ್ಲಿ ಬರುವಾಗ ಅವನು ದುರ್ವಾರಣನನ್ನು ಕುರಿತು ನುಡಿದ.

**ಜಾಲಂಧರ:-** ದುರ್ವಾರಣ, ಈಗ ವಿಷ್ಣು ನಮಗೆ ಎಂಥ ಮೋಸ ಮಾಡಿದ ! ನೋಡು ಆ ಹರಿಯು ಕುತಂತ್ರದಿಂದ ಮಾಯೆಯನ್ನು ಮಾಡಿ ನನ್ನ ನೆಚ್ಚಿನ ಮಡದಿಯಾದ ವೃಂದೆಯನ್ನು ಸೆಳೆದುಕೊಂಡು ಒಯ್ದು ತನ್ನ ಸ್ಥಾನಕ್ಕೆ. ಅವಳ ಶೀಲವನ್ನು ಸೂರೆಗೊಂಡ. ನನ್ನ ಸರ್ವಸ್ವವನ್ನೆ ಘಾತಮಾಡಿದ. ನನ್ನ ಕುಟುಂಬವನ್ನು ಹಾಳುಮಾಡಿದ. ನನ್ನದೆಲ್ಲವೂ ಸತ್ಯಾನಾಶವಾದಂತಾಯಿತು. ಹಾಯ ಹಾಯ ! ಅಕಟಕಟ ! ಏನು ಮಾಡಲಿ !

ಗೃಹೇ ಸ್ಥಿತಸ್ಯ ಜಾಮಾತುರ್ವಿಶ್ವಸೇನ್ನೈವ ಬುದ್ಧಿಮಾನ್ ।
ನೂನಂ ತಸ್ಮೈ ಪ್ರದತ್ವಾಚ ಕನ್ಯಾತೌ ವಿಸೃಜೇದ್ಬುಧಃ ॥

ಮನೆಯಲ್ಲಿ ಇದ್ದ ಅಳಿಯನ ಮೇಲೆ ಬುದ್ಧಿವಂತನಾದ ಮನುಷ್ಯನು ಎಂದೂ ವಿಶ್ವಾಸವನ್ನು ಇಡಬಾರದು. ಅವನಿಗೆ ಕನ್ಯೆಯನ್ನು ಕೊಟ್ಟ ಬಳಿಕ ಮಗಳೊಂದಿಗೆ ಆ ಅಳಿಯನನ್ನೂ ಹೊರಗೆ ಕೊಟ್ಟು ಕಳಿಸಬೇಕು.

ಜಾಮಾತರಂ ಗೃಹೇನ್ನೈವ ಸ್ಥಾಪಯೇತ್ ಸರ್ವಥಾ ನರಃ ।
ಧನದಾರಾಧಿಕಂ ಸರ್ವಂ ಸಗೃಹ್ಣಾತಿ ಶನೈಃ ಶನೈಃ ॥

ಮನೆಯಲ್ಲಿ ತಂದಿಟ್ಟುಕೊಂಡೆವು. ಅವನು ನಮ್ಮ ಐಶ್ವರ್ಯವನ್ನು, ಕೌಸ್ತುಭದಂತಹ ರತ್ನವನ್ನು ಅಪಹರಿಸಿದ್ದಲ್ಲದೇ ನಾನಿಲ್ಲದಾಗ ನನ್ನ ಹೆಂಡತಿ ವೃಂದಾರಿಕೆಯನ್ನು ಕೂಡ ಅಪಹರಿಸಿಬಿಟ್ಟ.

**ದುರ್ವಾರಣ:-**

**''ರಾಜನ್, ಯತ್ ಕ್ರಿಯತೇ ಕರ್ಮ ತತ್ತಥೈವ ತು ಭುಜ್ಯತೇ ।**
**ತ್ವಂ ಹರ್ತುಂ ಮಾಗತೋಂ ಗೌರೀಂ ಹರಿಣಾತೇ ಹೃತಾ ವಧೂಃ ॥**

ರಾಜನೇ, ಮನುಷ್ಯನು ಎಂಥ ಕರ್ಮವನ್ನು ಮಾಡುತ್ತಾನೋ, ಅಂಥ ಫಲವನ್ನು ಅನುಭವಿಸುತ್ತಾನೆ. ಅವನು ಮಾಡಿದ ದುಷ್ಕರ್ಮ ಅವನಿಗೇ ತಿರುಗುತ್ತವೆ. ನೀನು ಹರನ ಹೆಂಡತಿಯನ್ನು ಅಪಹರಿಸಬೇಕೆಂದು ಅತ್ತ ಹೋದೆ. ಇತ್ತ ಹರಿಯು ಬಂದು ನಿನ್ನ ಹೆಂಡತಿಯನ್ನು ಅಪಹರಿಸಿಬಿಟ್ಟ. ಪರಸ್ತ್ರೀಯ ಅಪಹಾರವನ್ನು ಮಾಡಹೊರಟ ನೀನು ನಿನ್ನ ಹೆಂಡತಿಯನ್ನು ಕಳೆದುಕೊಂಡೆ. ನೀನು ಮಾಡಿದ ಕರ್ಮ ನಿನ್ನನ್ನೇ ಈಗಲೇ ತಿಂದುಹಾಕಿತು.

ದುರ್ವಾರಣನ ಈ ಸ್ಪಷ್ಟ ನುಡಿಯನ್ನು ಕೇಳಿ ಒಂದು ಕ್ಷಣ ಸ್ತಬ್ಧನಾದ ಜಾಲಂಧರ, ತನ್ನ ದುಷ್ಕೃತದ ಘೋರ ಪರಿಣಾಮವನ್ನು ಎತ್ತಿ ತೋರಿಸಿದ ದುರ್ವಾರಣನ ಮಾತು ಸತ್ಯ ಎಂದು ಎನಿಸಿತು. ಅವನು ಮೌನಿಯಾಗಿ ನಿಂತು ಒಂದು ಕ್ಷಣ ವಿಚಾರಿಸಿದ - ''ಈಗ ನಾನು ಏನು ಮಾಡಲಿ? ನನ್ನ ಹೆಂಡತಿಯನ್ನು ವಂಚಿಸಿ ಸೆಳೆದೊಯ್ದ ಹರಿಯೊಡನೆ ಹೋರಾಡಲೆ? ಯುದ್ಧಭೂಮಿಯಲ್ಲಿ ಬಂದು ನಿಂತುಕೊಂಡ ರುದ್ರನ ಸಂಗಡ ಕಾದಾಡಲೆ? ಏನು ಮಾಡಲಿ? ಎರಡೂ ಕಾರ್ಯಗಳೂ ಒಮ್ಮೆಲೇ ಈಗ ಒದಗಿ ಬಂದಿದೆ. ಯಾವದನ್ನು ಮಾಡಲಿ ಯಾವುದನ್ನು ಬಿಡಲಿ?''

ಈ ವಿಚಾರವನ್ನು ದುರ್ವಾರಣನಿಗೆ ತಿಳಿಸಿ ಅವನ ಸಲಹೆ ಕೇಳಿದ.

**ದುರ್ವಾರಣ:-** ಪ್ರಭು, ಈಗ ನೀನು ಹರಿಯನ್ನು ಗೆಲ್ಲಲು ಹೋದರೆ ಹರನು ನಿನ್ನನ್ನು ಬಿಡಲಾರ. ಅವನು ನಿನ್ನ ಬೆನ್ನಟ್ಟಿ, ನೀನು ಇದ್ದಲ್ಲಿಗೇ ನಿನ್ನನ್ನು ಅಟ್ಟಿಸಿಕೊಂಡು ಬಂದು ಹೊಡೆದು ಹಾಕುವದರಲ್ಲಿ ಸಂದೇಹವಿಲ್ಲ. ನಿನಗೆ ಬೇರೆಡೆಗೆ ಹೋಗಲು ಶಂಕರನು ಅವಕಾಶವನ್ನೇ ಕೊಡಲಾರ. ಆದ್ದರಿಂದ ಮೊದಲು ಮಹಾದೇವರನ್ನು ಗೆದ್ದು ಅವನನ್ನು ನಿನ್ನ ಕೈವಶನನ್ನಾಗಿ ಮಾಡಿಕೊಂಡು ಅನಂತರ ಹರಿಯನ್ನು ಹುಡುಕಿಕೊಂಡು ಹೋಗು. ನಿನಗೆ ಅವನು ಇದ್ದ ತಾಣವು ಗೊತ್ತಿದ್ದರೆ ಅವನನ್ನು ಪತ್ತೆಹಚ್ಚಿ ಅವನ ಜೊತೆಗೆ ಯುದ್ಧ ಮಾಡು. ಈಗ ಕೂಡಲೇ ಯುದ್ಧ ಭೂಮಿಗೆ ಹೋಗಿ ಹರನೊಡನೆ ಹೋರಾಡು.

ದುರ್ವಾರಣನ ದೇಶಕಾಲೋಚಿತವಾದ ಈ ನುಡಿಯನ್ನು ಕೇಳಿ ಜಾಲಂಧರನು ಶಂಕರನೊಡನೆ ತನ್ನ ಹೋರಾಟವನ್ನು ಮುಂದುವರಿಸಲಿಕ್ಕಾಗಿ ಯುದ್ಧಭೂಮಿಗೆ ತೆರಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಿವರೂಪ ಧರಿಸಿದ ಜಾಲಂಧರನ ನಿಜರೂಪವನ್ನು ಪರೀಕ್ಷಿಸಲಿಕ್ಕಾಗಿ ಪಾರ್ವತಿಯಿಂದ*
*ಸಖೀಪ್ರೇಷಣ ಎಂಬ ಹದಿನೇಳನೇಯ ಅಧ್ಯಾಯ ಮುಗಿದುದು*

—o—

## ರುದ್ರ ಜಾಲಂಧರ ಯುದ್ಧ

ಅಧ್ಯಾಯ - ೧೮

**ನಾರದ:-** ತನ್ನ ಹೆಂಡತಿಯ ಅಪಹಾರದ ಸುದ್ದಿ ಕೇಳಿ ದುಃಖತಪ್ತನಾದ ಜಾಲಂಧರನು ಅವಸರದಿಂದ ಆಗಮಿಸಿದ ಸಂಗ್ರಾಮರಂಗಭೂಮಿಗೆ. ರಣರಂಗ ಎಲ್ಲವೂ ಖಂಡತುಂಡಾದ ರುಂಡದಂಡಗಳಿಂದ ತುಂಬಿಹೋಗಿತ್ತು. ರಕ್ತ, ಮಾಂಸ, ಮಜ್ಜಾ, ಮೇದಸ್ಸು, ಮೂಳೆ, ಛಿನ್ನವಿಛಿನ್ನವಾದ ಕೈಕಾಲು ತಲೆಬುರುಡೆಗಳಿಂದ ಸಂಘಟಿತವಾದ ಆ ಕದನದ ಕುರುಕ್ಷೇತ್ರದಲ್ಲಿ ಕಾಲಿಡಲೂ ಜಾಗವಿರಲಿಲ್ಲ. ಅತ್ತ ಕಡೆ ಶಿವಸೇನೆಯಲ್ಲಿ ನಂದಿಯ ಹೆಗಲ ಮೇಲೆ ರಣೋತ್ಸಾಹದಿಂದ ನಿಂತುಕೊಂಡಿದ್ದ ಪಾರ್ವತೀಪತಿ. ಘೋರ ರೂಪದಿಂದ ಬುಸುಗುಟ್ಟುವ ವಾಸುಕಿ ಹಾವು ಕೊರಳಹಾರವಾಗಿ ಅವನ ಅಂಗಾಂಗಗಳನ್ನು ಬಳಸಿಕೊಂಡು ಭೀಕರವಾಗಿ ಫೂತ್ಕರಿಸುತ್ತಿತ್ತು. ಜಡೆಯ ಮುಡಿಯಲ್ಲಿ ಚಂದ್ರಕೋರವು ದೈತ್ಯರನ್ನು ನೋಡಿ ಉಪಹಾಸ ಮಾಡುತ್ತಿತ್ತು. ಅವನ ಲಲಾಟ ಫಲಕದಲ್ಲಿ ಇದ್ದ ಮೂರನೆಯ ಕಣ್ಣು ಅಗ್ನಿಕುಂಡದಂತೆ ಉರಿಯುತ್ತಿತ್ತು. ಅವನನ್ನು ಕಂಡು ರೋಷತುಂಬಿದ ಜಾಲಂಧರ ರಥಾರೂಢನಾಗಿ ಯುದ್ಧಕ್ಕೆ ಇಳಿದ. ತನ್ನ ಪಕ್ಕದಲ್ಲಿ ಬಂದು ನಿಂತ ಶುಂಭಾಸುರನಿಗೆ - ''ಸೇನಾಪತಿಯೇ, ನೀನು ಈ ವರೆಗೂ ಈ ತಾಪಸನಾದ ಶಿವನನ್ನು ಕೊಲ್ಲಲಿಲ್ಲವೆ?'' ಎಂದು ಕೇಳಿದ.

**ಶುಂಭ:-** ಪ್ರಭು, ಶಂಕರ ಎಂದರೆ ಸಾಮಾನ್ಯನೇ? ಅವನು ಮಹಾತಪಸ್ಸನ್ನು ಮಾಡಿದ್ದಾನೆ. ನಮ್ಮಂಥವರು ಅವನನ್ನು ಗೆಲ್ಲಲಾರೆವು ಮತ್ತು ಕೊಲ್ಲಲಾರೆವು. ಇಷ್ಟೇ ಅಲ್ಲ. ಯುದ್ಧದಲ್ಲಿ ಯಾರೂ ಆ ವಿಶ್ವೇಶ್ವರನನ್ನು ಜಯಿಸಲಾರರು.

ಶುಂಭನ ಈ ಮಾತುಗಳನ್ನು ಕೇಳಿ ಜಾಲಂಧರನು ಕಣ್ಣು ಕೆಂಪಗೆ ಮಾಡಿ ದವಡೆ ಕಚ್ಚಿ ಕಾಲಕೇದಾರ ಎಂಬ ತನ್ನ ಧನುಸ್ಸಿನಲ್ಲಿ ತೀಕ್ಷ್ಣವಾದ ಬಾಣ ಹೂಡಿ ಶಿವನ ಮೇಲೆ ಶರವೃಷ್ಟಿಯನ್ನೇ ಸುರಿಸಿದ. ಆಗ ರುದ್ರನೂ ಕೂಡ ಹದನವಾದ ಬಾಣಗಳನ್ನು ಬಿಟ್ಟು ಜಾಲಂಧರನು ತೊಟ್ಟುಕೊಂಡ ಉಕ್ಕಿನ ಕವಚವನ್ನು ಒಡೆದು ಪುಡಿ ಪುಡಿ ಮಾಡಿ ನೆಲಕ್ಕೆ ಹಾಕಿದ. ಮತ್ತು ಅವನ ಮೈತುಂಬ ಬಾಣಗಳ ಮಳೆ ಜಡಿದು ನೆತ್ತರು ಬಸಿಯುವಂತೆ ಮಾಡಿದ. ಆ ದೈತ್ಯನ ನೆತ್ತರಿನಿಂದ ನೆನೆದುಹೋಯಿತು ರಣಾಂಗಣ. ಆಗ ಕೆರಳಿ ಕೇಸರಿಯಂತಾದ ಜಾಲಂಧರ. ಏಕಕಾಲದಲ್ಲಿ ಕೋಟಿ ಕೋಟಿ ಬಾಣಗಳನ್ನು ಬಿಟ್ಟು ಮಹಾದೇವನ ಮೈಯನ್ನೆಲ್ಲ ಮುಚ್ಚಿ ಹಾಕಿದ. ಆಗ ವೀರಭದ್ರನು ಓಡಿ ಬಂದು ಸಾವಿರಾರು ಬಾಣಗಳನ್ನು ಬಿಟ್ಟು ಜಾಲಂಧರನನ್ನು ಹೊಡೆದು ಬಡೆದು ಗಾಯಗೊಳಿಸಿದ. ಆಗ ಕ್ಷುಂಕ್ರುದ್ಧನಾದ ಆ ಸಮುದ್ರಸುತನು ವೀರಭದ್ರನಿಗೆ ತಿರುಗಿ ಬಾಣಹೊಡೆದು ಅವನ ಬಿಲ್ಲನ್ನು ಕತ್ತರಿಸಿದ. ಬಾಣವನ್ನು ತುಂಡರಿಸಿದ ಛತ್ರವನ್ನು ಕಡಿದ. ಸಾರಥಿಯನ್ನು ತಡೆದ. ರಥವನ್ನು ಪುಡಿ ಪುಡಿ ಮಾಡಿದ. ಆಗ ರಥರಹಿತನಾದ ವೀರಭದ್ರನು ನೆಲದ ಮೇಲೆಯೇ ನಿಂತುಕೊಂಡು ತನ್ನ ಘೋರವಾದ ಗದೆಯಿಂದ ಜಾಲಂಧರನಿಗೆ ಒಂದು ಭೀಕರವಾದ ಪ್ರಹಾರವನ್ನು ಮಾಡಿದ. ಅದರಿಂದ ಜಾಲಂಧರ ಮೂರ್ಛಿತನಾಗಿ ನೆಲದ ಮೇಲೆ ಬಿದ್ದ. ಮರುಚಣದಲ್ಲಿ ಮತ್ತೆ ಆ ಸಿಂಧುಸುತನು ಚೇತರಿಸಿಕೊಂಡು ಎದ್ದು ತನ್ನ ಗಟ್ಟಿಯಾದ

ಗದೆಯಿಂದ ವೀರಭದ್ರನನ್ನು ಕುಟ್ಟಿದ. ಆ ಹೊಡೆತವನ್ನು ತಾಳಲಾರದೇ ಅವನು ಮರವುಗೆಟ್ಟು ಕೆಳಗೆ ಬಿದ್ದ.

ಅದನ್ನು ನೋಡಿ ಮಣಿಭದ್ರ ಜಾಲಂಧರನ ಮೇಲೆ ಏರಿ ಬಂದ. ಅವನನ್ನು ಜಾಲಂಧರ ತನ್ನ ಘೋರ ಶರಗಳಿಂದ ಹೊಡೆದು ಹಾಕಿದ. ರಥ, ಕುದುರೆ, ಸಾರಥಿ, ಧ್ವಜ ಎಲ್ಲವನ್ನೂ ಅಸ್ತವ್ಯಸ್ತವಾಗಿ ಮಾಡಿ ದಿಕ್ಕಿಗೊಂದು ಬೀಳುವಂತೆ ಮಾಡಿದ. ಅಷ್ಟರಲ್ಲಿ ಮೂರ್ಛೆತಿಳಿದು ಎಚ್ಚರಾಗಿ ಸಿಂಹನಾದ ಮಾಡಿದ ವೀರಭದ್ರ. ಹೀಗೆ ಮಣಿಭದ್ರ, ವೀರಭದ್ರ ಇಬ್ಬರೂ ಕೂಡಿ ಎರಡು ಗುಡ್ಡಗಳನ್ನೇ ಎತ್ತಿ ತೆಗೆದುಕೊಂಡು ಬಂದರು. ಅದನ್ನು ಕಂಡು ಜಾಲಂಧರ ಗಕ್ಕನೇ ಗಗನಕ್ಕೆ ಹಾರಿದ. ಅವನ ಮೈ ಮೇಲೆ ಬಿದ್ದು ಎರಡೂ ಪರ್ವತಗಳು ವಿಫಲವಾಗಿ ನೆಲಕ್ಕೆ ಉರುಳಿದವು. ಆಗ ವೀರಭದ್ರನು ಆ ಸಿಂಧುಪುತ್ರನನ್ನು ಮುಷ್ಟಿಯಿಂದ ಹೊಡೆದ. ಮಣಿಭದ್ರನು ಜಾಲಂಧರನ ಎರಡೂ ಕಾಲುಗಳನ್ನು ಸೆಳೆದು ರಥದಿಂದ ಎಳೆದು ಅಂತರಿಕ್ಷದಲ್ಲಿ ಗಿರಿಗಿರಿ ತಿರುಗಿಸತೊಡಗಿದ. ಒಂದು ಕ್ಷಣ ಅದು ನೋಡುವವರಿಗೆಲ್ಲ ಕೌತುಕ ಎನಿಸಿತು. ಆಗ ಜಾಲಂಧರನು ತನ್ನ ಕಾಲುಗಳನ್ನು ಹಿಡಿದು ತಿರುಗುತ್ತಿರುವ ಮಣಿಭದ್ರನನ್ನು ಒದ್ದು ಕೆಳಗೆ ಬೀಳಿಸಿದ. ಮತ್ತು ವೀರಭದ್ರನ್ನು ಮುಷ್ಟಿಯಿಂದ ಗುದ್ದಿದ.

ಹೀಗೆ ನಂದೀಶ್ವರನಿಗೂ ಶುಂಭಾಸುರನಿಗೂ ಕೋಲಾಹಲನಿಗೂ ನಿಶುಂಭನಿಗೂ, ಕೇತುವಿಗೂ, ಕಾಲನಿಗೂ ಶೈಲೋದರನಿಗೂ ಸ್ಕಂದನಿಗೂ, ಜಂಭನಿಗೂ ಮಾಲ್ಯವಂತನಿಗೂ, ಚಂಡನಿಗೂ ಮಹಾಪಾರ್ಶ್ವನಿಗೂ, ಭೃಂಗಿಗೂ ವಿಕಟಾಸ್ಯನಿಗೂ, ಉರುನೇತ್ರನಿಗೂ ವಿನಾಯಕನಿಗೂ, ದ್ವಂದ್ವ ಯುದ್ಧಗಳು ನಡೆದವು.

ಗಣಪತಿಯ ಜೊತೆಗೆ ಯುದ್ಧ ಮಾಡುತ್ತಲಿರುವ ಉರುನೇತ್ರನು ತೀಕ್ಷ್ಣವಾದ ಬಾಣಗಳಿಂದ ಮತ್ತೆ ಮತ್ತೆ ಹೊಡೆದು ಗಾಯಗೊಳಿಸಿದ ಆ ಗಣೇಶನನ್ನು. ಆಗ ಗಣಪತಿಯು ವೇಗದಿಂದ ಹಾರಿ ಬಂದು ರಥದಲ್ಲಿ ಕುಳಿತ ಆ ಉರುನೇತ್ರನನ್ನು ತನ್ನ ಕೋರೆದಾಡೆಯಿಂದ ಹೊಡೆದು ನೆಲಕ್ಕುರುಳಿಸಿದ. ಮುಂದೆ ಅರೆಚಣದಲ್ಲಿ ಚೇತರಿಸಿಕೊಂಡು ಎದ್ದ ಆ ಉರುನೇತ್ರನು ತನ್ನ ರಥದಲ್ಲಿ ಬಂದು ಕುಳಿತು ಉಕ್ಕಿನ ಹಾರೆಯಿಂದ ಗಣಪತಿಯ ನಡುನೆತ್ತಿಯ ಮೇಲೆ ಬಲವಾಗಿ ಪ್ರಹರಿಸಿದ. ಅದನ್ನು ಗಣನೆಗೆ ತಾರದೇ ಗಣಪತಿಯು ಒಂದು ಕಬ್ಬಿಣದ ಆಯುಧದಿಂದ ಆ ದೈತ್ಯನ ಎದೆಗೆ ಬಲವಾದ ಪೆಟ್ಟು ಹಾಕಿದ. ಆಗ ಕೂಡಲೇ ಆ ಉರುನೇತ್ರನ ಮುಖದಿಂದ ಒಂಬತ್ತು ತಲೆಯ ಒಬ್ಬ ದೈತ್ಯ ಹೊರಬಿದ್ದು ಬಂದ. ಅವನು ತನ್ನ ಹದಿನೆಂಟು ಕೈಗಳಿಂದ ಬಾಣಗಳನ್ನು ಬಿಡುತ್ತ ವಿನಾಯಕನ ಮೇಲೆ ಏರಿಬಂದ. ಉರುನೇತ್ರ ಹಾಗೂ ನವಶೀರ್ಷ ಈ ಇಬ್ಬರು ದೈತ್ಯರ ಶಸ್ತ್ರಾಸ್ತ್ರಗಳಿಂದ ಜರ್ಜರನಾಗಿದ್ದರೂ ಗಣಪತಿಯು ಅವರಿಬ್ಬರ ಆಯುಧಗಳನ್ನೆಲ್ಲ ತನ್ನ ಕೈ ಕೊಡಲಿಯಿಂದಲೇ ಕತ್ತರಿಸಿ ತುಂಡು ಮಾಡಿದ. ಹೀಗೆ ಬಲಿಷ್ಠರಾದ ಇಬ್ಬರು ದೈತ್ಯರು ಗಣಪತಿಯನ್ನು ಹಣಿಯುತ್ತಿರುವದನ್ನು ದೂರಿಂದಲೇ ಸ್ಕಂದನು ನೋಡಿ ಧಾವಿಸಿ ಬಂದ. ಒಂದೇ ಬಾಣದಿಂದ ನವಶೀರ್ಷನ ಒಂಭತ್ತೂ ತಲೆಗಳನ್ನು ಕಡಿದುಹಾಕಿ ಉರುನೇತ್ರನನ್ನು ತನ್ನ ಶಕ್ತ್ಯಾಯುಧದಿಂದ ಹೊಡೆದು ಕೆಡವಿದ.

ಹೀಗೆ ಸ್ಕಂದನು ಏಕಕಾಲದಲ್ಲಿ ನವಶೀರ್ಷ, ಉರನೇತ್ರ ಇಬ್ಬರೂ ದೈತ್ಯವೀರರನ್ನು ಮೃತ್ಯುಮುಖಕ್ಕೆ ಅಟ್ಟಿದ್ದನ್ನು ನೋಡಿ ಜಾಲಂಧರನು ಸಿಟ್ಟಿಗೆದ್ದು ತನ್ನ ಸೇನೆಯೊಂದಿಗೆ

ಸ್ಕಂದನನ್ನು ಎದುರಿಸಿದ. ಮಗನ ಮೇಲಿನ ಪ್ರೀತಿಯಿಂದ ಪರಮೇಶ್ವರನು ತನ್ನ ಗಣಂಗಳೊಂದಿಗೆ ಸ್ಕಂದನ ಸಹಾಯಕ್ಕಾಗಿ ಯುದ್ಧಕ್ಕೆ ಬಂದು ನಿಂತುಕೊಂಡ. ರುದ್ರ ಹಾಗೂ ಜಾಲಂಧರರಲ್ಲಿ ನೇರ ಯುದ್ಧ ಏರ್ಪಟ್ಟಿತು. ಜಾಲಂಧರನು ಕೋಪಾಟೋಪದಿಂದ ಒಂದು ಭೀಕರವಾದ ಬಾಣವನ್ನು ತೆಗೆದು ಗುರಿಯಿಟ್ಟು ಮಹಾದೇವನ ಲಲಾಟಪಟ್ಟದ ನಟ್ಟನಡುವೆ ಬಿಟ್ಟುಬಿಟ್ಟ. ಜಾಲಂಧರನ ಆ ಘೋರವಾದ ಬಾಣವು ಶಂಕರನ ವಿಶಾಲವಾದ ಹಣೆಯ ನಡುವೆ ಆಳವಾಗಿ ನೆಟ್ಟು ಬಿಟ್ಟಿತು. ಹಣೆಯ ನಡುವೆ ಜಾಲಂಧರನ ಬಾಣವು ಶಿವನ ಲಲಾಟ ಅಲಂಕಾರವಾದ ಚಂದ್ರಕಲೆಯಂತೆ ಶೋಭಿಸಿತು. ಆಗ ಕುಪಿತನಾದ ಮಹಾದೇವ ಬೆಂಕಿಯಂತೆ ಉರಿಯುತ್ತಲಿರುವ ಒಂದು ಮಹಾಬಿಲ್ಲನ್ನು ತೆಗೆದುಕೊಂಡ. ಅದರ ಬಾಣದ ವೇಗದಲಿ ವಾಯು, ತುದಿಬದಿಗಳಲ್ಲಿ ಅಗ್ನಿ ಸೂರ್ಯ, ಗ್ರಂಥಿಗಳಲ್ಲಿ ಕಾಲ, ಮಧ್ಯದಲ್ಲಿ ಭೂದೇವಿ ಅಸ್ಥಿತರಾಗಿದ್ದರು. ಆ ಬಾಣದಿಂದ ಹೊಡೆದ ಕೂಡಲೇ ಬಾಯಿಂದ ರಕ್ತವನ್ನು ಕಕ್ಕಿ ಆ ರಕ್ಕಸ ವಜ್ರದಿಂದ ಹೊಡೆಯಲ್ಪಟ್ಟ ಬೆಟ್ಟದಂತೆ ನೆಲದ ಮೇಲೆ ಉರಳಿ ಮೂರ್ಛಿತನಾಗಿ ಬಿದ್ದ. ಜಾಲಂಧರನು ಹೀಗೆ ಮೂರ್ಛಿತನಾಗಿ ಬಿದ್ದಾಗ ಮಹಾದೇವನು ತನ್ನ ಘೋರವಾದ ಬಾಣಗಳ ಸುರಿಮಳೆಯಿಂದ ಎಲ್ಲ ದೈತ್ಯಸೇನೆಯನ್ನು ಸಂಹರಿಸಿದ. ಬಹುಕಾಲದ ಅನಂತರ ಮೂರ್ಛೆ ತಿಳಿದು ಮೇಲೆದ್ದ ಜಾಲಂಧರ. ರಣಭೂಮಿಯಲ್ಲಿ ಒಮ್ಮೆ ಸುತ್ತಲೂ ಕಣ್ಣಾಡಿಸಿ ನೋಡಿದ. ಯಾರೂ ಜೀವಂತ ಉಳಿದಿರಲಿಲ್ಲ. ಶಿವನ ಬಾಣಗಳು ಎಲ್ಲ ದೈತ್ಯರ ಪ್ರಾಣಗಳನ್ನು ಹೀರಿ ಬಿಟ್ಟಿದ್ದವು. ಮೂರ್ಛೆ ತಿಳಿದು ಎದ್ದುನಿಂತ ಜಾಲಂಧರನ ಕಣ್ಣಿಗೆ ಎರಡೇ ವಸ್ತುಕಂಡವು. ಅತ್ತ ಯುದ್ಧ ಮಾಡುತ್ತಲಿರುವ ಶಿವ. ಇತ್ತ ಜೀವ ಹೋಗಿ ಬಿದ್ದುಕೊಂಡ ಬರೀ ರಾಶಿರಾಶಿ ಶವ. ಅದನ್ನು ಕಂಡು ತಲ್ಲಣಿಸಿ ಹೋದ ಆ ದೈತ್ಯ ಜಾಲಂಧರ. ಕೂಡಲೇ ಅವನು ತನ್ನ ಗುರು ಶುಕ್ರಾಚಾರ್ಯರನ್ನು ಮನಸ್ಸಿನಲ್ಲಿ ನೆನೆದ ಅರೆನಿಮಿಷದಲ್ಲಿ ಅಲ್ಲಿಗೆ ಆಗಮಿಸಿದರು ಅಸುರರ ಆಚಾರ್ಯ ಶುಕ್ರರು.

**ಶುಕ್ರ:-** ಸಿಂಧುಕುಮಾರ, ನನ್ನನ್ನು ನೀನು ಏಕೆ ಈಗ ಸ್ಮರಿಸಿದೆ? ನೀನು ಮಹಾಬಲಿಷ್ಠ. ನಿನ್ನ ಯಾವ ಕಾರ್ಯವನ್ನು ನಾನು ಈಗ ಮಾಡಲಿ?

**ಜಾಲಂಧರ:-** ಗುರುವೇ, ನಿನಗೆ ನಮೋನಮಃ. ಮೊದಲು ಶಿವನಿಂದ ಹೊಡೆತ ತಿಂದು ಶವವಾಗಿ ಬಿದ್ದ ಈ ಎಲ್ಲ ನನ್ನ ಸೈನಿಕರನ್ನು ನೀನು ಮತ್ತೆ ಬದುಕಿಸು. ನನ್ನನ್ನು ಉಳಿಸು.

**ಶುಕ್ರಾಚಾರ್ಯ:-** ಶಿಷ್ಯೋತ್ತಮ, ಹೆದರಬೇಡ. ನಾನು ಈಗಲೇ ಸತ್ತುಬಿದ್ದ ಈ ಎಲ್ಲ ಸೈನಿಕರನ್ನೂ ಮತ್ತೆ ಬದುಕಿಸುತ್ತೇನೆ. ಹೀಗೆ ಹೇಳಿ ಶಿಷ್ಯನನ್ನು ಸಂತೈಸಿ, ಆಚಾರ್ಯರು ರಣರಂಗದತ್ತ ತಮ್ಮ ಗಮನ ಹರಿಸಿದರು.

ಇಪ್ಪತ್ತೈದು ಸಾವಿರ ಯೋಜನದ ಉದ್ದಗಲವಾದ ರಣಭೂಮಿಯಲ್ಲಿ ತೊಂಬತ್ತೈದು ಯೋಜನ ಎತ್ತರವಾಗಿ ಹತಪತಿತರಾಗಿ ಬಿದ್ದ ದೈತ್ಯದಾನವರ ದೇಹಗಳೂ ಮುರಿದ ರಥಗಳೂ, ಹರಿದ ಧ್ವಜಗಳೂ, ಕಡಿದ ಕುದುರೆಗಳೂ, ತುಂಡರಿಸಿದ ಆನೆಗಳೂ, ಕತ್ತರಿಸಿದ ದೈತ್ಯ ಸೈನಿಕರ ಅಂಗಾಂಗಳೂ, ಅಸಂಖ್ಯ ಅಸುರ ಸೈನಿಕರ ಭಿನ್ನ ವಿಭಿನ್ನ ಕೈ, ಕಾಲು, ಬೆನ್ನು ಹೊಟ್ಟೆ, ಹೆಗಲು, ತಲೆಬುರುಡೆಗಳೂ ಒಟ್ಟಿಸಿದಂತೆ ರಾಶಿರಾಶಿಯಾಗಿ ಬಿದ್ದಿದ್ದವು. ಅವರನ್ನೆಲ್ಲ ಬದುಕಿಸಲು ಉದ್ಯುಕ್ತರಾದರು. ಅವರು ಅಲ್ಲಿಯೇ

ಮಂತ್ರಾಚಮನ ಮಾಡಿ, ಮಂತ್ರವನ್ನು ಪಠಿಸಿ, ತಮ್ಮ ಕಮಂಡಲುವಿನಲ್ಲಿಯ ನೀರನ್ನು ಅಭಿಮಂತ್ರಣಗೈದು, ತಮ್ಮ ಅಮೃತ ದೃಷ್ಟಿಯನ್ನು ಮತ್ತೊಮ್ಮೆ ಆ ದೈತ್ಯದೇಹಗಳ ಮೇಲೆ ಹರಿಸಿ ನೋಡಿ, ಮಂತ್ರಪೂತವಾದ ಜಲವನ್ನು ಅಲ್ಲಿಯ ಹೆಣಗಳ ಹಡದಿಯ ಮೇಲೆ ಪ್ರೋಕ್ಷಿಸಿದರು. ಎಲ್ಲ ಕಡೆಗೂ ಅಭಿಮಂತ್ರಿತ ಜಲವನ್ನು ಸಿಂಪಡಿಸಿದರು.

ಅತ್ತ ರುದ್ರದೇವರು ಸಂಗ್ರಾಮದ ಸಂಭ್ರಮದಲ್ಲಿ ಬಿಚ್ಚಿಹೋದ ತನ್ನ ಜಡೆಯ ಮುಡಿಗಟ್ಟನ್ನೂ, ಕೆದರಿದ ಕೂದಲುಗಳನ್ನೂ ಸರಿಯಾಗಿ ಕಟ್ಟಿಕೊಂಡು ಹೆಗಲಮೇಲೆ ಹರಿದಾಡುವ ಹಾವುಗಳಿಂದ ಆ ಕೆದರಿದ ಕೂದಲುಗಳನ್ನೆಲ್ಲ ಗಟ್ಟಿಯಾಗಿ ಕಟ್ಟಿ ಸಾವರಿಸಿಕೊಂಡು ಎದ್ದು ನಿಲ್ಲುವಷ್ಟರಲ್ಲಿ ಶುಕ್ರಾಚಾರ್ಯರು ತಮ್ಮ ಮಂತ್ರ ಶಕ್ತಿಯಿಂದ ಶಂಕರನು ಇಷ್ಟು ಹೊತ್ತು ಕಷ್ಟಪಟ್ಟು ಕೊಂದುಹಾಕಿದ ಎಲ್ಲ ಸೈನಿಕರನ್ನು ಮತ್ತೆ ಎದ್ದು ನಿಲ್ಲಿಸಿದರು. ಅವರೆಲ್ಲರೂ ಕೆರಳಿದ ಕೇಸರಿಗಳಂತೆ ಸಿಂಹನಾದ ಮಾಡುತ್ತ, ಮತ್ತೇರಿದ ಆನೆಗಳಂತೆ ಘೀಳಿಡುತ್ತ, ಹಸಿದ ಹೆಬ್ಬುಲಿಗಳಂತೆ ಶಿವನ ಸೇನೆಯ ಮೇಲೆ ಎರಗಿದರು. ಅದನ್ನು ನೋಡಿ ಶಂಕರನಿಗೆ ಅತ್ಯಾಶ್ಚರ್ಯ ಎನಿಸಿತು. - ''ಇಷ್ಟು ಹೊತ್ತಿನವರೆಗೆ ಸತ್ತುಬಿದ್ದ ದೈತ್ಯರು ಈಗ ಮತ್ತೆ ಹೇಗೆ ಬದುಕಿ ಎದ್ದು ಬಂದರು? ಇವರ ಈ ಮೃತದೇಹಗಳಲ್ಲಿ ಯಾರು ಜೀವರಸವನ್ನು ಪೂರಣ ಮಾಡುತ್ತ ಇದ್ದಾರೆ. ಇಲ್ಲಿ ಬಿದ್ದ ಈ ರಾಶಿರಾಶಿ ಶವ ಸಮೂಹದಲ್ಲಿ ಮತ್ತೆ ಚೈತನ್ಯದ ಚಿಲುಮೆ ಚಿಮ್ಮುವಂತೆ ಮಾಡಿದ ಪುಣ್ಯಾತ್ಮ ಯಾರಿರಬಹುದು? ಎಂದು ಕುತೂಹಲದಿಂದ ನೋಡಿದ ಮಹಾದೇವ. ಶುಕ್ರಾಚಾರ್ಯರು ತಮ್ಮ ಕೈಯಲ್ಲಿಯ ಕಮಂಡಲದಿಂದ ದೈತ್ಯರ ಹೆಣಗಳ ಮೇಲೆಲ್ಲ ಮಂತ್ರಜಲವನ್ನು ಪ್ರೋಕ್ಷಿಸುತ್ತ ನಡೆದಿದ್ದ ರಣಾಂಗಣದ ಆ ತುದಿಯಿಂದ ಈ ತುದಿಯವರೆಗೆ ಓಡೋಡಿ, ನೀರು ಚಿಮುಕಿಸಿ, ದೈತ್ಯವೀರರನ್ನು ಅರೆಚಣದಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಎಚ್ಚರಿಸಿ ನಿಲ್ಲಿಸುತ್ತಿದ್ದ. ಅದನ್ನು ನೋಡಿ ಶುಕ್ರಾಚಾರ್ಯರ ಮೇಲೆ ಬ್ರಹ್ಮಾಂಡ ಕೋಪಬಂದಿತು ಆ ಪರಮೇಶ್ವರನಿಗೆ. ತನ್ನ ಕೈಯಲ್ಲಿಯ ತ್ರಿಶೂಲವನ್ನು ಕೈಯಲ್ಲಿ ಎತ್ತಿಕೊಂಡು ಆ ಶುಕ್ರನನ್ನು ಕೊಲ್ಲಬೇಕೆಂದು ಧಾವಿಸಿಬಂದ ಮಹಾದೇವ. ಅದನ್ನು ತಿಳಿದು ಶುಕ್ರಾಚಾರ್ಯರು ತಾನಾಗಿಯೇ ಮಹಾದೇವರು ಇದ್ದಲ್ಲಿಗೆ ಬಂದು ಏಕಾಂತದಲ್ಲಿ ಅವರನ್ನು ಕುರಿತು ಹೇಳಿದ.

**ಶುಕ್ರಾಚಾರ್ಯ:-** ರುದ್ರದೇವ, ನಾನು ಬ್ರಾಹ್ಮಣ. ಬರೀ ಹೆಸರಿಗೆ ಮಾತ್ರ ಬ್ರಾಹ್ಮಣ ಅಲ್ಲ. ಬ್ರಹ್ಮಜ್ಞಾನವನ್ನು ಪಡೆದ ಬ್ರಾಹ್ಮಣ. ಸರ್ವವಿದ್ಯಾವಿಶಾರದನಾದ ಬ್ರಾಹ್ಮಣ. ಮಂತ್ರಸಿದ್ಧಿ ವಾಕ್‌ಶುದ್ಧಿ ತಪೋಬಲಗಳಿಂದ ಸಮನ್ವಿತನಾದ ಬ್ರಾಹ್ಮಣ. ಇಂಥ ಬ್ರಾಹ್ಮಣನನ್ನು ಕೊಂದರೆ ನಿನಗೆ ಬ್ರಹ್ಮಹತ್ಯಾಪಾಪವು ತಟ್ಟದೆ ಇರದು. ನೀನು ಭಕ್ತವತ್ಸಲ. ಬ್ರಾಹ್ಮಣಪ್ರಿಯ. ನಾನು ಭಕ್ತ. ಮತ್ತು ಬ್ರಾಹ್ಮಣ. ನನ್ನನ್ನು ಕೊಲ್ಲವೆಯ? ನನ್ನನ್ನು ಕೊಂದರೆ ಬ್ರಹ್ಮಹತ್ಯೆ ನಿನ್ನನ್ನು ಬಿಟ್ಟೀತೆ!

ಶುಕ್ರಾಚಾರ್ಯರ ಈ ಮಾತನ್ನು ಕೇಳಿ ಮಹಾದೇವರು ಹೊಡೆಯಲು ಮೇಲಕ್ಕೆ ಎತ್ತಿದ ತಮ್ಮ ತ್ರಿಶೂಲವನ್ನು ಕೆಳಗಿಳಿಸಿದರು. ಅವರಿಗೆ ಹಿಂದೆ ತಾವು ಬ್ರಹ್ಮದೇವರ ತಲೆಯನ್ನು ಕತ್ತರಿಸಿದಾಗ ಆ ಬ್ರಹ್ಮಕಪಾಲವು ತಮ್ಮ ಕೈಗೇ ಅಂಟಿಕೊಂಡ ವಿಷಯ ನೆನಪಾಯಿತು. ಅವರು ಆ ಶುಕ್ರಸಂಹಾರದ ವಿಚಾರವನ್ನು ತೆಗದುಹಾಕಿದರು.

**"ಬ್ರಾಹ್ಮಣೋ ನಹಿ ಹಂತವ್ಯೋ ಹರನ್ ಪ್ರಾಣಾನಪಿಪ್ರಿಯಾನ್ ।**

ಪ್ರಾಣ ಹೋದರೂ ಬ್ರಹ್ಮಜ್ಞಾನಿಯನ್ನು ಕೊಲ್ಲಬಾರದು ಎಂಬ ವಚನವನ್ನು ನೆನೆದು ಶುಕ್ರನನ್ನು ಜೀವಂತ ಬಿಟ್ಟುಬಿಟ್ಟರು ಆ ಪರಮೇಶ್ವರ.

ಆದರೆ ಆ ಶಿವನಿಗೆ ಈ ಬ್ರಾಹ್ಮಣ ಒಂದು ದೊಡ್ಡ ತಲೆನೋವು ಆಗಿ ಮಾರ್ಪಟ್ಟ. ''ಇವನನ್ನು ಕೊಂದರೆ ಬ್ರಹ್ಮಹತ್ಯೆ. ಕೊಲ್ಲದಿದ್ದರೆ ನನ್ನದೇ ಹತ್ಯೆ ಆಗುವದು. ಸತ್ತವರನ್ನೆಲ್ಲ ಮತ್ತೆ ಮತ್ತೆ ಈ ಹಾರುವ ಬದುಕಿಸುತ್ತ ಹೊರಟಿದ್ದಾನೆ. ಹಾಗಾದರೆ ಈ ಯುದ್ಧಕ್ಕೆ ಕೊನೆ ಎಂದು? ನನ್ನ ಹೆಂಡತಿಯನ್ನೇ ಕೆಡಿಸಬಂದ ಕಾಮಪಿಶಾಚಿಯಾದ ಈ ಜಾಲಂಧರನನ್ನು ನಾನು ಕೊಲ್ಲುವ ಬಗೆ ಎಂತು? ಆದ್ದರಿಂದ ನಾನು ಈಗ ಒಂದು ಉಪಾಯವನ್ನು ಮಾಡಬೇಕು. ನನ್ನ ವಿರುದ್ಧವಾಗಿ ನಿಂತು, ಅಸುರೀಶಕ್ತಿಗೆ ಪ್ರೋತ್ಸಾಹನ ಕೊಟ್ಟು, ದುಷ್ಟಶಕ್ತಿಯನ್ನು ಬೆಳೆಸುತ್ತಲಿರುವ ಈ ಬ್ರಾಹ್ಮಣನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕು. ಇವನನ್ನು ಯಾವುದಾದರೂ ಒಂದು ಸ್ತ್ರೀಯೋನಿಯಲ್ಲಿ ಅಡಗಿಸಿಬಿಡಬೇಕು.''

ಹೀಗೆ ಯೋಚಿಸಿ ತನ್ನ ಮನದಲ್ಲಿಯೇ ಮಹಾದೇವನು ನುಡಿಯುತ್ತಿರುವಾಗಲೇ ಅವನ ಹಣೆಯ ಮಧ್ಯದಲ್ಲಿ ಇರುವ ಮೂರನೆಯ ಕಣ್ಣು ಮೆಲ್ಲನೇ ತೆರೆಯಿತು. ಅದರ ಮಧ್ಯದಿಂದ ಒಂದು ಭಯಂಕರವಾದ ಕೃತ್ಯು (ಬೆಂಕಿಯ ಗೊಂಬೆ) ಹೊರಗೆ ಸಿಡಿದು ಬಂದಿತು. ಭೀಕರವಾದ ಹೆಣ್ಣು ರಕ್ಕಸಿಯ ಆಕಾರದ, ಕೆದರಿದ ಕೂದಲಿನ ಉದ್ದ ಹೊಟ್ಟೆಯ ಬೆತ್ತಲೆ ಮೈಯ, ಕ್ರೂರ ಹಲ್ಲಿನ, ಕೆಂಡಗಣ್ಣಿನ, ಸ್ಥೂಲ ದೇಹದ ಆ ಬೆಂಕಿಯ ಗೊಂಬೆಯು ಶಿವನ ಎದುರು ನಿಂತು ಏನು ಅಪ್ಪಣೆ ಎಂದು ಕೇಳಿತು.

**ಮಹಾದೇವ:-** ಕೃತ್ಯೇ, ನಾನು ಜಾಲಂಧರನ ಜೊತೆಗೆ ಯುದ್ಧ ಮಾಡುವ ವರೆಗೆ ದೈತ್ಯಗುರುವಾದ ಈ ಶುಕ್ರಾಚಾರ್ಯನನ್ನು ನಿನ್ನ ಕೆಳದೇಹದಲ್ಲಿ ಅಡಗಿಸಿ ಇಟ್ಟುಕೋ. ಅನಂತರ ಅವನನ್ನು ಹೊರಗೆ ಬಿಡು.

ಶಿವನ ಅಪ್ಪಣೆಯಂತೆ ಆ ಬೆಂಕಿಯ ಬಾಲೆಯು ತನ್ನ ಭೂತಾಕಾರದಿಂದ ಭೀಕರವಾಗಿ ಅಟ್ಟಹಾಸವನ್ನು ಗೈದು ಶುಕ್ರಾಚಾರ್ಯರು ಇದ್ದಲ್ಲಿಗೆ ಹೋಗಿ ಅವರ ಚಂಡಿಕೆ ಹಿಡಿದು ತನ್ನ ಒಳ ಶರೀರದಲ್ಲಿ ಮುಚ್ಚಿ ಇಟ್ಟುಕೊಂಡಳು. ಅದನ್ನು ನೋಡಿ ಜಾಲಂಧರನು ಭಯಭ್ರಾಂತನಾಗಿ ಆ ಕೃತ್ಯೆಯನ್ನು ಕೊಲ್ಲಬೇಕೆಂದು ಬಿಲ್ಲಿಗೆ ಬಾಣ ಹೂಡಿದ. ಆದರೆ ಅಷ್ಟರಲ್ಲಿ ಆ ನಗ್ನದೇಹದ ಅಗ್ನಿಕುಮಾರಿಯು ಅಲ್ಲಿಯೇ ಅದೃಶ್ಯಳಾದಳು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ರುದ್ರಜಾಲಂಧರ ಯುದ್ಧ ಎಂಬ ಹದಿನೆಂಟನೇಯ ಅಧ್ಯಾಯ ಮುಗಿದುದು*

—o—

## ಶಿವಸೇನೆ ದೈತ್ಯಸೇನೆಯರ ಯುದ್ಧ

ಅಧ್ಯಾಯ - ೧೯

**ನಾರದ:-** ಅನಂತರ ಜಾಲಂಧರನು ಕೋಪದಿಂದ ಕುದಿದು ಶಿವನನ್ನು ಅಧಿಕ್ಷೇಪಿಸಿ ನುಡಿದ.

**ಜಾಲಂಧರ:-** ಶಂಕರ, ಇನ್ನು ಮೇಲೆ ನನ್ನ ಬಾಣಗಳಿಂದ ನೀನು ಪಾರಾಗು ನೋಡುತ್ತೇನೆ. ಈಗಲೇ ನನ್ನ ಘೋರಶರಗಳಿಂದ ಹೊಡೆದು ನಿನ್ನನ್ನು ಹಾರಿಸಿ ಹರಿ ಇದ್ದಲ್ಲಿಗೆ ಒಯ್ದು ಒಗೆಯುತ್ತೇನೆ. ಅನಂತರ ಆ ಬ್ರಹ್ಮನನ್ನು ಹಿಡಿದು ಎಳೆದು ಸಮುದ್ರದಲ್ಲಿಯೇ ಎಸೆಯುತ್ತೇನೆ. ಹೀಗೆ ಹರಿಹರಬ್ರಹ್ಮ ಎಂದು ಹೆಸರಾದ ನೀವು ಮೂವರನ್ನೂ ತೆಗೆದೊಗೆದು ನಾನೇ ಜಗತ್ತಿಗೆಲ್ಲ ಸರ್ವೇಶ್ವರ ಆಗುತ್ತೇನೆ.

ಹೀಗೆ ನುಡಿದು ಘೋರ ಯುದ್ಧವನ್ನು ಆರಂಭಿಸಿದ ಜಾಲಂಧರ ಶುಂಭ, ನಿಶುಂಭ, ಫೇಂಕಾರ,ಫೇರುಂಡ, ಧೂಮ್ರಲೋಚನ, ಕೇತು, ವಿಡಾಲಜಂಭ, ರಾಹು, ದುರ್ವಾರಣ, ಕಾಲ, ಲವಣ, ಅಂಧಕಾಸುರ, ಚಂಡ, ಚಾಮುಂಡ ಮೊದಲಾದ ತನ್ನ ದೈತ್ಯಸೇನಾಪತಿಗಳನ್ನೆಲ್ಲ ಹುರಿದುಂಬಿಸಿ ಶಿವಸೇನೆಯ ಮೇಲೆ ಯುದ್ಧಕ್ಕೆ ಅಟ್ಟಿದ. ಅದನ್ನು ನೋಡಿ ವೀರಭದ್ರ, ಮಣಿಭದ್ರ, ನಂದಿ, ಭೃಂಗಿರಿಟಿ, ವೀರಕ, ಸ್ಕಂದ, ವಿನಾಯಕನ ಮುಂತಾದ ಶಿವಸೇನಾಪತಿಗಳೆಲ್ಲರೂ ಶಿವನ ಸಂಕೇತದಂತೆ ದೈತ್ಯರ ಜೊತೆಗೆ ಮತ್ತೆ ಹೋರಾಟಕ್ಕೆ ಇಳಿದರು. ಆ ದೈತ್ಯದಾನವರಲ್ಲಿ ಘನಘೋರವಾದ ಪ್ರಾಣಾಂತಿಕ ಸಂಗ್ರಾಮವು ಮಸಗಿತು. ಶುಂಭಾದಿ ದೈತ್ಯ ದಾನವ ಧುರೀಣರು ತಮ್ಮ ಘೋರವಾದ ಆಯುಧಗಳಿಂದ ಶಿವಸೇನೆಯ ಮೇಲೆ ಎರಗಿ ಎಲ್ಲ ಗಣಾಧೀಶರನ್ನು ಹೊಡೆದು ಬಡಿದು ಓಡಿಸಿಬಿಟ್ಟರು. ಧೈರ್ಯದಿಂದ ಅಲ್ಲಿ ಇದ್ದವರು ಕೈ ಕಾಲು, ತಲೆ, ಬೆನ್ನು, ಸೀಳಿ ಹೋಳಾಗಿ ನೆಲದ ಮೇಲೆ ಮರಣದ ದಾರಿಯಲ್ಲಿ ಬಿದ್ದುಕೊಂಡರು. ಹೀಗೆ ಗಂಗಾಧರನ ಸೈನಿಕರ ಸಂಘಗಳನ್ನೆಲ್ಲ ದೈತ್ಯವೀರರು ಕಲಿತನದಿಂದ ಕಾದಿ ಗೆದ್ದು ಮಳೆಗಾಲದ ಮೋಡಗಳ ಪಡೆ ಶೈಲಶೃಂಗವನ್ನು ಮುತ್ತುವಂತೆ ಮಹಾದೇವರ ಮೇಲೆ ಮುಗಿಬಿದ್ದರು. ಆಗ ಎತ್ತಿನ ಮೇಲೆ ಹತ್ತಿಕೊಂಡು ಸುತ್ತಲೂ ಓಡಾಡಿ ಮಹಾದೇವನು ತನ್ನ ಪಿನಾಕ ಧನಸ್ಸನ್ನು ಎಳೆದು ಪುಂಖಾನುಪುಂಖವಾಗಿ ಬಾಣಗಳ ಪ್ರವಾಹವನ್ನೇ ದೈತ್ಯರ ಮೇಲೆ ಸುರಿಸಿದ. ಅದರಂತೆ ನಂದೀಶ್ವರನು ಕೂಡ ಶುಂಭ ಮೊದಲಾದ ದಾನವ ಸೇನಾಪತಿಗಳನ್ನು ತನ್ನ ಪ್ರಬಲವಾದ ಬಾಣಪ್ರಹಾರದಿಂದ ಹೊಡೆದು ಕೈಕಾಲು ತಲೆಬುರುಡೆಗಳನ್ನು ಬಿಡಿಬಿಡಿಯಾಗಿ ಮಾಡಿ ರಣಭೂಮಿಯ ತುಂಬ ಈಡಾಡಿದ. ಅದನ್ನು ನೋಡಿ ನಿರಾಶನಾದ ಜಾಲಂಧರ ಒಂದು ಕುಯುಕ್ತಿಯನ್ನು ಮಾಡಿದ.

ಸಿಂಧುಸುತನಾದ ಆ ಜಾಲಂಧರನು ತನ್ನ ಮಾಯೆಯಿಂದ ಒಂದು ಗೌರಿಯ ಪ್ರತಿಬಿಂಬವನ್ನು ನಿರ್ಮಿಸಿದ. ಈ ನಕಲಿ ಗೌರಿಯು ಮೂಲ ಪಾರ್ವತಿಯಂತೆಯೇ ಸರ್ವಸೌಂದರ್ಯ ಸಂಪನ್ನಳು. ಅವಳಂತಹದೇ ಉಡಿಗೆತೊಡಿಗೆ. ಅದೇ ರೂಪ, ಅದೇ ಕಾಂತಿ, ಅದೇ ಕಳೆ, ಅದೇ ನಿಲುವು, ಅದೇ ಚೆಲುವು. ಅವಳ ಗೆಳತಿಯಾದ ಜಯಾ ಸಖಿಯದೂ ಒಂದು ಮಾಯಾಮಯವಾದ ಮೂರ್ತಿಯನ್ನು ಜಾಲಂಧರ ತಯಾರಿಸಿದ. ಮತ್ತು ಆ ಜಯಾಳಿಗೆ ಹೇಳಿದ.

**ಜಾಲಂಧರ:-** ಜಯಾಳ ಮಾಯಾರೂಪಿಣಿಯಾದ ಪಾರ್ವತೀ ಸಖಿಯೇ ! ನೀನು ಈಗ ರಣಾಂಗಣದಲ್ಲಿ ಯುದ್ಧ ಮಾಡುತ್ತಿರುವ ಮಹಾದೇವರ ಬಳಿಗೆ ಹೋಗಿ ಅವರನ್ನು ಮೋಸಗೊಳಿಸು.

ದೈತ್ಯನ ಆದೇಶದಂತೆ ಮಾಯಾರೂಪಿಣಿಯಾದ ಆ ಜಯಾ ಸಖಿಯು ಮಹಾದೇವರು ಯುದ್ಧ ಮಾಡುವಲ್ಲಿಗೆ ಹೋಗಿ ಅವನ ಎದುರುನಿಂತು ಕೂದಲುಗಳನ್ನು ಕೆದರಿಕೊಂಡು ದೊಡ್ಡ ಧ್ವನಿಯಿಂದ ಅಳತೊಡಗಿದಳು. ಆಗ ಮಹಾದೇವನು - ''ನೀನು ನನ್ನ ಸತೀದೂತಿ ಜಯಲ್ಲವೇ? ಇಲ್ಲಿಗೆ ಏಕೆಬಂದೆ? ಹೀಗೇಕೆ ಅಳುತ್ತಲಿರುವೆ? ನಿನಗೆ ಏನಾಗಿದೆ?'' ಎಂದು ಪ್ರಶ್ನಿಸಿದ. ಆ ಮಾಯಾ ಜಯೆಯು ದುಃಖಿಸುತ್ತ - ''ಪ್ರಭು, ನಿನ್ನ ಪ್ರೇಯಸಿಯಾದ ಪಾರ್ವತೀದೇವಿಯನ್ನು ಜಾಲಂಧರನು ಮಾನಸೋತ್ತರ ಪರ್ವತದಿಂದ ಅಪಹರಿಸಿಕೊಡು ಹೋಗಿದ್ದಾನೆ.'' ಎಂದು ನುಡಿದು ಮತ್ತೆ ರೋದಿಸತೊಡಗಿದಳು. ಅದನ್ನು ಕೇಳಿ ಶಂಕರನು ಅವಳಿಗೆ ನುಡಿದ.

**ಶಂಕರ:-** ಜಯೇ, ಹಾಗಿದ್ದರೆ ನೀನು ಕೂಡ ನನ್ನ ಈ ಎತ್ತಿನ ಮೇಲೆ ಬಂದು ಕುಳಿತುಕೋ. ಇಲ್ಲದಿದ್ದರೆ ಈ ದೈತ್ಯರು ನಿನ್ನನ್ನೂ ಬಿಡಲಾರರು. ಪಾರ್ವತಿಯನ್ನು ಅಪಹರಿಸಿದಂತೆ ನಿನ್ನನ್ನು ಕೂಡ ಎತ್ತಿಕೊಂಡು ಒಯ್ಯುವರು. ಆದ್ದರಿಂದ ನೀನು ಈಗ ನನ್ನೊಡನೆ ಈ ವೃಷಭಾರೂಢಳಾಗಿ ಕುಳಿತುಕೋ ಬಾ. ನಿನ್ನನ್ನು ನಾನು ಈ ದೈತ್ಯರ ಕೈಗೆ ಬೀಳದಂತೆ ಸುರಕ್ಷಿತವಾಗಿ ಪಾರುಮಾಡುತ್ತೇನೆ.

ಶಿವನ ಸಲಹೆಯಂತೆ ಮಾಯಾಮಯೀ ಆದ ಆ ಜಯೆಯು ಎತ್ತಿನ ಮೇಲೆ ಬಂದು ಶಿವನನ್ನು ಅಪ್ಪಿಕೊಂಡು ಕುಳಿತಳು. ಮುಂದೆ ಮರುಚಣದಲ್ಲಿ - ''ಪ್ರಭು, ನಾನು ಪಾರ್ವತಿ ಇಲ್ಲದೇ ಬದುಕಲಾರೆ. ಅವಳು ಇದ್ದಲ್ಲಿಗೆ ನಾನು ಹೋಗುತ್ತೇನೆ.'' ಹೀಗೆ ಹೇಳಿ ಶಂಕರನ ಜಡೆಯ ಸಿರಿಮುಡಿಯಲ್ಲಿ ತೊಡಕಿದ ಮರಿ ಚಂದ್ರನನ್ನು ಸೆಳೆದುಕೊಂಡು ಎತ್ತಿನಿಂದ ಕೆಳಗೆ ಇಳಿದು ಹೋಗಿಬಿಟ್ಟಳು. ಇತ್ತ ಶಂಕರನು ಮಾಯೆ ಮುಸುಕಿದವನಾಗಿ ಯುದ್ಧದಲ್ಲಿ ತೊಡಗಿದ. 'ಪಾರ್ವತಿಯು ಜಾಲಂಧರನಿಂದ ಅಪಹರಿಸಲ್ಪಟ್ಟಿದ್ದಾಳೆ'' ಎಂಬ ಸುದ್ದಿಯನ್ನು ಕೇಳಿಯೇ ಸತೀವತ್ಸಲನಾದ ಆ ಪರಮೇಶ್ವರನಿಗೆ ಜಾಲಂಧರನ ಮಾಯೆಯ ಪ್ರಭಾವದಿಂದ ಒಂದು ತರಹದ ಮಂಕುಕವಿದಂತಾಯಿತು. ಅವನಿಗೆ ತನ್ನ ನಿಜರೂಪದ ಅರಿವೇ ಉಳಿಯಲಿಲ್ಲ.

ಇದೇ ವೇಳೆಯಲ್ಲಿ ದೈತ್ಯರಾಜನಾದ ಜಾಲಂಧರನು ತನ್ನ ಪ್ರಚಂಡ ಸೇನೆಯೊಂದಿಗೆ ರಥಾರೂಢನಾಗಿ ಶಂಕರನೊಡನೆ ಸೆಣೆಸಲು ಬಂದ. ಆ ಜಾಲಂಧರನು ತನ್ನ ರಥದಲ್ಲಿ ತಾನು ಮಾಯಯಿಂದ ನಿರ್ಮಿಸಿದ ಪಾರ್ವತಿಯನ್ನು ಕೂಡಿಸಿಕೊಂಡಿದ್ದ. ಆಗ ಮಹಾದೇವನ ಕಣ್ಣಿಗೆ ಜಾಲಂಧರನ ರಥದಲ್ಲಿ ಕುಳಿತ ಪಾರ್ವತಿಯ ಮಾಯಾ ಮೂರ್ತಿಯು ಬಿದ್ದಿತು. ಜಾಲಂಧರನ ರಥದಲ್ಲಿ ಕುಳಿತ ಪತಿಯ ವಿಯೋಗದಿಂದ ದೀನದೂನಳಾದ ಆ ಪಾರ್ವತಿಯು ''ಹಾ ನಾಥ ! ಪ್ರಿಯ ಶಂಕರ ! ನಾನು ನಿನ್ನನ್ನು ಬಿಟ್ಟು ಹೇಗೆ ಬದುಕಲಿ? ನನ್ನ ಪ್ರಾಣದರಸ ! ಪರಮೇಶ್ವರ, ಎಲ್ಲಿರುವೆ? ಎಂದು ವಿಲಪಿಸುತ್ತಿದ್ದಳು. ವೈರಿಯ ರಥದಲ್ಲಿ ಇದ್ದ ವಿಲಪಿಸುವ ತನ್ನ ಪ್ರಾಣಪ್ರಿಯ ಗೌರಿಯನ್ನು ಕಂಡು ಮಹಾದೇವ ದುಃಖಾಕ್ರಾಂತನಾಗಿ ರೋದಿಸತೊಡಗಿದ ಪ್ರಾಕೃತ ಮಾನವನಂತೆ.

**ಮಹಾದೇವ:-** ಪ್ರಿಯೇ, ಪಾರ್ವತಿ, ನೀನು ನಿಜವಾಗಿಯೂ ದಾನವರಿಂದ ಅಪಹರಿಸಲ್ಪಟ್ಟಿರುವೆಯೊ? ಅಥವಾ ನನಗೇ ಮಾಯೆಯು ಮುಸುಕಿದೆಯೇ ! ನಾನು ನನ್ನ ಪ್ರಿಯಕಾಂತೆಯನ್ನು ಇನ್ನು ಹೇಗೆ ಪಡೆಯಬಲ್ಲೆ?

ಹೀಗೆ ವಿಲಪಿಸುತ್ತಿರುವ ಮಹಾದೇವನನ್ನು ಕಂಡು ಜಾಲಂಧರನು ಅಟ್ಟಹಾಸಗೈಯುತ್ತ ನುಡಿದ.

**ಜಾಲಂಧರ:-** ರುದ್ರ, ನೀನು ಹೆಸರಿಗೆ ಮಾತ್ರ ಈಶ್ವರ. ನಿನ್ನ ಹೆಂಡತಿಯನ್ನೇ ನಿನಗೆ ರಕ್ಷಿಸಲು ಆಗಲೊಲ್ಲದು. ಪಾರ್ವತಿಯು ಇಲ್ಲದೇ ನೀನು ಇನ್ನು ಮೇಲೆ ಸರ್ವಶೃಂಗಾರ ಸುಖಗಳಿಂದ ವಂಚಿತನಾದೆ. ಪಾಪ ! ನಿನ್ನನ್ನು ನೋಡಿ ನನಗೇ ಕೆಡುಕು ಎನಿಸುತ್ತದೆ. ರುದ್ರನೇ, ನೀನು ಅಳಬೇಡ. ನಾನು ನಿನಗೆ ನಿನ್ನ ಹೆಂಡತಿಯನ್ನು ಕೊಡುತ್ತೇನೆ. ಪಾರ್ವತಿ ಇಲ್ಲದೇ ನೀನು ಈಗ ನಿನ್ನ ಸಾಮರ್ಥ್ಯವನ್ನೆಲ್ಲ ಕಳೆದುಕೊಂಡು ದುರ್ಬಲನಾಗಿರುವೆ. ನಾನು ಕೊಡುವೆನು ತೆಗೆದುಕೊ ನಿನ್ನ ಪ್ರಾಣಕಾಂತೆಯನ್ನು. ನಿನ್ನ ಮುಂದೆ ಇರುವ ಈ ಸೈನಿಕರನ್ನೆಲ್ಲ ಕೊಂದು ನಿನ್ನ ಪಾರ್ವತಿಯನ್ನು ನೀನು ಕರೆದುಕೊಂಡು ಹೋಗು ನಿನ್ನ ರಥಕ್ಕೆ.

ಆಗ ಶಂಕರನು ಉತ್ಸಾಹಿತನಾಗಿ ತನ್ನ ಎತ್ತನ್ನು ಜಾಲಂಧರನ ರಥದ ಕಡೆಗೆ ಓಡಿಸಿದ. ಜಾಲಂಧರನು ತನ್ನ ಸೈನ್ಯವನ್ನೆಲ್ಲ ಶಂಕರನ ಮೇಲೆ ಹರಿಬಿಟ್ಟ. ಆಗ ರುದ್ರದೇವನು - ''ಪ್ರಭು, ರಕ್ಷಿಸು, ರಕ್ಷಿಸು, ನನ್ನನ್ನು ಪಾರು ಮಾಡು. ಹೇಗಾದರೂ ಮಾಡಿ ಕಾಪಾಡು.'' ಹೀಗೆ ಕೂಗುತ್ತಿರುವ ಪಾರ್ವತಿಯನ್ನು ವೈರಿಯ ರಥದಿಂದ ಕರೆತರಬೇಕೆಂದು ನುಗ್ಗಿಬರುವ ವೈರಿಗಳ ಸೇನೆಯ ಮೇಲೆ ಮುಗಿಬಿದ್ದ. ಆ ಸೇನಾಸಾಗರವನ್ನು ಸೀಳಿಕೊಂಡು ಜಾಲಂಧರನ ರಥದವರೆಗೆ ಬಂದು ಶಿವನು ತನ್ನ ಕೈಯಿಂದ ಆ ಮಾಯಾಗೌರಿಯನ್ನು ಎತ್ತಿಕೊಳ್ಳಬೇಕು ಎನ್ನುವಷ್ಟರಲ್ಲಿ ಆ ಶುಂಭಾಸುರನು ಹಾರಿ ಬಂದು ಜಾಲಂಧರನ ರಥದಲ್ಲಿ ಇದ್ದ ಆ ಮಾಯಾಗೌರಿಯನ್ನು ಹಿಡಿದುಕೊಂಡು ಗಕ್ಕನೇ ಗಗನಕ್ಕೆ ಹಾರಿದ. ಆ ಮಾಯಾಗೌರಿಯೊಂದಿಗೆ ಅಂತರಿಕ್ಷದಲ್ಲಿ ಶಿವನಿಗೆ ಕಾಣುವಂತೆ ನಿಂತುಕೊಂಡ. ಅದನ್ನು ಕಂಡು ಕುಪಿತನಾದ ಮಹಾರುದ್ರ ಆ ಶುಂಭಾಸುರನನ್ನು ಕೊಲ್ಲಬೇಕು ಎಂದು ತನ್ನ ತ್ರಿಶೂಲವನ್ನು ಅವನು ಇದ್ದ ಕಡೆಗೆ ಬೀಸಿದ. ಆಗ ಆಕಾಶದಲ್ಲಿ ನಿಂತುಕೊಂಡ ಆ ಶುಂಭಾಸುರ ಶಿವನ ಆ ತ್ರಿಶೂಲದ ಮೇಲೆಯೇ ಆ ಮಾಯಾಪಾರ್ವತಿಯನ್ನು ಸರಿಯಾಗಿ ಬೀಳುವಂತೆ ಆಕಾಶದಿಂದ ನುಗಿಸಿಬಿಟ್ಟ. ಆ ಶುಂಭಾಸುರನು ಕೈ ಬಿಟ್ಟ ಆ ಮಾಯಾ ಪಾರ್ವತಿಯ ದೇಹವು ಸರಿಯಾಗಿ ಶಿವನ ತ್ರಿಶೂಲದ ಮೇಲೆಯೇ ಬಿದ್ದಿತು. ತಕ್ಷಣದಲ್ಲಿ ಶೂಲ ಚುಚ್ಚಿ ಸೀಳಿದ ಮಾಯಾ ಪಾರ್ವತಿಯ ದೇಹವು ಆ ಚುಚ್ಚಿದ ಶೂಲದೊಂದಿಗೆ, ಮಹಾದೇವನ ಮುಂದೆ ಬಂದು ಬಿದ್ದಿತು. ಅದನ್ನು ನೋಡಿ ರುದ್ರನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದ. ಮರುಚಣದಲ್ಲಿಯೇ ಚೇತರಿಸಿಕೊಂಡು ಎದ್ದ ಮತ್ತು ಶುಂಭ ಮೊದಲಾದ ದೈತ್ಯರಿಗೆಲ್ಲ - ''ಆ ನನ್ನ ಗೌರಿಯು ನಿಮ್ಮನ್ನೆಲ್ಲರನ್ನೂ ಕೊಲ್ಲುವಳು'' ಎಂದು ಶಾಪವಿತ್ತ.

**ನಾರದ:-** ಕಳೆದ ಮನ್ವಂತರದಲ್ಲಿ ಗೌರೀದೇವಿಯು ಮಹೇಶ್ವರನ ಶಾಪದಂತೆ ಆ ಶುಂಭನಿಶುಂಭ ಮೊದಲಾದ ದೈತ್ಯರನ್ನೆಲ್ಲ ಕೊಂದುಹಾಕಿದಳು.

ಇರಲಿ. ಪ್ರಕೃತ ಮಹಾದೇವನು ಅವರನ್ನೆಲ್ಲ ಶಪಿಸಿ ವಿರಹಶೋಕದಿಂದ, ಪ್ರೇಯಸಿಯ ಮರಣ ದುಃಖದಿಂದ ದಗ್ದಮುಗ್ಧನಾಗಿ ರೋದಿಸತೊಡಗಿದ.

**ಶಂಕರ:-** ಪ್ರಿಯೇ, ರಣಾಂಗಣದಲ್ಲಿ ದುಃಖಿತನಾದ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋದೆ? ಆ ವಾಸುದೇವನು ಕೂಡ ನಾನು ಸತಿವಿರಹಿತನಾದುದನ್ನು ತಿಳಿದಿರಲಿಕ್ಕಿಲ್ಲ. ಹಿಂದೆ ದಕ್ಷನ ಅಗ್ನಿಕುಂಡದಲ್ಲಿ ನೀನು ಆತ್ಮಾರ್ಪಣೆ ಮಾಡಿದ ಬಳಿಕ ನಾನು ನಿನ್ನನ್ನು ಮತ್ತೊಮ್ಮೆ ಪಡೆದೆ. ಈಗ ಮತ್ತೆ ನನ್ನನ್ನು ತ್ಯಜಿಸಿ ಹೋಗಿ ಬಿಟ್ಟೆಯಲ್ಲ? ಸುಂದರೀ, ಏಳು ಏಳು. ಪರ್ವತ ಪುತ್ರಿ. ನೀನು ಎದ್ದು ನೆಲಕ್ಕೆ ಬಿದ್ದ ನನ್ನನ್ನು ಎಚ್ಚರಿಸು.

ಹೀಗೆ ದೈತ್ಯರ ಮಾಯೆಯಿಂದ ಮೋಹಿತನಾಗಿ ಪ್ರಾಕೃತ ಮಾನವರಂತೆ ರುದ್ರನು ರೋದಿಸುತ್ತಿರುವದನ್ನು ನೋಡಿ ಆಕಾಶದಿಂದ ಇಳಿದು ಬಂದ ಚತುರ್ಮುಖ ಬ್ರಹ್ಮ. ಮಹಾದೇವರನ್ನು ಕುರಿತು ನುಡಿದ.

**ಬ್ರಹ್ಮ:-** ಶಂಕರ, ನೀನು ಶೋಕ ಮೋಹವರ್ಜಿತ, ದುಃಖರಹಿತ. ನಿನಗೆ ತಂದೆ ತಾಯಿ ಯಾರೂ ಇಲ್ಲ. ಮಡದಿ, ಮಕ್ಕಳು, ಶತ್ರು, ಪುತ್ರ ಯಾರೂ ನಿನಗೆ ಇರುವದಿಲ್ಲ. ನೀನು ಯಾವ ತಂದೆಯಿಂದಲೂ ಹುಟ್ಟಿಲ್ಲ. ಮುಂದೆ ಹುಟ್ಟುವದಿಲ್ಲ. ನಿನಗೆ ಏಕೆ ಇಂಥ ಮೋಹ ಬಂದಿತು? ನೀನು ಆ ಪರಬ್ರಹ್ಮನ ಅಧಿಷ್ಠಾನವೇ ಆಗಿರುವೆ. ನೀನು ಒಬ್ಬನೇ ಇದ್ದರೂ ಅನೇಕ ರೂಪಗಳನ್ನುಸ್ವೀಕರಿಸಿ ಬಗೆಬಗೆಯ ಲೀಲೆಗಳನು ಆಡುವೆ. ನಿನ್ನ ಅಂತರ್ಯಾಮಿಯಾಗಿರುವ ಪರಬ್ರಹ್ಮಸ್ವರೂಪವನ್ನು ಯೋಗಿಗಳು ಧ್ಯಾನದಿಂದ ಕಾಣುತ್ತಾರೆ. ಸಾಮಾನ್ಯರಿಗೆ ತಿಳಿಯಲು ಶಕ್ಯವಿರದೆ ನಿನ್ನ ನಿಜರೂಪವನ್ನು ತಿಳಿದು ಭಕ್ತಿಯಿಂದ ಆರಾಧಿಸಿ ನಿನ್ನ ಪಾದಮೂಲವನ್ನು ಯೋಗಿಗಳು ಹೊಂದಿದ್ದಾರೆ. ಈ ಯುದ್ಧಭೂಮಿಯಲ್ಲಿ ಮಡಿದವಳು ನಿನ್ನ ಮಡದಿಯಲ್ಲ. ಜಾಲಂಧರನು ಮಾಯೆಯಿಂದ ಗೌರಿಯ ರೂಪವನ್ನು ನಿರ್ಮಿಸಿ ಅವಳ ಕೃತಕ ದೇಹ ದೃಶ್ಯವನ್ನು ನಿನ್ನನ್ನು ವಂಚಿಸಲು ನಿರ್ಮಿಸಿದ್ದಾನೆ. ಇದೆಲ್ಲವೂ ದೈತ್ಯರ ಮಾಯೆ. ನಿನ್ನ ಪ್ರಿಯಕಾಂತೆಯಾದ ಪಾರ್ವತಿಯು ಸೂಕ್ಷ್ಮರೂಪದಿಂದ ಕಮಲಕೋಶದಲ್ಲಿ ಕುಳಿತುಕೊಂಡು ನಿನ್ನ ಧ್ಯಾನ ಮಾಡುತ್ತಲಿದ್ದಾಳೆ. ನೀನು ಯುದ್ಧದಲ್ಲಿ ದೈತ್ಯರನ್ನು ಗೆದ್ದು ಎಲ್ಲ ದೇವತೆಗಳನ್ನು ರಕ್ಷಿಸು.

ಬ್ರಹ್ಮದೇವರ ಈ ವಾಕ್ಯವನ್ನು ಕೇಳಿ ಮಹಾದೇವನಿಗೆ ಇದೆಲ್ಲವೂ ದೈತ್ಯಮಾಯೆ ಎಂಬ ಅರಿವು ಮೂಡಿತು. ಮಂಜಿನ ಪರೆ ಹರಿಯಿತು. ಮನಸ್ಸಿಗೆ ಸಂತಸ ಉಂಟಾಯಿತು. ಅನಂತರ ಅವನು ಉತ್ಸಾಹದಿಂದ ದೈತ್ಯರೊಡನೆ ಯುದ್ಧ ಮಾಡತೊಡಗಿದ. ಒಂದು ದೊಡ್ಡ ಹೆಬ್ಬಂಡೆಯನ್ನು ತೆಗೆದು ದೈತ್ಯರ ಮುಂದೆ ಬೀಸಿದ. ಅದು ಮುನ್ನೂರು ಕೋಟಿ ದೈತ್ಯರನ್ನು ಮುದ್ದೆ ಮಾಡಿ ಮಣ್ಣುಗೂಡಿಸಿತು. ಅನಂತರ ಆ ವಿರೂಪಾಕ್ಷನು ತನ್ನ ವೃಷಭವನ್ನು ಆರೋಹಣಮಾಡಿ ಪಿನಾಕ ಧನುವನ್ನು ಎಳೆದು ಸೂಡುಸೂಡಾಗಿ ಬಾಣಗಳನ್ನು ಬಿಡತೊಡಗಿದ.

ಹೀಗೆ ಮಾಯೆಯ ಮಂಜಿನ ತೆರೆಯನ್ನು ಹರಿದು ಸೂರ್ಯನಂತೆ ಪ್ರಕಾಶಮಾನನಾಗಿ ನಿಂತ ಶಿವನನ್ನು ನೋಡಿ ಜಾಲಂಧರ ಮತ್ತೊಂದು ಮಾಯೆಯನ್ನು ನಿರ್ಮಿಸಿದ. ಅದೂ ಕೂಡ ಅತ್ಯದ್ಭುತ. ಜಾಲಂಧರನು ಕೋಟಿ ಭುಜನಾಗಿ ಅನೇಕ ವೃಕ್ಷ, ಅಸ್ತ್ರ ಶಸ್ತ್ರಗಳಿಂದ ಶಿವನೊಡನೆ ಯುದ್ಧ ಮಾಡತೊಡಗಿದ. ಏತನ್ಮಧ್ಯದಲ್ಲಿ ತನ್ನ ಮಾಯೆಯಿಂದ ಒಂದು ಪೃಥ್ವಿಯನ್ನೇ ನಿರ್ಮಿಸಿದ. ಅದರಲ್ಲಿ ಅನೇಕ ದೇವಮಂದಿರಗಳು. ಬಗೆಬಗೆಯ ಬೆಟ್ಟ, ಉದ್ಯಾನ, ಲತಾಕುಂಜಗಳಿಂದ ಭೂಮಂಡಲವು ಅತ್ಯಂತ ಸುಂದರವಾಗಿ ಅಲ್ಲಿ

ರೂಪುಗೊಂಡಿತು. ಅದರಲ್ಲಿ ಮೇನಕಾ ರಂಭಾ, ಮೊದಲಾದ ಅಪ್ಸರೋ ಜಾತಿಯ ಚೆಲುವೆಯರು ಸುಂದರವಾಗಿ ನೃತ್ಯ ಮಾಡುತ್ತಿದ್ದರು. ಮಧುರ ಸಂಗೀತ, ಸುಸ್ವರವಾದ ತಾಳವಾದ್ಯಗಳ ಮೇಳ, ಮೋಹಕವಾದ ಅಪ್ಸರೆಯರ ನೃತ್ಯ, ಸುಮಧುರವಾದ ವಾದ್ಯಸಂಗೀತ, ಅಲ್ಲಿಯ ಲಲಿತ ಲಾಸ್ಯ, ಸಾನಂದ ಹಾಸ್ಯ ಹಾಗೂ ಉನ್ಮತ್ತ ಸಂಭ್ರಮಗಳನ್ನು ಕಂಡು ಮಹಾದೇವನ ಮನಸ್ಸು ಮತ್ತೆ ಮುಗ್ಧವಾಯಿತು. ತನ್ನ ಕೈಯಲ್ಲಿಯ ಬಿಲ್ಲುಬಾಣಗಳನ್ನು ತೆಳಗೆ ಹಾಕಿ ಬೆರಗುಗಣ್ಣಿನಿಂದ ಮಹಾದೇವ ಅದನ್ನೇ ನೋಡುತ್ತ ನಿಂತುಬಿಟ್ಟ. ಯುದ್ಧವನ್ನು ಮರೆತುಬಿಟ್ಟ. ಆಗ ಜಾಲಂಧರನು ತಾನೂ ಕೂಡ ಅಲ್ಲಿಯ ಗೀತೆ ವಾದ್ಯಗಳಿಗೆ ಅನುಗುಣವಾಗಿ ಹೆಜ್ಜೆ ಹಾಕುತ್ತ ಕುಣಿಯತೊಡಗಿದ. ಅದನ್ನು ನೋಡಿ ಮಹಾದೇವನು ಕೂಡ ತಾನು ಮರುಳಾಗಿ ತಾನೂ ನರ್ತನವನ್ನು ಆರಂಭಿಸಿದ. ಆ ದುಷ್ಟನಾದ ಮಾಯಾವಿ ದಾನವನು ಹೀಗೆ ಮಹಾದೇವನು ಕುಣಿಯತೊಡಗಿದಾಗ ಎಲ್ಲ ದೇವತೆಗಳನ್ನೂ, ನಂದಿ ಮೊದಲಾದ ಗಣಾಧೀಶರನ್ನೂ, ಶಿವಸೇನೆಯನ್ನೂ ಸಮುದ್ರದಲ್ಲಿ ನೂಕಿದ. ಹೀಗೆ ರುದ್ರಸೇನೆಗೆ ಬಂದ ಆಕಸ್ಮಿಕ ಪರಾಭವವನ್ನು ಕಂಡು ನೊಂದುಕೊಂಡ ಶ್ರೀ ಕೃಷ್ಣನು ಮಹಾದೇವನನ್ನು ಕುರಿತು ನುಡಿದ.

**ಕೃಷ್ಣ:-** ಶಂಭೋ, ನೀನು ಮುನಿಜನ ಮಾನನೀಯ. ಆದರೂ ಈಗ ದೈತ್ಯರ ಮಾಯಯಿಂದ ಮೋಹಿತನಾಗಿರುವೆ. ಈ ದೈತ್ಯನ ವಧೆಗಾಗಿಯೇ ನಿರ್ಮಿತವಾದ ಚಕ್ರ ನಿನ್ನ ಉದರದಲ್ಲಿಯೇ ಇದೆ. ಆದರಿಂದ ನೀನೇ ಇವನನ್ನು ಕೊಲ್ಲು. ನೀನು ಅವನನ್ನು ವಧೆ ಮಾಡುವಿ ಎಂದು ತಿಳಿದು ನಾನು ಉದಾಸೀನನಾಗಿ ಅವನನ್ನು ಕೊಂದಿಲ್ಲ. ನೀನೇ ಬೇಗನೇ ಅವನನ್ನು ಸಂಹರಿಸು.

ವಿಷ್ಣುವಿನ ಈ ವಚನವನ್ನು ಕೇಳಿ ಮಹಾದೇವನಿಗೆ ಮತ್ತೆ ತನ್ನ ನಿಜರೂಪದ ಅರಿವು ಮರಳಿ ಬಂದಿತು. ಅವನು ತನ್ನ ವಾಹನವಾದ ವೃಷಭವನ್ನು ಏರಿಕೊಂಡು ಯುದ್ಧಭೂಮಿಗೆ ಮರಳಿದ. ಅದನ್ನು ನೋಡಿ ಜಾಲಂಧರನು ಕೂಡ ತನ್ನ ಎಲ್ಲ ಸೈನ್ಯವನ್ನು ಒಗ್ಗೂಡಿಸಿಕೊಂಡು ಶಿವನ ಮೇಲೆ ಎರಗಿದ. ಅದನ್ನು ಕಂಡು ಶಿವನ ಕೋಪ ಕೆರಳಿತು. ಆ ಕ್ಷಣದಲ್ಲಿ ಅವನು ತನ್ನ ಈ ಸೌಮ್ಯರೂಪವನ್ನು ತೊರೆದು ಪ್ರಳಯ ಕಾಲದ ಸಂಹಾರರೂಪವನ್ನು ತಳೆದು ನಿಂತುಕೊಂಡ. ಅವನ ಲಲಾಟ ಪಟ್ಟದ ನಟ್ಟನಡುವಿನ ಮೂರನೆಯ ಕಣ್ಣು ಭುಗಿಲೆಂದು ಉರಿಯತೊಡಗಿತು. ಅವನ ನೇತ್ರಾಗ್ನಿಯಲ್ಲಿ ಕೋಟ್ಯಾವಧಿ ದೈತ್ಯರು ದೀಪದ ಹುಳುವಿನಂತೆ ಪುರುಪುರು ಉರಿದು ಹೋದರು. ಭಯಂಕರವಾದ ಅಗ್ನಿಜ್ವಾಲೆಗಳಿಂದ ಆವೃತವಾದ ಪರಮೇಶ್ವರನ ಪ್ರಳಯಕಾಲೀನವಾದ ರೌದ್ರರೂಪವನ್ನು ಕಂಡು ಶುಂಭ, ರಾಹು ಮೊದಲಾದ ದೈತ್ಯವೀರರೆಲ್ಲರೂ ಭಯಭ್ರಾಂತರಾಗಿ ಶಿವನ ಆ ಸಂಹಾರಕ ರೂಪವನ್ನು ಕಾಣಲಾರದೇ ಓಡಿಹೋಗಿ ಪಾತಾಳದಲ್ಲಿ ಸೇರಿಕೊಂಡರು. ಇದ್ದುಬಿದ್ದವರೆಲ್ಲರೂ ಆ ಅಗ್ನಿಜ್ವಾಲೆಯಿಂದ ದಗ್ಧರಾಗಿ ಬೂದಿಯಾಗಿ ಬಿದ್ದರು ನೆಲದ ಮೇಲೆ. ಆದರೆ ಆಗ ಧೈರ್ಯದಿಂದ ಆ ರಣಭೂಮಿಯಲ್ಲಿ ಗಟ್ಟಿಯಾಗಿ ನಿಂತುಕೊಂಡ ಒಬ್ಬನೇ ಒಬ್ಬ ವೀರನೆಂದರೆ ಜಾಲಂಧರ ಮಾತ್ರ. ಅವನಿಗೆ ರುದ್ರನ ಈ ಪರಮಾತ್ಮ ರೂಪವನ್ನು ನೋಡಿ ದ್ವೇಷ ಹೋಗಿ ಭಕ್ತಿ ಹುಟ್ಟಿತು. ರುದ್ರದೇವರ ಯಥಾರ್ಥವಾದ ರುದ್ರರೂಪವನ್ನು ಕಾಣಬೇಕು. ಎಂಬ ಭಕ್ತಿ

ಉದ್ರೇಕದಿಂದ ಆನಂದಿತನಾಗಿ ಅವನು ಬೆಟ್ಟದಂತೆ ಗಟ್ಟಿಮುಟ್ಟಿಯಾಗಿ ಮಹಾದೇವರನ್ನು ನೋಡುತ್ತ ನಿಂತುಕೊಂಡ. ಮತ್ತು ಅವನು ನಕ್ಕು ಆ ಶಿವನನ್ನು ಕುರಿತು ಹೇಳಿದ.

**ಜಾಲಂಧರ:-** ಶಿವ, ನೀನು ಈ ನಿನ್ನ ಲೋಕಸಂಹಾರಕವಾದ ರೂಪವನ್ನು ಬಿಟ್ಟು ಬಿಡು. ಇದರಿಂದ ಈ ಚರಾಚರಾತ್ಮವಾದ ಪ್ರಪಂಚವೆಲ್ಲವನ್ನೂ ನೀನು ಸುಡಬಲ್ಲೆ. ಇದನ್ನು ಬಿಟ್ಟು ನಿನ್ನ ಮೊದಲಿನಂತೆ ಸೌಮ್ಯಸ್ವರೂಪದಿಂದ ಶಸ್ತ್ರ ಹಿಡಿದು ನನ್ನೊಡನೆ ಯುದ್ಧಮಾಡು.

**ಶಿವ:-** ದೈತ್ಯರಾಜ, ನನ್ನ ಈ ಘೋರರೂಪವನ್ನು ನೋಡಿಯೂ ಭಯಪಡದೇ ನನ್ನನ್ನು ನೋಡುತ್ತ ನಿಂತುಕೊಂಡಿರುವ ನಿನ್ನ ಧೈರ್ಯ ಕಂಡು ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳಿಕೋ.

**ನಾರದ :-** ಹೀಗೆ ಪ್ರಸನ್ನನಾದ ಮಹಾದೇವನ ಪ್ರಸನ್ನವಾದ ಮನಸ್ಸಿನ ಮಾತುಗಳನ್ನು ಕೇಳಿ ಸಂಸಾರದಲ್ಲಿ ನಿಸ್ಪೃಹನಾಗಿ ಎಲ್ಲವೂ ಅಸಾರವೆಂದು ತಿಳಿದು ಭಗವಂತನಲ್ಲಿ ಭಕ್ತಿಯುಕ್ತವಾದ ಜಾಲಂಧರನು ಮಹಾದೇವನಿಂದ ತನಗೆ ಸಾಯುಜ್ಯ ಮೋಕ್ಷವು ದೊರಕಬೇಕೆಂದು ವರವನ್ನು ಕೇಳಿಕೊಂಡ.

**ಮಹಾದೇವ:-** ದೈತ್ಯ, ಈಗ ಇದ್ದ ನಿನ್ನ ದೇಹವು ಮರ್ತ್ಯದೇಹ. ವೃಂದೆಯು ಮೋಹಿಸಿ ಪ್ರೀತಿಸಿದ ಈ ನಿನ್ನ ಶರೀರವು ಇಲ್ಲಿಯೇ ನಾಶವಾಗುವದು. ನೀನು ಮೋಕ್ಷವನ್ನು ಕೊಡುವ ಆ ಶ್ರೀಹರಿಯ ನಿಜವಾದ ಸ್ವರೂಪವನ್ನು ತಿಳಿಯದೇ ಅವನೊಡನೆ ಹೋರಾಡಿದೆ. ಮುಕ್ತಿಕೊಡುವ ಪ್ರಭು ನಿನ್ನ ಮನೆಯಲ್ಲಿಯೇ ಇದ್ದರೂ ಅವನನ್ನು ಅರಿಯದೇ, ಅವನ ಮಹಿಮೆಯನ್ನು ತಿಳಿಯದೇ, ಅವನಲ್ಲಿ ಭಕ್ತಿ ಮಾಡದೇ ಇರುವ ನೀನು ಮೋಕ್ಷವನ್ನು ಬಯಸುವದು ಮೂರ್ಖತನ. ನಿನ್ನ ತಂದೆಯ ಸಾಮುದ್ರಿಕ ಪ್ರದೇಶದಲ್ಲಿ ನೀರಿನ ಆಶ್ರಯ ಪಡೆದು ಪವಡಿಸಿರುವ ಈ ನಾರಾಯಣನೇ ನಿಜವಾಗಿ ನಾಶರಹಿತನಾದ ಪರಮಾತ್ಮ. ನಿನ್ನ ಪ್ರಿಯ ಪತ್ನಿಯಾದ ವೃಂದೆಯನ್ನು ಆ ಶ್ರೀಹರಿಯೇ ತನ್ನ ಯೋಗಮಾಯೆಯಿಂದ ಅಪಹರಿಸಿದ್ದ. ಅದರ ಉದ್ದೇಶ ಯಾವುದೇ ಪ್ರೇಮಕಾಮ ಪ್ರೇರಿತವಲ್ಲ. ನೀನು ನನ್ನ ಪ್ರಿಯ ಸತಿಯಾದ ಪಾರ್ವತಿಯನ್ನು ನನ್ನ ರೂಪದಿಂದ ವಂಚಿಸುವ ಹಂಚಿಕೆಯನ್ನು ಹಾಕಿದ್ದೆ. ನನ್ನ ಮೇಲಿನ ಪ್ರೀತಿಯಿಂದ ಅದಕ್ಕೆ ಪ್ರತೀಕಾರ ಮಾಡಲಿಕ್ಕಾಗಿ ಆ ಭಗವಂತ ಲೋಕಶಿಕ್ಷಾರ್ಥವಾಗಿ ವೃಂದೆಯ ಅಪಹರಣ ಮಾಡಿದ. ನಿನ್ನ ಪತ್ನಿ ವೃಂದೆಯು ಈ ದೇವರ ಹಸ್ಯವನ್ನು ಕೊನೆಗೆ ಅರಿತು, ಆ ವಿಷ್ಣುವಿನ ಬ್ರಹ್ಮಸ್ವರೂಪವನ್ನು ತಿಳಿದುಕೊಂಡು, ಕೊನೆಗೆ ಆ ಭಗವಂತನ ಪರಮಪದವನ್ನು ತನ್ನ ಯೋಗ್ಯತೆಗೆ ಅನುಗುಣವಾಗಿ ಹೊಂದಿದಳು. ಇನ್ನು ಮೇಲೆ ನಿನಗೆ ಆ ನಿನ್ನ ವೃಂದೆಯೂ ದೊರಕಲಾರಳು. ಶ್ರೀಹರಿಯ ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳದೇ ಅವನಲ್ಲಿ ಭಕ್ತಿ ಮಾಡದಿರುವ ನಿನಗೆ ಮುಕ್ತಿಯು ಎಂದಿಗೂ ದೊರಕಲಾರದು. ನೀನು ಇನ್ನು ಮೇಲೆ ಸ್ವರ್ಗ, ಹಾಗೂ ಅಪವರ್ಗಗಳ ಮಧ್ಯದಲ್ಲಿ ಇರುವ ಈ ಸಂಸಾರದಲ್ಲಿ ನಿನಗೆ ಏನು ಬೇಕು ಬೇಡಿಕೋ.''

**ಮೂಹೂರ್ತಂ ಪರಮಾತ್ಮಾನಂ ತಮೇಕಾಕಿನಮವ್ಯಯಮ್ ।**
**ಅಬುದ್ಧ್ವಾ ತ್ಯಜಸೇ ಮೂರ್ಖ ಕಥಂ ತ್ವಂ ಮುಕ್ತಿಮಿಚ್ಛಸಿ**
**ವೃಂದಾ ತವ ಪ್ರಿಯಾರಾಜ್ಞೀ ಹೃತಾ ಸಾ ಯೋಗಮಾಯಯಾ**
**ಬ್ರಹ್ಮಸ್ವರೂಪಂ ವಿಜ್ಞಾಯ ಪ್ರಾಪ್ತಾ ತತ್ ಪರಮಂ ಪದಂ**

**ಇದಾನೀಂ ದುರ್ಲಭಾ ಸಾ ಚ ತತ್ ಪದಂಚೈವ ದುರ್ಲಭಂ ಸ್ವರ್ಗಾಪವರ್ಗಯೊಮಧ್ಯೇ ಸಂಸಾರೇ ವರ ಮಾಪ್ನುಹಿ)**
ಎಂದು ಜಾಲಂಧರನಿಗೆ ಹಿತೋಪದೇಶ ಮಾಡಿದ ಪರಮೇಶ್ವರ.

**ಜಾಲಂಧರ:-** ಪ್ರಭು ಪರಮೇಶ್ವರ, ನೀನು ಹೇಳಿದ ಮಾತು ನಿಜ.. ಮುಕ್ತಿಯು ನಮ್ಮಂಥವರಿಗೆ ಎಟುಕದ ಹಣ್ಣು. ಆ ಮೋಕ್ಷವನ್ನು ಯಾವನೋ ಒಬ್ಬ ಪುಣ್ಯಪುರುಷ ಸುದೈವದಿಂದ ಪಡೆಯುತ್ತಾನೆ. ಅದು ನನಗೆ ದೊರಕದಿದ್ದರೆ ಬೇಡ. ಈಗ ನನಗೆ ನಿನ್ನ ದರ್ಶನವಂತೂ ಆಯಿತು. ನನಗೆ ಇಷ್ಟೇ ಸಾಕು. ನಿನ್ನಿಂದ ನನಗೆ ಮರಣವು ಬರಬೇಕು ಇದೇ ನನ್ನ ಅಪೇಕ್ಷೆ.

**ಮಹಾದೇವ:-** ನೀನು ನನ್ನ ಪರಮಪದವಾದ ಕೈಲಾಸಕ್ಕೆ ಬರಲು ಬಯಸುತ್ತಿದ್ದರೆ ಮೊದಲು ನನ್ನನ್ನು ಬಾಣದಿಂದ ಹೊಡೆದು ಸಿಟ್ಟಿಗೆ ಎಬ್ಬಿಸು. ನನಗೆ ಕೋಪವನ್ನು ಬರಿಸಿದರೆ ನಾನು ನಿನನ್ನು ಸಂಹರಿಸುತ್ತೇನೆ. ನನ್ನ ಕೈಯಿಂದ ನಿನಗೆ ಸಾವು ಬಂದರೆ ನೀನು ನನ್ನ ಸ್ಥಾನಕ್ಕೆ ಬರುವೆ.

**ಜಾಲಂಧರ:-** ಸ್ವಾಮಿ, ನೀನು ಜಗತ್ಪೂಜ್ಯ. ನನಗೂ ಪೂಜ್ಯ. ನನ್ನ ಆರಾಧ್ಯ ದೇವನಾದ ನಿನ್ನನ್ನು ನಾನು ಹೇಗೆ ಮೊದಲು ಹೊಡೆಯಲಿ? ಪೂಜ್ಯ ವಸ್ತುವಿನ ಮೇಲೆ ಪ್ರಥಮ ಪ್ರಹಾರವನ್ನು ನಾನು ಖಂಡಿತವಾಗಿ ಮಾಡಲಾರೆ. ಮೊದಲು ನೀನೇ ನನ್ನನ್ನು ಪ್ರಹರಿಸು. ಅನಂತರ ನಾನು ಅದಕ್ಕೆ ಪ್ರತೀಕಾರ ರೂಪವಾಗಿ ನಿನ್ನನ್ನು ಹೊಡೆದು ಹೋರಾಟವನ್ನು ಆರಂಭಿಸುತ್ತೇನೆ.

**ನಾರದ:-** ಈ ಮಾತುಗಳನ್ನು ಕೇಳಿ ಮಹಾದೇವನು ತನ್ನ ನಿಶಿತವಾದ ಬಾಣಗಳಿಂದ ಆ ಜಾಲಂಧರನನ್ನು ಬಲವಾಗಿ ಪ್ರಹರಿಸಿದ. ಹರ ಬಿಟ್ಟ ಆ ಬಾಣಗಳು ಲೋಹಗಿರಿಯಲ್ಲಿ ದಳ್ಳುರಿಯಿಂದ ಉರಿಯುವ ಬಿದಿರುಮಳೆಗಳಂತೆ ಜಾಲಂಧರನ ದೇಹದಲ್ಲಿ ರಕ್ತ ಮೆತ್ತಿ ಕೆಂಬಣ್ಣದಿಂದ ಹೊಳೆಯುತ್ತಿದ್ದವು. ಆಗ ಜಾಲಂಧರನು ತನ್ನ ಶರಜಾಲಗಳಿಂದ ಹರದೇಹವನ್ನು ನಖಶಿಖಾಂತ ನಿಬಿಡನಿಚಿತವನ್ನಾಗಿ ಮಾಡಿದ. ಆ ಜಾನ್ಹವೀಧರ ಹಾಗೂ ಜಾಲಂಧರರ ನಡುವೆ ಘನಘೋರವಾದ ದ್ವಂದ್ವಯುದ್ಧವು ನಡೆಯಿತು. ಆ ದ್ವಂದ್ವದಲ್ಲಿ ಮಹಾದೇವರು ತನ್ನ ನಿಷ್ಠುರವಾದ ಮುಷ್ಟಿಪ್ರಹಾರದಿಂದ ಜಾಲಂಧರ ತನ್ನ ವಜ್ರ ಕಠೋರವಾದ ದೇಹದಿಂದ ಅವುಗಳನ್ನೆಲ್ಲ ತಾಳುತ್ತಿದ್ದ. ಅದಕ್ಕೆ ಪ್ರತಿಯಾಗಿ ಮಹಾದೇವನನ್ನೂ ಗರ್ಜಿಸಿ ಮರುಪ್ರಹಾರಗೈಯುತ್ತಿದ್ದ. ಅನಂತರ ಶಂಕರ ತನ್ನ ಶೂಲದಿಂದ ಆ ದೈತ್ಯನ ಎದೆಯಲ್ಲಿ ಹೊಡೆದ. ಆಗ ಆ ಜಾಲಂಧರನ ಮುಖದಿಂದ ಜಂಭ ಎಂಬ ಭಯಂಕರವಾದ ಜ್ವರವು ಹೊರಬಿದ್ದಿತು. ಅದರ ಆಕಾರ ಮಾನವರದು ಮುಖ ಸಿಂಹದ್ದು. ಆ ವಿಚಿತ್ರ ನರಸಿಂಹಾಕೃತಿಯ ಜ್ವರವು ಮಹಾದೇವನನ್ನೇ ಕಬಳಿಸಲು ಬಂದಿತು. ಅದರ ಭೀಕರತರವಾದ ಆಕಾರವನ್ನು ನೋಡಿ ಹರನು ಕೋಪದಿಂದ ಹೂಂಕಾರ ನಾದಗೈದ. ಆ ಹರ ಹೂಂಕಾರದಿಂದ ಕೂಡಲೇ ಒಂದು ಶರಭವು ಹುಟ್ಟಿ ಈ ಸಿಂಹಮುಖದ ಜ್ವರವನ್ನು ಕೊಂದುಹಾಕಿತು.

ಅನಂತರ ಜಾಲಂಧರನು ಸ್ವಯಂ ತಾನೇ ಎತ್ತಿನ ಮೇಲೆ ಹತ್ತಿ ಹೋರಾಡುತ್ತಿರುವ ಹರನ ಹತ್ತಿರ ಬಂದ ಮತ್ತು ಶಂಕರ ಏರಿದ ಆ ವೃಷಭದ ಬಾಲವನ್ನು ಹಿಡಿದು ಎಳೆದು

ಅದನ್ನು ಎತ್ತಿ ಆಕಾಶದಲ್ಲಿ ಗಿರಿಗಿರಿ ತಿರುಗಿಸಿದ. ಮತ್ತು ಆ ಎತ್ತನ್ನು ಎತ್ತಿ ಹಿಮಾಲಯದತ್ತ ಒಗೆದುಬಿಟ್ಟ ಮಹಾಬಲಿಷ್ಠನಾದ ಜಾಲಂಧರ. ಮತ್ತು ಮಹಾದೇವನು ತನ್ನ ಮೇಲೆ ಎಸೆದ ತ್ರಿಶೂಲವನ್ನೂ ತನ್ನ ಕೈಯಲಿ ತೆಗೆದುಕೊಂಡು ಆಚೆಗೆ ಒಗೆದುಬಿಟ್ಟ. ತನ್ನ ಕಾಲಕೇದಾರ ಧನುಸ್ಸಿನಿಂದ ಬಾಣಗಳನ್ನು ಬಿಟ್ಟು ಶಿವನ ಮೇಲೆ ಶರವೃಷ್ಟಿಯನ್ನೇ ಮಾಡಿದ. ಆಗ ಅವನ ಈ ಎಲ್ಲ ಶರಜಾಲವನ್ನೂ, ಶಸ್ತ್ರಾಸ್ತ್ರ ರಾಶಿಯನ್ನೂ ತನ್ನ ಬಾಣಗಳಿಂದ ಕತ್ತರಿಸಿ ಚೂರು ಚೂರು ಮಾಡಿ ಒಗೆದು ಹರನು ಜಾಲಂಧರನ ಹತ್ತು ಯೋಜನ ವಿಸ್ತಾರವಾದ ರಥವನ್ನು ಹುಡಿಗೈದ. ಕುದುರೆಗಳನು ಕೊಂದುಹಾಕಿದ. ಸಾರಥಿಯನ್ನು ಯಮಪಟ್ಟಣಕ್ಕೆ ಅಟ್ಟಿದ. ಆಗ ಜಾಲಂದರ ವಿರಥನಾಗಿ ನಡೆಯುತ್ತಲೇ ಶಿವನ ಮೇಲೆ ಏರಿ ಬಂದ. ಮತ್ತೆ ಆ ದೈತ್ಯ ಶಿವರಲ್ಲಿ ಘೋರದ್ವಂದ್ವ ಜರುಗಿತು. ಅದು ಮುಗಿದ ಬಳಿಕ ಮತ್ತೆ ಶಸ್ತ್ರಸಮರ ಅವರಿಬ್ಬರ ಈ ಪರಸ್ಪರ ಯುದ್ಧದ ಸಂಭ್ರಮದಿಂದ ಭೂಮಿಯೇ ನಡುಗತೊಡಗಿತು. ಅನಂತರ ಜಾಲಂದರನ ಎಲ್ಲ ಬಗೆಯ ಶಸ್ತ್ರಾಸ್ತ್ರಗಳನ್ನು ಶಿವನು ವಿಧ್ವಂಸಗೊಳಿಸಿದ ಬಳಿಕ ನಿಃಶಸ್ತ್ರನಾದ ಆ ದೈತ್ಯ ತನ್ನ ಮಾಯೆಯಿಂದ ಒಂದು ಕೋಟಿ ತೋಳುಗಳನ್ನು ನಿರ್ಮಿಸಿಕೊಂಡು ಆ ಸಮರದಲ್ಲಿ ಶಂಕರನನ್ನು ಬಂಧಿಸಿದ. ಆ ಮಹೇಶ್ವರ ತನ್ನ ನಿಶಿತವಾದ ಖಡ್ಗಗಳಿಂದ ಆ ದುರುಳ ದೈತ್ಯನ ಕರಕಾನನವನ್ನು ಕಾಡುಕಂಟಿಗಳನ್ನು ಕಡಿಯುವಂತೆ ಕಡಿದುಹಾಕಿದ. ಮೊದಲು ಶಸ್ತ್ರಹೀನನಾದ ದೈತ್ಯ ಈಗ ಹಸ್ತಹೀನನೂ ಆದ. ಆದರೂ ಎದೆಗುಂದದೇ ತನ್ನ ತಲೆಯಿಂದಲೇ ಹರನೊಡನೆ ಕಾದತೊಡಗಿದ. ಅದರಿಂದ ಪರಿತುಷ್ಟನಾದ ಪರಮೇಶ್ವರ ಅವನ ಪರಾಕ್ರಮಕ್ಕೆ ಮೆಚ್ಚಿ 'ನಾನು ಪ್ರಸನ್ನನಾಗಿದ್ದೇನೆ ಬೇಕಾದ ವರಬೇಡು' ಎಂದು ಹೇಳಿದ.

**ಜಾಲಂಧರ:-** "ಭಗವನ್, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ನಿನ್ನ ಸ್ಥಾನವನ್ನು ಕೊಡು. ನಾನು ಶಸ್ತ್ರಹೀನ ಹಾಗೂ ಹಸ್ತಹೀನ ಆಗಿದ್ದೇನೆಂದು ನನ್ನನ್ನು ಉದಾಸೀನ ಮಾಡಬೇಡ. ಬೇಗ ನಾನು ಕೇಳಿದ ವರವನ್ನು ನೀಡು. ಇಲ್ಲದಿದ್ದರೆ ನಾನು ನಿನ್ನನ್ನು ಈಗಲೇ ಕೊಲ್ಲುತ್ತೇನೆ."

ಹೀಗೆ ನುಡಿದು ಆ ದೈತ್ಯ ತನ್ನ ಇಚ್ಛಾಶಕ್ತಿಯಿಂದ ಮೊದಲಿನ ಎರಡು ತೋಳುಗಳನ್ನು ಪಡೆದು ಮುಷ್ಟಿಯಿಂದ ಶಿವನ ಎದೆಗೆ ಗುದಿದ್ದ. ಆಗ ಮಹಾದೇವ ಪೂರ್ವಕಾಲದಲ್ಲಿ ವಿಷ್ಣುವಿನ ತೇಜಸ್ಸಿನಿಂದ ವಿಶ್ವಕರ್ಮನಿರ್ಮಿಸಿದ ಮತ್ತು ಇಷ್ಟು ದಿನ ತನ್ನ ಕುಕ್ಷಿಯಲ್ಲಿ ಬಚ್ಚಿಟ್ಟುಕೊಂಡು ಸುದರ್ಶನ ಚಕ್ರವನ್ನು ಹೊರ ತೆಗೆದ. ಕೋಟಿಸೂರ್ಯರ ಕಾಂತಿಯಿಂದ ದೇದಿಪ್ಯಮಾನವಾದ ಆ ಸುದರ್ಶನ ಚಕ್ರವನ್ನು ತನ್ನ ಕೈಯಿಂದ ತೂರಿ ಜಾಲಂದರನ ತಲೆಯನ್ನು ಕತ್ತರಿಸಿದ. ಆಗ ಆ ಜಾಲಂಧರನ ಸುದರ್ಶನದಿಂದ ಕಡಿಯಲ್ಪಟ್ಟ ಶಿರಸ್ಸು ನೂರು ಯೋಜನ ಎತ್ತರದಲ್ಲಿ ಮುಗಿಲಿಗೆ ಜಿಗಿದು ಹುಲಿಯ ಹಾರಿಕೆಯಿಂದ ಬ್ರಹ್ಮಲೋಕಕ್ಕೆ ಹೋಯಿತು. ನೂರಾರು ಹಲ್ಲುಗಳಿಂದ ವಿಕರಾಳವಾದ ಆ ಜಲಾಂಧರನ ಶಿರಸ್ಸನ್ನು ಬೆನ್ನಟ್ಟಿ ಶಿವನೂ ಅಲ್ಲಿಗೇ ಹೋದ. ಸುದರ್ಶನ ಚಕ್ರದ ಪ್ರಹಾರ ವೇಗದಿಂದ ಮುಗಿಲಿಗೆ ನೆಗೆದು ಸತ್ಯಲೋಕದವರೆಗೂ ಹಾರಿಹೋದ ಆ ದೈತ್ಯಶೀರ್ಷವು ಕೆಳಗೆ ಇಳಿಯುತ್ತ ಇಳಿಯುತ್ತ ರಕ್ತದ ಧಾರೆಯನ್ನೇ ಎಲ್ಲೆಡೆಗೂ ಸುರಿಸುತ್ತ ಭೀಕರ ಧ್ವನಿಯನ್ನು ಗೈಯುತ್ತ ಸ್ವರ್ಗಕ್ಕೆ ಬಂದಿತು. ಅದರಿಂದ ಅಂತರಿಕ್ಷದಲ್ಲಿಯ ನಕ್ಷತ್ರ ಹಾಗೂ ಎಲ್ಲ ಗ್ರಹಗಳ ಕಾಂತಿಯು ಅಡಗಿತು. ಎಲ್ಲ ಕಡೆಗೂ ಅಂಧಕಾರ ಮುಸುಕಿತು. ಭೂಮಿ ನಡುಗಿತು.

ದಿಕ್ಕುಗಳು ದಿಕ್ಕೆಟ್ಟವು ಆಗ ಮಹಾದೇವ ಅದನ್ನು ಬೆಂಬಿಡದೇ ಇದ್ದಲ್ಲಿ ಹೋಗಿ ಚಕ್ರದಿಂದ ಮತ್ತೆ ಅದನ್ನು ಸೀಳಿದ. ಅದು ಎರಡು ಹೋಳಾಗಿ ಹಿಮಗಿರಿಯಲ್ಲಿ ಬಿದ್ದಿತು. ಜಾಲಂಧರನ ತಲೆಯ ಆ ಎರಡು ಹೋಳುಗಳಿಂದ ಸಾವಿರಾರು ದೈತ್ಯರು ಹುಟ್ಟಿ ಶಿವನೊಡನೆ ಹೋರಾಡತೊಡಗಿದರು. ಅವರೆಲ್ಲರನ್ನು ಅದೇ ಚಕ್ರದಿಂದ ಶಿವ ಸವರಿಹಾಕಿದ.

ಇತ್ತ ರಣಭೂಮಿಯಲ್ಲಿ ಜಾಲಂಧರನ ರುಂಡವು ಹಾರಿ ಹೋದಬಳಿಕ ತಲೆ ಇಲ್ಲದ ಅವನ ಮುಂಡವು ನೆತ್ತರಿನ ಕಾರಂಜಿಯನ್ನು ಪುಟಿಸುತ್ತ ರಕ್ತಾರಕ್ತವಾಗಿ ನೆಲದ ಮೇಲೆ ಥಕಥಕ ಥೈ ಥೈ ಕುಣಿಯತೊಡಗಿತು. ನೆಲದ ಮೇಲೆ ಬಿದ್ದ ಅದರ ರಕ್ತದ ಬಿಂದುಗಳಿಂದ ಮತ್ತೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದೈತ್ಯರು ಹುಟ್ಟಿ ಶಿವನೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಆ ದಾನವನ ವಿಚ್ಛಿನ್ನವಾದ ಕಂಠ ಪ್ರದೇಶದಿಂದಲೂ ಅಸಂಖ್ಯ ದೈತ್ಯರು ಹೊಮ್ಮಿ ಚಿಮ್ಮಿ ಹೊರಬಂದು ಹರನೊಡನೆ ಹೋರಾಟಕ್ಕೆ ಇಳಿದರು. ಅವರೆಲ್ಲರನ್ನೂ ಕಪರ್ದಿಯು ಅದೇ ಸುದರ್ಶನ ಚಕ್ರದಿಂದ ನಿರ್ದಯವಾಗಿ ಮರ್ದಿಸಿ ಮಣ್ಣುಗೂಡಿಸಿದ. ಜಾಲಂಧರನ ರಕ್ತ ಮಜ್ಜಾ ಮೇದಸ್ಸುಗಳಿಂದ ಭೂಮಿ ಎಲ್ಲವೂ ತುಂಬಿಹೋಯಿತು ಅದರಿಂದಲೇ ಇದಕ್ಕೆ **'ಮೇದಿನೀ'** ಎಂಬ ಹೆಸರೂ ಬಂದಿತು. ಆ ದೈತ್ಯನ ನೆತ್ತರವು ಆ ಬೆಟ್ಟಕ್ಕೆಲ್ಲ ಮೆತ್ತಿ ಅದೊಂದು ಶೋಣಾದ್ರಿ ಎನಿಸಿತು. ಅಲ್ಲಿಯೇ ಮುಂದೆ ಕೈಲಾಸದ ಉತ್ತರಭಾಗದಲ್ಲಿ ಶೋಣಿತಪುರ ಎಂಬ ಪಟ್ಟಣವು ನಿರ್ಮಿತಗೊಂಡಿತು. ಆ ದೈತ್ಯ ದೇಹದ ಮಾಂಸವೂ ಅಲ್ಲಿ ರಾಶಿಯಾಗಿ ಬಿದ್ದಿತು. ಆಗ ಮಹಾದೇವ ತನ್ನ ಕಿಂಕರಿಯರಾದ ದೇವಿಯರ ಅರವತ್ನಾಲ್ಕು ಗಣಗಳನ್ನು ಸ್ಮರಿಸಿದ ಕೂಡಲೇ ಆ ಎಲ್ಲ ಗಣೇಶ್ವರಿಯರು ಪರಶಿವನ ಬಳಿಗೆ ಬಂದು ಕರಜೋಡಿಸಿ ಕೇಳಿದರು. 'ಅಪ್ಪಣೆ ಏನು' ಎಂದು.

**ಮಹಾದೇವ :-** ಈ ಜಾಲಂಧರನ ದೇಹದ ಮಾಂಸವು ಇಲ್ಲಿ ಬಿದ್ದಿದೆ ರಾಶಿ ರಾಶಿಯಾಗಿ ಇದೆಲ್ಲವನ್ನೂ ನೀವು ಕೂಡಲೇ ಭಕ್ಷಿಸಿಬಿಡಿರಿ.

ಪರಮೇಶ್ವರನ ಆಜ್ಞೆಯಂತೆ ಬ್ರಾಹ್ಮೀ, ಮಹೇಶ್ವರೀ, ಕೌಮಾರೀ, ವೈಷ್ಣವೀ, ಮಾಹೇಂದ್ರೀ ಮುಂತಾದ ಅರವತಾನಾಲ್ಕು ಗಣದ ದೇವಿಯರು ತಮ್ಮ ಪರಿವಾರದೊಂದಿಗೆ ಅಲ್ಲಿ ಬಂದು ನಿಂತರು. ಮತ್ತು ಬೆಟ್ಟದಂತೆ ರಾಶಿಯಾಗಿ ಬಿದ್ದ ಆ ದೈತ್ಯದೇಹದ ಮಾಂಸವನ್ನು ತಮ್ಮ ಕ್ರೂರವಾದ ಕಣ್ಣುಗಳಿಂದ ಕೆಕ್ಕರಿಸಿ ನೋಡಿ ಕ್ಷಣಮಾತ್ರದಲ್ಲಿ ಇಲ್ಲದಂತೆ ಮಾಡಿದರು. ಹೀಗೆ ಆ ಎಲ್ಲ ಶಕ್ತಿದೇವಿಯರಿಂದ ಆಕ್ರಾಂತವಾಗಿ ಆ ಜಾಲಂಧರನ ದೇಹವೆಲ್ಲವೂ ಕ್ಷಯಹೊಂದಿದ ಬಳಿಕ ಅವನ ದೇಹದಿಂದ ಒಂದು ವಿಲಕ್ಷಣವಾದ ಕಾಂತಿ ಹೊರಟಿತು. ಆ ಕಾಂತಿಯು ಮಹೇಶ್ವರನಲ್ಲಿ ಲೀನವಾಗಿ ಕ್ಷಣಾರ್ಧದಲ್ಲಿ ಅದೃಶ್ಯವಾಯಿತು.

ಹೀಗೆ ಜಾಲಂಧರನು ಜಗದೀಶ್ವರನಲ್ಲಿ ವಿಲೀನನಾದ ಬಳಿಕ ಆ ಎಲ್ಲ ದೈವೀಶಕ್ತಿಗಳಿಗೆ ಮಹಾದೇವರು ಬಯಸಿದ ವರವನ್ನು ಬೇಡಿರಿ ಎಂದು ಹೇಳಿದ.

**ದೇವಿಯರು:-** ಪರಮೇಶ್ವರ, ಭೂಲೋಕದಲ್ಲಿ ಯಾವ ಜನರು ಭೋಗ, ಮೋಕ್ಷ, ಸಿದ್ಧಿ, ಸಮೃದ್ಧಿ, ಸುಖ, ಸೌಭಾಗ್ಯವನ್ನು ಬಯಸಿ ನಮ್ಮನ್ನು ಪೂಜಿಸುವರೊ ಅವರ ಇಷ್ಟಾರ್ಥವೆಲ್ಲವೂ ನಿನ್ನ ದಯೆಯಿಂದ ಪೂರ್ಣವಾಗಲಿ.

**ಮಹಾದೇವ:-** ದೇವಿಯರೇ, ನಿಮ್ಮ ಈ ಯೋಗಿನೀಗಣವನ್ನು ಯಾರು ಭಕ್ತಿಯಿಂದ ಪೂಜಿಸುವರೋ, ಅವರಿಗೆ ನಾನು ಇಷ್ಟವಾದ ವರವನ್ನು ನೀಡುತ್ತೇನೆ.

ಹರಭಕ್ತ ಮತ್ತು ಹರಿಭಕ್ತ ಯಾವನಾದರೂ ಈ ಯೋಗಿನೀಜೀವಿಯರನ್ನು ದ್ವೇಷ ಮಾಡಿದರೆ ಅವರ ಪುಣ್ಯವನ್ನೆಲ್ಲ ನಾನು ನಾಶಮಾಡುತ್ತೇನೆ.

ಹೀಗೆ ಮಹಾದೇವರು ಅರವತಾನಾಲ್ಕು ಗಣಗಳಿಗೆ ಅಧೀಶ್ವರೀ ಆದ ಶಕ್ತಿ ದೇವಿಯರಿಗೆ ಬಯಸಿದ ವರಗಳನ್ನು ನೀಡಿ ಸಂತೋಷ ಪಡಿಸಿದ. ಅನಂತರ ತನ್ನ ಪ್ರಾಣ ಪ್ರೇಯಸಿಯಾದ ಪಾರ್ವತಿಯನ್ನು ಸ್ಮರಿಸಿದ ಆ ಸ್ಮರವೈರಿಯು ಸ್ಮರಿಸಿದ ಕ್ಷಣದಲ್ಲಿ ಕಮಲ ಕೋಶದಲ್ಲಿ ಸೂಕ್ಷ್ಮರೂಪದಿಂದ ಭ್ರಮರಿಯಾಗಿ ವಾಸಮಾಡಿದ ಭವಾನಿಯು ಆ ಕಮಲ ಕಿಂಜಲ್ಕದ ಮಧ್ಯದಿಂದ ಎದ್ದು ಬಂದು ಮಹೇಶ್ವರನಿಗೆ ಭಕ್ತಿಯಿಂದ ನಮಸ್ಕರಿಸಿ ಅವನಿಗೆ ಪಕ್ಕದಲ್ಲಿ ಬಂದು ಕುಳಿತಳು. ಅವನ ವಾಹನವಾದ ಎತ್ತು ಅಲ್ಲಿಗೆ ಆಗಮಿಸಿತು. ಸ್ಮರದೂತಿಯಾದ ಜಯಾ ಮೊದಲಾದ ಸಖಿಯರೂ ಸತಿದೇವಿಯ ನೆನವರಿಕೆಯಿಂದ ಕೂಡಲೇ ಅಲ್ಲಿ ಉಪಸ್ಥಿತರಾದರು. ಆಗ ಪಾರ್ವತಿಯನ್ನು ತನ್ನ ಅರ್ಧಶರೀರದಲ್ಲಿ ಅಡಗಿಸಿಕೊಂಡ ಮಹಾದೇವ. ಗೌರೀ ಸಹಿತನಾಗಿ ಆ ಯೋಗಿನಿಯರಿಗೆ ಹೇಳಿದ - ''ಯೋಗಿನಿಯರೇ, ಈ ಜಾಲಂಧರನ ದೇಹದ ರಕ್ತಮಾಂಸಗಳನ್ನು ನೀವು ಈಗ ಭಕ್ಷಿಸಿರುವಿರಿ. ಮುಂದೆ ಹೀಗೇ ದೈತ್ಯರ ದೇಹ ಮಾಂಸ ರಕ್ತಗಳನ್ನೂ ಭಕ್ಷಿಸಿ ಇಂಥ ದೈತ್ಯರು ಮತ್ತೆ ಜಗತ್ತಿನಲ್ಲಿ ಹುಟ್ಟಿ ಬೆಳೆಯದಂತೆ ಮಾಡಿರಿ. ಈ ದುಷ್ಟ ಶಕ್ತಿಗಳು ಈ ಜಗತ್ತಿನಲ್ಲಿ ಮತ್ತೆ ಮತ್ತೆ ಹುಟ್ಟಿ ಲೋಕವನ್ನೇ ಕಬಳಿಸಿ ಬಿಡುವವು. ಆಗಾಗ ಅಲ್ಲಲ್ಲಿ ತಲೆ ಎತ್ತುತ್ತಲಿರುವ ಈ ದುಃಶಕ್ತಿಗಳನ್ನು ಕೊಂದು ಸತ್‌ಶಕ್ತಿಗಳಾದ ನೀವು ಆದರ ನೆತ್ತರ ಹೀರಿ ಮಾಂಸವನ್ನು ನುಂಗಿ ಆ ದೈತ್ಯಶಕ್ತಿಗಳು ಮತ್ತೆ ಚಿಗುರದಂತೆ ಮಾಡಿರಿ.''

ಎಂದು ಅಪ್ಪಣೆಯನ್ನು ನೀಡಿದ. ಆ ಶಿವನ ಆಜ್ಞೆಯಂತೆ ಆ ಯೋಗಿನೀ ಗಣದ ಕೌಮಾರೀ, ಮಾಹೇಶ್ವರೀ, ಬ್ರಾಹ್ಮೀ ಮುಂತಾದ ಶಕ್ತಿಗಳೆಲ್ಲವೂ ದುಷ್ಟರ ರಕ್ತಮಾಂಸಗಳನ್ನು ಇಂದಿಗೂ ಭಕ್ಷಿಸುತ್ತಲಿರುವವು.

ಜಾಲಂಧರನ ಸಂಹಾರದಿಂದ ಸಂತಸಗೊಂಡ ಬ್ರಹ್ಮಾದಿದೇವತೆಗಳು, ಎಲ್ಲ ಋಷಿಗಳು, ಮರುದ್ಗಣಗಳು, ಅಷ್ಟವಸುಗಳು, ದ್ವಾದಶ ಆದಿತ್ಯರು ಅಲ್ಲಿಗೆ ಬಂದು ಮಹೇಶ್ವರನನ್ನು ಭಕ್ತಿಯಿಂದ ಸ್ತೋತ್ರಮಾಡಿದರು. ದಶದಿಗಂತಗಳು ಪ್ರಸನ್ನವಾದವು. ಸುಗಂಧವಾಗಿ ಗಾಳಿ ಬೀಸಿತು. ಆಕಾಶದಿಂದ ಪುಷ್ಪವೃಷ್ಟಿ ಸುರಿಯಿತು. ದೇವದುಂದುಭಿಗಳು ಮೊಳಗಿದವು. ಮಹಾದೇವರ ಮೇಲೆ ಪುಷ್ಪವೃಷ್ಟಿ ಆದಾಗ ದೇವಾಂಗನೆಯರು ಕುಣಿದರು. ಗಂಧರ್ವರು ಹಾಡಿ ಪಾಡಿದರು. ಜಾಲಂಧರನ ವಿಜಯದಿಂದ ದಿವ್ಯಕೀರ್ತಿಯನ್ನು ಗಳಿಸಿದ ಪರಮೇಶ್ವರ ಸಿದ್ಧ, ಚಾರಣ, ಸುರ, ಯೋಗಿ, ಋಷಿ, ಮುನಿಗಳಿಂದ ಸಂಸ್ತುತನಾಗಿ ಗೌರೀದೇವಿಯೊಂದಿಗೆ ಕೈಲಾಸ ಪರ್ವತಕ್ಕೆ ತೆರಳಿದ. ಎಲ್ಲ ದೇವತೆಗಳನ್ನು ಅವರವರ ಸ್ಥಾನದಲ್ಲಿ ಸ್ಥಾಪಿಸಿದ. ಆ ತನ್ನ ಐಶ್ವರ್ಯವನ್ನೆಲ್ಲ ಭಕ್ತರಿಗೆ ನೀಡಿದ.

**ನಾರದ:-** ಧರ್ಮರಾಜ, ಜಗದೇಕವೀರನಾದ ಈ ಜಾಲಂಧರನ ಅತ್ಯದ್ಭುತವಾದ ಈ ಚರಿತ್ರವನ್ನು ನಾನು ನಿನಗೆ ಹೇಳಿದೆ. ಇದನ್ನೆಲ್ಲ ತಿಳಿದು ನೀನು ಈಗ ನಿಮಗೆ ಒದಗಿದ ದುಃಖವನ್ನು ಶಮನ ಮಾಡಿಕೋ. ಮಾನವನಿಗೆ ಈ ದೇಹ ಇರುವವರೆಗೂ ಕರ್ಮಮಾಡುವದು ಬಿಟ್ಟಿದ್ದಲ್ಲ. ಆ ಕರ್ಮಗಳಿಂದ ಸುಖದುಃಖಗಳು ತಪ್ಪಿದ್ದಲ್ಲ. ಈ ಮಾನವನು ತನ್ನ ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸಲೇ

ಬೇಕಾಗುವುದು. ಕೃಷ್ಣರಾಮಾದಿ ಭಗವದ್‌ವಿಭೂತಿಗಳು ಕೂಡ ಮಾನವ ದೇಹ ತಾಳಿ ಭೂಲೋಕಕ್ಕೆ ಬಂದಾಗ ಎಲ್ಲ ಪಾಮರರಂತೆ ಸುಖದುಃಖಗಳಿಗೆ ಒಳಗಾದಂತೆ ತೋರಿಸುತ್ತಾರೆ. ಅವರಿಗೂ ಸುಖದುಃಖಗಳು ಒದಗಿಬಂದ ಬಳಿಕ ಉಳಿದವರ ಪಾಡು ಏನು ಎಂದು ನೀನು ಮನಸ್ಸಿಗೆ ಸಮಾಧಾನ ಮಾಡಿಕೊ. ಕಷ್ಟಪಡುತ್ತಿರುವ ನಿಮಗೆ ಮುಂದೆ ಒಳ್ಳೆಯ ಸ್ಥಿತಿ, ಹಾಗೂ ಉತ್ಕರ್ಷ ಬರಲಿರುವದು. ಯುದ್ಧದಲ್ಲಿ ನೀವು ವೈರಿಗಳನ್ನು ಗೆದ್ದು ಪುನಃ ನಿಮ್ಮ ರಾಜ್ಯವನ್ನು ಪಡೆಯುವಿರಿ. ಸರ್ವ ಸುಖೋಪಭೋಗಗಳನ್ನು ಅನುಭವಿಸುವಿರಿ.

ಧರ್ಮರಾಜ, ಈ ಜಾಲಂಧರನ ಇತಿಹಾಸವನ್ನು ಕೇಳಿದವರು ಮುಂದೆ ದುಃಖಾಕ್ರಾಂತರು ಆಗುವದಿಲ್ಲ. ಈ ಆಖ್ಯಾನವನ್ನು ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ ಮೊದಲಾದ ಎಲ್ಲ ಜಾತಿಯವರು ಭಕ್ತಿಯಿಂದ ಕೇಳಬೇಕು. ಇದನ್ನು ಹೇಳಿದ ಆಚಾರ್ಯನಿಗೆ ಬಂಗಾರ, ಎಳ್ಳು, ವಸ್ತ್ರ, ಭೂಮಿ, ಹಸು ಮುಂತಾದವುಗಳನ್ನು ಕೊಟ್ಟು ಸಂತೋಷಪಡಿಸಬೇಕು. ಇದರಲ್ಲಿ ಅನುಷಂಗಿಕವಾಗಿ ಬಂದ ತುಳಸಿಯ ಮಹಾತ್ಮೆಯು ಪರಮ ಪವಿತ್ರವಾಗಿದೆ.

**ಸ್ವಗೃಹೇ ರೋಪಿ ತಾ ಚ್ಚೈವ ತುಲಸೀ ಪಾಪನಾಶಿನೀ ।**
**ದರ್ಶನಾತ್ ಬ್ರಹ್ಮಹತ್ಯಾಪಿ ನಶ್ಯತೇ ನಾತ್ರ ಸಂಶಯಃ ॥**

ತುಲಸೀ ಗಿಡವನ್ನು ಮನೆಯಲ್ಲಿ ಹಚ್ಚಿ ಬೆಳಸಬೇಕು. ತುಳಸಿಯ ದರ್ಶನ ಮಾತ್ರ ದಿಂದಲೇ ಬ್ರಹ್ಮಹತ್ಯಾದಿ ಪಾಪಗಳು ನಾಶಹೊಂದುವವು. ಇದರಲ್ಲಿ ಸಂದೇಹವೇ ಇಲ್ಲ.

**ಕಾರ್ತಿಕೇಚ್ಚೈವ ಮಾಘೇಚ ತುಲಸ್ಯಾ ಪೂಜಯೇದ್ ಹರಿಂ ।**
**ವೈಶಾಖೇತು ವಿಶೇಷೇಣ ಪೂಜನಂಚ ಹರೇಸ್ಮೃತಂ ॥**

ಕಾರ್ತೀಕ ಮತ್ತು ಮಾಘ ಮಾಸಗಳಲ್ಲಿ ಶ್ರೀಹರಿಯನ್ನು ತುಳಸಿಯಿಂದ ಪೂಜೆ ಮಾಡಬೇಕು. ಅದರಲ್ಲಿಯೂ ವೈಶಾಖದಲ್ಲಿ ತುಳಸಿಯಿಂದ ಶ್ರೀಹರಿಯ ಪೂಜೆಯನ್ನು ಮಾಡಿದರೆ ಅತ್ಯಧಿಕ ಫಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಿವಸೇನೆ ದೈತ್ಯಸೇನೆಯರ ಯುದ್ಧ ಎಂಬ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

# ಶ್ರೀಶೈಲ ಮಾಹಾತ್ಮ್ಯ ವರ್ಣನ

## ಅಧ್ಯಾಯ - ೨೦

**ಧರ್ಮರಾಜ:-** ರಮಣೀಯವಾದ ಶ್ರೀಶೈಲ ಪರ್ವತವು ಎಲ್ಲಿ ಇರುತ್ತದೆ? ಅಲ್ಲಿ ಇರುವ ತೀರ್ಥವು ಯಾವುದು? ಅಲ್ಲಿ ಯಾವ ದೇವರ ಪೂಜೆ ನಡೆಯುವದು? ಯಾವ ದಿಕ್ಕಿನಲ್ಲಿ ಇದೆ ಆ ಪವಿತ್ರವಾದ ಬೆಟ್ಟ? ಇದೆಲ್ಲವನ್ನು ನಾರದ ಮಹರ್ಷಿಗಳೇ, ನಮಗೆ ಹೇಳಿರಿ.

**ನಾರದ:-** ಧರ್ಮರಾಜ, ಶ್ರೀಶೈಲವು ಗಿರಿರಾಜ. ಎಲ್ಲ ಪರ್ವತಗಳಲ್ಲಿ ಶ್ರೇಷ್ಠ. ಅದರ ಮಹಿಮೆಯನ್ನು ಕೇಳಿದರೆ ಹಸುಗೂಸುಗಳನ್ನು ಕೊಂದ ಪಾಪ ಪರಿಹಾರವಾಗುವದು. ಪರಮ ರಮ್ಯ ಈ ಶ್ರೀಶೈಲ ಬೆಟ್ಟ. ಅಲ್ಲಿ ಅನೇಕ ಮುನಿಗಳು ಎಲೆಮನೆಗಳನ್ನು ಕಟ್ಟಿಕೊಂಡು ತಪಸ್ಸಿನಲ್ಲಿ ತೊಡಗಿರುವರು. ಬಗೆಬಗೆಯ ಬಳ್ಳಿಗಳು, ತರತರಹದ ಮರಗಳು, ಎಲ್ಲ ಜಾತಿಯ ಹೂವು, ಹಣ್ಣು ಕಾಯಿಗಳು ಪವಿತ್ರವಾದ ಆ ಪರ್ವತ ರಮ್ಯಾಭಿಗಮ್ಯವಾಗುವಂತೆ ಮಾಡಿವೆ. ಅಲ್ಲಿ ಇರುವ ಮಂಜು ಲತಾಕುಂಜಗಳ ಮೇಲೆ ಅರಳಿದ ಸುಗಂಧಿ ಪುಷ್ಪರಾಶಿಗಳ ಬಂಡನ್ನು ಉಂಡು ದುಂಬಿಗಳ ಹಿಂಡು ಮಧುಮದಮುದಿತವಾಗಿ ಗೀತಗುಂಜಾರವವನ್ನು ಮಾಡುತ್ತಲಿರುತ್ತವೆ. ಅಲ್ಲಿಯ ವನಲತೆಗಳ ಮೇಲೆ ಕುಳಿತು ಕುಕಿಲುವ ಕೋಕಿಲೆಗಳ ಕಲ ಕಾಕಲಿಯಿಂದಲೂ, ಹಾಗೂ ಅಲ್ಲಿಯ ಬಳ್ಳಿವಾಡಗಳಲ್ಲಿ ಹೆಪ್ಪುಗಟ್ಟಿದ ಘನಾಂಧಕಾರವನ್ನು ಮೋಡ ಪಡೆಯೆಂದು ತಿಳಿದು ಹರ್ಷದಿಂದ ಗರಿಗೆದರಿ ಕುಣಿಯುವ ನವಿಲುಗಳ ಮಧುರ ಧ್ವನಿಯಿಂದಲೂ ಹಾಗೂ ಅಲ್ಲಿಯ ನಿಬಿಡ ವನಾಂತರದ ಹೆಮ್ಮರಗಳ ರೆಂಬೆ ಕೊಂಬೆಗಳಲ್ಲಿ ಕುಳಿತು ಕಲಕಲ ನಾದಗೈಯುವ ಹಕ್ಕಿಗಳ ಇಂಚರಸ್ವರದಿಂದಲೂ ಅಲ್ಲಿಯ ಅರಣ್ಯಕ ಆಶ್ರಮದಲ್ಲಿ ವೇದ ಮಂತ್ರಗಳನ್ನು ಪಠಿಸುತ್ತಲಿರುವ ವೈದಿಕ ವಟುಗಳ ಮಂತ್ರಘೋಷಗಳಿಂದಲೂ ಆ ಇಡೀ ಶ್ರೀಶೈಲ ಕಾನನವು ಧ್ವನ್ಯಾತ್ಮಕವಾಗಿ ಕಂಡುಬರುತ್ತಿದೆ. ಶ್ರೀವೃಕ್ಷ, ಕಪಿತ್ಥ, ಶ್ರೀಶ, ಪಾರಿಜಾತ, ಕಡಹ, ಔದುಂಬರ, ಮಲ್ಲಿಗೆ, ಮಂದಾರ, ಮಾಲತಿ, ಮಾಧವಿ, ಮಾಮರ ಮುಂತಾದ ಸುಗಂಧಿ ಪುಷ್ಪಗಳ ಪರಿಮಳವನ್ನು ಅಲ್ಲಿ ಮಂದಮಂದವಾಗಿ ಬೀಸುವ ತಂಗಾಳಿಯು ಎಲ್ಲೆಡೆಗೂ ಹಂಚುತ್ತಲಿರುವದು. ಆ ಪುಣ್ಯ ಪರ್ವತದಲ್ಲಿ ಒಂದು ಕಡೆ ಋಷಿಗಳ ಆಶ್ರಮದಲ್ಲಿ ಹಲವರು ವೇದಾಂತ ವ್ಯಾಖ್ಯಾನದಲ್ಲಿ ತತ್ಪರರು, ಕೆಲವರು ತಮ್ಮ ಕಾಲಿನ ಹೆಬ್ಬೆರಳುಗಳಿಂದ ನೆಲವನ್ನು ಮೆಟ್ಟಿ ಎರಡೂ ತೋಳುಗಳನ್ನು ಮೇಲೆತ್ತಿ ಉಗ್ರತಪೋನುಷ್ಠಾನದಲ್ಲಿ ನಿರತರು, ಹಲವರು ಶಿವಧ್ಯಾನದಲ್ಲಿ ಆಸಕ್ತರು, ಮತ್ತೆ ಕೆಲವರು ವಿಷ್ಣುಧ್ಯಾನದಲ್ಲಿ ಲೀನರು. ಬರೀ ಎಲೆ ತಿಂದು ತಪಂಗೈಯುವವರು ಎಷ್ಟೋ ಜನ. ಗಡ್ಡೆಗೆಣಸು, ಹಣ್ಣು ಕಾಯಿ ತಿಂದು ತಪಸ್ಸ್ವಾಧ್ಯಾಯ ಮಾಡುವವರು ಹಲವರು. ಏನನ್ನೂ ತಿನ್ನದೇ ನೀರನ್ನು ಕೂಡ ಕುಡಿಯದೇ ಕೇವಲ ನಿರಾಹಾರರಾಗಿ ನಿಂತು ತಪಿಸುವ ಯೋಗಿಗಳಿಗೂ ಅಲ್ಲಿ ಕಡಿಮೆಯಿಲ್ಲ. ಎಷ್ಟೋ ಜನ ಮೌನಿಗಳು. ಕೆಲವರು ಧ್ಯಾನಿಗಳು.

ಈ ಶ್ರೀಶೈಲ ಬನದಲ್ಲಿ ಹರಿಯುವ ತೊರೆಗಳು ಅನೇಕ. ಸುರಿಯುವ ಝರಿಗಳು ಅಸಂಖ್ಯ. ಅಲ್ಲಲ್ಲಿ ಮಡುಗಟ್ಟಿ ನಿಂತ ತಿಳಿನೀರಿನ ಹೊಕ್ಕರಣೆಗಳಿಗಂತೂ ಲೆಕ್ಕವೇ ಇಲ್ಲ. ಈ ಎಲ್ಲ ಜಲಾಶಯಗಳ ಮೇಲೆ ಅನೇಕ ತಪಸ್ವಿಗಳ ಪುಣ್ಯಾಶ್ರಮಗಳು ಪರಮ ಪಾವನವಾಗಿ ಕಂಗೊಳಿಸುತ್ತವೆ.

ಇಂಥ ರಮಣೀಯವಾದ ಶ್ರೀಶೈಲ ಪರ್ವತದಲ್ಲಿಯೇ ಮಲ್ಲಿಕಾರ್ಜುನಸ್ವಾಮಿಯು ಮಂಡಿಸಿದ್ದಾನೆ. ಆ ಮಲ್ಲಿಕಾರ್ಜುನನು ಮಂಡಿಸಿದ ಶ್ರೀಶೈಲದ ಶಿಖರವು ಪರಮ ರಮಣೀಯ. ಆ ಶ್ರೀಶೈಲದ ಶೃಂಗ ದರ್ಶನ ಮಾತ್ರದಿಂದಲೇ ಮುಕ್ತಿ. ದಕ್ಷಿಣ ದಿಕ್ಕಿನಲ್ಲಿರುವ ಎಲ್ಲ ಪರ್ವತಗಳ್ಲಲಿಯೂ ಈ ಶ್ರೀಶೈಲವು ಪರಮಶ್ರೇಷ್ಠ. ಇಲ್ಲಿ ಹರಿಯುವ ಕೃಷ್ಣಾನದಿಗೆ ಪಾತಾಳಗಂಗೆಯೆಂಬ ಹೆಸರು. ಈ ಶ್ರೀಶೈಲ ಗಿರಿಯ ಆಳವಾದ ಕೊಳ್ಳದಲ್ಲಿ ಧುಮ್ಮಿಕ್ಕಿ, ಸಾನು ಕಾನುಕೊರೆದು, ಗಿರಿಶೃಂಗಗಳನ್ನು ಸೀಳಿ, ಪಾತಾಳದ ಆಳಕ್ಕೆ ಇಳಿದ ಆ ಕೃಷ್ಣವೇಣಿಗೆ ಪಾತಾಳಗಂಗಾ ಎಂಬ ಹೆಸರು ಸಾರ್ಥಕವಾಗಿದೆ. ಈ ಪರ್ವತ ಪ್ರಾಂತದಲ್ಲಿ ಶ್ರೀಶೈಲದ ಪಾತಾಳಗಂಗೆಯಲ್ಲಿ ಸ್ನಾನಮಾತ್ರದಿಂದಲೇ ಮಾನವರ ಮೈಮನಗಳಿಗೆ ತಗಲಿದ ಪಾಪಗಳೆಲ್ಲವೂ ತೊಳೆದು ಹೋಗುವವು.

**ಶ್ರೀಶೈಲ ಶಿಖರಂ ದೃಷ್ಟ್ವಾ ವಾರಾಣಸ್ಯಾಂ ಮೃತೌ ಧ್ರುವಂ ।**
**ಕೇದಾರೇಹ್ಯುದಕಂ ಪೀತ್ವಾ ಪುನರ್ಜನ್ಮ ನವಿದ್ಯತೇ ॥**

ಶ್ರೀಶೈಲ ಶಿಖರದ ದರ್ಶನ ಕಾಶಿಯಲ್ಲಿ ಮರಣ, ಕೇದಾರದಲ್ಲಿ ತೀರ್ಥ ಜಲಪಾನ ಈ ಮೂವರಿಂದ ಮುಕ್ತಿ ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಇಲ್ಲಿ ಇರುವ ಸಿದ್ಧಪುರವು ಸ್ವರ್ಗಸೌಖ್ಯಪ್ರದ. ಅನುದಿನವೂ ಈ ಪುಣ್ಯಸ್ಥಲಿಗೆ ಅಪ್ಸರೆಯರ ಆಗಮನ ವಿಹಾರ. ಇದೊಂದು ಪರ್ವತ ಶ್ರೇಣಿಗಳ ಅಧಿರಾಜನಾದ ಬೃಹದ್‌ಬೆಟ್ಟ. ಇದರ ದರ್ಶನದಿಂದ ಪಾಪಪರಿಹಾರ, ಪುಣ್ಯಪ್ರಾಪ್ತಿ, ಆನಂದ ಅನುಭೂತಿ, ಮುಕ್ತಿಯನ್ನು ಬಯಸುವವರು ಇದರ ದರ್ಶನ ಮಾಡಿಕೊಳ್ಳಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶ್ರೀಶೈಲ ಮಾಹಾತ್ಮ್ಯ ವರ್ಣನ ಎಂಬ ಇಪ್ಪತ್ತನೇಯ ಅಧ್ಯಾಯ ಮುಗಿದುದು*

—o—

## ಹರಿದ್ವಾರ ಮಾಹಾತ್ಮ್ಯ — ಅಧ್ಯಾಯ - ೨೧

**ಮಹಾದೇವ :-** ದೇವರ್ಷಿಯೇ, ಪರಮ ಪುಣ್ಯಕರವಾದ ಹರಿದ್ವಾರದ ಮಹಾತ್ಮೆಯನ್ನು ಕೇಳು. ಈ ಪುಣ್ಯಕ್ಷೇತ್ರದ ಅಂಗಳವನ್ನು ಭೂಲೋಕದ ಮಂಗಳ ತರಂಗಿನಿ ಎನಿಸಿದ ಗಂಗೆಯು ತನ್ನ ತರಂಗಗಳಿಂದ ನಿತ್ಯವೂ ತೊಳೆದು ತೀರ್ಥವಾಗಿದ್ದಾಳೆ. ಆದುದರಿಂದಲೇ ದೇವದೇವೋತ್ತಮನಾದ ಕೇಶವನು ಇಲ್ಲಿ ನಿರಂತರ ನೆಲೆಸಿದ್ದಾನೆ. ಆದುದರಿಂದಲೇ ಎಲ್ಲ ದೇವತೆಗಳು, ಋಷಿಗಳು, ಮನುಗಳು ಈ ಪುಣ್ಯಕ್ಷೇತ್ರದ ಪರಿಸರದಲ್ಲಿ ಸದಾಕಾಲವೂ ಸನ್ನಿಹಿತರಾಗಿದ್ದಾರೆ. ಇಲ್ಲಿ ಹರಿಯುವ ಗಂಗೆಯು ಶ್ರೀಹರಿಯ ಚರಣಕಮಲಗಳನ್ನು ತೊಳೆದು, ವಿಷ್ಣುಪಾದೋದಕ ಎನಿಸಿದ್ದಾಳೆ. ಈ ಗಂಗೆಯನ್ನು ಹಿಂದೆ ಭಗೀರಥ ಮಹಾರಾಜ ತನ್ನ ಪೂರ್ವಜರ ಉದ್ಧಾರಕ್ಕಾಗಿ ದೇವಲೋಕದಿಂದ ಭೂಲೋಕಕ್ಕೆ ಈ ಹರಿದ್ವಾರದ ಮುಖಾಂತರವಾಗಿಯೇ ಕರೆತಂದ. ಆ ದೇವನದಿಯು ಭೂಲೋಕ ಪ್ರವೇಶಿಸಿದ ಹೆಬ್ಬಾಗಿಲವೇ ಈ ಹರಿದ್ವಾರ ಕ್ಷೇತ್ರ.

**ನಾರದ:-** ಮಹಾದೇವ, ಆ ಭಗೀರಥ ಯಾರು? ಅವನು ಮಾಡಿದ ತಪಸ್ಸು ಎಂಥದು? ಸರ್ವತೀರ್ಥಗಳಲ್ಲಿಯೂ ಆ ಗಂಗೆಯು ಉತ್ತಮೋತ್ತಮ ಎಂದು ಎಲ್ಲರೂ ಹೇಳುವದನ್ನು ನಾನು ಕೇಳಿದ್ದೇನೆ.

**"ಗಂಗಾ ಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವ ಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ ॥**

ಗಂಗೆಯಿಂದ ಸಾವಿರಾರು ಮೈಲು ದೂರ ಇದ್ದವರು ಕೂಡ ಗಂಗಾ ಗಂಗಾ ಎಂಬ ಎರಡು ಅಕ್ಷರಗಳನ್ನು ಉಚ್ಚಾರ ಮಾಡಿದರೆ ಸಾಕು. ಎಲ್ಲ ಪಾಪಗಳಿಂದ ಮುಕ್ತರಾಗುವರು. ಮತ್ತು ವಿಷ್ಣುಲೋಕಕ್ಕೆ ಹೋಗುವರು. ಇಂಥ ಪರಮ ಪಾವನ ಪಯಸ್ವಿನಿಯಾದ ಗಂಗೆಯನ್ನು ಈ ಹರಿದ್ವಾರದ ಹೆಬ್ಬಾಗಿಲಿನಿಂದ ಭಾರತ ಭೂಖಂಡಕ್ಕೆ ರಾಜರ್ಷಿ ಭಗೀರಥನು ಹೇಗೆ ಕರೆದು ತಂದ ಎಂಬುದನ್ನು ನನಗೆ ನಿರೂಪಿಸಿರಿ.

**ಮಹಾದೇವ:-** ನಾರದ, ಆ ದೇವನದಿ ಈ ಮರ್ತ್ಯಲೋಕಕ್ಕೆ ಇಳಿದು ಬಂದ ಬಗೆಯನ್ನು ಹೇಳುತ್ತೇನೆ ಕೇಳು. ಪೂರ್ವ ಕಾಲದಲ್ಲಿ ಹರಿಶ್ಚಂದ್ರ ಎಂಬ ಹೆಸರಿನ ಪುಣ್ಯ ಪ್ರತಾಪಿಯಾದ ರಾಜರ್ಷಿ ಇದ್ದ. ಮೂರು ಲೋಕದಲ್ಲಿಯೇ ಸತ್ಯಪಾಲಕ ಎಂದು ಅವನ ಪ್ರಸಿದ್ಧಿ. ಅಂದಿಗೂ ಇಂದಿಗೂ ಎಂದೆಂದಿಗೂ ಆ ರಾಜನ ಸತ್ಯಸಂಧತೆಯ ಕೀರ್ತಿ ಕಂದಿಲ್ಲ. ಕುಂದಿಲ್ಲ. ಮುಂದೆ ಕುಂದುವದೂ ಇಲ್ಲ. ಅವನ ಪುತ್ರನೇ ರೋಹಿತ. ಪರಮ ವಿಷ್ಣು ಭಕ್ತ. ರೋಹಿತನ ಮಗ ವೃಕ. ಅವನೂ ಕೂಡ ತಂದೆ ತಾತರಂತೆಯೇ ಧರ್ಮಿಷ್ಠ ಮತ್ತು ಸತ್ಯನಿಷ್ಠ. ಅವನ ಮಗ ಸುಬಾಹು. ಸುಬಾಹುವಿನ ಮಗ ಗರ. ಅವನು ಮಾತ್ರ ತನ್ನ ಹಿರಿಯರಂತೆ ಧಾರ್ಮಿಕನಾಗಿರಲಿಲ್ಲ. ಆದುದರಿಂದ ಅವನಿಗೆ ಕಾಲಯೋಗದಿಂದ ಕಡುಕಷ್ಟ ಒದಗಿಬಂದಿತು. ಅವನ ರಾಜ್ಯವನ್ನು ವೈರಿಗಳು ಆಕ್ರಮಿಸಿದರು ಅವನ ಈ ರಾಜ್ಯ ಭ್ರಂಶಕ್ಕೆ ಅಧರ್ಮಾನುಷ್ಠಾನವೇ ಕಾರಣ. ರಾಜ್ಯ, ಅಧಿಕಾರ ಎಲ್ಲವನ್ನೂ ಕಳೆದುಕೊಂಡು ಅಡವೀಪಾಲಾದ ಆ ಅರಸ ತನ್ನ ಕುಟುಂಬವನ್ನು ಕಟ್ಟಿಕೊಂಡು ಭಾರ್ಗವ ಮುನಿಯ ಆಶ್ರಮಕ್ಕೆ ಬಂದ. ಅಧಿಕಾರಭ್ರಷ್ಟನಾಗಿ ಕಾಡುಪಾಲಾಗಿ ಕಡುಕಷ್ಟಪಡುತ್ತಲಿರುವ ಆ ಪೊಡವಿಯೊಡೆಯನನ್ನು ಕರುಣೆಯಿಂದ ಕಾಪಾಡಿದ ಭಾರ್ಗವ ಮುನಿ. ಆ ಗರ ರಾಜನಿಗೆ ಆ ಋಷ್ಯಾಶ್ರಮದಲ್ಲಿ ಒಬ್ಬ ಮಗ ಹುಟ್ಟಿದ. ಅವನ ಹೆಸರು ಸಗರ. ಆ ಋಷಿಕುಲದಲ್ಲಿಯೇ ಬೆಳೆದ ರಾಜಕುಮಾರ ಸಗರ. ಭಾರ್ಗವ ಮುನಿಗಳಿಂದಲೇ ಅವನಿಗೆ ಉಪನಯನ ಸಂಸ್ಕಾರ. ಶಸ್ತ್ರ ಶಾಸ್ತ್ರಾದಿ ವಿದ್ಯೆಗಳಲ್ಲಿ ಶಿಕ್ಷಣ. ವೇದಶಾಸ್ತ್ರಗಳು ಹಾಗೂ ಎಲ್ಲ ಶಸ್ತ್ರಾಸ್ತ್ರಗಳು ಅವನಿಗೆ ಮುನಿಗಳ ಅನುಗ್ರಹದಿಂದ ಸ್ವಾಧೀನ. ಅದರಲ್ಲಿಯೂ ಭಾರ್ಗವರು ಅಗ್ನೇಯಾಸ್ತ್ರವನ್ನು ವಿಶೇಷಾನುಗ್ರಹಪೂರ್ವಕವಾಗಿ ಕರುಣಿಸಿದರು ಆ ರಾಜಕುಮಾರನಿಗೆ. ಆ ಅಮೋಘವಾದ ಅಗ್ನೇಯಾಸ್ತ್ರವನ್ನು ಪಡೆದು ಸಗರ ರಾಜಕುಮಾರನು ತನ್ನ ತಂದೆಯ ರಾಜ್ಯವನ್ನು ಕಸಿದುಕೊಂಡ ಹೈಹಯ, ತಾಲಜಂಘ ಮುಂತಾದವರನ್ನೆಲ್ಲ ಹೊಡೆದು ಹಾಕಿದ. ಶಕರನ್ನೂ ಪಾರವರನ್ನೂ ಮುರಿದು ಮೂಲೆಗೊತ್ತಿದ.

**ನಾರದ:-** ಮಹಾದೇವ, ಈ ಸಗರನ ವೀರ ವಿಕ್ರಮಗಳನ್ನೂ ಶೂರ ಕೃತ್ಯಗಳನ್ನೂ ವಿಸ್ತಾರವಾಗಿ ನಿರೂಪಿಸಿರಿ. ಸೂರ್ಯವಂಶದಲ್ಲಿ ಪರಮ ಪ್ರಖ್ಯಾತ ಈ ಸಗರರಾಜ.

**ಶಂಕರ:-** ಹಿಂದೆ ಗರ ರಾಜನು ವ್ಯಸನಾಕ್ರಾಂತನಾದಾಗ ಐದು ರಾಜರ ಗುಂಪುಗಳು ಒಗ್ಗೂಡಿ, ಗರ ರಾಜನ ಅಸಂಘಟಿತವಾದ ಪ್ರಚಂಡ ಸೇನೆಯ ಕಗ್ಗೊಲೆ ಮಾಡಿ ಆ ರಾಜನನ್ನು ಹೊರಗೆ ಹಾಕಿದ್ದರು. ಹೈಹಯ, ಯವನ, ಪಾರವ, ಕಾಂಭೋಜ, ಪಲ್ಲವ ಈ ಐದು ರಾಜರೂ ಶಕ ಮತ್ತು ತಾಲಜಂಘ ಎಂಬ ವೀರಸೈನಿಕರೊಡನೆ ಕೂಡಿ ಗರ ರಾಜನ ರಾಜ್ಯವನ್ನು

ಅಪಹರಿಸಿ ಅವನನ್ನು ದೇಶಬಿಟ್ಟು ಓಡಿಹೋಗುವಂತೆ ಮಾಡಿದರು. ತನ್ನ ಹೆಂಡದಿರೊಡನೆ ಅರಣ್ಯಕ್ಕೆ ಬಂದ ಆ ಗರರಾಜನು ತನಗೆ ಆದ ಸೋಲಿನ ಅಪಮಾನದಿಂದ ಬೆಂದು ಅದೇ ಚಿಂತೆಯಲ್ಲಿ ನವೆದು ನವೆದು ಸತ್ತುಹೋದ. ಅವನ ಪಟ್ಟಮಹಿಷಿಯು ಪರಮ ಪತಿವ್ರತೆ. ಗರ ರಾಜ ಮರಣಿಸಿದಾಗ ಅವಳು ತುಂಬು ಗರ್ಭಿಣಿ. ಆದರೂ ಅವಳು ಪತಿಯ ಮರಣ ದುಃಖವನ್ನು ತಾಳಲಾರದೇ ಸಹಗಮನಕ್ಕೆ ಸಿದ್ಧಳಾದಳು. ಚಿತೆಯನ್ನು ಏರಿದಳು. ಪತಿಯ ಶವವನ್ನು ತೊಡೆಯ ಮೇಲೆ ಇಟ್ಟುಕೊಂಡು ಆ ಚಿತೆಗೆ ಕೊಳ್ಳಿಇಡಲು ಹೇಳಿದಳು.

ಆದರೆ ಅಷ್ಟರಲ್ಲಿ ಔರ್ವ ಮುನಿಗಳು ಅಲ್ಲಿಗೆ ಬಂದರು. ''ಗರ್ಭಿಣಿ ಸ್ತ್ರೀಯರು ಸಹಗಮನ ಮಾಡುವದು ನಿಷಿದ್ಧ'' ಎಂದು ಹೇಳಿ ಅವಳ ಅಗ್ನಿಪ್ರವೇಶವನ್ನು ತಡೆದರು. - ''ನಿನ್ನ ಹೊಟ್ಟೆಯಲ್ಲಿ ಮಹಾಪರಾಕ್ರಮಿಯಾದ ಶ್ರೇಷ್ಠ ಸತ್ಪುತ್ರ ಜನಿಸಿ ನಿಮ್ಮ ರಾಜ್ಯಾಪಹಾರಿಗಳನ್ನೆಲ್ಲ ಸದೆಬಡಿದು ಸಾರ್ವಭೌಮ ಸಿಂಹಾಸನವನ್ನು ಏರಿ ಏಕಚಕ್ರಾಧಿಪತಿಯಾಗಿ ಅಖಂಡ ಭೂಮಂಡಲವನ್ನೆಲ್ಲ ಆಳುವನು. ಇಂಥ ಮಗ ನಿನ್ನ ಹೊಟ್ಟೆಯಲ್ಲಿ ಈಗ ಇರುತ್ತಾನೆ. ಈಗ ನೀನು ಸಹಗಮನ ಮಾಡಿದರೆ ನಿನಗೆ ಬಾಲಹತ್ಯಾದೋಷ ಬರುವದು. ಹಾಗೂ ನಿಮ್ಮ ವಂಶದ ಕುಡಿಯನ್ನು ನೀನೇ ಚಿವುಟಿ ಒಗೆದಂತಾಗುವದು. ಆದುದರಿಂದ ಕೂಡಲೇ ಆ ಚಿತೆಯನ್ನು ಬಿಟ್ಟು ಇಳಿದು ಬಾ.''

ಔರ್ವಮುನಿಯ ಈ ಮಾತನ್ನು ಕೇಳಿ ಗರರಾಜನ ಪತ್ನಿಯು ಚಿತೆಯಿಂದ ಕೆಳಗಿಳಿದು ಬಂದಳು. ಮರಣದ ಆಶೆಯನ್ನು ತೊರೆದಳು. ಅವಳಿಗೆ ಕೆಲವೇ ದಿನಗಳಲ್ಲಿ ಸರ್ವಲಕ್ಷಣ ಸಂಪನ್ನನಾದ ಒಂದು ಗಂಡುಮಗು ಜನಿಸಿತು. ಹಡೆದು ಎರಡು ತಿಂಗಳಾದ ಬಳಿಕ ಆ ರಾಜಮಹಷಿಯು ತನ್ನ ಎಳೆ ಕಂದಮ್ಮನನ್ನು ಔರ್ವಮುನಿಯ ಆಶ್ರಮಕ್ಕೆ ಹೋಗಿ ಅವರಿಗೆ ಒಪ್ಪಿಸಿದಳು. ಕ್ಷತ್ರಿಯೋಚಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನು ಆ ಮಗುವಿಗೆ ಔರ್ವ ಮುನಿಗಳೇ ನೆರವೇರಿಸಿದರು. ಸಕಾಲದಲ್ಲಿ ಆ ಹುಡುಗನಿಗೆ ಉಪನಯನವನ್ನು ಮಾಡಿ, ಆ ಮಗುವಿಗೆ ವೇದಶಾಸ್ತ್ರಗಳನ್ನೆಲ್ಲ ಕಲಿಸಿದರು. ಮನೀಷಿಮಾನನೀಯರಾದ ಆ ಮಹಾಮುನಿಗಳು. ಕೆಲವೇ ದಿನಗಳಲ್ಲಿ ಆ ರಾಜಕುಮಾರ ವೇದಶಾಸ್ತ್ರಗಳಲ್ಲಿ ಪರಿಣತಪ್ರಜ್ಞನಾದ. ಶಸ್ತ್ರಾಸ್ತ್ರ ವಿದ್ಯೆಯಲ್ಲಿಯೂ ಔರ್ವರು ಆ ರಾಜಕುಮಾರನಿಗೆ ಸರಿಯಾದ ಶಿಕ್ಷಣಕೊಟ್ಟು ಪಳಗಿಸಿ ಪ್ರವೀಣನನ್ನಾಗಿ ಮಾಡಿದರು. ಅವನು ಯೌವನದಲ್ಲಿ ಕಾಲಿರಿಸಿದಾಗ ಔರ್ವರ ಶಸ್ತ್ರೋಪದೇಶ ಪ್ರಭಾವದಿಂದ ಮಹಾಬಲಿಷ್ಠನಾದ ಜಗಜಗಟ್ಟಿಯಾಗಿ ರೂಪುಗೊಂಡಿದ್ದ. ಕೊನೆಗೆ ಆ ರಾಜಕುಮಾರನಿಗೆ ಔರ್ವರು ದೇವತೆಗಳಿಗೂ ತಾಳಲಿಕ್ಕಾಗದ ಅಗ್ನೇಯಾಸ್ತ್ರವನ್ನು ಉಪದೇಶಿಸಿದರು. ಆ ಅಸ್ತ್ರದ ಬಲದಿಂದ ಆ ಅರಸುಕುಮಾರ ತಮ್ಮ ರಾಜಕುಲಕ್ಕೆ ನಿಷ್ಠರಾದ ಪ್ರಚಂಡ ಸೈನಿಕರ ದಂಡೊಂದನ್ನು ಸಜ್ಜುಗೊಳಿಸಿ ಕೊಂಡು ವೈರಿಗಳ ಮೇಲೆ ದಂಡಯಾತ್ರೆಗೆ ಹೊರಟ ಹೈಹಯರ ಅಂಕಿತಕ್ಕೆ ಒಳಪಟ್ಟ ರಾಜ್ಯದ ಗಡಿಯಲ್ಲಿ ಹೊಕ್ಕು ಅವರನ್ನೆಲ್ಲ ಹೊಡೆದು ಹತಪತಿತರನ್ನಾಗಿ ಮಾಡಿದ. ಅದರಂತೆ ಶಕರನ್ನು ಸಂಹರಿಸಿದ ಯಮನರನ್ನು ಮುರಿದು ಮೂಲೆಗೊತ್ತಿದ. ಕಾಂಭೋಜರನ್ನು ಕದನದಲ್ಲಿ ಕಡಿದು ಕೊಚ್ಚಿಹಾಕಿದ. ಪಲ್ಲವರು ಪರಾಜಿತರಾಗಿ ಪಲಾಯನಗೈದರು.

ಹೀಗೆ ಸಗರ ಕುಮಾರನಿಂದ ಹಣಾಹಣಿ ಹೋರಾಡಿ ಹೈರಾಣದ ಅಳಿದುಳಿದ ವೈರಿರಾಜರೆಲ್ಲರೂ ವಶಿಷ್ಠರಿಗೆ ಶರಣುಹೋದರು. ಆಗ ವಶಿಷ್ಠರು ಆ ರಾಜರಿಗೆಲ್ಲ

ಜೀವದಾನ ಮಾಡಿ ಅಭಯ ಆಶ್ವಾಸನೆ ನೀಡಿ ಸಗರನಿಂದ ಬಿಡುಗಡೆ ಮಾಡಿಸಿದರು. ಸಗರನು ಗುರುಗಳ ಮಾತಿಗೆ ಬೆಲೆಕೊಟ್ಟು ಆ ಶತ್ರುಸಂಹಾರ ಸತ್ರದಿಂದ ನಿವೃತ್ತನಾದ. ಆದರೂ ಅವರೆಲ್ಲರನ್ನೂ ಧರ್ಮಭ್ರಷ್ಟರನ್ನಾಗಿ ಮಾಡಿ. ವಿಕಾರಗೊಳಿಸಿ, ಆಕಾರ, ಹಾಗೂ ಕೇಶವಿನ್ಯಾಸಗಳ ಪ್ರಕಾರದ ನಿರ್ಬಂಧವನ್ನು ಹಾಕಿದ. ಶಕರಿಗೆಲ್ಲ ಅರ್ಧ ತಲೆಯನ್ನು ಬೋಳಿಸಬೇಕು. ಪಾರವದರು ತಲೆಯನ್ನು ಕತ್ತರಿಸಬೇಕು. ಪಲ್ಲವರ ಮೀಸೆ ಬೋಳಿಸಬಾರದು. ಹೀಗೆ ನಿರ್ಬಂಧವನ್ನು ವಿಧಿಸಿ ಅವರನ್ನು ಕೊಲ್ಲದೇ ಬಿಟ್ಟ.

ಹೀಗೆ ಸಗರರಾಜನು ವೈರಿಗಳ ಮೇಲೆ ಧರ್ಮವಿಜಯವನ್ನು ಸಾಧಿಸಿ ಎಲ್ಲ ವೈರಿಗಳನ್ನು ಗೆದ್ದು. ಏಕಛತ್ರಾಧಿಪತಿಯಾಗಿ ಸರ್ವ ಉರ್ವೀತಳದ ಸಮ್ರಾಟ ಸಾರ್ವಭೌಮ ಸಿಂಹಾಸನದಲ್ಲಿ ಆಸೀನನಾದ.

ಹೀಗೆ ಸಮಗ್ರ ವಸುಂಧರೆಯನ್ನು ಗೆದ್ದು ಅಶ್ವಮೇಧಯಾಗವನ್ನು ಮಾಡಬೇಕೆಂದು ನಿರ್ಧರಿಸಿದ. ಯಾಗದ ಕುದುರೆಗೆ ಎಲ್ಲ ವಿಧ ಸಂಸ್ಕಾರವನ್ನು ಮಾಡಿಸಿ ಅದನ್ನು ದಿಗ್ವಿಜಯಾರ್ಥವಾಗಿ ಭೂಪ್ರದಕ್ಷಿಣೆಗೆ ಹೊರಡಿಸಿದ. ಅದನ್ನು ರಕ್ಷಣೆಮಾಡಲು ಸಗರಕುಮಾರರು ಜಾಗರೂಕರಾಗಿದ್ದರೂ ಆ ಅಶ್ವಮೇಧ ಕುದುರೆಯು ಅಪಹರಿಸಲ್ಪಟ್ಟಿತು. ಆ ಕುದುರೆಯನ್ನು ಹುಡುಕಲು ಸಗರಪುತ್ರರೆಲ್ಲರೂ ಭೂಮಿಯನ್ನು ಅಗಿದು ಬಗಿದು ನೋಡಿದರು. ಎಲ್ಲಿಯೂ ಅವರಿಗೆ ತಮ್ಮ ಕಳೆದ ಕುದುರೆ ದೊರಕಲಿಲ್ಲ. ಅರವತ್ತು ಸಾವಿರ ಸಗರಕುಮಾರರು ಪೂರ್ವದಕ್ಷಿಣ ದಿಕ್ಕುಗಳಲ್ಲಿ ಅಗೆದು ಬೃಹತ್ ಪ್ರಮಾಣದ ಒಂದು ದೊಡ್ಡ ತೆಗ್ಗನ್ನು ಆಳ ಅಳಕ್ಕೆ ಅಗೆಯುತ್ತ ಪಾತಾಳದವರೆಗೂ ಇಳಿದರು. ಅಲ್ಲಿ ಒಬ್ಬ ಮಹಾಪುರುಷ ಕುಳಿತುಕೊಂಡಿದ್ದ. ಅವನೇ ತಮ್ಮ ಕುದುರೆಯ ಕಳ್ಳ ಎಂದು ಅವನನ್ನು ಧಿಕ್ಕರಿಸಿ ನುಡಿದರು. ಅವನು ಸಾಮಾನ್ಯ ಮನುಷ್ಯನಲ್ಲ. ಕಪಿಲರೂಪಿಯಾದ ಜಗದೀಶ್ವರ. ಕೋಪದಿಂದ ಕೆರಳಿ ತನ್ನ ಸುಡುಗಣ್ಣಿನಿಂದ ನೋಡಿದಾಗ ಅವನ ಕಣ್ಣಿನ ಕಿಡಿ ಕಿಚ್ಚಾಗಿ ಸಿಡಿಲಾಗಿ ಸಿಡಿದು ಅರವತ್ತು ಸಾವಿರ ಸಗರಕುಮಾರರನ್ನೆಲ್ಲ ಸುಟ್ಟುಹಾಕಿತು. ತುಸು ದೂರದಲ್ಲಿ ನಿಂತುಕೊಂಡ ನಾಲ್ವರು ಮಾತ್ರ ಬದುಕಿ ಉಳಿದರು. ಕಪಿಲನ ನೇತ್ರಾಗ್ನಿಯ ಸ್ಫುಲಿಂಗಗಳ ದಳ್ಳುರಿಯ ಕೆನ್ನಾಲಿಗೆಯ ಝಳದಿಂದ ಹುರಪಳಿಸಿ ಹೋಗದ ಹೃಷಿಕೇತು, ಸುಕೇತು, ಧರ್ಮರಥ, ಪಂಚಜನ ಎಂಬ ನಾಲ್ಕು ಜನ ಸಗರನ ಮಕ್ಕಳು ಮಾತ್ರ ಅವರ ವಂಶದ ವೃದ್ಧಿಯನ್ನು ಮಾಡಲು ಉಳಿದರು. ಅವರಿಗೆ ಆ ಪರಮಾತ್ಮನು ಐದು ವರಗಳನ್ನು ನೀಡಿದ. ವಂಶವೃದ್ಧಿ, ಮೋಕ್ಷ, ಒಳ್ಳೇ ಕೀರ್ತಿ, ಸಮುದ್ರ ಮತ್ತು ಸತ್ಪುತ್ರ. ಅವರಲ್ಲಿಯೂ ಪಾಂಚಜನನು ತಮ್ಮ ತಂದೆಯ ಅಶ್ವಮೇಧ ಯಜ್ಞದ ಕುದುರೆಯನ್ನು ಸಮುದ್ರರಾಜನಿಂದ ಪಡೆದ ಸಗರನ ಅನಂತರದಲ್ಲಿ ಭೂಮಂಡಲದ ಸಾಮ್ರಾಜ್ಯ ಸಿಂಹಾಸನದ ಮೇಲೆ ತಾನೇ ಪಟ್ಟಾಭಿಷಿಕ್ತನಾಗಿ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿದ. ವಿಶ್ವವ್ಯಾಪಿನಿಯಾದ ಕೀರ್ತಿಯನ್ನು ಗಳಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಹರಿದ್ವಾರ ಮಾಹಾತ್ಮ್ಯ ಎಂಬ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*

—o—

## ಭೂಮಿಗೆ ಭಾಗೀರಥಿಯ ಆಗಮನ; ಹರಿದ್ವಾರದ ಬಣ್ಣನೆ

**ಅಧ್ಯಾಯ - ೨೨**

**ನಾರದ:-** ಜ್ಞಾನವಿಜ್ಞಾನಗಳ ಅಧಿದೇವತೆಯಾದ ಮಹಾದೇವ, ಸಗರರಾಜನಿಗೆ ಶೂರವೀರರಾದ ಅರವತ್ತು ಸಹಸ್ರ ಮಕ್ಕಳು ಹೇಗೆ ಹುಟ್ಟಿದರು? ಇದನ್ನು ಹೇಳು.

**ಮಹಾದೇವ:-** ಸಗರನಿಗೆ ಇಬ್ಬರು ಸತಿಯರು. ಅವರಿಬ್ಬರೂ ಕಡು ಕಷ್ಟದಿಂದ ಕಠೋರವಾದ ತಪಸ್ಸನ್ನು ಆಚರಿಸಿದರು. ಅದರಿಂದ ಪರಿತುಷ್ಟನಾದ ಔರ್ವಮುನಿ ಅವರಿಗೆ ವರಗಳನ್ನು ನೀಡಿದ. ಒಬ್ಬ ರಾಣಿಯು ಅರವತ್ತುಸಾವಿರ ಮಕ್ಕಳನ್ನು ಬೇಡಿದಳು. ಇನ್ನೊಬ್ಬಳು ವಂಶವನ್ನು ಬೆಳೆಸುವ ಒಬ್ಬನೇ ಮಗನನ್ನು ಕೇಳಿಕೊಂಡಳು. ಔರ್ವಮುನಿಯು ತಥಾಸ್ತು ಎಂದು ಅವರಿಬ್ಬರ ವರಗಳನ್ನು ಪೂರ್ಣಮಾಡಿದ. ಮೊದಲಿನವಳು ಅರವತ್ತು ಸಾವಿರ ಮಕ್ಕಳನ್ನು ಹೆತ್ತಳು. ಆ ಎಲ್ಲ ಗರ್ಭಗಳು ಇನ್ನೂ ಹುಟ್ಟಿದಾಗ ಸರ್ವಾಂಗ ಪರಿಪೂರ್ಣ ಆಗಿರಲಿಲ್ಲ. ಆಗ ಔರ್ವಮುನಿ ಆ ಅರವತ್ತು ಸಾವಿರ ಭ್ರೂಣಗಳನ್ನು ತುಪ್ಪತುಂಬಿದ ಕೊಡಗಳಲ್ಲಿ ಇರಿಸಿ ಬೆಳೆಸಿ ಮಕ್ಕಳಾಗಿ ಹೊರಬರುವಂತೆ ಮಾಡಿದ. ಘೃತಕುಂಭಗಳಿಂದ ಜನಿಸಿದ ಆ ಆರವತ್ತುಸಾವಿರ ರಾಜಕುಮಾರರನ್ನು ಮಹಾರಾಜ ಪ್ರೀತಿಯ ದಾಸಿಯರನ್ನು ನೇಮಿಸಿ ಪೋಷಿಸಿದ. ದಾಸಿಯರೇ ಮಾತೆಯರಾಗಿ ಆ ಎಲ್ಲ ಶಿಶುಗಳಿಗೂ ತಮ್ಮ ಹೊಟ್ಟೆಯ ಹಾಲು ಕುಡಿಸಿ ಬೆಳೆಸಿದರು. ಅವರೆಲ್ಲರೂ ದೊಡ್ಡವರಾದ ಬಳಿಕ ಅಶ್ವಮೇಧದ ಕುದುರೆಯನ್ನು ಕಾಯಲು ಹೋದಾಗ ಸುಟ್ಟು ಬೂದಿಯಾಗಿ ಪಾತಾಳದಲ್ಲಿ ಇರುವ ಕಪಿಲಾಶ್ರಮದಲ್ಲಿ ಬಿದ್ದುಕೊಂಡರು. ಸಗರನ ಇನ್ನೊಬ್ಬ ಮಡದಿಯ ಏಕಮಾತ್ರ ಪುತ್ರನಾದ ಪಂಚಜನನು ಕಪಿಲನ ನೇತ್ರಾಗ್ನಿಯಿಂದ ದಗ್ಧನಾಗದೇ ಉಳಿದು ತನ್ನ ಮೂವರು ಸಹೋದರರೊಂದಿಗೆ ಕಪಿಲ ಮುನಿಯಿಂದ ವರಪಡೆದ. ಕಪಿಲನ ಆಶೀರ್ವಾದದಿಂದ ಸಗರನ ಅನಂತರ ಪಟ್ಟಾಭಿಷಿಕ್ತನಾಗಿ ರಾಜ್ಯವಾಳಿದ. ಪಂಚಜನ ಅನಂತರ ಆ ಸಗರ ರಾಜ್ಯವನ್ನು ಆಳಿದವ ಅಂಶುಮಂತ. ಅವನ ನಂತರ ದೀಲೀಪ ರಾಜ್ಯಶಾಸನ ಗೈದ. ದೀಲೀಪನ ಮಗನಾದ ಭಗೀರಥ ನದಿಗಳಲ್ಲಿಯೇ ಶ್ರೇಷ್ಠವಾದ ಗಂಗೆಯನ್ನು ದೇವಲೋಕದಿಂದ ಕೆಳಗೆ ಕರೆತಂದ. ಆ ಸುರನದಿಯನ್ನು ತನ್ನ ಮಗಳನ್ನಾಗಿ ಮಾಡಿಕೊಂಡು ಅವಳನ್ನು ಸಮುದ್ರರಾಜನಿಗೆ ಕೊಟ್ಟು ಕೃತಾರ್ಥನಾದ.

**ನಾರದ:-** ದೇವಗಂಗೆಯನ್ನು ಭಗೀರಥ ತಂದುದೆಂತು? ಎಂಥ ತಪಸ್ಸನ್ನು ಅವನು ಆಚರಿಸಿದ? ಇದೆಲ್ಲವನ್ನೂ ನನಗೆ ಹೇಳಿರಿ.

**ಮಹಾದೇವ:-** ಆ ಭಗೀರಥ ದೀಲೀಪರಾಜನ ಅನಂತರ ಭೂಮಂಡಲದ ಸಾರ್ವಭೌಮ ಸಿಂಹಾಸನವನ್ನು ಏರಿದ. ತನ್ನ ಹಿಂದಿನ ಹಿರಿಯರಾದ ಅರವತ್ತು ಸಾವಿರ ಸಗರಪುತ್ರರು ಕಪಿಲಮುನಿಯ ಕೋಪಾಗ್ನಿಗೆ ಆಹುತಿಯಾಗಿ ಪಾತಾಳದಲ್ಲಿ ಭಸ್ಮೀಭೂತರಾಗಿ ಬಿದ್ದಿದ್ದಾರೆ ಎಂಬ ಸಮಾಚಾರವನ್ನು ಕೇಳಿ ತುಂಬ ನೊಂದುಕೊಂಡ. ಹೇಗಾದರೂ ಮಾಡಿ ತನ್ನ ಹಿಂದಿನ ಪಿತೃ ಪಿತಾಮಹರನ್ನು ಉದ್ಧರಿಸಬೇಕು ಎಂದು ಸಂಕಲ್ಪಿಸಿದ. ಅದಕ್ಕಾಗಿ ಸಾಮ್ರಾಜ್ಯ, ಸಂಪತ್ತು, ಸರ್ವಸ್ವವನ್ನು ತೊರೆದು ಕಾಡಿಗೆ ನಡೆದ.

ಹಿಮಾಚಲದಲ್ಲಿ ಒಂಟಿಗಾಲ ಮೇಲೆ ನಿಂತು ಘೋರ ತಪಸ್ಸನ್ನು ಆಚರಿಸಿದ. ಬೇಸರವಿಲ್ಲದೇ ಅವನು ತಪಿಸಿಯೇ ತಪಿಸಿದ. ಹತ್ತು ಸಾವಿರ ವರ್ಷ ತಪಿಸಿದ. ಅದರಿಂದ ಸಾಕ್ಷಾತ್ ಜಗದೀಶ್ವರನಾದ ಜನಾರ್ಧನ ಪ್ರಸನ್ನನಾದ ಅವನ ಪಿತೃಗಳನ್ನು ಉದ್ಧರಿಸಲಿಕ್ಕಾಗ ಆ ದೇವಗಂಗೆಯನ್ನು ಕೊಡಮಾಡಿದ. ಪರಮಾತ್ಮನು ಕೊಟ್ಟ ಆ ಗಂಗೆಯು ಆಕಾಶದಿಂದ ವಿಶ್ವೇಶ್ವರನು ನಿಂತುಕೊಂಡ ಕೈಲಾಸಪರ್ವತದ ಬಳಿಯಲ್ಲಿ ಬಂದಳು. ಆಗ ಮಹಾದೇವನು ಆ ಗಂಗೆಯನ್ನು ತನ್ನ ಜಟಾಜೂಟದಲ್ಲಿ ಧರಿಸಿದ. ಗಂಗೆಯ ಅಪರಂಪರಾವಾದ ಆ ಜಲರಾಶಿಯನ್ನೆಲ್ಲ ತನ್ನ ದಟ್ಟವಾದ ನಿಡುಜಡೆಗಳ ಕಟ್ಟಿನಲ್ಲಿ ಅಡಗಿಸಿಕೊಂಡು ಒಂದು ಹನಿಯನ್ನೂ ಹೊರಗೆ ಬಿಡದೇ ಹತ್ತುಸಾವಿರ ವರ್ಷ ಗಂಗಾಧರನಾಗಿ ನಿಂತು ಕೊಂಡ. ಆ ಭಗೀರಥ ಮಹಾದೇವರನ್ನು (ನನ್ನನ್ನು) ಕುರಿತು ಮತ್ತೆ ಉಗ್ರತಪಸ್ಸನ್ನು ಆಚರಿಸಿದ. ಆಗ ನಾನು ಅವನ ಮೇಲೆ ಪ್ರಸನ್ನನಾಗಿ ನನ್ನ ಒಂದು ಕೂದಲವನ್ನು ಸಡಿಲಿಸಿ ಆ ಗಂಗೆಯನ್ನು ಹೊರಗೆ ಬಿಟ್ಟೆ. ಭಗೀರಥನಿಗೆ ಕೊಟ್ಟೆ. ಅವನು ಆ ಸುರನದಿಯನ್ನು ಪಾತಾಳಕ್ಕೆ ಕರೆದೊಯ್ದು. ಅವನು ಹೋದ ಹೋದಲ್ಲೆಲ್ಲ ಗಂಗೆಯು ಅವನ ಬೆಂಬತ್ತಿ ಹರಿದಳು. ಪಾತಾಳದ ಆಳಕ್ಕೂ ಇಳಿದಳು. ಭಗೀರಥನ ಅಜ್ಜ ಮುತ್ತಾತರು ಬೂದಿಯಾಗಿ ಬಿದ್ದ ಸ್ಥಳದ ಮೇಲೆ ತನ್ನ ಪವಿತ್ರವಾದ ನೀರನ್ನೂ ತೂರಿ ತಾನೂ ಹರಿದು ಸುರಿದು ಮೊರೆದಳು. ಆ ಗಂಗೆಯ ಪಾನ ಜಲಸ್ಪರ್ಶ ಮಾತ್ರದಿಂದ ಆ ಸಗರಕುಮಾರರೆಲ್ಲರೂ ಉದ್ಧೃತರಾದರು. ಭಗೀರಥನ ಬೆನ್ನುಹತ್ತಿ ಬಂದದ್ದರಿಂದ ಆ ದೇವಗಂಗೆಗೆ ಭಾಗೀರಥಿ ಎಂಬ ಹೆಸರೂ ಬಂದಿತು.

ದೇವಲೋಕದಿಂದ ಗಂಗೆಯು ಭೂಲೋಕವನ್ನು ಪ್ರವೇಶಿಸಿದ ಹೆಬ್ಬಾಗಿಲೇ ಹರಿದ್ವಾರ. ಹರಿದ್ವಾರವು ಎಲ್ಲ ತೀರ್ಥಗಳಲ್ಲಿಯೂ ಸರ್ವಶ್ರೇಷ್ಠ, ಪರಮಪವಿತ್ರ. ಈ ಹರಿದ್ವಾರ ಕ್ಷೇತ್ರದಲ್ಲಿ ಗಂಗಾಸ್ನಾನವು ದೇವತೆಗಳಿಗೆ ಕೂಡ ದುರ್ಲಭ. ಈ ಹರಿದ್ವಾರ ಕ್ಷೇತ್ರದಲ್ಲಿ ಇರುವ ಈ ವಿಬುಧ ವಾಹಿನಿಯಲ್ಲಿ ಸ್ನಾನಮಾಡಿ ಶ್ರೀಹರಿಯ ದರ್ಶನ ಮಾಡಿಕೊಂಡವರ ರಾಶಿ ರಾಶಿ ಪಾಪಗಳೆಲ್ಲವೂ ಕರಗಿ ಹೋಗುವವು. ಬ್ರಹ್ಮಹತ್ಯಾದಿ ಪಾಪಗಳು ಅಮಿತವಾಗಿದ್ದರೂ ಇಲ್ಲಿಯ ಗಂಗಾಸ್ನಾನದಿಂದ ಸುಟ್ಟುಹೋಗುವವು.

**ಏಕದಾ ಕೇಶವಸ್ಥಾನೇ ಹರಿದ್ವಾರೇ ಹ್ಯಹಂಗತಃ ।**
**ಅಸ್ಮಾತ್ ತೀರ್ಥ ಪ್ರಭಾವಾಚ್ಚ ಜಾತೋಽಹಂ ವಿಷ್ಣು ರೂಪವಾನ್ ॥**

ನಾನು ಒಮ್ಮೆ ಕೇಶವನ ಸ್ಥಾನವಾದ ಆ ಹರಿದ್ವಾರ ಕ್ಷೇತ್ರಕ್ಕೆ ಹೋಗಿದ್ದೆ. ಆ ಹರಿದ್ವಾರ ಕ್ಷೇತ್ರದ ತೀರ್ಥವಾದ ಗಂಗೆಯಲ್ಲಿ ಸ್ನಾನ ಮಾಡಿದ ಮಾತ್ರಕ್ಕೆ ನನಗೆ ವಿಷ್ಣುವಿನ ಸಾರೂಪ್ಯ ದೊರಕಿತು.

**ಯೇ ಗಚ್ಛಂತಿ ನರಶ್ರೇಷ್ಠಾಸ್ತೇವೈಯಾಂತಿ ಹ್ಯನಾಮಯಾಮ್ ।**
**ಚತುರ್ಭುಜಾಸ್ತುತೇ ಲೋಕಾ ನರನಾರ್ಯಶ್ಚ ಸರ್ವಶಃ ॥**

**ವೈಕುಂಠ ಯಾಂತಿ ತೇ ಸರ್ವೇ ಹರೇ ದರ್ಶನ ಮಾತ್ರತಃ ।**
**ಮಮಾಪ್ಯಧಿಕ ತೀರ್ಥಂತು ಹರಿದ್ವಾರಂ ಸುಶೋಭಿನಂ ॥**

ಯಾವ ಮನುಷ್ಯರು ಹರಿದ್ವಾರ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಗಂಗಾತೀರ್ಥದಲ್ಲಿ ಸ್ನಾನಮಾಡಿ ಅಲ್ಲಿಯ ಕ್ಷೇತ್ರ ಮೂರ್ತಿಯಾದ ಕೇಶವನನ್ನು ಪೂಜಿಸುವರೋ ಅಂಥ ಎಲ್ಲ

ನರರೂ ನಾರಿಯರೂ ಇಲ್ಲಿ ಬದುಕಿ ಇರುವವರೆಗೆ ಆರೋಗ್ಯ ಭಾಗ್ಯವನ್ನು ಪಡೆದು ಮುಂದೆ ವೈಕುಂಠ ಲೋಕವನ್ನು ಹೊಂದುತ್ತಾರೆ. ನನಗೂ ಕೂಡ ವಿಷ್ಣು ಸಾರೂಪ್ಯವನ್ನು ಒದಗಿಸಿದ ಈ ಹರಿದ್ವಾರ ಕ್ಷೇತ್ರವು ಸರ್ವಶ್ರೇಷ್ಠವಾಗಿದೆ. ನನಗೂ ಇದು ಪರಮ ಪವಿತ್ರವಾದ ತೀರ್ಥವಾಗಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಭೂಮಿಗೆ ಭಾಗೀರಥಿಯ ಆಗಮನ; ಹರಿದ್ವಾರದ ಬಣ್ಣನ ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—೦—

## ಮಹಾದೇವ ಹೇಳಿದ ಗಂಗೆಯ ಮಾಹಾತ್ಮ್ಯ | ಅಧ್ಯಾಯ - ೨೩

**ಮಹಾದೇವ ಉವಾಚ**

**ಗಂಗಾಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥**

ಸಾವಿರ ಯೋಜನೆಗಳ ಆಚೆ ಇರುವ ಮನುಷ್ಯನು ಕೂಡ ಗಂಗಾ ಗಂಗಾ ಎಂದು ನುಡಿದರೆ ಸಾಕು. ಅವನಿಗೆ ಎಲ್ಲ ಪಾಪಗಳಿಂದಲೂ ಬಿಡುಗಡೆ. ಮತ್ತು ವಿಷ್ಣುಲೋಕಪ್ರಾಪ್ತಿ.

**ಚರಣಾಬ್ಜ ಸಮುದ್ಭೂತಾ ಗಂಗಾನಾಮೇತಿ ವಿಶ್ರುತಾ ।**
**ಪಾಪಾನಾಂ ಸ್ಥೂಲ ರಾಶೀನಾಂ ನಾಶಿನೀ ಚೇತಿ ನಾರದ ॥**

ಶ್ರೀಹರಿಯ ಚರಣದಿಂದ ಹುಟ್ಟಿ ಗಂಗಾ ಎಂಬ ಹೆಸರಿನಿಂದ ಪ್ರಖ್ಯಾತವಾದ ಈ ನದಿಯು ಎಲ್ಲ ಪ್ರಚಂಡ ಘೋರ ಪಾಪಗಳನ್ನು ನಾಶಮಾಡುವ ಮಹಾನದಿ ಎಂದು ಪ್ರಖ್ಯಾತಳಾಗಿದ್ದಾಳೆ.

**ದೇವಾನಾಂಚ ಯಥಾ ವಿಷ್ಣುಸ್ತಥಾ ಗಂಗೋತ್ತಮಾ ನದೀ ।**
**ಯೇ ಕುರ್ವಂತಿ ನರಾಃ ಸ್ನಾನಂ ಮಾಘಮಾಸೇ ನಿರಂತರಂ ॥**
**ನ ತೇಷಾಂ ವಿದ್ಯತೇ ದುಃಖಂ ಕಲ್ಪಾನಾಂ ಚ ಶತತ್ರಯಮ್ ।**

ಎಲ್ಲ ದೇವತೆಗಳಲ್ಲಿ ವಿಷ್ಣು ಹೇಗೆ ಸರ್ವಶ್ರೇಷ್ಠನೋ ಹಾಗೆ ನದಿಗಳಲ್ಲಿ ಗಂಗೆ ಸರ್ವಶ್ರೇಷ್ಠ. ಯಾರು ಈ ಗಂಗೆಯಲ್ಲಿ ಮಾಘಮಾಸದಲ್ಲಿ ಒಂದು ದಿನವೂ ಬಿಡದಂತೆ ಸ್ನಾನಮಾಡುವರೋ ಅವರಿಗೆ ಮುನ್ನೂರು ಕಲ್ಪ ಕಾಲದವರೆಗೆ ಯಾವ ದುಃಖವೂ ಸಂಭವಿಸುವದಿಲ್ಲ.

**ಸಾಕ್ಷಾದ್ಧರ್ಮದ್ರವೌಘಂ ಮುರರಿಪುಚರಣಾಂಭೋಜ ಪೀಯೂಷಸಾರಂ ।**
**ದುಃಖಸ್ಯಾಬ್ಧೇಸ್ತರಿತ್ರಂ ಸುರಮನುಜನುತಂ ಸ್ವರ್ಗಸೋಪಾನ ಮಾರ್ಗಂ ॥**

**ಸರ್ವಾಂಹೋಹಾರಿ ವಾರಿ ಪ್ರವರ ಗುಣಗಣಂ ಭಾಸಿ ಯಾ ಸಂವಹಂತೀ।**
**ತಸ್ಯೈ ಭಾಗೀರಥಿ ಶ್ರೀಮತಿ ಮುದಿತಮನಾ ದೇವಿ ಕುರ್ವೇ ನಮಸ್ತೇ ॥**

ಸಾಕ್ಷಾತ್ ಸನಾತನ ಧರ್ಮವೇ ಕರಗಿ ಗಂಗೆಯಾಗಿ ಹರಿಯುತ್ತಲಿದೆ. ಶ್ರೀಹರಿಯ ಚರಣಕಮಲದ ಮಕರಂದ ಸಾರವೇ ಈ ನದಿಯ ನೀರು. ಇದು ದುಃಖದ ಸಮುದ್ರದಿಂದ ಮಾನವರನ್ನು ಕಡೆಹಾಯಿಸುವ ಪವಿತ್ರ ತೀರ್ಥ. ಇದೊಂದು ಸ್ವರ್ಗಕ್ಕೆ ನಿರ್ಮಿಸಿದ ನೀರಿನ

ಮೆಟ್ಟಿಲು. ಆದ್ದರಿಂದಲೇ ಮಾನವರು, ದೇವತೆಗಳು ಇದನ್ನು ಬಣ್ಣಿಸುತ್ತಾರೆ. ಎಲ್ಲ ಜನರ ಎಲ್ಲ ವಿಧವಾದ ಪಾಪಗಳನ್ನು ಪರಿಹರಿಸಿ ಪುಣ್ಯಫಲವನ್ನು ಪ್ರದಾನ ಮಾಡುವ, ಒಳ್ಳೇ ಗುಣಗಳಿಂದ ಒಪ್ಪುವ, ಪವಿತ್ರವಾದ ನೀರನ್ನು ಹೊತ್ತು ಹರಿಯುವ ಭಾಗೀರಥಿ ದೇವಿಯೆ. ನಾನು ನಿನಗೆ ಸಂತುಷ್ಟವಾದ ಮನಸ್ಸಿನಿಂದ ನಮಸ್ಕಾರವನ್ನು ಮಾಡುತ್ತೇನೆ.

**ಸ್ವಃಸಿಂಧೋ ದುರಿತಾರಿ ಮಗ್ನಜನಾತ ಸಂತಾರಣೆ ಪ್ರೋಲ್ಲಸತ್ ।**
**ಕಲ್ಲೋಲಾಮಲ ಕಾಂತಿನಾಶಿತ ತಮಸ್ತೋಮೇ ಜಗತ್ಪಾವನಿ ॥**
**ಗಂಗೇದೇವಿ ! ಪುನೀಹಿ ದುಷ್ಕೃತಭಯಾಕ್ರಾಂತಂ ಕೃಪಾಭಾಜನಂ ।**
**ಮಾತರ್ಮಾಂ ಶರಣಾಗತಂ ಶರಣದೆ। ರಕ್ಷಾಥ ಭೋ ಭೀಷಿತಮ್ ॥**

ಪಾಪವೆಂಬ ಸಮುದ್ರದಲ್ಲಿ ಮುಳುಗಿದ ಜನರನ್ನೆಲ್ಲ ಪಾರುಮಾಡುವ ದೇವನದಿಯೆ, ನಿನ್ನ ತೆರಗಳ ಕಾಂತಿಯಿಂದಲೇ ಎಲ್ಲ ಕತ್ತಲೆಯೂ ನಾಶವಾಗಿ ಹೋಗುತ್ತದೆ. ನೀನು ಜಗತ್ತನ್ನೆಲ್ಲ ಪಾವನಗೊಳಿಸುವೆ. ತಾಯಿ, ನಾನು ನಿನಗೇ ಶರಣು ಬಂದಿದ್ದೇನೆ. ಶರಣಾಗತರನ್ನು ರಕ್ಷಿಸುವ ಗಂಗಾದೇವಿಯೆ, ನಾನು ಪಾತಕಗಳ ಭಯದಿಂದ ಆಕ್ರಾಂತನಾಗಿದ್ದೇನೆ. ನನ್ನ ಪಾಪದ ಭಾರದಿಂದ ಹೆದರಿಹೋಗಿದ್ದೇನೆ. ನಿನ್ನ ಕರುಣೆಗೆ ನಾನು ನಿಜವಾಗಿಯೂ ಪಾತ್ರ. ತಾಯಿ, ನೀನು ನನ್ನನ್ನು ರಕ್ಷಿಸು.

**ಹಂಹೋ ಮಾನಸ ಕಂಪಸೇ ಕಿಮು ಸಖೇ ತ್ರಸ್ತಂ ಭಯಾನ್ನಾರಕಾತ್ ।**
**ಕಿಂತೇ ಭೀತಿರಿತಿಶ್ರುತಿರ್ದುರಿತಕೃತ್ ಸಂಜಾಯತೇ ನಾರಕೀ ॥**
**ಮಾ ಭೈಷೀಃ ಶೃಣು ಮೇ ತ್ವಯಾ ಯದಿ ಸರಿತ್ ಪಾಪಾಚಲ ಸ್ಪರ್ಧಿನೀ।**
**ಪ್ರಾಪ್ತಾ ತೇ ನಿರಯಃ ಕಥಂ ಕಿಮಪರಂ ಕಿಂತೇನ ಧರ್ಮಂ ಧನಂ ॥**

ಎಲೋ ಮನಸ್ಸೇ, ನೀನು ಇಷ್ಟೇಕೆ ನಡುಗುತ್ತಲಿರುವೆ? ನರಕದ ಭಯದಿಂದೋ? ಪಾಪಮಾಡಿದವನು ನರಕದಲ್ಲಿ ಬೀಳುವನು ಎಂದು ಕೇಳಿದ್ದೇ ನಿನ್ನ ಭೀತಿಗೆ ಕಾರಣವಷ್ಟೆ? ಹಾಗಿದ್ದರೆ ಹೆದರಬೇಡ. ನಿನಗೊಂದು ಉಪಾಯವನ್ನು ಹೇಳುತ್ತೇನೆ ಕೇಳು. ನೀನು ಪಾಪರಾಶಿಯ ಬೆಟ್ಟಗಳನ್ನೆಲ್ಲ ನಾಶಮಾಡುವ ಗಂಗಾನದಿಯಲ್ಲಿ ಸ್ನಾನಮಾಡು. ಅಲ್ಲಿ ಒಮ್ಮೆ ಮಿಂದು ಬಂದರೆ ನಿನಗೆ ನರಕವು ಹೇಗೆ ಆಗುವದು? ನೀನು ಯಾವ ಧರ್ಮವನ್ನು ಮಾಡದಿದ್ದರೂ ಧನದಾನ ನೀಡದಿದ್ದರೂ ಗಂಗಾಸ್ನಾನವೊಂದನ್ನು ಮಾಡಿದರೆ ಸಾಕು. ಗಂಗೆಯಲ್ಲಿ ಮಿಂದು ಬಂದವನಿಗೆ ಬೇರೆ ಧರ್ಮ ಏಕೆ ಬೇಕು? ಬೇರೆ ಧನ ಏಕೆ ಬೇಕು? ಗಂಗೆಯೇ ಧನ, ಗಂಗಾಸ್ನಾನವೇ ಧರ್ಮ.

**ಸರ್ವೇಷಾಂಸು ಪ್ರಶಂಸಾ ಮುದಮನುಭವಿತುಂ ಮಜ್ಜನಂ ಯತ್ರಚೋಕ್ತಂ ।**
**ಸ್ವರ್ನಾರ್ಯೋ ವೀಕ್ಷ್ಯ ಹೃಷ್ಟಾ ವಿಬುಧಸುರಪತಿ ಪ್ರಾಪ್ತಿ ಸಂಭಾವನೇನ ॥**
**ನೀರೇ ಶ್ರೀ ಜನ್ಹುಕನ್ಯೆ ಯಮನಿಯಮರತಾಃ ಸ್ನಾಂತಿಯೇ ತಾವಕಿನೇ ।**
**ದೇವತ್ವಂ ತೇ ಲಭಂತೇ ಸ್ಫುಟಮಶುಭತೋಪ್ಯತ್ರ ವೇದಾಃ ಪ್ರಮಾಣಮ್ ॥**

ಎಲ್ಲ ದೇವಾಧಿದೇವತೆಗಳ ಪ್ರಶಂಸೆಯ ಆನಂದವನ್ನು ಅನುಭವಿಸಬೇಕು ಎಂಬ ಅಪೇಕ್ಷೆ ಇದ್ದರೆ ಗಂಗಾನದಿಯಲ್ಲಿ ಸ್ನಾನ ಮಾಡಬೇಕು. ಗಂಗೆಯ ನೀರಿನಲ್ಲಿ ಮೀಯ ತೊಡಗಿದ ಮಾನವನ್ನು ಕಂಡು ದೇವತಾ ಸ್ತ್ರೀಯರು ತಮಗೆ ಮತ್ತೊಬ್ಬ ಸುರಶ್ರೇಷ್ಠ ದೊರಕಿದ ಎಂದು ಆನಂದಪಡುತ್ತಾರೆ. ಏಕೆಂದರೆ ಈ ಜಾನ್ಹವಿಯ ಜಲದಲ್ಲಿ ಸ್ನಾನ ಮಾಡಿ,

ಯಮನಿಯಮಗಳನ್ನು ಆಚರಿಸಿ, ಹರಿಯ ಪೂಜೆ ಮಾಡಿದವರು ಎಷ್ಟೇ ಪಾಪ ಮಾಡಿರಲಿ, ಅವರಿಗೆ ದೇವತಾ ಸೌಭಾಗ್ಯವು ಪ್ರಾಪ್ತವಾಗುವದು. ಈ ವಿಷಯದಲ್ಲಿ ವೇದಗಳೇ ಪ್ರಮಾಣ.

## ಪ್ರಯಾಗ ಸ್ತೋತ್ರ

**ಶ್ರೀಜಾಹ್ನವೀ ರವಿಸುತಾ ಪರಮೇಷ್ಠಿ ಪುತ್ರೀ ।**
**ಸಿಂಧುತ್ರಯಾಭರಣ ತೀರ್ಥ ವರಪ್ರಯಾಗ ॥**
**ಸರ್ವೇಷುಮಾಮನುಗ್ರಹಾಣ ನಯಸ್ವಚೋರ್ಧ್ವ ।**
**ಮಂತಸ್ತಮೋ ದಶವಿಧಂ ದಯಲಸ್ವ ಧಾಮ್ನಾ ॥**

ಗಂಗಾ, ಯಮುನಾ, ಸರಸ್ವತೀ ಮೂರು ನದಿಗಳೇ ಆಭರಣವಾಗಿವುಳ್ಳ ತೀರ್ಥ ಶ್ರೇಷ್ಠವಾದ ಪ್ರಯಾಗವೇ ಮತ್ತು ಆ ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡಿದ ಪರಮೇಶ್ವರನೆ, ನನ್ನನ್ನು ಅನುಗ್ರಹಿಸು. ನನ್ನನ್ನು ಮೇಲಿನ ಸ್ವರ್ಗಾದಿ ದಿವ್ಯ ಲೋಕಗಳಿಗೆ ಕರೆದುಕೊಂಡು ಹೋಗು. ನಿನ್ನ ದಿವ್ಯವಾದ ಕಾಂತಿಯಿಂದ ನನ್ನ ಒಳಗೆ ಇರುವ ಹತ್ತು ವಿಧವಾದ ಅಜ್ಞಾನ, ದುಃಖ, ಪಾಪರೂಪವಾದ ತಮಸ್ಸನ್ನು ನಾಶಪಡಿಸು.

**ವಾಗೀಶ ವಿಷ್ಣ್ವೀವ ಪುರಂದರಾದ್ಯಾಃ ಪಾಪಪ್ರಣಾಶಾಯ ವಿದಾಂ ವಿದೋಪಿ**
**ಭಜಂತಿ ಯಚ್ಚಾಮರ ನೀರ ತೀರಂ ಸತೀರ್ಥರಾಜೋ ಜಯತಿ ಪ್ರಯಾಗಃ ॥**

ಯಾವ ಪ್ರಯಾಗ ತೀರ್ಥದಲ್ಲಿ ಸ್ನಾನಮಾಡಿ ಪಾಪಿಗಳು ಬಿಟ್ಟುಹೋದ ಪಾಪಗಳನ್ನು ಪರಿಹರಿಸಲಿಕ್ಕಾಗಿ ಬ್ರಹ್ಮ, ವಿಷ್ಣು, ಶಿವ, ಇಂದ್ರ ಮುಂತಾದ ದೇವತೆಗಳೂ, ಮಹಾಜ್ಞಾನಿಗಳಾದ ಋಷಿಮುನಿಗಳೂ, ಅಲ್ಲಿ ನಿರಂತರವೂ ನೆಲೆಸಿರುವರೋ ಅಂಥ ಪ್ರಯಾಗವು ತೀರ್ಥರಾಜ ಎಂದು ಜಗತ್ತಿನಲ್ಲಿ ಗೆಲುವನ್ನು ಪಡೆದಿದೆ. ಯಾವ ಪ್ರಯಾಗದಲ್ಲಿ ದೇವಗಂಗೆಯು ಯಮುನೆಯೊಂದಿಗೆ ಸಂಗಮವನ್ನು ಹೊಂದಿ ಜನರ ಮೂರು ಬಗೆಯಾದ ತಾಪಗಳನ್ನು ಕಳಯುವಳೋ ಅಂಥ ಪ್ರಯಾಗಕ್ಷೇತ್ರವು ಈ ಜಗತ್ತಿನಲ್ಲಿ ತೀರ್ಥರಾಜ ಎಂದು ಮೆರೆಯುತ್ತಲಿದೆ.

**ಧತ್ತೇಭಿತಾಶ್ಚಾಮರ ಚಾರುಕಾಂತಿಂ ಸಿತಾಸಿತೇ ಯತ್ರಸರಿದ್ವರೇಣ್ಯೇ ।**
**ಆದ್ಯೋವಟಶ್ಛತ್ರಮಿವಾತಿ ಭಾತಿ ಸತೀರ್ಥರಾಜೋ ಜಯತಿ ಪ್ರಯಾಗಃ ॥**

ಒಂದು ಕರಿ ನದಿ ಒಂದು ಬಿಳೀ ನದಿ (ಯಮುನೆ ಮತ್ತು ಗಂಗೆ) ಹೀಗೆ ಎರಡು ನದಿಗಳು ಎರಡು ಚಾಮರಗಳಂತೆ ಎಲ್ಲಿ ಶೋಭಿಸುತ್ತವೆಯೋ ಮತ್ತು ಬಹು ಪ್ರಾಚೀನವಾದ ವಟವೃಕ್ಷವು ಪಾಪದ ಬಿಸಿಲನ್ನು ತಡೆಹಿಡಿಯುವ ಛತ್ರದಂತೆ ಎಲ್ಲಿ ಕಂಗೊಳಿಸುವದೋ ಅಂಥ ಪ್ರಯಾಗ ತೀರ್ಥವು ಶೋಭಿಸುತ್ತದೆ.

**ಬ್ರಾಹ್ಮೀನ ಪುತ್ರೀ ತ್ರಿಪಥಾ ತ್ರಿವೇಣೀ, ಸಮಾಗಮೇ ಸಾಕ್ಷಿತ್ರಯಾತ್ರ ನೀರೇ।**
**ಯತ್ರಾಪ್ಲುತಾನ್ ಬ್ರಹ್ಮಪದಂ ನಯಂತಿ ಸತೀರ್ಥರಾಜೋ ಜಯತಿ ಪ್ರಯಾಗಃ ॥**

ಈ ಪ್ರಯಾಗ ಕ್ಷೇತ್ರಕ್ಕೆ ಬಂದು ಗಂಗಾ, ಯಮುನಾ, ಸರಸ್ವತಿ ಈ ಮೂರು ನದಿಗಳ ತ್ರಿವೇಣೀಸಂಗಮದಲ್ಲಿ ಸ್ನಾನಮಾಡಿದವರನ್ನು ಈ ಮೂರು ನದಿಗಳು ಸ್ವಯಂ ಸಾಕ್ಷೀಭೂತರಾಗಿ ಬ್ರಹ್ಮಪದವಿಗೆ ಕರೆದೊಯ್ಯುವವು. ಇಂಥ ಪ್ರಯಾಗ ಕ್ಷೇತ್ರವು ವಿಜಯಶಾಲಿಯಾಗಿರುತ್ತದೆ.

**ಲೋಕಾನಾಮಕ್ಷಮಾಣಾಂ ಮಖಕೃತಿಷುಕಲಾ ಸ್ವರ್ಗಕಾಮೈರ್ಜಯಾಶೀಃ।**
**ಸ್ತುತ್ಯಾದಿ ಸ್ತೋತ್ರವಾಗ್ಭಿಃ ಕಥಮಮರಪದ ಪ್ರಾಪ್ತಿ ಚಿಂತಾತುರಾಣಾಂ॥**

**ಅಗ್ನಿಷ್ಟೋಮಾಶ್ವಮೇಧ ಪ್ರಮುಖ ಮಖ ಫಲಂ ಸಮ್ಯಗಾಲೋಚ್ಯ ಸಾಂಗಂ ।**
**ಬ್ರಹ್ಮಾದ್ಯೈಸ್ತೀರ್ಥ ರಾಜೋಽ ಭಿಮತದ ಉಪವಿಷ್ಟೋಯ ಮೇವ ಪ್ರಯಾಗಃ॥**

ಕಲಿಯುಗದಲ್ಲಿ ಅಶ್ವಮೇಧ, ಅಗ್ನಿಷ್ಟೋಮ, ಮುಂತಾದ ಯಜ್ಞ ಯಾಗಗಳನ್ನು ಮಾಡಲು ಅಸಮರ್ಥರಾದ ಜನರಿಗೆ ಬರೀ ಜಯಘೋಷ, ಸ್ತೋತ್ರ, ಮಂತ್ರ, ವಚನಗಳಿಗೆ ಸ್ವರ್ಗಪದವು ಹೇಗೆ ದೊರಕಬೇಕು? ಎಂದು ಚಿಂತಾತುರರಾದ ಭಾವುಕ ಭಕ್ತಜನರಿಗೆ ಅಗ್ನಿಷ್ಟೋಮ ಅಶ್ವಮೇಧವೇ ಮೊದಲಾದ ಮುಖ್ಯ ಮುಖ್ಯ ಯಜ್ಞದ ಪ್ರಧಾನ ಫಲವನ್ನು ಕೊಡಲಿಕ್ಕಾಗಿಯೇ ಬ್ರಹ್ಮಾದಿ ದೇವತೆಗಳು ಚೆನ್ನಾಗಿ ವಿಚಾರಮಾಡಿ ಪ್ರಯಾಗ ಎಂಬ ಶ್ರೇಷ್ಠ ತೀರ್ಥವನ್ನು ಭೂಲೋಕದಲ್ಲಿ ನೆಲೆಗೊಳಿಸಿದ್ದಾರೆ.

**ಮಯಾಪ್ರಮಾದಾತುರತಾದಿ ದೋಷತಃ ಸಂಧ್ಯಾವಿಧಿರ್ನೋ ಸಮುಪಾನಿತೋಭೂತ್**
**ಚೇದತ್ರ ಸಂಧ್ಯಾಂ ಚರತೋ ಪ್ರಮಾದಾತ್ ಸಂಧ್ಯಾಸ್ತು ಪೂರ್ಣಾಽಖಿಲ ಜನ್ಮನೋಽಪಿ**

ಯಾರಾದರೂ ಪ್ರಮಾದ, ರೋಗ, ಮುಂತಾದ ಆಪತ್ತುಗಳಿಂದ ವಿಧಿಪೂರ್ವಕವಾಗಿ ಸಂಧ್ಯಾವಂದನೆಯನ್ನು ಮಾಡಿರದಿದ್ದರೆ ಅಂಥವರು ಈ ತ್ರಿವೇಣಿಸಂಗಮಕ್ಕೆ ಬಂದು ಇಲ್ಲಿ ತಪ್ಪದೇ ಸರಿಯಾಗಿ ಸ್ನಾನಮಾಡಿ ಸಂಧ್ಯಾವಂದನೆ ಮಾಡಿದರೆ ಅವರು ಇಡೀ ಜನ್ಮದಲ್ಲಿ ಎಲ್ಲ ಸಂಧ್ಯಾವಂದನೆಗಳನ್ನು ಮಾಡಿದಂತೆ ಆಗುವದು.

## ಕಾಶೀ ಮಹಿಮೆ

**ಭಾಗ್ಯೈರ್ಮೆಧಿಗತಾ ಹ್ಯನೇಕಜನುಷಾಂ ಸರ್ವಾಘ ವಿಧ್ವಂಸಿನೀ ।**
**ಸರ್ವಾಶ್ಚರ್ಯಮಯೀ ಮಯಾ ಶಿವಪುರೀ ಸಂಸಾರಸಿಂಧೋಸ್ತರೀ ॥**

**ಲಬ್ಧಂ ಸಜ್ಜನುಷಃಫಲಂ ಕುಲಮಲಂಚಕ್ರೇ ಪವಿತ್ರೀಕೃತಂ ।**
**ಸ್ವಾತ್ಮಾಚಾಪ್ಯಖಿಲಂ ಕೃತಂ ಕಿಮಪರಂ ಸರ್ವೋಪರಿಷ್ಠಾತ್ ಸ್ಥಿತಂ ॥**

''ಅನೇಕ ಜನ್ಮಗಳ ಪಾಪರಾಶಿಯನ್ನೆಲ್ಲ ಧ್ವಂಸ ಮಾಡತಕ್ಕ ಮತ್ತು ಸಂಸಾರ ಸಮುದ್ರದಿಂದ ದಾಟಿಸುವ ನೌಕೆಯಂತೆ ಇರುವ, ಅತ್ಯಂತ ಆಶ್ಚರ್ಯಕರವಾದ ಶಿವಪುರಿ ಎನಿಸಿದ ಕಾಶಿಯು ನನ್ನ ಜನ್ಮ ಜನ್ಮಾಂತರ ಭಾಗ್ಯಗಳಿಂದ ದೊರಕಿದೆ. ಸತ್ಕುಲದಲ್ಲಿ ಹುಟ್ಟಿ ಮಾಡಿದ ಎಲ್ಲ ಸತ್ಕಾರ್ಯಗಳ ಫಲವನ್ನು ಇಂದು ನಾನು ಹೊಂದಿದಂತಾಯಿತು. ಇಂದು ನಮ್ಮ ಕುಲವೇ ಮಂಡಿತವಾಯಿತು. ನನ್ನ ಆತ್ಮ ಪವಿತ್ರವಾಯಿತು. ನನ್ನ ಬದುಕು ಸರ್ವಶ್ರೇಷ್ಠವಾಯಿತು. ಇನ್ನೇನು ಬೇಕು?'' ಎಂದು ಮುಂತಾಗಿ ಕಾಶಿಯ ಯಾತ್ರೆ ಮಾಡಿದ ಮನುಷ್ಯ ಹೀಗೆ ಧನ್ಯತೆಯ ಆನಂದದ ಉದ್ಗಾರಗಳನ್ನು ತೆಗೆಯುತ್ತಾನೆ.

**''ಜೀವನ್ನರಃ ಪಶ್ಯತಿ ಭದ್ರಲಕ್ಷ ಮೇವಂ ವದಂತೀತಿ ಮೃಷಾನಯಸ್ಮಾತ್ ।**
**ತಸ್ಮಾನ್ಮಯಾ ವೈ ವಪುಷೇದೃಶೇನ ಪ್ರಾಪ್ತಾಪಿ ಕಾಶೀ ಕ್ಷಣಭಂಗುರೇಣ ॥**

ಮನುಷ್ಯನು ಬದುಕಿ ಇದ್ದರೆ ಒಂದು ಲಕ್ಷ ಕಲ್ಯಾಣಗಳನ್ನು ನೋಡುತ್ತಾನೆ ಎಂದು ಹಿರಿಯರು ಹೇಳುವುದು ಸುಳ್ಳಲ್ಲ. ಏಕೆಂದರೆ ಕ್ಷಣಿಕವಾದ ಈ ಮಾನವ ಶರೀರದಿಂದ

ನಾನು ಈ ಕಾಶಿಗೆ ಬಂದೆ. ಇಲ್ಲಿ ಗಂಗೆಯಲ್ಲಿ ಮಿಂದೆ. ವಿಶ್ವನಾಥನನ್ನು ಸೇವಿಸಿದೆ. ಇದೆಲ್ಲವೂ ನಾನು ಬದುಕಿ ಇದ್ದುದರಿಂದಲೇ ನನಗೆ ಒದಗಿರುತ್ತದೆ.

## ಗಯಾಕ್ಷೇತ್ರ ಮಹಿಮೆ

**ಯಃ ಶ್ರಾದ್ಧಸಮಯೇ ದೂರಾತ್ ಸ್ಮೃತೋಽಪಿ ಪಿತೃಮುಕ್ತಿದಃ ।**
**ತಂ ಗಯಾಯಾಂ ಸ್ಥಿತಂ ಸಾಕ್ಷಾತ್ ನಮಾಮಿ ಶ್ರೀ ಗದಾಧರಂ ॥**

ಶ್ರಾದ್ಧಕಾಲದಲ್ಲಿ ದೂರದೇಶದಲ್ಲಿದ್ದರೂ ಯಾವ ಗಧಾಧರನು ಸ್ಮರಣ ಮಾತ್ರದಿಂದಲೇ ಪಿತೃಗಳಿಗೆಲ್ಲ ಮುಕ್ತಿಯನ್ನು ನೀಡುವನೋ, ಅಂಥ ಗಯಾಕ್ಷೇತ್ರದಲ್ಲಿ ಇರುವ ಶ್ರೀಗಧಾಧರ ಸ್ವಾಮಿಯನ್ನು ನಮಸ್ಕರಿಸುತ್ತೇನೆ. ಹೀಗೆ ಕಾಶಿ, ಪ್ರಯಾಗ, ಗಂಗಾ, ಯಮುನಾ ಸಂಗಮ, ಗಯಾ ಗಧಾಧರರ ಸ್ತೋತ್ರಪಠಣ ಮತ್ತು ಮಹಿಮಾ ಶ್ರವಣದಿಂದ ಮನುಷ್ಯರ ಪಾಪಗಳೆಲ್ಲವೂ ಪರಿಹಾರವಾಗುವವು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹಾದೇವ ಹೇಳಿದ ಗಂಗೆಯ ಮಾಹಾತ್ಮ್ಯ ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



## ಪ್ರಯಾಗ ತೀರ್ಥ ಮಾಹಾತ್ಮ್ಯ

ಅಧ್ಯಾಯ - ೨೪

**ಮಹಾದೇವ:-** ಪ್ರಯಾಗ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳು. ಗಂಗಾ ಯಮುನಾ ಸರಸ್ವತೀ ಎಂಬ ಭಾರತ ವರ್ಷದ ಮೂರು ಪವಿತ್ರ ನದಿಗಳು ಸಂಗಮಿಸಿದ ಹೃದಯಂಗಮವಾದ ಸ್ಥಾನವೇ ಪ್ರಯಾಗ ಇದು ಎಲ್ಲ ತೀರ್ಥ ಕ್ಷೇತ್ರಗಳಿಗಿಂತಲೂ ಶ್ರೇಷ್ಠ. ಮುಗಿಲಿನಲ್ಲಿ ಗ್ರಹಗಳಿಗೆಲ್ಲ ಸೂರ್ಯ ಶ್ರೇಷ್ಠ, ನಕ್ಷತ್ರಗಳಿಗೆಲ್ಲ ಚಂದ್ರ ಶ್ರೇಷ್ಠ, ಭೂಲೋಕದಲ್ಲಿ ಪ್ರಯಾಗ ತೀರ್ಥ ಶ್ರೇಷ್ಠ. ಪ್ರಾತಃಕಾಲದಲ್ಲಿ ಸ್ನಾನಮಾಡಬೇಕು ಈ ಪ್ರಯಾಗ ತೀರ್ಥದಲ್ಲಿ. ಇಲ್ಲಿ ಸ್ನಾನಮಾಡಿ ಯಥಾಶಕ್ತಿ ದಾನ ದಕ್ಷಿಣೆ ನೀಡಿದವರ ದಾರಿದ್ರ್ಯ ನೀಗಿಹೋಗುವದು. ಮತ್ತು ಯಾವ ಜನ್ಮ ಆರೋಗ್ಯ ಭಾಗ್ಯ, ಐಶ್ವರ್ಯ, ಪ್ರಯಾಗ ಸ್ನಾನದಿಂದ ದೊರಕುವದು. ಇಲ್ಲಿರುವ ವಟವೃಕ್ಷದ ದರ್ಶನದಿಂದ ಬ್ರಹ್ಮಹತ್ಯಾದಿ ಪಾಪಗಳು ತೊಲಗುವವು. ಪ್ರಳಯ ಕಾಲದಲ್ಲಿ ಮಹಾವಿಷ್ಣುವು ಬಾಲರೂಪದಿಂದ ಈ ವಟವೃಕ್ಷದ ಎಲೆಯ ಮೇಲೆ ಪವಡಿಸುವನು. ಆದುದರಿಂದ ಈ ವೃಕ್ಷವು ನಾಶವಿಲ್ಲದುದು. ವಿಷ್ಣುಭಕ್ತರಾದವರು ಈ ವಟವೃಕ್ಷವನ್ನು ಸೂತ್ರದಿಂದ ಅಚ್ಛಾದನಮಾಡಿ ಪೂಜೆಯನ್ನು ಮಾಡಬೇಕು. ಇಲ್ಲಿ ನೆಲೆಸಿರುವ ಮಾಧವರೂಪಿಯಾದ ಶ್ರೀಹರಿಯ ದರ್ಶನ ಮಾಡಿಕೊಂಡವರಿಗೆ ಮಹಾಪಾಪದಿಂದ ಮುಕ್ತಿ. ಈ ಪ್ರಯಾಗ ಕ್ಷೇತ್ರದಲ್ಲಿ ಮರಣ ಹೊಂದಿದ ಚಂಡಾಲ, ಗೋಬಾಲಸ್ತ್ರೀ ಹಂತಕ, ದುಷ್ಟ, ಭ್ರಷ್ಟ ಎಲ್ಲರೂ ಪಾಪದಿಂದ ಬಿಡುಗಡೆ ಹೊಂದಿ ಮರಣಾನಂತರ ವೈಕುಂಠ ಲೋಕಕ್ಕೆ ತೆರಳುವರು. ಈ ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದವರ ಪುಣ್ಯ ಅಗಣ್ಯ.

ನಾರ ಎಂದರೆ ನೀರು. ಆ ನೀರೇ ಅಯನ ಎಂದರೆ ಆಶ್ರಯವಾಗಿ ಉಳ್ಳವ ನಾರಾಯಣ. ನೀರಿನಲ್ಲಿ ಶಯನ ಮಾಡಿದ ನಾರಾಯಣನು ಪ್ರಯಾಗ ತೀರ್ಥದ ನೀರಿನಲ್ಲಿ

ಸ್ನಾನಮಾಡಿದವರಿಗೆ ಭೋಗಗಳನ್ನೂ ಮೋಕ್ಷವನ್ನೂ ನೀಡುವನು. ಮಾಘಮಾಸದಲ್ಲಿ, ಮಕರಸಂಕ್ರಮಣದಲ್ಲಿ, ಪ್ರಾತಃಕಾಲದಲ್ಲಿ ಒಂದು ಹಸುವಿನ ಪಾದಮುಳುಗುವಷ್ಟು ನೀರು ಅಥವಾ ಜಲಾಶಯದಲ್ಲಿ ಸ್ನಾನಮಾಡಿದವರು ಸ್ವರ್ಗಹೊಂದುವರು. ತ್ರಿವೇಣಿಸಂಗಮದಲ್ಲಿ ಸ್ನಾನಮಾಡಿದವರು ಮೋಕ್ಷವನ್ನೇ ಹೊಂದುವರು. ಈ ಪ್ರಯಾಗ ಕ್ಷೇತ್ರದಲ್ಲಿ ಮಾಘಮಾಸದಲ್ಲಿ ಮೂರು ದಿನ, ಐದು ದಿನ, ಏಳು ದಿನ ಸ್ನಾನ ಮಾಡಿದವರು ಉತ್ತರೋತ್ತರ ಉತ್ಕರ್ಷವನ್ನು ಶುಕ್ಲಪಕ್ಷದ ಚಂದ್ರನಂತೆ ಹೊಂದುವರು. ಇಲ್ಲಿ ವಿಷ್ಣು, ರುದ್ರ, ಇಂದ್ರ ಮೊದಲಾದ ದೇವತೆಗಳೂ, ಸನಕ, ವಶಿಷ್ಠ ಮೊದಲಾದ ಋಷಿಗಳೂ ನಿತ್ಯವೂ ಸನ್ನಿಹಿತರಾಗಿರುತ್ತಾರೆ ಈ ಕ್ಷೇತ್ರದಲ್ಲಿ. ಆದುದರಿಂದ ಇಲ್ಲಿ ನೀಡಿದ ದಾನ, ಮಾಡಿದ ಸ್ನಾನ, ಆಚರಿಸಿದ ಪುಣ್ಯಕರ್ಮ ಅಕ್ಷಯ, ಫಲಪ್ರದ. ಇಲ್ಲಿಯ ಪವಿತ್ರವಾದ ನೀರಿನ ಸ್ನಾನ, ಪಾನಮಾಡಿದವರಿಗೆ ಪುನರ್ಜನ್ಮ ಇಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಪ್ರಯಾಗ ತೀರ್ಥ ಮಾಹಾತ್ಮ್ಯ ಎಂಬ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ತುಳಸಿ ಸಾಲಿಗ್ರಾಮ ಮಾಹಾತ್ಮ್ಯ

**ಅಧ್ಯಾಯ - ೨೫**

**ಮಹಾದೇವ:-** ನಾರದ, ತುಳಸಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ತುಳಸಿಯ ಎಲೆ, ಗೊನೆ, ಬೀಜ, ಕಾಯಿ, ಬೊಡ್ಡೆ, ರೆಂಬೆ, ತೊಗಟೆ, ದಳ, ಕಾಷ್ಠ ಎಲ್ಲವೂ ಪವಿತ್ರ. ತುಳಸೀ ವೃಂದಾವನದಲ್ಲಿಯ ಮಣ್ಣು ಕೂಡ ಪಾವನ. ಮನುಷ್ಯನು ಮರಣ ಹೊಂದಿದಾಗ ಅವನ ಮೈತುಂಬ ತುಳಸಿಯ ಕಟ್ಟಿಗೆಯನ್ನು ಇಟ್ಟು ಶ್ರೀಹರಿಯ ನಾಮಸ್ಮರಣೆಮಾಡುತ್ತ ತುಳಸಿಯ ಕಾಷ್ಠದಿಂದಲೇ ದಹನ ಮಾಡಬೇಕು. ಕೊರಳಲ್ಲಿ ತುಳಸಿಯ ಮಾಲೆ ಹಾಕಿ ತುಳಸಿಯ ಕಾಷ್ಠದಿಂದ ದಗ್ಧವಾದ ದೇಹಕ್ಕೆ ಎಂದರೆ ಆ ದೇಹಾಭಿಮಾನಿ ಚೇತನಕ್ಕೆ ಪುನರ್ಜನ್ಮ ಇರುವದಿಲ್ಲ. ಗಂಗೆಯ ನೀರನ್ನು ಬೆರಿಸಿದ ಬೇರೆ ನೀರು ಶುದ್ಧವಾಗುವಂತೆ ತುಳಸಿಯ ಕಾಷ್ಠದೊಂದಿಗೆ ಕೂಡಿಸಿದ ಎಲ್ಲ ಕಟ್ಟಿಗೆಗಳೂ ಪವಿತ್ರ ಎನಿಸುತ್ತದೆ. ಆದುದರಿಂದ ಚಿತೆಯಲ್ಲಿ ಬೇರೆಬೇರೆಯ ಕಾಷ್ಠಗಳೊಂದಿಗೆ ತುಳಸೀ ಸೇರಿಸಿ ಮನುಷ್ಯರ ಅಗ್ನಿಸಂಸ್ಕಾರವನ್ನು ಮಾಡಿದರೆ ಅವನು ಬದುಕಿ ಇದ್ದಾಗ ಮಾಡಿದ ಪಾಪಗಳೆಲ್ಲ ದಗ್ಧವಾಗಿ ಹೋಗುವವು. ತುಳಸೀ ಕಾಷ್ಠದ ಬೆಂಕಿಯಿಂದ ಯಾವ ಮನುಷ್ಯನ ಅಂತ್ಯಸಂಸ್ಕಾರವು ನೆರವೇರಿಸಲ್ಪಟ್ಟಿದೆಯೋ ಅವನ ಪಾಪಗಳೆಲ್ಲ ಇಲ್ಲಿಯೇ ದಗ್ಧವಾಗಿ ಹೋಗುವವು. ದೇವತೆಗಳು ಅವನನ್ನು ವಿಮಾನದಲ್ಲಿ ಕೂಡಿಸಿಕೊಂಡು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವರು. ಗಂಧರ್ವರು ಗಾನಮಾಡುವರು. ಅಪ್ಸರೆಯರು ಅವನ ಮುಂದೆ ಕುಣಿಯುವರು. ಶ್ರೀಹರಿಯು ಅವನ ಕೈಹಿಡಿದು, ಮೈಮೇಲೆಲ್ಲ ಕೈಯಾಡಿಸಿ ಅವನ ಸರ್ವಪಾಪಗಳನ್ನೆಲ್ಲ ಕಳೆದುಬಿಡುವನು. ತುಳಸೀ ಕಾಷ್ಠದ ವಹ್ನಿಯಲ್ಲಿ, ಹೋಮಕುಂಡದಲ್ಲಿ ತಿಲ (ಎಳ್ಳು), ತುಪ್ಪ, ಚರು, ಪಾಯಸ ಮುಂತಾದವುಗಳಿಂದ ಹೋಮಮಾಡಿದವರು ಅಗ್ನಿಷ್ಟೋಮ ಹೋಮಮಾಡಿದ ಫಲವನ್ನು ಹೊಂದುತ್ತಾರೆ.

ತುಳಸೀ ಕಾಷ್ಠದಿಂದ ಉಂಟಾದ ಚೂರ್ಣ ಹಾಕಿ ವಿಷ್ಣುವಿಗೆ ಧೂಪಾರತಿ ಮಾಡಿದವನು ನೂರು ಹಸುಗಳನ್ನು ದಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾನೆ. ತುಳಸೀ ಕಾಷ್ಠದ ವಹ್ನಿಯಿಂದ ನೈವೇದ್ಯದ ಅಡಿಗೆಯನ್ನು ಮಾಡಿ ಆ ಅನ್ನವನ್ನು ಕೇಶವನಿಗೆ ನೈವೇದ್ಯವನ್ನು ತೋರಿಸಿದರೆ ಅತ್ಯಧಿಕ ಪುಣ್ಯಪ್ರಾಪ್ತಿ. ತುಳಸಿಯ ಕಟ್ಟಿಗೆಯಿಂದ ದೀಪವನ್ನು ಹಚ್ಚಿದರೆ ಲಕ್ಷದೀಪವನ್ನು ಹಚ್ಚಿದಷ್ಟು ಪುಣ್ಯಬರುವದು. ತುಳಸೀ ಕಾಷ್ಠವನ್ನು ತೇಯ್ದು ಅದರ ಗಂಧವನ್ನು ದೇವರಿಗೆ ಏರಿಸಿ ಪೂಜೆಮಾಡಿದವರು ನೂರು ಗೋಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುತ್ತಾರೆ.

ಪಿತೃಗಳ ಶ್ರಾದ್ಧದಲ್ಲಿ ಪಿಂಡಗಳ ಮೇಲೆ ತುಳಸೀ ದಳವನ್ನು ಇಡಬೇಕು. ಸ್ನಾನ ಮಾಡುವಾಗ ತುಳಸಿಯ ಬೇರು, ಮಣ್ಣನ್ನು ಹಚ್ಚಿಕೊಂಡು ಮಾಡಿದ ಸ್ನಾನ, ಪುಣ್ಯಪ್ರದ. ಪ್ರತಿದಿನ ಶ್ರೀಹರಿಯ ಪೂಜಾಕಾಲದಲ್ಲಿ ತುಳಸೀ ಮಂಜರಿಗಳಿಂದ ಪೂಜೆಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳೆಲ್ಲ ದೂರವಾಗುವವು. ಯಾವ ಮನೆ ಅಥವಾ ಊರುಗಳಲ್ಲಿ ತುಳಸಿಯ ಗಿಡ ಇರುವದೋ ಅಲ್ಲಿ ಶ್ರೀಹರಿಯ ಸನ್ನಿಧಾನ. ತುಳಸಿ ಇದ್ದಲ್ಲಿ ದಾರಿದ್ರ್ಯ ಇಲ್ಲ, ದುಃಖ ಇಲ್ಲ, ರೋಗ ಇಲ್ಲ. ತುಲಸೀ ಗಿಡವನ್ನು ಹಚ್ಚಿದವರು ವಿಶೇಷ ಪುಣ್ಯವನ್ನು ಪಡೆಯುತ್ತಾರೆ. ತುಳಸೀ ವನದ ಅಥವಾ ತುಳಸೀ ಗಿಡದ ಮೇಲೆ ಬೀಸಿ ಬಂದ ಗಾಳಿ ಪಡೆದ ಮಾತ್ರಕ್ಕೆ ಮನುಷ್ಯನ ಪಾಪ ಪರಿಹಾರವಾಗುವದು. ಮತ್ತು ಆ ಪ್ರದೇಶವೆಲ್ಲವೂ ಪವಿತ್ರವಾಗುವದು. ತುಳಸೀ ಗಿಡಗಳ ನೆರಳಿನಲ್ಲಿ ಪಿತೃಗಳನ್ನು ಕುರಿತು ತರ್ಪಣ ಮಾಡಿದವರಿಗೆ ಅಕ್ಷಯ ಪಲ.

ತುಳಸಿಯ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಮಂಜರಿಯಲ್ಲಿ ರುದ್ರ ವಾಸಮಾಡುತ್ತಾರೆ. ತ್ರಿಕಾಲ ಸಂಧ್ಯಾವಂದನೆಯಲ್ಲಿ ತುಳಸಿಯಿಂದಲೇ ಮಾರ್ಜನ ಮಾಡಿಕೊಳ್ಳಬೇಕು. ಅದರಿಂದ ಗಂಗಾಸ್ನಾನ ಮಾಡಿದ ಫಲ ಬರುವದು. ಶಿವಾಲಯ ಅಥವಾ ವಿಷ್ಣುಮಂದಿರದಲ್ಲಿ ತುಳಸಿಯ ಗಿಡ ಹಚ್ಚಿದವನು ಅದರಲ್ಲಿ ಹುಟ್ಟುವ ತುಳಸಿಯ ಬೀಜಗಳಷ್ಟು ವರ್ಷ ಸ್ವರ್ಗಲೋಕದಲ್ಲಿ ವಾಸ ಮಾಡುವರು. ಪೂರ್ವಕಾಲದಲ್ಲಿ ಪಾರ್ವತಿಯು ಶಂಕರನಿಗಾಗಿ ಹಿಮಾಲಯದಲ್ಲಿ ನೂರು ತುಳಸಿವೃಕ್ಷಗಳನ್ನು ಬೆಳೆಸಿದ್ದಳು. ನಿತ್ಯವು ತುಳಸಿಯಿಂದ ವಿಷ್ಣುವಿನ ಪೂಜೆ ಮಾಡಿದವನು ದರಿದ್ರನಾಗಿದ್ದರೂ ಕೆಲವೇ ದಿನಗಳಲ್ಲಿ ಶ್ರೀಮಂತನಾಗುವನು.

## ಶಾಲಿಗ್ರಾಮ ಮಾಹಾತ್ಮ್ಯ

ಶಾಲಿಗ್ರಾಮದ ಕಲ್ಲು ಎಲ್ಲಿ ಇರುವದೋ ಅಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನ. ಕುರುಕ್ಷೇತ್ರ, ಪ್ರಯಾಗ, ಕಾಶಿ, ನೈಮಿಷಾರಣ್ಯ ಮುಂತಾದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ್ದಕ್ಕಿಂತ ಕೋಟಿಪಟ್ಟು ಹೆಚ್ಚಿನ ಪುಣ್ಯವು ಶಾಲಿಗ್ರಾಮ ಪೂಜೆಯಿಂದ ಬರುವದು. ಶಾಲಿಗ್ರಾಮ ಸ್ಪರ್ಶದಿಂದ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಾಶವಾಗುವವು. ಆದುದರಿಂದ ಮನುಷ್ಯನು ಪ್ರತಿದಿನವೂ ತಪ್ಪದೇ ಶಾಲಿಗ್ರಾಮ ಪೂಜೆಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩೮ ಉತ್ತರಖಂಡದಲ್ಲಿನ*
*ತುಳಸಿ ಶಾಲಿಗ್ರಾಮ ಮಾಹಾತ್ಮ್ಯ ಎಂಬ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*

—o—

ಸ್ನಾನಮಾಡಿದವರಿಗೆ ಭೋಗಗಳನ್ನೂ ಮೋಕ್ಷವನ್ನೂ ನೀಡುವನು. ಮಾಘಮಾಸದಲ್ಲಿ, ಮಕರಸಂಕ್ರಮಣದಲ್ಲಿ, ಪ್ರಾತಃಕಾಲದಲ್ಲಿ ಒಂದು ಹಸುವಿನ ಪಾದಮುಳುಗುವಷ್ಟು ನೀರು ಅಥವಾ ಜಲಾಶಯದಲ್ಲಿ ಸ್ನಾನಮಾಡಿದವರು ಸ್ವರ್ಗಹೊಂದುವರು. ತ್ರಿವೇಣಿಸಂಗಮದಲ್ಲಿ ಸ್ನಾನಮಾಡಿದವರು ಮೋಕ್ಷವನ್ನೇ ಹೊಂದುವರು. ಈ ಪ್ರಯಾಗ ಕ್ಷೇತ್ರದಲ್ಲಿ ಮಾಘಮಾಸದಲ್ಲಿ ಮೂರು ದಿನ, ಐದು ದಿನ, ಏಳು ದಿನ ಸ್ನಾನ ಮಾಡಿದವರು ಉತ್ತರೋತ್ತರ ಉತ್ಕರ್ಷವನ್ನು ಶುಕ್ಲಪಕ್ಷದ ಚಂದ್ರನಂತೆ ಹೊಂದುವರು. ಇಲ್ಲಿ ವಿಷ್ಣು, ರುದ್ರ, ಇಂದ್ರ ಮೊದಲಾದ ದೇವತೆಗಳೂ, ಸನಕ, ವಶಿಷ್ಠ ಮೊದಲಾದ ಋಷಿಗಳೂ ನಿತ್ಯವೂ ಸನ್ನಿಹಿತರಾಗಿರುತ್ತಾರೆ ಈ ಕ್ಷೇತ್ರದಲ್ಲಿ. ಆದುದರಿಂದ ಇಲ್ಲಿ ನೀಡಿದ ದಾನ, ಮಾಡಿದ ಸ್ನಾನ, ಆಚರಿಸಿದ ಪುಣ್ಯಕರ್ಮ ಅಕ್ಷಯ, ಫಲಪ್ರದ. ಇಲ್ಲಿಯ ಪವಿತ್ರವಾದ ನೀರಿನ ಸ್ನಾನ, ಪಾನಮಾಡಿದವರಿಗೆ ಪುನರ್ಜನ್ಮ ಇಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಪ್ರಯಾಗ ತೀರ್ಥ ಮಾಹಾತ್ಮ್ಯ ಎಂಬ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ತುಳಸಿ ಸಾಲಿಗ್ರಾಮ ಮಾಹಾತ್ಮ್ಯ

**ಅಧ್ಯಾಯ - ೨೫**

**ಮಹಾದೇವ:-** ನಾರದ, ತುಳಸಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ತುಳಸಿಯ ಎಲೆ, ಗೊನೆ, ಬೀಜ, ಕಾಯಿ, ಬೊಡ್ಡೆ, ರೆಂಬೆ, ತೊಗಟೆ, ದಳ, ಕಾಷ್ಠ ಎಲ್ಲವೂ ಪವಿತ್ರ. ತುಳಸೀ ವೃಂದಾವನದಲ್ಲಿಯ ಮಣ್ಣು ಕೂಡ ಪಾವನ. ಮನುಷ್ಯನು ಮರಣ ಹೊಂದಿದಾಗ ಅವನ ಮೈತುಂಬ ತುಳಸಿಯ ಕಟ್ಟಿಗೆಯನ್ನು ಇಟ್ಟು ಶ್ರೀಹರಿಯ ನಾಮಸ್ಮರಣೆಮಾಡುತ್ತ ತುಳಸಿಯ ಕಾಷ್ಠದಿಂದಲೇ ದಹನ ಮಾಡಬೇಕು. ಕೊರಳಲ್ಲಿ ತುಳಸಿಯ ಮಾಲೆ ಹಾಕಿ ತುಳಸಿಯ ಕಾಷ್ಠದಿಂದ ದಗ್ಧವಾದ ದೇಹಕ್ಕೆ ಎಂದರೆ ಆ ದೇಹಾಭಿಮಾನಿ ಚೇತನಕ್ಕೆ ಪುನರ್ಜನ್ಮ ಇರುವದಿಲ್ಲ. ಗಂಗೆಯ ನೀರನ್ನು ಬೆರಿಸಿದ ಬೇರೆ ನೀರು ಶುದ್ಧವಾಗುವಂತೆ ತುಳಸಿಯ ಕಾಷ್ಠದೊಂದಿಗೆ ಕೂಡಿಸಿದ ಎಲ್ಲ ಕಟ್ಟಿಗೆಗಳೂ ಪವಿತ್ರ ಎನಿಸುತ್ತದೆ. ಆದುದರಿಂದ ಚಿತೆಯಲ್ಲಿ ಬೇರೆಬೇರೆಯ ಕಾಷ್ಠಗಳೊಂದಿಗೆ ತುಳಸೀ ಸೇರಿಸಿ ಮನುಷ್ಯರ ಅಗ್ನಿಸಂಸ್ಕಾರವನ್ನು ಮಾಡಿದರೆ ಅವನು ಬದುಕಿ ಇದ್ದಾಗ ಮಾಡಿದ ಪಾಪಗಳೆಲ್ಲ ದಗ್ಧವಾಗಿ ಹೋಗುವವು. ತುಳಸೀ ಕಾಷ್ಠದ ಬೆಂಕಿಯಿಂದ ಯಾವ ಮನುಷ್ಯನ ಅಂತ್ಯಸಂಸ್ಕಾರವು ನೆರವೇರಿಸಲ್ಪಟ್ಟಿದೆಯೋ ಅವನ ಪಾಪಗಳೆಲ್ಲ ಇಲ್ಲಿಯೇ ದಗ್ಧವಾಗಿ ಹೋಗುವವು. ದೇವತೆಗಳು ಅವನನ್ನು ವಿಮಾನದಲ್ಲಿ ಕೂಡಿಸಿಕೊಂಡು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವರು. ಗಂಧರ್ವರು ಗಾನಮಾಡುವರು. ಅಪ್ಸರೆಯರು ಅವನ ಮುಂದೆ ಕುಣಿಯುವರು. ಶ್ರೀಹರಿಯು ಅವನ ಕೈಹಿಡಿದು, ಮೈಮೇಲೆಲ್ಲ ಕೈಯಾಡಿಸಿ ಅವನ ಸರ್ವಪಾಪಗಳನ್ನೆಲ್ಲ ಕಳೆದುಬಿಡುವನು. ತುಳಸೀ ಕಾಷ್ಠದ ವಹ್ನಿಯಲ್ಲಿ, ಹೋಮಕುಂಡದಲ್ಲಿ ತಿಲ (ಎಳ್ಳು), ತುಪ್ಪ, ಚರು, ಪಾಯಸ ಮುಂತಾದವುಗಳಿಂದ ಹೋಮಮಾಡಿದವರು ಅಗ್ನಿಷ್ಟೋಮ ಹೋಮಮಾಡಿದ ಫಲವನ್ನು ಹೊಂದುತ್ತಾರೆ.

ತುಳಸೀ ಕಾಷ್ಠದಿಂದ ಉಂಟಾದ ಚೂರ್ಣ ಹಾಕಿ ವಿಷ್ಣುವಿಗೆ ಧೂಪಾರತಿ ಮಾಡಿದವನು ನೂರು ಹಸುಗಳನ್ನು ದಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾನೆ. ತುಳಸೀ ಕಾಷ್ಠದ ವಹ್ನಿಯಿಂದ ನೈವೇದ್ಯದ ಅಡಿಗೆಯನ್ನು ಮಾಡಿ ಆ ಅನ್ನವನ್ನು ಕೇಶವನಿಗೆ ನೈವೇದ್ಯವನ್ನು ತೋರಿಸಿದರೆ ಅತ್ಯಧಿಕ ಪುಣ್ಯಪ್ರಾಪ್ತಿ. ತುಳಸಿಯ ಕಟ್ಟಿಗೆಯಿಂದ ದೀಪವನ್ನು ಹಚ್ಚಿದರೆ ಲಕ್ಷದೀಪವನ್ನು ಹಚ್ಚಿದಷ್ಟು ಪುಣ್ಯಬರುವದು. ತುಳಸೀ ಕಾಷ್ಠವನ್ನು ತೇಯ್ದು ಅದರ ಗಂಧವನ್ನು ದೇವರಿಗೆ ಏರಿಸಿ ಪೂಜೆಮಾಡಿದವರು ನೂರು ಗೋಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುತ್ತಾರೆ.

ಪಿತೃಗಳ ಶ್ರಾದ್ಧದಲ್ಲಿ ಪಿಂಡಗಳ ಮೇಲೆ ತುಳಸೀ ದಳವನ್ನು ಇಡಬೇಕು. ಸ್ನಾನ ಮಾಡುವಾಗ ತುಳಸಿಯ ಬೇರು, ಮಣ್ಣನ್ನು ಹಚ್ಚಿಕೊಂಡು ಮಾಡಿದ ಸ್ನಾನ, ಪುಣ್ಯಪ್ರದ. ಪ್ರತಿದಿನ ಶ್ರೀಹರಿಯ ಪೂಜಾಕಾಲದಲ್ಲಿ ತುಳಸೀ ಮಂಜರಿಗಳಿಂದ ಪೂಜೆಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳೆಲ್ಲ ದೂರವಾಗುವವು. ಯಾವ ಮನೆ ಅಥವಾ ಊರುಗಳಲ್ಲಿ ತುಳಸಿಯ ಗಿಡ ಇರುವದೋ ಅಲ್ಲಿ ಶ್ರೀಹರಿಯ ಸನ್ನಿಧಾನ. ತುಳಸಿ ಇದ್ದಲ್ಲಿ ದಾರಿದ್ರ್ಯ ಇಲ್ಲ, ದುಃಖ ಇಲ್ಲ, ರೋಗ ಇಲ್ಲ. ತುಲಸೀ ಗಿಡವನ್ನು ಹಚ್ಚಿದವರು ವಿಶೇಷ ಪುಣ್ಯವನ್ನು ಪಡೆಯುತ್ತಾರೆ. ತುಳಸೀ ವನದ ಅಥವಾ ತುಳಸೀ ಗಿಡದ ಮೇಲೆ ಬೀಸಿ ಬಂದ ಗಾಳಿ ಪಡೆದ ಮಾತ್ರಕ್ಕೆ ಮನುಷ್ಯನ ಪಾಪ ಪರಿಹಾರವಾಗುವದು. ಮತ್ತು ಆ ಪ್ರದೇಶವೆಲ್ಲವೂ ಪವಿತ್ರವಾಗುವದು. ತುಳಸೀ ಗಿಡಗಳ ನೆರಳಿನಲ್ಲಿ ಪಿತೃಗಳನ್ನು ಕುರಿತು ತರ್ಪಣ ಮಾಡಿದವರಿಗೆ ಅಕ್ಷಯ ಪಲ.

ತುಳಸಿಯ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಮಂಜರಿಯಲ್ಲಿ ರುದ್ರ ವಾಸಮಾಡುತ್ತಾರೆ. ತ್ರಿಕಾಲ ಸಂಧ್ಯಾವಂದನೆಯಲ್ಲಿ ತುಳಸಿಯಿಂದಲೇ ಮಾರ್ಜನ ಮಾಡಿಕೊಳ್ಳಬೇಕು. ಅದರಿಂದ ಗಂಗಾಸ್ನಾನ ಮಾಡಿದ ಫಲ ಬರುವದು. ಶಿವಾಲಯ ಅಥವಾ ವಿಷ್ಣುಮಂದಿರದಲ್ಲಿ ತುಳಸಿಯ ಗಿಡ ಹಚ್ಚಿದವನು ಅದರಲ್ಲಿ ಹುಟ್ಟುವ ತುಳಸಿಯ ಬೀಜಗಳಷ್ಟು ವರ್ಷ ಸ್ವರ್ಗಲೋಕದಲ್ಲಿ ವಾಸ ಮಾಡುವರು. ಪೂರ್ವಕಾಲದಲ್ಲಿ ಪಾರ್ವತಿಯು ಶಂಕರನಿಗಾಗಿ ಹಿಮಾಲಯದಲ್ಲಿ ನೂರು ತುಳಸಿವೃಕ್ಷಗಳನ್ನು ಬೆಳೆಸಿದ್ದಳು. ನಿತ್ಯವು ತುಳಸಿಯಿಂದ ವಿಷ್ಣುವಿನ ಪೂಜೆ ಮಾಡಿದವನು ದರಿದ್ರನಾಗಿದ್ದರೂ ಕೆಲವೇ ದಿನಗಳಲ್ಲಿ ಶ್ರೀಮಂತನಾಗುವನು.

## ಶಾಲಿಗ್ರಾಮ ಮಾಹಾತ್ಮ್ಯ

ಶಾಲಿಗ್ರಾಮದ ಕಲ್ಲು ಎಲ್ಲಿ ಇರುವದೋ ಅಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನ. ಕುರುಕ್ಷೇತ್ರ, ಪ್ರಯಾಗ, ಕಾಶಿ, ನೈಮಿಷಾರಣ್ಯ ಮುಂತಾದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ್ದಕ್ಕಿಂತ ಕೋಟಿಪಟ್ಟು ಹೆಚ್ಚಿನ ಪುಣ್ಯವು ಶಾಲಿಗ್ರಾಮ ಪೂಜೆಯಿಂದ ಬರುವದು. ಶಾಲಿಗ್ರಾಮ ಸ್ಪರ್ಶದಿಂದ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಾಶವಾಗುವವು. ಆದುದರಿಂದ ಮನುಷ್ಯನು ಪ್ರತಿದಿನವೂ ತಪ್ಪದೇ ಶಾಲಿಗ್ರಾಮ ಪೂಜೆಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ತುಳಸಿ ಶಾಲಿಗ್ರಾಮ ಮಾಹಾತ್ಮ್ಯ ಎಂಬ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*

—o—

**ನಾರದ:-** ಸದಾಶಿವ, ತುಳಸಿಯ ಮಹಿಮೆ ಹಾಗೂ ಶಾಲಿಗ್ರಾಮದ ಮಹಿಮೆಯನ್ನು ನಿಮ್ಮ ಮುಖದಿಂದ ಕೇಳಿ ನಾನು ಧನ್ಯನಾದೆ. ಈಗ ತುಳಸಿಯ ತ್ರಿರಾತ್ರಿ ವ್ರತದ ಬಗೆಯನ್ನು ಬಣ್ಣಿಸು.

**ಮಹಾದೇವ:-** ಹಿಂದೆ ರಥಂತರ ಕಲ್ಪದಲ್ಲಿ ಪ್ರಜಾಪತಿ ಎಂಬ ಹೆಸರಿನ ಒಬ್ಬ ರಾಜ ಇದ್ದ. ಅವನ ಪಟ್ಟ ಮಹಿಷಿಯಾದ ಚಂದ್ರರೂಪ ಎಂಬ ಸಾಧ್ವೀಮಣಿಯು ಈ ತ್ರಿರಾತ್ರಿ ತುಳಸೀವ್ರತವನ್ನು ಮಾಡಿದಳು. ಈ ವ್ರತವನ್ನು ಕಾರ್ತೀಕ ಶುಕ್ಲಪಕ್ಷ ನವಮಿಯಿಂದ ಪ್ರಾರಂಭಿಸಬೇಕು. ಅಂದು ಆ ವ್ರತವನ್ನು ಹಿಡಿದು ಮನುಷ್ಯನು ಜಿತೇಂದ್ರಿಯನಾಗಿ ನೆಲದ ಮೇಲೆ ತುಳಸೀವನದ ಬಳಿಯಲ್ಲಿಯೇ ಮಲಗಬೇಕು. ಮರುದಿನ, ನದಿ ಅಥವಾ ಸರೋವರದಲ್ಲಿ ಸ್ನಾನಮಾಡಿ ದೇವಪೂಜೆ, ತರ್ಪಣ ಮುಂತಾದ ನಿತ್ಯವಿಧಿಯನ್ನು ಮಾಡಬೇಕು. ಬಂಗಾರದ ಲಕ್ಷ್ಮೀನಾರಾಯಣರ ಪ್ರತಿಮೆಯನ್ನು ಮಾಡಿಸಿ ಒಂದು ಹಳದಿ ಮತ್ತು ಒಂದು ಶುಭ್ರ ವಸ್ತ್ರಗಳನ್ನು ಅವುಗಳಲ್ಲಿ ಏರಿಸಿ ಪೂಜೆಯನ್ನು ಮಾಡಬೇಕು. ನವಗ್ರಹ ಹೋಮ, ವಿಷ್ಣುಹೋಮಗಳನ್ನು ಭಕ್ತಿ ಹಾಗೂ ಶ್ರದ್ಧೆಯಿಂದ ನೆರವೇರಿಸಬೇಕು. ಏಕಾದಶಿಯದಿನ ಪೂರ್ಣ ಉಪವಾಸಮಾಡಿ ದ್ವಾದಶಿಯಂದು ಪ್ರಾತಃಕಾಲದಲ್ಲಿ ಸ್ನಾನಮಾಡಿ ದೇವರ ಪೂಜೆ ಮಾಡಬೇಕು. ವಿಧಿಪೂರ್ವಕವಾಗಿ ಕಲಶ ಸ್ಥಾಪನೆಯನ್ನು ಮಾಡಿ ಅದರಲ್ಲಿ ಐದು ರತ್ನಗಳನ್ನು, ಚಿಗುರು ವನಸ್ಪತಿಗಳನ್ನು ಹಾಕಿ ಮುಚ್ಚಿ ಅದರ ಮೇಲೆ ಒಂದು ಪಾತ್ರವನ್ನು ಇಟ್ಟು ಲಕ್ಷ್ಮೀ ಸಹಿತನಾದ ನಾರಾಯಣನನ್ನು ಅಲ್ಲಿ ಸ್ಥಾಪಿಸಬೇಕು. ಈ ಎಲ್ಲ ದೇವರ ಪೂಜೆಯನ್ನು ತುಳಸೀ ಗಿಡದ ಬುಡದಲ್ಲಿಯೇ ವೇದೋಕ್ತಮಂತ್ರಗಳಿಂದ ಆಚರಿಸಬೇಕು. ಪಂಚಾಮೃತದಿಂದ ಆ ತುಳಸೀವನದ ಛಾಯೆಯಯಲ್ಲಿ ಅದರ ಬೊಡ್ಡೆಯ ಹತ್ತಿರ ಸ್ಥಾಪಿಸಿದ ಲಕ್ಷ್ಮೀನಾರಾಯಣರ ಪ್ರತಿಮೆಗಳಿಗೆ ಪಂಚಾಮೃತದಿಂದ ಸ್ನಾನಮಾಡಿಸಬೇಕು. ತುಳಸಿಯ ಬುಡದಲ್ಲಿ ಪವಿತ್ರವಾದ ನೀರಿನಿಂದ ಸಿಂಚನ ಮಾಡಬೇಕು. ಪಂಚಾಮೃತ ಸ್ನಾನದ ಅನಂತರ ಶುದ್ಧೋದಕದಿಂದ ಲಕ್ಷ್ಮೀನಾರಾಯಣರಿಗೆ ಅಭಿಷೇಕ ಮಾಡಿಸಿ ಆ ಎರಡೂ ಪ್ರತಿಮೆಗಳನ್ನು ಕಲಶದ ಮೇಲಿನ ಪಾತ್ರೆಯಲ್ಲಿ ಇರಿಸಬೇಕು. ಮತ್ತು

**ಯೋಽನಂತರೂಪೋಽಖಿಲವಿಶ್ವರೂಪೋ ಗರ್ಭೋದಕೇ ಲೋಕವಿಧಿಂಬಿಭರ್ತಿ ।**
**ಪ್ರಸೀದಾತಾಮೇಷ ಸದೇವದೇವೋ ಯೋಮಾಯ ಯಾ ವಿಶ್ವಕೃದೇಷ್ಣದೇವಃ ॥**

ಎಂಬ ಮಂತ್ರದಿಂದ ಪ್ರಾರ್ಥನೆಯನ್ನು ಮಾಡಬೇಕು. ಅನಂತರ -

**"ಅಗಚ್ಛಾಚ್ಯುತ ದೇವೇಶ ತೇಜೋರಾಶೇ ಜಗತ್ಪತೇ ।**
**ಸದೈವ ತಿಮಿರಧ್ವಂಸಿನ್ ಪಾಹಿಮಾಂ ಭವಸಾಗರಾತ್ ॥**

ಎಂಬ ಮಂತ್ರದಿಂದ ಆವಾಹನೆಯನ್ನು ಮಾಡಬೇಕು.

**ಪಂಚಾಮೃತೇನ ಸುಸ್ನಾನಂ ತಥಾ ಗಂಗೋದಕೇನ ಚ**
**ಗಂಗಾದೀನಾಂಚ ತೋಯೇನ ಸ್ನಾತೋಽನಂತ ಪ್ರಸೀದತು**

ಎಂಬ ಮಂತ್ರದಿಂದ ಸ್ನಾನಂ,

**ಶ್ರೀಖಂಡಾ ಗುರು ಕರ್ಪೂರಂ ಕುಂಕುಮಾದಿ ವಿಲೇಪನಂ**
**ಭಕ್ತ್ಯಾದತ್ತಂ ಮಯಾದೇವ ಲಕ್ಷ್ಮ್ಯಾಸಹ ಗ್ರಹಾಣವೈ**
ಎಂಬ ಮಂತ್ರದಿಂದ ಗಂಧ, ಕುಂಕುಮಾದಿಗಲನ್ನು ಲೇಪಿಸಬೇಕು.

**ನಾರಾಯಣ ನಮಸ್ತೇಸ್ತು ನರಕಾರ್ಣವ ತಾರಣ**
**ತ್ರೈಲೋಕ್ಯಾಧಿಪತೇ ತುಭ್ಯಂ ದದಾಮಿವಸನೇ ಶುಭೇ**
ಎಂಬ ಮಂತ್ರದಿಂದ ವಸ್ತ್ರ ಧರಿಸಬೇಕು.

**ದಾಮೋದರ ನಮೋಸ್ತೇಸ್ತು ತ್ರಾಹಿ ಮಾಂ ಭವಸಾಗರಾತ್**
**ಬ್ರಹ್ಮಸೂತ್ರಂ ಮಯಾದತ್ತಂ ಗ್ರಹಾಣ ಪುರುಷೋತ್ತಮ**
ಎಂಬ ಮಂತ್ರದಿಂದ ಯಜ್ಞೋಪವೀತವನ್ನು ದೇವರಿಗೆ ತೊಡಿಸಬೇಕು.

**ಪುಷ್ಪಾಣಿಚ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ**
**ಮಯಾದತ್ತಾಣಿ ದೇವೇಶ, ಪ್ರೀತಿತಃ ಪ್ರತಿ ಗ್ರಹ್ಯತಾಂ**
ಎಂದು ಪಠಿಸಿ ಹೂಗಳನ್ನು ಏರಿಸಬೇಕು.

**ನೈವೇದ್ಯಂ ಗ್ರಹ್ಯತಾಂ ನಾಥ ಭಕ್ಷಭೋಜ್ಯೈಃ ಸಮನ್ವಿತಂ**
**ಸರ್ವೈ ರಸ್ಯೆಃ ಸುಸಂಪನ್ನಂ ಗ್ರಹಾಣ ಪರಮೇಶ್ವರ**
ಎಂಬ ಮಂತ್ರದಿಂದ ನೈವೇದ್ಯವನ್ನು ತೋರಿಸಬೇಕು.

**ಪೂಗಾನಿ ನಾಗಪತ್ರಾಣಿ ಕರ್ಪೂರ ಸಹಿತಾಣಿ ಚ ಮಯಾದತ್ತಾಣಿ**
**ದೇವೇಶ ತಾಂಬೂಲಂ ಪ್ರತಿಗ್ರಹ್ಯತಾಂ**
ಎಂದು ಹೇಳಿ ಎಲೆ ಅಡಿಕೆಯನ್ನು ಸಮರ್ಪಿಸಬೇಕು.

ಅನಂತರ ದಶಾಂಗ ಹಾಕಿದ ಧೂಪಾರತಿಯನ್ನು ಮಾಡಿ ದೇವರಿಗೆ ಅರ್ಘ್ಯವನ್ನು ನೀಡಬೇಕು. ನವಮಿ ದಿನದಂದು ತೆಂಗಿನ ಕಾಯಿಯನ್ನು, ದಶಮಿಯ ದಿನ ಬೀಜ ಫಲವನ್ನು, ಏಕಾದಶಿಯ ದಿನ ದಾಳಿಂಬರಿ ಫಲವನ್ನು, ದ್ವಾದಶಿಯ ದಿನ ಸರ್ವಭಕ್ಷ ಭೋಜ್ಯಗಳನ್ನು ಭಗವಂತನಿಗೆ ಅರ್ಪಿಸಬೇಕು. ಸಪ್ತ ಧಾನ್ಯಗಳನ್ನು ಉಪಯೋಗಿಸಿ ಅಡಿಗೆಯನ್ನು ತಯಾರಿಸಬೇಕು. ಏಳು ವಿಧವಾದ ಹಣ್ಣುಗಳನ್ನು ಅಂದು ಭಗವಂತನಿಗೆ ನಿವೇದಿಸಬೇಕು. ಅನಂತರ ದೇವರಿಗೆ

**ತುಲಸೀ ಸಹಿತೋದೇವ ಸದಾ ಶಂಕೇನ ಸಂಯುತಂ**
**ಗ್ರಹಾಣಾರ್ಘ್ಯ ಮಯಾದತ್ತಂ ದೇವ ದೇವ ನಮೋಸ್ತುತೇ**
ಎಂಬ ಮಂತ್ರ ಹೇಳಿ ದೇವರಿಗೆ ಅರ್ಘ್ಯವನ್ನು ನೀಡಬೇಕು. ಅನಂತರ

**ಉಪೋಖಿತೋಹಂ ದೇವೇಶ ಕಾಮಕ್ರೋಧ ವಿವರ್ಜಿತಃ**
**ವ್ರತೇನಾನೇನ ದೇವೇಶ ತ್ವಮೇವ ಶರಣಂ ಮಮ**

**ಗ್ರಹೀತೇಸ್ಮಿನ್ ವ್ರತೇ ದೇವ ಯದ ಪೂರ್ವಂ ಕೃತಂ ಮಯಾ**
**ಸರ್ವಂ ತದಸ್ತು ಸಂಪೂರ್ಣಂ ತ್ವತ್ ಪ್ರಸಾದಾತ್ ಜನಾರ್ದನ**

ದೇವ ದೇವ, ನಾನು ಏಕಾದಶಿಯ ದಿನ ಪೂರ್ಣ ಉಪವಾಸಮಾಡಿ ಕಾಮಕ್ರೋಧಗಳನ್ನು ಬಿಟ್ಟು ಈ ತುಲಸೀ ವ್ರತದಿಂದ ನಿನ್ನನ್ನು ಯಥಾಶಕ್ತಿ ಪೂಜೆ ಮಾಡಿದ್ದೇನೆ. ಇದರಲ್ಲಿ ಏನಾದರೂ ಅಪೂರ್ಣತೆ, ಲೋಪ, ದೋಷ ಆಗಿದ್ದರೆ ಅದೆಲ್ಲವೂ ನಿನ್ನ ಪ್ರಸಾದದಿಂದ ಪರಿಪೂರ್ಣವಾಗಲಿ.

**ನಮಃಕಮಲ ಪತ್ರಾಕ್ಷ ನಮಸ್ತೇ ಜಲಶಾಯಿನೇ**
**ಇದಂ ವ್ರತಂ ಮಯಾಚೀರ್ಣಂ ಪ್ರಸಾದಾತ್ ತವ ಕೇಶವ**

ಪ್ರಸಾದ ಸುಮುಖೋ ಭುಕ್ವಾ ಜ್ಞಾನದೃಷ್ಟಿ ಪ್ರದೋಭವ. ನೀರಿನಲ್ಲಿ ಶಯನ ಮಾಡಿದ ತಾವರೆಗಣ್ಣನ ಕೇಶವನೇ, ನಾನು ನಿನ್ನ ಪ್ರಸಾದದಿಂದ ಈ ವ್ರತವನ್ನು ಆಚರಿಸಿದ್ದೇನೆ. ಇದರಿಂದ ನೀನು ಪ್ರಸನ್ನನಾಗಿ ನನಗೆ ಜ್ಞಾನ ದೃಷ್ಟಿಯನ್ನು ನೀಡು.

ಏಕಾದಶಿಯ ದಿನ ರಾತ್ರಿ ಜಾಗರಣ, ಪುರಾಣ ಪಠಣ, ಮಂತ್ರ ಪಾರಾಯಣ, ಸಂಗೀತಸೇವೆ, ನೃತ್ಯ ಸೇವೆ, ವ್ಯಾಖ್ಯಾನ, ಉಪನ್ಯಾಸ ಮುಂತಾದ ಜ್ಞಾನ ಕಾರ್ಯಗಳಿಂದ ಬೆಳಗಾಗುವವರೆಗೆ ಭಗವಂತನ ಸೇವೆಯನ್ನು ಮಾಡಬೇಕು. ಮರುದಿನ ಮೂರು ದಂಪತಿಗಳನ್ನು ಭಕ್ತಿಯಿಂದ ಆಮಂತ್ರಿಸಿ ಅವರಿಗೆ ಬಟ್ಟೆ, ಯಜ್ಞೋಪವೀತ, ಹೂವಿನ ಮಾಲೆ, ಶ್ರೀಗಂಧ ಕುಂಕುಮ ಅಲಂಕಾರ ಮುಂತಾದವುಗಳನ್ನು ಕೊಟ್ಟು ಭಕ್ಷಭೋಜ್ಯ ಪಕ್ವಾನ್ನಗಳಿಂದ ಭೋಜನ ಮಾಡಿಸಬೇಕು. ಊಟದಲ್ಲಿ ತುಪ್ಪ, ಪಾಯಸಗಳನ್ನು ವಿಶೇಷವಾಗಿ ಬಡಿಸಬೇಕು. ಭೋಜನಾನಂತರ ತಾಂಬೂಲ, ಪುಷ್ಪ, ಗಂಧಕಟ್ಟಿಗೆಗಳನ್ನು ಕೊಟ್ಟು ತೆಂಗಿನಕಾಯಿ ಹಾಗೂ ಬಗೆಬಗೆಯ ಹಣ್ಣುಕಾಯಿಗಳನ್ನು ದಂಪತಿಗಳಿಗೆ ದಾನ ನೀಡಿ ಪೂಜಿಸಬೇಕು. ಮತ್ತು ಗುರುಗಳಿಗೆ ದಂಪತಿ ಪೂಜೆ ಮಾಡಿ ವಸ್ತ್ರಾಲಂಕಾರ ಯುಕ್ತವಾದ ಹಿಂಡುವ ಹಸುವನ್ನು ದಕ್ಷಿಣಾ ಸಹಿತವಾಗಿ ದಾನವನ್ನು ಕೊಡಬೇಕು. ಈ ತುಳಸಿಯ ತ್ರಿರಾತ್ರದ ವ್ರತದಿಂದ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ತುಳಸೀ ವ್ರತ ಎಂಬ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು*



## ಅನ್ನದಾನದ ಪ್ರಶಂಸೆ

**ಅಧ್ಯಾಯ - ೨೭**

**ನಾರದ:-** ಯೋಗ್ಯರಾದ ವಿಪ್ರರಿಗೆ ದಾನ ನೀಡಬಯಸುವ ಮನುಷ್ಯನು ಯಾವ ಯಾವ ದಾನ ನೀಡಬೇಕು ಎಂಬುದನ್ನು ನನಗೆ ಹೇಳಿರಿ.

**ಮಹಾದೇವ:-** ನಾರದ, ಎಲ್ಲ ದಾನಗಳಲ್ಲಿಯೂ ಅನ್ನದಾನ ಸರ್ವಶ್ರೇಷ್ಠ. ಅನ್ನದಾನದಂಥ ದಾನವು ಈ ಭೂಲೋಕದಲ್ಲಿ ನಭೂತೋ ನಭವಿಷ್ಯತಿ. ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಅನ್ನದಿಂದಲೇ ಬದುಕುತ್ತದೆ. ಅನ್ನದಿಂದಲೇ ಬೆಳೆಯುತ್ತದೆ. ಪ್ರಾಣಿಗಳ ಪಂಚಪ್ರಾಣಗಳು ಅನ್ನದ ಮೇಲೆಯೇ ನಿಂತಿರುತ್ತವೆ. ಆದುದರಿಂದ ಅನ್ನದಾನವೇ ಸರ್ವಶ್ರೇಷ್ಠವಾದ ದಾನ. ಅನ್ನವನ್ನು ಯಾಚಿಸುವ ಬ್ರಾಹ್ಮಣನಿಗೆ ತನ್ನ ಕುಟುಂಬಕ್ಕೆ ಕಡಿಮೆ ಮಾಡಿಕೊಂಡಾದರೂ ಅನ್ನವನ್ನು ನೀಡಬೇಕು.

ಆದರಿಂದ ದಾನಿಯ ಕುಟುಂಬಘಟಕರಾದ ಪ್ರತಿಯೊಂದು ಮಾನವರಿಗೂ ಐಶ್ವರ್ಯ ಪ್ರಾಪ್ತಿಯಾಗುವದು. ಅದರಲ್ಲಿಯೂ ಮಾರ್ಗಾಯಾಸದಿಂದ ಬಳಲಿಬಂದ ಅತಿಥಿಗೆ ಅನ್ನವನ್ನು ನೀಡುವದು ಅತ್ಯಂತ ಪುಣ್ಯಕಾರ್ಯ. ಮನೆಗ ಬಂದ ಅತಿಥಿಯನ್ನು ಎಂದೂ ನಿಂದಿಸಬಾರದು. ಹಸಿದು ಬಂದವರಿಗೆಲ್ಲ ಅವನ ವಿದ್ಯೆ, ಆಚಾರ ಯಾವುದನ್ನೂ ನೋಡದೇ ಅನ್ನವನ್ನು ನೀಡಬೇಕು. ಅದರಲ್ಲಿಯೂ ಬ್ರಹ್ಮವನ್ನು ತಿಳಿದ ಜ್ಞಾನಿಗೆ ಅರ್ಪಿಸಿದ ಅನ್ನವು ಅತ್ಯಧಿಕ ಪುಣ್ಯಪ್ರದ. ಮಹಾಪಾಪ ಮಾಡಿದವನು ಕೂಡ ಅನ್ನದಾನದಿಂದ ಪರಿಶುದ್ಧನಾಗುತ್ತಾನೆ.

**ಬ್ರಾಹ್ಮಣೇಷ್ವಕ್ಷಯಂ ದಾನಮನ್ನಂ ಶೂದ್ರೇ ಮಹತ್ ಫಲಂ ।**
**ಅನ್ನದಾನಂಚ ಶೂದ್ರೇಚ ಬ್ರಾಹ್ಮಣೇಚ ವಿಶಿಷ್ಯತೆ ॥**

ಬ್ರಾಹ್ಮಣರಿಗೆ ನೀಡಿದ ಅನ್ನವು ಅಕ್ಷಯ. ಶೂದ್ರನಿಗೆ ನೀಡಿದರೂ ಮಹಾಪುಣ್ಯ ಫಲ. ಶೂದ್ರನಿಗೂ ಬ್ರಾಹ್ಮಣನಿಗೂ ಅನ್ನದಾನದಿಂದ ವಿಶೇಷ ಪುಣ್ಯವು ಉಂಟು.

**ನಪೃಚ್ಛೇದ್ ಗೋತ್ರಚರಣಂ ನಚ ಸ್ವಾಧ್ಯಾಯ ಮೇವಚ ।**
**ಭಿಕ್ಷುಕೋ ಬ್ರಾಹ್ಮಣೋ ಹ್ಯತ್ರ ದದ್ಯಾದನ್ನಂ ಮುದಾದರಾತ್ ॥**

ಮನೆಗೆ ಬಂದ ಅತಿಥಿಯ ಗೋತ್ರವನ್ನಾಗಲಿ, ಆಚರಣವನ್ನಾಗಲಿ ಅಧ್ಯಯನವನ್ನಾಗಲಿ ಕೇಳಬಾರದು. ಹಸಿದು ಬಂದ ಭಿಕ್ಷುಕ ಬ್ರಾಹ್ಮಣನೆಂದೇ ಬಗೆದು ಪ್ರೀತಿಯಿಂದ ಅನ್ನವನ್ನು ಹಾಕಬೇಕು. ಈ ಲೋಕದಲ್ಲಿ ಅನ್ನದಾನ ಮಾಡಿದವರಿಗೆ ಸ್ವರ್ಗಾದಿ ಪುಣ್ಯ ಲೋಕಗಳಲ್ಲಿ ಸಕಲ ವಿಧವಾದ ಸುಖಸಂಪದಗಳು ಭೋಗೋಪಭೋಗಗಳು ದೊರಕುವವು. ಆದುದರಿಂದ ಮನುಷ್ಯರು ವಿಶೇಷವಾಗಿ ಅನ್ನದಾನವನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಅನ್ನದಾನದ ಪ್ರಶಂಸೆ ಎಂಬ ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು*



## ಜಲದಾನ — ಅಧ್ಯಾಯ - ೨೮

**ಮಹಾದೇವ :-** ಜಲದಾನವೂ ಕೂಡ ದಾನಗಳಲ್ಲಿ ಉತ್ತಮ ಎನಿಸಿದೆ. ಆದುದರಿಂದ ಮನುಷ್ಯನು ಕೆರೆ ಕಾಲುವೆ ಹೊಂಡ ಹೊಕ್ಕರಣಿ ಸರೋವರ ಮುಂತಾದವುಗಳನ್ನು ತೋಡಿಸಿ ಜನರಿಗೆ ನೀರನ್ನು ಒದಗಿಸಬೇಕು. ಯಾವನು ನಿರ್ಮಿಸಿದ ಜಲಾಶಯದಲ್ಲಿನ ನೀರನ್ನು ಹಸುಗಳು ಕುಡಿಯುವವೋ ಬಡವರು, ಬಲ್ಲಿದರು, ಭಿಕ್ಷುಕರು, ಬ್ರಾಹ್ಮಣರು, ಬಂಧುಭಾಂದವರು ಸ್ನಾನಪಾನಾದಿಗಳನ್ನು ಮಾಡುವರೋ ಮತ್ತು ಬೇಸಿಗೆಯ ಕಾಲದಲ್ಲಿ ಸಿಹಿ ನೀರನ್ನು ಕುಡಿದು ತೃಪ್ತಿಪಡುವರೋ ಆ ಮನುಷ್ಯನು ತನ್ನ ಆಯುಷ್ಯದಲ್ಲಿಯೇ ದುಃಖವನ್ನು ಕಾಣುವದಿಲ್ಲ. ಮುಂದೆ ಮರಣೋತ್ತರ ಕಾಲದಲ್ಲಿ ನರಕವನ್ನು ನೋಡುವದಿಲ್ಲ. ಯಾವುದಾದರೂ ದೇಶದಲ್ಲಿ ಅಥವಾ ಹೊಲದಲ್ಲಿ ನೀರಿನ ಕೆರೆ, ಹೊಂಡ, ಬಾವಿ ಕಟ್ಟಿಸಿದವನು ಮೂರು ಲೋಕಗಳಲ್ಲಿಯೇ ಪೂಜಿತನಾಗುತ್ತಾನೆ. ಯಾವ ಕೆರೆ ಅಥವಾ ಸರೋವರದಲ್ಲಿ ಮಳೆಗಾಲದಲ್ಲಿ ಮಾತ್ರ ನೀರು ತುಂಬಿದ್ದರೆ ಅಂಥ ಕೆರೆ

ಕಡಿಸಿದ ಮನುಷ್ಯನಿಗೆ ಅಗ್ನಿಹೋತ್ರದ ಫಲ. ಹೇಮಂತ, ಶಿಶಿರ ಋತುಗಳಲ್ಲಿ ನೀರು ನಿಲ್ಲುವ ಜಲಾಶಯ ನಿರ್ಮಿಸಿದವನಿಗೆ ಸಾವಿರ ಗೋದಾನ ಫಲ. ಬೇಸಿಗೆಯಲ್ಲಿಯೂ ನೀರು ಬತ್ತದಂಥ ಸಮೃದ್ಧವಾದ ನೀರಿನಿಂದ ತುಂಬಿ ತುಳುಕುವ ದೊಡ್ಡ ಜಲಾಶಯವನ್ನು ನಿರ್ಮಿಸಿದವನಿಗೆ ಅಶ್ವಮೇಧ ಮಾಡಿದ ಫಲ.

## ಮರ ನೆಟ್ಟ ಪುಣ್ಯ

ಮರಗಳನ್ನು ನೆಟ್ಟು ಬೆಳೆಸಿದವರ ಹಿಂದುಮುಂದಿನ ತಲೆಮಾರಿನ ಪಿತೃಗಳೆಲ್ಲರೂ ಉದ್ಧೃತರಾಗುವರು. ಮರಗಳು ಪುಷ್ಪಗಳಿಂದ ದೇವತೆಗಳನ್ನೂ ಎಲೆಗಳಿಂದ ಪಿತೃಗಳನ್ನೂ, ನೆರಳಿನಿಂದ ಎಲ್ಲ ಮಾನವರನ್ನೂ ಪೂಜಿಸುತ್ತವೆ. ಮರಗಳು ತಮ್ಮ ಹಣ್ಣು, ಕಾಯಿ, ತೊಗಟೆ, ನೆರಳು, ಮುಂತಾದವುಗಳಿಂದ ಎಲ್ಲ ಮಾನವರನ್ನು ಸಂತೋಷಗೊಳಿಸುತ್ತವೆ. ಕೆರೆ ಕಟ್ಟಿಸಿದವರಿಗೂ ಮರ ಬೆಳೆಸಿದವರಿಗೂ ಸ್ವರ್ಗಲೋಕದಿಂದ ಎಂದಿಗೂ ಚ್ಯುತಿಯೇ ಇಲ್ಲ.

## ಸತ್ಯದ ಮಹಿಮೆ

**ಸತ್ಯಮೇವ ಪರಂ ಬ್ರಹ್ಮ ಸತ್ಯಮೇವ ಪರಂ ತಪಃ ।**
**ಸತ್ಯಮೇವ ಪರೋಯಜ್ಞಃ ಸತ್ಯಮೇವ ಪರಂ ಶ್ರುತಂ ॥**

ಸತ್ಯವೇ ಪರಬ್ರಹ್ಮ. ಸತ್ಯವನ್ನು ಮಾತಾಡುವದೇ ದೊಡ್ಡ ತಪಸ್ಸು. ಸತ್ಯವೇ ದೊಡ್ಡಯಜ್ಞ. ಸತ್ಯವೇ ದಿವ್ಯಜ್ಞಾನ. ಸತ್ಯವನ್ನು ನುಡಿಯುವ ಮನುಷ್ಯನು ಎಲ್ಲ ದೇವತೆಗಳನ್ನು ಪೂಜಿಸಿದಂತೆ ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದಂತೆ. ಯಾರೂ ಎಂದೂ ಸುಳ್ಳನ್ನು ಮಾತನಾಡುವದಿಲ್ಲವೋ ಅಂಥ ಮನುಷ್ಯರು ಸ್ವರ್ಗಕ್ಕೆ ಹೋಗುತ್ತಾರೆ. ವೇದವೇದಾಂತಗಳನ್ನು ಓದಿದ ಬ್ರಾಹ್ಮಣರು ಸಿಗಬಹುದು. ದಾನ ಧರ್ಮ ಮಾಡುವ ದಾನಿಗಳು ದೊರಕಬಹುದು. ಆದರೆ ಎಂದೂ ಅಸತ್ಯವನ್ನು ನುಡಿಯದ ಸತ್ಯನಿಷ್ಠರಾದ ಮನುಷ್ಯರು ಮಾತ್ರ ಮೂರು ಲೋಕದಲ್ಲಿಯೇ ದುರ್ಲಭ.

## ತಪಸ್ಸಿನ ಮಹಿಮೆ

**ಮಹಾದೇವ:-** ತಪಸ್ಸು ಸರ್ವಶ್ರೇಷ್ಠ, ತಪಸ್ಸಿನಿಂದ ಸ್ವರ್ಗವು ದೊರಕುತ್ತದೆ. ಕೀರ್ತಿಯು ಸಿಗುತ್ತದೆ. ಮೋಕ್ಷವನ್ನು ಕೂಡ ತಪಸ್ಸಿನಿಂದ ಸಂಪಾದಿಸಬಹುದು. ಜ್ಞಾನ ವಿಜ್ಞಾನ, ಐಶ್ವರ್ಯ, ಸೌಂದರ್ಯ, ಸೌಭಾಗ್ಯ ಎಲ್ಲವನ್ನೂ ತಪಸ್ಸಿನಿಂದ ಪಡೆಯಬಹುದು. ತಪಸ್ಸನ್ನು ಮಾಡದಿದ್ದವರಿಗೆ ಯಾವ ಪುಣ್ಯಲೋಕವೂ ದೊರಕಲಾರದು. ಶೆರೆ ಕುಡಿಯುವವರು, ಪರಸ್ತ್ರೀಗಮನ ಮಾಡುವವರು. ಬ್ರಹ್ಮಹತ್ಯೆ ಮಾಡಿದವರು, ಗುರುಪತ್ನಿಯೊಡನೆ ಸರಸವಾಡಿದವರು ತಪಸ್ಸಿನಿಂದ ಮುಕ್ತಿ ಕಾಣುವರು. ಇಂದ್ರ, ಸ್ವರ್ಗ ಸಿಂಹಾಸನ ದೊರಕಿಸಿಕೊಂಡಿದ್ದು ತಪಸ್ಸಿನಿಂದ. ಸರ್ವೇಶ್ವರನಾದ ವಿಷ್ಣುವನ್ನು ಕುರಿತು ರುದ್ರದೇವನು ಸ್ಥಾನುವಿನಂತೆ (ಗಿಡದ ಬೊಡ್ಡೆ) ನಿಂತು ತಪಸ್ಸು ಮಾಡಿದ್ದರಿಂದ ಸ್ಥಾನು ಎನಿಸಿದ. ಅದರಂತೆ ಬ್ರಹ್ಮ, ಅಗ್ನಿ, ಇಂದ್ರ, ಮುಂತಾದ ದೇವತೆಗಳು ತಪಸ್ಸುಮಾಡಿ ಮಹಾಮಹಿಮೆಯನ್ನು ಹೊಂದಿದರು. ಇದರಂತೆ ಎಂಬತ್ತಾರುಸಾವಿರ ಊರ್ಧ್ವರೇತಸ್ಕರಾದ ಮಹಾಮುನಿಗಳು ಶ್ರೀಹರಿಯನ್ನು ಉದ್ದೇಶಿಸಿ ಘೋರ ತಪಸ್ಸನ್ನು ಮಾಡಿ ಈಗ ಸ್ವರ್ಗದಲ್ಲಿ ದೇವತೆಗಳೊಂದಿಗೆ ಸುಖ ಸೌಭಾಗ್ಯಗಳನ್ನು

ಅನುಭವಿಸುತ್ತಲಿದ್ದಾರೆ. ಎಂಟೂ ದಿಕ್ಪಾಲಕರೂ ಸೂರ್ಯಚಂದ್ರರೂ ತಪಃಪ್ರಭಾವದಿಂದಲೇ ಲೋಕಪಾಲನ. ಲೋಕಪ್ರಕಾಶನಾದಿ ಕಾರ್ಯಗಳನ್ನು ನಿರ್ವಿಘ್ನರಾಗಿ ನಡೆಸುತ್ತಲಿದ್ದಾರೆ. ಅಂತರಿಕ್ಷದಲ್ಲಿ ಗ್ರಹಗಳು ಬೆಳಗುವುದು ತಪಸ್ಸಿನಿಂದ. ನಕ್ಷತ್ರಗಳು ಹೊಳೆಯುವದು ತಪಸ್ಸಿನಿಂದ. ಎಲ್ಲ ಮಹಾಪುರುಷರು ಮಹಾಕಾರ್ಯಗಳನ್ನು ಮಾಡುವದು ಶ್ರೀಹರಿಯ ಉದ್ದೇಶದಿಂದ ಮಾಡಿದ ತಮ್ಮ ತಮ್ಮ ತಪೋಬಲದಿಂದಲೇ.

**ಸರ್ವಂಚ ತಪಸ್ಯಾಭ್ಯೇತಿ ಸರ್ವಂಚ ಸುಖಮಶ್ನುತೇ ।**

ವಿಷ್ಣು ಪ್ರೀತಿಗಾಗಿ ತಪಸ್ಸನ್ನು ಆಚರಿಸಿದ ಮನುಷ್ಯನು ತಪಸ್ಸಿನಿಂದ ಬಯಸಿದ್ದನ್ನೆಲ್ಲ ಪಡೆಯುತ್ತಾನೆ. ಸಕಲ ವಿಧವಾದ ಸುಖೋಪಭೋಗಗಳನ್ನು ಅತ್ರ ಪರತ್ರಚ ಸಮನಾಗಿಯೇ ಹೊಂದುತ್ತಾನೆ.

**ತಪಸ್ತಪತಿಯೋರಣ್ಯೇ ವನಮೂಲ ಫಲಾಶನಃ ।**
**ಯೋಧೀತೇ ಶ್ರುತಿಮೇವಾದೌ ಸಮಂ ಸ್ಯಾತ್ ತಪಸಾ ಫಲಮ್ ॥**

ಅರಣ್ಯದಲ್ಲಿ ಇದ್ದು, ಕಂದಮೂಲ ಫಲಗಳನ್ನು ತಿಂದು ತಪಸ್ಸನ್ನು ಮಾಡುವ ಮುನಿಗೂ, ಮನೆಯಲ್ಲಿ ಇದ್ದು ವೇದಾಧ್ಯಯನ ಮಾಡುವ ಮುನಿಗೂ ಸಮಾನವಾದ ತಪಸ್ಸಿನ ಫಲವು ದೊರಕುವದು.

**ಶ್ರುತೇರಧ್ಯಾಪನಾತ್ ಪುಣ್ಯಂ ಯದಾಪ್ನೋತಿ ದ್ವಿಜೋತ್ತಮಃ ।**
**ತದ್ಧ್ಯಾನ ತಪಸೋರ್ಜಪ್ಯಾದ್ ದ್ವಿಗುಣಂ ಫಲಮಶ್ನುತೇ ॥**

ತಪಸ್ಸು, ಧ್ಯಾನ ಜಪಗಳಿಂದ ಬರುವ ಪುಣ್ಯದ ಎರಡುಪಟ್ಟು ಪುಣ್ಯವನ್ನು ಬ್ರಾಹ್ಮಣನು ವೇದಶಾಸ್ತ್ರಗಳ ಅಧ್ಯಾಪನ ಪಾಠಪ್ರವಚನಗಳಿಂದ ಪಡೆಯುತ್ತಾನೆ.

**ತಪ್ಯಮಾನಸ್ತಪೋಜ್ಞಾನಂ ಯೋಧಾರಯತಿ ಶಾಸ್ತ್ರತಃ ।**
**ಸಂಬೋಧಯತಿ ಲೋಕಂಚ ತಸ್ಮಾತ್ ಪೂಜ್ಯತಮೋ ಗುರುಃ ॥**

ಶಾಸ್ತ್ರಗಳನ್ನು ಸರಿಯಾಗಿ ಕಲಿತು ಅಧ್ಯಯನ ರೂಪವಾದ ಜ್ಞಾನರೂಪ ತಪಸ್ಸನ್ನು ತಪಿಸುತ್ತ ಜನರಿಗೆಲ್ಲ ಆ ದಿವ್ಯ ತತ್ವಜ್ಞಾನವನ್ನು ತಿಳಿಸಿ ಹೇಳುವ ಗುರುವು ಈ ಜಗತ್ತಿನಲ್ಲಿ ಎಲ್ಲರಿಗಿಂತಲೂ ಅತ್ಯಂತ ಪೂಜನೀಯನಾಗಿದ್ದಾನೆ.

**ಸರ್ವೇಷಾಂಚಪಾತ್ರಾಣಾಂ ಶ್ರೇಷ್ಠ ಪಾತ್ರಂ ಪುರಾಣವಿತ್ ।**
**ಪತನಾತ್ ತ್ರಾಯತೇ ಯಸ್ಮಾತ್ ತಸ್ಮಾತ್ ಪಾತ್ರಮುದಾಹೃತಂ ॥**

ಎಲ್ಲ ಪಾತ್ರಗಳಲ್ಲಿಯೂ ಪುರಾಣಗಳನ್ನು ಸರಿಯಾಗಿ ತಿಳಿದುಕೊಂಡು ಪಂಡಿತನಾದ ಪುರಾಣಜ್ಞಾನಿಯು ಒಳ್ಳೆಯ ಸತ್ಪಾತ್ರ ಎನಿಸುತ್ತಾನೆ. ಜನರಿಗೆ ನರಕದಲ್ಲಿ ಪತನವಾಗುವುದನ್ನು ತಪ್ಪಿಸುವುದರಿಂದ ಪುರಾಣ ಪಂಡಿತನು ಒಳ್ಳೆಯ ಪಾತ್ರ ಎನಿಸುವನು. ಅಂಥ ಸತ್ಪಾತ್ರಕ್ಕೆ ಧನ, ಧಾನ್ಯ, ಬಂಗಾರ, ವಸ್ತ್ರ, ಹಸು, ಎಮ್ಮೆ, ಮುಂತಾದವುಗಳನ್ನು ದಾನ ಕೊಟ್ಟವನು ಅಶ್ವಮೇಧ ಫಲವನ್ನು ಹೊಂದುತ್ತಾನೆ. ಯೋಗ್ಯನಾದ ಪೌರಾಣಿಕನಿಗೆ ಒಳ್ಳೆ ಬೆಳೆ ಬರುವ ಹೊಲವನ್ನು ದಾನ ನೀಡಿದವನು. ದಿವ್ಯ ವಿಮಾನದಲ್ಲಿ ಪ್ರಯಾಣ ಮಾಡುತ್ತಾನೆ ಸ್ವರ್ಗಾದಿ ಪುಣ್ಯಲೋಕಗಳಿಗೆ.

**ನಯಜ್ಞೈಸ್ತುಷ್ಟಿ ಮಾಯಾಂತಿ ದೇವಾಃ ಪ್ರೋಕ್ಷಣಕೈರಪಿ ।**
**ಬಲಭಿಃ ಪುಷ್ಪಪೂಜಾಭಿಃ ಯಥಾ ಪುಸ್ತಕ ವಾಚನೈಃ ॥**

ದೇವತೆಗಳು ಗ್ರಂಥಗಳ ಪಠಣ, ಪ್ರವಚನ ಪಾರಾಯಣ, ಉಪನ್ಯಾಸ, ಪಾಠ, ಬೋಧನಾದಿಗಳಿಂದ ಪ್ರೀತರಾಗುವಷ್ಟು ಯಜ್ಞಯಾಗಾದಿಗಳಿಂದ ಪ್ರೀತರಾಗುವದಿಲ್ಲ. ಬಲಿ ನೀಡುವುದರಿಂದ ಸಂತುಷ್ಟರಾಗುವದಿಲ್ಲ. ಸಂಪ್ರೋಕ್ಷಣಾದಿಗಳಿಂದಾಗಲೀ, ಹೂವಿನಿಂದ ಮಾಡಿದ ಪೂಜೆಗಳಿಂದಾಗಲೀ ಪ್ರಸನ್ನರಾಗುವದಿಲ್ಲ.

**ಅಶ್ವಮೇಧ ಸಹಸ್ರಸ್ಯ ಯತ್ ಫಲಂ ಸಮುದಾಹೃತಂ ।**
**ತತ್ ಫಲಂ ಸಮವಾಪ್ನೋತಿ ದೇವಾಗ್ರೇ ಯೋ ಜಯಂ ಪಠೇತ್ ॥**

ದೇವರ ಎದುರು ಭಾಗವತ, ಭಾರತ ಮೊದಲಾದ ಜಯಪ್ರದವಾದ ಪುರಾಣಗಳನ್ನು ಪ್ರವಚನ ಮಾಡಿದರೆ ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ.

**ಇತಿಹಾಸ ಪುರಾಣಾಭ್ಯಾಂ ವಿಷ್ಣೋರಾಯತನೇ ಶುಭಂ ।**
**ನಾನ್ಯತ್ ಪ್ರೀತಿ ಕರಂ ವಿಷ್ಣೋಸ್ತಥಾ ನ್ಯೇಷ್ಯಾಂ ದಿವೌಕಸಾಂ ॥**

ವಿಷ್ಣುಮಂದಿರದಲ್ಲಿ ಇತಿಹಾಸ, ಪುರಾಣಗಳ ಪಾಠಪ್ರವಚನಾದಿಗಳಿಗಿಂತ ಮಿಗಿಲಾಗಿ ಶ್ರೀಹರಿಗೆ ಬೇರೆ ಯಾವ ಪ್ರೀತಿಕಾರಕವಾದ ಕಾರ್ಯವು ಇರುವದಿಲ್ಲ. ಉಳಿದ ದೇವತೆಗಳಿಗೂ ಅದೇ ಪ್ರೀತಿಕಾರಕ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಜಲದಾನ ಎಂಬ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*



## ಧರಾಪಾಲ ರಾಜನ ವೃತ್ತಾಂತ

**ಅಧ್ಯಾಯ - ೨೯**

**ಮಹಾದೇವ:-** ಪುರಾಣವಾಚನ ಪರಮ ಪುಣ್ಯ. ಮತ್ತು ಸರ್ವಪಾಪ ಪರಿಹಾರಕ. ಈ ವಿಷಯದಲ್ಲಿ ನಾನು ನಿಮಗೆ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿರಿ.

ಹಿಂದೆ ಸನತ್ಕುಮಾರನು ಲೋಕಪಿತಾಮಹನಾದ ಬ್ರಹ್ಮದೇವರನ್ನು ನಮಸ್ಕರಿಸಿ ಈ ಆಖ್ಯಾನವನ್ನು ಹೇಳಿದ.

**ಸನತ್ಕುಮಾರ :-** ನಾನು ಒಮ್ಮೆ ಯಮಧರ್ಮನನ್ನು ನೋಡಲು ಅವನ ರಾಜಧಾನಿಯಾದ ಸಂಯಮನೀ ಪುರಕ್ಕೆ ಹೋಗಿದ್ದೆ. ಅವನನ್ನು ಕಂಡು ವೇದೋಕ್ತ ಮಂತ್ರಗಳಿಂದ ಅವನನ್ನು ಸ್ತುತಿಸಿದೆ. ಅನಂತರ ಒಂದು ಸುಖಾಸನದಲ್ಲಿ ನಾನು ಕುಳಿತು ಬಳಿಕ ಅಲ್ಲಿ ಒಂದು ಆಶ್ಚರ್ಯವನ್ನು ಕಂಡೆ. ಆಗ ಅಲ್ಲಿಗೆ ಒಂದು ಬಂಗಾರದ ವಿಮಾನ ಬಂದಿತು. ಅದರ ಸುತ್ತಲೂ ಕಿರುಗಂಟೆಗಳ ಮಾಲೆಗಳು ಕಿಂಕಿಣಿನಾದ ಮಾಡುತ್ತಿದ್ದವು. ಅದರ ಮಧ್ಯದಲ್ಲಿ ವೈಢೂರ್ಯ ರತ್ನಗಳಿಂದ ಚಿಕ್ಕಚಿಕ್ಕ ವೇದಿಕೆಗಳನ್ನು ನಿರ್ಮಿಸಿದ್ದರು. ನಡನಡುವೆ ಮುತ್ತುರತ್ನಗಳನ್ನು ಅಲ್ಲಲ್ಲಿ ಕೆತ್ತಲಾಗಿದ್ದಿತು. ಇಂಥ ಸುವರ್ಣ ವಿಮಾನರೂಢನಾಗಿ ಅಲ್ಲಿಗೆ ಬಂದ ಆ ಪುರುಷನನ್ನು ನೋಡಿ ತಕ್ಷಣದಲ್ಲಿ ಧರ್ಮರಾಜ

ಎದ್ದುನಿಂತ. ಅವರ ಬಲಗೈ ಹಿಡಿದು ಉಚ್ಚಾಸನದ ಮೇಲೆ ಕೂಡಿಸಿದ. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ಮತ್ತು ನುಡಿದ - ''ಧರ್ಮದರ್ಶಿಗಳೇ, ನಿಮಗೆ ಸುಸ್ವಾಗತ. ನಿಮ್ಮ ದರ್ಶನದಿಂದ ನಾನು ಪುನೀತನಾದೆ. ನೀವು ನನ್ನ ಸಮೀಪದಲ್ಲಿಯೇ ಆಸೀನರಾಗಿರಿ. ನನಗೆ ಒಳ್ಳೆಯ ಜ್ಞಾನವನ್ನು ನೀಡಿರಿ. ಅನಂತರ ಮತ್ತೆ ಬ್ರಹ್ಮದೇವರು ಇದ್ದಲ್ಲಿಗೆ ತೆರಳುವಿರಂತೆ.

ಅಷ್ಟರಲ್ಲಿ ಬೇರೆಯೊಬ್ಬ ಪುರುಷನು ಇನ್ನೊಂದು ವಿಮಾನದಲ್ಲಿ ಏರಿಕೊಂಡು ಅಲ್ಲಿ ಬಂದ. ಅವನನ್ನು ಕಂಡು ಧರ್ಮರಾಜನು ಅವನು ಇದ್ದಲ್ಲಿಗೆ ಬಂದು ಅಲ್ಲಿಯೇ ಅವನನ್ನು ಪೂಜಿಸಿದ. ಆಗ ನಾನು ಕೌತುಕಭರಿತನಾಗಿ ಧರ್ಮರಾಜನನ್ನು ಕೇಳಿದೆ.

**ಸನತ್ಕುಮಾರ:-** ಧರ್ಮದೇವತೆಯೇ, ಈ ಮನುಷ್ಯನು ಯಾವ ಪುಣ್ಯಕರ್ಮ ಮಾಡಿದ್ದಾನೆ? ಇವನನ್ನು ನೋಡಿ ನಿನಗೆ ಇಷ್ಟು ಆನಂದ ಏಕೆ ಆಗಿದೆ? ಈ ಎರಡನೇ ಮನುಷ್ಯನು ಯಾರು? ದೇವಶ್ರೇಷ್ಠನಾದ ನೀನು ಪೂಜಿಸಬೇಕಾದರೆ ಈಗ ವಿಮಾನದಲ್ಲಿ ಕುಳಿತು ಆಗಮಿಸಿದ ಈ ಪುರುಷಶ್ರೇಷ್ಠರು ಯಾರು? ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವಾಧಿದೇವತೆಗಳು ಕೂಡ ನಿನ್ನನ್ನು ಗೌರವಿಸುತ್ತಾರೆ. ನೀನು ಪೂಜೆ ಮಾಡಬೇಕಾದರೆ ಈ ಇಬ್ಬರೂ ಪುರುಷರು ಎಂಥ ಸತ್ಕರ್ಮ ಮಾಡಿರುವರು?

**ಯಮಧರ್ಮ:-** ಪೃಥ್ವೀಮಂಡಲದಲ್ಲಿ ವಿದಿಶಾ ಎಂಬ ಪಟ್ಟಣವು ಇರುತ್ತದೆ. ಅಲ್ಲಿ ಹಿಂದೆ ಧರಾಪಾಲ ಎಂಬ ರಾಜನು ಇದ್ದ. ಆ ರಾಜನು ವಿದಿಶಾನಗರವನ್ನು ಆಳುತ್ತಲಿರುವಾಗ ಅಲ್ಲಿ ಒಂದು ಘಟನೆ ನಡೆಯಿತು.

ಪೂರ್ವಕಾಲದಲ್ಲಿ ಪಾರ್ವತಿದೇವಿಯು ಒಬ್ಬ ಗಣಾಧೀಶನನ್ನು ಮಹಾದೇವರ ಬಾಗಿಲು ಕಾಯಲು ಕುಳ್ಳಿರಿಸಿದ್ದಳು. ನನ್ನ ಹೊರತು ಬೇರೆ ಯಾವ ಸ್ತ್ರೀಯನ್ನೂ ಒಳಗೆ ಮಹಾದೇವನು ಇದ್ದಲ್ಲಿ ಬಿಡಬೇಡ ಎಂದು ಆಜ್ಞೆಯನ್ನು ವಿಧಿಸಿದ್ದಳು. ಆದರೆ ಆ ಗಣಾಧೀಶನು ಬೇರೆ ಒಬ್ಬ ಸ್ತ್ರೀಯನ್ನು ಒಳಗೆ ಬಿಟ್ಟಿದ್ದರಿಂದ ದೇವಿಯು ಕುಪಿತಳಾಗಿ ನೀನು ಹನ್ನೆರಡು ವರ್ಷ ಒಂದು ನರಿಯಾಗಿ ಜನಿಸು ಎಂದು ಶಾಪಕೊಟ್ಟಳು. ಮಹಾದೇವಿಯ ಶಾಪದಿಂದ ಅವನು ನರಿಯಾಗಿ ನೆಲದ ಮೇಲೆ ಹನ್ನೆರಡು ವರ್ಷ ಅಲೆದಾಡಿದ. ಕೊನೆಗೆ ಪಾರ್ವತಿಯು ವೇತಸೀ, ವೇತ್ರವತೀ ನದಿಗಳ ಸಂಗಮದಲ್ಲಿ ಸ್ನಾನ ಮಾಡಿದರೆ ನೀನು ಈ ನರಿಯ ಯೋನಿಯಿಂದ ಮುಕ್ತನಾಗುವಿ ಎಂದು ಆಗಲೇ ಉಶ್ಶಾಪ ಕೊಟ್ಟಿದ್ದಳು. ಆ ತಾಯಿಯ ಶಾಪಾಕ್ಷರದಂತೆ ಆ ನರಿಯು ಎಲ್ಲ ಕಡೆ ತಿರುಗಾಡಿ ವೇತಸೀ, ವೇತ್ರವತೀ ನದಿಗಳ ಸಂಗಮದ ಸ್ಥಾನಕ್ಕೆ ಬಂದಿತು. ಆ ಪುಣ್ಯತೀರ್ಥದಲ್ಲಿ ಮಿಂದಿತು. ಉಪವಾಸಗೈದಿತು. ಪ್ರಾಣ ಬಿಟ್ಟಿತು. ಅದರಿಂದ ದಿವ್ಯರೂಪವನ್ನು ಧರಿಸಿ ಶ್ರೀಹರಿಯ ಲೋಕಕ್ಕೆ ತೆರಳಿತು. ಇದೆಲ್ಲ ಘಟನೆ ಧರಾಪಾಲ ರಾಜನ ಕಣ್ಣೆದುರೇ ನಡೆಯಿತು. ಅದನ್ನು ನೋಡಿ ವಿಷ್ಣುವಿನಲ್ಲಿ ಅತ್ಯಧಿಕ ಭಕ್ತಿ ಹುಟ್ಟಿದ ಧರಾಪಾಲ ರಾಜನು ಆಗಲೇ ಆ ಕ್ಷೇತ್ರದಲ್ಲಿ ಒಂದು ಭವ್ಯವಾದ ವಿಷ್ಣುಮಂದಿರವನ್ನು ನಿರ್ಮಾಣ ಮಾಡಿದ. ಅದೇ ಕ್ಷೇತ್ರದಲ್ಲಿ ಅವನು ಮರಣಹೊಂದಿದ. ದಿವ್ಯ ದೇಹ ಪ್ರಾಪ್ತವಾಯಿತು ಆ ದೊರೆಗೆ. ಆ ದಿವ್ಯ ಶರೀರದಿಂದಲೇ ಅವನು ತಾನು ಕಟ್ಟಿಸಿದ ಹರಿಮಂದಿರದಲ್ಲಿ ಮಹಾವಿಷ್ಣುವನ್ನ ಪ್ರತಿಷ್ಠೆಗೈದ. ಮತ್ತು ಅದರ ವ್ಯವಸ್ಥೆಗಾಗಿ ಊರಲ್ಲಿನ ಯೋಗ್ಯ ಜನರನ್ನು ನಿಯಮಿಸಿದ. ಪೂಜೆಗಾಗಿ ಯೋಗ್ಯ

ಬ್ರಾಹ್ಮಣರನ್ನು ನಿಯಮಿಸಿದ ಮತ್ತು ವೇದಶಾಸ್ತ್ರ ಪಂಡಿತನಾದ ಒಬ್ಬ ಬ್ರಾಹ್ಮಣನನ್ನು ಪೂಜಿಸಿ, ಸತ್ಕರಿಸಿ ದೇವರ ಎದುರು ಭಾಗವತ, ಭಾರತಾದಿ ಗ್ರಂಥಗಳನ್ನು ಪುರಾಣ ಹೇಳಲು ಗೊತ್ತುಪಡಿಸಿದ ಮತ್ತು ವ್ಯಾಸನಿರ್ಮಿತವಾದ ಪುರಾಣ ಗ್ರಂಥವನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ವಿನಯದಿಂದ ಹೇಳಿದ, ಆ ಪುರಾಣ ವಾಚಕನನ್ನು ಕುರಿತು.

**ರಾಜ:-** ಪುರಾಣ ವಾಚಕರೆ, ನಾನು ನಿಮ್ಮ ಎದುರೇ ಈ ವಿಷ್ಣುಮಂದಿರವನ್ನು ನಿರ್ಮಾಣ ಮಾಡಿಸಿದ್ದೇನೆ. ಈಗ ಈ ದೇವಸ್ಥಾನಕ್ಕೆ ಪುರಾಣ ಪ್ರವಚನ ಕೇಳಲು ನಾಲ್ಕೂ ಜಾತಿಯ ಜನರು ಉತ್ಸಾಹದಿಂದ ಬರುತ್ತಿದ್ದಾರೆ. ನೀವು ಅವರೆಲ್ಲರ ಎದುರು ಪುರಾಣ ಪ್ರವಚನ ಮಾಡಬೇಕು. ಈ ಪುರಾಣ ಪ್ರವಚನ, ಪಾರಾಯಣ, ಪಠಣ ಮುಂತಾದ ಕಾರ್ಯಗಳೆಲ್ಲವೂ ಮುಗಿಯುವವರೆಗೆ ನೀವು ಎಲ್ಲಿಯೂ ಹೋಗಬೇಡಿರಿ. ನಿಮಗೆ ಒಂದು ವರ್ಷಕ್ಕೆ ಬೇಕಾಗುವಷ್ಟು ಧನ, ಧಾನ್ಯ, ಸೌಕರ್ಯವನ್ನು ನಾನು ಕಲ್ಪಿಸಿಕೊಡುತ್ತೇನೆ. ಇದಲ್ಲದೇ ನಿಮಗೆ ದಕ್ಷಿಣಾರೂಪವಾಗಿ ಒಂದು ನೂರು ಬಂಗಾರದ ನಾಣ್ಯಗಳನ್ನು ಕೊಡುತ್ತೇನೆ. ಇದೆಲ್ಲವನ್ನು ನನ್ನ ಶ್ರೇಯಸ್ಸಿಗಾಗಿ ನಾನು ಕೊಡುತ್ತಿದ್ದೇನೆ.

ರಾಜನ ಈ ಬಿನ್ನಹವನ್ನು ಮನ್ನಿಸಿ ಆ ಪಂಡಿತ ಆರಂಭಮಾಡಿದ ತನ್ನ ಪುರಾಣ ಪ್ರವಚನವನ್ನು. ಒಂದು ವರ್ಷದಲ್ಲಿ ಆ ಕಾರ್ಯವು ಸಮಾಪ್ತವಾಯಿತು. ಅನಂತರ ಕೆಲವು ಕಾಲ ಕಳೆದ ನಂತರ ಕಾಲಧರ್ಮಕ್ಕೆ ಅನುಸರಿಸಿ ಆ ಪುರಾಣ ವಾಚಕ ಮರಣ ಹೊಂದಿದ. ವಿಷ್ಣುಮಂದಿರದಲ್ಲಿ ಒಂದು ವರ್ಷಕಾಲ ಪುರಾಣವನ್ನು ಹೇಳಿದ ಆ ಪೌರಾಣಿಕ ಪಂಡಿತನನ್ನು ಕರೆತರಲು ವೈಕುಂಠದಿಂದ ವಿಷ್ಣುವಿನ ಆಜ್ಞೆಯಂತೆ ದಿವ್ಯವಿಮಾನ ಬಂದಿತು. ಭೂಲೋಕದಿಂದ ವಿಷ್ಣುವಿನ ಸನ್ನಿಧಾನದಲ್ಲಿ ಪುರಾಣ ಹೇಳಿದ ಆ ಬ್ರಾಹ್ಮಣನನ್ನು ನಾನು ಆ ವೈಕುಂಠ ಲೋಕದ ವಿಮಾನದಿಂದ ಇಲ್ಲಿಗೆ ಕರೆಸಿಕೊಂಡು ಸತ್ಕಾರವನ್ನು ಮಾಡಿದೆ. ನೀನು ಮೊದಲಿಗೆ ಕಂಡ, ವಿಮಾನದಿಂದ ಇಲ್ಲಿಗೆ ಬಂದ ಮಹಾಪುರುಷ ಭೂಲೋಕದ ಪುರಾಣ ವಾಚನ ಮಾಡಿದ ಅದೇ ಪುಣ್ಯಾತ್ಮ.

ದೇವ ಮಂದಿರದಲ್ಲಿ ಪುರಾಣ ಗ್ರಂಥಗಳನ್ನು ಸರಿಯಾಗಿ ತಿಳಿದುಕೊಂಡು ಜನರಿಗೆಲ್ಲ ಬೋಧಪ್ರದವಾಗುವಂತೆ ಪಠನ ಪಾರಾಯಣ ಪ್ರವಚನ ಮುಂತಾದ ಜ್ಞಾನ ಕಾರ್ಯಮಾಡುವುದರಿಂದ ಎಂಥ ಮಹತ್‌ಪುಣ್ಯವು ಬರುವದು ಎನ್ನುವದಕ್ಕೆ ಮೊದಲು ಇಲ್ಲಿಗೆ ವಿಮಾನಾರೂಢನಾಗಿ ಬಂದ ಸತ್ಪುರುಷನೇ ಸಾಕ್ಷಿ.

ಇನ್ನು ವಿಷ್ಣುದೇವಾಲಯಗಳಲ್ಲಿ ಇಂಥ ಪುರಾಣಗಳನ್ನು ಶ್ರವಣಮಾಡುವದರಿಂದ ಎಂಥ ಫಲ ಪ್ರಾಪ್ತಿಯಾಗುವದು ಎನ್ನುವದಕ್ಕೆ ಬೇರೊಂದು ವಿಮಾನದಿಂದ ಇಲ್ಲಿಗೆ ಬಂದ ಇನ್ನೊಬ್ಬ ಮಹಾಪುರುಷ ಸಾಕ್ಷೀಭೂತನಾಗಿದ್ದಾನೆ.

ಆ ವಿಷ್ಣುಮಂದಿರದಲ್ಲಿ ಮೊದಲನೆಯ ಮಹಾಪುರುಷ ಪುರಾಣವನ್ನು ಪ್ರವಚನ ಮಾಡುತ್ತಿರುವಾಗ ಅವನ ಮುಖದಿಂದ ದಿವ್ಯ ಕಥಾರೂಪವಾದ ವಿಷ್ಣುಮಹಿಮೆಯನ್ನು ಕೇಳಿ ಒಬ್ಬ ಮನುಷ್ಯನಿಗೆ ಭಗವಂತನಲ್ಲಿ ಅತಿಶಯಿತವಾದ ಭಕ್ತಿ ಹುಟ್ಟಿತು. ಅವನು ಏಕಾಗ್ರಚಿತ್ತದಿಂದ ಆ ಸಮಗ್ರ ಪುರಾಣವನ್ನು ಆ ಪೌರಾಣಿಕನ ಮುಖದಿಂದ ಶ್ರವಣ ಮಾಡಿದ. ಆ ಸಂಪೂರ್ಣ ಪುರಾಣ ಶ್ರವಣವನ್ನು ಮಾಡಿ ಪುರಾಣವನ್ನು ಹೇಳಿದ ಆ ಪೌರಾಣಿಕನಿಗೆ ಒಂದು ಮಾಸಿ ತೂಕದ ಬಂಗಾರವನ್ನು ದಾನವಾಗಿ ನೀಡಿದ. ಅವನು

ಸತ್ಪಾತ್ರರಲ್ಲಿ ದಾನ ಮಾಡಿದ್ದರಿಂದ ಅವನನ್ನು ಕೂಡ ಬೇರೊಂದು ದಿವ್ಯ ವಿಮಾನದಲ್ಲಿ ನಾನು ಇಲ್ಲಿಗೆ ಕರೆತಂದಿದ್ದೇನೆ. ಪುರಾಣ ಹೇಳಿದ ಪ್ರವಚನಕಾರನಿಗೆ ಭಕ್ತಿಯಿಂದ ಸತ್ಕಾರಮಾಡಿ, ಗೌರವಾದರಗಳನ್ನು ಸಲ್ಲಿಸಿ, ಯಥಾಶಕ್ತಿ ದಾನ ದಕ್ಷಿಣೆ ಸುವರ್ಣಾದಿಗಳನ್ನು ನೀಡಿದವರಿಗೆ ಎಂಥ ಪುಣ್ಯಪ್ರಾಪ್ತಿಯಾಗುತ್ತದೆ ಎಂಬುವದಕ್ಕೆ ಆ ಎರಡನೆಯ ಮಹಾಪುರುಷನು ಸಾಕ್ಷೀಭೂತನಾಗಿದ್ದಾನೆ. ಆದುದರಿಂದ ಸ್ವರ್ಗಾದಿ ಪುಣ್ಯಲೋಕ ಪ್ರಾಪ್ತಿ ಮತ್ತು ಮೋಕ್ಷಾದಿ ಪುರುಷಾರ್ಥಪ್ರದವಾದ ವಿಷ್ಣುವಿನ ಪರಮ ಪ್ರಸಾದವನ್ನು ಬಯಸುವವರು ವಿಷ್ಣುದೇವಾಲಯದಲ್ಲಿ ಪುರಾಣ, ಗ್ರಂಥಗಳನ್ನು ಎಲ್ಲ ಜನರಿಗೂ ತಿಳಿಯುವಂತೆ ಪ್ರವಚನ ಮಾಡಬೇಕು. ಜನರಿಲ್ಲದಿದ್ದರೆ ತಾನೇ ಅರ್ಥಾನುಸಂಧಾನ ಪೂರ್ವಕವಾಗಿ ಪಠಣ ಪಾರಾಯಣ ಮಾಡಬೇಕು. ಯಾರಾದರೂ ಹರಿಮಂದಿರದಲ್ಲಿ ಪುರಾಣಗಳ ಪ್ರವಚನ ಪಾರಾಯಣ ಮಾಡುತ್ತಿದ್ದರೆ ಶಾಸ್ತ್ರ ಪುರಾಣ ಅಧ್ಯಯನ ಮಾಡಿದ ಶ್ರೀಸಾಮಾನ್ಯರು ಅಲ್ಲಿ ಹೋಗಿ ಕುಳಿತು ಭಕ್ತಿಯಿಂದ ಶ್ರವಣ ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಧರಾಪಾಲ ರಾಜನ ವೃತ್ತಾಂತ ಎಂಬ ಇಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ಗೋಪೀಚಂದನ ಮಾಹಾತ್ಮ್ಯ — ಅಧ್ಯಾಯ - ೩೦

**ಮಹಾದೇವ :-** ದೇವರ್ಷಿಯೆ, ನಾನು ಕಂಡಂಥ ಮತ್ತು ಕೇಳಿದಂಥ ಗೋಪೀಚಂದನದ ಮಹಿಮೆಯನ್ನು ಹೇಳುತ್ತೇನೆ ಕೇಳು. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ ಗೋಪೀಚಂದನವನ್ನು ಯಥಾವಿಧಿ ಯಥಾಸ್ಥಾನದಲ್ಲಿ ಬಳಿದುಕೊಂಡರೆ ಬ್ರಹ್ಮಹತ್ಯೆಯಿಂದ ಮುಕ್ತನಾಗುತ್ತಾನೆ. ಗೋಪೀಚಂದನದಿಂದ ತಿಲಕವನ್ನು ಹಚ್ಚಿಕೊಂಡವನು ಮದ್ಯಪಾನಾದಿ ದೋಷಗಳಿಂದ ಮುಕ್ತನಾಗುತ್ತಾನೆ. ಐಶ್ವರ್ಯವನ್ನು ಬಯಸುವ ವಿಷ್ಣುಭಕ್ತರು ಹನ್ನೆರಡು ನಾಮಗಳನ್ನು ಗೋಪೀಚಂದನದಿಂದ ಧರಿಸಬೇಕು. ಹಣೆಯ ಮೇಲೆ ದಂಡಾಕಾರವಾಗಿ ಎಂದರೆ ಕೋಲಿನಂತೆ ಉದ್ದವಾಗಿ ಗೋಪೀಚಂದನದಿಂದ ನಾಮವನ್ನು ಧರಿಸಬೇಕು. ಎದೆಯ ಮೇಲೆ ಕಮಲದ ಎಲೆಯ ಆಕಾರದಲ್ಲಿ ನಾಮವನ್ನು ಧರಿಸಬೇಕು. ಎರಡೂ ಬಾಹುಗಳ ಮೇಲೆ ವೇಣುಪತ್ರ (ಬಿದಿರಿನ ಎಲೆ) ಆಕಾರದ ನಾಮಗಳನ್ನು ಧರಿಸಬೇಕು. ಉಳಿದ ಎಂಟು ಕಡೆ ದೀಪದಾಕಾರದ ನಾಮಗಳನ್ನು ಧರಿಸಬೇಕು. ಬಲತೋಳಿನ ಮೇಲೆ ನಾಲ್ಕು ಚಕ್ರಗಳನ್ನು, ಕೆಳಗೆ ಮತ್ತು ಆ ಬಲ ತೋಳಿನ ನಾಮದ ಎರಡೂ ಬದಿಗಳಲ್ಲಿ ಎರಡು ಎರಡು ಪದ್ಮಗಳನ್ನು ಧರಿಸಬೇಕು. ಹಾಗೂ ನಾರಾಯಣ ಮುದ್ರೆಯನ್ನು ಬಲತೋಳಿನ ಮೇಲೆ ಎರಡು ಧರಿಸಬೇಕು. ಎಡತೋಳಿನ ಮೇಲ್ಭಾಗದಲ್ಲಿ ಎರಡು ನಾರಾಯಣ ಮುದ್ರೆ, ನಾಲ್ಕು ಶಂಖ ಮುದ್ರೆ, ಒಂದು ಚಕ್ರ, ಎರಡು ಗದೆಗಳನ್ನು ಧರಿಸಬೇಕು. ಹಣೆಯ ಮೇಲೆ ಒಂದು ಗದೆ ಮತ್ತು ಒಂದು ನಾರಾಯಣ ಮುದ್ರೆಯನ್ನು ಧರಿಸಬೇಕು. ಎದೆಯ ಮೇಲೆ ಮೂರು ಚಕ್ರಗಳು ಮಧ್ಯದಲ್ಲಿ ಎರಡೆರಡು ಶಂಖಗಳು ಬಾಹುವಿನಲ್ಲಿ ಧರಿಸಿದಂತೆ

ಹೃದಯದ ಪಕ್ಕದಲ್ಲಿ ಸ್ತನದ ಮೇಲ್ಭಾಗದಲ್ಲಿ ಗದಾಪದ್ಮವನ್ನು ಧರಿಸಬೇಕು. ಬಲಬದಿಯ ಹೃದಯದ ಪಾರ್ಶ್ವದಲ್ಲಿ ನಾಲ್ಕು ಚಕ್ರ ಎಡಬದಿಯ ಹೃದಯದ ಪಾರ್ಶ್ವದಲ್ಲಿ ಮೂರು ಚಕ್ರಗಳು ಮತ್ತು ಎರಡೂ ಕಿವಿಗಳ ಕೆಳಗೆ ಕೊರಳ ಮೇಲೆ ಒಂದೊಂದು ಚಕ್ರವನ್ನು ಧರಿಸಬೇಕು. ಮತ್ತು ಉಳಿದ ನಾಮಗಳ ಮೇಲೆ ಅವರವರ ಸಂಪ್ರದಾಯದ ಪ್ರಕಾರ ಶಿಷ್ಯರು ಹೇಳಿದಂತೆ ಮುದ್ರೆಗಳನ್ನು ಧರಿಸಬೇಕು.

**ಯಥಾರುಚ್ಯ್ಯಥವಾ ಧಾರ್ಯಾ ನತತ್ರನಿಯಮೋಯತಃ ।**
**ಆ ಚಂಡಾಲಾದ್ವಿಂಶುದ್ಧ್ಯಂತಿ ತಿಲಕಸ್ಯೈವ ಧಾರಣಾತ್ ॥**

ಶಂಖಚಕ್ರಾದಿ ಮುದ್ರೆಗಳನ್ನು ತಮಗೆ ತೋರಿದಂತೆ ಹೇಗೆ ಹಚ್ಚಿದರೂ ಸರಿ. ಅದರಲ್ಲಿ ವಿಶೇಷ ನಿಯಮವೇನೂ ಇಲ್ಲ. ಯಾಕೆಂದರೆ ಗೋಪೀಚಂದನದಿಂದ ತಿಲಕಧಾರಣ ಮಾತ್ರದಿಂದಲೇ ಚಂಡಾಲನು ಕೂಡ ಶುದ್ಧನಾಗಿ ಹೋಗುತ್ತಾನೆ.

**ಶಂಖ ಚಕ್ರಧರೋ ವಿಪ್ರೋ ವೇದಾಧ್ಯಯನ ತತ್ಪರಃ ।**
**ಸವೈ ನಾರಾಯಣ ಇತಿ ವೇದೇಚೈವತು ಪಠ್ಯತೇ ॥**

ವೇದವನ್ನು ಓದಿ ಯಾವಾಗಲೂ ಅದರ ಅಧ್ಯಯನದಲ್ಲಿ ತತ್ಪರನಾದ ಶಂಖ ಚಕ್ರಾದಿ ವಿಷ್ಣುವಿನ ಲಾಂಛನಗಳನ್ನು ಧರಿಸಿದ ವಿಪ್ರನು ಸಾಕ್ಷಾತ್ ನಾರಾಯಣನ ಮೂರ್ತಿ ಎಂದು ವೇದದಲ್ಲಿ ಹೇಳಿದ್ದಾರೆ.

**ತಪ್ತಚಕ್ರ ಧರೋ ವಿಪ್ರಃ ಪಂಕ್ತಿ ಪಾವನ ಪಾವನಃ ।**
**ತಸ್ಯಭಕ್ತಿಯುತೋ ಬ್ರಹ್ಮನ್ ಮಹಾಪಾಪೈಃ ಪ್ರಮುಚ್ಯತೇ ॥**

ಬೆಂಕಿಯಲ್ಲಿ ಕಾಯಿಸಿದ ತಪ್ತಚಕ್ರವನ್ನು ಧರಿಸಿದ ಬ್ರಾಹ್ಮಣನು ಪಂಕ್ತಿಪಾವನ. ಎಂದರೆ ಅವನ ಜೊತೆಗೆ ಅವನ ಪಂಕ್ತಿಯಲ್ಲಿ ಕುಳಿತು ಊಟ ಮಾಡಿದ ಪಾಪಿಗಳು ಕೂಡ ಪವಿತ್ರರಾಗುವರು. ತಪ್ತಚಕ್ರವನ್ನು ಧರಿಸಿದ ಬ್ರಾಹ್ಮಣನಲ್ಲಿ ಭಕ್ತಿಮಾಡಿದವನು ಕೂಡ ಪಾಪಚಕ್ರದಿಂದ ಮುಕ್ತನಾಗುತ್ತಾನೆ.

**ಶಂಖಂಚೈವ ತಥಾ ಚಕ್ರಂ ದಕ್ಷಿಣೇಚಾಪಿ ಸವ್ಯತೇ ।**
**ಹಸ್ತೇಧೃತ್ವಾ ವಿಶೇಷೇಣ ಮಹಾ ಪಾಪ್ಯಃ ಪ್ರಮುಚ್ಯತೇ ॥**

ಎಡಗೈ ಬಲಗೈಗಳಲ್ಲಿ ಶಂಖಚಕ್ರಗಳನ್ನು ಧರಿಸಿದವರು ಎಲ್ಲ ಮಹಾಪಾಪಗಳಿಂದ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಗೋಪೀಚಂದನ ಮಾಹಾತ್ಮ್ಯ ಎಂಬ ಮೂವತ್ತನೇಯ ಅಧ್ಯಾಯ ಮುಗಿದುದು*

—o—

**ನಾರದ :-** ಸರ್ವವ್ರತಗಳಲ್ಲಿಯೂ ಪ್ರಧಾನವಾದ ಸಂವತ್ಸರ ಎಂಬ ಹೆಸರಿನ ದೀಪವ್ರತದ ವಿಧಿಯನ್ನೂ ಮಹಿಮೆಯನ್ನೂ ಹೇಳಿರಿ.

**ಮಹಾದೇವ:-** ಬ್ರಹ್ಮಹತ್ಯೆ, ಗೋಹತ್ಯೆ, ಮಿತ್ರಹತ್ಯೆ, ಗುರು ಸ್ತ್ರೀ ಗಮನ ಮುಂತಾದ ಘೋರ ಪಾಪಮಾಡಿದ ಪಾತಕಿಗಳನ್ನು ಮುಕ್ತಿಸೋಪಾನಕ್ಕೆ ಏರಿಸುವ ದೀಪವ್ರತದ ಮಹಿಮೆಯನ್ನು ಹೇಳುತ್ತೇನೆ ಕೇಳು.

ಹೇಮಂತ ಋತುವಿನ ಮೊದಲನೆಯ ಏಕಾದಶಿಯ ದಿನ ಉಷಃಕಾಲದಲ್ಲಿ ಎದ್ದು ನದೀ, ಸಂಗಮ, ತೀರ್ಥ, ಕೆರೆ, ಹೊಂಡ, ಬಾವಿ, ಕೊನೆಗೆ ಮನೆಯಲ್ಲಿಯಾದರೂ ಸ್ನಾನಮಾಡಬೇಕು. ಸ್ನಾನ ಮಾಡುವಾಗ

**ಸ್ನಾತೋಹಂ ಸರ್ವ ತೀರ್ಥೇಷು**
**ತತ್ ಸ್ನಾನಂ ದೇಹಿ ಮೇ ಸದಾ**

ಎಂದು ಹೇಳಬೇಕು. ಅನಂತರ ಸಂಧ್ಯಾ ನಿರ್ಮಾಲ್ಯ ವಿಸರ್ಜನ ಮಾಡಿ, ಮಂತ್ರ ಜಪವನ್ನು ಪೂರೈಸಿ ಪಿತೃಗಳಿಗೆ ತರ್ಪಣ ನೀಡಿ, ಆ ಬಳಿಕ ವಿಧಿಪೂರ್ವಕವಾಗಿ ಲಕ್ಷ್ಮೀನಾರಾಯಣರನ್ನು ಪೂಜಿಸಬೇಕು. ಪೂಜೆಯ ಮೊದಲು ಪಂಚಾಮೃತದಿಂದ ದೇವರಿಗೆ ಸ್ನಾನಮಾಡಿಸಿ ಈ ಮಂತ್ರದಿಂದ ಗಂಧೋದಕದಿಂದ ಅಭಿಷೇಕ ಮಾಡಬೇಕು.

**ಸ್ನಾತೋಸಿ ಲಕ್ಷ್ಮ್ಯಾ ಸಹಿತೋ ದೇವದೇವ ಜಗತ್ಪತೇ ।**
**ಮಾ ಸಮುದ್ಧರ ದೇವೇಶ ಘೋರಾತ್ ಸಂಸಾರ ಬಂಧನಾತ್ ॥**

ಹೀಗೆ ಪ್ರಾರ್ಥಿಸಿ ಪುರುಷಸೂಕ್ತದಿಂದ ಅಭಿಷೇಕವನ್ನು ಸಾಂಗಗೊಳಿಸಿ ಅದೇ ಪುರುಷಸೂಕ್ತದ ಎಲ್ಲ ಋಕ್ಕುಗಳಿಂದ ಲಕ್ಷ್ಮೀನಾರಾಯಣರಿಗೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

**ಓಂ ನಮೋ ಮಚ್ಛ್ಯಾಯ ನಮಃ ಕೂರ್ಮದೇವಾಯ ನಮಃ,**
**ವರಾಹ ದೇವಾಯ ನಮಃ, ನರಸಿಂಹಾಯ ನಮಃ,**
**ವಾಮನಾಯ ನಮಃ, ಪರಶುರಾಮಾಯ ನಮಃ**
**ರಾಮದೇವಾಯ ನಮಃ, ವಿಷ್ಣುದೇವಾಯ ನಮಃ,**
**ಬದ್ಧದೇವಾಯ ನಮಃ, ಕಲ್ಕಿನೇ ನಮಃ**

ಎಂದು ಪಾದದಿಂದ ಶಿರಸ್ಸಿನವರೆಗೆ ತುಳಸೀ ದಳಗಳನ್ನು ಏರಿಸಿ ಕೊನೆಗೆ ಸರ್ವಾತ್ಮನೇ ತುಭ್ಯಂ ನಮಃ ಎಂದು ನಾರಾಯಣ ದೇವರ ತಲೆಯ ಮೇಲೆ ತುಳಸೀದಳವನ್ನು ಏರಿಸಿ ಪೂಜೆಯನ್ನು ಸಲ್ಲಿಸಬೇಕು. ಅನಂತರ

**ವನಸ್ಪತಿ ರಸೋದಿವ್ಯಃ ಸುರಭಿಃ ಗಂಧವಾನ್ ಶುಚಿಃ ।**
**ಧೂಪೋಽಯಂ ದೇವದೇವೇಶ ನಮಸ್ತೇ ಪ್ರತಿಗೃಹ್ಯತಾಂ ॥**

ಎಂಬ ಮಂತ್ರದಿಂದ ಧೂಪವನ್ನು ಬೆಳಗಬೇಕು.

**ದೀಪಸ್ತಮೇ ನಾಶಯತಿ ದೀಪಃ ಕಾಂತಿಂ ಪ್ರಯಚ್ಛತಿ ।**
**ತಸ್ಮಾದ್ ದೀಪಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ॥**
ಎಂಬ ಮಂತ್ರದಿಂದ ದೀಪವನ್ನು ಹಚ್ಚಬೇಕು ದೇವರ ಎದುರು.

**ನೈವೇದ್ಯ ಮಿದಮನ್ನಾದ್ಯಂ ದೇವ ದೇವ ಜಗತ್ಪತೇ ।**
**ಲಕ್ಷ್ಮ್ಯಾಸಹ ಗ್ರಹಾಣತ್ವಂ ಪರಮಾಮೃತ ಮುಕ್ತಮಮ್ ॥**
ಎಂಬ ಮಂತ್ರದಿಂದ ಲಕ್ಷ್ಮೀನಾರಾಯಣರಿಗೆ ನೈವೇದ್ಯವನ್ನು ಸಮರ್ಪಿಸಬೇಕು. ಅನಂತರ ಶಂಖದಲ್ಲಿ ನೀರನ್ನು ಯಾವದಾದರೂ ಒಂದು ಫಲವನ್ನೂ ಹಾಕಿ.

**ಜನ್ಮಾಂತರ ಸಹಸ್ರೇಣ ಯನ್ಮಯಾ ಪಾತಕಂ ಕೃತಂ ।**
**ತತ್ಸರ್ವಂ ನಾಶಮಾಯಾತು ಪ್ರಸಾದಾತ್ತವ ಕೇಶವ ॥**
ಎಂಬ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

ಅನಂತರ ಒಂದು ಹೊಸ ಕೊಡವನ್ನು ತಂದು ಅದರಲ್ಲಿ ಕಂಠದವರೆಗೆ ತುಪ್ಪವನ್ನು ತುಂಬಿ ಲಕ್ಷ್ಮೀನಾರಾಯಣರ ಮುಂದೆ ಇರಿಸಬೇಕು. ಅಷ್ಟು ಶಕ್ತಿ ಆರ್ಥಿಕ ಅನುಕೂಲತೆ ಇಲ್ಲದಿದ್ದರೆ ಎಣ್ಣೆಯಿಂದ ತುಂಬಿದ ಪೂರ್ಣಕುಂಭವನ್ನಾದರೂ ದೇವರ ಮುಂದೆ ಇಡಬೇಕು. ಅದರ ಮೇಲೆ ತಾಮ್ರದ ಅಥವಾ ಮಣ್ಣಿನ ಒಂದು ಪ್ರಣತಿ ಅಥವಾ ಹರಿವಾಣವನ್ನು ಇಟ್ಟು ಅದರ ನೆಟ್ಟ ನಡುವೆ ಒಂಭತ್ತು ಎಳೆಗಳಿಂದ ಮಾಡಿದ ಒಂದು ಬತ್ತಿಯನ್ನು ಇರಿಸಬೇಕು. ಆ ತೈಲಕುಂಭವು ಅಲುಗಾಡದಂತೆ ಗಟ್ಟಿಯಾಗಿ ಇಟ್ಟು ಹೂ, ಗಂಧಗಳಿಂದ ಪೂಜಿಸಿ ದೀಪವನ್ನು ಹಚ್ಚಬೇಕು. ತೈಲ ಕುಂಭದೊಳಗಿಂದ ಎಣ್ಣೆ ಅಥವಾ ತುಪ್ಪವು ಪ್ರಣತಿಯಲ್ಲಿಯೂ ದೀಪದ ಬತ್ತಿಗೆ ತಗುಲವಂತೆ ಬತ್ತಿಗೂ ತುಪ್ಪ ಎಣ್ಣೆಗಳಿಗೂ ಸಂಬಂಧವನ್ನು ಕಲ್ಪಿಸಬೇಕು. ಬಳಿಕ

**ದೀಪಸ್ಸಂವಂತ್ಸರಂ ಯಾವನ್ಮಯಾಯಂ ಪರಿಕಲ್ಪಿತಃ ।**
**ಅಗ್ನಿಹೋತ್ರ ಮವಿಚ್ಛಿನ್ನಂ ಪ್ರೀಯತಾಂ ಮಮ ಕೇಶವಃ ॥**
''ಒಂದು ವರ್ಷದವರೆಗೆ ನಾನು ಭಗವಂತನಿಗೆ ಈ ನಂದಾದೀಪದ ಸೇವೆಯನ್ನು ಮಾಡುತ್ತೇನೆ. ಈ ನನ್ನ ಅಗ್ನಿಹೋತ್ರ ಕಾಯವು ಅವಿಚ್ಛಿನ್ನವಾಗಿ ಈ ನಂದಾದೀಪವು ಎಂದೂ ನಂದದೇ ಬೆಳಗಲಿ. ಈ ನಂದಾದೀಪ ಸೇವೆಯಿಂದ ಕೇಶವನು ಪ್ರೀತನಾಗಲಿ'' ಎಂದು ಲಕ್ಷ್ಮೀನಾರಾಯಣರ ಪ್ರಾರ್ಥನೆಯನ್ನು ಮಾಡಬೇಕು. ಅಂದು ಜಿತೇಂದ್ರಿಯನಾಗಿ ವೇದಶಾಸ್ತ್ರ ಪುರಾಣಗಳ ಪಾರಾಯಣ, ಪ್ರವಚನ ಪಠಣ, ಪಾಠಣ ಮುಂತಾದ ಜ್ಞಾನಕಾರ್ಯಗಳನ್ನು ಮಾಡುತ್ತ ಇರಬೇಕು. ನಾಸ್ತಿಕ, ಪತಿತ, ಪಾಪಿಷ್ಠ, ಪಾಖಂಡಿಗಳ ಜೊತೆ ಮಾತನಾಡಬಾರದು. ರಾತ್ರಿ ಕಾಲದಲ್ಲಿ ನೃತ್ಯ, ವಾದ್ಯ, ಸಂಗೀತ, ಧಾರ್ಮಿಕ ವ್ಯಾಖ್ಯಾನ, ಮಂತ್ರೋಚ್ಚಾರಣಾದಿಗಳಿಂದ ಜಾಗರಣೆ ಮಾಡಬೇಕು. ಆ ಏಕಾದಶಿಯಂದು ಇಡೀ ದಿನ ಹಗಲು ಇರುಳು ಉಪವಾಸ, ಹರಿಕೀರ್ತನೆ, ಜಾಗರ, ಪುರಾಣ, ಪಠಣ ಶ್ರವಣಾದಿಗಳಿಂದ ಲಕ್ಷ್ಮೀನಾರಾಯಣರ ಸೇವೆಗೈದು ಮರುದಿನ ದ್ವಾದಶಿ ದಿನದಂದು ಸ್ನಾನ ದೇವತಾರ್ಚನ ಕಾರ್ಯಗಳನ್ನು ಮಾಡಿ ಯಥಾಶಕ್ತಿ ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸಬೇಕು. ಅನಂತರ ಅವರಿಗೆ ದಾನ ದಕ್ಷಿಣಾದಿಗಳನ್ನಿತ್ತು ವಸ್ತ್ರಾಲಂಕಾರ,

ತಾಂಬೂಲ, ದಕ್ಷಿಣಾದಿಗಳಿಂದ ಪೂಜಿಸಿ ತಾನೂ ಕೂಡ ಪಾರಣೆ ಮಾಡಬೇಕು. ಹೀಗೆ ಒಂದು ವರ್ಷದವರೆಗೆ ಪ್ರತಿಯೊಂದು ಏಕಾದಶಿ ದ್ವಾದಶಿಯ ದಿನ ಉಪವಾಸ, ಜಾಗರ, ಬ್ರಹ್ಮ ಭೋಜನಾದಿಗಳನ್ನು ಆಚರಿಸಬೇಕು. ಒಂದು ಪಲ ತೂಕದ (ತೊಲೆಯ ನೂರನೆಯ ಅಂಶ) ಬಂಗಾರದ ಒಂದು ನಾಲಿಗೆ ಮಾಡಿಸಿ ಅವರಲ್ಲಿ ದೀಪದ ಕುಡಿಯನ್ನು ಇಡಬೇಕು. ಅಥವಾ ಎರಡು ಪಲದ ಬೆಳ್ಳಿಯ ಬತ್ತಿ ಅಥವಾ ದೀಪದ ನಾಲಿಗೆಯನ್ನಾದರೂ ಮಾಡಿಸಬೇಕು. ಲಕ್ಷ್ಮೀನಾರಾಯಣ ಪ್ರತಿಮೆ, ತುಪ್ಪದ ಕೊಡ, ಅದರ ಮೇಲೆ ಮುಚ್ಚುವ ಪಾತ್ರೆ ಇವುಗಳನ್ನು ಯೋಗ್ಯತೆ ಇದ್ದ ಐಶ್ವರ್ಯವಂತರು ಬಂಗಾರದಿಂದಲೂ ಬಡವರು ತಾಮ್ರದಿಂದಲೂ ಅತ್ಯಂತ ದರಿದ್ರರು ಮಣ್ಣಿನಿಂದಾದರೂ ಮಾಡಿಸಬೇಕು. ಸಿರಿವಂತರು ದ್ವಾದಶಿಯ ದಿನ ಹನ್ನೆರಡು ಜನ ಬ್ರಾಹ್ಮಣರನ್ನು ಮಧ್ಯಮ ವರ್ಗದವರು ಆರು ಜನರನ್ನು, ಬಡವರು ಮೂರು ಜನ ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸಬೇಕು. ಈ ವ್ರತ ಪೂಜೆಗಳನ್ನು ಮಾಡಿಸುವ ಬೇರೊಬ್ಬ ಯಾಜ್ಞಿಕ ಬ್ರಾಹ್ಮಣನನ್ನು ಆಹ್ವಾನಿಸಬೇಕು. ಅನಂತರ ಇತಿಹಾಸ ಪುರಾಣಗಳನ್ನು ಬಲ್ಲ, ಧರ್ಮದ ಮರ್ಮಗಳನ್ನು ಅರಿತ, ಶಾಂತ ಸ್ವಭಾವದ, ದೇವಬ್ರಾಹ್ಮಣರನ್ನು ಪೂಜಿಸುವ, ಪಿತೃಭಕ್ತನಾದ ಒಬ್ಬ ಪಂಡಿತನನ್ನು ಪತ್ನಿಯೊಂದಿಗೆ ಕರೆತಂದು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ವಸ್ತ್ರಾಲಂಕಾರಗಳನ್ನು ಇತ್ತು, ತುಪ್ಪ ತುಂಬಿದ ಪೂರ್ಣಪಾತ್ರೆಯ ಮೇಲೆ ಇರಿಸಿದ ತಾಮ್ರಪಾತ್ರದಲ್ಲಿ ಇಟ್ಟು ದೀಪವನ್ನೂ ಲಕ್ಷ್ಮೀನಾರಾಯಣ ಪ್ರತಿಮೆಗಳನ್ನೂ ದಾನಕೊಡಬೇಕು. ಈ ದೀಪದಾನವನ್ನು ಕೊಡುವಾಗ

**ಅವಿದ್ಯಾ ತಮಸಾವ್ಯಾಪ್ತೇ ಸಂಸಾರೇ ಪಾಪನಾಶನಃ ।**
**ಜ್ಞಾನ ದೀಪೋ ಮೋಕ್ಷದಶ್ಚ ತಸ್ಮಾದ್ದತ್ತೋ ಮಯಾ ನಘ ॥**

ಅವಿದ್ಯೆಯೆಂಬ ಕತ್ತಲೆಯಿಂದ ತುಂಬಿದ ಈ ಪ್ರಪಂಚದಲ್ಲಿ ಮಾನವರು ಆಚರಿಸಿದ ಪಾಪಗಳನ್ನೆಲ್ಲ ನಾಶಮಾಡುವ, ಜ್ಞಾನವನ್ನೂ ಮೋಕ್ಷವನ್ನೂ ದಯಪಾಲಿಸುವ ಈ ನಂದಾದೀಪವನ್ನು ನಾನು ದಾನಕೊಡುತ್ತೇನೆ ಎಂಬ ಮಂತ್ರವನ್ನು ಹೇಳಿ ಆ ದೀಪವನ್ನು ದಾನಕೊಡಬೇಕು. ಮೇಲೆ ಯಥಾಶಕ್ತಿ ದಕ್ಷಿಣೆ ಕೊಡಬೇಕು. ಬಳಿಕ ಬ್ರಾಹ್ಮಣರನ್ನು ಕರೆದು ತುಪ್ಪ, ಪಾಯಸ, ಕಡಬು ಮೊದಲಾದವುಗಳಿಂದ ಭೋಜನ ಮಾಡಿಸಿ ಪತ್ನೀಸಹಿತರಾದ ಬ್ರಾಹ್ಮಣರಿಗೆ ಶಯ್ಯಾದಾನವನ್ನೂ ಹಸುವನ್ನೂ ದಕ್ಷಿಣೆಯನ್ನೂ ತನ್ನ ಯೋಗ್ಯತಾನುಸಾರವಾಗಿ ಕೊಟ್ಟು ಬಂಧು ಮಿತ್ರರಿಗೆ ಭೋಜನವನ್ನು ಮಾಡಿಸಬೇಕು. ಹೀಗೆ ಒಳ್ಳೆ ಉತ್ಸವದಿಂದ ದೀಪವ್ರತವನ್ನು ಆಚರಿಸಿ, ದೇವರಲ್ಲಿ ನ್ಯೂನಾತಿರೇಕಗಳನ್ನು ಕ್ಷಮಿಸು ಎಂದು ಕೇಳಿಕೊಂಡು ವ್ರತ ಸಮಾಪ್ತಿಯನ್ನು ಮಾಡಬೇಕು. ಇಂಥ ದೀಪವ್ರತ ಹಾಗೂ ದೀಪದಾನವನ್ನು ಮಾಡಿದವರು ಕಾಂತಿಯನ್ನೂ, ಐಶ್ವರ್ಯವನ್ನೂ, ಸೌಂದರ್ಯವನ್ನೂ ಜ್ಞಾನವನ್ನೂ ಸುಖವನ್ನೂ ಸೌಭಾಗ್ಯವನ್ನೂ ಆರೋಗ್ಯವನ್ನೂ ಹೊಂದುತ್ತಾರೆ. ಬ್ರಹ್ಮಚಾರಿಗಳು ಈ ವ್ರತವನ್ನು ಮಾಡಿದರೆ ಒಳ್ಳೆ ಸುಂದರಿಯೂ ಸದ್ಗುಣಿಯೂ ಆದ ಪತ್ನಿಯನ್ನೂ ಅವಳಿಂದ ಪುತ್ರ ಪೌತ್ರಾದಿ ಸಂತಾನ ಅಭಿವೃದ್ಧಿಯನ್ನೂ, ಕುಮಾರಿಯರು ಒಳ್ಳೆ ಲಕ್ಷಣ ಸಂಪನ್ನನಾದ ಪತಿಯನ್ನೂ ಸುವಾಸಿನಿಯರು ಅಖಂಡ ಸೌಭಾಗ್ಯವನ್ನೂ ಪಡೆಯುತ್ತಾರೆ.

ಹಚ್ಚಿದ ದೀಪವು ನಂದದಂತೆ ಕಡ್ಡಿಯಿಂದ ಚಾಚಿ ಮೊಕ್ಕು ತೆಗೆದು ಯಾರು ಬೆಳಗಿಸುವರೋ ಅವರು ಸದ್ಗತಿಯನ್ನು ಹೊಂದುವರು. ದೀಪಕ್ಕೆ ಎಣ್ಣೆ ಹಾಕಿದವರು, ಬತ್ತಿ ಪೋಣಿಸಿದವರು, ದೀಪ ಆರದಂತೆ ನೋಡಿಕೊಳ್ಳುವವರು, ಜನರಿಂದ ಸ್ವಲ್ಪ ಸ್ವಲ್ಪ ಬೇಡಿ ಎಣ್ಣೆ ತುಪ್ಪ ತಂದು ದೀಪಕ್ಕೆ ಹಾಕುವವರು. ಹೊಸ ದೀಪ ಹಚ್ಚುವವರು, ದೀಪ ಉರಿಯುವದನ್ನು ಭಕ್ತಿಯಿಂದ ನೋಡುವವರು, ದೀಪಾರಾಧನೆ ಮಾಡಲು ಇನ್ನೊಬ್ಬರನ್ನು ಪ್ರೇರಿಸುವವರು ಪಾಪಗಳಿಂದ ಮುಕ್ತರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತೇನೆ ಕೇಳು.

ರಮಣೀಯವಾದ ಸರಸ್ವತೀ ತೀರದಲ್ಲಿ ಒಂದು ಪವಿತ್ರ ಸಿದ್ಧಾಶ್ರಮ. ಅಲ್ಲಿ ಹಿಂದೆ ಒಬ್ಬ ಕಪಿಲ ಎಂಬ ಬ್ರಾಹ್ಮಣ. ದಟ್ಟ ದರಿದ್ರ. ಆದರೆ ಮಹಾಪಂಡಿತ. ವ್ರತೋಪವಾಸಗಳಲ್ಲಿ ನಿರತ. ಕುಟುಂಬದ ಪೋಷಣೆಗಾಗಿ ಅವನು ಕೈಕೊಂಡಿದ್ದು ಭಿಕ್ಷಾವೃತ್ತಿ. ಇಂಥ ಕಡುಬಡತನವಿದ್ದರೂ ಅವನು ದೇವರ ಮುಂದೆ ನಂದಾದೀಪವನ್ನು ಮಾತ್ರ ಎಂದೂ ತಪ್ಪಿಸುತ್ತಿದ್ದಿಲ್ಲ. ಭಿಕ್ಷೆಬೇಡಿ ಎಣ್ಣೆತಂದು ನಂದಾದೀಪ ಹಚ್ಚಿ ಇಟ್ಟು ಕೇಶವನ ಪೂಜೆಯನ್ನು ತಪ್ಪದೇ ಮಾಡುತ್ತಲಿದ್ದ. ಮಹಾತ್ಮನಾದ ಆ ಕಪಿಲನ ಮನೆಗೆ ತೀಕ್ಷ್ಣದಂಷ್ಟ ಎಂಬ ಬೆಕ್ಕು ಪ್ರತಿದಿನವೂ ಬರುತ್ತಲಿತ್ತು. ಅದು ದೇವರ ಮುಂದೆ ಜಪ್ಪಿಸಿಕೊಂಡು ಕುಳಿತು ಬಂದ ಇಲಿಗಳನ್ನೆಲ್ಲ ಕೊಂದು ತಿಂದು ಹಾಕುತ್ತಿತ್ತು. ಹೀಗೆ ಎಷ್ಟೋ ದಿನಗಳವರೆಗೆ ಆ ಬೆಕ್ಕು ಎಣ್ಣೆ ಕುಡಿಯಲು ಹಾಗೂ ಬತ್ತಿಯನ್ನು ಸೆಳೆಯಲು ಬಂದ ಅನೇಕ ಇಲಿಗಳನ್ನೆಲ್ಲ ಕಬಳಿಸಿತು.

ಹೀಗೆ ಕೆಲವು ಕಾಲ ಕಳೆದ ಬಳಿಕ ಒಂದು ಏಕಾದಶಿಯ ದಿನ ಆ ಕಪಿಲನು ಉಪವಾಸ ಇದ್ದು ಪತ್ನೀಸಹಿತನಾಗಿ ಅಚ್ಯುತನನ್ನು ಪೂಜಿಸಿದ. ರಾತ್ರಿಯಲ್ಲಿ ಮಂತ್ರ, ಸ್ತೋತ್ರ, ಸಂಗೀತ, ನೃತ್ಯಗಳಿಂದ ಜಾಗರ ಮಾಡಿದ. ಅರ್ಧರಾತ್ರಿಯ ಸಮಯದಲ್ಲಿ ಅವನಿಗೆ ನಿದ್ದೆಯ ಮಬ್ಬಿಲ್ಲಿ ಕಣ್ಣುಮುಚ್ಚಿದವು. ಆಗ ಜಪ್ಪಿಸಿಕೊಂಡು ಕುಳಿತ ತೀಕ್ಷ್ಣದಂಷ್ಟ ಎಂಬ ಬೆಕ್ಕು ದೇವರ ಎದುರು ಇಟ್ಟ ನೈವೇದ್ಯವನ್ನು ತಿಂದಿತು. ಅಷ್ಟರಲ್ಲಿ ಪ್ರಣತಿಯಲ್ಲಿಯ ಎಣ್ಣೆಯನ್ನು ಕುಡಿಯಲು ಒಂದು ಇಲಿಯು ಬಂದಿತು. ಪ್ರಣತಿಯಲ್ಲಿಯ ಎಣ್ಣೆ ತೀರಬಂದಿತ್ತು. ಆದರಿಂದ ದೀಪವು ಮಿಣಮಿಣಕಾಗಿ ಆರಬಂದಿತು. ಆಗ ಇಲಿಯು ಎಣ್ಣೆಯ ಬತ್ತಿಯನ್ನೇ ತಿನ್ನಬೇಕೆಂದು ಪ್ರಣತಿಯಲ್ಲಿ ಕಾಲುಚಾಚಿತು. ಅಷ್ಟರಲ್ಲಿ ಅದರ ಕಣ್ಣಿಗೆ ಜಪ್ಪಿಸಿಕೊಂಡು ಕುಳಿತ ಬೆಕ್ಕು ಕಂಡಿತು. ಅದನ್ನು ಕಂಡು ಗಾಬರಿಯಾಗಿ ಅಲ್ಲಿಂದ ಜಿಗಿದು ಓಡಿಹೋಯಿತು. ಓಡಿ ಹೋಗುವಾಗ ಅದರ ಕಾಲಿನ ತುದಿತಾಕಿ ದೀಪದ ಕುಡಿಯನ್ನು ಚಾಚಿದಂತಾಗಿ ಅದು ಉಜ್ಜಲವಾಯಿತು. ದೀಪದ ಪಾತ್ರೆಯು ಬಗ್ಗಿಸಲ್ಪಟ್ಟಂತಾಗಿ ತೈಲಪಾತ್ರೆಯಲ್ಲಿ ಬತ್ತಿಯ ಬಳಿ ಎಲ್ಲ ಎಣ್ಣೆ ಹರಿದು ಬಂದು ದೀಪವು ಪ್ರಕಾಶದಿಂದ ಬೆಳಗತೊಡತು. ಅಷ್ಟರಲ್ಲಿ ಬ್ರಾಹ್ಮಣನಿಗೂ ಎಚ್ಚರವಾಯಿತು. ಆ ಬ್ರಾಹ್ಮಣನು ದೀಪಕ್ಕೆ ಮತ್ತೆ ಎಣ್ಣೆ ಹಾಕಿ ಜಾಗರೋತ್ಸವ ಮುಗಿಸಿ ಹರಿವಾಣ ಸೇವೆಯನ್ನು ಮಾಡಿದ. ಮರುದಿನ ಸ್ನಾನ, ದೇವತಾರ್ಚನೆ, ಪಾರಣೆಗಳನ್ನು ಬಾಂಧವರೊಂದಿಗೆ ನೆರವೇರಿಸಿದ. ಈ ದೀಪವ್ರತದ ಪ್ರಭಾವದಿಂದ ಆ ಕಪಿಲ ವಿಪ್ರನಿಗೆ ಧನ, ಧಾನ್ಯ, ಪುತ್ರ ಪಾತ್ರ, ಆರೋಗ್ಯ ಸೌಭಾಗ್ಯ, ಐಶ್ವರ್ಯ, ಆಯುಷ್ಯ ಎಲ್ಲವೂ

ಪ್ರಾಪ್ತವಾದವು. ಕೊನೆಗೆ ಮರಣಾನಂತರ ಅವನು ಸೂರ್ಯಮಂಡಲವನ್ನು ಭೇದಿಸಿಕೊಂಡು ಪರಮಾತ್ಮನಲ್ಲಿ ಲೀನವಾದ.

ಕಾಲಾಂತರದಲ್ಲಿ ಆ ಇಲಿಯು ಮರಣಹೊಂದಿ ವಿಮಾನಾರೂಢವಾಗಿ ಪುಣ್ಯಲೋಕಕ್ಕೆ ತೆರಳಿತು. ಬೆಕ್ಕು ಕೂಡ ಕಾಲಾಂತರದಲ್ಲಿ ಸ್ವರ್ಗವನ್ನು ಸೇರಿತು. ಬಹು ಕಾಲಪರ್ಯಂತರ ಆ ಪುಣ್ಯಲೋಕದಲ್ಲಿ ಸುಖೋಪಭೋಗಗಳನ್ನು ಅನುಭವಿಸಿ ಅವನು ಮತ್ತೆ ಭೂಲೋಕದಲ್ಲಿ ಸುಧರ್ಮ ಎಂಬ ರಾಜನಾಗಿ ಹುಟ್ಟಿದ. ಅವನು ಮಹಾಬಲಿಷ್ಠ. ರೂಪದಲ್ಲಿ ಮನ್ಮಥ. ಆಚರಣೆಯಲ್ಲಿ ಧರ್ಮರಾಜ, ಅವನ ಮಡದಿಯ ಹೆಸರು ರೂಪಸುಂದರಿ. ಗುಣದಲ್ಲಿ ಗೌರಿ. ಒಳ್ಳೆ ಹೆಣ್ಣಿನ ಎಲ್ಲ ಲಕ್ಷಣಗಳೂ ಅವಳಲ್ಲಿ ಸಂಪನ್ನ. ಪತಿಭಕ್ತಳಾದ ಅವಳಿಗೆ ಅನೇಕ ಜನ ಹೆಣ್ಣು, ಗಂಡು ಮಕ್ಕಳು ಆದರು.

ಹೀಗೆ ಆ ದಂಪತಿಗಳು ಅನ್ಯೋನ್ಯ ಪ್ರೀತಿಯಿಂದ ಮಧುರ ದಾಂಪತ್ಯಜೀವನವನ್ನು ನಡೆಸುವಾಗ ಕಾರ್ತೀಕ ಮಾಸ ಬಂದಿತು. ಆಗ ರಾಜನು ರಾಣಿಯನ್ನು ಕುರಿತು ಹೇಳಿದ.

**ಸುಧರ್ಮರಾಜ :-** "ಭದ್ರೆ, ಇಂದು ಪ್ರಬೋಧಿನೀ ಏಕಾದಶಿ. ನಾನು ಉಪವಾಸಮಾಡಿ, ಪುಷ್ಕರ ತೀರ್ಥದಲ್ಲಿ ಸ್ನಾನಗೈದು, ಲಕ್ಷ್ಮೀ ಸಹಿತನಾದ ತಾವರೆಗಣ್ಣಿನ ಜನಾರ್ದನನನ್ನು ಪೂಜಿಸುತ್ತೇನೆ". ಅದನ್ನು ಕೇಳಿ ಪತಿಗೆ ಪ್ರಿಯವಾದುದನ್ನು ಮತ್ತು ಹಿತವಾದುದನ್ನು ಮಾಡುವದರಲ್ಲಿಯೇ ಆಸಕ್ತಿವುಳ್ಳ ಆ ರೂಪಸುಂದರಿಯು ಮೃದುಮಧುರವಾಗಿ ನಕ್ಕು ಪತಿಯನ್ನು ಕುರಿತು ರಹಸ್ಯವಾಗಿ ನುಡಿದಳು.

**ರೂಪಸುಂದರಿ:-** ಹೃದಯದರಸ, ನನ್ನ ಮನಸ್ಸಿನಲ್ಲಿಯೂ ನಿನ್ನನ್ನು ಸಂತೋಷ ಪಡಿಸುವ ಹೆಚ್ಚಿನ ರೂಪವನ್ನು ಪಡೆಯಬೇಕೆಂಬ ಇಚ್ಛೆಯಿದೆ. ಆದುದರಿಂದ ಮೊದಲು ನಿಮ್ಮೊಡನೆ ಪುಷ್ಕರಕ್ಷೇತ್ರಕ್ಕೆ ಹೋಗಬೇಕೆಂದು ಅಪೇಕ್ಷೆ ಉಂಟಾಗಿದೆ ಎಂದು ಬಿನ್ನವಿಸಿದಳು.

ಅವಳ ಅಪೇಕ್ಷೆಯಂತೆ ಸುಧರ್ಮ ಮಹಾರಾಜನು ರೂಪಸುಂದರಿಯೊಡನೆ ಪುಷ್ಕರ ತೀರ್ಥಕ್ಕೆ ಆಗಮಿಸಿದ. ಆನೆ, ಕುದುರೆ, ಕಾಲಾಳು, ರಥ ಮೊದಲಾದ ಚತುರಂಗ ಸೇನೆಯೊಂದಿಗೆ ಪುರೋಹಿತರಿಂದ ಕೂಡಿಕೊಂಡು ಪುಷ್ಕರ ಕ್ಷೇತ್ರದಲ್ಲಿ ಸ್ನಾನಮಾಡಿ, ಧ್ಯಾನಮಾಡಿ, ಪಿತೃಗಳನ್ನು ದೇವತೆಗಳನ್ನು ಉದ್ದೇಶಿಸಿ ತರ್ಪಣವನ್ನು ನೀಡಿ, ಲಕ್ಷ್ಮೀನಾರಾಯಣರ ಪೂಜೆಯನ್ನು ಮಾಡಿದ. ಪೂಜಾಮಂಟಪದಲ್ಲಿ ಸಾಲುಸಾಲಾಗಿ ದೀಪಗಳನ್ನು ಹಚ್ಚಿ ಇಟ್ಟ. ಆ ದೇವಾಲಯದ ತುಂಬ ಅನೇಕ ದೀಪಗಳು ಬೆಳಗುತ್ತಿದ್ದವು. ಅಲ್ಲಿಯ ಆ ದೇವಾಲಯದಲ್ಲಿ ಗೋಡೆಯ ಮೇಲೆ ಒಂದು ಬೆಕ್ಕಿನ ಚಿತ್ರ ಬರೆದದ್ದು ಮಹಾರಾಜನ ಕಣ್ಣಿಗೆ ಬಿದ್ದಿತು. ನೋಡಿದ ಕೂಡಲೇ ಅವನಿಗೆ ಜನ್ಮಾಂತರದ ಸ್ಮರಣೆ ಒಮ್ಮೆಲೆ ಬಂದಿತು. ಅವನು ಹೆಂಡತಿಯ ಮುಖದ ಕಡೆಗೆ ನೋಡಿ ನಗತೊಡಗಿದ.

**ರೂಪಸುಂದರಿ:-** ಪತಿದೇವ, ನನ್ನ ಮುಖವನ್ನು ನೋಡಿ ನೀವೇಕೆ ನಗುತ್ತಿರುವಿರಿ?

**ರಾಜ:-** ದೇವಿ, ನಾನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಬೆಕ್ಕು ಆಗಿದ್ದೆ. ಸಾವಿರಾರು ಇಲಿಗಳನ್ನು ಆಗ ತಿಂದೆ. ಎಣ್ಣೆ ಕುಡಿದು, ಬತ್ತಿ ಎಳೆದು, ದೀಪನಂದಿಸಲು ಬಂದ ಇಲಿಗಳನ್ನೆಲ್ಲ ನಾಶಪಡಿಸಿದ್ದೆ. ಆದರಿಂದ ದೇವರ ಮುಂದಿನ ದೀಪವನ್ನು ರಕ್ಷಿಸಿದ ಪುಣ್ಯವು ನನಗೆ ಬಂದಿತು. ಮತ್ತು ಏಕಾದಶಿಯ ದಿನ ನಾನು

ಜಾಗರವನ್ನೂ ಇಲಿ ಹಿಡಿಯಲಿಕ್ಕೆ ಮಾಡಿದೆ. ದೇವರ ಮೂರ್ತಿಯನ್ನು ನೋಡಿದೆ. ಸ್ತುತಿ, ಮಂತ್ರ, ಗೀತ, ಪುರಾಣ ಭಜನದ ಪುಣ್ಯಧ್ವನಿಯು ನನ್ನ ಕಿವಿಯಲ್ಲಿ ಬಿದ್ದಿತು. ಆ ಪುಣ್ಯದಿಂದ ನಾನು ಈಗ ರಾಜನಾಗಿ ಹುಟ್ಟಿದ್ದೇನೆ. ಈ ದೇವಾಲಯದಲ್ಲಿ ಬರೆದ ಬೆಕ್ಕಿನ ಚಿತ್ರವನ್ನು ನೋಡಿ ನನಗೆ ನನ್ನ ಪೂರ್ವಜನ್ಮದ ನೆನಪು ನುಗ್ಗಿ ಬಂದಿತು.

**ರೂಪಸುಂದರಿ:-** ರಾಜೇಂದ್ರ, ನಿಮ್ಮಂತೆ ನನಗೂ ಕಳೆದ ಜನ್ಮದ ನೆನಪು ಮರುಕಳಿಸಿದೆ. ಹಿಂದಿನ ಜನ್ಮದಲ್ಲಿ ನಾನೂ ಕೂಡ ಅದೇ ಬ್ರಾಹ್ಮಣನ ಮನೆಯಲ್ಲಿ ಇಲಿಯಾಗಿದ್ದೆ. ಕಾರ್ತಿಕ ಮಾಸದ ಪ್ರಭೋದಿನೀ ಏಕಾದಶಿಯಂದು ಆ ಬ್ರಾಹ್ಮಣ ಜಾಗರ ಮಾಡುತ್ತಿದ್ದ. ನಿದ್ರೆಯ ಜೊಂಪು ಬಂದು ಅವನು ತೂಕಡಿಸತೊಡಗಿದಾಗ ನಾನು ಎಣ್ಣೆಯ ಬತ್ತಿಯನ್ನು ಎಳೆಯಬೇಕೆಂದು ಬಿಲ (ಹೋಲ) ದಿಂದ ಹೊರಬಿದ್ದೆ. ಹೂಗಳಿಂದ ಅಲಂಕಾರ ಮಾಡಿದ ನಾರಾಯಣದೇವರ ಮೂರ್ತಿಯನ್ನು ಕಣ್ತುಂಬ ನೋಡಿದೆ. ನಿದ್ದೆಯ ಮಬ್ಬಿನಲ್ಲಿ ತೂಕಡಿಕೆಯ ತಂದ್ರಿಯಲ್ಲಿದ್ದ ಆ ಬ್ರಾಹ್ಮಣನನ್ನು ಮೆಲ್ಲನೇ ನೋಡಿ ಬತ್ತಿಯನ್ನು ಎಳೆದೆ. ಆಗ ಅಲ್ಲಿಯೇ ಹೊಂಚು ಹಾಕಿ ಕುಳಿತ ನೀನು ತೀಕ್ಷ್ಣದಂಷ್ಟ್ರನ ರೂಪದಲ್ಲಿ ನನ್ನನ್ನು ಹಿಡಿಯಬೇಕೆಂದು ಎದ್ದು ನಿಂತೆ. ಅದನ್ನು ಕಂಡು ಕೂಡಲೇ ನಾನು ಅಲ್ಲಿಂದ ಓಡಿ ಬಿಲದಲ್ಲಿ ಸೇರಿಕೊಂಡೆ. ನಾನು ಓಡಿಹೋಗುವಾಗ ನನ್ನ ಕಾಲುತಾಕಿ ದೀಪದ ಕುಡಿ ಚಾಚಿದಂತಾಗಿ, ಎಣ್ಣೆಯ ಪಾತ್ರೆ ಬಗ್ಗಿ, ಎಣ್ಣೆಯೆಲ್ಲವೂ ದೀಪ ಇದ್ದಲ್ಲಿ ನುಗ್ಗಿ ಹರಿದು ದೀಪವು ಪ್ರಕಾಶಮಾನವಾಗಿ ಬೆಳಗಿತು. ಆ ಜನ್ಮದಲ್ಲಿ ಕಾರಣಾಂತರದಿಂದ ನಾರಾಯಣದೇವರ ಎದುರು ದೀಪವನ್ನು ಪರ್ಯಾಯವಾಗಿ ಬೆಳಗಿಸಿದ್ದರಿಂದ ಇಂಥ ಸೌಂದರ್ಯ, ನಿಮ್ಮಂಥ ಪತಿ, ಈ ವಿಶಾಲ ಸಾಮ್ರಾಜ್ಯ, ಈ ಎಲ್ಲ ಸತ್ಪುತ್ರರು ನನಗೆ ದೊರಕಿದ್ದಾರೆ. ನನ್ನ ಈ ಎಲ್ಲ ಪತಿ ಪುತ್ರ ರಾಜೈಶ್ವರ್ಯ ಸಂಪತ್ತು ಸೌಭಾಗ್ಯವು ಜನ್ಮಾಂತರದಲ್ಲಿ ನಾನು ಕಾರಣಾಂತರಿಂದ ಮಾಡಿದ ದೀಪ ಪ್ರಜ್ವಾಲನೆಯ ಪುಣ್ಯಪ್ರಭಾವದಿಂದ ಒದಗಿಬಂದಿದೆ. ಮತ್ತು ಈ ಎಲ್ಲ ಜ್ಞಾನ ನನಗೆ ಉಂಟಾದ್ದದೂ ಕೂಡ ಆ ದೀಪಾರಾಧನೆಯ ಫಲವೇ. ಆದುದರಿಂದ ನಾವಿಬ್ಬರೂ ಈ ಜನ್ಮದಲ್ಲಿಯಾದರೂ ಸರ್ವಪ್ರಯತ್ನ ಮಾಡಿ ದೀಪವ್ರತವನ್ನು ಆಚರಿಸೋಣ.

ಆ ಮಹಾರಾಜನು ತನ್ನ ಮೆಚ್ಚಿನ ಮನದನ್ನೆಯಾದ ಮಹಿಷಿಯ ಈ ಮಾತುಗಳನ್ನು ಕೇಳಿ ಅವಳ ಅಪೇಕ್ಷೆಯಂತೆ ಶ್ರದ್ಧೆಯಿಂದ ದೀಪವ್ರತವನ್ನು ಮಾಡಿದ. ಪುಷ್ಕರ ತೀರ್ಥದಲ್ಲಿ ಅವರಿಬ್ಬರೂ ದಂಪತಿಗಳು ಭಕ್ತ್ಯುದ್ರೇಕದಿಂದ ಆಚರಿಸಿದ ದೀಪವ್ರತದಿಂದ ಅವರಿಬ್ಬರೂ ಮುಕ್ತಿಯನ್ನು ಹೊಂದಿದರು. ಈ ದೀಪ ಮಹಾತ್ಮ್ಯವನ್ನು ಕೇಳಿದ ಪುರುಷರು ಸ್ತ್ರೀಯರು ಪಾಪಮುಕ್ತರಾಗಿ ಹರಿಮಂದಿರಕ್ಕೆ ಮುಂದೆ ಪ್ರಯಾಣಿಸುತ್ತಾರೆ. ಈ ದೀಪವ್ರತದ ಮಹಿಮೆಯನ್ನು ಕೇಳಿದವರ ನೇತ್ರರೋಗಗಳೂ ಉಳಿದ ಎಲ್ಲ ವಿಧವಾದ ಅಧಿವ್ಯಾಧಿಗಳೂ, ದುಃಖ ದಾರಿದ್ರ್ಯಗಳೂ ದೂರವಾಗುವವು. ಅವರ ಮನೆಯಲ್ಲಿ ಲಕ್ಷ್ಮೀದೇವಿಯು ಸ್ವಯಂ ನಿತ್ಯವೂ ಸನ್ನಿಹಿತಳಾಗಿ ಇರುತ್ತಾಳೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾರ್ತೀಕ ಶುದ್ಧ ಏಕಾದಶಿಯಂದು ದೀಪವ್ರತ ವಿಧಾನ ಎಂಬ ಮೂವತ್ತೊಂದನೇಯ ಅಧ್ಯಾಯ ಮುಗಿದುದು*

—o—

## ಹರಿಶ್ಚಂದ್ರ ಸನತ್‌ಕುಮಾರ ಸಂವಾದ ಶ್ರೀಕೃಷ್ಣಜನ್ಮಾಷ್ಟಮಿ ವ್ರತದ ವಿಧಾನ

ಅಧ್ಯಾಯ - ೩೨

**ನಾರದ:-** ದೇವತೆಗಳಿಗೂ ದೇವನಾದ ಮಹಾದೇವ, ಭಕ್ತರಿಗೆ ಅಭಯದಾನ ನೀಡುವ ನೀನು ನನ್ನ ಮೇಲೆ ಕೃಪೆಯನ್ನು ಮಾಡಿ ಜನ್ಮಾಷ್ಟಮಿ ವ್ರತದ ವಿಧಾನವನ್ನು ಹೇಳು.

**ಮಹಾದೇವ:-** ಪೂರ್ವಕಾಲದಲ್ಲಿ ಹರಿಶ್ಚಂದ್ರ ಎಂಬ ಮಹಾರಾಜ ಇದ್ದ. ಅವನ ಸಜ್ಜನಿಕೆಗೆ ಮೆಚ್ಚಿ ಚತುರ್ಮುಖ ಬ್ರಹ್ಮದೇವನು ಅವನಿಗೆ ಒಂದು ದಿವ್ಯರತ್ನಮಯವಾದ ನಗರವನ್ನೇ ದಯಪಾಲಿಸಿದ. ಉದಯ ರವಿಯಂತೆ ಶಾಂತಿಯಿಂದ ಕಂಗೊಳಿಸುವ ಬ್ರಹ್ಮದೇವರು ಕೊಟ್ಟ ಆ ಪಟ್ಟಣ ಅಲ್ಲಿದ್ದ ಜನರ ಕಾಮನೆಗಳನ್ನೆಲ್ಲ ಪೂರೈಸುತ್ತಿತ್ತು ಕಾಮಧೇನುವಿನಂತೆ. ಅಂಥ ರತ್ನಖಚಿತವಾದ ಬ್ರಹ್ಮಪುರಿಯಲ್ಲಿದ್ದು ಆ ಹರಿಶ್ಚಂದ್ರ ಮಹಾರಾಜನು ಆಳುತ್ತಲಿದ್ದ ಸಪ್ತದ್ವೀಪ ಪತಿಯಾದ ವಸುಂಧರಾ ಮಂಡಲವನ್ನು, ಪ್ರಜೆಗಳನ್ನೆಲ್ಲ ಹೊಟ್ಟೆಯ ಮಕ್ಕಳಂತೆ ಕಾಪಿಟ್ಟು ರಕ್ಷಿಸುತ್ತಿದ್ದ ಆ ಧರ್ಮಾತ್ಮನಾದ ರಾಜರ್ಷಿ. ಅವನಿಗೆ ಧನಧಾನ್ಯ, ನಗನಾಣ್ಯ, ಮುತ್ತು ರತ್ನ, ಐಶ್ವರ್ಯ, ಅಧಿಕಾರ, ಆರೋಗ್ಯ, ಸೌಭಾಗ್ಯ, ವೈಭವ, ವಿಜೃಂಭಣೆ ಯಾವುದರಲ್ಲಿಯೂ ಕೊರತೆ ಇಲ್ಲ. ಒಂದರಲ್ಲೂ ನ್ಯೂನತೆ ಇಲ್ಲ. ವನ ಜೀವನ ಸಂತತವೂ ಸುಖಪೂರ್ಣ. ಬಾಳಿನಲ್ಲಿ ಸರ್ವದಾ ಸರ್ವಸಮೃದ್ಧಿ. ತನ್ನ ಅತ್ಯದ್ಭುತವಾದ ಭಾಗ್ಯೋದಯವನ್ನು ಕಂಡು ಅವನಿಗೇ ಒಮ್ಮೆ ವಿಸ್ಮಯವಾಯಿತು. ಅವನು ತನ್ನ ಮನದಲ್ಲಿಯೇ ಯೋಚಿಸಿದ. ಓಹ್! ಇದೇನು ನನ್ನ ಸೌಭಾಗ್ಯ! ಎಂಥ ಉದ್ದಾಮ ಅದೃಷ್ಟ ನನ್ನದು. ನನ್ನ ರಾಜಧಾನಿಯಾದ ಸಮಗ್ರ ನಗರವು ಬಯಸಿದಲ್ಲಿ ಹೋಗಬಲ್ಲ ಒಂದು ವಿಮಾನದಂತಿದೆ. ಬಯಸಿದ್ದನ್ನೆಲ್ಲ ನೀಡುತ್ತದೆ. ಕಾಮಿತಾರ್ಥವನ್ನೆಲ್ಲ ಕೊಡುತ್ತದೆ. ಇಂಥ ವಿಮಾನವನ್ನು ಈ ವರೆಗೆ ಯಾವ ರಾಜಮಹಾರಾಜನೂ ಪಡೆದಿಲ್ಲ. ನನಗೆ ಇದೆಲ್ಲವೂ ಯಾವ ಪುಣ್ಯಕರ್ಮದಿಂದ ಒದಗಿಬಂದಿದೆ? ಹೀಗೆ ವಿಚಾರಮಾಡುತ್ತಾ ಅವನು ತನ್ನ ಆ ರಾಜಧಾನಿ ರೂಪವಾದ ವಿಮಾನದ ಎತ್ತರವಾದ ಚಂದ್ರಶಾಲೆಯಲ್ಲಿ ನಿಂತುಕೊಂಡಿದ್ದ. ಅವನ ಕಣ್ಣೆದುರು ಆಗ ಶೈಲಶ್ರೇಷ್ಠವಾದ ಮೇರುಪರ್ವತ ಗೋಚರಿಸಿತು. ಆ ಮೇರುಗಿರಿಯ ಒಂದು ಉತ್ತುಂಗ ಶೃಂಗದ ಅಂಗಳದಲ್ಲಿ ಬ್ರಹ್ಮರ್ಷಿಗಳಾದ ಸನತ್‌ಕುಮಾರರು ಜ್ಞಾನಯೋಗದಲ್ಲಿ ತತ್ಪರರಾಗಿದ್ದರು. ಆಗ ರಾಜನು ಕೂಡಲೇ ತನ್ನ ಅರಮನೆಯ ಚಂದ್ರಶಾಲೆಯನ್ನು ಇಳಿದು ಪಾದಚಾರಿಯಾಗಿ ನಡೆಯುತ್ತ ಸನತ್‌ಕುಮಾರರು ಇದ್ದಲ್ಲಿಗೆ ಬಂದ. ಗಿರಿಸಾರ್ವಭೌಮವಾದ ಮೇರುಪರ್ವತದ ಶೈಲಪಟ್ಟದಲ್ಲಿ ಇನ್ನೊಬ್ಬ ಸೂರ್ಯನಂತೆ ಕಾಂತಿಯಿಂದ ತಳತಳಿಸುತ್ತಿದ್ದರು ಸನತ್‌ಕುಮಾರರು. ಹರಿಶ್ಚಂದ್ರನು, ಮನೀಷಿಗಳ ಪಾದಾರವಿಂದಗಳಿಗೆ ಭಕ್ತಿಯಿಂದ ವಂದಿಸಿದ. ಆ ಮುನಿ ಸನತ್‌ಕುಮಾರರು ರಾಜನ ಕುಶಲವನ್ನು ವಿಚಾರಿಸಿ ಆಸನದ ಮೇಲೆ ಕೂಡಲು ಆಜ್ಞಾಪಿಸಿದರು. ಆಗ ಮಹಾರಾಜ ಅವರನ್ನು ಕೇಳಿದ.

**ಹರಿಶ್ಚಂದ್ರ:-** ಮುನಿಪುಂಗವರೇ, ಈ ಜಗತ್ತಿನಲ್ಲಿ ಜೀವಿಗಳಿಗೆ ಭಾಗ್ಯಬರುವುದು ಅಪರೂಪ. ಸಂಪತ್ತು ದೊರೆಯುವುದು ದುಸ್ತರ. ನನಗೆ ಮಾತ್ರ ಅಪಾರ ಸಂಪತ್ತು

ಬಂದಿದೆ. ಭಾಗ್ಯದ ಬಾಗಿಲೇ ತೆರೆದಿದೆ. ಈ ನನ್ನ ಸೌಭಾಗ್ಯ ಸಂಪತ್ತಿಗೆ ಏನು ಕಾರಣ? ನಾನು ಪೂರ್ವಜನ್ಮದಲ್ಲಿ ಯಾವ ಮಹಾ ಪುಣ್ಯ ಕರ್ಮ ಮಾಡಿದ್ದೆ?

**ಸನತ್‌ಕುಮಾರ:-** ರಾಜನ್, ನಿನ್ನ ಜನ್ಮಾಂತರ ಕಥೆಯನ್ನು ಹೇಳುತ್ತೇನೆ ಕೇಳು. ಹಿಂದಿನ ಜನ್ಮದಲ್ಲಿ ನೀನೊಬ್ಬ ಒಳ್ಳೆಯ ವೈಶ್ಯ. ಸತ್ಯವನ್ನು ನುಡಿಯುತ್ತಿದ್ದೆ. ಪುಣ್ಯಕಾರ್ಯವನ್ನೆ ಮಾಡುತ್ತಿದ್ದೆ. ಅತ್ಯಂತ ಪರಿಶುದ್ಧವಾದ ಜೀವನವನ್ನು ನಡೆಸುತ್ತಿದ್ದೆ. ನಿನ್ನ ಜಾತಿಗೆ ಅನುಗುಣವಾದ ವ್ಯಾಪಾರ ಉದ್ಯೋಗವನ್ನು ಬಿಟ್ಟು ನೀನು ಕೇವಲ ಪುಣ್ಯಕರ್ಮ ಧರ್ಮಾನುಷ್ಠಾನದಲ್ಲಿ ಆಸಕ್ತನಾದೆ. ಅದನ್ನು ನೋಡಿ ನಿನ್ನ ಅಪ್ತ ಇಷ್ಟ ಮಿತ್ರ ಪರಿವಾರದವರು, ನಿನ್ನನ್ನು ತೊರೆದುಬಿಟ್ಟರು. ನೀನೂ ಕೂಡ ಎಲ್ಲ ಉದ್ಯೋಗವನ್ನು ವ್ಯವಸಾಯವನ್ನು ತೊರೆದುಬಿಟ್ಟೆ. ಅದರಿಂದ ನಿನಗೆ ಬಡತನ ಬಂದಿತು. ಕುಟುಂಬ ನಿರ್ವಾಹವೇ ಕಷ್ಟಕರವಾಯಿತು. ಆಗ ನೀನು ಯಾರ ಮನೆಯಲ್ಲಿಯಾದರೂ ಸೇವಾವೃತ್ತಿಯನ್ನು ಕೈಕೊಳ್ಳಬೇಕೆಂದು ಪ್ರಯತ್ನಿಸಿದೆ. ನಿನ್ನನ್ನು ಯಾರು ಕೆಲಸಕ್ಕೂ ಇಟ್ಟುಕೊಳ್ಳಲಿಲ್ಲ. ಆಗ ದೇಶದಲ್ಲಿ ದುರ್ಭಿಕ್ಷ. ನೀನು ಊರು ಬಿಟ್ಟು ಅಡವಿಗೆ ಹೋದೆ. ಆ ಕಾಡಿನಲ್ಲಿ ಮಡದಿಯೊಡನೆ ನಡೆನಡೆದು ಕಾಲು ಸೋತಾಗ ಒಂದು ತಿಳಿನೀರಿನ ಕೊಳ ನಿನ್ನ ಕಣ್ಣಿಗೆ ಬಿದ್ದಿತು. ಅದರಲ್ಲಿ ಅನೇಕ ಕಮಲಗಳು ಅರಳಿ ನಿಂತಿದ್ದವು. ನೀವು ಇಬ್ಬರೂ ಆ ಸರೋವರದಲ್ಲಿ ಅರೆಬಿರಿದ ಆ ತಾವರೆಯ ಹೂಗಳನ್ನು ಕಿತ್ತಿಕೊಂಡು ನಗರಕ್ಕೆ ತೆಗೆದುಕೊಂಡು ಬಂದಿರಿ. ಸಮೀಪದಲ್ಲಿಯೇ ನಿಮಗೆ ಕಾಶೀಪಟ್ಟಣವು ಗೋಚರಿಸಿತು. ಆ ನಗರದಲ್ಲಿ ಆ ಕಮಲ ಪುಷ್ಪಗಳನ್ನು ಮಾರಾಟ ಮಾಡಬೇಕೆಂದು ನೀವು ಎಲ್ಲ ಕಡೆಗೂ ಓಡಾಡಿದಿರಿ. ಯಾರೂ ಕೊಳ್ಳಲು ಮುಂದೆ ಬರಲಿಲ್ಲ. ಮುಂದೆ ನೀವು ಆ ವಾರಾಣಸಿಯಲ್ಲಿರುವ ಒಂದು ಮಠದ ಬಾಗಿಲಿಗೆ ಬಂದಿರಿ. ಆಗ ಒಮ್ಮೆಲೇ ಒಂದು ಮಂಗಳವಾದ್ಯವು ಮೊಳಗತೊಡಗಿತು. ಅದೇ ಕಾಲದಲ್ಲಿ ಆ ಮಠದ ಒಳಗಿಂದ ಒಬ್ಬ ಮನುಷ್ಯನು ಹೊರಗೆ ಬಂದ. ನೀವು ಅವನನ್ನು ಕುರಿತು ''ಇದು ಏನು ಧ್ವನಿ? ಎಲ್ಲಿಂದ ಬರುತ್ತಿದೆ?'' ಎಂದು ಕೇಳಿದಿರಿ. ಆಗ ಆ ಮನುಷ್ಯನು ''ಈ ನಗರದಲ್ಲಿ ಇಂದ್ರದ್ಯುಮ್ನ ಎಂಬ ಹೆಸರಿನ ಕಾಶಿರಾಜ ಇರುತ್ತಾನೆ. ಅವನ ಮಗಳು ಚಂದ್ರಾವತಿ. ಆ ರಾಜಕುಮಾರಿಯು ಇಂದು ಕೃಷ್ಣ ಜನ್ಮಾಷ್ಟಮಿಯ ದಿನವಾದುದರಿಂದ ಉಪವಾಸಮಾಡಿ ಅಷ್ಟಮಿ ವ್ರತವನ್ನು ಆಚರಿಸುತ್ತ ಇದ್ದಾಳೆ. ಅವಳ ಪೂಜೆಯ ಕಾಲದಲ್ಲಿ ಮಂಗಳವಾದ್ಯಗಳು ಮೊಳಗುತ್ತಲಿವೆ.'' ಎಂದನು. ಅದನ್ನು ಕೇಳಿ ನಿಮ್ಮಿಬ್ಬರಿಗೂ ಬಹಳ ಆನಂದವಾಯಿತು. ನೀವು ಒಳಗೆ ಪ್ರವೇಶ ಮಾಡಿದಿರಿ. ಆ ಮಠದ ಅಂತಃಪ್ರವೇಶದಲ್ಲಿ ಸೂರ್ಯಸಹಿತನಾದ ಶ್ರೀಕೃಷ್ಣನ ಪೂಜೆಯು ನಡೆದಿತ್ತು. ಆಗ ನೀನು ಕೂಡ ನಿನ್ನ ಪತ್ನಿಯೊಂದಿಗೆ ಅಲ್ಲಿ ಹೋದೆ. ಕಾಡಿನ ಕೊಳದಿಂದ ಕೊಯ್ದುಕೊಂಡು ಬಂದ ಕಮಲ ಪುಷ್ಪಗಳನ್ನು ಕೃಷ್ಣನ ಮೂರ್ತಿಗೆ ಏರಿಸಿ ಭಕ್ತಿಯಿಂದ ಪುಷ್ಪಾಲಂಕಾರ ಸೇವೆಯನ್ನು ನೀವಿಬ್ಬರು ಗಂಡ ಹೆಂಡತಿ ದಂಪತಿಗಳು ಸೂರ್ಯಸಹಿತನಾದ ಶ್ರೀಹರಿಯ ಮೂರ್ತಿಯನ್ನು ಪುಷ್ಪಾರ್ಚನೆಯ ವಿಧಿಯಿಂದ ವಿಷ್ಣುಸಹಸ್ರನಾಮ ಪಠಣಪೂರ್ವಕವಾಗಿ ಅರ್ಚಿಸಿದಿರಿ. ಮತ್ತು ಆ ಭಗವಾನ್‌ಮೂರ್ತಿಯ ಸುತ್ತಲೂ ಮಂಟಪವನ್ನು ಮಾಡಿ ಪುಷ್ಪಾಲಂಕಾರ ಸೇವೆಯನ್ನು ಚೆನ್ನಾಗಿ ಮಾಡಿದಿರಿ. ಇದನ್ನು ನೋಡಿ ರಾಜಕುಮಾರಿ ಚಂದ್ರಾವತಿಗೆ ಬಹಳ ಆಶ್ಚರ್ಯ. ಮತ್ತು ಅಷ್ಟೇ ಸಂತೋಷ. ''ಈ ಪುಷ್ಪಾಲಂಕಾರಸೇವೆಯನ್ನು ಮಾಡಿದವರು ಯಾರು?'' ಎಂದು

ಕೇಳಿದಳು. ಅದನ್ನು ಮಾಡಿದವರು ನೀವೇ ಎಂದು ಅವಳಿಗೆ ತಿಳಿದು ಬಂದಿತು. ಕೂಡಲೇ ಅವಳು ವಿಪುಲವಾಗಿ ದ್ರವ್ಯವನ್ನು ನಿಮಗೆ ದಾನ ಕೂಡ ಮಾಡಿದಳು. ಆದರೆ ನೀವು ''ದೇವರಿಗೆ ಸಲ್ಲಿಸಿದ ಸೇವೆಗೆ ಪ್ರತಿಯಾಗಿ ನಾನು ಏನನ್ನೂ ಸ್ವೀಕರಿಸುವದಿಲ್ಲ.'' ಎಂದು ನಿರಾಕರಿಸಿದಿರಿ. ನೀವು ಆ ರಾಜಕುಮಾರಿಯಿಂದ ಹಣವನ್ನೂ ತೆಗೆದುಕೊಳ್ಳಲಿಲ್ಲ. ಅಲ್ಲಿ ಭೋಜನವನ್ನೂ ಮಾಡಲಿಲ್ಲ. ಅತ್ಯಂತ ಭಕ್ತಿಯಿಂದ ನೀವಿಬ್ಬರು ಉಪವಾಸವಿದ್ದು ಶ್ರೀಹರಿಯನ್ನೂ ಮತ್ತು ಸೂರ್ಯನನ್ನೂ ವಿಧ್ಯುಕ್ತಪ್ರಕಾರದಿಂದ ಪೂಜೆಮಾಡಿದಿರಿ. ಕಳೆದ ಜನ್ಮದಲ್ಲಿ ಬದುಕಿ ಇರುವವರೆಗೂ ನೀವು ಶ್ರೀಹರಿಯ ಪುಷ್ಪಾರ್ಚನ ಸೇವೆಯನ್ನು ನಿರಂತರ ಸಲ್ಲಿಸುತ್ತಲೇ ಇದ್ದಿರಿ. ಆ ಪುಣ್ಯದಿಂದ ನಿಮಗೆ ಮರಣ ಕಾಲದಲ್ಲಿ ವಿಷ್ಣುಸ್ಮರಣೆ ಒದಗಿ ಬಂದಿತು. ನಿಮ್ಮನ್ನು ಕರೆಯಲು ಸ್ವರ್ಗಲೋಕದಿಂದ ವಿಮಾನವೂ ಬಂದಿತು. ಅದೇ ಪುಣ್ಯದಿಂದ ನೀವು ಈ ಜನ್ಮದಲ್ಲಿ ರಾಜರಾಣಿಯರಾಗಿ ಹುಟ್ಟಿದಿರಿ. ಆ ಜನ್ಮದ ಪುಣ್ಯದ ಫಲವನ್ನೆ ನೀವು ಈ ಜನ್ಮದಲ್ಲಿ ಅನುಭವಿಸುತ್ತಿರುವಿರಿ.

**ಹರಿಶ್ಚಂದ್ರ:-** ಈ ಜನ್ಮಾಷ್ಟಮೀವ್ರತವನ್ನು ಯಾವ ತಿಂಗಳಲ್ಲಿ ಯಾವ ತಿಥಿಯಂದು ಮಾಡಬೇಕು? ಅದರ ವಿಧಿವಿಧಾನಗಳು ಏನು? ಇವೆಲ್ಲವನ್ನೂ ನನಗೆ ತಿಳಿಸಿರಿ.

**ಸನತ್‌ಕುಮಾರ:-** ಶ್ರಾವಣ ಕೃಷ್ಣಪಕ್ಷ ಅಷ್ಟಮಿಯ ತಿಥಿಯಂದು ರೋಹಿಣೀ ನಕ್ಷತ್ರವು ಕೂಡಿದರೆ ಅದು ಜಯಂತೀದಿನ ಎಂದು ಕರೆಯಲ್ಪಡುತ್ತದೆ. ಈ ಶುಭಮೂಹೂರ್ತದಲ್ಲಿ ಕೃಷ್ಣ ಜನ್ಮಾಷ್ಟಮೀ ವ್ರತವನ್ನು ಆಚರಿಸಬೇಕು. ಅಂದು ಉಪವಾಸಮಾಡಿ ಕರಿ ಎಳ್ಳನ್ನು ನೀರಿನಲ್ಲಿ ಹಾಕಿ ಸ್ನಾನ ಮಾಡಬೇಕು. ಅನಂತರ ಒಂದೂ ಛಿದ್ರವಿಲ್ಲದ ಕೊಡವನ್ನು ಸ್ಥಾಪನೆಮಾಡಬೇಕು. ಯೋಗ್ಯತೆ ಇದ್ದರೆ ಅದರಲ್ಲಿ ವಜ್ರ ಮುತ್ತು ವೈಡೂರ್ಯ, ಪುಷ್ಪರಾಗ, ಮತ್ತು ಇಂದ್ರ ನೀಲ ಈ ಐದು ರತ್ನಗಳನ್ನು ಹಾಕಿದರೆ ಒಳ್ಳೇ ಪ್ರಶಸ್ತ ಎಂದು ಕಾತ್ಯಾಯನನ ಅಭಿಪ್ರಾಯ. ಅದರ ಮೇಲೆ ಒಂದು ಬಂಗಾರದ ಅಗಲವಾದ ತಟ್ಟೆಯನ್ನು ಇರಿಸಬೇಕು. ಅದರ ನಡುವೆ ಕೃಷ್ಣನಿಗೆ ಮೊಲೆಯನ್ನು ಕುಡಿಸುತ್ತ ಕುಳಿತ ನಂದಪತ್ನಿ ಯಶೋದೆಯ ಒಂದು ಬಂಗಾರದ ಮೂರ್ತಿಯನ್ನು ಮಾಡಿ ಇಡಬೇಕು. ಅವಳ ತೊಡೆಯ ಮೇಲೆ ತಾಯಿಯ ಮೊಲೆಯನ್ನು ಕುಡಿಯುತ್ತಾ ಅವಳ ಮತ್ತೊಂದು ಮೊಲೆಯನ್ನು ಕೈಯಲ್ಲಿ ಹಿಡಿದು ತಾಯಿಯ ಮುಖವನ್ನು ಸಂತೋಷದಿಂದ ನೋಡುತ್ತಾ ಇರುವ ಬಾಲಗೋಪಾಲ ಮೂರ್ತಿಯನ್ನು ಯಥಾಶಕ್ತಿ ತನ್ನ ಯೋಗ್ಯತೆಗೆ ಅನುಗುಣವಾದ ಪ್ರಮಾಣದಲ್ಲಿ ನಿರ್ಮಿಸಿ ಇಡಬೇಕು. ಸಿರಿವಂತರು ಎರಡು ಬಂಗಾರದ ನಾಣ್ಯಗಳಿಂದ ಕೃಷ್ಣ ಯಶೋದೆಯರ ಪ್ರತಿಮೆಗಳನ್ನು ಮಾಡಿಸಬೇಕು. ಯೋಗ್ಯತೆ ಇಲ್ಲದಿದ್ದವರು ಪಂಚಲೋಹದ ಪ್ರತಿಮೆಗಳನ್ನಾದರೂ ಮಾಡಿಸಬೇಕು. ಮತ್ತು ನಾಲ್ಕು ಬೆರಳು ಎತ್ತರದ ರೋಹಿಣಿಯ ಚಿನ್ನದ ಮೂರ್ತಿಯನ್ನೂ ಒಂದು ಅಂಗುಷ್ಠಪ್ರಮಾಣದ ಒಂದು ಚಂದ್ರನ ಪ್ರತಿಮೆಯನ್ನೂ ಮಾಡಿಸಿ ಅದೇ ತಟ್ಟೆಯಲ್ಲಿರಿಸಬೇಕು. ಬಾಲಕೃಷ್ಣನ ಕೊರಳಲ್ಲಿ ಆಭರಣಗಳನ್ನೂ ಎರಡೂ ಕಿವಿಯಲ್ಲಿ ಕುಂಡಲಗಳನ್ನೂ ಹಾಕಬೇಕು. ಯಶೋದಾ ಕೃಷ್ಣರಿಗೆ ಪಂಚಾಮೃತ ಸ್ನಾನಮಾಡಿಸಿ ಅನಂತರ ಶುದ್ಧೋದಕದಿಂದ ಅಭಿಷೇಕ ಗೈದು ಚಂದನವನ್ನು ಲೇಪಿಸಬೇಕು. ಎರಡು ಬಿಳಿವಸ್ತ್ರಗಳ್ನು ಹೊದಿಸಬೇಕು. ಹೂವಿನ ಮಾಲೆಗಳಿಂದ ಅಲಂಕರಿಸಬೇಕು. ಬಗೆಬಗೆಯ ಹಣ್ಣು ಹಂಪಲ, ಭಕ್ಷ್ಯ ಭೋಜ್ಯ ನೈವೇದ್ಯವನ್ನು ಸಮರ್ಪಿಸಬೇಕು. ಹೂವಿನ ಮಂಟಪದಲ್ಲಿ ಮಂಡಿಸಿದ, ತಾಯಿಯ

ತೊಡೆಯ ಮೇಲೆ ಪವಡಿಸಿದ ಆ ಬಾಲಗೋಪಾಲಕೃಷ್ಣನಿಗೆ ಮಂಗಳಾರ್ತಿಯನ್ನು ಬೆಳಗಿಸಬೇಕು. ಅನಂತರ ಮಂಗಳವಾದ್ಯಗಳನ್ನು ಮೊಳಗಿಸಬೇಕು. ಸಂಗೀತ, ನೃತ್ಯ, ಭಜನೆ, ಪ್ರದಕ್ಷಿಣೆ, ನಮಸ್ಕಾರಾದಿ ಸೇವೆಗಳನ್ನು ಸಲ್ಲಿಸಿ ವಿಧಿಪೂರ್ವಕವಾಗಿ ತನ್ನ ವೈಭವಕ್ಕೆ ಅನುಸಾರವಾಗಿ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಅನಂತರ ಗೋಪೂಜೆಯನ್ನು ವಿಧ್ಯುಕ್ತವಾಗಿ ಮಾಡಿ ಈ ಜನ್ಮಾಷ್ಟಮೀ ವ್ರತವನ್ನು ಸಮಾಪ್ತಿಗೊಳಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಹರಿಶ್ಚಂದ್ರ, ಸನತ್‌ಕುಮಾರ ಸಂವಾದ ಶ್ರೀಕೃಷ್ಣಜನ್ಮಾಷ್ಟಮಿ ವ್ರತದ ವಿಧಾನ ಎಂಬ ಮೂವತ್ತೆರಡನೇಯ ಅಧ್ಯಾಯ ಮುಗಿದುದು*

—o—

## ಪೃಥ್ವೀದಾನ-ವಸ್ತ್ರದಾನಗಳ ಪ್ರಶಂಸೆ

**ಅಧ್ಯಾಯ - ೩೩**

**ಮಹಾದೇವ:-** ದೇವೇಂದ್ರನು ತನ್ನ ನೂರು ಯಜ್ಞಗಳನ್ನು ಮಾಡಿ ಮುಗಿಸಿದ ಬಳಿಕ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಕೇಳಿದ.

''ಪೂಜ್ಯರೇ, ಯಾವ ದಾನದಿಂದ ಮನುಷ್ಯನಿಗೆ ಸುಖ ಸಂಪತ್ತು, ಸೌಭಾಗ್ಯ ಪ್ರಾಪ್ತವಾಗುವದು? ಮತ್ತು ಯಾವ ದಾನವು ಅಕ್ಷಯ್ಯವಾಗಿರುತ್ತದೆ? ಇದನ್ನು ಮಹಾತಪಸ್ವಿಗಳಾದ ತಾವು ನನಗೆ ಹೇಳಬೇಕು.''

**ಬೃಹಸ್ಪತಿ:-** ದೇವೇಂದ್ರ, ಗೋದಾನ, ಭೂದಾನ, ಸುವರ್ಣದಾನ, ರಜತದಾನ, ವಸ್ತ್ರದಾನ, ರತ್ನದಾನ, ಮುಕ್ತಾದಾನ ಮುಂತಾದವುಗಳು ಶ್ರೇಷ್ಠದಾನಗಳೆಂದು ಅನ್ನಿಸಿಕೊಳ್ಳುತ್ತವೆ. ಅದರಲ್ಲಿಯೂ ಹರಗಿ, ಬಿತ್ತಿ, ಪೈರು ಬೆಳೆದು, ಸಸ್ಯಸಮೃದ್ಧಿಯಿಂದ ತೊನೆದಾಡುವ ಹೊಲವನ್ನು ದಾನಕೊಡುವದು ಎಲ್ಲ ದಾನಗಳಲ್ಲಿಯೂ ಸರ್ವಶ್ರೇಷ್ಠ. ಅಂಥ ಭೂದಾನ ಮಾಡಿದ ಪುಣ್ಯಪುರುಷ ಈ ಭೂಲೋಕದಲ್ಲಿ ಸೂರ್ಯನು ಆಕಾಶದಲ್ಲಿ ಬೆಳಗುತ್ತಿರುವವರೆಗೆ ಸ್ವರ್ಗದಲ್ಲಿ ಸುಖೋಪಭೋಗಗಳನ್ನು ಅನುಭೋಗಿಸುತ್ತಾನೆ. ಮಾನವನು ಎಂಥದೇ ಪಾಪ ಮಾಡಲಿ ಅವನು ಗೋಚರ್ಮ ಮಾತ್ರ ಭೂಮಿದಾನದಿಂದ ಪರಿಶುದ್ಧನಾಗುತ್ತಾನೆ. ಹತ್ತು ಹಸ್ತಗಳ ಪ್ರಮಾಣಕ್ಕೆ ಒಂದು ದಂಡ ಎನ್ನುವರು. ಮೂವತ್ತು ದಂಡಗಳಿಗೆ ಒಂದು ನಿವರ್ತನ ಎನ್ನುವರು. ಹತ್ತು ನಿವರ್ತನ ಪ್ರಮಾಣದ ಭೂಮಿಗೆ ಬ್ರಹ್ಮ ಗೋಚರ್ಮ ಎನ್ನುವರು. (ಮೂರು ಸಾವಿರ ಮೊಳ ಅಥವಾ ಮಾರು ಉದ್ದಗಲವುಳ್ಳ ಭೂಮಿಗೆ ಬ್ರಹ್ಮ ಗೋಚರ್ಮ ಎನ್ನುವರು). ಒಂದು ಸಾವಿರ ಹಸುಗಳು, ಮತ್ತು ಒಂದು ಸಾವಿರ ಎತ್ತುಗಳು ಅವುಗಳ ಕರುಗಳಿಂದ ಸಹಿತವಾಗಿ ಬಿಡಿಬಿಡಿಯಾಗಿ ಸ್ವಚ್ಛಂದದಿಂದ ನಿಂತುಕೊಳ್ಳುವವೋ ಅಷ್ಟು ಪ್ರಮಾಣದ ಭೂಮಿಗೆ ಗೋಚರ್ಮ ಭೂಮಿ ಎನ್ನುವರು. ಈ ಪ್ರಮಾಣದಲ್ಲಿಯಾಗಲೀ ಯೋಗ್ಯತೆ ಇದ್ದರೆ ಇದಕ್ಕೂ ಹೆಚ್ಚಿನ ಪ್ರಮಾಣದ ಭೂಮಿಯನ್ನಾಗಲಿ ತಪಸ್ವಿಯಾದ, ಇಂದ್ರಿಯಗಳನ್ನು ನಿಯಮನ ಮಾಡಿದ. ಜ್ಞಾನ, ಭಕ್ತಿ, ವೈರಾಗ್ಯ, ಸಂಪನ್ನನಾದ ಯೋಗ್ಯ ಸದಾಚಾರಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಇಂಥ ಭೂಮಿ ದಾನವನ್ನು ನೀಡಿದ ಮನುಷ್ಯನು ಸಮುದ್ರವಲಯಾಂಕಿತವಾದ ಈ ಪೃಥ್ವಿಯು ಈ ಬ್ರಹ್ಮಾಂಡದಲ್ಲಿ ಸ್ಥಿರವಾಗಿ ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಸ್ವರ್ಗಸುಖವನ್ನು ಅನುಭೋಗಿಸುವನು.

**ಅನ್ನದಾಃ ಸುಖಿನೋ ನಿತ್ಯಂ ವಸ್ತ್ರದೋ ರೂಪವಾನ್ ಭವೇತ್ ।**
**ಸನರಃ ಸರ್ವಭುಕ್ ಭೂಯೋ ಯೋದದಾತಿ ವಸುಂಧರಾ ॥**

ಅನ್ನದಾನ ಮಾಡಿದವರು ಸರ್ವದಾ ಸುಖಿಗಳಾಗುತ್ತಾರೆ. ವಸ್ತ್ರದಾನ ಮಾಡಿದವರು ಸುಂದರರಾಗುತ್ತಾರೆ. ಭೂಮಿದಾನವನ್ನು ಮಾಡಿದ ಮನುಷ್ಯನು ಎಲ್ಲ ಭೋಗ್ಯ ಭೋಗಗಳನ್ನು ಪಡೆಯುತ್ತಾನೆ.

**ಯಥಾ ಗೌರ್ಭರನೇವತ್ಸಂ ಕ್ಷೀರ ಮುತ್ಸೃಜ್ಯ ಕ್ಷೀರಿಣೀ ।**
**ಏವಂದತ್ತಾ ಸಹಸ್ರಾಕ್ಷ ಭೂಮಿರ್ಭರತಿ ಭೂಮಿದಂ ॥**

ಹಿಂಡುವ ಹಸು ಹಾಲನ್ನು ಕರೆದು ತನ್ನ ಕರುವನ್ನು ಪೋಷಿಸುವಂತೆ ಭೂದೇವಿಯು ಭೂಮಿದಾನ ಮಾಡಿದ ದಾನಿಯನ್ನು ಪಾಲಿಸಿ ಪೋಷಿಸಿ ರಕ್ಷಿಸುತ್ತಾಳೆ.

ಸಿಂಹಾಸನ, ಶ್ವೇತ ಛತ್ರ, ಆನೆ, ಕುದುರೆ, ಐಶ್ವರ್ಯ ಇವೆಲ್ಲವೂ ಅವನು ಜನ್ಮಾಂತರದಲ್ಲಿ ನೀಡಿದ ಭೂದಾನದ ಫಲವೆಂದು ತಿಳಿಯಬೇಕು. ಈ ಜನ್ಮದಲ್ಲಿ ಭೂಮಿದಾನದಿಂದ ಇಷ್ಟೆಲ್ಲ ಅಷ್ಟೈಶ್ವರ್ಯವನ್ನು ಬದುಕಿರುವವರೆಗೆ ಅನುಭವಿಸಿ ಮರಣಾನಂತರ ಆ ಭೂದಾನಿಯು ಸ್ವರ್ಗಲೋಕದಲ್ಲಿ ಸುರನಾಥನಂತೆ ಸಿರಿ, ಸೌಭಾಗ್ಯ, ಸಂಪದ, ಸಂತಸಗಳನ್ನು ಸೂರೆಗೊಳ್ಳುವನು. ಆ ಸ್ವರ್ಗಲೋಕದಲ್ಲಿ ಇಂದ್ರ, ಸೂರ್ಯ, ವರುಣ, ಅಗ್ನಿ, ಬ್ರಹ್ಮ, ಚಂದ್ರ, ರುದ್ರ ಮುಂತಾದ ದೇವತೆಗಳು ಈ ವಸುಂಧರಾ ದಾನಿಯನ್ನು ಆದರದಿಂದ ಅಭಿನಂದಿಸುವರು.

**ತ್ರೀಣ್ಯಾಹುರತಿ ದಾನಾನಿ ಗಾವಃ ಪೃಥ್ವೀ ಸರಸ್ವತೀ ।**
**ನರಕಾದುದ್ಧರಂತೇತೇ ಜಪವಾಪನದೋಹನಾತ್ ॥**

ಈ ಜಗತ್ತಿನಲ್ಲಿ ಗೋದಾನ, ಪೃಥ್ವೀದಾನ ಮತ್ತು ಸರಸ್ವತೀದಾನ ಈ ಮೂರು ದಾನಗಳು ಶ್ರೇಷ್ಠ ದಾನಗಳು ಆಗಿರುತ್ತವೆ ಮತ್ತು ದಾನಕೊಟ್ಟ ಮನುಷ್ಯನನ್ನು ಉದ್ಧಾರ ಮಾಡುತ್ತವೆ.

ಅವನು ನೀಡಿದ ಹಸು ಹಾಲುಕರೆದಷ್ಟು ದಾನಿಗೆ ಪುಣ್ಯವೃದ್ಧಿ ಆಗುತ್ತಲೇ ಹೋಗುತ್ತದೆ. ದಾನಕೊಟ್ಟ ಹೊಲದಲ್ಲಿ ಧಾನ್ಯ ಬೆಳೆದಂತೆ ಅವನ ಪುಣ್ಯವೂ ಬೆಳೆದು ಸುಖವೂ ಅಭಿವೃದ್ಧಿಯಾಗುತ್ತ ಹೋಗುವದು. ಮತ್ತು ಸರಸ್ವತೀ ದಾನವನ್ನು ಪಡೆದಂಥಾ ಮನುಷ್ಯನು ಜಪ, ಉಪದೇಶ, ಪಾಠ ಪ್ರವಚನ ಮುಂತಾಗಿ ಜ್ಞಾನಕಾರ್ಯವನ್ನು ಎಲ್ಲಿಯವರೆಗೆ ಮಾಡುತ್ತಾನೆಯೋ ಅಲ್ಲಿಯವರೆಗೆ ಇವನಿಗೆ ಆ ಜ್ಞಾನವನ್ನು ಅಥವಾ ಸರಸ್ವತಿಯ ರಹಸ್ಯವನ್ನು ಉಪದೇಶಿಸಿದ ಗುರುವೂ ಸ್ವರ್ಗದಲ್ಲಿ ಸುಖಸೌಭಾಗ್ಯವನ್ನು ಅನುಭವಿಸುತ್ತಾ ಇರುತ್ತಾನೆ. ಅನ್ನದಾನ ವಸ್ತ್ರದಾನಾದಿಗಳನ್ನು ನೀಡಿದವರ ಮತ್ತು ನೀಡದವರ ಫಲಾಫಲಗಳು ನಮಗೆ ಈ ಲೋಕದಲ್ಲಿ ಎಲ್ಲ ಕಡೆಗೆ ಪ್ರತ್ಯಕ್ಷವಾಗಿ ನೋಡಲಿಕ್ಕೆ ಸಿಗುತ್ತವೆ.

**ಪ್ರಾವೃತಾ ವಸ್ತ್ರದಾ ಯಾಂತಿ ನಗ್ನಾ ಯಾಂತಿ ತ್ವವಸ್ತ್ರದಾಃ ।**
**ತೃಪ್ತಾ ಯಾಂತ್ಯಸ್ನ ದಾತಾರಃ ಕ್ಷುಧಿತಾ ಯಾಂತ್ಯನನ್ನದಾಃ ॥**

ಹಿಂದಿನ ಜನ್ಮದಲ್ಲಿ ವಸ್ತ್ರ ನೀಡಿದವರು ಸುಂದರವಾದ ವಸ್ತ್ರಗಳನ್ನು ಉಟ್ಟುತೊಟ್ಟು ತಿರುಗಾಡುತ್ತಾರೆ. ಹಿಂದೆ ವಸ್ತ್ರ ನೀಡದವರು ಇಂದು ಉಡತೊಡಲು ಇಲ್ಲದೆ ಅರೆ

ಬೆತ್ತಲೆಯಾಗಿ ಅಲೆಯುತ್ತಾರೆ. ಹಿಂದೆ ಅನ್ನ ನೀಡಿದವರು ಈಗ ಯಥೇಚ್ಛವಾಗಿ ಉಂಡು ತಿಂದು ತೃಪ್ತಿಯಿಂದ ನಲಿದಾಡುತ್ತಾರೆ. ಹಿಂದೆ ಅನ್ನ ನೀಡದವರು ಇಂದು ಹಸಿವೆಯಿಂದ ಕಂಗಾಲಾಗಿ ಕಷ್ಟಪಡುತ್ತಾರೆ.

''ನರಕದ ಭಯದಿಂದ ನಡಗುತ್ತಿರುವ ಪಿತೃಗಳು ನಮ್ಮ ಮನೆತನದಲ್ಲಿ ಅನೇಕ ಮಕ್ಕಳು ಮೊಮ್ಮಕ್ಕಳು ಬೆಳೆದು ಬಾಳಲಿ. ಯಾಕೆಂದರೆ ಅವರಲ್ಲಿ ಒಬ್ಬನಾದರೂ ಗಯಾಕ್ಷೇತ್ರಕ್ಕೆ ಹೋಗಿ ವಿಷ್ಣುಪಾದದ ಮೇಲೆ ಪಿಂಡಹಾಕಿ ನಮ್ಮನ್ನು ಉದ್ಧರಿಸಬಹುದು. ಅಥವಾ ಅಶ್ವಮೇಧ ಯಜ್ಞವನ್ನು ಮಾಡಬಹುದು, ಅಥವಾ ನೀಲವೃಷವನ್ನು ಬಿಡಬಹುದು. ಬಣ್ಣದಿಂದ ಕೆಂಪು ಇದ್ದ, ಬಾಲದ ತುದಿಬೆಳ್ಳಗೆ ಇದ್ದು, ಕೋಡು ಖುರ ಬೆಳ್ಳಗಿದ್ದ ಎತ್ತಿಗೆ ನೀಲವೃಷ ಎನ್ನುತ್ತಾರೆ. ಮತ್ತು ಬಾಲವು ಕಪ್ಪು ಬಿಳಿಬಣ್ಣದಿಂದ ಕೂಡಿದ್ದರೂ ಅದು ನೀಲವೃಷ ಎನ್ನಿಸುತ್ತದೆ. ದೇವರ ಹೆಸರಿನಿಂದ ಇಂಥ ನೀಲವೃಷವನ್ನು ಬಿಟ್ಟರೆ ಅರವತ್ತು ಸಾವಿರ ವರ್ಷ ಅವನ ಪಿತೃಗಳು ತೃಪ್ತಿಯನ್ನೂ ತಣಿವನ್ನೂ ತೋಷವನ್ನೂ ಪಡೆಯುತ್ತಾರೆ. ಬ್ರಹ್ಮಹತ್ಯೆ, ಸ್ತ್ರೀ ಹತ್ಯೆ, ಬಾಲಹತ್ಯೆ ಮುಂತಾದ ಪಾಪಗಳೆಲ್ಲವೂ ಈ ಭೂಮಿದಾನದಿಂದ ನಾಶವಾಗುತ್ತವೆ. ತಾನು ಕೊಟ್ಟ ಅಥವಾ ಇನ್ನೊಬ್ಬರು ಕೊಟ್ಟ ಭೂಮಿಯನ್ನು ಕಸಿದುಕೊಂಡವನು ಅರವತ್ತು ಸಾವಿರ ವರ್ಷ ನರಕದಲ್ಲಿ ಹೇಸಿಗೆಯಲ್ಲಿ ಹುಳವಾಗಿ ಹೊರಳಾಡುತ್ತಾನೆ. ದಾನಕೊಟ್ಟವನು ಅಷ್ಟೇ ವರ್ಷ ಸ್ವರ್ಗದಲ್ಲಿ ಆನಂದವನ್ನು ಅನುಭವಿಸುತ್ತಾನೆ.

**ಭೂಮಿದಾದ್ ಭೂಮಿ ಹರ್ತುಶ್ಚ ನಾಪರಃ ಪುಣ್ಯಪಾಪವಾನ್ ।**
**ಊರ್ದ್ವಾಧಾಸ್ತೌಚ್ಚ ತಿಷ್ಠೇತೇ ಯಾವದಾಭೂತ ಸಂಪ್ಲವಂ ॥**

ಭೂಮಿದಾನವನ್ನು ಕೊಟ್ಟವರಷ್ಟು ಪುಣ್ಯವಂತರಿಲ್ಲಾ ಕೊಟ್ಟ ಭೂಮಿಯನ್ನು ಕಸಿದುಕೊಂಡವರಷ್ಟು ಪಾಪಿಷ್ಠರಿಲ್ಲಾ, ಕೊಟ್ಟವನು ಪ್ರಳಯಕಾಲದವರೆಗೆ ಸ್ವರ್ಗದಲ್ಲಿದ್ದು ಸುಖಿಸುತ್ತಾನೆ. ಕೊಟ್ಟ ಭೂಮಿಯನ್ನು ಕಿತ್ತಿಕೊಂಡವನು ಪ್ರಳಯಕಾಲದ ವರೆಗೆ ನರಕದಲ್ಲಿ ಕೊಳೆಯುತ್ತಾನೆ. ಕೊಟ್ಟದ್ದನ್ನು ಅಪಹರಿಸಿದವನು ಸಾವಿರ ಬಾವಿ ತೋಡಿಸಿದರೂ ನೂರು ಅಶ್ವಮೇಧಯಾಗ ಮಾಡಿದರೂ ಕೋಟಿಗೋದಾನ ಮಾಡಿದರೂ ಅವನ ಪಾಪ ಹೋಗುವದಿಲ್ಲಾ.

**ಕೃತಂ ದತ್ತಂ ತಪೋಧೀತಂ ಯತ್ಕಿಂಚಿತ್‌ಧರ್ಮ ಸಂಸ್ಥಿತಂ ।**
**ಅರ್ಧಾಂಗುಲಸ್ಯ ಸೀಮಾಯಾ ಹರಣೇನ ಪ್ರಣಶ್ಯತಿ ॥**

ಮಾಡಿದ ಪುಣ್ಯ, ನೀಡಿದ ದಾನ, ಆಚರಿಸಿದ ತಪಸ್ಸು ಉಳಿದಲ್ಲಿ ಇದ್ದು ಬಿದ್ದ ಧರ್ಮ ಕಾರ್ಯದ ಪುಣ್ಯಗಳು ಅರ್ಧ ಬೆರಳಿನಷ್ಟು ಭೂಮಿಯನ್ನು ಅಪಹರಿಸುವದರಿಂದ ನಷ್ಟವಾಗಿ ಹೋಗುತ್ತವೆ. ಬ್ರಹ್ಮಸ್ವವನ್ನು ಎಂಥ ಪ್ರಾಣಾಂತಿಕ ಪ್ರಸಂಗದಲ್ಲಿಯೂ ಅಪಹರಿಸಬಾರದು.

**ಅಗ್ನಿದಗ್ಧಾಃ ಪ್ರರೋಹಂತಿ ಸೂರ್ಯದಗ್ಧಾಃ ತಥೈವಚ ।**
**ರಾಜದಂಡಹಾತಾಶ್ಚೈವ ಬ್ರಹ್ಮದಗ್ಧೋ ನರೋಹತಿ ॥**

ಬೆಂಕಿಯಲ್ಲಿ ಸುಟ್ಟು ಹೋದರೂ ಮತ್ತೆ ಬೆಳೆಯುತ್ತವೆ. ಸೂರ್ಯನ ಬಿಸಲಿಗೆ ಬಾಡಿ ಹೋದರೂ ಮತ್ತೆ ಚಿಗುರುತ್ತವೆ. ರಾಜದಂಡದಿಂದ ಗಾಯಗೊಂಡವರೂ ಮತ್ತೆ

ಚೇತರಿಸಿಕೊಂಡು ಬಾಳಿಬದುಕುತ್ತಾರೆ. ಆದರೆ ಬ್ರಹ್ಮಸ್ವವನ್ನು ಅಪಹರಿಸಿದವರು ಮಾತ್ರ ಬಾಳುವದೂ ಇಲ್ಲ ಬದುಕುವದೂ ಇಲ್ಲ ಬೆಳೆಯುವದೂ ಇಲ್ಲ.

**ನವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।**
**ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರ ಪೌತ್ರಕಮ್ ॥**

ನಿಜವಾದ ವಿಷವು ವಿಷವಲ್ಲ. ಬ್ರಹ್ಮಸ್ವವೇ ವಿಷ. ವಿಷವು ತಿಂದವನೊಬ್ಬನನ್ನೇ ಕೊಲ್ಲುತ್ತದೆ. ಆದರೆ ಬ್ರಹ್ಮಸ್ವವು ಮಕ್ಕಳನ್ನೂ ಮೊಮ್ಮಕ್ಕಳನ್ನೂ ನಾಶಮಾಡುತ್ತದೆ. ಉಕ್ಕಿನ ಹುಡಿಯನ್ನು ಜೀರ್ಣಿಸಕೊಳ್ಳಬಹುದು. ಕಲ್ಲಿನ ಪುಡಿಯನ್ನು ಮುಕ್ಕಿದಕ್ಕಿಸಿಕೊಳ್ಳಬಹುದು. ವಿಷವು ಕೂಡಾ ಒಮ್ಮೊಮ್ಮೆ ಪಚನವಾಗಬಹುದು. ಆದರೆ ಬ್ರಹ್ಮಸ್ವವು ಮಾತ್ರ. ಎಂದೂ ಯಾರಿಗೂ ದಕ್ಕುವದಿಲ್ಲ.

**ಸಂತುಷ್ಟಾಯ ವಿನೀತಾಯ ಶ್ರೋತ್ರಿಯಾಯ ಕುಟುಂಬಿನೇ ।**
**ವೇದಾಭ್ಯಾಸ ತಪೋಜ್ಞಾನೇಂದ್ರಿಯ ಸಂಯಮಶಾಲಿನೇ ॥**
**ಈದೃಶಾಯ ಸುರಶ್ರೇಷ್ಠ ಯದ್ದತ್ತಂಹಿ ತದಕ್ಷಯಮ್ ।**
**ಆಮ ಪಾತ್ರೇಯಥಾನ್ಯಸ್ತಂ ಕ್ಷೀರಂ ದಧಿ ಘೃತಂ ಮಧು ॥**

ಯದೃಚ್ಛಾಲಾಭ ಸಂತುಷ್ಟನೂ, ವಿನೀತನೂ, ಶ್ರೋತ್ರೀಯನೂ, ಮಡದಿ ಮಕ್ಕಳು ಮೊದಲಾದ ಕುಟುಂಬ ಉಳ್ಳವನೂ, ವೇದಾಭ್ಯಾಸ, ತಪಸ್ಸು, ಜ್ಞಾನ, ಇಂದ್ರಿಯ ನಿಗ್ರಹ ಉಳ್ಳಂಥವನೂ, ಮತ್ತು ದರಿದ್ರನೂ ಆದ ಮನುಷ್ಯನಿಗೆ ನೀಡಿದ ದಾನವು ಮಣ್ಣಿನ ಪಾತ್ರೆಯಲ್ಲಿ ಹಾಕಿದ ಹಾಲು, ಮೊಸರು, ತುಪ್ಪ, ಜೇನುತುಪ್ಪಗಳಂತೆ ಕಿಲಬದೆ, ಕೆಡದೆ, ಹಾಳಾಗದೆ, ಅಕ್ಷಯವಾಗುವದು.

**ಏವಂ ಗಾಂಚ ಹಿರಣ್ಯಂಚ ವಸ್ತ್ರಮನ್ನಂ ಮಹೀಂ ತಿಲಾನ್ ।**
**ಅವಿದ್ವಾನ್ ಪ್ರತಿಗೃಣ್ಹಾತಿ ಭಸ್ಮೀಭವತಿ ಕಾಷ್ಠವತ್ ॥**

ಆಕಳು, ಬಂಗಾರ, ಬಟ್ಟೆ, ಅನ್ನ, ಭೂಮಿ, ಎಳ್ಳು ಮೊದಲಾದವುಗಳನ್ನು ಜ್ಞಾನವಿಲ್ಲದ ಶುಂಠನು ದಾನತೆಗೆದುಕೊಂಡರೆ, ಕಟ್ಟಿಗೆಯಂತೆ ಸುಟ್ಟು ಬೂದಿಯಾಗುತ್ತಾನೆ.

ಕೆರೆ ಭಾವಿಗಳನ್ನು ಹೊಸದಾಗಿ ತೋಡಿಸಿದವನೂ, ಹಳೇದನ್ನು ಜೀರ್ಣೋದ್ಧಾರ ಮಾಡಿಸಿದವನೂ ಸ್ವರ್ಗಲೋಕದಲ್ಲಿ ಗೌರವಾದರಗಳನ್ನು ಪಡೆಯುತ್ತಾನೆ. ಬೇಸಿಗೆಯ ಕಾಲದಲ್ಲಿ ಒಂದು ದಿನವಾದರೂ ನೀರು ನಿಲ್ಲುವಷ್ಟು ಹೊಂಡ, ಕುಂಡಗಳನ್ನು ಕಡಿಸಿದವನು ತನ್ನ ಹಿಂದು ಮುಂದಿನ ಏಳು ಕುಲಗಳನ್ನು ಉದ್ಧಾರಮಾಡುವನು. ಹೆರವರ ಮನೆಗಳಲ್ಲಿ ದೀಪಹಾಕಿಸಿ ಪ್ರಕಾಶ ದಾನಮಾಡಿದವರು ಸುಂದರವಾದ ಗಟ್ಟಿಮುಟ್ಟಾದ ಶರೀರವನ್ನು ಹೊಂದುವರು. ಸತ್‌ಪಾತ್ರದಲ್ಲಿ ದಕ್ಷಿಣೆಯನ್ನು ನೀಡುವವರು ಒಳ್ಳೇ ಸ್ಮರಣಶಕ್ತಿಯನ್ನೂ ತೀಕ್ಷ್ಣ ಬುದ್ಧಿಯನ್ನೂ ಹೊಂದುವರು. ಭೂಮಿ, ಹಸು, ದಾಸ ಇವರನ್ನು ಸಿಟ್ಟಿಗೆದ್ದು ದಂಡಿಸಿದಾಗ ಯೋಗ್ಯ ಪಾತ್ರದಲ್ಲಿ ದಕ್ಷಿಣೆಯನ್ನು ಇತ್ತರೆ ಆ ಪಾಪದ ಉಪಮರ್ದವಾಗುವದು. ಮದುವೆ, ಯಜ್ಞ, ದಾನ-ಧರ್ಮಗಳು ನಡೆದಾಗ ವಿಘ್ನಗಳನ್ನುಂಟುಮಾಡಿದವನು ಹೊಲಸಿನಲ್ಲಿ ಹುಳವಾಗಿ ಹುಟ್ಟುವನು.

ಪ್ರಾಣಿಗಳ ಹಿಂಸೆಮಾಡದೆ ಇರುವವನು ಸೌಂದರ್ಯವನ್ನೂ ಐಶ್ವರ್ಯವನ್ನೂ ಹೊಂದುತ್ತಾನೆ. ಕಂದಮೂಲ ಫಲಗಳನ್ನು ತಿಂದು ದೇವರ ಪೂಜೆಮಾಡಿದರೆ ಜಗತ್ತಿನಲ್ಲಿ

ಪೂಜನೀಯ ಆಗುತ್ತಾನೆ. ಸತ್ಯವನ್ನು ನುಡಿದರೆ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾನೆ. ತ್ರಿಕಾಲದಲ್ಲಿ ಸ್ನಾನಮಾಡಿ ದೇವರನ್ನು ಆರಾಧಿಸುವವನು ಸ್ಫುರದ್ರೂಪಿಯಾಗುತ್ತಾನೆ. ಏಕಾದಶಿ ದಿನ ತಪ್ಪದೇ ಉಪವಾಸವನ್ನು ಮಾಡುವವನು ಸ್ವರ್ಗದಲ್ಲಿ ಬಹುಕಾಲ ವಾಸಿಸುತ್ತಾನೆ. ನೆಲದಮೇಲೆ ಯಾವಾಗಲೂ ಮಲಗುವವನು ಇಷ್ಟವಾದ ಗತಿಯನ್ನು ಹೊಂದುತ್ತಾನೆ. ಈ ಬೃಹಸ್ಪತಿಯ ಮತವನ್ನು ಪಠಿಸುವವರ ಆಯುಷ್ಯ, ಜ್ಞಾನ, ಕೀರ್ತಿ, ಸಾಮರ್ಥ್ಯ ಇವು ನಾಲ್ಕೂ ಬೆಳೆಯುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಪೃಥ್ವೀದಾನ-ವಸ್ತ್ರದಾನಗಳ ಪ್ರಶಂಸೆ ಎಂಬ ಮೂವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಶನಿಯ ಪೀಡೆ ತಪ್ಪಿಸಲು ದಶರಥನ ಪ್ರಯತ್ನ. ಅಧ್ಯಾಯ - ೩೪

**ನಾರದ:-** ದೇವಶ್ರೇಷ್ಠನಾದ ಮಹಾದೇವ. ಶನಿಯ ಪೀಡೆಯು ತೊಲಗುವದು ಹೇಗೆ? ಅದನ್ನು ನನಗೆ ಹೇಳು. ನಿನ್ನ ಮುಖದಿಂದ ಕಥಿತವಾದ ಶನಿ ಪೀಡಾಪರಿಹಾರಕ ಉಪಾಯದಿಂದ ಭೂಲೋಕದ ಮಾನವರು ಪಾರಾಗುವರು ಶನಿಕಾಟದಿಂದ.

**ಮಹಾದೇವ:-** ದೇವರ್ಷಿಯೇ, ಶನಿಗ್ರಹದ ಉಪದ್ರವದಿಂದ ಪಾರಾಗುವ ಉಪಾಯವನ್ನು ಹೇಳುತ್ತೇನೆ ಕೇಳು. ಗ್ರಹಗಳಿಗೆಲ್ಲ ದೊರೆ ಈ ಶನಿಗ್ರಹ. ಮೇಲೆ ಇವನು ಸೂರ್ಯಪುತ್ರ. ಕಾಲರೂಪಿಯಾದ ದೇವ ಎಂದೇ ಈ ಮಹಾಗ್ರಹದ ಪ್ರಖ್ಯಾತಿ ಜಗತ್ತಿನಲ್ಲಿ. ಶನಿಯು ಜಟಾಧಾರಿಯು. ಅವನ ಮೈಮೇಲಿನ ಒಂದೊಂದು ಕೂದಲೂ ವಜ್ರಕಠೋರ. ದೈತ್ಯದಾನವರಿಗಂತೂ ಅತ್ಯಂತ ಭೀಕರ ಈ ಶನಿದೇವ. ಇವನ ಅಖ್ಯಾನ ಈ ವರೆಗೂ ಜಗತ್ತಿನಲ್ಲಿ ಪ್ರಖ್ಯಾತವಾಗಿಲ್ಲ. ನಾನು ಅದನ್ನು ರಹಸ್ಯವಾಗಿಯೇ ಇಟ್ಟಿದ್ದೇನೆ. ಯಾರಿಗೂ ಹೇಳಿಲ್ಲ. ಈಗ ನಿನಗೆ ಹೇಳುತ್ತೇನೆ ಕೇಳು.

ಹಿಂದೆ ರಘುರಾಜನ ವಂಶದಲ್ಲಿ ದಶರಥ ಎಂಬ ಹೆಸರಿನ ಚಕ್ರವರ್ತಿಯು ಪ್ರಖ್ಯಾತನಾಗಿದ್ದ. ಸಪ್ತದ್ವೀಪಗಳಿಗೂ ಅಧಿಪತಿಯಾದ ಆ ರಘುಕುಲದ ಅರಸ ಮಹಾಪರಾಕ್ರಮಶಾಲಿ. ಅವನ ಆಸ್ಥಾನದ ಜೋತಿರ್ವಿದ್ವಾಂಸರು ''ಕೃತ್ತಿಕಾ ನಕ್ಷತ್ರದ ಕೊನೆಯಲ್ಲಿದ್ದ ಶನಿಗ್ರಹವು ರೋಹಿಣೀ ನಕ್ಷತ್ರವನ್ನು ಭೇದಿಸಿಕೊಂಡು ಹೊರಟಿದೆ. ಇದಕ್ಕೆ ಶಾಕಟಭೇದವೆನ್ನುವರು. ಇದು ದೇವ ದಾನವರೆಲ್ಲರಿಗೂ ಮಹಾಭಯಂಕರ. ಹನ್ನೆರಡು ವರ್ಷ ಭೀಕರ ಬರಗಾಲವು ಭೂಮಂಡಲದಲ್ಲಿ ತಲೆದೋರುವದು.'' ಎಂದು ಹೇಳಿದರು. ಇದನ್ನು ಕೇಳಿ ದಶರಥರಾಜನು ತನ್ನ ರಾಜ್ಯದ ಮಂತ್ರಿಗಳನ್ನೂ ಮಾನ್ಯ ಮನೀಷಿಗಳನ್ನೂ ಬರಮಾಡಿಕೊಂಡ. ಮಂತ್ರಾಲೋಚನೆಯನ್ನು ಮಾಡಿದ. ಹಳ್ಳಿಪಟ್ಟಣ ದೇಶಕೋಶಗಳಲ್ಲಿದ್ದ ಜನರೆಲ್ಲರೂ ಭಯಭ್ರಾಂತರಾದರು. ಲೋಕಕ್ಷಯವೇ ಬಂದಿತು ಎಂದು ನಾಗರಿಕರೂ ಗ್ರಾಮೀಣರೂ ಚಿಂತಾಕ್ರಾಂತರಾದರು. ಆಗ ರಾಜನು ವಶಿಷ್ಠನ ಬಳಿಗೆ ಬಂದು ಅವರಿಗೆ ಕೈಮುಗಿದು ಕೇಳಿದ.

**ದಶರಥ:-** ಪೂಜ್ಯರೇ, ಇದಕ್ಕೇನು ಉಪಾಯ? ಶನಿಗ್ರಹದ ಈ ರೋಹಿಣೀ ನಕ್ಷತ್ರ ಭೇದನಕ್ಕೆ ಪ್ರತೀಕಾರವು ಏನಾದರೂ ಇದ್ದರೆ ಹೇಳಿರಿ.

**ವಶಿಷ್ಠ:-** ರಾಜನ್, ರೋಹಿಣೀ ನಕ್ಷತ್ರವು ಪ್ರಾಜಾಪತ್ಯ ನಕ್ಷತ್ರ. ಅದು ಭಿನ್ನವಾದರೆ ಯಾವ ಪ್ರಜೆಯೂ ಉಳಿಯಲಾರ. ಈ ಅನಿಷ್ಟವನ್ನು ಬ್ರಹ್ಮ, ಇಂದ್ರ ಮುಂತಾದ ಯಾವ ದೇವತೆಯೂ ತಪ್ಪಿಸಲಾರ.

ವಶಿಷ್ಠರ ಈ ಮಾತನ್ನು ಕೇಳಿ ದಶರಥ ಮಹಾರಾಜನಿಗೆ ಇನ್ನೂ ಚಿಂತೆಯಾಯಿತು. ದುರಂತ ಚಿಂತಾಕ್ರಾಂತನಾದ ಆ ಸೂರ್ಯಕುಲದ ಸಮ್ರಾಟನು ಕೂಡಲೇ ತನ್ನ ಧನುರ್ಬಾಣಗಳನ್ನು ತೆಗೆದುಕೊಂಡ. ರಥಾರೂಢನಾಗಿ ನಕ್ಷತ್ರಮಂಡಲಕ್ಕೆ ಹಾರಿದ. ಸೂರ್ಯಮಂಡಲದ ಮೇಲೆ ಒಂದೂಕಾಲ ಲಕ್ಷ ಯೋಜನದ ಅಂತರದಲ್ಲಿದ್ದ ರೋಹಿಣೀ ಮಂಡಲದ ಪೃಷ್ಠಭಾಗದಲ್ಲಿ ನಿಂತುಕೊಂಡ.

ತುಂಗೋತ್ತುಂಗವಾದ ರೋಹಿಣೀ ಗ್ರಹದ ಶೃಂಗಾಂಗಣದಲ್ಲಿ ರತ್ನಖಚಿತವಾದ ಬಂಗಾರದ ರಥ. ರಾಜಹಂಸ ಪಕ್ಷಿಗಳಂತೆ ಅಚ್ಚ ಬಿಳಿಬಣ್ಣದ ನಾಲ್ಕು ಕುದುರೆಗಳು ಅದನ್ನು ಎಳೆಯುತ್ತಲಿವೆ. ಆ ತೇರಿನ ತುದಿಯಲ್ಲಿ ದೇದೀಪ್ಯಮಾನವಾದ ಸೂರ್ಯಕುಲದ ಧ್ವಜದಿಂದ ಆ ರಥವು ಇನ್ನೂ ಉನ್ನತೋನ್ನತವಾಗಿ ಕಂಗೊಳಿಸುತ್ತಲಿದೆ. ಅದರ ಮಧ್ಯದಲ್ಲಿ ರತ್ನಖಚಿತವಾದ ಕಿರೀಟಮುಕೋಜ್ವಲನಾಗಿ ಕುಳಿತುಕೊಂಡ ಸರ್ವ ಉರ್ವೀತಲ ಸಾರ್ವಭೌಮ ದಶರಥ ಮಹಾರಾಜ ಎರಡನೇ ಸೂರ್ಯನಂತೆ ಬೆಳಗಿದ ದೇದೀಪ್ಯಮಾನನಾಗಿ. ತನ್ನ ಬಲಗೈ ಹೆಬ್ಬೆರಳು ಹಾಗು ತೋರು ಬೆರಳುಗಳಿಂದ ತನ್ನ ಧನುಸ್ಸಿನ ಧಾರವನ್ನು ಜಗ್ಗಿದ ಕಿವಿಯವರೆಗೆ. ಠೇಂಕರಿಸಿದ ಭೀಕರ ಬಿಲ್ಲನ್ನು. ಹೂಡಿದ ಸಂಹಾರಾಸ್ತ್ರವನ್ನು ಅದನ್ನು ದೂರಿಂದಲೇ ನೋಡಿದ ವಕ್ರದೃಷ್ಟಿಯ ಶನಿ. ಈ ರಾಜೇಂದ್ರನು ಹೆದೆ ಏರಿಸಿ ಹೂಡಿದ ಅಸ್ತ್ರ ಸುರಾಸುರ ಭಯಂಕರ ಎಂದು ತಿಳಿದುಹೋಯಿತು ಆ ಶನೀಶ್ವರನಿಗೆ. ಅದರಿಂದ ಹೃದಯದಲ್ಲಿ ಹೆದರಿದ. ಮೇಲೆ ಮೇಲೆ ನಕ್ಕ. ತುಟಿಯ ತುದಿಗೆ ಮುಗುಳನಗೆಯ ಎಳೆಯನ್ನು ಎಳೆದು ತಂದು ಮೆಲ್ಲನೆ ನುಡಿದ.

**ಶನಿ :-** ರಾಜಶ್ರೇಷ್ಠನಾದ ದಶರಥ, ನಿನ್ನ ಪೌರುಷ ರಿಪುಭಯಂಕರ. ನಿನ್ನ ಪರಾಕ್ರಮ ದೈತ್ಯಭೀಕರ. ಇದನ್ನೆಲ್ಲ ನಾನು ಚೆನ್ನಾಗಿ ಬಲ್ಲೆ. ಆದರೆ ನನ್ನ ಶಕ್ತಿ ಸಾಮರ್ಥ್ಯ ಗಳನ್ನು ನೀನು ಚೆನ್ನಾಗಿ ತಿಳಿದುಕೋ. ದೇವ, ದೈತ್ಯ, ಮನುಷ್ಯ, ಸಿದ್ಧ, ವಿದ್ಯಾಧರ ಯಾರೇ ಇರಲಿ ನಾನು ಕಣ್ಣು ತೆರೆದು ನೋಡಿದ ಮಾತ್ರಕ್ಕೆ ಸುಟ್ಟುಬೂದಿಯಾಗಿ ಬೀಳುವರು. ಆದರೂ ನಾನು ನಿನ್ನ ಮೇಲೆ ಪ್ರೀತನಾಗಿದ್ದೇನೆ. ನಿನ್ನ ಪೌರುಷದಿಂದ ಸಂತುಷ್ಟನಾಗಿದ್ದೇನೆ ನಿನ್ನ ತಪಸ್ಸಿನಿಂದ. ನಿನಗೆ ಏನು ಬೇಕು? ಹೇಳು. ಬಯಸಿದ್ದನ್ನು ನೀಡುತ್ತೇನೆ. ಬೇಡಿದ್ದನ್ನು ಕೊಡುತ್ತೇನೆ.'

**ದಶರಥ:-** ಸೂರ್ಯಪುತ್ರನಾದ ಶನಿದೇವ, ನಾನು ನಿನ್ನಲ್ಲಿ ಬೇರೆ ಯಾವ ವರವನ್ನೂ ಯಾಚಿಸುವದಿಲ್ಲ. ಆದರೆ ನೀನು ಸೂರ್ಯ ಚಂದ್ರರು ಇರುವವರೆಗೆ ಹಾಗೂ ಭೂಮಿ ಸಮುದ್ರಗಳು ಇರುವವರೆಗೆ ರೋಹಿಣೀ ನಕ್ಷತ್ರವನ್ನು ಭೇದಿಸಿಕೊಂಡು ಹೋಗಬಾರದು. ಇದೇ ನಾನು ನಿನ್ನನ್ನು ಬೇಡಿಕೊಳ್ಳುವ ವರ.

**ಶನಿ:-** ಒಳ್ಳೇ ವ್ರತಗಳನ್ನು ಮಾಡುವ ಮಹಾರಾಜಾ, ನಾನು ಈ ನಿನ್ನ ವರಯಾಚನೆಯಿಂದ ಪೂರ್ವ ಪರಿತುಷ್ಟ. ಇನ್ನೂ ಯಾವದಾದರೊಂದು ವರಬೇಡಿಕೋ.

**ದಶರಥ:-** ನೀನು ಶಕಟ ಭೇದನವನ್ನು ಮಾಡಬಾರದು. ದೇಶದಲ್ಲಿ ಹನ್ನೆರಡು ವರ್ಷ ಭೀಕರ ಬರಗಾಲವನ್ನು ತರಬಾರದು. ಯಾವ ಕಾಲದಲ್ಲಿಯೂ ದ್ವಾದಶ ವಾರ್ಷಿಕವಾದ ಕ್ಷಾಮವು ಈ ತಿರೆಯಲ್ಲಿ ತಲೆದೋರದಂತೆ ಮಾಡು.

**ಶನಿ:-** ಮಹಾರಾಜ, ನಿನ್ನ ಅಪೇಕ್ಷೆಯಂತೆ ವರ ಕೊಟ್ಟಿದ್ದೇನೆ. ಇನ್ನು ಎಂದೂ ಮಹಿಮಂಡಲದಲ್ಲಿ ಹನ್ನೆರಡು ವರ್ಷದಷ್ಟು ಧೀರ್ಘಕಾಲೀನ ಕ್ಷಾಮಡಾಮರಗಳು. ಉಂಟಾಗುವದಿಲ್ಲ. ಇಂಥ ಭೀಕರ ಬರಗಾಲಗಳನ್ನು ಶಾಶ್ವತವಾಗಿ ಕೊನೆಗಾಣಿಸಿದ ಕೀರ್ತಿಯು ನಿನಗೆ ಸೇರುವದು.

ಶನೀಶ್ವರನಿಂದ ಈ ಎರಡು ವರಗಳನ್ನು ಪಡೆದು ಮಹಾರಾಜನಿಗೆ ಪರಮಾನಂದ. ಹಿಗ್ಗಿನ ಮುಳ್ಳುಗಳು ನಿಮಿರಿ ನಿಂತವು ಅವನ ಮೈತುಂಬ. ಕೂಡಲೇ ಅವನು ತನ್ನ ಕೈಯಲ್ಲಿಯ ಬಿಲ್ಲುಬಾಣಗಳನ್ನು ಚಲ್ಲಿ ಬಿಟ್ಟ ತಾನು ನಿಂತ ರಥದಲ್ಲಿಯೇ. ಎರಡೂ ಕೈಗಳನ್ನು ಜೋಡಿಸಿದ. ಶನೀಶ್ವರನನ್ನು ಮುಕ್ತಕಂಠದಿಂದ ಸ್ತೋತ್ರ ಮಾಡತೊಡಗಿದ.

## ದಶರಥ ಕೃತ ಶನಿಸ್ತೋತ್ರ

**ದಶರಥ ಉವಾಚ**

**ನಮಃ ಕೃಷ್ಣಾಯ ನೀಲಾಯ ಶಿತಿಕಂಠ ನಿಭಾಯಚ ।**
**ನಮಃ ಕಾಲಾಗ್ನಿ ರೂಪಾಯ ಕೃತಾಂತಾಯಚ ವೈನಮಃ ॥೧॥**

ಕೃಷ್ಣವರ್ಣನೂ ಕಾಲಾಗ್ನಿರೂಪನೂ ಮಹಾದೇವನಂತೆ ಕಾಂತಿ ಉಳ್ಳವನೂ ಆದ ಶನೀಶ್ವರನಿಗೆ ನಮಸ್ಕಾರ.

**ನಮೋ ನಿರ್ಮಾಂಸದೇಹಾಯ ದೀರ್ಘಶ್ಮಶ್ರು ಜಟಾಯಚ ।**
**ನಮೋ ವಿಶಾಲನೇತ್ರಾಯ ಶುಷ್ಕೋದರ ಭಯಾಕೃತೇ ॥೨॥**

ಮಾಂಸರಹಿತ ದೇಹ ಉಳ್ಳ, ಉದ್ದುದ್ದಾದ ಜಡೆ ಮೀಸೆಗಳಿಂದ ವಡಗೂಡಿದ, ವಿಶಾಲನೇತ್ರ ಉಳ್ಳ, ಭಯಾನಕ ಅಕಾರದ ಶನಿದೇವನಿಗೆ ವಂದನೆ.

**ನಮಃ ಪುಷ್ಕಲಗಾತ್ರಾಯ ಸ್ಥೂಲರೊಮ್ಣೇಽಥ ವೈನಮಃ ।**
**ನಮೋ ದೀರ್ಘಾಯ ಶುಷ್ಕಾಯ ಕಾಲದಂಷ್ಟ್ರ ನಮೋಽಸ್ತುತೇ ॥೩॥**

ಸರ್ವಾವಯವ ಸಂಪನ್ನನಾದ, ದೊಡ್ಡ ಕೂದಲಿನ, ಎತ್ತರ ನಿಲುವಿನ, ಒಣಗಿದ ಮೈ ಉಳ್ಳ, ಚೂಪಾದ ಹಲ್ಲು ಉಳ್ಳ, ಶನಿದೇವನೇ ನಿನಗೆ ನಮಸ್ಕಾರ.

**ನಮಸ್ತೇ ಕೋಟರಾಕ್ಷಾಯ ದುರ್ನಿರೀಕ್ಷಾಯ ವೈನಮಃ ।**
**ನಮೋ ಘೋರಾಯ ರೌದ್ರಾಯ ಭೀಷಣಾಯ ಕಪಾಲಿನೇ ॥೪॥**

ಮರದ ಹೊದರಿನಂತೆ ಕಣ್ಣುಉಳ್ಳ, ನೋಡಲಿಕ್ಕೆ ಅಶಕ್ಯನಾದ, ರೌದ್ರರೂಪದ, ಭೀಕರ ಕಪಾಲಿಗೆ ನಮಸ್ಕಾರ.

**ನಮಸ್ತೇ ಸರ್ವಭಕ್ಷಾಯ ವಲೀಮುಖ ನಮೋಽಸ್ತುತೇ ।**
**ಸೂರ್ಯಪುತ್ರ ನಮಸ್ತೇಸ್ತು ಭಾಸ್ಕರೇ ಭಯದಾಯಚ ॥೫॥**

ಸರ್ವಭಕ್ಷಣನಾದ, ನಿರಿಗೆಗಟ್ಟಿದ ಮುಖವುಳ್ಳ, ಭೀತಿಯನ್ನು ಹುಟ್ಟಿಸುವ ಸೂರ್ಯಪುತ್ರನೆ, ನಿನಗೆ ನಮಸ್ಕಾರ.

**ಅಧೋದೃಷ್ಟೇ ನಮಸ್ತೇಽಸ್ತು ಸಂವರ್ತಕ ನಮೋಽಸ್ತುತೇ ।**
**ನಮೋ ಮಂದಗತೇ ತುಭ್ಯಂ ನಿಸ್ತ್ರಿಂಶಾಯ ನಮೋಽಸ್ತುತೇ ॥೬॥**

ಅಧೋ ದೃಷ್ಟಿ ಉಳ್ಳ, ವಿನಾಶಕಾರಿಯಾದ ಖಡ್ಗವನ್ನು ಹಿಡಿದ, ಮಂದಗತಿ ಉಳ್ಳ, ಶನಿದೇವ, ನಿನಗೆ ನನ್ನ ನಮಸ್ಕಾರ.

**ತಪಸಾ ದಗ್ಧದೇಹಾಯ ನಿತ್ಯಂ ಯೋಗರತಾಯಚ ।**
**ನಮೋ ನಿತ್ಯಂ ಕ್ಷುಧಾರ್ತಾಯಾಽತೃಪ್ತಾಯಾಚ ವೈನಮಃ ॥೭॥**

ತಪಸ್ಸಿನಿಂದ ಸುಟ್ಟುಹೋದ ದೇಹವುಳ್ಳ, ಯೋಗಸಾಧನೆ ಮಾಡಿ ಮತ್ತು ಯಾವಾಗಲೂ ಹಸಿದಿರುವ ಅತೃಪ್ತನಾದ ನಿನಗೆ ನಮಸ್ಕಾರ.

**ಜ್ಞಾನಚಕ್ಷುರ್ನಮಸ್ತೇಸ್ತು ಕಶ್ಯಪಾತ್ಮಜ ಸೂನವೇ ।**
**ತುಷ್ಟೋ ದದಾತಿ ವೈರಾಗ್ಯಂ ರುಷ್ಟೋ ಹರತಿತತ್ ಕ್ಷಣಾತ್ ॥೮॥**

ಸೂರ್ಯಪುತ್ರನಾದ ಶನಿದೇವ ನಿನಗೆ ಜ್ಞಾನವೇ ಕಣ್ಣು. ನೀನು ಸಂತುಷ್ಟನಾದರೆ ರಾಜ್ಯವನ್ನು ಕೊಡುವೆ. ಸಿಟ್ಟಿಗೆದ್ದರೆ ಇದ್ದ ರಾಜ್ಯವನ್ನೂ ಕಸಿದುಕೊಳ್ಳುವೆ.

**ದೇವಾ ಸುರಮನುಷ್ಯಾಶ್ಚ ಸಿದ್ಧವಿದ್ಯಾಧರ ಮಹೋರಗಾಃ ।**
**ತ್ವಯಾ ವಿರೋಧಿತಾಃ ಸರ್ವೇ ನಾಶಂಯಾತಿ ಸಮೂಲತಃ ॥೯॥**

ದೇವತೆಗಳು, ದೈತ್ಯರು, ಮನುಷ್ಯರು, ಸಿದ್ಧರು, ವಿದ್ಯಾಧರರು, ಹಾವುಗಳು, ಯಾರೇ ಇರಲಿ. ನಿನ್ನ ದೃಷ್ಟಿಪಾತದಿಂದ ಸಮೂಲವಾಗಿ ನಾಶಹೊಂದುವರು.

**ಪ್ರಸಾದಂ ಕುರುಮೇ ದೇವ ವರಾರ್ಹೋಽಹ ಮುಪಾಗತಃ ।**
**ಏವಂ ಸ್ತುತಸ್ತದಾ ಸೌರಿರ್ಗ್ರಹ ರಾಜೋ ಮಹಾಬಲಃ ॥೧೦೦॥**

ಗ್ರಹಗಳಿಗೆ ರಾಜನಾದ ಶನಿದೇವ, ಇಂಥ ಅನೇಕ ಗುಣಗಳಿಂದ ಕೂಡಿದ ನೀನು ನನ್ನ ಮೇಲೆ ಪ್ರಸನ್ನನಾಗು. ನಾನು ನಿನ್ನಿಂದ ವರಗಳನ್ನು ಪಡೆಯಲು ಅರ್ಹನಾಗಿದ್ದೇನೆ.

ಈ ರೀತಿಯಾಗಿ ದಶರಥ ಮಹಾರಾಜನು ಮಾಡಿದ ಸ್ತೋತ್ರದಿಂದ ಗ್ರಹಗಳ ಅಧಿಪತಿಯಾದ ಆ ಶನಿದೇವ ಸಂತುಷ್ಟನಾದ ಮತ್ತು ಮಾತನಾಡಿದ.

**ಶನಿ:-** ರಾಜೇಂದ್ರ, ಈ ನಿನ್ನ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ನೀನು ರಘುಕುಲದ ಶ್ರೇಷ್ಠ ಪುತ್ರ. ನಿನ್ನ ಇಚ್ಛೆಗೆ ಬಂದಂತೆ ವರವನ್ನು ಬೇಡಿಕೋ. ನಾನು ನೀಡುತ್ತೇನೆ.

**ದಶರಥ :-** ಸೂಯ।ನಂದನ, ಇಂದಿನಿಂದ ನೀನು ಯಾವ ಮನುಷ್ಯರಿಗೂ ದೇವಾಸುರರಿಗೂ, ಪಶುಪಕ್ಷಿಗಳಿಗೂ, ಪೀಡೆಯನ್ನು ಉಂಟುಮಾಡಬಾರದು. ಯಾರನ್ನೂ ಕಾಡಬಾರದು.

**ಶನಿ:-** ಗ್ರಹಗಳು ಎನ್ನುವವೆಲ್ಲವೂ ಕಾಡುವಂಥವುಗಳೇ, ಪೀಡಾಕರವಾದವುಗಳೇ ಗ್ರಹಗಳು. ನಾನು ಕೂಡಾ ಅಂಥದೇ ಒಂದು ಗ್ರಹ. ಅಂದಬಳಿಕ ನಾನು ಕಾಡದೇ ಇರುವದು ಹೇಗೆ ಶಕ್ಯ? ನೀನು ಅಶಕ್ಯವಾದದ್ದನ್ನು ಯಾಚನೆ ಮಾಡಿರುವೆ. ಆದರೂ ಕೂಡ ನಿನಗೆ ನಾನು ಒಂದು ಯೋಗ್ಯವಾದ ಉಪಾಯವನ್ನು ಹೇಳುತ್ತೇನೆ ಕೇಳು. ನೀನು ಇದೀಗ

ಹೇಳಿದ ಶನಿ ಸ್ತೋತ್ರವನ್ನು ಯಾರು ಪ್ರತಿನಿತ್ಯವೂ ಒಂದು ಸಲ ಅಥವಾ ಎರಡು ಸಲ ಪಠಿಸುವರೋ ಅವರನ್ನು ನಾನು ಕಾಡುವದಿಲ್ಲ. ಈ ದಶರಥ ಪ್ರೋಕ್ತವಾದ ಶನಿಸ್ತುತಿ ಮಂತ್ರವನ್ನು ಭಕ್ತಿಯಿಂದ ಪಠಿಸುವ ದೇವದಾನವ ಮಾನವರಿಗೆ ಬಾಲ್ಯ ತಾರುಣ್ಯದಲ್ಲಿ ಮರಣ ಬಾರದಂತೆ ನೋಡಿಕೊಳ್ಳುತ್ತೇನೆ. ಮತ್ತು ನಾನೇ ಮೃತ್ಯುವಿನಲ್ಲಿ ಅಂತಗರ್ತನಾಗಿ ಜೀವನದ ಕೊನೆಯದಾದ ನಾಲ್ಕನೆಯ ಆಯುರ್ಭಾಗದಲ್ಲಿಯೇ ಕಾಲೋಚಿತವಾದ ಮರಣವು ಬರುವಂತೆ ಮಾಡುತ್ತೇನೆ.

ನನ್ನ ವಾರವಾದ ಶನಿವಾರದಂದು ಶ್ರದ್ಧೆಯಿಂದ ಶುಚಿರ್ಭೂತನಾಗಿ ಕಬ್ಬಿಣದ ಶನಿ ಪ್ರತಿಮೆಯನ್ನು ಮಾಡಿಸಿ ಬನ್ನಿಯ ಎಲೆಗಳಿಂದ ಪೂಜಿಸಬೇಕು. ಎಳ್ಳು, ಉದ್ದು, ಅನ್ನ, ಮೊದಲಾದ ಪದಾರ್ಥಗಳನ್ನು ಮಾಡಿ ನೈವೇದ್ಯ ತೋರಿಸಬೇಕು. ಕಬ್ಬಿಣ ಅಂಶ ಉಳ್ಳ ನಾಣ್ಯವನ್ನು ದಕ್ಷಿಣಾರೂಪವಾಗಿ ದಾನಕೊಡಬೇಕು. ಕಪಿಲಗೋವನ್ನು ಬ್ರಾಹ್ಮಣನಿಗೆ ದಾನಕೊಡಬೇಕು. ನೀನು ಇದೀಗ ಹೇಳಿದ ಸ್ತೋತ್ರದಿಂದ ಪೂಜಿಸಿ ಅದನ್ನೇ ಜಪಮಾಡಿ ಕೈ ಮುಗಿದು ನನ್ನನ್ನು ಆರಾಧನಾ ಮಾಡಬೇಕು. ಹೀಗೆ ನನ್ನ ಪೂಜೆ ಮಾಡಿದವರಿಗೆ ಯಾವ ಪೀಡೆಯೂ ಆಗದಂತೆ ನೋಡಿಕೊಳ್ಳುತ್ತೇನೆ. ಮಾನವರ ಗೋಚರ, ಜನ್ಮಲಗ್ನ ಗ್ರಹದಶ, ಮತ್ತು ಅಂತರ್ದಶಗಳಲ್ಲಿ ಯಾವದೇ ಪೀಡೆ ಕಾಡಾಟ ಇದ್ದರೂ ಹೀಗೆ ಶನಿ ಪೂಜೆ ಹಾಗೂ ಶನಿ ಮಂತ್ರಪಾಠದಿಂದ ಪರಿಹಾರವಾಗುವವು. ವಸ್ತುತಃ ಗ್ರಹಪೀಡೆಯು ಕಾಲಕ್ಕೆ ತಕ್ಕಂತೆ ಬರುವದಾದ್ದರಿಂದ ಅದು ಅಪರಿಹಾರ್ಯವೇ. ಆದರೂ ನಾನು ಅದನ್ನು ಪರ್ಯಾಯವಾಗಿ ತಪ್ಪಿಸಲು ನಿನಗೆ ಉಪಾಯವನ್ನು ಹೇಳಿಕೊಟ್ಟಿದ್ದೇನೆ.

ಹೀಗೆ ಶನಿದೇವನಿಂದ ಮೂರು ಉಪಾಯಗಳನ್ನು ಪಡೆದು ದಶರಥ ಮಹಾರಾಜನು ಆ ಶನೈಶ್ವರನನ್ನು ವಂದಿಸಿ ಅವನ ಅಪ್ಪಣೆ ಪಡೆದು ರಥಾರೂಢನಾಗಿ ಮರಳಿದ ತನ್ನ ರಾಜಧಾನಿಗೆ. ಅದರಿಂದ ಅವನ ರಾಜ್ಯದಮೇಲೆ ಬಂದ ದೊಡ್ಡ ಕಂಟಕವು ದೂರಾಗಿ ಜನರೆಲ್ಲರೂ ಆನಂದದಿಂದ ನಕ್ಕುನಲಿದಾಡಿದರು. ದಶರಥ ಮಹಾರಾಜನು ರಚಿಸಿದ ಈ ಶನಿಸ್ತೋತ್ರವನ್ನು ಪ್ರತಿ ಶನಿವಾರ ಪ್ರಾತಃಕಾಲದಲ್ಲಿ ಎದ್ದು ಪಠಿಸುವವರ ಹಾಗು ಶ್ರವಣಮಾಡುವವರ ಪಾಪಗಳೆಲ್ಲವೂ ಪರಿಹಾರವಾಗುವವು. ಗ್ರಹನಕ್ಷತ್ರಗಳ ಪೀಡೆಗಳು ದೂರಾಗುವವು.

ವೃದ್ಧ ಎಂಬ ನಗರದಲ್ಲಿ ಶನಿತೀರ್ಥ ಎಂಬ ಸರೋವರವು ಇರುತ್ತದೆ. ಶ್ರಾವಣದಲ್ಲಿ ಅಲ್ಲಿಗೆ ಹೋಗಿ ಆ ಪವಿತ್ರ ತೀರ್ಥದಲ್ಲಿ ಸ್ನಾನಮಾಡಿದರೆ ಗ್ರಹಬಾಧೆಗಳೆಲ್ಲವೂ ಪರಿಹಾರವಾಗುತ್ತವೆ ಎಂದು ಬ್ರಹ್ಮದೇವರೇ ಹೇಳಿದ್ದಾರೆ. ಸ್ವಯಂ ಮಹಾದೇವರೇ (ನಾನೇ) ನಿರ್ಮಿಸಿದ ಆ ಶನಿ ತೀರ್ಥದಲ್ಲಿ ಎಂಭತ್ತುನಾಲ್ಕು ಸಾವಿರ ತೀರ್ಥಗಳ ಸನ್ನಿಧಾನ ಇರುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶನಿಯ ಪೀಡೆ ತಪ್ಪಿಸಲು ದಶರಥನ ಪ್ರಯತ್ನ ಎಂಬ ಮೂವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ತ್ರಿಸ್ಪ್ರಶಾ ಏಕಾದಶೀ ವ್ರತದ ವಿಧಾನ

ಅಧ್ಯಾಯ - ೩೫

**ನಾರದ:-** ಕರ್ಮಬಂಧನದಿಂದ ಜನರ ಮೋಚನಮಾಡುವ ತ್ರಿಸ್ಪ್ರಶಾ ವ್ರತದ ವಿಧಾನವನ್ನು ಹೇಳಿರಿ.

**ಮಹಾದೇವ:-** ಪೂರ್ವಕಾಲದಲ್ಲಿ ಮಾಧವನು ಪ್ರಾಚೀ ಸರಸ್ವತಿ ತೀರದಲ್ಲಿ ಗಂಗೆಯನ್ನು ಉದ್ದೇಶಿಸಿ ಈ ತ್ರಿಸ್ಪ್ರಶಾ ಏಕಾದಶೀ ವಿಷಯವನ್ನು ಹೇಳಿದ್ದ. ಅದನ್ನೇ ನಾನು ನಿನಗೆ ಹೇಳುತ್ತೇನೆ ಕೇಳು.

**ಗಂಗಾ:-** ಹೃಷಿಕೇಶ, ಕಲಿಕಾಲದಲ್ಲಿ ಬ್ರಹ್ಮಹತ್ಯಾ ಸುರಾಪಾನದಂಥ ಅಸಂಖ್ಯ ಪಾಪಗಳನ್ನು ಮಾಡಿದ ಜನರು ಬಂದು ನನ್ನ ನೀರಿನಲ್ಲಿ ಸ್ನಾನಮಾಡುತ್ತಾರೆ. ಅವರ ಕೋಟ್ಯಾವಧಿ ಪಾಪರಾಶಿಗಳಿಂದ ನನ್ನ ಜಲಮಯ ಶರೀರವೆಲ್ಲವೂ ಕಲುಷಿತವಾಗಿ ಹೋಗಿದೆ. ಹೀಗೆ ನನ್ನ ಮೈಗೆ ಮೆತ್ತಿದ ಈ ಪಾಪದ ಮೊತ್ತವು ಕರಗುವ ಬಗೆ ಎಂತು?

**ಪ್ರಾಚೀಮಾಧವ:-** ಮಗಳೇ, ನೀನು ರೋಧಿಸಬೇಡ. ನಿನ್ನ ದುಃಖಕ್ಕೆ ಒಂದು ಪರಿಹಾರವನ್ನು ಹೇಳುತ್ತೇನೆ. ಪ್ರಾಚೀ ಸರಸ್ವತೀ ತೀರದಲ್ಲಿರುವ ಈ ಅರಳೀಮರ ನನ್ನ ವಾಸಸ್ಥಾನ. ನನ್ನ ಎದರು ಇಲ್ಲಿ ಪ್ರಾಚೀದೇವಿ ಇರುತ್ತಾಳೆ. ಮುಂದೆ ಬ್ರಹ್ಮಕುಮಾರಿಯಾದ ಪ್ರಾಚೀಸರಸ್ವತೀ ನದಿಯು ಹರಿಯುತ್ತಾಳೆ. ನಾನು ಕೂಡಾ ಕೋಟಿತೀರ್ಥಗಳಿಂದ ಒಡಗೂಡಿ ಅಲ್ಲಿಯೇ ವಾಸಮಾಡಿರುತ್ತೇನೆ. ಬ್ರಾಹ್ಮಣನನ್ನು ವಧಿಸಿದ. ಶೆರೆಕುಡಿದ, ಹಸುವನ್ನು ಕೊಂದ, ಬ್ರಹ್ಮಸ್ವ ದೇವಸ್ವ ಹರಣಮಾಡಿದ, ಗುರುದ್ರೋಹ ಗೈದ, ಅಭಕ್ಷ್ಯಭಕ್ಷಣ ಮಾಡಿದ ಪಾಪಗಳೆಲ್ಲವೂ ಪ್ರಾಚೀ ಸರಸ್ವತೀ ಸ್ನಾನ ಮಾತ್ರದಿಂದ ತೊಳೆದು ಹೋಗುತ್ತವೆ. ಪಾಪಿಗಳೆಲ್ಲ ಬಂದು ನಿನ್ನ ನೀರಿನಲ್ಲಿ ಮಿಂದು ಬಿಟ್ಟುಹೋದ ಪಾಪದ ಬೆಟ್ಟಗಳನ್ನೆಲ್ಲ ಪುಡಿಗಟ್ಟಿ ಕಡಿದೊಡ್ಡಲು ಪ್ರಾಚೀಸರಸ್ವತೀ ಸ್ನಾನ ಒಂದೇ ಉಪಾಯ.

**ಗಂಗಾ:-** ಮಾಧವ, ನಾನು ಈ ಪ್ರಾಚೀಸರಸ್ವತಿಯಿಂದ ಬಹುದೂರ ಇದ್ದೇನೆ. ಪ್ರತಿನಿತ್ಯವೂ ಅಷ್ಟು ದೂರದ ತಾಣದಿಂದ ಇಲ್ಲಿಗೆ ಬರುವದು ನನಗೆ ಶಕ್ಯವಿಲ್ಲಾ. ಆದುದರಿಂದ ನಾನು ಇದ್ದಲ್ಲಿಯೇ ನನ್ನಲ್ಲಿ ಜನರು ಬಿಟ್ಟುಹೋದ ಪಾಪಗಳ ರಾಶಿಯಲ್ಲಿ ನಾಶವಾಗುವ ಒಂದು ಉಪಾಯವನ್ನು ಹೇಳು.

**ಪ್ರಾಚೀಮಾಧವ:-** ಜಾನ್ಹವಿ, ನೀನು ನನ್ನ ಪಾದದಿಂದ ಹುಟ್ಟಿದ ಮಗಳಲ್ಲವೇ ! ನೀನು ನಿತ್ಯವು ಇಲ್ಲಿಯವರೆಗೆ ನಡೆದು ಬರುವದಿಲ್ಲವಾದರೆ ಬೇರೊಂದು ಉಪಾಯವನ್ನು ಹೇಳುತ್ತೇನೆ ಕೇಳು.

ತ್ರಿಸ್ಪ್ರಶಾ ಎಂಬ ಏಕಾದಶೀ ವ್ರತಮಾಡು. ಈ ಏಕಾದಶಿಯು ಸರಸ್ವತಿ ಕೋಟಿ ಕೋಟಿ ತೀರ್ಥಗಳು. ಮತ್ತು ಸಹಸ್ರಾರು ಯಜ್ಞಗಳು, ನೂರಾರು ಜಪಹೋಮ ತಪೋನುಷ್ಠಾನಗಳಿಗಿಂತ ಮಿಗಿಲಾದದ್ದು.

**ಗಂಗಾ:-** ಮಾಧವ, ಆ ತ್ರಿಸ್ಪ್ರಶಾ ಏಕಾದಶಿ ಅಂದರೆ ಯಾವದು, ಅದರ ಮಹಿಮೆ ಏನು, ದಶಮೀ ಮತ್ತು ಏಕಾದಶೀ ಎರಡೂ ಒಂದೇ ದಿನ ಬಂದರೆ ತಾನೆ ತ್ರಿಸ್ಪ್ರಶಾ ಏಕಾದಶೀ ಅಥವಾ ಬೇರೆ ಆದೆಯೋ ಇದನ್ನೆಲ್ಲ ನನಗೆ ಹೇಳು.

**ಮಾಧವ:-** ದಶಮೀ ಕೂಡಿದ ಏಕಾದಶಿಯು ಅಸುರೀ ತ್ರಿಸ್ಪೃಶಾ ಎನ್ನಿಸುತ್ತದೆ. ಆಯುಷ್ಯವನ್ನು ಬಲವನ್ನು ನಾಶಪಡಿಸುವ ಅಸುರೀ ಏಕಾದಶಿಯನ್ನು ರಜಸ್ವಲೆಯಾದ ನಾರಿಯಂತೆ ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು. ಏಕಾದಶೀ ದ್ವಾದಶೀ ರಾತ್ರಿಶೇಷದಲ್ಲಿ ತ್ರಯೋದಶೀ ಸ್ಪೃಷ್ಟವಾದ ಏಕಾದಶಿಯು, ತ್ರಿಸ್ಪೃಶಾ ಏಕಾದಶಿ ಎಂದು ಕರೆಯಲ್ಪಡುತ್ತದೆ. ದಶಮೀ ವೇಧವಾಗದ ಅಂಥ ಏಕಾದಶಿಯಂದು ಉಪವಾಸ ಮಾಡಿದರೆ ಹತ್ತುಸಾವಿರ ಹಿಂಸೆಗಳನ್ನು ಮಾಡಿದ್ದರೂ, ಎಂಥ ಅಪರಾಧಗಳನ್ನು ಗೈದಿದ್ದರೂ ಪ್ರಾಯಶ್ಚಿತ್ತ ವಿಧಾನದಿಂದ ನಾಶವಾಗುತ್ತವೆ. ದಶಮೀ ವೇಧ ತಗಲಿದ ಏಕಾದಶಿಯಂದು ಉಪವಾಸ ಮಾಡಿದರೆ ಹಾಲಾಹಲ ವಿಷವನ್ನೇ ತಿಂದಂತೆ. ಅದರಿಂದ ಅವರ ಸಂತತಿಯೆಲ್ಲವೂ ನಷ್ಟವಾಗುವದು. ಅವರ ವಂಶವೇ ನರಕದಲ್ಲಿ ಬೀಳುವದು. ಇಂಥ ಅಪರಾಧವನ್ನು ನಾನು ಎಂದಿಗೂ ಕ್ಷಮಿಸಲಾರೆ.

**ಗಂಗಾ:-** ಜಗನ್ನಾಥ, ನಿನ್ನ ವಚನದಂತೆ ನಾನು ತ್ರಿಸ್ಪೃಶಾ ಏಕಾದಶೀ ವ್ರತವನ್ನು ಮಾಡಿ ಸರ್ವಪಾಪಗಳಿಂದ ಮುಕ್ತಳಾಗುತ್ತೇನೆ. ಈ ಏಕಾದಶಿಯನ್ನು ಮಾಡುವ ರೀತಿ ಯಾವದು ಅದನ್ನು ನನಗೆ ಹೇಳು. ನಾನು ಅದನ್ನು ಮಾಡಿ ದೇವ ದೇವೇಶನಾದ ದಾಮೋದರನನ್ನು ಪ್ರಸನ್ನೀಕರಿಸುತ್ತೇನೆ.

**ಮಾಧವ:-** ದೇವಿ, ತ್ರಿಸ್ಪೃಶಾ ಏಕಾದಶೀ ವಿಧಾನವನ್ನು ಹೇಳುತ್ತೇನೆ ಕೇಳು. ಒಂದು ಪಲ ಅಥವಾ ಪಲ ತೂಕದ ಬಂಗಾರದ ಮಾಧವನ ಪ್ರತಿಮೆಯನ್ನು ತನ್ನ ಯೋಗ್ಯತಾನುಸಾರವಾಗಿ ಮಾಡಿಸಬೇಕು. ಒಂದು ಶುಭ್ರವಾದ ಕೊಡದಲ್ಲಿ ನೀರು ತುಂಬಿ ಅದರಲ್ಲಿ ಐದು ರತ್ನಗಳನ್ನು ಹಾಕಿ ಅದರ ಮೇಲೆ ಒಂದು ತಾಮ್ರದ ಪಾತ್ರೆಯನ್ನು ಇರಿಸಬೇಕು. ಅದಕ್ಕೆ ಹೂವಿನ ಮಾಲೆಗಳನ್ನು ಸುತ್ತಿ ಕೃಷ್ಣ ಪ್ರತಿಮೆಗೆ ಸ್ನಾನಮಾಡಿಸಿ, ಕರ್ಪೂರ ಗಂಧ ಲೇಪನ ಮಾಡಿ ಆ ತಾಮ್ರ ಪಾತ್ರೆಯಲ್ಲಿ ಸ್ಥಾಪನೆ ಮಾಡಬೇಕು. ಎರಡು ವಸ್ತ್ರಗಳನ್ನು ಹೊದಿಸಬೇಕು. ವೇದೋಕ್ತ ಮಂತ್ರಗಳಿಂದ ತತ್ ತತ್ ಕಾಲೋಚಿತವಾದ ಹೂಗಳಿಂದಲೂ ಕೋಮಲವಾದ ತುಳಸೀದಳಗಳಿಂದಲೂ ದೇವರ ಪೂಜೆಯನ್ನು ಮಾಡಬೇಕು. ಬಗೆಬಗೆಯ ಹಣ್ಣು ಹಂಪಲಗಳನ್ನು ನೈವೇದ್ಯಕ್ಕೆ ತಂದು ಇಡಬೇಕು. ಆ ವಿಷ್ಣುಮೂರ್ತಿಗೆ ತಲೆಯ ಮೇಲೆ ಛತ್ರ, ಪಾದಗಳ ಕೆಳಗೆ ಪಾದುಕಾ, ಕೊರಳಲ್ಲಿ ಜನಿವಾರ, ಕೈಯಲ್ಲಿ ಬಿದರಿನ ದಂಡ ಇರಿಸಬೇಕು.

''**ದಾಮೋದರಾಯ ನಮಃ**'' ಎಂದು ಪಾದಗಳನ್ನು ಪೂಜಿಸಬೇಕು.

''**ಮಾಧವಾಯ ನಮಃ**'' ಎಂದು ಮೊಳಕಾಲುಗಳನ್ನೂ

''**ಕಾಮಪ್ರದಾಯನಮಃ**'' ಎಂದು ಗುಹ್ಯ ಇಂದ್ರಿಯವನ್ನೂ

''**ವಾಮನಮೂರ್ತಯೇನಮಃ**'' ಎಂದು ಕಟಿಪ್ರದೇಶವನ್ನು

''**ಪದ್ಮನಾಭಾಯನಮಃ**'' ಎಂದು ಹೊಕ್ಕಳವನ್ನು

''**ವಿಶ್ವಯೋನಯೇನಮಃ**'' ಎಂದು ಜಠರವನ್ನು

''**ವೈಕುಂಠವಾಸಿನೇನಮಃ**'' ಎಂದು ಕಂಠವನ್ನು

''**ಸಹಸ್ರಬಾಹವೇನಮಃ**'' ಎಂದು ಎರಡೂ ಬಾಹುಗಳನ್ನು

''**ಯೋಗರೂಪಿಣೇನಮಃ**'' ಎಂದು ಎರಡೂ ಕಣ್ಣುಗಳನ್ನು

ಸಹಸ್ರಶೀರ್ಷಾಯನಮಃ ಎಂದು ತಲೆಯನ್ನು ಮಾಧವಾಯನಮಃ ಎಂದು ಸರ್ವಾಂಗಗಳನ್ನು ಹೂ ತುಳಸಿಗಳಿಂದ ಪೂಜಿಸಬೇಕು. ಅನಂತರ ಕೈಯಲ್ಲಿ ನೀರು ತುಂಬಿದ ಶಂಖವನ್ನು ಹಿಡಿದು ಅದರ ಮೇಲೆ ತೆಂಗಿನ ಕಾಯಿಯನ್ನು ಇಟ್ಟು.

**''ನಾರಕಂತು ಭಯಂದೇವ ಭಯಂದುರ್ಗತಿ ಸಂಭವಮ್ ।**
**ಯನ್ಮಮಸ್ಯಾನ್ಮಹಾದೇವ ಐಹಿಕಂ ಪಾರಲೌಕಿಕಂ ।**
**ತೇನದೇವೇಶ ಮಾಂರಕ್ಷ ಗ್ರಹಾಣಾರ್ಘ್ಯಂ ನಮೋಸ್ತುತೇ ॥**
ಎಂಬ ಮಂತ್ರದಿಂದ ದೇವರಿಗೆ ಅರ್ಘ್ಯವನ್ನು ನೀಡಬೇಕು ಮತ್ತು

**ಕೃಪಾದೃಷ್ಟಿಃ ಸದೈವಾಸ್ತು ದಾಮೋದರ ಮಮೌಪರಿ ।**

ದಾಮೋದರನೇ, ನನ್ನ ಮೇಲೆ ನಿನ್ನ ಕೃಪಾದೃಷ್ಟಿಯು ಯಾವಾಗಲೂ ಇರಲಿ ಎಂದು ಪ್ರಾರ್ಥನೆಯನ್ನು ಮಾಡಬೇಕು. ಅನಂತರ ಧೂಪಾರತಿ, ದೀಪಾರತಿ, ನೈವೇದ್ಯ, ನೀರಾಜನ ಮಂಗಳಾರ್ತಿ ಮುಂತಾದ ವಿಧಿಗಳಿಂದ ದೇವರ ಪೂಜೆಯನ್ನು ಮಾಡಬೇಕು. ಬಳಿಕ ದೇವರ ತಲೆಯ ಮೇಲೆ ಶಂಖಭ್ರಮಣಮಾಡಿ, ಅಪರಾಧ ಕ್ಷಮಾಪಣೆಯನ್ನು ಕೇಳಿಕೊಂಡು ಪೂಜೆಯನ್ನು ಮುಗಿಸಬೇಕು.

ಅನಂತರ ಗುರುಗಳಿಗೆ ಬಟ್ಟೆ, ಬಂಗಾರ, ಅಂಗಿ, ಟೊಪ್ಪಿಗೆ, ಕೊಟ್ಟು ಗುರು ಪೂಜೆಯನ್ನು ಮಾಡಬೇಕು. ಆ ಬಳಿಕ ಸಂಗೀತ ನೃತ್ಯ ಮುಂತಾದ ಸೇವೆಗಳಿಂದ ಜಾಗರವನ್ನು ಮಾಡಬೇಕು. ರಾತ್ರಿ ಕಳೆದ ಬಳಿಕ ದೇವರಿಗೆ ಅರ್ಘ್ಯವನ್ನು ಇತ್ತು ಸ್ನಾನ, ಸಂಧ್ಯಾವಂದನೆ, ದೇವತಾರ್ಚನ, ವೈಶ್ವದೇವ, ಬಲಿಹರಣ ಮುಂತಾದವುಗಳನ್ನು ಮಾಡಿ ಬ್ರಾಹ್ಮಣ ಭೋಜನ ಮಾಡಿಸಿ, ತಾನೂ ಕೂಡ ಬಾಂಧವರೊಂದಿಗೆ ಕೂಡಿಕೊಂಡು ಭೋಜನ ಮಾಡಬೇಕು.

**ಮಹಾದೇವ:-** ನಾರದ, ರೋಮಹರ್ಷಣವಾದ ಈ ತ್ರಿಸ್ಪೃಶಾ ಏಕಾದಶೀ ವ್ರತದ ವಿಧಾನವನ್ನು ಶ್ರವಣ ಮಾಡಿದರೆ ಗಂಗಾಸ್ನಾನದ ಫಲ ಬರುವದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಯಾವ ಜಾತಿಯರಾದರೂ ಈ ಏಕಾದಶೀ ವ್ರತವನ್ನು ಮಾಡಿದರೆ ಮುಕ್ತಿಯನ್ನು ಹೊಂದುತ್ತಾರೆ. ಮಂತ್ರಗಳಲ್ಲಿ ವಾಸುದೇವ ದ್ವಾದಶಾಕ್ಷರ ಮಂತ್ರವಿದ್ದರೆ ವ್ರತಗಳಲ್ಲಿ ಏಕಾದಶೀ ವ್ರತವು ಶ್ರೇಷ್ಠವಾಗಿರುತ್ತದೆ. ಈ ತ್ರಿಸ್ಪೃಶಾ ಏಕಾದಶೀ ವ್ರತ ಮಹಿಮೆಯನ್ನು ಸ್ವಯಂ ಶ್ರೀಕೃಷ್ಣನು ವೇದವ್ಯಾಸರ ಮುಂದೆ ಹೇಳಿದನು. ಅವರು ಇದನ್ನು ಪುರಾಣ ಪ್ರಸಿದ್ಧಿಯನ್ನು ಮಾಡಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ತ್ರಿಸ್ಪೃಶಾ ಏಕಾದಶೀ ವ್ರತದ ವಿಧಾನ ಎಂಬ ಮೂವತ್ತೈದನೇಯ ಅಧ್ಯಾಯ ಮುಗಿದುದು*

—o—

## ಉನ್ಮೀಲಿನೀ ಏಕಾದಶಿಯ ವಿಧಾನ



**ನಾರದ:-** ಧರ್ಮರಾಜ, ಶ್ರವಣ ಮಾತ್ರದಿಂದ ಸಂಸಾರ ಬಂಧನವನ್ನು ಪರಿಹರಿಸುವ ಉನ್ಮೀಲಿನೀ ಏಕಾದಶಿಯ ವ್ರತ ವಿಧಾನವನ್ನು ಹೇಳುತ್ತೇನೆ ಕೇಳು. ಈ ವಿಷಯವನ್ನು ಹಿಂದೆ ಗೌತಮ ಮಹರ್ಷಿಗಳು ವಸುನಾಥ ಎಂಬ ಮಹಾರಾಜನಿಗೆ ವಿವರಿಸಿ ಹೇಳಿದ್ದರು. ಅದನ್ನೇ ನಾನು ನಿನಗೆ ಹೇಳುತ್ತೇನೆ.

**ಗೌತಮ:-** ಏಕಾದಶೀ ಹಗಲು ಇರುಳು ಪೂರ್ತಿ ಇದ್ದು ಪ್ರಾತಃಕಾಲದಲ್ಲಿ ಮರುದಿನ ಒಂದು ಘಟಿಕಾಕಾಲ ಆ ತಿಥಿ ಇದ್ದರೆ ಅದು ಉನ್ಮೀಲಿನೀ ಏಕಾದಶಿ ಎನಿಸುತ್ತದೆ. ಅದು ಶ್ರೀಹರಿಗೆ ವಿಶೇಷ ಪ್ರೀತಿಕರ. ಯಾವ ತಿಂಗಳಲ್ಲಿ ಇಂಥ ಉನ್ಮೀಲಿನೀ ತಿಥಿ ಬರುವದೋ ಆ ದಿನ ಉಪವಾಸಮಾಡಿ ದ್ವಾದಶೀದಿನ ಮಾಸಾಭಿಮಾನಿಯಾದ ಶ್ರೀಹರಿಯನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ಬಂಗಾರದ ಮಾಧವನ ಪ್ರತಿಮೆಯನ್ನು ಮಾಡಿಸಬೇಕು. ಜಲಪೂರ್ಣ ಕಲಶದಲ್ಲಿ ಪಂಚರತ್ನಗಳನ್ನು ಹಾಕಿ ಅದನ್ನು ಗಂಧ, ಪುಷ್ಪ, ಅಕ್ಷತೆ, ಮುತ್ತಿನಮಾಲೆ, ಹೂವಿನಮಾಲೆಗಳಿಂದ ಅಲಂಕರಿಸಿ ಕಲಶಸ್ಥಾಪನೆ ಮಾಡಬೇಕು. ಅದರ ಮೇಲೆ ಗೋದಿ ಅಥವಾ ಅಕ್ಕಿ ಹಾಕಿದ ಅಗಲವಾದ ತಟ್ಟೆಯನ್ನು ಇಟ್ಟು ಅದರ ಮಧ್ಯದಲ್ಲಿ ಚಿನ್ನದ ಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠೆಗೊಳಿಸಬೇಕು. ಅದನ್ನು ಮಲ್ಲಿಗೆ, ಮಾಲತಿ, ಸೇವಂತಿಗೆ ಮುಂತಾದ ಸುಗಂಧಿ ಹೂವುಗಳಿಂದಲೂ ಹಾಗೂ ಮುತ್ತುರತ್ನಗಳಿಂದಲೂ ಅಲಂಕರಿಸಬೇಕು. ಮತ್ತು ಆ ಭಗವನ್ ಮೂರ್ತಿಗೆ ಜೋಡುವಸ್ತ್ರ, ಜನಿವಾರ, ಛತ್ರ, ಚಾಮರ, ಪಾದುಕೆ, ಜಲಪಾತ್ರ, ಸಪ್ತಧಾನ್ಯ, ಹಾಗೂ ಬಗೆಬಗೆಯ ಭಕ್ಷ್ಯಭೋಜ್ಯ ಮುಂತಾದವುಗಳನ್ನು ಸಮರ್ಪಿಸಬೇಕು. ಮತ್ತು ದೇವರ ಎದುರು ಮುದ್ರೆಯ ಜೋಡು, ಬೆಳ್ಳಿ, ಬಂಗಾರ, ಪಾತ್ರೆ, ಮುಂತಾದವುಗಳನ್ನೂ ಹಾಗೂ ಪಾಯಸ ಪಾತ್ರೆಗಳ್ನನೂ ಇಡಬೇಕು. ಮತ್ತು ದೇವರನ್ನು ಷೋಡಶೋಪಚಾರ ವಿಧಿಯಿಂದ ಭಕ್ತಿಯಿಂದ ಪೂಜಿಸಬೇಕು. ಪೂಜೆಯ ಕಾಲದಲ್ಲಿಯೇ ದೇವರ ಎದುರು ಒಂದು ಹಸುವನ್ನು ಕರು ಸಹಿತವಾಗಿ ತಂದು ನಿಲ್ಲಿಸಬೇಕು. ಅದಕ್ಕೆ ವಸ್ತ್ರ, ಅಲಂಕಾರಗಳನ್ನು ಹಾಕಿ ಬಂಗಾರದ ಕೋಡು, ಬೆಳ್ಳಿಯ ಖುರ, ಕಂಚಿನ ಹಿಂಡುವ ಪಾತ್ರೆ, ರತ್ನದ ಬಾಲ, ಮತ್ತು ತಾಮ್ರದ ಧವಸಧಾನ್ಯ ತಿನ್ನಿಸುವ ಪಾತ್ರೆ ಮುಂತಾದವುಗಳಿಂದ ಸಹಿತವಾಗಿ ಆ ಹಸುವನ್ನು ಪೂಜಿಸಿ ನಂತರ ಜ್ಞಾನ ಭಕ್ತಿ ಸಂಪನ್ನನಾದ ತನ್ನ ವಿದ್ಯಾಗುರುಗಳನ್ನು ಕರೆದು ಅವರಿಗೆ ದಾನಕೊಡಬೇಕು. ಮತ್ತು ಬೇರೊಬ್ಬ ಯೋಗ್ಯ ಮನುಷ್ಯನನ್ನು ಕರೆದು ಭಕ್ತಿಯಿಂದ ದಿಂಬು, ಮೇಲ್ಹಾಸು, ಗಾದೆ, ಮೊದಲಾವುಗಳಿಂದ ಕೂಡಿದ ಶಯ್ಯಾದಾನವನ್ನು ನೀಡಬೇಕು. ಈ ದಾನ ಕೊಟ್ಟ ಅನಂತರವೂ ಮತ್ತೆ ದೇವರನ್ನು ತುಳಸೀದಳ ಹಾಗೂ ಆ ತಿಂಗಳಿನಲ್ಲಿ ಅರಳುವ ಹೂಗಳಿಂದ ಪೂಜಿಸಬೇಕು. ಮೊದಲು ಅಲ್ಲಿ ಪ್ರತಿಷ್ಠಿತನಾದ ಕೇಶವಮೂರ್ತಿಗೆ ಧೂಪ ದೀಪ ನೈವೇದ್ಯ ಸಮರ್ಪಣೆ ಮಾಡಿ ಕೆಳಗೆ ಹೇಳಿದ ಮಂತ್ರಗಳಿಂದ ತುಳಸೀ ಪುಷ್ಪಗಳಿಂದ ಪೂಜೆ ಮಾಡಬೇಕು.

**''ಮಾಸಾಭಿಮಾನಿನೇ ನಮಃ । ಚರಣೌ ಪೂಜಯಾಮಿ ।''**

ಎಂದು ಹೇಳಿ ಎರಡೂ ಕಾಲುಗಳ ಮೇಲೆ ತುಳಸಿಯನ್ನು ಅರ್ಪಿಸಬೇಕು

**''ವಿಷ್ಣುರೂಪಿಣೇ ನಮಃ ಜಾನುನೀ ಪೂಜಯಾಮಿ''**
ಎಂದು ಮೊಳಕಾಲುಗಳನ್ನು ಪೂಜಿಸಬೇಕು.

**''ಗುಹ್ಯಪತಯೇ ನಮಃ ಗುಹ್ಯೇ ಪೂಜಯಾಮಿ''**
ಎಂದು ಗುಹ್ಯೇಂದ್ರಿಯವನ್ನೂ

**''ಪೀತವಾಸಸೇ ನಮಃ ಕಟಿಂ ಪೂಜಯಾಮಿ''**
ಎಂದು ಸೊಂಟವನ್ನೂ

**''ಬ್ರಹ್ಮ ಮೂರ್ತಿಭೃತೇ ನಮಃ ನಾಭಿಂ ಪೂಜಯಾಮಿ''**
ಎಂದು ಹೊಕ್ಕಳವನ್ನೂ

**''ವಿಶ್ವಯೋನಯೇ ನಮಃ ಉದರಂ ಪೂಜಯಾಮಿ''**
ಎಂದು ಹೊಟ್ಟೆಯನ್ನೂ

**''ಜ್ಞಾನಗಮ್ಯಾಯ ನಮಃ ಹೃದಯಂ ಪೂಜಯಾಮಿ''**
ಎಂದು ಹೃದಯವನ್ನೂ

**''ವೈಕುಂಠಪತಯೇ ನಮಃ ಕಂಠಂ ಪೂಜಯಾಮಿ''**
ಎಂದು ಕೊರಳನ್ನೂ

**''ಊರ್ಧ್ವಗಾಯ ನಮಃ ಲಲಾಟಂ ಪೂಜಯಾಮಿ''**
ಎಂದು ಹಣೆಯನ್ನೂ

**''ದಕ್ಷಾಂತರಿಣೇ ನಮಃ ಬಾಹೂ ಪೂಜಯಾಮಿ''**
ಎಂದು ಎರಡೂ ತೋಳುಗಳನ್ನೂ

**''ಸುರೇಶಾಯ ನಮಃ ಉತ್ತಮಾಂಗಂ ಪೂಜಯಾಮಿ''**
ಎಂದು ಉತ್ತಮಾಂಗವನ್ನೂ (ತಲೆ)

**''ಸರ್ವಮೂರ್ತಯೇ ನಮಃ ಸರ್ವಾಂಗಂ ಪೂಜಯಾಮಿ''**
ಎಂದು ಎಲ್ಲ ಅವಯವಗಳನ್ನೂ ಹೂ ತುಳಸಿ ದಳಗಳನ್ನು ಏರಿಸಿ ಪೂಜಿಸಬೇಕು. ಬಳಿಕ ಮೂಲರೂಪಿ ಶ್ರೀಹರಿಯ ಕೈಯಲ್ಲಿ ಇರುವ ಆಯುಧಗಳನ್ನೂ ಅವುಗಳನ್ನು ಧರಿಸಿದ ಭಗವನ್ ಮೂರ್ತಿಯನ್ನು ಸ್ಪರ್ಶಮಾಡಿ ತುಳಸೀ ದಳ ಏರಿಸಿ **''ಶಂಖಿನೇ ನಮಃ, ಚಕ್ರಿಣೇ ನಮಃ, ಗದಾಧಾರಿಣೇ ನಮಃ, ಪದ್ಮಹಸ್ತಾಯ ನಮಃ, ಶಾರಂಗಿಣೇ ನಮಃ''** ಎಂದು ತುಳಸಿ ಅರ್ಪಿಸಿ ನಮಸ್ಕರಿಸಬೇಕು. ಅನಂತರ ಶಂಖದಲ್ಲಿ ನೀರನ್ನು ಹಾಕಿ ದೇವರಿಗೆ ಅರ್ಘ್ಯವನ್ನು ನೀಡಬೇಕು. ಆ ಕಾಲದಲ್ಲಿ **''ದತ್ತಮರ್ಘ್ಯಂ ಮಯಾತುಭ್ಯಂ ಭಕ್ತ್ಯಾ ಗೃಹ್ಣೀಷ್ವ ಮಾಧವ''** ಎಂಬ ಮಂತ್ರವನ್ನು ಉಚ್ಚರಿಸಬೇಕು.

ದೇವದೇವ ಮಹಾದೇವ ಶ್ರೀಕೇಶವ ಜನಾರ್ದನ ।
ಸುಬ್ರಹ್ಮಣ್ಯ ನಮಸ್ತೇಽಸ್ತು ಪುಣ್ಯರಾಶಿ ವಿವರ್ಧನ ॥

**ಶೋಕ ಮೋಹ ಮಹಾಪಾಪಾತ್ ಮಾಮುದ್ಧರ ಭವಾರ್ಣವಾತ್ ।**
**ಸುಕೃತಂ ನಕೃತಂ ಕಿಂಚಿತ್ ಜನ್ಮಕೋಟಿ ಶತೈರಪಿ ॥**

ಎಂದು ಪ್ರಾರ್ಥನೆಯನ್ನು ಮಾಡಿ ದೇವರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಬೇಕು. ಹಾಗೂ ಸ್ತೋತ್ರ ಮಂತ್ರ, ಗೀತ ನೃತ್ಯ, ನೀರಾಜನ, ಮುಂತಾದ ಎಲ್ಲ ಬಗೆಯಾದ ಸೇವೆಗಳನ್ನು ಸಲ್ಲಿಸಬೇಕು ಶ್ರೀಹರಿಗೆ. ಅನಂತರ ಗುರುಪೂಜೆಯನ್ನು ಯಥಾಶಕ್ತಿ ಮಾಡಬೇಕು.

**ಅಹಿತಂ ಯೋ ನಾಶಯತಿ ಸ್ವಹಿತಂ ದರ್ಶಯೇತ್ ಸದಾ ।**
**ಸಗುರುಃ ಸಚವಿಜ್ಞೇಯಃ ಸರ್ವಧರ್ಮಾರ್ಥ ಕೋವಿದಃ ॥**

ಎಲ್ಲ ಬಗೆಯ ಧರ್ಮಶಾಸ್ತ್ರಗಳಲ್ಲಿ ಪರಿಣಿತನಾಗಿ ಶಿಷ್ಯರ ಅಹಿತವನ್ನು ಕಳೆದು ಹಿತೋಪದೇಶ ಮಾಡುವ ಮತ್ತು ಸನ್ಮಾರ್ಗವನ್ನು ತೋರುವವನೇ ಗುರು ಎನಿಸುತ್ತಾನೆ. ಇಂಥ ಗುರು **"ಲೋಕಾನಾಂ ತಾರಣಾರ್ಥಾಯ ಧಾತ್ರಾ ಸೃಷ್ಟಃ ಗುರುರ್ಮಹಾನ್"** ಜನರನ್ನು ಸಂಸಾರ ಸಮುದ್ರದಿಂದ ಪಾರು ಮಾಡಲಿಕ್ಕಾಗಿಯೇ ಬ್ರಹ್ಮದೇವನು ಗುರುಗಳನ್ನು ನಿರ್ಮಾಣ ಮಾಡಿದ್ದಾನೆ. ಇಂಥ ಗುರುಗಳನ್ನು ವಿತ್ತಶಾಠ್ಯ ಮಾಡದೇ ತನ್ನ ಯೋಗ್ಯತೆಯನ್ನು ಅನುಸರಿಸಿ ಪೂಜೆ ಮಾಡಬೇಕು.

ಹೀಗೆ ಹರಿಪೂಜೆ, ಗುರುಪೂಜೆಗಳನ್ನು ಮಾಡಿದ ನಂತರ ಬ್ರಾಹ್ಮಣ ಭೋಜನ ಮಾಡಿಸಿ ತಾನೂ ಕೂಡ ಬಂಧುಬಾಂಧವರೊಂದಿಗೆ ಪಾರಣೆಯನ್ನು ಮಾಡಬೇಕು. ಈ ವಿಧಿಯಿಂದ ಉನ್ಮೀಲಿನೀ ವ್ರತವನ್ನು ಮಾಡಿದವರು ಬ್ರಹ್ಮಲೋಕವನ್ನು ಕುರಿತು ಪ್ರಯಾಣ ಮಾಡುತ್ತಾರೆ.

## ಕೆಲವು ಅವಶ್ಯ ಕರ್ತವ್ಯ ಕರ್ಮಗಳು

**ಅತಸ್ತ್ವಂ ಕುರು ಭೋ ರಾಜನ್ ವೈಷ್ಣವಾನಾಂತು ಪೂಜನಮ್ ।**
**ತೈರೇವ ಪೂಜಿತೋ ವಿಷ್ಣುಃ ಯೈರ್ಭಕ್ತಾಸ್ತು ಪ್ರಪೂಜಿತಾಃ ॥**

ಯಾರು ವಿಷ್ಣುಭಕ್ತರಾದ ಪರಮ ವೈಷ್ಣವರನ್ನು ಭಕ್ತಿಯಿಂದ ಪೂಜಿಸುವರೋ ಅವರು ವಿಷ್ಣುಪೂಜೆಯನ್ನು ಮಾಡಿದಂತೆಯೇ ಸರಿ. ಆದ್ದರಿಂದ ರಾಜನೇ, ನೀನು ವೈಷ್ಣವರ ಪೂಜೆಯನ್ನು ಮಾಡು. ಉಳಿದ ಎಲ್ಲ ವೈಷ್ಣವರ ಅವಶ್ಯ ಕರ್ತವ್ಯಗಳಾದ ಧರ್ಮ ಕರ್ಮಗಳನ್ನು ನೀನು ಮಾಡುತ್ತಲೇ ಇರುವೆ. ಉಳಿದವರು ಅದನ್ನು ಮಾಡುತ್ತಲೇ ಇರಬೇಕು.

**ಶಾಲಿಗ್ರಾಮ ಶಿಲಾಭೂತಾಂ ಧೃತ್ವಾ ಮೂರ್ಧನಿ ಪ್ರತ್ಯಹಂ ।**
**ತ್ವಂ ಧಾರಯಸಿ ಭೂಪಾಲ ಕಂಠೇ ನಿತ್ಯಂ ಸುಭಕ್ತಿತಃ ॥**

ಶಾಲಿಗ್ರಾಮ ಶಿಲೆಯನ್ನು ಪ್ರತಿದಿವಸವೂ ಪೂಜೆ ಮಾಡಿ ಭಕ್ತಿಯಿಂದ ತಲೆಯ ಮೇಲೆ ಇಟ್ಟುಕೊಳ್ಳಬೇಕು. ಮತ್ತು ಅದನ್ನು ಕೊರಳಲ್ಲಿ ಧರಿಸಬೇಕು. ನೀನು ಧರಿಸುತ್ತಲೇ ಇರುವೆ. ಶಂಖದಲ್ಲಿ ನೀರನ್ನು ಹಾಕಿ ಅದನ್ನು ಮೂರು ಸಲ ದೇವರ ಮೂರ್ತಿಯ ಸುತ್ತಲೂ ತಿರುಗಿಸಿ ಒಂದು ಪಾತ್ರೆಯಲ್ಲಿ ಹಾಕಿ ಅದನ್ನು ತಾನು ಪ್ರೋಕ್ಷಿಸಿಕೊಳ್ಳಬೇಕು. ವಿಷ್ಣುಭಕ್ತರಿಗೂ ಪ್ರೋಕ್ಷಿಸಬೇಕು. ಬಗೆಬಗೆಯ ಶಾಕಗಳಿಂದ ಅಡಿಗೆ ಮಾಡಬೇಕು. ಹಾಗೂ ದೇವರಿಗೆ ನಿವೇದಿಸಿ ವಿಶ್ವಕ್ಸೇನನಿಗೆ ಕೊಟ್ಟು ಅನಂತರ ವಿಷ್ಣುಭಕ್ತರೊಡನೆ ಕೂಡಿಕೊಂಡು ಭೋಜನ ಮಾಡಬೇಕು. ವಿಷ್ಣು ಸಹಸ್ರನಾಮವನ್ನು ಪ್ರತಿನಿತ್ಯವೂ ಪಠಿಸಿ ಭಗವಂತನನ್ನು ಭಕ್ತಿಯಿಂದ ಸ್ತುತಿಸಬೇಕು. ದೇವರ ಮುಂದೆ ದಿನವೂ ದೀಪಹಚ್ಚಿ ಇಡಬೇಕು. ಪೂಜೆಯ ಅನಂತರ ಗೀತ

ನೃತ್ಯ ಸೇವೆಯನ್ನು ತಪ್ಪದೇ ಸಲ್ಲಿಸಬೇಕು. ಹಚ್ಚಹಸಿರು ಮುರಿಯುವ ಎಲೆ ದೂರ್ವಾದಳ, ಕರಿಕೆ ಪ್ರತಿಗಳಿಂದ ದೇವರನ್ನು ಪೂಜಿಸಬೇಕು. ಮಂತ್ರಾಕ್ಷತೆ, ದೂರ್ವಾದಳ, ತುಳಸೀದಳ ಹಾಗೂ ಹೂಗಳಿಂದ ದೇವರ ಪೂಜೆಯನ್ನು ಮಾಡುವದು ಅತ್ಯವಶ್ಯ. ಶುಕ್ಲಪಕ್ಷ, ಕೃಷ್ಣಪಕ್ಷ ಎರಡೂ ಏಕಾದಶಿಗಳಲ್ಲಿ ಸಂಪೂರ್ಣ ಉಪವಾಸವಿದ್ದು ಜಾಗರ ಮಾಡಿ ದ್ವಾದಶಿಯ ದಿನ ಸಕಾಲದಲ್ಲಿ ಪಾರಣೆ ಮಾಡಬೇಕು. ಈ ತಿಥಿತ್ರಯದಲ್ಲಿ ಮಾಡುವ ಭಗವತ್ಸೇವೆಗೆ ವಿಷ್ಣುವ್ರತ ಎನ್ನುವರು. ಈ ಏಕಾದಶೀ ವ್ರತವು ಸರ್ವರೋಗಗಳ ಪರಿಹಾರಕವಾಗಿದ್ದು ದೇಹವನ್ನು ಪವಿತ್ರಗೊಳಿಸುತ್ತದೆ. ಬ್ರಾಹ್ಮಣರು, ಶೂದ್ರರು, ಉಳಿದ ಎಲ್ಲ ವರ್ಣದವರು, ಗೃಹಸ್ಥರು, ಬ್ರಹ್ಮಚಾರಿಗಳು, ಸನ್ಯಾಸಿಗಳು, ಸ್ತ್ರೀಯರು ದಶಮೀವೇಧ ರಹಿತವಾದ ಏಕಾದಶಿ ಉಪವಾಸ ಮಾಡಿ ಜಾಗರ ಸೇವೆಸಲ್ಲಿಸಿ ದ್ವಾದಶಿಯ ದಿನ ಹರಿಸೇವೆ, ಪಾರಣೆಗಳನ್ನು ನೂಚಾನವಾಗಿ ಮಾಡಬೇಕು. ಪ್ರತಿನಿತ್ಯ ಸ್ನಾನಮಾಡಿ, ಗೋಪೀಚಂದನ ಮುದ್ರೆಗಳನ್ನು ಹಣೆಯಲ್ಲಿಯೂ ಉಳಿದ ಕಡೆಗಳಲ್ಲಿಯೂ ಯಥಾವಿಧಿ ಧರಿಸಬೇಕು. ದ್ವಾದಶನಾಮಗಳನ್ನು ಹಚ್ಚಬೇಕು.

**ವಿಭರ್ಷಿಕಂಠೇ ಇತ್ಯಂ ತ್ವಂ ಧಾತ್ರೀಫಲ ಸಮುದ್ಭವಾಮ್ ।**
**ಮಾಲಾಂ ಮುಖ್ಯಾಯುತ ಸಮಾಂ ತುಲಸೀಪತ್ರ ಸಂಭವಾಮ್ ॥**
**ಸಾಲಿಗ್ರಾಮ ಶಿಲಾಯುಕ್ತಂ ದ್ವಾರಕಾ ಸಮುದ್ಭವಾನ್ ॥**

ವಿಷ್ಣುಭಕ್ತರಾದವರು ಕೊರಳಲ್ಲಿ ನಿತ್ಯವೂ ನೆಲ್ಲೀಕಾಯಿ ಬೀಜಗಳ ಮಾಲೆಯನ್ನೂ ಮತ್ತು ಸಾಲಿಗ್ರಾಮ ಚಕ್ರಾಂಕಿತವಾದ ತುಳಸೀಮಾಲೆಯನ್ನೂ ಧರಿಸಬೇಕು. ನೀನು ಈಗಾಗಲೇ ಧರಿಸಿರುತ್ತೀ. ಮತ್ತು ದೇವರ ಎದುರು ಪದ್ಮ ಪುರಾಣವನ್ನು ಪಾರಾಯಣ ಮಾಡಬೇಕು. ಹಾಗೂ ಪ್ರಹ್ಲಾದ ಚರಿತ್ರ, ನರಸಿಂಹ ದೇವರ ಮಹಾಮಹಿಮೆಗಳನ್ನು ದೇವರ ಎದುರು ವಾಚನ ಮಾಡಬೇಕು. ಮತ್ತು ನಾಲ್ಕು ವಿಧವಾದ ವೇಧಗಳನ್ನು ಬಿಟ್ಟು ಏಕಾದಶಿ ಉಪವಾಸ ಮಾಡಬೇಕು.

ಹೀಗೆ ಗೌತಮ ಮಹರ್ಷಿಯು ವಸುನಾಥ ಮಹಾರಾಜನಿಗೆ ಹೇಳಿದ್ದನ್ನೇ ಧರ್ಮರಾಜ, ನಾನು ನಿನಗೆ ನಿರೂಪಿಸಿದ್ದೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಉನ್ಮೀಲಿನೀ ಏಕಾದಶಿಯ ವಿಧಾನ ಎಂಬ ಮೂವತ್ತಾರನೇಯ ಅಧ್ಯಾಯ ಮುಗಿದುದು*

—o—

## ಪಕ್ಷವರ್ಧಿನೀ ಏಕಾದಶಿ ವ್ರತ

ಅಧ್ಯಾಯ - ೩೭

**ನಾರದ:-** ಮಹಾದೇವ, ಪಕ್ಷವರ್ಧಿನೀ ಏಕಾದಶಿ ಎಂದರೆ ಯಾವದು? ಅದರ ವಿಧಾನವೇನು? ತಿಳಿಸು.

**ಮಹಾದೇವ:-** ಹುಣ್ಣಿಮೆ ಅಥವಾ ಅಮಾವಾಸ್ಯೆ ತಿಥಿಯು ಅರವತ್ತು ನಾಡಿ ಪೂರ್ಣ ಭೋಗಿಸಿ ಪ್ರತಿಪದೆಯ ದಿನವೂ ಮಿಕ್ಕಿದ್ದರೆ ಆ ಪಕ್ಷದ ಏಕಾದಶಿಯು ಪಕ್ಷವರ್ಧಿನೀ ಏಕಾದಶಿ ಎನಿಸುತ್ತದೆ. ಅಂಥ ಏಕಾದಶಿ ಉಪವಾಸ ಮಾಡಿ ಶ್ರೀಹರಿಯನ್ನು

ಶಾಸ್ತ್ರೋಕ್ತವಾಗಿ ಪೂಜಿಸಿ ದ್ವಾದಶಿ ದಿನ ಪಾರಣೆ ಮಾಡಿದರೆ ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುತ್ತದೆ. ಅದರ ಪೂಜೆಯ ವಿಧಿಯನ್ನು ಹೇಳುತ್ತೇನೆ ಕೇಳು. ಹಿಂದೆ ಹೇಳಿದಂತೆ ಕಲಶಸ್ಥಾಪನೆ ಮಾಡಿ ಆ ಮಾಸಾಭಿಮಾನಿ ಕೇಶವನ ಮೂರ್ತಿಯನ್ನು ಕಲಶದ ಮೇಲಿನ ತಟ್ಟೆಯಲ್ಲಿ ಇಟ್ಟು ಪಂಚಾಮೃತದಿಂದ ಅದಕ್ಕೆ ಸ್ನಾನಮಾಡಿಸಿ ಕೆಳಗಿನ ಮಂತ್ರಗಳಿಂದ ಹೂ ತುಳಸಿ ಏರಿಸಿ ಪೂಜೆ ಮಾಡಬೇಕು.

**ಪದ್ಮನಾಭಾಯ ನಮಃ ಪಾದೌ ಪೂಜಯಾಮಿ ।**
**ವಿಶ್ವಮೂರ್ತಯೇ ನಮಃ ಜಾನೂನಿ ಪೂಜಯಾಮಿ ।**
**ಜ್ಞಾನಗಮ್ಯಾಯ ನಮಃ ಊರೂ ಪೂಜಯಾಮಿ ।**
**ಜ್ಞಾನಪ್ರದಾಯ ನಮಃ ಕಟೀ ಪೂಜಯಾಮಿ ।**
**ವಿಶ್ವನಾಥಾಯ ನಮಃ ಉದರಂ ಪೂಜಯಾಮಿ ।**
**ಶ್ರೀಧರಾಯ ನಮಃ ಹೃದಯಂ ಪೂಜಯಾಮಿ ।**
**ಕೌಸ್ತುಭಕಂಠಾಯ ನಮಃ ಕಂಠಂ ಪೂಜಯಾಮಿ ।**
**ಕ್ಷತ್ರಾಂತಕಾರಿಣೇ ನಮಃ ಬಾಹೂ ಪೂಜಯಾಮಿ ।**
**ವ್ಯೋಮಮೂರ್ಧ್ನೇ ನಮಃ ಲಲಾಟಂ ಪೂಜಯಾಮಿ ।**
**ಸರ್ವರೂಪಿಣೇ ನಮಃ ಶಿರಃ ಪೂಜಯಾಮಿ ।**
**ದಿವ್ಯರೂಪಿಣೇ ನಮಃ ಸರ್ವಾಂಗಂ ಪೂಜಯಾಮಿ ।**

ಹೀಗೆ ಮಂತ್ರಗಳನ್ನು ಉಚ್ಚರಿಸಿ ವಿಷ್ಣುವಿನ ಆ ಚಿನ್ನದ ಮೂರ್ತಿಯ ಮೇಲೆ ಹೂ ತುಳಸಿ ಏರಿಸಿ ದೇವರಿಗೆ -

**ಸಂಸಾರಾರ್ಣವ ಮಗ್ನಂ ಮಾಂ ಸಮುದ್ಧರ ಜಗತ್ಪತೇ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ಪದ್ಮನಾಭ ನಮೋಸ್ತುತೇ ॥**

ಎಂಬ ಮಂತ್ರದಿಂದ ಅರ್ಘ್ಯವನ್ನು ತೆಂಗಿನಕಾಯಿ ಸಹಿತವಾಗಿ ಅರ್ಪಿಸಬೇಕು. ಅನಂತರ ಧೂಪ, ದೀಪ, ನೈವೇದ್ಯ ಸಮರ್ಪಣ ಪೂರ್ವಕವಾಗಿ ದೇವರಿಗೆ ಪೂಜೆಯನ್ನು ಸಲ್ಲಿಸಬೇಕು. ಮತ್ತು ಆ ದಿನ ತಾನು ಪೂರ್ತಿ ಉಪವಾಸವಿದ್ದು ರಾತ್ರಿ ಜಾಗರ, ಮರುದಿನ ದ್ವಾದಶೀ ದಿನದಂದು ಪ್ರಾತಃಕಾಲದಲ್ಲಿ ಇದೇ ರೀತಿ ದೇವರ ಪೂಜೆಯನ್ನು ಸಲ್ಲಿಸಿ ಭಕ್ಷ್ಯ, ಭೋಜ್ಯ, ನೈವೇದ್ಯಗಳನ್ನು ತೋರಿಸಿ ದೇವರ ಪೂಜೆ ಗೈದು ಗುರುಪೂಜೆ ಮಾಡಿ ಬ್ರಾಹ್ಮಣ ಭೋಜನ ಮಾಡಿಸಿ ಅನಂತರ ಬಂಧುಮಿತ್ರರೊಂದಿಗೆ ತಾವೂ ಭೋಜನ ಮಾಡಬೇಕು.

ಈ ಪಕ್ಷವರ್ಧಿನೀ ಏಕಾದಶಿಯ ಉಪವಾಸವನ್ನು ಮಾಡಿದರೆ ಕೋಟಿ ಸಂಖ್ಯೆಯಲ್ಲಿನ ಹತ್ಯಾಪಾಪಗಳು ನಾಶವಾಗುತ್ತವೆ. ಈ ಏಕಾದಶಿ ವ್ರತವನ್ನು ಪೂರ್ವಕಾಲಲ್ಲಿ ವಶಿಷ್ಠರೂ, ಭರದ್ವಾಜ ಮುನಿಯೂ, ಧ್ರುಮರಾಜನೂ, ಅಂಬರೀಶನೂ ಆಚರಿಸಿ ವಿಷ್ಣುವಿನ ಪ್ರಸಾದವನ್ನು ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಪಕ್ಷವರ್ಧಿನೀ ಏಕಾದಶಿ ವ್ರತ ಎಂಬ ಮೂವತ್ತೇಳನೇಯ ಅಧ್ಯಾಯ ಮುಗಿದುದು*

—o—

ಏಕಾದಶಿ ಜಾಗರ ಮಹಿಮೆ

ಅಧ್ಯಾಯ - ೩೮

**ಮಹಾದೇವ:-** ನಾರದ, ಏಕಾದಶೀ ದಿನದಂದು ರಾತ್ರಿ ವಿಷ್ಣುವಿನ ಗುಣ ಗಾನ ಮಾಡುತ್ತ ಜಾಗರವನ್ನು ಮಾಡಬೇಕು. ಅದರಿಂದ ಎಂಥ ಪಾಪಿಯೂ ಕೂಡ ಪಾಪಮುಕ್ತನಾಗಿ ಸದ್ಗತಿ ಹೊಂದುವನು.

**ನಾರದ:-** ಜಾಗರಣದ ಮಹಿಮೆ ಏನು? ಅದನ್ನು ಯಾವ ಪ್ರಹರದಲ್ಲಿ ಮಾಡಬೇಕು? ಹೇಗೆ ಮಾಡಬೇಕು? ಶ್ರೀಹರಿಯಲ್ಲಿ ಭಕ್ತಿ ಮಾಡುವುದಾದರೂ ಹೇಗೆ? ಇದನ್ನೆಲ್ಲವನ್ನೂ ನನಗೆ ವಿವರಿಸಿ ಹೇಳು.

**ತ್ವಂ ಹಿ ವಿಶ್ವೇಶ್ವರೋ ದೇವೋ ಯತೋ ಭಕ್ತಿರ್ಜನಾರ್ದನೇ ।**
**ಸರ್ವೇಷಾಂಚೈವ ಭಕ್ತಾನಾಂ ತ್ವಂಚ ಶ್ರೇಷ್ಠ ಉಮಾಪತಿಃ ॥**

ಮಹಾದೇವ, ನೀನು ವಿಶ್ವಕ್ಕೆಲ್ಲ ಒಡೆಯನಾದ ಈಶ್ವರ. ಶ್ರೀಹರಿಯಲ್ಲಿ ಭಕ್ತಿಯನ್ನು ಹೇಗೆ ಮಾಡಬೇಕು ಎನ್ನುವದನ್ನು ನೀನೇ ಹೇಳಬೇಕು. ಜಗತ್ತಿನಲ್ಲಿ ಎಲ್ಲ ಭಕ್ತರಿಗೂ ಹರಿಯಲ್ಲಿ ಭಕ್ತಿ ಹುಟ್ಟುವದು ನಿನ್ನ ಅನುಗ್ರಹದಿಂದಲೇ. ಉಮಾಪತಿಯೇ, ನೀನೇ ಶ್ರೀಹರಿಯ ಶ್ರೇಷ್ಠ ಭಕ್ತ.

**ಲೋಕೇಸ್ಮಿನ್ ಸರ್ವದಾ ಭಕ್ತ್ಯಾ ತವಾಖ್ಯಾ ವರ್ತತೇ ಸದಾ ।**

ಶ್ರೀಹರಿಯಲ್ಲಿ ನಿನಗಿರುವ ನಿರತಿಶಯವಾದ ಭಕ್ತಿಯಿಂದಲೇ ನೀನು ಪ್ರಪಂಚದಲ್ಲಿ ಪ್ರಖ್ಯಾತನಾಗಿರುವೆ. ಆದ್ದರಿಂದ ನೀನು ಜನರಿಗೆಲ್ಲ ಪಾಪಮುಕ್ತಿಯನ್ನು ದಯಪಾಲಿಸುವ ಜಾಗರಣ ಮಹಾತ್ಮೆಯನ್ನು ಹೇಳು.

**ಮಹಾದೇವ:-** ಮನುಷ್ಯರು ಏಕಾದಶಿಯ ದಿನ ಹಗಲು ಹೊತ್ತು ದೇವರ ಪೂಜೆಯನ್ನು ಮಾಡಬೇಕು. ಅಂದು ಏನನ್ನೂ ತಿನ್ನದೇ ಸಂಪೂರ್ಣ ಉಪವಾಸವನ್ನು ಆಚರಿಸಬೇಕು. ರಾತ್ರಿ ಕಾಲದಲ್ಲಿ ದೇವರ ಎದುರು ಕುಳಿತು ವಿಷ್ಣುಭಕ್ತರಿಂದ ಕೂಡಿಕೊಂಡು ನಿದ್ದೆ ಮಾಡದೇ ಎಚ್ಚರವಿದ್ದು, ಜಾಗರವನ್ನು ಮಾಡಬೇಕು. ಏಕಾದಶಿ ಇಡೀ ರಾತ್ರಿ ಜಾಗರ ಕಾಲದಲ್ಲಿ ಭಾಗವತಾದಿ ಪುರಾಣಗಳನ್ನು ಹೇಳಬೇಕು. ದೇವರ ಸ್ತೋತ್ರ, ಪ್ರಾರ್ಥನಾರೂಪವಾದ ಮಂತ್ರ, ಹಾಡು, ಪದ್ಯಗಳನ್ನು ಸಂಗೀತ ರೂಪದಲ್ಲಿ ಹೇಳಿ ಗೀತಾರಾಧನೆಯನ್ನು ಮಾಡಬೇಕು. ವಿಷ್ಣುವಿನ ಬಗೆಬಗೆಯ ನಾಮಗಳನ್ನು ಉಚ್ಚರಿಸುತ್ತ ಹಾಡುಪಾಡುಗಳನ್ನು ಹಾಡುತ್ತ, ಭಕ್ತಿ ಪರವಶತೆಯಿಂದ ನರ್ತನ ಮಾಡಬೇಕು. ಹೀಗೆ ಏಕಾದಶಿ ರಾತ್ರಿ ಗೀತ, ವಾದ್ಯ, ನೃತ್ಯ, ಪುರಾಣ, ಪ್ರವಚನ, ಸಂಗೀತ, ಮಂಗಳಾರತಿ, ಮಂತ್ರ, ಪುಷ್ಪ, ಧೂಪ, ದೀಪ, ನೈವೇದ್ಯ ಸಮರ್ಪಣ, ದಾನ ಧರ್ಮ, ಮುಂತಾದವುಗಳಿಂದ ನಿದ್ದೆ ಮಾಡದೇ ಭಗವಂತನಿಗೆ ಸೇವೆಯನ್ನು ಸಲ್ಲಿಸಬೇಕು. ಏಕಾದಶೀ ದಿನ ರಾತ್ರಿ ಜಾಗರ ಮಾಡದೇ ಮಲಗಿಕೊಂಡು ಬಿಟ್ಟರೆ ಉಪವಾಸ ಮಾಡಿದ್ದು ವ್ಯರ್ಥವಾಗುತ್ತದೆ.

ಏಕಾದಶೀ ದಿನ ರಾತ್ರಿ ಕಾಲದಲ್ಲಿ ಕೃಷ್ಣನಲ್ಲಿಯೇ ಮನಸ್ಸನ್ನು ನೆಟ್ಟು, ಮಲಗಿಕೊಳ್ಳದೇ ಭಗವಂತನ ಧ್ಯಾನ, ಗಾನ, ಪುರಾಣ, ಪಠಣ ಪಾರಾಯಣಾದಿಗಳನ್ನು

ಮಾಡುತ್ತ ಜಾಗರ ಮಾಡುವವರಿಗೆ ಕ್ಷಣಕ್ಕೊಂದು ಗೋದಾನ ಮಾಡಿದಷ್ಟು ಪುಣ್ಯ ಬರುವದು. ಜಾಗರದಲ್ಲಿ ರಾತ್ರಿ ಧ್ಯಾನಗಾನಾದಿಗಳು ನಡೆದಾಗ ಬೇರೆ ಮಾತು, ಹರಟೆ, ಅನ್ಯ ವಾರ್ತಾಲಾಪಗಳನ್ನು ಆಡಬಾರದು. ಒಂದೊಂದು ಯಾಮದಲ್ಲಿಯೂ ಮೂರು ಮೂರು ಗಂಟೆಗೆ ಒಂದು ಸಲ ಜಾಗರ ಕಾಲದಲ್ಲಿ ದೇವರಿಗೆ ಮಂಗಳಾರತಿಯನ್ನು ಬೆಳಗಬೇಕು. ಏಕಾದಶಿ ಜಾಗರ ಕಾಲದಲ್ಲಿ ಹಾಡುವವರನ್ನು, ಕುಣಿಯುವವರನ್ನು, ಪುರಾಣ ಹೇಳುವವರನ್ನು ನೋಡಿ ಉಪಹಾಸ ಮಾಡಿ ನಕ್ಕರೆ ಆ ಮನುಷ್ಯನು ಚಂಡಾಲನಾಗುತ್ತಾನೆ. ಎಂಥ ವೇದಶಾಸ್ತ್ರ ಪಂಡಿತನಾದರೂ ಏಕಾದಶಿ ಉಪವಾಸ ಮಾಡದಿದ್ದರೆ ಅಧೋಲೋಕವನ್ನು ಹೊಂದುತ್ತಾನೆ.

ಜಾಗರದ ಪ್ರಾರಂಭದಲ್ಲಿ ಪುರಾಣ ಹೇಳುವ ಪಂಡಿತರು ಇದ್ದರೆ ಮೊದಲು ಭಾಗವತಾದಿ ಪುರಾಣಗಳ ಗ್ರಂಥ ಹೇಳಿಸಿ ಅನಂತರ ಸಂಗೀತಾದಿ ಸೇವೆಯನ್ನು ಸಲ್ಲಿಸಬೇಕು. ಪುರಾಣ ಹೇಳುವ ಪಂಡಿತರು ಇಲ್ಲದಿದ್ದರೆ ಸ್ವಯಂ ತಾವೇ ಭಕ್ತರು ಹಾಡು ಹೇಳಿ, ನರ್ತನ ಮಾಡಿ, ಮಂತ್ರ, ಸ್ತೋತ್ರ ಹೇಳುತ್ತ ಭಕ್ತಿಯಿಂದ ಭಗವಂತನ ಭಜನೆ ಮಾಡುತ್ತ ಬೆಳಗಾಗುವವರೆಗೆ ಜಾಗರ ಸೇವೆಯನ್ನು ಮಾಡಬೇಕು.

ಏಕಾದಶಿ ದಿನ ಜಾಗರ ಮಾಡದೇ ಮಲಗಿಕೊಂಡವನೂ ಜಾಗರ ಕಾಲದಲ್ಲಿ ಹಾಡು ಅಥವಾ ಮಂತ್ರ ಸ್ತೋತ್ರ ಯಾವದನ್ನೂ ಉಚ್ಚರಿಸದವನೂ ಏಳು ಜನ್ಮ ಮೂಕನಾಗುತ್ತಾನೆ. ಜಾಗರದಲ್ಲಿ ಕುಣಿಯದಿದ್ದವನು ಏಳು ಜನ್ಮ ಕುಂಟನಾಗುತ್ತಾನೆ. ಸಾಲಿಗ್ರಾಮವನ್ನು ನಡುವೆ ಇಟ್ಟು, ಅದರ ಮುಂದೆ ಗೀತ ನೃತ್ಯಾದಿಗಳ ಸೇವೆಯನ್ನು ಸಲ್ಲಿಸುತ್ತ, ಯಾಮಯಾಮಕ್ಕೆ ಒಮ್ಮೆ ಆ ಸಾಲಿಗ್ರಾಮ ದೇವರಿಗೆ ಮಂಗಳಾರತಿಯನ್ನು ಮಾಡಿದವರು ವಿಷ್ಣುಲೋಕವನ್ನು ಸೇರುತ್ತಾರೆ.

ಈ ಜಾಗರವು ಒಂಭತ್ತು ವಿಧವಾಗಿದೆ. ಇದರಲ್ಲಿ ಒಂಭತ್ತು ವಿಧವಾದ ಸೇವೆಗಳು ಭಗವಂತನಿಗೆ ಸಲ್ಲಿಸಲ್ಪಡಬೇಕು.

೧) ಪುರಾಣ ಸೇವೆ ೨) ಸಂಗೀತ ಸೇವೆ ೩) ನೃತ್ಯ ಸೇವೆ ೪) ವಾದ್ಯ ಸೇವೆ ೫) ತಾಳಸೇವೆ ೬) ದೀಪಸೇವೆ ೭) ಭಜನ ಸೇವೆ ೮) ನಾಮೋಚ್ಚಾರಣ ಸೇವೆ ೯) ಶಾಸ್ತ್ರಸೇವೆ.

ಏಕಾದಶಿಯ ದಿನ ಅತ್ಯಂತ ಮುಖ್ಯವಾದುದೆಂದರೆ ಉಪವಾಸ. ಅಂದು ಏನನ್ನೂ ತಿನ್ನಕೂಡದು.

**ಯೋ ಭುಂಕ್ತೇ ವಾಸರೇ ವಿಷ್ಣೋಃ ಜ್ಞೇಯಃ ಪಶ್ವಧಿಕೋಹಿ ಸಃ ।**
**ವಿಪ್ರಿಯಂಚ ಕೃತಂ ತೇನ ದುಷ್ಟೇನ್ಯವಚ ಪಾಪಿನಾ ॥**
**ಮದ್ಭಕ್ತಿ ಬಲಮಾಶ್ರಿತ್ಯ ಯೋ ಭುಂಕ್ತೇವೈ ಹರ್ರೇ ದಿನೇ ।**
**ಸ ಬಾಹ್ಯಾಭಂತರಂ ದೇಹಂ ವೇಷ್ಟಿತಂ ಪಾಪ ಕೋಟಿಭಿಃ ॥**

ಏಕಾದಶಿ ದಿನ ತಿನ್ನುವವನು ಪಶುವಿಗಿಂತ ಕಡೆ. ಆ ಪಾಪಿಯು ಹರಿದ್ರೋಹಿಯೆ ಸರಿ. ಹರಿಯಲ್ಲಿ ಭಕ್ತಿ ಮಾಡುತ್ತೇನೆ ಎಂದು ನೆವ ಹೇಳಿ ಏಕಾದಶಿ ಉಪವಾಸ ಮಾಡದಿದ್ದವನ ದೇಹವು ಕೋಟಿ ಪಾಪಗಳಿಂದ ಸುತ್ತಿ ಬಿಗಿಯಲ್ಪಟ್ಟಿರುತ್ತದೆ.

ಒಂದು ಕಡೆ ಕಾಶಿ, ಪುಷ್ಕರ, ಪ್ರಯಾಗ, ನೈಮಿಷ, ಮಥುರಾ, ಮುಂತಾದ ತೀರ್ಥಕ್ಷೇತ್ರಗಳು. ಇನ್ನೊಂದು ಕಡೆ ಏಕಾದಶಿ ರಾತ್ರಿ ಜಾಗರಣೆ. ಇವೆರಡರಲ್ಲಿ ಏಕಾದಶಿಯ ಜಾಗರವೇ ಅವುಗಳಿಗಿಂತ ಸಹಸ್ರ ಪಟ್ಟು ಹೆಚ್ಚಿನ ಪುಣ್ಯ.

ಏಕಾದಶಿಯ ವ್ರತವು ತ್ರಿದಳಾತ್ಮಕ. ಏಕಾದಶಿಯ ಹಗಲು ಉಪವಾಸ, ರಾತ್ರಿಯ ಜಾಗರಣೆ, ದ್ವಾದಶಿ ಪ್ರಾತಃಕಾಲದಲ್ಲಿ ಪಾರಣೆ. ಇವು ಮೂರನ್ನೂ ಸಾಂಗವಾಗಿ ನೆರವೇರಿಸಿದರೆ ಮಾತ್ರ ಏಕಾದಶಿಯ ಪೂರ್ಣ ಫಲ ಬರುವದು. ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ದೇವರನ್ನು ಪೂಜಿಸಿ ತಾನು ಮಾಡಿದ ಉಪವಾಸವನ್ನು ಭಗವಂತನಲ್ಲಿ ಸಮರ್ಪಿಸಬೇಕು.

**ಅಜ್ಞಾನ ತಿಮಿರಾಂಧಸ್ಯ ವ್ರತೇನಾನೇನ ಕೇಶವ ।**
**ಪ್ರಸೀದ ಸುಮುಖೋ ಭೂತ್ವಾ ಜ್ಞಾನ ದೃಷ್ಟಿ ಪ್ರದೋಭವ ॥**

"ಅಜ್ಞಾನದ ಕತ್ತಲೆಯಿಂದ ಕುರುಡನಾದ ನನ್ನ ಈ ಉಪವಾಸದಿಂದ ಕೇಶವನೆ, ನೀನು ಪ್ರಸನ್ನನಾಗು. ನನ್ನ ಮೇಲೆ ಕರುಣೋನ್ಮುಖನಾಗು. ನನಗೆ ಜ್ಞಾನ ದೃಷ್ಟಿಯನ್ನು ನೀಡು. ಈ ನನ್ನ ವ್ರತದಿಂದ ನೀನು ಸುಪ್ರೀತನಾಗು." ಹೀಗೆ ಭಗವಂತನಲ್ಲಿ ಮಾಡಿದ ಪುಣ್ಯದ ಫಲವನ್ನು ಅರ್ಪಿಸಿ ಅನಂತರ ಸಕಾಲದಲ್ಲಿ ತಾನು ಪಾರಣೆಯನ್ನು ಮಾಡಬೇಕು. ದ್ವಾದಶೀ ತಿಥಿಯು ಅಲ್ಪ ಉಳಿದಿದ್ದರೆ ಬೆಳಗಾಗುವಷ್ಟರಲ್ಲಿ ರಾತ್ರಿಯ ಅವಶಿಷ್ಟ ಭಾಗದಲ್ಲಿಯೇ ಪಾರಣೆಯನ್ನು ಪೂರೈಸಬೇಕು. ಇಂಥ ಸಾಧನಿ ದ್ವಾದಶಿಯ ದಿನ ಸೂರ್ಯೋದಯಕ್ಕಿಂತ ಮೊದಲಾಗಲೀ, ರಾತ್ರಿ ಶೇಷದಲ್ಲಿ ಆಗಲಿ, ಭೋಜನವು ನಿಷಿದ್ಧವಲ್ಲ. ಮತ್ತು ದ್ವಾದಶೀ ದಿನ ಪ್ರಾತಃಕಾಲದಲ್ಲಿಯೇ ಪ್ರಾತಃಕಾಲ ಹಾಗೂ ಮಧ್ಯಾಹ್ನ ಕಾಲಗಳ ಸಂಧ್ಯಾವಂದನೆ ವಿಧಿಗಳನ್ನು ಮಾಡಬೇಕು. ಭಕ್ತರಾದವರು ಅಲ್ಪ ದ್ವಾದಶಿ ಇದ್ದಾಗ ಉಷಃಕಾಲದಲ್ಲಿಯೇ ಪಾರಣೆ ಮಾಡಿ ಆ ದ್ವಾದಶಿಯನ್ನು ಪಾಲಿಸಬೇಕು.

ಹಿಂದೆ ಅಂಬರೀಷ ಮೊದಲಾದ ರಾಜರು ಇಂಥ ಸಾಧನಿ ದ್ವಾದಶಿಯನ್ನು ಸಾಧಿಸಿಯೇ ವಿಷ್ಣುಲೋಕಕ್ಕೆ ಪ್ರಯಾಣ ಮಾಡಿದರು.

**ನಾಸ್ತಿ ವಿಷ್ಣುಸಮೋ ದೇವೋ ನತಿಥಿರ್ದ್ವಾದಸೀ ಸಮಾ ।**
**ಅತ್ರ ದತ್ತಂಚ ಭುಕ್ತಂಚ ಪೂಜಾದ್ಯಕ್ಷಯ ಮುಚ್ಯತೇ ॥**

ವಿಷ್ಣುವಿಗೆ ಸಮಾನವಾದ ದೇವತೆ ಇಲ್ಲ. ದ್ವಾದಶಿಗೆ ಸಮಾನವಾದ ತಿಥಿ ಇಲ್ಲ. ಆ ದ್ವಾದಶಿ ದಿನದಂದು ಎಷ್ಟೇ ದಾನ ಕೊಡಲಿ, ಎಷ್ಟೇ ಭೋಜನ ಮಾಡಿಸಲಿ, ಎಷ್ಟೇ ಪೂಜೆ ಮಾಡಿಸಲಿ, ಅವೆಲ್ಲವೂ ಪರಿಪೂರ್ಣವಾಗಿ ಶ್ರೀಹರಿಯ ಅನುಗ್ರಹದಿಂದ ಅಕ್ಷಯ ಫಲವನ್ನು ಪ್ರದಾನ ಮಾಡುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಏಕಾದಶಿ ಜಾಗರ ಮಹಿಮೆ ಎಂಬ ಮೂವತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ಜಯಾ ವಿಜಯಾ ಜಯಂತಿ ಏಕಾದಶಿಗಳ ಮಾಹಾತ್ಮ್ಯ | ಅಧ್ಯಾಯ - ೩೯

**ಮಹಾದೇವ:-** ನಾರದ, ನಾನು ಒಮ್ಮೆ ವಿಷ್ಣುವಿನ ಸನ್ನಿಧಿಗೆ ಹೋಗಿದ್ದೆ. ದ್ವಾದಶಿಯ ಮಹಿಮೆ ಏನು ಎಂದು ಕೇಳಿದೆ. ಅದನ್ನು ಶ್ರೀಹರಿಯು ನನಗೆ ತಿಳಿಸಿ ಹೇಳಿದ್ದೇನ್ನೇ ನಾನು ಈಗ ನಿನಗೆ ಹೇಳುತ್ತೇನೆ. ಜಯಾ ವಿಜಯಾ ಮತ್ತು ಜಯಂತಿ ಎಂಬ ಏಕಾದಶಿ ದಿನಗಳು ನಕ್ಷತ್ರ ಯೋಗದಿಂದ ಮಹಾಫಲಪ್ರದ ಆಗಿರುತ್ತವೆ. ಶುಕ್ಲಪಕ್ಷದ ಏಕಾದಶಿ ದಿನದಂದು ಪುನರ್ವಸು ನಕ್ಷತ್ರ ಇದ್ದರೆ ಆ ಏಕಾದಶಿ ಜಯಾ ಏಕಾದಶಿ ಎನಿಸಲ್ಪಡುತ್ತದೆ. ಶುಕ್ಲಪಕ್ಷದ ದ್ವಾದಶೀ ದಿನದಂದು ಶ್ರವಣಾ ನಕ್ಷತ್ರ ಯೋಗವಾದರೆ ಅದಕ್ಕೆ ವಿಜಯಾ ಏಕಾದಶಿ ಎನ್ನುತ್ತಾರೆ. ಅದು ತಿಥಿಗಳಲ್ಲಿ ಅತ್ಯುತ್ತಮ. ಇಲ್ಲಿ ಮಾಡಿದ ಪುಣ್ಯ, ನೀಡಿದ ಅನ್ನದಾನ ಸಹಸ್ರಪಟ್ಟು ಮಿಗಿಲಾದ ಪುಣ್ಯ ಫಲಪ್ರದಾಯಕ. ಈ ವಿಜಯಾ ದ್ವಾದಶೀ ದಿನದಂದು ಹೋಮ ಉಪವಾಸ ಮಾಡುವುದರಿಂದ ಅತ್ಯಧಿಕ ಪುಣ್ಯ ಫಲ. ಯಾವದೇ ಶುಕ್ಲಪಕ್ಷ ದ್ವಾದಶಿಯಂದು ಪುಷ್ಯ ನಕ್ಷತ್ರವು ಬಂದರೆ ಜಯಂತೀ ತಿಥಿ ಎನ್ನುತ್ತಾರೆ. ಆ ದಿನ ಉಪವಾಸ ಮಾಡಿದವರಿಗೆ ಜನ್ಮದಲ್ಲಿ ಒಂದು ಸಲ ಭಗವಂತನು ಪ್ರತ್ಯಕ್ಷ ದರ್ಶನವನ್ನು (ಸಾಧನ ಸಂಪೂರ್ತಿಯಾಗಿದ್ದರೆ) ನೀಡುತ್ತಾನೆ.

ಪೂರ್ವಕಾಲದಲ್ಲಿ ಸಗರ, ಕಕುಸ್ಥ, ನಹುಷ ಮುಂತಾದ ರಾಜರು ಈ ಏಕಾದಶಿ ವ್ರತವನ್ನು ಮಾಡಿ ಭಗವಂತನ ವಿಶೇಷಾನುಗ್ರಹವನ್ನು ಪಡೆದರು. ಪುಷ್ಯ ನಕ್ಷತ್ರದಿಂದ ಯುಕ್ತವಾದ ಆ ಜಯಂತೀ ಏಕಾದಶಿಯ ದಿನ ಉಪವಾಸ ಮಾಡಿದವರು ಭಕ್ತಿಯಿಂದ ಅನೂಚಾನವಾಗಿ ಈ ವ್ರತವನ್ನು ಆಚರಿಸಿದರೆ ದೇವರು ಪ್ರಸನ್ನನಾಗಿ ತನ್ನ ಸಾಕ್ಷಾತ್ ದರ್ಶನವನ್ನೇ ನೀಡುತ್ತಾನೆ. ಜಯಂತೀ ಉಪವಾಸ ಮಾಡಿದವರಿಗೆ ಸಾವಿರ ಏಕಾದಶಿ ಉಪವಾಸ ಮಾಡಿದ ಪುಣ್ಯ ಬರುವದು. ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ, ದೇವತಾರ್ಚನ, ಜಾಗರ, ಯಾವದನ್ನೇ ಮಾಡಲಿ, ಎಷ್ಟೇ ಮಾಡಲಿ, ಅಂದು ಮಾಡಿದ್ದಕ್ಕೆಲ್ಲ ಅಕ್ಷಯ ಫಲ.

ಹಿಂದೆ ಧರ್ಮರಾಜನು ಅಶ್ವಮೇಧ ಯಾಗಗಳ ಪರಂಪರೆಯನ್ನೇ ಆರಂಭಿಸಿದ್ದ. ಅವನು ತನ್ನ ಐದನೆಯ ಅಶ್ವಮೇಧದ ಸಮಾಪ್ತಿ ಕಾಲದಲ್ಲಿ ಶ್ರೀಕೃಷ್ಣನ ಬಳಿಗೆ ಬಂದು ಪ್ರಶ್ನೆ ಮಾಡಿದ.

**ಧರ್ಮರಾಜ:-** ಪ್ರಭು ಶ್ರೀ ಕೃಷ್ಣ, ಉಪವಾಸ, ನಕ್ತ ಮತ್ತು ಏಕಭುಕ್ತ ಈ ಮೂರು ವ್ರತಗಳಿಂದ ಬರುವ ಪುಣ್ಯ ಏನು? ಫಲ ಏನು? ಇದೆಲ್ಲವನ್ನೂ ನನಗೆ ತಿಳಿಸು.

**ಶ್ರೀಕೃಷ್ಣ:-** ಹೇಮಂತ ಋತು ಬಂದಾಗ ಮಾರ್ಗಶೀರ್ಷ ಮಾಸದಲ್ಲಿ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯಂದು ಉಪವಾಸ ಮಾಡಬೇಕು. ದಶಮಿಯ ದಿನ ಏಕಭುಕ್ತ, ಒಪ್ಪತ್ತು ಊಟ. ಏಕಾದಶಿ ಹಗಲು ರಾತ್ರಿ ಪೂರ್ಣ ಉಪವಾಸ. ರಾತ್ರಿ ಜಾಗರಣೆ, ದ್ವಾದಶಿ ಬೆಳಿಗ್ಗೆ ಪಾರಣೆ ಸಕಾಲದಲ್ಲಿ, ಇವು ಮೂರು ಕೂಡಿದರೆ ಏಕಾದಶಿ ವ್ರತ ಪೂರ್ಣವಾಗುವದು. ಏಕಭುಕ್ತ ಎಂದರೆ ದಶಮಿಯ ದಿನ ಯಾವಾಗದರೂ ಒಮ್ಮೆ ಊಟ ಮಾಡುವದು. ನಕ್ತ ಎಂದರೆ ದಶಮಿಯ ದಿನ ದಿವಸದ ಎಂಟನೆಯ ಭಾಗದಲ್ಲಿ ಸೂರ್ಯ ಅಸ್ತವಾಗುವದಕ್ಕಿಂತ ಮೊದಲು ಊಟ ಮಾಡಬೇಕು. ಸಂನ್ಯಾಸಿಗಳು ನಕ್ಷತ್ರದರ್ಶನವಾದ ಬಳಿಕ ರಾತ್ರಿ ಊಟ ಮಾಡಬಾರದು. ಗೃಹಸ್ಥ, ಶ್ರಮಿಗಳು ಏಕಭುಕ್ತನಿಯಮವನ್ನು ನಕ್ಷತ್ರದರ್ಶನದ

ಅನಂತರವೂ ಮಾಡಬಹುದು. ಇದು ಯತಿಗಳಿಗೆ ನಿಷಿದ್ಧ. ನಕ್ತ ವ್ರತ ಮಾಡುವವರು ಮಾತ್ರ ದಿನದ ಎಂಟನೆಯ ಭಾಗದಲ್ಲಿ ಸೂರ್ಯನು ಇಳಿಮುಖನಾದಾಗ ಊಟ ಮಾಡಬೇಕು. ಅನಂತರ ಮರುದಿನ ಏಕಾದಶಿಯಂದು ಪ್ರಾತಃಕಾಲದಲ್ಲಿಯೂ ಮಧ್ಯಾಹ್ನದಲ್ಲಿಯೂ ಸ್ನಾನ, ಪೂಜೆ ಮಾಡಿ ಪೂರ್ಣ ಉಪವಾಸ ಮಾಡಬೇಕು.

**ಅಧಮಂ ಕೂಪ ಜಲೇ ಸ್ನಾನಂ ವಾಪ್ಯಾಂ ಸ್ನಾನಂ ಚ ಮಧ್ಯಮಂ ।**
**ತಡಾಗೇ ಚೋತ್ತಮಂ ಸ್ನಾನಂ ನದ್ಯಾಂ ಸ್ನಾನಂ ತತಃ ಪರಂ ॥**

ಬಾವಿಯಲ್ಲಿ ನೀರು ಸೇದಿಕೊಂಡು ಮಾಡುವದು ಅಧಮ ಸ್ನಾನ. ಹೊಂಡ ಕೊಳಗಳಲ್ಲಿ ಇಳಿದು ಮಾಡುವ ಸ್ನಾನ ಮಧ್ಯಮ ಸ್ನಾನ. ದೊಡ್ಡ ಸರೋವರದಲ್ಲಿ ಮೀಯುವದು ಉತ್ತಮ. ನದೀ ಸ್ನಾನವು ಇವೆಲ್ಲ ಸ್ನಾನಕ್ಕಿಂತ ಮಿಗಿಲು. ಮನೆಯಲ್ಲಿಯೂ ಶುಚಿಯಾದ ಮಡಿನೀರಿನಿಂದ ಸ್ನಾನಮಾಡುವದೂ ಉತ್ತಮ ಸ್ನಾನವೇ. ನದಿ ಹೊಂಡಗಳಲ್ಲಿ ಸ್ನಾನ ಮಾಡುವಾಗ ಒಂದು ಮುಳುಗು ಹಾಕಿ ಮೃತ್ತಿಕಾಸ್ನಾನ ಮಾಡಬೇಕು.

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ॥**

ಎಂಬ ಮಂತ್ರವನ್ನು ಮೃತ್ತಿಕಾ ಸ್ನಾನ ಕಾಲದಲ್ಲಿ ಹೇಳಬೇಕು. ಸ್ನಾನಮಾಡುವಾಗ ಪಾಪಿಗಳ ಹಾಗೂ ಪಾಖಂಡರ ಜೊತೆಗೂ ದೇವ ಬ್ರಾಹ್ಮಣ ನಿಂದಕರ ಜೊತೆಗೂ ಮಾತನಾಡಬಾರದು. ಏಕಾದಶಿಯ ದಿನ ಮನೆಯಲ್ಲಿ ನಂದಾದೀಪವನ್ನು ಹಚ್ಚಬೇಕು. ದೇವರ ಮುಂದೆ. ನಿದ್ದೆ ಮತ್ತು ಮೈಥುನ ಎರಡನ್ನೂ ವರ್ಜಿಸಬೇಕು. ಹಾಗೂ ಇಡೀ ದಿನದಲ್ಲಿ ಧರ್ಮ ಕರ್ಮಾನುಷ್ಠಾನ, ಶಾಸ್ತ್ರಪುರಾಣ, ವಿನೋದದಿಂದ ಹರಿಯ ಮಹಿಮೆಯನ್ನು ಕೊಂಡಾಡಬೇಕು. ರಾತ್ರಿ ಜಾಗರ, ದ್ವಾದಶಿ ಪಾರಣ, ಬ್ರಾಹ್ಮಣ, ಭೋಜನ, ದಕ್ಷಿಣ ಪ್ರಧಾನ ಮುಂತಾದ ವ್ರತದ ವಿಧಾನವನ್ನು ಸಾಂಗವಾಗಿ ನೆರವೇರಿಸಬೇಕು. ಪ್ರತಿಯೊಂದು ತಿಂಗಳಿನಲ್ಲಿ ಬರುವ ಶುಕ್ಲಪಕ್ಷ ಹಾಗೂ ಕೃಷ್ಣಪಕ್ಷದ ಎರಡೂ ಏಕಾದಶಿಗಳನ್ನೂ ತಪ್ಪದೇ ಮಾಡಬೇಕು. ಶಂಖೋದ್ಧಾರ ತೀರ್ಥದಲ್ಲಿ ಸ್ನಾನ, ಗಯಾಗದಾಧರನ ದರ್ಶನ, ಸಂಕ್ರಾಂತಿ ಸಮಯದಲ್ಲಿ ನಾಲ್ಕು ಲಕ್ಷ ರೂಪಾಯಿಗಳ ದಾನ, ಮುಂತಾದವುಗಳಿಂದ ಬರುವ ಪುಣ್ಯವು ಏಕಾದಶಿಯ ಉಪವಾಸದಿಂದ ಬರುವ ಪುಣ್ಯದ ಹದಿನಾರನೆಯ ಭಾಗಕ್ಕೂ ಸರಿತೂಗುವದಿಲ್ಲ. ಭೂಮಂಡಲದಲ್ಲಿ ಅಶ್ವಮೇಧಯಜ್ಞ ಮಾಡಿದ್ದಕ್ಕಿಂತ ನೂರುಪಟ್ಟು ಫಲ ಬರುವದು ಏಕಾದಶಿ ಉಪವಾಸದಿಂದ. ಸಾವಿರ ಗೋದಾನ, ತಪಸ್ವೀ ಬ್ರಾಹ್ಮಣ ಭೋಜನಗಳಿಂದ ಬರುವ ಫಲವು ಏಕಾದಶಿ ಉಪವಾಸ ಮಾಡಿದವನಿಗೆ ಅನಾಯಾಸವಾಗಿ ಲಭಿಸುವದು. ಇದರ ಅರ್ಧ ಪುಣ್ಯವು ನಕ್ತ ಭೋಜನದಿಂದ ಎಂದರೆ ದಶಮಿಯ ದಿನ ಸೂರ್ಯಾಸ್ತ ಕಾಲದಲ್ಲಿ ಒಪ್ಪತ್ತು ಊಟ ಮಾಡಿದರೆ ಬರುವದು. ಇದರ ಅರ್ಧ ಫಲ ದಶಮಿಯ ದಿನ ತನ್ನ ಅನುಕೂಲತೆಯಿಂದ ಒಪ್ಪತ್ತು ಊಟ ಮಾಡುವದರಿಂದ ಬರುವದು.

**ಧರ್ಮರಾಜ:-** ಈ ಏಕಾದಶಿ ತಿಥಿಯು ಹೇಗೆ ಹುಟ್ಟಿತು? ಜಗತ್ತಿನಲ್ಲಿ ಇದೊಂದೇ ತಿಥಿಯು ಇಷ್ಟು ಪವಿತ್ರ ಹೇಗೆ ಆಯಿತು? ಇದು ದೇವತೆಗಳಿಗೆಲ್ಲ ಇಷ್ಟು ಪ್ರೀತ್ಯಾಸ್ಪದವಾಗಲು ಕಾರಣವೇನು?

**ಕೃಷ್ಣ:-** ಹಿಂದೆ ಕೃತಯುಗದಲ್ಲಿ ಮುರ ಎಂಬ ಪ್ರಬಲ ಪರಾಕ್ರಮಿಯಾದ ಒಬ್ಬ ದೈತ್ಯ ಇದ್ದ. ಅವನು ಇಂದ್ರನೇ ಮೊದಲಾದ ಎಲ್ಲ ದೇವತೆಗಳನ್ನು ಸೋಲಿಸಿದ. ಸ್ವರ್ಗದಿಂದ ಅವರನ್ನೆಲ್ಲ ಹೊರಗೆ ಹಾಕಿದ. ಆಗ ದೇವೇಂದ್ರನು ಕೈಲಾಸ ಪರ್ವತಕ್ಕೆ ಹೋಗಿ ಪರಮೇಶ್ವರನಿಗೆ ಬಿನ್ನವಿಸಿಕೊಂಡ.

**ದೇವೇಂದ್ರ:-** ಪ್ರಭು, ಮುರಾಸುರನು ನಮ್ಮನ್ನೆಲ್ಲ ಗೆದ್ದುಬಿಟ್ಟಿದ್ದಾನೆ. ದೇವತೆಗಳೆಲ್ಲರೂ ಈಗ ಸ್ವರ್ಗಭ್ರಷ್ಟರಾಗಿದ್ದಾರೆ. ಭೂಲೋಕದಲ್ಲಿ ತಲೆಮರೆಸಿಕೊಂಡು ಶಂತಾತಂಕದಿಂದ ಮಾನವರ ಮಧ್ಯದಲ್ಲಿ ತಿರುಗಾಡುತ್ತಿದ್ದಾರೆ. ಸ್ವರ್ಗಲೋಕದ ಸುರಸತ್ತಮರಿಗೆ ಮರ್ತ್ಯಲೋಕದ ಮಾನವರೊಂದಿಗೆ ಬೆರೆತು ನಡೆಯುವದು ಬಹಳ ಕಷ್ಟವಾಗಿದೆ. ಇದಕ್ಕೆ ಏನಾದರೂ ಒಂದು ಉಪಾಯವನ್ನು ಹೇಳು.

**ಮಹಾದೇವ:-**

**ದೇವರಾಜ ಸುರಶ್ರೇಷ್ಠ ಯತ್ರಾಸ್ತೆ ಗರುಡಧ್ವಜಃ ।**
**ಶರಣ್ಯಸ್ಯ ಜಗನ್ನಾಥಃ ಪರಿತ್ರಾತಾ ಪರಾಯಣಃ ॥**

ದೇವೇಂದ್ರ ಗರುಡಾರೂಢನಾದ ಶ್ರೀಹರಿಯೇ ಈ ಜಗತ್ತಿಗೆಲ್ಲ ನಾಥ. ಅವನೇ ನಮ್ಮನ್ನೆಲ್ಲ ರಕ್ಷಣೆ ಮಾಡುವವ. ಅವನಿಗೇ ನೀವು ಶರಣು ಹೋಗಿರಿ.

**ತತ್ರಗಚ್ಛ ಸುರಶ್ರೇಷ್ಠ ಸವೋ ರಕ್ಷಾಂ ವಿಧಾಸ್ಯತಿ ।**

ನೀನು ಅಲ್ಲಿಗೆ ಹೋಗು, ಅವನೇ ನಿಮ್ಮನ್ನೆಲ್ಲ ರಕ್ಷಿಸುವನು.

ಮಹಾರುದ್ರದೇವರ ಮಾತಿನಂತೆ ದೇವೇಂದ್ರನು ಮಹಾವಿಷ್ಣುವಿನ ಬಳಿಗೆ ಸಾರಿದ. ಅವನಿಗೆ ಮೊರೆಯಿಟ್ಟ.

**ಓಂ ನಮೋ ದೇವದೇವೇಶ ದೇವ ದಾನವ ವಂದಿತ ।**
**ದೈತ್ಯಾರೇ ಪುಂಡರೀಕಾಕ್ಷ, ತ್ರಾಹಿನೋ ಮಧುಸೂದನ ॥**

ದೇವದೇವೇಶನಾದ ಮಧುಸೂದನ ನಿನಗೆ ನಮಸ್ಕಾರ. ಮುರಾಸುರನಿಂದ ಪರಾಜಿತರಾದ ನಾವೆಲ್ಲರೂ ನಿನಗೆ ಶರಣು ಬಂದಿದ್ದೇವೆ. ನೀನು ನಮ್ಮನ್ನು ರಕ್ಷಣೆ ಮಾಡು. ಬ್ರಹ್ಮನ ಅಂಶದಲ್ಲಿ ಹುಟ್ಟಿದ ತಾಲಜಂಘ ಎಂಬ ದೈತ್ಯನ ಮಗನಾದ ಮುರಾಸುರನು ಮದೋನ್ಮತ್ತನಾಗಿ ಸ್ವರ್ಗಲೋಕವನ್ನು ಆಕ್ರಮಿಸಿದ್ದಾನೆ. ಚಂದ್ರಾವತಿ ಎಂಬ ತನ್ನ ರಾಜಧಾನಿಯಲ್ಲಿ ಇದ್ದು ಆ ದೈತ್ಯನು ಸ್ವರ್ಗಲೋಕ ಭೂಲೋಕ ಎರಡನ್ನೂ ಆಳುತ್ತಾನೆ. ಇಂದ್ರನೇ ಮೊದಲಾದ ಸುರಾಧೀಶ್ವರರ ಸ್ಥಾನವನ್ನೂ ಅಷ್ಟಲೋಕಪಾಲಕರ ಅಧಿಕಾರವನ್ನೂ ಕಸಿದುಕೊಂಡು ಬೇರೆ ಇಂದ್ರನನ್ನು ಸ್ವರ್ಗದ ಸಿಂಹಾಸದಲ್ಲಿ ಕೂಡಿಸಿದ್ದಾನೆ. ಚಂದ್ರ, ಸೂರ್ಯ, ವರುಣ, ವಾಯು, ಅಗ್ನಿ ಎಲ್ಲರನ್ನೂ ಅವರ ಅವರ ಅಧಿಕಾರ ಸ್ಥಾನದಿಂದ ಕೆಳಗಿಳಿಸಿ ತನ್ನ ಜನರನ್ನು ಅವರ ಸ್ಥಾನದಲ್ಲಿ ಇರಿಸಿದ್ದಾನೆ. ಈಗ ನೀನು ಅವನನ್ನು ಕೊಂದು ನಮ್ಮನ್ನು ಕಾಪಾಡು. ನಮ್ಮ ಸ್ಥಾನಮಾನಗಳನ್ನು ನಮಗೆ ಮರಳಿ ದೊರಕಿಸಿಕೊಡು.

ದೇವೇಂದ್ರನ ಮಾತನ್ನು ಕೇಳಿ ಶ್ರೀಹರಿಯು ಕೆರಳಿ ಕುಪಿತನಾಗಿ "ನೀವು ಗಾಬರಿಯಾಗಬೇಡಿರಿ. ನಾನು ಆ ದುಷ್ಟನನ್ನು ಕೊಂದುಬಿಡುತ್ತೇನೆ" ಎಂದು ಆಶ್ವಾಸನೆಯಿತ್ತ. ಮತ್ತು ಎಲ್ಲ ದೇವತೆಗಳೊಂದಿಗೆ ಕೂಡಿ ಆ ಚಂದ್ರಾವತಿ ನಗರಕ್ಕೆ

ಆಗಮಿಸಿದ. ದೇವತೆಗಳಿಗೂ ಆ ಮುರಾಸುರನಿಗೂ ಘನಘೋರವಾದ ಯುದ್ಧವು ಆಯಿತು. ಆಗ ಆ ಮುರಾಸುರನು ತನ್ನ ಪ್ರಚಂಡವಾದ ಪರಾಕ್ರಮದಿಂದ ಮತ್ತೆ ಎಲ್ಲ ದೇವತೆಗಳನ್ನೂ ಶಸ್ತ್ರಾಸ್ತ್ರಗಳಿಂದ ಗಾಯಗೊಳಿಸಿ ಪರಾಜಯಗೊಳಿಸಿದ. ಮತ್ತು ಶ್ರೀಹರಿಯ ಮೇಲೆ ಕ್ರೋಧದಿಂದ ಕೆಂಪಗಾದ ಕಣ್ಣಿನ ಕಿಡಿಗಳನ್ನು ತೂರಿ ಗರ್ಜಿಸಿದ. ''ಎಲೋ ವಿಷ್ಣುವೇ, ನಿಲ್ಲು ನಿಲ್ಲು ನಿನ್ನನ್ನೂ ಒಂದು ಕೈ ನೋಡಿಯೇ ಬಿಡುತ್ತೇನೆ''. ಎಂದು ಅಭಿಕ್ಷೇಪಿಸಿದ. ಅದರಿಂದ ರುಷ್ಟನಾದ ಭಗವಂತನು ದೈತ್ಯಸೇನೆಯ ಮೇಲೆ ತನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸಿದ. ಅದರಿಂದ ಅವನ ಅನುಯಾಯಿಗಳಾದ ದಾನವರೆಲ್ಲರೂ ಹತಪತಿತರಾಗಿ ಬಿದ್ದರು. ಅದನ್ನು ನೋಡಿ ಮತ್ತಿಷ್ಟು ರೊಚ್ಚಿಗೆದ್ದ ಆ ದೈತ್ಯನು ಏಕಾಕಿಯಾಗಿ ಶ್ರೀಕೃಷ್ಣನೊಡನೆ ಹೋರಾಡಿದ. ಅವನ ಶಸ್ತ್ರಾಸ್ತ್ರಗಳನ್ನೆಲ್ಲ ತುಂಡರಿಸಿದ.

ಅನಂತರ ಆ ಮುರಾಸುರನಿಗೂ ಮಧುಸೂದನನಿಗೂ ಬಾಹು ಯುದ್ಧ ಪ್ರಾರಂಭವಾಯಿತು. ಅದರಲ್ಲಿ ಅವನು ಸೋಲಲಿಲ್ಲ. ಅವನು ಗೆಲ್ಲಲಿಲ್ಲ. ಹೀಗೆಯೇ ನಡೆಯಿತು ಅವರ ಈ ದ್ವಂದ್ವ ಯುದ್ಧ ಒಂದು ಸಾವಿರ ವರ್ಷಗಳವರೆಗೆ. ಇದರಿಂದ ವಿಷ್ಣುವಿಗೆ ದೊಡ್ಡ ಚಿಂತೆಯಾಯಿತು. ಎಲ್ಲ ದೇವತೆಗಳೂ ಆ ದೈತ್ಯನ ಭೀತಿಯಿಂದ ಹೆದರಿ ಓಡಿಹೋದರು. ಕೊನೆಗೆ ಶ್ರೀಹರಿಯು ಕೂಡ ಅವನಿಂದ (ಅಜ್ಞ ಜನ ಮೋಹನಾರ್ಥಕವಾಗಿ) ಪರಾಜಿತನಾದ ಹೀಗೆ (ಲೋಕದೃಷ್ಟಿಯಿಂದ) ಸೋತು ನಿರ್ವಿಣ್ಣ್ಯನಾದ ಮಹಾವಿಷ್ಣುವಿನ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಇರುವ ಹನ್ನೆರಡು ಯೋಜನ ಉದ್ದವಾದ ಸಿಂಹಾಪತಿ ಎಂಬ ಗುಹೆಯಲ್ಲಿ ಮಲಗಿದ.

ಅವನನ್ನು ಬೆನ್ನಟ್ಟಿ ಬಂದ ಆ ದುಷ್ಟ ದಾನವ. ಯುದ್ಧಮಾಡಿ ದಣಿದಾಗಲೇ ಆ ವಿಷ್ಣುವನ್ನು ಕೊಂದುಬಿಡಬೇಕು ಎಂದು ಬೆಂಬತ್ತಿ ಓಡಿ ಬಂದಿದ್ದ. ಆ ದೈತಾಧಮ. ಅಲ್ಲಿ ಆ ಗುಹಾ ಮಧ್ಯದಲ್ಲಿ ಶ್ರೀಹರಿಯು ಶಯನ ಮಾಡಿದ್ದನ್ನು ಕಂಡು ಆ ಮುರಾಸುರನಿಗೆ ಪರಮ ಪ್ರಹರ್ಷವಾಯಿತು. ಮೈಮರೆತು ಮಲಗಿಕೊಂಡ ಈ ಮಧುಸೂದನನನ್ನು ತಾನು ಇನ್ನು ಲೀಲೆಯಿಂದ ಹೊಡೆದು ಕೊಲ್ಲಬಹುದು ಎಂದು ಆವೇಶದಿಂದ ನುಗ್ಗಿಬಂದ ಶ್ರೀಹರಿಯ ಬಳಿಗೆ. ಕೂಡಲೇ ಶಯನ ಮಾಡಿದ ಶ್ರೀಮನ್ನಾರಾಯಣನ ಶರೀರದಿಂದ ಓರ್ವರೂಪಸಂಪನ್ನಳಾದ ಕನ್ಯಾಮಣಿಯು ಹೊರಹೊಮ್ಮಿ ಬಂದಳು.

ವಿಷ್ಣುವಿನ ತೇಜಸ್ಸಿನ ಅಂಶದಿಂದ ಹುಟ್ಟಿ ಬಂದ ಆ ಕನ್ಯೆಯು ಕೈಯಲ್ಲಿ ದಿವ್ಯವಾದ ಆಯುಧವನ್ನು ಹಿಡಿದಿದ್ದಳು. ಮತ್ತು ಅವಳು ಲೋಕೋತ್ತರ ಸೌಂದರ್ಯಶಾಲಿನಿ. ಅಷ್ಟೇ ಪರಾಕ್ರಮಶಾಲಿನಿ. ಕ್ರೂರ ಕಾಳಿಯಂತೆ ಇರುವ ಆ ಕನ್ನಿಕೆಯು ಕೆಂಗಣ್ಣಿನಿಂದ ದೈತ್ಯಕುಲಕಲಂಕನಾದ ಆ ಮುರಾಸುರನನ್ನು ಒಮ್ಮೆ ನೋಡಿ ತನ್ನೊಡನೆ ಯುದ್ಧ ಮಾಡಲು ಅವನನ್ನು ಆಹ್ವಾನಿಸಿದಳು. ಆಗ ದರ್ಪಿಷ್ಠನಾದ ಆ ದೈತ್ಯನು ಆ ಕನ್ಯಾಮಣಿಯ ಲೋಕವಿಲಕ್ಷಣವಾದ ಲಾವಣ್ಯವನ್ನು ಕಂಡು ಮುಗ್ಧನಾದರೂ ಅವಳ ಆಹ್ವಾನವನ್ನು ಅಂಗೀಕರಿಸಿ ಯುದ್ಧಕ್ಕೆ ಸಿದ್ಧನಾಗಿ ನಿಂತ. ಘೋರಾಯುಧವನ್ನು ಎತ್ತಿಕೊಂಡು ಅವಳನ್ನು ಪ್ರಹರಿಸಲು ಮುಂದೆ ಬಂದ. ಅವಳು ನಿಂತಲ್ಲಿಯೇ ಹೂಂಕಾರ ಧ್ವನಿಗೈದಳು. ಅವಳ ಸಾಹಂಕಾರ ಹೂಂಕಾರ ಸ್ವರದಿಂದಲೇ ಆ ಮುರಾಸುರನು ಸುಟ್ಟು ಭಸ್ಮೀಭೂತನಾಗಿ ಬಿದ್ದುಕೊಂಡ. ಆ ದೈತ್ಯನು ಬೂದಿಯಾಗಿ ಬಿದ್ದ ಬಳಿಕ ವಿಷ್ಣು ಎದ್ದು ಕುಳಿತ ಮತ್ತು ಕೇಳಿದ.

**ವಿಷ್ಣು:-** ಈ ದುಷ್ಟನಾದ ನನ್ನ ವೈರಿಯನ್ನು ಯಾರು ಕೊಂದರು? ನನ್ನ ಮೇಲಿನ ಕರುಣೆಯಿಂದ ಈ ದುರುಳ ದಾನವನ ದಮನವನ್ನು ಮಾಡಿದ ಪುಣ್ಯಾತ್ಮರು ಯಾರು?

**ಕನ್ಯೆ:-** ಸ್ವಾಮಿ, ಈ ಮುರಾಸುರನು ಇಂದ್ರಾದಿ ದೇವತೆಗಳನ್ನು ಗೆದ್ದ ಸ್ವರ್ಗಲೋಕವನ್ನು ಆಕ್ರಮಿಸಿದ ದೇವತೆಗಳನ್ನೆಲ್ಲ ಸ್ಥಾನಭ್ರಷ್ಟರನ್ನಾಗಿ ಮಾಡಿದ. ಶ್ರೀಹರಿಯು ಈ ಗುಹೆಯಲ್ಲಿ ಮಲಗಿದ್ದನ್ನು ನಾನು ನೋಡಿದೆ. ಅವನ ಬೆನ್ನ ಹಿಂದೆಯೇ ಅವನನ್ನು ಕೊಲ್ಲಬೇಕೆಂಬ ದುರ್ಬುದ್ಧಿಯ ದೈತ್ಯಾಧಮ ಬಂದ. ವಿಷ್ಣುವು ಮಲಗಿದರೆ ಅಥವಾ ಪರಾಜಿತನಾದರೆ ಈ ದೈತ್ಯ ಮೂರು ಲೋಕವನ್ನೇ ಕೊಂದುಬಿಡಬಹುದು. ಆದುದರಿಂದ ನಾನೇ ಇವನನ್ನು ವಧಿಸಿದೆ.

**ವಿಷ್ಣು:-** ಈ ದೈತ್ಯ, ನನ್ನನ್ನು ಕೂಡ ಗೆದ್ದಿದ್ದ. ಇಂಥ ಕ್ರೂರ ಶೂರ ದೈತ್ಯನನ್ನು ನೀನು ಹೇಗೆ ಗೆದ್ದೆ?

**ಕನ್ಯಾ:-** ಪ್ರಭು, ಇದೆಲ್ಲವೂ ನಿನ್ನ ಪ್ರಸಾದ. ನೀನು ಲೋಕವಿಡಂಬನೆಗಾಗಿ ಪರಾಜಿತನಾದಂತೆ ನಟಿಸಿರುವೆ. ನಿನ್ನ ಪ್ರಸಾದದಿಂದಲೇ ನಾನು ಈ ದುರ್ದಾನವನನ್ನು ಮರ್ದನಮಾಡಿ ಕೊಂದುಹಾಕಿದೆ.

**ವಿಷ್ಣು:-** ಭದ್ರೆ, ನಿನ್ನ ಈ ಕಾರ್ಯದಿಂದ ಜಗತ್ತೆಲ್ಲವೂ ನಿರ್ಭಯವಾಗಿದೆ. ದೇವತೆಗಳು ಆನಂದಪಟ್ಟಿದ್ದಾರೆ. ಋಷಿ ಮುನಿಗಳಿಗೂ ಸಮಾಧಾನವಾಗಿದೆ. ನಾನೂ ಪ್ರೀತನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆ ಇದೆಯೋ ಅದನ್ನು ಬೇಡು. ನೀನು ಬಯಸಿದ ವರಗಳನ್ನು ನೀಡುತ್ತೇನೆ.

**ಕನ್ಯಾ:-** ಸ್ವಾಮಿ, ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ನನಗೆ ಮೂರು ವರಗಳನ್ನು ಕರುಣಿಸು. ನಾನು ಸರ್ವ ತೀರ್ಥಗಳಲ್ಲಿ ತಿಥಿಗಳಲ್ಲಿ ಪ್ರಧಾನಳಾಗಬೇಕು. ಸರ್ವರ ವಿಘ್ನವಿನಾಶಿನಿಯೂ ಆಗಬೇಕು. ಸರ್ವಸಿದ್ಧಿಪ್ರದಳಾದ ದೇವಿಯೂ ಆಗಬೇಕು. ನನ್ನನ್ನು ಉದ್ದೇಶಿಸಿ ಉಪವಾಸಮಾಡಿ ನಿನ್ನನ್ನು ಆರಾಧಿಸಿದವರಿಗೆ ಭಕ್ತಿಯಿಂದ ಸರ್ವಸಿದ್ಧಿಗಳೂ ಪ್ರಾಪ್ತವಾಗಬೇಕು. ದಶಮಿಯ ದಿನ ಏಕಭುಕ್ತ, ಅಥವಾ ನಕ್ತ, ಏಕಾದಶಿಯ ದಿನ ಉಪವಾಸ ಮತ್ತು ದ್ವಾದಶಿ ಪಾರಣೆ ಮಾಡಿದವರಿಗೆ ಪುಣ್ಯ ಐಶ್ವರ್ಯ ಮೂರನ್ನೂ ನೀನು ಪ್ರಧಾನಮಾಡು.

**ವಿಷ್ಣು:-** ನೀನು ಹೇಳಿದಂತೆ ಆಗಲಿ. ನೀನು ಹೇಳಿದ ವರಗಳನ್ನೆಲ್ಲ ನೀಡಿದ್ದೇನೆ. ಹನ್ನೆರಡು ತಿಂಗಳಲ್ಲಿಯೂ ವಿಶೇಷವಾಗಿ ಕಾರ್ತೀಕ ಮಾಸದಲ್ಲಿ ಏಕಾದಶಿ ವ್ರತವನ್ನು ಮಾಡಿ ನನ್ನ ಪೂಜೆ ಮಾಡಿದವರು ಮೋಕ್ಷವನ್ನು ಹೊಂದುತ್ತಾರೆ. ತೃತಿಯಾ, ಅಷ್ಟಮಿ, ನವಮಿ, ಚತುರ್ದಶಿ ತಿಥಿಗಳು ನನಗೆ ಪ್ರಿಯ. ಅವೆಲ್ಲವುಗಳಿಗಿಂತ ಏಕಾದಶಿ ನನಗೆ ಅತ್ಯಂತ ಪ್ರಿಯ. ಎಲ್ಲ ತೀರ್ಥಸ್ನಾನಗಳಿಗಿಂತ ಎಲ್ಲ ವ್ರತಾಚರಣೆಗಳಿಗಿಂತ ಎಲ್ಲ ಧರ್ಮಕರ್ಮಾನುಷ್ಠಾನಗಳಿಗಿಂತ ಮಿಗಿಲಾದ ಅತ್ಯಧಿಕ ಪುಣ್ಯವು ಏಕಾದಶಿ ಉಪವಾಸದಿಂದ ಬರುವುದು.

**ಮಹಾದೇವ:-** ಶ್ರೀಹರಿಯು ತನ್ನ ತೇಜಸ್ಸಂಭೂತಳಾದ ಆ ಕನ್ನಿಕಾಮಣಿಗೆ ಅವಳ ಅಪೇಕ್ಷೆಯಂತೆ ಮೂರು ವರಗಳನ್ನು ಕರುಣಿಸಿದ. ಉದಯಕಾಲದಲ್ಲಿಯೇ ಅಲ್ಪ ಏಕಾದಶಿ, ಮಧ್ಯದಲ್ಲಿ ಪೂರ್ಣ ದ್ವಾದಶಿ, ಕೊನೆಯಲ್ಲಿ ತ್ರಯೋದಶಿ ಇದಕ್ಕೆ ತ್ರಿಸ್ಪೃಶಾ

ಏಕಾದಶಿ ಎನ್ನುವರು. ಇಂಥ ಏಕಾದಶಿಯಂದು ಉಪವಾಸ ಮಾಡಿದರೆ ಸಾವಿರ ಏಕಾದಶಿ ಮಾಡಿದ ಪುಣ್ಯ ಫಲವು ಪ್ರಾಪ್ತವಾಗುವದು. ದ್ವಾದಶಿಯ ದಿನ ಸಕಾಲದಲ್ಲಿ ಪಾರಣೆ ಮಾಡಿದರೆ ಸಾವಿರಪಟ್ಟು ಪುಣ್ಯ ಹೆಚ್ಚು ಬರುವದು. ಪೂರ್ವವಿದ್ಧವಾದ ಏಕಾದಶಿಯಂದು ಉಪವಾಸ ಮಾಡಬಾರದು. ಪರವಿದ್ಧವಾದ ಏಕಾದಶಿಯಂತೆ ಉಪವಾಸ ಮಾಡಬೇಕು.

ಶ್ರೀಹರಿಯ ತೇಜಸ್ಸಿನಿಂದ ಹುಟ್ಟಿ ಅವನ ಪ್ರಾಣರಕ್ಷಣೆಯನ್ನು ಮಾಡಿದ ಆ ಕನ್ಯೆಯೇ ಏಕಾದಶಿ ತಿಥಿಗೆ ಅಭಿಮಾನಿ ದೇವಿಯಾಗಿ, ಅಂದು ಉಪವಾಸ ಮಾಡಿದವರಿಗೆ ಶ್ರೀಹರಿಯನ್ನು ಬಿನ್ನವಿಸಿಕೊಂಡು ಉಪೋಷಣ ಮಾಡಿದವರ ಸರ್ವಪಾಪಗಳನ್ನು ಪರಿಹರಿಸಿ, ಸರ್ವಸಿದ್ಧಿಗಳನ್ನು ಪ್ರದಾನ ಮಾಡುವಳು. ಏಕಾದಶಿಯಂದು ಉಪವಾಸ ಮಾಡುವವರು ಹಾಗೂ ನಾರಿಯರು ಗರುಡಧ್ವಜನಾದ ಶ್ರೀಹರಿಯು ವಾಸಮಾಡುವ ವಿಷ್ಣುಲೋಕಕ್ಕೆ ಪ್ರಯಾಣ ಮಾಡುವರು. ವಿಷ್ಣುಧರ್ಮಕ್ಕೆ ಸಮಾನ ಧರ್ಮವಿಲ್ಲ. ಗೀತೆಗೆ ಸಮಾನ ಗ್ರಂಥವಿಲ್ಲ. ಏಕಾದಶಿಗೆ ಸಮಾನವಾದ ವ್ರತವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜಯಾ ವಿಜಯಾ ಜಯಂತಿ ಏಕಾದಶಿಗಳ ಮಾಹಾತ್ಮ್ಯ ಎಂಬ ಮೂವತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ಮಾರ್ಗಶೀರ್ಷ ಶುಕ್ಲಪಕ್ಷದ ಮೋಕ್ಷದಾ ಏಕಾದಶಿಯ ಮಹಿಮೆ

**ಅಧ್ಯಾಯ - ೪೦**

**ಧರ್ಮರಾಜ:-** ದೇವತೆಗಳ ಒಡೆಯನಾದ ರುದ್ರದೇವ, ಮಾರ್ಗಶೀರ್ಷ ಶುಕ್ಲಪಕ್ಷದ ಏಕಾದಶಿ ದಿನದಂದು ಯಾವ ದೇವರ ಪೂಜೆಯನ್ನು ಮಾಡಬೇಕು ಅದರ ವಿಧಿ ವಿಧಾನಗಳೇನು ನನಗೆ ವಿಸ್ತಾರವಾಗಿ ನಿರೂಪಣೆ ಮಾಡು.

**ಶ್ರೀಕೃಷ್ಣ:-** ಮಹಾರಾಜ, ನೀನು ಬಹಳ ಒಳ್ಳೆಯ ಪ್ರಶ್ನೆಯನ್ನು ಮಾಡಿದೆ. ಮಾರ್ಗಶೀರ್ಷ ಶುದ್ಧ ಏಕಾದಶಿಯು ನನಗೆ ಪ್ರೀತಿಯ ತಿಥಿ. ಅದಕ್ಕೆ ಹರಿಯ ವಾಸರಾ ಎಂದೇ ಹೆಸರು. ಮಾರ್ಗಶೀರ್ಷ ಶುದ್ಧ ದ್ವಾದಶಿ ತಿಥಿಯು ನನ್ನ ದೇಹದಿಂದಲೇ ದೈತ್ಯರ ವಧೆಗಾಗಿ ಹುಟ್ಟಿರುತ್ತದೆ ಎಂದು ನಾನು ನಿನಗೆ ಮೊದಲೇ ತಿಳಿಸಿದ್ದೇನೆ. ಅದರ ಹಿಂದಿನ ಮಾರ್ಗಶೀರ್ಷ ಶುದ್ಧ ಏಕಾದಶಿಯು ಅತ್ಯಂತ ಪುಣ್ಯಪ್ರದ. ಈ ಏಕಾದಶಿ ಉಪವಾಸ ಮಾಡುವದರಿಂದ ಮೋಕ್ಷರೂಪ ಫಲವು ದೊರಕುತ್ತದೆ. ಆದುದರಿಂದ ಇದಕ್ಕೆ ಮೋಕ್ಷದಾ ಎಂಬ ಹೆಸರು ಬಂದಿರುತ್ತದೆ. ಈ ಏಕಾದಶಿಯ ದಿನ ತುಳಸಿ ದಳ ಹಾಗೂ ಮಂಜರಿಗಳಿಂದ ಮತ್ತು ಧೂಪ, ದೀಪ, ನೈವೇದ್ಯ ಮಂಗಳಾರತಿ ಮುಂತಾದ ವಿಧಿ ವಿಧಾನಗಳಿಂದ ದಾಮೋದರನ ಪೂಜೆಯನ್ನು ಮಾಡಬೇಕು. ರಾತ್ರಿ ಜಾಗರವನ್ನು, ಪುರಾಣ, ಪಠಣ, ನೃತ್ಯ, ಗೀತಾದಿಗಳಿಂದ ಆಚರಿಸಬೇಕು. ಇದರಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳೂ ಕೂಡ ನಾಶಹೊಂದುವವು.

ಈ ವಿಷಯದಲ್ಲಿ ಧರ್ಮರಾಜ, ನಿನಗೆ ಒಂದು ಪ್ರಾಚೀನ ಪೌರಾಣಿಕ ಕಥೆಯನ್ನು ಹೇಳುತ್ತೇನೆ. ಅದರ ಶ್ರವಣ ಮಾತ್ರದಿಂದಲೇ ಸರ್ವ ಪಾಪಗಳ ಪರಿಕ್ಷಯವಾಗುತ್ತದೆ.

ಪೂರ್ವಕಾಲದಲ್ಲಿ ಚಂಪಕ ಎಂಬ ಒಂದು ರಮಣೀಯವಾದ ಪಟ್ಟಣ. ವಿಶಾಲವಾದ ಆ ನಗರದಲ್ಲಿ ನೆಲಿಸಿದವರೆಲ್ಲರೂ ವಿಷ್ಣುಭಕ್ತರೇ. ವೈಖಾನಸ, ಎಂಬ ಹೆಸರಿನ ರಾಜನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದ. ಪ್ರಜೆಗಳೆಲ್ಲರೂ ತನ್ನ ಹೊಟ್ಟೆಯ ಹುಟ್ಟಿದ ಮಕ್ಕಳು ಎಂದೇ ಬಗೆದಿದ್ದ. ಆ ರಾಜ್ಯದಲ್ಲಿ ವೇದವೇದಾಂತ ಪಾರಂಗತರಾದ ಅನೇಕ ವಿಪ್ರರು ವಾಸಮಾಡಿದ್ದರು. ಪ್ರಜೆಗಳೆಲ್ಲರೂ ಸುಖ ಸಮೃದ್ಧಿಯ ಜೀವನವನ್ನು ನಡೆಸುತ್ತಿದ್ದರು. ಹೀಗೆ ನೀತಿ ನಿಯಮ ನಿಷ್ಠನಾಗಿ ಧರ್ಮವರ್ಮನಾಗಿ ನ್ಯಾಯಮಾರ್ಗದಿಂದ ಆ ಮಹೀಪತಿಯು ರಾಜ್ಯಶಾಸನ ಗೈಯುತ್ತಲಿರುವಾಗ ಒಂದು ದಿನ ಅವನಿಗೆ ಒಂದು ಕನಸು ಬಿದ್ದಿತು. ಆ ಕನಸಿನಲ್ಲಿ ಅವನ ಹಿಂದಿನ ತಲೆಮಾರಿನ ಪಿತೃಗಳೆಲ್ಲರೂ ಅಧಮಯೋನಿಗಳಲ್ಲಿ ಹುಟ್ಟಿ ಕಡುಕಷ್ಟವನ್ನು ಅನುಭವಿಸುತ್ತಿದ್ದರು. ಕೀಳು ಜನ್ಮಗಳಲ್ಲಿ ಜನಿಸಿ ಬಗೆಬಗೆಯ ಬವಣೆಗಳನ್ನು ಅನುಭವಿಸುತ್ತಲಿರುವ ತನ್ನ ಪೂಜ್ಯ ಪಿತೃಕುಲದ ಹಿರಿಯರನ್ನು ನೋಡಿ ಅತ್ಯಾಶ್ಚರ್ಯ ಆ ರಾಜರ್ಷಿಗೆ. ಅವನು ಕಳವಳಗೊಂಡು ಕನಸಿನಲ್ಲಿಯೇ ಕೇಳಿದ ತನ್ನ ಪಿತೃಗಳನ್ನು.

**ರಾಜ:-** ''ಪೂಜ್ಯರೇ, ನಿಮಗೆ ಇಂಥ ದುರವಸ್ಥೆ ಬರಲು ಕಾರಣವೇನು? ಹೇಳಿರಿ.''

ಇವನ ಪ್ರಶ್ನೆಗೆ ಅವನ ಹಿರಿಯರು ಯಾವ ಉತ್ತರವನ್ನೂ ನೀಡಲಿಲ್ಲ. ನರಕದ ನಾನಾ ವಿಧವಾದ ದುಃಖದಿಂದ ನರಳಿ ನರಳಿ ನಿತ್ರಾಣರಾಗಿದ್ದರು ಆ ಎಲ್ಲ ಪಿತೃಗಳು. ಅಷ್ಟರಲ್ಲಿ ಅವನಿಗೆ ಎಚ್ಚರವಾಯಿತು. ಕೂಡಲೇ ಆ ಮಹಾರಾಜ ಕರೆಕಳಿಸಿದ ತನ್ನ ರಾಜ್ಯದ ಆಸ್ಥಾನ ವಿದ್ವಾಂಸರಾದ ಪಂಡಿತೋತ್ತಮರನ್ನು, ಅವರಿಗೆ ಪ್ರಶ್ನೆ ಮಾಡಿದ.

**ರಾಜ:-** ಪೂಜ್ಯರೇ, ನಾನು ನಿನ್ನೆ ರಾತ್ರಿ ಕನಸಿನಲ್ಲಿ ತನ್ನ ಪಿತೃಗಳೆಲ್ಲರೂ ನರಕ ದುಃಖದಿಂದ ನವೆದು ನರಳುತ್ತಿರುವದನ್ನು ನೋಡಿದೆ. ಅವರೆಲ್ಲರೂ ಅಸಹ್ಯವಾದ ದುಃಖದಿಂದ ಅಳುತ್ತಲಿದ್ದರು. ಅದನ್ನು ನೋಡಿದಾಗಿನಿಂದ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ. ಊಟ, ತಿನಿಸು, ಉಣಿಸು ಯಾವದರಲ್ಲಿಯೂ ಉತ್ಸಾಹವಿಲ್ಲ. ಮಡದಿಯ ಮೇಲೆ ಪ್ರೀತಿಯಿಲ್ಲ. ಮಕ್ಕಳ ಮೇಲೆ ಪ್ರೇಮವಿಲ್ಲ. ನನ್ನ ಈ ಗಜಾಂತ ಐಶ್ವರ್ಯವೆಲ್ಲವೂ ವ್ಯರ್ಥ ಅನಿಸಿದೆ. ಆದುದರಿಂದ ಈಗ ಏನು ಮಾಡಲಿ? ನಾನು ಎಲ್ಲಿಗೆ ಹೋಗಲಿ? ನನ್ನ ಪಿತೃಪಿತಾಮಹರೆಲ್ಲರೂ ಹೇಗೆ ಉದ್ಧಾರ ಹೊಂದುವರು? ಅವರ ನರಕೋದ್ಧಾರಕ್ಕಾಗಿ ನಾನು ಯಾವ ವ್ರತವನ್ನು ಆಚರಿಸಲಿ? ಯಾವ ತಪಸ್ಸನ್ನು ಮಾಡಲಿ? ತಂದೆ, ತಾತಂದಿರು ನರಕದಲ್ಲಿ ನರಳುತ್ತಿದ್ದರೆ ಮಗನು ಇದ್ದಾದರೂ ಏನು ಪ್ರಯೋಜನ?

**ಆಸ್ಥಾನ ಪಂಡಿತರು:-** ಮಹಾರಾಜ, ನಮ್ಮ ದೇಶದಲ್ಲಿ ಅತ್ಯಂತ ಎತ್ತರವಾದ ಪರ್ವತದಲ್ಲಿ ಒಂದು ವಿಶಾಲವಾದ ಆಶ್ರಮವು ಇರುತ್ತದೆ. ಅಲ್ಲಿ ಪರ್ವತ ಎಂಬ ಮಹಾತಪಸ್ವಿಗಳಾದ ಋಷಿಗಳು ತಪೋಜೀವನದಿಂದ ಬಾಳುತ್ತಿದ್ದಾರೆ. ಅವರು ಹಿಂದಾದುದನ್ನೆಲ್ಲ ಅರಿಯಬಲ್ಲರು. ಮುಂದಾಗುವದನ್ನೆಲ್ಲ ತಿಳಿಸಬಲ್ಲರು. ಈಗ ನಡೆದುದಂತೂ ಅವರಿಗೆ ಕಣ್ಣು ಮುಂದಿನ ಕನ್ನಡಿ. ಇಂಥ ಪರಮ ಜ್ಞಾನಿ ಶ್ರೇಷ್ಠರಾದ ಪರ್ವತ ನಾಮಕರಾದ ಮಹಾಮಹರ್ಷಿಗಳ ಬಳಿಗೆ ನೀನು ಹೋಗು.

ಆಸ್ಥಾನ ವಿದ್ವಾಂಸರ ಈ ಸೂಕ್ತ ಸಲಹೆಯನ್ನು ಅಕ್ಷರಶಃ ಪಾಲಿಸಿದ ಆ ಧರಾಪತಿ. ಆ ದೇಶದ ಪ್ರಸಿದ್ಧವಾದ ಪರ್ವತಕ್ಕೆ ನಡೆದ. ಅಲ್ಲಿ ಅನೇಕ ಬ್ರಾಹ್ಮಣರಿಂದಲೂ ರಾಜ ಮಹಾರಾಜರಿಂದಲೂ ಒಡಗೂಡಿ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಪರ್ವತ ಮಹರ್ಷಿಗಳ ಆಶ್ರಮವನ್ನು ಹುಡುಕಿಕೊಂಡು ಹೋದ. ಆ ಆಶ್ರಮದ ತುಂಬ ವೇದವೇದಾಂತ ವಿದ್ವಾಂಸರಾದ ಬ್ರಹ್ಮಜ್ಞಾನಿಗಳು. ಅವರ ಮಧ್ಯದಲ್ಲಿ ಅಪರ ಬ್ರಹ್ಮನಂತೆ ಮಧ್ಯಾಸನದಲ್ಲಿ ಆಸೀನರಾಗಿದ್ದರು ಆ ಮಹಾಮುನಿ ಮಹರ್ಷಿಗಳು. ಅವರಿಗೆ ದಂಡಪ್ರಣಾಮ ಹಾಕಿದ. ಪರ್ವತ ಮಹರ್ಷಿಗಳು ರಾಜನಿಗೆ ಕುಶಲ ಪ್ರಶ್ನೆಯನ್ನು ಮಾಡಿದರು. ರಾಜ್ಯದ ಸಪ್ತಾಂಗಗಳ ಕ್ಷೇಮಸಮಾಚಾರವನ್ನು ಪ್ರಶ್ನಿಸಿದರು. ನಿನ್ನ ಸಾಮ್ರಾಜ್ಯಕ್ಕೆ ಯಾವುದೇ ಕುತ್ತು, ಕಂಟಕ, ಆಕ್ರಮಣದ ಆಪತ್ತು ಬಂದಿಲ್ಲವಷ್ಟೆ? ಎಂದು ವಿಚಾರಿಸಿದರು.

**ರಾಜ:-** ಪೂಜ್ಯರೇ, ತಮ್ಮ ಅನುಗ್ರಹದಿಂದ ಸಪ್ತಾಂಗ ರಾಜ್ಯದಲ್ಲಿ ಎಲ್ಲವೂ ಸ್ವಸ್ಥವೂ, ಸುಸ್ಥಿರವೂ ಇದೆ. ವಿಷ್ಣುವಿನಲ್ಲಿಯೂ ವಿಪ್ರರಲ್ಲಿಯೂ ಬದ್ಧಶ್ರದ್ಧರಾದವರಿಗೆ ಎಲ್ಲಿಂದ ಬಂದೀತು ವಿಘ್ನ? ಹೇಗೆ ಒದಗೀತು ವಿಡ್ಡೂರ? ಆದರೆ ಪೂಜ್ಯರೇ, ನಾನು ಕನಸಿನಲ್ಲಿ ನನ್ನ ಪಿತೃಗಳು ನರಕದಲ್ಲಿ ಬಳಲಿ ನರಳುತ್ತಿರುವದನ್ನು ಕಂಡೆ. ನನ್ನ ಪಿತೃಗಳ ಈ ನರಕವಾಸ ದುಃಖವನ್ನು ತಪ್ಪಿಸುವದು ಹೇಗೆ? ನಾನು ಯಾವ ಪುಣ್ಯ ಕರ್ಮವನ್ನು ಮಾಡಿದರೆ ನನ್ನ ಪಿತೃಗಳು ನರಕಯಾತನೆಯನ್ನು ಕಳೆದುಕೊಂಡು ದುಃಖದಿಂದ ಮುಕ್ತರಾಗಿ ಮೋಕ್ಷವನ್ನು ಪಡೆಯುವರು? ನನ್ನ ಪಿತೃಗಳ ಮುಕ್ತಿಯ ಉಪಾಯವನ್ನು ತಿಳಿದುಕೊಳ್ಳಲಿಕ್ಕಾಗಿಯೇ ನಾನು ತಮ್ಮ ಬಳಿಗೆ ಬಂದಿದ್ದೇನೆ. ಅದಕ್ಕಾಗಿ ನನಗೆ ಒಂದು ಉಪಾಯವನ್ನು ಹೇಳಿರಿ.

ವೈಖಾನಸ ಮಹಾರಾಜನ ಈ ಪ್ರಶ್ನೆಯನ್ನು ಕೇಳಿ ಪರ್ವತ ಮಹರ್ಷಿಗಳು ಒಂದು ಕ್ಷಣ ಕಣ್ಣು ಮುಚ್ಚಿಕೊಂಡು ಕುಳಿತರು. ಮರುಕ್ಷಣ ಧ್ಯಾನಾರೂಢರಾಗಿ ಅಂತಃದೃಷ್ಟಿಯಿಂದ ವಿಷಯವನ್ನು ಕೆದಕಿ, ಬೆದಕಿ ನೋಡಿದರು ಮತ್ತು ನುಡಿದರು.

**ಪರ್ವತಮುನಿ:-** ರಾಜನ್, ನನಗೆ ಈಗ ತಿಳಿಯಿತು. ನಿನ್ನ ಹಿಂದಿನ ಹಿರಿಯರ ಕುಚೇಷ್ಟೆ. ನಿನ್ನ ತಂದೆ ಪೂರ್ವಜನ್ಮದಲ್ಲಿಯೂ ಓರ್ವ ಮಹಾರಾಜನೇ ಆಗಿದ್ದ. ಆಗ ಅವನಿಗೆ ಇಬ್ಬರು ಮಡದಿಯರು. ನಿನ್ನ ಮಲತಾಯಿಯನ್ನು ಅವನು ಸೇರುತ್ತಿದ್ದಿಲ್ಲ. ಒಂದು ಸಲ ನಿನ್ನ ಮಲತಾಯಿಯ ಋತುಕಾಲವನ್ನು ಅತಿಕ್ರಮಿಸಿ ರಾಜ ಕಾರ್ಯಾರ್ಥವಾಗಿ ಬೇರೆ ಕಡೆ ತೆರಳಿದ. ತನ್ನ ಮಡದಿಯಾದ ನಿನ್ನ ಮಲತಾಯಿಗೆ ಋತುಕಾಲದಲ್ಲಿ ಋತುದಾನವನ್ನು ಮಾಡದಿದ್ದುದಕ್ಕಾಗಿ ಅವನಿಗೆ ಈಗ ನರಕವಾಗಿರುತ್ತದೆ. ಧರ್ಮಪತ್ನಿಯ ಋತುಕಾಲ ಅತಿವರ್ತನದ ಮಹಾಪಾಪದಿಂದ ನಿನ್ನ ತಂದೆ ಮಾತ್ರವಲ್ಲದೇ ಅವನ ಹಿಂದಿನ ತಲೆಮಾರಿನ ಪಿತೃಗಳೆಲ್ಲರೂ ನರಕದಲ್ಲಿ ಬಿದ್ದಿದ್ದಾರೆ.

**ರಾಜ:-** ಪೂಜ್ಯರೇ, ಆ ನನ್ನ ಪಿತೃಗಳಿಗೆ ಈ ನರಕವಾಸದಿಂದ ಶಾಪಮೋಚನವು ಯಾವ ವ್ರತದಿಂದ ಆಗುವದು? ಆ ಶಾಪಮೋಚನದ ಉಪಾಯವನ್ನು ನನಗೆ ಹೇಳಿರಿ.

**ಪರ್ವತಮಹರ್ಷಿ:-** ಮಾರ್ಗಶೀರ್ಷ ಶುಕ್ಲಪಕ್ಷದಲ್ಲಿ ಮೋಕ್ಷದಾ ಎಂಬ ಏಕಾದಶಿ ಬರುವದು. ಈ ವ್ರತವನ್ನು ನೀವು ಎಲ್ಲರೂ ಕುಟುಂಬದವರು ಶಾಸ್ತ್ರೋಕ್ತವಾಗಿ ಆಚರಿಸಿರಿ. ಈ ಮೋಕ್ಷದಾ ಏಕಾದಶಿಯ ಆಚರಣೆಯಿಂದ ಬಂದ ಪುಣ್ಯವನ್ನು ನಿಮ್ಮ ತಂದೆಗೆ ನೀಡಿರಿ. ಆದರಿಂದ ನಿಮ್ಮ ತಂದೆ ಹಾಗೂ ಹಿರಿಯರು ನರಕದಿಂದ ಮುಕ್ತರಾಗುವರು.

ಪರ್ವತಮುನೀಶ್ವರರ ಈ ಮಾತನ್ನು ಕೇಳಿ ವೈಖಾನಸ ಮಹಾರಾಜನು ತನ್ನ ಮನೆಗೆ ಮರಳಿ ಬಂದ. ಮಾರ್ಗಶಿರ ಶುಕ್ಲಪಕ್ಷದ ಮೋಕ್ಷದಾ ಏಕಾದಶಿಯನ್ನು ಅನೂಚಾನವಾಗಿ ಆಚರಿಸಿದ. ಆ ಪುಣ್ಯವನ್ನೆಲ್ಲ ತಮ್ಮ ತಂದೆಗಾಗಿ ಸಂಪೂರ್ಣವಾಗಿ ದಾನಮಾಡಿದ. ಆ ಮೋಕ್ಷದಾ ಏಕಾದಶಿಯ ಪುಣ್ಯವನ್ನೆಲ್ಲ ವೈಖಾನಸ ದೊರೆಯು ಪಿತೃಗಳಿಗಾಗಿ ಧಾರೆ ಎರೆದ ಕೂಡಲೇ ಆಕಾಶದಿಂದ ಪುಷ್ಪವೃಷ್ಟಿ ಆಯಿತು. ಅವನ ಪಿತೃಗಳಿಗೆಲ್ಲ ನರಕದಿಂದ ಬಿಡುಗಡೆಯೂ ಆಯಿತು. ಅವರು ಆ ಪುಣ್ಯಪ್ರಭಾವದಿಂದ ಮೋಕ್ಷಮಾರ್ಗದತ್ತ ಹೆಜ್ಜೆ ಹಾಕಿದರು. ಹೋಗುವಾಗ ಅವರು ಅಂತರಿಕ್ಷದಲ್ಲಿ ವಿಮಾನದಲ್ಲಿ ಕುಳಿತು ವೈಖಾನಸ ಮಹಾರಾಜನಿಗೆ ಸ್ವಸ್ತಿ, ಸ್ವಸ್ತಿ ಎಂದು ಉಚ್ಚರಿಸಿ ಆಶೀರ್ವಾದವನ್ನು ನೀಡಿದರು.

ಆದ್ದರಿಂದ ಪುಣ್ಯಕರವಾದ ಈ ಮೋಕ್ಷದಾ ಏಕಾದಶಿ ವ್ರತವನ್ನು ಮಾಡುವವರು ನಿಶ್ಚಿತವಾಗಿಯೂ ಮೋಕ್ಷವನ್ನು ಹೊಂದುತ್ತಾರೆ. ಆದ್ದರಿಂದ ಎಲ್ಲರೂ ಈ ವ್ರತವನ್ನು ತಪ್ಪದೇ ಮಾಡಬೇಕು. ಇದೊಂದು ಚಿಂತಾಮಣಿ ಇದ್ದಂತೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಮಾರ್ಗಶೀರ್ಷ ಶುಕ್ಲಪಕ್ಷದ ಮೋಕ್ಷದಾ ಏಕಾದಶಿಯ ಮಹಿಮೆ ಎಂಬ ನಲವತ್ತನೇಯ ಅಧ್ಯಾಯ ಮುಗಿದುದು*



## ಪುಷ್ಯ ಕೃಷ್ಣಪಕ್ಷದ ಸಫಲಾ ಏಕಾದಶಿಯ ಮಹಿಮೆ | ಅಧ್ಯಾಯ - ೪೧

**ಧರ್ಮರಾಜ:-** ಪುಷ್ಯ ಕೃಷ್ಣಪಕ್ಷದಲ್ಲಿ ಯಾವ ಏಕಾದಶಿ ಬರುತ್ತದೆ? ಅದರ ಹೆಸರೇನು? ಅದನ್ನು ಮಾಡುವ ವಿಧಾನ ಯಾವುದು? ಆಗ ಯಾವ ದೇವರ ಪೂಜೆ ಮಾಡಬೇಕು? ಇದನ್ನೆಲ್ಲ ನನಗೆ ಹೇಳಿರಿ.

**ಶ್ರೀಕೃಷ್ಣ:-** ರಾಜೇಂದ್ರ, ನಿನ್ನ ಮೇಲೆ ನನಗೆ ಪ್ರೀತಿ ಅತ್ಯಧಿಕ. ನಾನು ಪಾಂಡವರ ಮೇಲೆ ಯಾವಾಗಲೂ ಸುಪ್ರಸನ್ನ. ಆದ್ದರಿಂದ ನಾನು ಅತೀ ಶೀಘ್ರವಾಗಿ ಪ್ರಸನ್ನನಾಗುವ ಸುಲಭೋಪಾಯವಾದ ಪುಷ್ಯ ಕೃಷ್ಣಪಕ್ಷ ಏಕಾದಶಿಯ ವ್ರತ ವಿಧಾನವನ್ನು ಹೇಳುತ್ತೇನೆ ಕೇಳು.

ಪುಷ್ಯ ಕೃಷ್ಣಪಕ್ಷ ಏಕಾದಶಿಗೆ ಸಫಲಾ ಏಕಾದಶಿ ಎನ್ನುತ್ತಾರೆ. ವಿಪುಲ ದಕ್ಷಿಣೆಯನ್ನಿತ್ತು ಆಚರಿಸಿದ ಅನೇಕ ಯಜ್ಞಗಳ ಅನುಷ್ಠಾನದಿಂದ ನನಗೆ ಈ ಏಕಾದಶಿ ವ್ರತಾಚರಣೆಯಿಂದ ಆಗುವಷ್ಟು ಸಂತೋಷವು ಆಗುವದಿಲ್ಲ. ಈ ಸಫಲಾ ಏಕಾದಶಿಯ ದಿನ ಹಿಂದೆ ಹೇಳಿದಂತೆ ನಾರಾಯಣ ದೇವರನ್ನು ಪೂಜೆ ಮಾಡಬೇಕು. ಹಾವುಗಳಲ್ಲಿ ಆದಿಶೇಷ ಶ್ರೇಷ್ಠ. ಪಕ್ಷಿಗಳಲ್ಲಿ ಗರುಡ ಶ್ರೇಷ್ಠ. ದೇವತೆಗಳಲ್ಲಿ ವಿಷ್ಣು ಶ್ರೇಷ್ಠ. ಎರಡು ಕಾಲಿನ ಪ್ರಾಣಿಗಳಲ್ಲಿ ಬ್ರಾಹ್ಮಣ ಶ್ರೇಷ್ಠ. ಅದರಂತೆ ವ್ರತಗಳಲ್ಲಿ ಏಕಾದಶಿಯು ಶ್ರೇಷ್ಠ. ಈ ಏಕಾದಶಿ ವ್ರತವನ್ನು ಮಾಡುವವರು ನನಗೂ ಕೂಡ ಪೂಜ್ಯರಾಗಿದ್ದಾರೆ. ಅರ್ಥಾತ್ ಅವರು ನನಗೆ ಅಷ್ಟು ಪ್ರೀತ್ಯಾಸ್ಪದರು. ಈ ಸಫಲಾ ಏಕಾದಶಿಯನ್ನು ಸಂಪೂರ್ಣ ಉಪೋಷಣೆಗೈದು ಶ್ರೀಮನ್ನಾರಾಯಣನನ್ನು ವಿಧಿಪೂರ್ವಕವಾಗಿ ಪೂಜೆ ಮಾಡಬೇಕು. ರಾತ್ರಿ ವಿಷ್ಣುಭಕ್ತರಿಂದ ಒಡಗೂಡಿ ಜಾಗರವನ್ನು ಮಾಡಬೇಕು. ದ್ವಾದಶೀ ದಿನ ದೇವರಿಗೆ ತೆಂಗಿನಕಾಯಿ, ದಾಳಿಂಬರಿ, ನೆಲ್ಲಿಕಾಯಿ, ಬೋರೆಕಾಯಿ, ಮಾವಿನಕಾಯಿ, ಎಲೆ, ಅಡಿಕೆ ಮುಂತಾದ ಬಗೆ

ಬಗೆಯ ಹಣ್ಣು ಹಂಪಲಗಳನ್ನು ನೈವೇದ್ಯ ತೋರಿಸಬೇಕು. ಅನಂತರ ಧೂಪ ದೀಪಗಳಿಂದ ದೇವರ ಪೂಜೆ ಮಾಡಬೇಕು. ಹೀಗೆ ಭಗವತ್ಪೂಜೆ ಮಾಡಿ, ಬ್ರಾಹ್ಮಣ ಭೋಜನ ಮಾಡಿಸಿ, ತಾನೂ ಪಾರಣೆ ಮಾಡಬೇಕು. ಇದರಿಂದ ಇಹ ಲೋಕದಲ್ಲಿ ಐಶ್ವರ್ಯವನ್ನೂ ಪರಲೋಕದಲ್ಲಿ ಮೋಕ್ಷವನ್ನೂ ಮಾನವನು ಹೊಂದುತ್ತಾನೆ. ಈ ವಿಷಯದಲ್ಲಿ ನಿನಗೆ ಹಿಂದಿನ ಒಂದು ದೃಷ್ಟಾಂತವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಮಾಹಿಷ್ಮತ ಎಂಬ ರಾಜನು ಚಂಪಾವತಿ ಎಂಬ ತನ್ನ ರಾಜಧಾನಿಯಲ್ಲಿ ರಾಜ್ಯಶಾಸನ ಮಾಡುತ್ತಲಿದ್ದ. ಅವನಿಗೆ ಐದು ಜನ ಗಂಡು ಮಕ್ಕಳು ಇದ್ದರು. ಅವರಲ್ಲಿ ಹಿರಿಯವನ ಹೆಸರು ಲುಂಪಕ ಎಂದು. ಅವನು ಮಹಾಪಾಪಿ. ಪರಸ್ತ್ರೀಯರ ಮೇಲೆಯೇ ಅವನಿಗೆ ಕಣ್ಣು. ಕುಡಿತದ ಚಟವೂ ಅಂಟಿಕೊಂಡಿತ್ತು. ಆ ಪಾಪಿಗೆ ಬೆಲೆವೆಣ್ಣುಗಳ ಬೆನ್ನುಹತ್ತಿ ಅವನು ತಂದೆಯ ಹಣವನ್ನು ಪೋಲು ಮಾಡಿದ. ತನಗೆ ಹಿತೋಪದೇಶ ಮಾಡಬಂದ ವಿದ್ವಾಂಸರನ್ನೆಲ್ಲ ಬಿರುನುಡಿಗಳಿಂದ ಧಿಕ್ಕರಿಸಿ ಅವಮಾನಿಸುತ್ತಿದ್ದ. ಅವನು ಯಾವಾಗಲೂ ಮಾಡುವದು ವಿಷ್ಣುಭಕ್ತರ ನಿಂದೆ ಮತ್ತು ಧರ್ಮದ ಉಪಹಾಸ. ಮಗನ ಈ ದುರ್ವ್ಯಾಪಾರ ದುಃಷ್ಕೃತ್ಯಗಳಿಂದ ಬೇಸತ್ತು ಹೋದ ಮಾಹಿಷ್ಮತ ಮಹಾರಾಜ. ಬೇರೆ ಉಪಾಯಗಾಣದೇ ರಾಜ್ಯಬಿಟ್ಟು ಹೊರಗೆ ಹಾಕಿದ ಆ ತನ್ನ ದುಷ್ಟ ಪುತ್ರನನ್ನು. ಬಂಧುಬಾಂಧವರೂ ಪರಿವಾರದವರೂ ಅವನನ್ನು ತೊರೆದುಬಿಟ್ಟರು.

ಹೀಗೆ ತನ್ನ ಪಿತ ಹಾಗೂ ಪರಿವಾರದವರಿಂದ ಪರಿತ್ಯಕ್ತನಾದ ಆ ಲುಂಪಕ ಇದರ ಸೇಡನ್ನು ತೀರಿಸಿಕೊಳ್ಳಲು ಹೊಂಚು ಹಾಕಿದ. ಕಳ್ಳರಿಂದ ಕೂಡಿಕೊಂಡು ತನ್ನ ತಂದೆಯ ರಾಜಧಾನಿಯನ್ನೆಲ್ಲ ಕೊಳ್ಳೆ ಹೊಡೆದು ಲೂಟಿ ಮಾಡಬೇಕೆಂದು ಹಂಚಿಕೆ ಹಾಕಿ ಊರು ಬಿಟ್ಟು ಹೊರಬಿದ್ದ. ಗಹನಗೊಂಡಾರಣ್ಯವನ್ನು ಸೇರಿದ. ಅನೇಕ ಪ್ರಾಣಿಗಳನ್ನು ಹಿಂಸಿಸಿದ. ಕಳವು, ಕೊಲೆ, ಜೂಜಾಟ ಕಪಟ ತಂತ್ರಗಳಲ್ಲಿ ಚೆನ್ನಾಗಿ ಪಳಗಿದ್ದ ಆ ರಾಜಕುಮಾರ. ತನ್ನ ಪೂರ್ವ ಯೋಜನೆಯಂತೆ ಅವನು ಒಂದು ದಿನ ರಾತ್ರಿಯಲ್ಲಿ ಚಂಪಾವತಿ ನಗರದಲ್ಲಿ ಗುಪ್ತವೇಷದಲ್ಲಿ ಹೊಕ್ಕು ತನ್ನ ತಂದೆಯ ಬೊಕ್ಕಸವನ್ನೇ ದೋಚಿದ. ಐಶ್ವರ್ಯವನ್ನೆಲ್ಲ ಕದ್ದುಕೊಂಡು ಓಡಿಹೋಗುತ್ತಲಿರುವಾಗ ಕಾವಲುಗಾರರ ಕೈಗೆ ಸಿಕ್ಕು ಬಿದ್ದ. ಇವನನ್ನು ದಂಡಿಸಲು ಬಂದ ಆ ಅಧಿಕಾರಿಗಳಿಗೆ ನಾನು ಮಾಹಿಷ್ಮತ ಮಹಾರಾಜನ ಜ್ಯೇಷ್ಠ ಪುತ್ರ ಎಂದು ಹೇಳಿದ್ದರಿಂದ ಅವರು ಇವನನ್ನು ದಂಡಿಸದೇ ಬಿಟ್ಟರು. ಆಗ ಆರಕ್ಷಕ ಅಧಿಕಾರಿಗಳು ಇವನು ಕದ್ದ ಹಣವನ್ನೆಲ್ಲ ಕಸಿದುಕೊಂಡು 'ಇನ್ನೊಮ್ಮೆ ನೀನು ರಾಜಧಾನಿಗೆ ಬರಕೂಡದು' ಎಂದು ಗದರಿಸಿ ಕಳಿಸಿದರು.

ಅನಂತರ ವಿಫಲ ಮನೋರಥನಾಗಿ ಆ ಲುಂಪಕ ಮತ್ತೆ ತಾನು ನೆಲಿಸಿದ ಗಹನಾರಣ್ಯಕ್ಕೆ ಬಂದ. ಅಲ್ಲಿಯ ಕಾಡಿನಲ್ಲಿ ದೊರಕಿದ ಗೆಡ್ಡೆ, ಗೆಣಸು, ಹಣ್ಣುಕಾಯಿಗಳನ್ನು ತಿಂದು ಅಲ್ಲಿಯ ಒಂದು ಅರಳೆಯ ಗಿಡದ ಕೆಳಗೆ ಒಂದು ಆಶ್ರಮ ಕಟ್ಟಿಕೊಂಡು ವಾಸಮಾಡಿದ. ಅನೇಕ ವರ್ಷಗಳವರೆಗೆ ಆ ಅಶ್ವತ್ಥ ವೃಕ್ಷದಡಿಯಲ್ಲಿ ನೆಲೆಸಿ ಜರಾಜೀರ್ಣನಾದ.

ಒಂದು ದಿನ ಪುಷ್ಯ ಕೃಷ್ಣಪಕ್ಷ ದಶಮಿ ತಿಥಿ ಬಂದಿತು. ಅಂದು ಕೇವಲ ಹಣ್ಣು ಹಂಪಲ ತಿಂದು ಆ ಗಿಡದಡಿಯಲ್ಲಿಯೇ ತಂಗಿದ್ದ. ಅವನಿಗೆ ಹೊದಿಯಲು ಬೆಚ್ಚಗಿನ ಬಟ್ಟೆ ಇರಲಿಲ್ಲ. ಆ ರಾತ್ರಿ ಚಳಿಯೋ ವಿಪರೀತ. ರಾತ್ರಿ ತಣ್ಣಗಿನ ಗಾಳಿಯು ಅವನ ಮೈಯನ್ನು

ಕೊರೆಯುತ್ತಿತ್ತು. ಆದರಿಂದ ಅಂದು ರಾತ್ರಿ ಅವನಿಗೆ ಸರಿಯಾಗಿ ನಿದ್ದೆ ಬರಲಿಲ್ಲ ಆ ಮರದ ಬುಡದಲ್ಲಿಯೇ ಚಳಿಯಿಂದ ನಡುಗುತ್ತ ಇಡೀ ರಾತ್ರಿಯನ್ನೆಲ್ಲ ನಿದ್ದೆ ಇಲ್ಲದೇ ಕಳೆದ. ಹೀಗೆ ಬೆಳತನಕ ಚಳಿಯಿಂದ ನಡುಗಿ ಅವನು ಮರವುಗೆಟ್ಟು ಅರಿವುಗೆಟ್ಟು ಮರದ ಅಡಿಯಲ್ಲಿಯೇ ಬಿದ್ದುಕೊಂಡ. ಏಕಾದಶಿಯ ದಿನ ಬೆಳಗಾದರೂ ಅವನಿಗೆ ಎಚ್ಚರ ಬರಲಿಲ್ಲ. ಮಧ್ಯಾಹ್ನದ ಅನಂತರ ಅವನಲ್ಲಿ ಎಚ್ಚರ ಮರಕಳಿಸಿತು. ಮೆಲ್ಲನೇ ಅವನು ಕಣ್ಣು ತೆರೆದ. ಅವನು ಆಹಾರಕ್ಕಾಗಿ ಹೊರಡಲು ಎದ್ದುನಿಂತ. ಮರುಚಣದಲ್ಲಿ ಶಕ್ತಿ ಇಲ್ಲದೇ ಕುಸಿದು ಬಿದ್ದ. ಹಸಿವೆ ಹೊಟ್ಟೆಯಲ್ಲಿ ತಾಳಹಾಕುತ್ತಿತ್ತು. ಕುಸಿದು ಬಿದ್ದರೂ ಪ್ರಯತ್ನದಿಂದ ಮತ್ತೆ ಎದ್ದು ಆ ಕಾಡಿನ ಸೀಳು ದಾರಿಯಲ್ಲಿ ಹೆಜ್ಜೆ ಹಾಕಿದ. ಕುಂಟುತ್ತ ಎಡವುತ್ತ ಮುಗ್ಗುರಿಸುತ್ತಲೇ ಆ ವನದಲ್ಲಿ ಮುಂದೆ ಸಾಗಿದ. ಯಾವ ಪ್ರಾಣಿಯನ್ನೂ ಕೊಂದು ತಿನ್ನುವ ಶಕ್ತಿ ಅವನಲ್ಲಿ ಇರಲಿಲ್ಲ. ಸೂರ್ಯನು ಅಸ್ತ ಆಗುವವರೆಗೆ ತಿರುಗಾಡಿ ಮರದಡಿಯಲ್ಲಿ ಬಿದ್ದ ಹಣ್ಣುಕಾಯಿಗಳನ್ನು ಆಯ್ದುಕೊಂಡ ಅವನಿಗೆ ದುಃಖ ಒತ್ತರಿಸಿ ಬಂತು. ತಾನು ಆಯ್ದ ಹಣ್ಣುಗಳನ್ನೆಲ್ಲ ಆ ಮರದ ಬುಡದಲ್ಲಿ ಇಟ್ಟು - ''ಫಲೈರೇಭಿಃ ಶ್ರೀಪತಿಸ್ತುಷ್ಯತಾಂ ಹರಿಃ'' ಈ ಹಣ್ಣುಗಳನ್ನೆಲ್ಲ ನಾನು ಶ್ರೀಹರಿಗೆ ನಿವೇದಿಸುತ್ತೇನೆ. ಈ ನನ್ನ ಫಲ ನೈವೇದ್ಯದಿಂದ ಲಕ್ಷ್ಮೀಪತಿಯು ಪ್ರೀತನಾಗಲಿ ಎಂದು ಕೈ ಮುಗಿದು ಪುನೀತನಾದ. ಹಸಿವೆಯ ಕಸಿವಿಸಿಯಿಂದ ಆ ಇರುಳೆಲ್ಲ ಅವನಿಗೆ ನಿದ್ದೆಯೇ ಬರಲಿಲ್ಲ. ''ಈ ನನ್ನ ಜಾಗರದಿಂದ ಶ್ರೀಹರಿಯು ಪ್ರೀತನಾಗಲಿ'' ಎಂದು ಮತ್ತೊಮ್ಮೆ ಕೈ ಮುಗಿದ. ಮರುದಿನ ದ್ವಾದಶೀ ಸ್ನಾನ ಮಾಡಿ ಹರಿಗೆ ನಿವೇದಿತವಾದ ಆ ಹಣ್ಣುಗಳನ್ನು ಭಕ್ಷಣೆ ಮಾಡಿದ. ಈ ನನ್ನ ಫಲಪೂಜೆಯಿಂದ ಶ್ರೀಹರಿಯು ಪ್ರೀತನಾಗಲಿ ಎಂದು ಬೇಡಿಕೊಂಡ. ಅವನ ಆ ಫಲಪೂಜೆ ಸಫಲವಾಗಿತ್ತು. ಆ ಪುಣ್ಯ ಪ್ರಭಾವದಿಂದ ಆ ಲುಂಪಕ ರಾಜಕುಮಾರನ ಜೀವನ ಪಾವನವಾಯಿತು. ಸೂರ್ಯೋದಯ ಕಾಲದಲ್ಲಿ ಅವನು ತನ್ನ ಫಲಪಾರಣೆಯನ್ನು ಮುಗಿಸುವುದರೊಳಗಾಗಿ ಅಶರೀರ ವಾಣಿ ಕೇಳಿ ಬಂತು.- ''ಪುತ್ರನೇ, ನೀನು ಈ ಸಫಲಾ ಏಕಾದಶಿಯ ಪ್ರಸಾದದಿಂದ ರಾಜ್ಯವನ್ನು ಹೊಂದುವೆ.''

ಹೀಗೆ ಆಕಾಶವಾಣಿ ನುಡಿದ ಕೂಡಲೇ ಆ ರಾಜನಿಗೆ ದಿವ್ಯ ರೂಪ ಬಂದಿತು. ಮನಸ್ಸಿನಲ್ಲಿ ವಿಷ್ಣು ಭಕ್ತಿ ಧೃಡವಾಗಿ ಬೇರೂರಿತು. ವಿಶಾಲವಾದ ಸಾಮ್ರಾಜ್ಯವು ಅವನ ಅಧೀನದಲ್ಲಿ ಬಂದಿತು. ಅವನು ಐವತ್ತು ವರ್ಷ ವೈಭವದಿಂದ ಆಳಿದ ಸಮಸ್ತ ಭೂಮಂಡಲವನ್ನು, ಗಂಡನ ಒಲವನ್ನು ಅರಿತು ನಡೆಯುವ, ಸಿಹಿ ಮಾತುಗಳನ್ನೇ ನುಡಿಯುವ ಮಡದಿ ಅವನ ಕೈ ಹಿಡಿದಳು. ಮಕ್ಕಳು ಶ್ರೀಕೃಷ್ಣನ ದಯೆಯಿಂದ ವಿನೀತರಾಗಿ ವಿಧೇಯರಾಗಿ ತಂದೆಯ ಇಚ್ಛಾನುವರ್ತಿಗಳಾಗಿ ಇದ್ದರು. ಅವರು ಪ್ರಬುದ್ಧರಾದ ಬಳಿಕ ರಾಜ್ಯಭಾರವನ್ನೆಲ್ಲ ಅವರಿಗೆ ಒಪ್ಪಿಸಿ ಭಾರ್ಯೆಯೊಂದಿಗೆ ಅವನು ಅಡವಿಗೆ ಹೋಗಿ ತಪಸ್ಸನ್ನು ಮಾಡಿ ಶ್ರೀಕೃಷ್ಣನ ಸನ್ನಿಧಾನವನ್ನು ಸೇರಿದ. ಈ ಸಫಲಾ ಏಕಾದಶಿ ವ್ರತವನ್ನು ಆಚರಿಸಿದ ಮಾನವರು ಧನ್ಯರು ಮತ್ತು ಮಾನ್ಯರು, ಸಫಲಾ ಏಕಾದಶಿಯ ವ್ರತದ ಅನುಷ್ಠಾನದಿಂದ ಮಾನವರ ಜನ್ಮ ಸಫಲವಾಗುವದರಲ್ಲಿ ಸಂದೇಹವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಪುಷ್ಯ ಕೃಷ್ಣಪಕ್ಷದ ಸಫಲಾ ಏಕಾದಶಿಯ ಮಹಿಮೆ ಎಂಬ ನಲವತ್ತೊಂದನೇಯ ಅಧ್ಯಾಯ ಮುಗಿದುದು*

ಪುಷ್ಯ ಶುಕ್ಲಪಕ್ಷದ ಪುತ್ರದಾ ಏಕಾದಶಿಯ ಮಹಿಮೆ | ಅಧ್ಯಾಯ - ೪೨

**ಧರ್ಮರಾಜ:-** ಕೃಷ್ಣ, ನೀನು ನನ್ನ ಮೇಲೆ ಅನುಗ್ರಹಗೈದು ಪುಷ್ಯ ಕೃಷ್ಣಪಕ್ಷದ ಸಫಲಾ ಎಂಬ ಏಕಾದಶಿಯ ಮಹಿಮೆಯನ್ನು ನಿರೂಪಿಸಿದೆ. ಈಗ ಶುಕ್ಲಪಕ್ಷದ ಏಕಾದಶಿಯ ಪ್ರಭಾವವನ್ನು ನಿರೂಪಿಸು. ಈ ಪುಷ್ಯಶುದ್ಧ ಏಕಾದಶಿಗೆ ಹೆಸರು ಏನು? ಇದನ್ನು ಆಚರಿಸುವ ವಿಧಿ ಯಾವುದು? ಯಾವ ದೇವರ ಪೂಜೆ ನಡೆಯಬೇಕು ಆ ದಿನದಂದು ಈ ಏಕಾದಶಿ ಅನುಷ್ಠಾನದಿಂದ ಆ ದೇವ ದೇವ ದಯೆದೋರಿದ್ದು ಯಾರಿಗೆ? ಇದೆಲ್ಲವನ್ನೂ ಪುರುಷೋತ್ತಮನಾದ ನೀನು ನನಗೆ ಹೇಳು.

**ಕೃಷ್ಣ:-** ಧರ್ಮರಾಜ, ಈ ಪುಷ್ಯಶುಕ್ಲ ಏಕಾದಶಿಗೆ ಪುತ್ರದಾ ಎನ್ನುವರು. ಸರ್ವಪಾಪ ಪರಿಹಾರಕ ಈ ಏಕಾದಶಿ ನಾರಾಯಣ ದೇವರೇ ಇದರ ಅಧಿದೇವ. ಇದು ನಿಜವಾಗಿಯೂ ಕಾಮಪೂರಕ. ಸಿದ್ಧಿದಾಯಕ. ಇದಕ್ಕಿಂತ ಶ್ರೇಷ್ಠವಾದ ವ್ರತವಿಲ್ಲ. ಈ ವ್ರತವನ್ನು ಪಾಲಿಸಿದ ಆಸ್ತಿಕರನ್ನು ಸ್ವಯಂ ಶ್ರೀಹರಿಯು ವಿದ್ಯಾವಂತರನ್ನಾಗಿಯೂ ಯಶೋವಂತರನ್ನಾಗಿಯೂ ಮಾಡುತ್ತಾನೆ.

ಹಿಂದೆ ಭದ್ರಾವತಿ ಎಂಬ ಪಟ್ಟಣದಲ್ಲಿ ಸುಕೇತುಮಾನ್ ಎಂಬ ರಾಜನು ಇದ್ದ. ಅವನ ಮಡದಿಯ ಹೆಸರು ಚಂಪಕಾ. ಅವಳೇ ಪಟ್ಟದರಸಿ. ಆ ರಾಜದಂಪತಿಗಳಿಬ್ಬರೂ ಅನ್ಯೋನ್ಯ ಪ್ರೀತಿಯಿಂದಲೇ ಇದ್ದರು. ಆದರೆ ಬಹುಕಾಲದವರೆಗೆ ಅವರಿಗೆ ಸಂತಾನವೇ ಆಗಲಿಲ್ಲ. ಆದರಿಂದ ರಾಜರಾಣಿಯರಿಬ್ಬರಿಗೂ ಅಂತರಂಗದಲ್ಲಿ ಕೊರಗು. ಮನಸ್ಸಿನಲ್ಲಿ ಮರಗು. ''ಏನು ಮಾಡಲಿ? ಎಲ್ಲಿಗೆ ಹೋಗಲಿ? ಮಕ್ಕಳಿಲ್ಲದ ನನಗೆ ಈ ರಾಜ್ಯ ಅಧಿಕಾರ, ವೈಭವ, ಗೌರವ, ಯಾವುದರಿಂದಲೂ ಸುಖವಿಲ್ಲ. ಹಗಲಿರುಳೂ ದುಃಖ ತಪ್ಪಿಲ್ಲ. ಕಣ್ಣೀರಿನ ಕಡಲಲ್ಲಿ ಕುದಿಯುವುದೊಂದೇ ನಮ್ಮಿಬ್ಬರ ಹಣೆಬರಹವಾಗಿದೆ.

ಇದರಂತೆಯೇ ಪಿತೃಗಳೂ ಕೂಡ ಅವನು ಕಂಬನಿದುಂಬಿ ನೀಡಿದ ಜಲಾಂಜಲಿಯನ್ನು ದುಃಖದಿಂದಲೇ ಸ್ವೀಕರಿಸುತ್ತಿದ್ದರು. ಈ ರಾಜನ ಅನಂತರ ನಮಗೆ ಮುಂದೆ ನೀರು ಕೊಡುವವರು. ಪಿಂಡ ಇಡುವವರು ಯಾರೂ ಇಲ್ಲದಂತಾಯಿತಲ್ಲ ಎಂಬುದೇ ಅವರ ಚಿಂತೆಗೆ ಕಾರಣ.

**ಅಪುತ್ರಸ್ಯ ಗೃಹಂ ಶೂನ್ಯಂ ಹೃದಯಂ ದುಃಖಿತಂ ಸದಾ ।**
**ಪಿತೃದೇವ ಮನುಷ್ಯಾಣಾಂ ನಾನೃಣತ್ವಂ ಸುತಂ ವಿನಾ ॥**

''ಮಕ್ಕಳಿಲ್ಲದವನ ಮನೆ ಶೂನ್ಯ. ಹೃದಯವು ಯಾವಾಗಲೂ ದುಃಖಿತ. ಸಂತಾನ ಇಲ್ಲದಿದ್ದರೆ ಪಿತೃಋಣ ತೀರಲಾರದು. ದೇವಋಣ ಸಲ್ಲಲಾರದು. ಮನುಷ್ಯಋಣ ಸಲ್ಲಲಾರದು.

**ಪುಣ್ಯಂ ವಿನಾ ನಚ ಪ್ರಾಪ್ತಿಃ ವಿಷ್ಣು ಭಕ್ತಿಂ ವಿನಾ ನೃಪ ।**
**ಪುತ್ರಾಶ್ಚ ಸಂಪದೋ ವಾಪಿ ನಿಶ್ಚಯಾದಿತಿ ಮೇ ಮತಿಃ ॥**

ವಿಷ್ಣುವಿನಲ್ಲಿ ಭಕ್ತಿ ಮಾಡಿದ ಪುಣ್ಯವಿಲ್ಲದೇ ಮಕ್ಕಳು ಹುಟ್ಟಲಾರವು. ಸಂಪತ್ತು

ದೊರೆಯಲಾರವು. ಇದೇ ನನ್ನ ನಿಶ್ಚಿತವಾದ ಅಭಿಪ್ರಾಯ.'' ಹೀಗೆಲ್ಲ ವಿಚಾರಿಸಿದ ಆ ಅರಸನ ಮನಸ್ಸಿನಲ್ಲಿ ಬದುಕಿನ ಬಗೆಗೆ ಜಿಗುಪ್ಸೆ ಹುಟ್ಟಿತು. ಬಾಳಿನಲ್ಲಿಯೇ ಬೇಸರ ಬಂದಿತು. ನಿಸ್ಸಂತಾನವಾದ ತನ್ನ ಜೀವನವನ್ನೇ ಕೊನೆಗಾಣಿಸಿಬಿಡಬೇಕೆಂದು ಅವನು ನಿರ್ಧರಿಸಿದ. ಆದರೆ ಆತ್ಮಹತ್ಯೆ ಮಹಾಪಾಪ ಎಂಬ ಶಾಸ್ತ್ರವಚನ ಅವನ ನೆನಪಿಗೆ ಬಂದಿತು. ಆದ್ದರಿಂದ ಆ ಆತ್ಮತ್ಯಾಗದ ವಿಚಾರವನ್ನು ತೊರೆದು ಅವನು ಮನೆಬಿಟ್ಟು ಹೊರಬಿದ್ದ. ಮಡದಿ ಮಕ್ಕಳನ್ನು, ರಾಜ್ಯಾಧಿಕಾರವನ್ನು ತೊರೆದ. ಕುದುರೆಯನ್ನು ಏರಿಕೊಂಡು ರಾಜಧಾನಿಯಿಂದ ಹೊರಹೊರಟ. ಗಹನಗೊಂಡಾರಣ್ಯದಲ್ಲಿ ಹೊಕ್ಕ ಗುಟ್ಟಾಗಿ ಮಂತ್ರಿ ಪುರೋಹಿತ ಪರಿವಾರ ವರ್ಗದವರಾರಿಗೂ ತಿಳಿಯಲಿಲ್ಲ ರಾಜ ಎಲ್ಲಿ ಎಂಬುದು. ರಹಸ್ಯವಾಗಿ ವನವೀಥಿಯಲ್ಲಿ ಪ್ರವೇಶಿಸಿ ವಿಪಿನ ಗರ್ಭದಲ್ಲಿ ಬೆಳೆದ ಹೆಮ್ಮರಗಳನ್ನು ನೋಡುತ್ತ ನಡೆದ ಆ ಮಹಾರಾಜ.

ಆ ಅಡವಿಯ ತುಂಬ ಕಾಡಮೃಗಗಳು. ಬೆಳೆದು ಗಗನಕ್ಕೆ ಹತ್ತಿರ ಹತ್ತಿರವಾಗಿ ತಲೆ ಎತ್ತಿ ನಿಂತ ಅರಳೆ, ಆಲ, ಬಳುವಲ, ಉತ್ತತ್ತಿ, ಬಕುಲ, ಸಪ್ತಪರ್ಣ, ತಿಲಕ, ಶಾಲ, ತಾಲ, ತಮಾಲ, ಸರಳ, ಅಶೋಕ ಮುಂತಾದ ಹೆಮ್ಮರಗಳ ಸಾಲು, ಎಲೆಬಳ್ಳಿ, ಕುಡಿ, ಮಿಡಿ, ಟೊಂಗೆ, ಬಿಳಲು ಮುಂತಾದವುಗಳಿಂದ ನಿಬಿಡವಾಗಿ ದಟ್ಟವಾಗಿ ಹೆಣೆದುಕೊಂಡಿದ್ದವು. ಇಂಥ ಬೆಂಗಾಡಿನಲ್ಲಿ ಅನೇಕ ಫೂತ್ಕರಿಸುವ ಹಾವುಗಳು, ಘೀಳಿಡುವ ಆನೆಗಳು, ಹೂಂಕರಿಸುವ ಸಿಂಹಗಳು, ಗುಡುಗುವ ಹುಲಿಗಳು, ಆ ಶ್ವಾಪದಗಳ ನಾದ ವನಾಂತರಾಳದ ಮೌನವನ್ನು ಸೀಳಿಕೊಂಡು ಪ್ರತಿಧ್ವನಿತವಾಗಿ ಮೊಳಗುತ್ತಿತ್ತು.

ಹೀಗೆ ಭೀಕರವಾದ ವನಪ್ರಾಂತದಲ್ಲಿ ತಿರುಗಿ, ತಿರುಗಿ ಮಹಾರಾಜನ ಕಾಲು ಸೋತವು. ದೇಹ ಬಳಲಿತು. ಹೊಟ್ಟೆ ಹಸಿದಿತು. ನೀರಡಿಕೆಯಿಂದ ನಾಲಿಗೆ ಸೇದತೊಡಗಿತು. ಆಗ ಆ ಅರಸನ ಮಿದುಳಿನ ಬಳ್ಳಿಯಲ್ಲಿ ಚಿಂತೆಯ ಚಕ್ರ ತಿರುಗತೊಡಗಿತು. - ''ನಾನು ಹಿಂದೆ ಯಾವ ದುಷ್ಕರ್ಮ ಮಾಡಿರಬಹುದು? ನನಗೇಕೆ ಈಗ ಇಂಥ ದಾರುಣ ದುಃಖವು ಒದಗಿ ಬಂದಿದೆ ? ನಾನು ಈ ಜನ್ಮದಲ್ಲಿ ಯಜ್ಞಯಾಗಗಳನ್ನು ಮಾಡಿದ್ದೇನೆ. ಎಲ್ಲ ವಿಧವಾದ ಪೂಜೆಗಳನ್ನು ದೇವರಿಗೆ ಸಲ್ಲಿಸಿದ್ದೇನೆ. ವೇದಶಾಸ್ತ್ರ ಪಾರಂಗತರಾದ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ ದಕ್ಷಿಣೆಗಳನ್ನು ಇತ್ತು ಸಂತೋಷಪಡಿಸಿದ್ದೇನೆ. ಮೃಷ್ಟಾನ್ನ ಭೋಜನದಿಂದ ಅತಿಥಿಗಳನ್ನು, ವಿದ್ವಾಂಸರನ್ನು, ಬಂಧುಬಾಂಧವರನ್ನು ತೃಪ್ತಿಗೊಳಿಸಿದ್ದೇನೆ. ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿದ್ದೇನೆ. ಪ್ರೀತಿಯಿಂದ ಲಾಲಿಸಿದ್ದೇನೆ. ಇಷ್ಟಾದರೂ ನನಗೇಕೆ ಮಕ್ಕಳಾಗಲಿಲ್ಲ? ಇಂಥ ಘೋರ ದುಃಖವನ್ನು ಕಾಣುವ ಪ್ರಸಂಗ ಏಕೆ ಬಂದಿತು?'' ಹೀಗೆ ಚಿಂತಿಸುತ್ತ ಆ ರಾಜರ್ಷಿಯು ಆ ಕಗ್ಗಾಡಿನಲ್ಲಿ ನುಗ್ಗಿದಾಗ ಒಂದು ಸರ್ವಶ್ರೇಷ್ಠವಾದ ತಿಳಿನೀರಿನ ಕೊಳ, ಅವನ ಕಣ್ಣಿಗೆ ಬಿದ್ದಿತು. ಆ ಹೊಕ್ಕರಣೆಯ ತುಂಬಾ ಸುಂದರವಾದ ಹೊಂದಾವರೆಗಳು, ತಿಳಿನೀರಿನ ತಳದಲ್ಲಿ ಚಪಲ ಚಂಚಲ ಗತಿಯಿಂದ ಸಂಚರಿಸುವ ಮೀನುಗಳು, ಸುತ್ತಲೂ ಹಂಸ, ಕಾರಂಡವ, ಚಕ್ರವಾಕ ಮುಂತಾದ ಹಕ್ಕಿಗಳು. ಆ ಸರೋವರದ ದಂಡೆಯ ಮೇಲೆ ಅನೇಕಾನೇಕ ಋಷ್ಯಾಶ್ರಮಗಳು.

ಅಲ್ಲಿಗೆ ಬಂದಕೂಡಲೇ ಮಹಾರಾಜನ ಬಲಗಣ್ಣು ಅದುರತೊಡಗಿತು. ಅದರ ದಂಡೆಯ ಮೇಲೆ ಅನೇಕ ಋಷಿಗಳು ವೇದಮಂತ್ರಗಳನ್ನು ಜಪಿಸುತ್ತ ಕುಳಿತುಕೊಂಡಿದ್ದರು. ಅವರನ್ನು ಕಂಡಕೂಡಲೇ ಆ ದೊರೆಗೆ ಹೃದಯದಲ್ಲಿ ಹಿಡಿಸಲಾರದ

ಹಿಗ್ಗು. ಕೂಡಲೇ ಅವನು ಕುದುರೆ ಬಿಟ್ಟು ಕೆಳಗೆ ನಿಂತ. ಮುನಿಗಳಿಗೆಲ್ಲ ಕೈ ಜೋಡಿಸಿದ. ಬೇರೆ ಬೇರೆ ಆಗಿಯೇ ಪ್ರತಿಯೊಬ್ಬ ಋಷಿಗೂ ಶಿರಬಾಗಿ ವಂದಿಸಿದ. ಮತ್ತೆ ಮತ್ತೆ ದಂಡಪ್ರಾಣಾಮ ಹಾಕಿದ. ಮತ್ತು ಅವರಿಗೆ ಕೃತಾಂಜಲಿ ಪುಟನಾಗಿ ಕೇಳಿಕೊಂಡ.

**ರಾಜ :-** ಮಹನೀಯರೇ, ಪೂಜನೀಯರರಾದ ತಾವು ಯಾರು? ತಮ್ಮ ಹೆಸರೇನು ? ನೀವೆಲ್ಲರೂ ಇಲ್ಲಿ ಏಕೆ ಕಲೆತು ಮಿಲಿತರಾಗಿದ್ದೀರಿ? ನಿಜ ಸಂಗತಿ ಏನು? ನನ್ನ ಎದುರು ಹೇಳಿರಿ.

**ಮುನಿಗಳು:-** ರಾಜನೇ, ನಾವು ವಿಶ್ವೇದೇವತೆಗಳು. ಸ್ವರ್ಗಲೋಕದ ಸುರರು. ಮಾಘಮಾಸವು ಸಮೀಪದಲ್ಲಿ ಬಂದಿದೆ. ಇಂದಿನಿಂದ ಐದನೆಯ ದಿನವೇ ಮಾಘಮಾಸವು ಆರಂಭವಾಗಲಿರುವದು. ಅದಕ್ಕಾಗಿ ಮಾಘಸ್ನಾನ ಮಾಡಲೆಂದೇ ನಾವು ಇಲ್ಲಿಗೆ ಬಂದಿದ್ದೇವೆ. ಇಂದು ಏಕಾದಶಿ. ಇದಕ್ಕೆ ಪುತ್ರದಾ ಏಕಾದಶಿ ಎನ್ನುವರು. ಈ ಏಕಾದಶಿ ಉಪವಾಸ ಮಾಡಿದವರಿಗೆ ಮಕ್ಕಳು ಹುಟ್ಟುವರು. ಆದ್ದರಿಂದಲೇ ಇದಕ್ಕೆ ಪುತ್ರದಾ ಎಂಬ ಸಾರ್ಥಕವಾದ ಹೆಸರು.

**ರಾಜ:-** ಪೂಜ್ಯರೇ, ನನಗೆ ಮಕ್ಕಳಿಲ್ಲ. ಈ ವ್ರತವನ್ನು ಆಚರಿಸುವದರಿಂದ ಮಕ್ಕಳು ನಿಶ್ಚಿತವಾಗಿ ಆಗುವಂತಿದ್ದರೆ ನಾನು ಇದನ್ನು ಸಂತೋಷವಾಗಿ ಆಚರಿಸುತ್ತೇನೆ. ತಾವು ನನ್ನ ಮೇಲೆ ಪ್ರಸನ್ನರಾಗಿದ್ದರೆ ನನಗೆ ಸಂತಾನವಾಗುವಂತೆ ಆಶೀರ್ವಾದ ಮಾಡಿರಿ.

**ಮುನಿಗಳು:-** ಇಂದೇ ಪುತ್ರದಾ ಏಕಾದಶಿ ಇರುತ್ತದೆ. ಇಂದು ಉಪವಾಸ ಮಾಡಿ ಕೇಶವನ ಪೂಜೆಯನ್ನು ಮಾಡು. ಈ ಏಕಾದಶಿಯ ಆಚರಣೆಯಿಂದ ನಿನಗೂ ಕೂಡ ನಿಶ್ಚಿತವಾಗಿ ಸಂತಾನವು ಆಗುವದು.

ಋಷಿಗಳ ವಚನದಂತೆ ಮಹಾರಾಜನು ಪುತ್ರದಾ ಏಕಾದಶಿ ವ್ರತವನ್ನು ವಿಧ್ಯುಕ್ತವಾಗಿ ಭಕ್ತಿಯಿಂದ ಆಚರಿಸಿದ. ಏಕಾದಶಿ ಉಪವಾಸ, ರಾತ್ರಿ ಜಾಗರ, ದ್ವಾದಶೀ ಹರಿಪೂಜೆ ಮತ್ತು ಸಕಾಲದಲ್ಲಿ ಪಾರಣೆ ಮುಂತಾದ ಎಲ್ಲ ವಿಧಿವಿಧಾನಪೂರ್ವಕವಾಗಿ ಆ ಹರಿವಾಸರವನ್ನು ಪಾಲಿಸಿದ. ಅನಂತರ ಆ ಎಲ್ಲ ಋಷಿಗಳಿಗೂ ನಮಸ್ಕಾರ ಮಾಡಿ ತನ್ನ ರಾಜಧಾನಿಗೆ ಮರಳಿದ. ಕೆಲವು ದಿನಗಳ ಬಳಿಕ ಆ ಏಕಾದಶಿ ವ್ರತದ ಅನುಷ್ಠಾನ ಪ್ರಭಾವದಿಂದ ಅವನ ಪಟ್ಟದರಸಿಯು ಗರ್ಭಿಣಿ ಆದಳು. ಒಂಭತ್ತು ತಿಂಗಳು ತುಂಬಿದ ಬಳಿಕ ಒಳ್ಳೇ ತೇಜಸ್ವಿಯಾದ ಗಂಡುಮಗುವನ್ನು ಹೆತ್ತಳು. ಆ ಮಗನು ಆರೋಗ್ಯವಂತನಾಗಿ ಭಾಗ್ಯವಂತನಾಗಿ ಬೆಳೆದು ತಂದೆ ತಾಯಿಗಳನ್ನು ಸಂತೋಷಪಡಿಸಿದ. ಸಾಮ್ರಾಜ್ಯದ ಹೊಣೆಗಾರಿಕೆಯ ಹೊರೆಯನ್ನು ಹೊತ್ತು ತಂದೆಯ ಭಾರವನ್ನು ಕಡಿಮೆ ಮಾಡಿದ. ಅಂಥ ಸತ್ಪುತ್ರನನ್ನು ಪಡೆದು ಆ ಸುಕೇತುಮಾನ್ ಮಹಾರಾಜ ಧನ್ಯನಾದ.

ಧರ್ಮರಾಜ, ಆದುದರಿಂದ ಎಲ್ಲ ಮಾನವರೂ ಪುತ್ರದಾ ಏಕಾದಶಿ ವ್ರತವನ್ನು ತಪ್ಪದೇ ಆಚರಿಸಬೇಕು. ಜನರ ಹಿತಕ್ಕಾಗಿ ನಾನು ಈ ಪುತ್ರದಾ ಏಕಾದಶಿಯ ಮಹಿಮೆಯನ್ನು ನಿನಗಾಗಿ ಹೇಳಿದ್ದೇನೆ. ಇದನ್ನು ಶ್ರವಣ ಪಠಣ ಮಾಡಿದವರು ಸತ್ಸಂತಾನವನ್ನು ಹೊಂದಿ ಮುಂದೆ ಸ್ವರ್ಗಲೋಕವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಪುಷ್ಯ ಶುಕ್ಲಪಕ್ಷದ ಪುತ್ರದಾ ಏಕಾದಶಿಯ ಮಹಿಮೆ ಎಂಬ ನಲವತ್ತೆರಡನೇಯ ಅಧ್ಯಾಯ ಮುಗಿದುದು*

## ಮಾಘ ಕೃಷ್ಣಪಕ್ಷದ ಷಟ್‌ತಿಲಾ ಏಕಾದಶಿಯ ಮಾಹಾತ್ಮ್ಯ



**ಧರ್ಮರಾಜ:-** ಜಗತ್ಪತಿಯಾದ ಕೃಷ್ಣ, ಮಾಘ ಕೃಷ್ಣಪಕ್ಷದಲ್ಲಿ ಯಾವ ಏಕಾದಶಿ ಬರುತ್ತದೆ? ಅದರ ವಿಧಿ ಏನು? ಅದರ ಹೆಸರು ಏನು? ಎಲ್ಲವನ್ನೂ ಬಿತ್ತರಿಸು.

**ಶ್ರೀಕೃಷ್ಣ:-** ರಾಜಶ್ರೇಷ್ಠ, ಮಾಘ ಕೃಷ್ಣಪಕ್ಷದ ಏಕಾದಶಿಗೆ ಷಟ್‌ತಿಲಾ ಏಕಾದಶಿ ಎನ್ನುತ್ತಾರೆ. ಹಿಂದೆ ಮುನಿಶ್ರೇಷ್ಠರಾದ ಪುಲಸ್ತ್ಯರು ದಾಲ್ಭ್ಯ ಎಂಬ ಋಷಿಗೆ ಈ ಷಟ್‌ತಿಲಾ ಏಕಾದಶಿಯ ಮಾಹಾತ್ಮ್ಯವನ್ನು ಹೇಳಿದರು. ಅದನ್ನೇ ನಾನು ಈಗ ನಿನಗೆ ಹೇಳುತ್ತೇನೆ ಕೇಳು.

**ದಾಲ್ಭ್ಯ :-** ಮರ್ತ್ಯಲೋಕಕ್ಕೆ ಬಂದ ಮಾನವರು ದುರಾಶೆ ಹಾಗೂ ದುರ್ಬುದ್ಧಿಗಳಿಂದ ಪ್ರೇರಿತರಾಗಿ ವಿದ್ವಾಂಸರನ್ನು ಕೊಲ್ಲುತ್ತಾರೆ. ಹಸುಗಳನ್ನು ಹಿಂಸಿಸುತ್ತಾರೆ. ಹೆರವರ ಹಣವನ್ನು ಕದಿಯುತ್ತಾರೆ. ಇನ್ನೂ ಬಗೆಬಗೆಯ ಕೆಟ್ಟ ಕೆಲಸಗಳನ್ನು ಮಾಡುತ್ತಾರೆ. ಆದುದರಿಂದ ಅವರಿಗೆ ಘೋರಪಾಪ ತಟ್ಟುತ್ತದೆ. ಇಷ್ಟೆಲ್ಲ ಪಾಪ ಮಾಡಿದರೂ ಮನುಷ್ಯರಿಗೆ ನರಕ ಆಗಬಾರದು ಎಂದು ನನ್ನ ಇಚ್ಛೆ. ಯಾರೇ ಇರಲಿ, ಎಂಥ ಪಾಪವನ್ನೇ ಮಾಡಲಿ ಅವರಿಗೆ ನರಕ ಆಗಬಾರದು. ಅಂಥ ಉಪಾಯವನ್ನು ಯಾವುದಾದರೂ ಇದ್ದರೆ ನನಗೆ ಹೇಳಿರಿ. ಯಾವುದಾದರೂ ಅಲ್ಪ ಸ್ವಲ್ಪ ದಾನದಿಂದ ಅಥವಾ ಪುಣ್ಯ ಕರ್ಮದಿಂದ ಈ ಘೋರತರವಾದ ಪಾಪಗಳೆಲ್ಲವೂ ಪರಿಹಾರವಾಗುವಂತಿದ್ದರೆ ಅದನ್ನು ನನಗೆ ಹೇಳಿರಿ.

**ಪುಲಸ್ತ್ಯ:-** ಮಹಾನುಭಾವನಾದ ದಾಲ್ಭ್ಯ, ನೀನು ಬಹಳ ಒಳ್ಳೇ ಪ್ರಶ್ನೆ ಮಾಡಿದೆ. ನೀನು ಕೇಳಿದ ಈ ಗೌಪ್ಯ ವಿಷಯವನ್ನು ಈ ವರೆಗೆ ಹರಿಹರ ಬ್ರಹ್ಮಾದಿ ದೇವತೆಗಳೂ ಗುಟ್ಟಾಗಿಯೇ ಇಟ್ಟಿದ್ದಾರೆ. ಅದನ್ನು ನಾನು ನಿನಗಾಗಿ ಪ್ರಕಾಶಮಾಡುತ್ತೇನೆ ಕೇಳು.

ಮಾಘಮಾಸ ಬಂದಾಗ ಮನುಷ್ಯನು ಜಿತೇಂದ್ರಿಯನಾಗಿ ತಿಳಿನೀರಿನಿಂದ ಸ್ನಾನಮಾಡಬೇಕು. ಕಾಮ, ಕ್ರೋಧ, ಅಭಿಮಾನ, ಅಸೂಯೆ, ಲೋಭ, ಚಾಡಿಕೋರತನ ಎಲ್ಲವನ್ನೂ ಬಿಟ್ಟುಬಿಡಬೇಕು. ದೇವರನ್ನು ಸ್ಮರಿಸಿ, ಪಾದಪ್ರಕ್ಷಾಲನೆ ಮಾಡಿಕೊಂಡು ನೆಲದ ಮೇಲೆ ಬಿದ್ದ ಗೋಮಯವನ್ನು ತೆಗೆದುಕೊಂಡು, ಅದರಲ್ಲಿ ಎಳ್ಳನ್ನು ಕೂಡಿಸಿ, ಸ್ವಲ್ಪ ಅರಳೆಯನ್ನು ಕಲಿಸಿ ಒಂದುನೂರಾ ಎಂಟು ಉಂಡೆಗಳನ್ನು ಮಾಡಬೇಕು. ಅನಂತರ ಮಾಘಮಾಸವು ಬಂದಾಗ ಪೂರ್ವಾಷಾಢ, ಉತ್ತರಾಷಾಢ ಅಥವಾ ಮೂಲಾನಕ್ಷತ್ರದಂದು ಏಕಾದಶಿ ತಿಥಿ ಪ್ರಾಪ್ತವಾದಾಗ ಈ ವ್ರತವನ್ನು ಹಿಡಿಯಬೇಕು. ಇದರ ವಿಧಾನವನ್ನು ಕೇಳು.

ಪ್ರಾತಃಕಾಲದಲ್ಲಿ ಎದ್ದು ಸ್ನಾನ ಮಾಡಿ ಶುಚಿರ್ಭೂತನಾಗಿ ಕೃಷ್ಣನ ನಾಮ ಸ್ಮರಣೆಯನ್ನು ಮಾಡುತ್ತ ಶ್ರೀಹರಿಯ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಬೇಕು. ಏಕಾದಶಿಯ ದಿನ ಹಗಲು ದೇವರ ಪೂಜೆ, ಉಪವಾಸ, ರಾತ್ರಿ ಜಾಗರಗಳನ್ನು ಯಥಾಪ್ರಕಾರ ಪೂರ್ವೋಕ್ತ ವಿಧಿಯಿಂದ ಆಚರಿಸಬೇಕು. ದ್ವಾದಶೀ ದಿನದಂದು ಪುನಃ ಪ್ರಾತಃಕಾಲದಲ್ಲಿಯೇ ಚಂದನ, ಅಗುರು, ಕರ್ಪೂರ, ಎಳ್ಳಿನ ಅನ್ನ, ಮುಂತಾದವುಗಳಿಂದ ನೈವೇದ್ಯ, ಕೃಷ್ಣನ ಸ್ಮರಣೆ, ಧೂಪಾರತಿ, ದೀಪಾರತಿ ಮಂಗಳಾರತಿಗಳನ್ನು ಮಾಡಬೇಕು.

ಆ ಬಳಿಕ ಸೊಂಡಿಗ್ಗುಂಬಳ, ತೆಂಗಿನಕಾಯಿ, ಅಥವಾ ಬೀಜಪೂರಕ, ಯಾವುದೂ ಇಲ್ಲದಿದ್ದರೆ ಅಡಿಕೆಯನ್ನಾದರೂ ಹಾಕಿ ದೇವರಿಗೆ ಅರ್ಘ್ಯವನ್ನು ಕೊಡಬೇಕು.

**ಕೃಷ್ಣ ಕೃಷ್ಣ ಕೃಪಾಲುಸ್ತ್ವ ಮಗತೀನಾಂ ಗತಿರ್ಭವ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ಲಕ್ಷ್ಮ್ಯಾ ಸಹ ಜಗತ್ಪತೇ ॥**

ಎಂಬ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು. ಅನಂತರ ಬ್ರಾಹ್ಮಣ ಪೂಜೆಮಾಡಿ ಉದಕುಂಭ (ನೀರು ತುಂಬಿದ ಕೊಡ)ವನ್ನು ದಾನ ಮಾಡಬೇಕು. ಹಾಗೂ ಕೊಡೆ ಪಾದರಕ್ಷೆ, ಬಟ್ಟೆ, ಎಳ್ಳು ತುಂಬಿದ ಪಾತ್ರೆ, ಕಪಿಲಬಣ್ಣದ ಹಸು, ಕರೀ ಎಳ್ಳು ಮುಂತಾದವುಗಳನ್ನು ಯಥಾಶಕ್ತಿ ವಿಪ್ರೋತ್ತಮರಿಗೆ ದಾನ ನೀಡಬೇಕು.

**ಸ್ನಾನೇ ಪ್ರಾಶನಕೇ ಶಸ್ತಾ ತಥಾ ಕೃಷ್ಣತಿಲಾಮುನೇ ।**
**ತಾನ್ ಪ್ರದದ್ಯಾತ್ ಪ್ರಯತ್ನೇನ ಯಥಾಶಕ್ತಿ ದ್ವಿಜೋತ್ತಮೇ ॥**

ಸ್ನಾನ ಮಾಡಲಿಕ್ಕೂ ನೀರಿನೊಡನೆ ಪ್ರಾಶನ ಮಾಡಲಿಕ್ಕೂ ಕರೀ ಎಳ್ಳು ಪ್ರಶಸ್ತವಾಗಿದೆ. ಅದನ್ನೇ ವಿಪ್ರೋತ್ತಮರಿಗೆ ದಾನ ನೀಡಬೇಕು.

**ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕಿ ।**
**ತಿಲದಾತಾ ಚ ಭೋಕ್ತಾ ಚ ಷಟ್‌ತಿಲಾಃ ಪಾಪನಾಶನಾಃ ॥**

ಎಳ್ಳಿನಿಂದ ಸ್ನಾನ, ಎಳ್ಳು ಕುಟ್ಟಿ ದೇಹಕ್ಕೆ ಲೇಪನ, ಎಳ್ಳಿನಿಂದ ಹೋಮ, ಎಳ್ಳು ಸಹಿತ ನೀರು ಬಿಡುವುದು (ತಿಲ ತರ್ಪಣ), ಎಳ್ಳಿನ ದಾನ, ಎಳ್ಳಿನ ಭಕ್ಷಣ ಇವು ಆರು ಎಳ್ಳಿನ ಕಾರ್ಯಗಳು. ಈ ಕಾರ್ಯಗಳನ್ನು ಮಾಡಿದವರ ಪಾಪನಾಶವಾಗಿ ಪುಣ್ಯಪ್ರಾಪ್ತಿ ಆಗುವದು.

**ಧರ್ಮರಾಜ:-** ಕೃಷ್ಣ, ಷಟ್‌ತಿಲಾ ಎಂಬ ಏಕಾದಶಿಯ ಮಹಿಮೆ ಏನು? ಅದರ ಆಚರಣೆಯಿಂದ ಎಂಥ ಫಲಪ್ರಾಪ್ತಿ? ಅದರ ಹಿನ್ನೆಲೆಯ ಕಥಾನಕ ಯಾವುದು? ಇದನ್ನೆಲ್ಲ ನನಗೆ ಹೇಳು.

**ಕೃಷ್ಣ:-** ರಾಜನೇ, ಈ ಷಟ್‌ತಿಲಾ ಏಕಾದಶಿಯ ಬಗೆಗೆ ಒಂದು ಉಪಾಖ್ಯಾನವನ್ನು ನಿನಗೆ ಬಿತ್ತರಿಸುತ್ತೇನೆ ಕೇಳು. ಹಿಂದೆ ಈ ಭೂಲೋಕದಲ್ಲಿ ಒಬ್ಬ ಬ್ರಾಹ್ಮಣಿ ಇದ್ದಳು. ಅವಳು ಯಾವಾಗಲೂ ದೇವರ ಪೂಜೆಯಲ್ಲಿಯೇ ಆಸಕ್ತಳು. ವ್ರತಾನುಷ್ಠಾನ ತತ್ಪರಳು. ಪ್ರತಿ ತಿಂಗಳಿನ ಎರಡೂ ಏಕಾದಶಿ ದಿನಗಳಂದು ಭಕ್ತಿಯಿಂದ ಉಪವಾಸವನ್ನು ಆಚರಿಸುತ್ತಿದ್ದಳು. ಹೀಗೆ ವ್ರತೋಪವಾಸಗಳಿಂದ ಅವಳು ತನ್ನ ಶರೀರವನ್ನು ಸೊರಗಿಸಿದಳು. ಅವಳ ಮನೆ ದೇವತೆಗಳಿಗೂ, ಬ್ರಾಹ್ಮಣರಿಗೂ, ಕುಮಾರಿಯರಿಗೂ ಯಾವಾಗಲೂ ಮುಕ್ತದ್ವಾರ. ಊಟ ಮಾತ್ರ ಯಾರಿಗೂ ಇಲ್ಲ. ಕೃಚ್ಛ್ರ, ಚಾಂದ್ರಾಯಣ, ಮೊದಲಾದ ಎಲ್ಲ ಕಠಿಣವಾದ ವ್ರತೋಪವಾಸಗಳನ್ನು ಅವಳು ಮಾಡಿ ಮುಗಿಸಿದಳು. ಆದರೆ ಅವಳು ಎಂದೂ ಮನೆಗೆ ಬಂದ ಒಬ್ಬ ಭಿಕ್ಷುಕನಿಗೂ ಅನ್ನವನ್ನು ನೀಡಲಿಲ್ಲ. ಒಬ್ಬ ಅತಿಥಿಗೂ ಊಟವನ್ನು ಮಾಡಿಸಲಿಲ್ಲ. ಆಗ ದೇವರಿಗೇ ಚಿಂತೆ ಹತ್ತಿತ್ತು. ಈ ಬ್ರಾಹ್ಮಣಿಯ ದೇಹ ವ್ರತದಿಂದ ಶುದ್ಧ. ಉಪವಾಸದಿಂದ ಪವಿತ್ರ. ವಿಷ್ಣುಭಕ್ತರ ಮನೆಯಲ್ಲಿ ದುಡಿದು ದೇಹದಿಂದ ಸಾಕಷ್ಟು ಸೇವೆಯನ್ನು ಮಾಡಿದ್ದಾಳೆ. ಆದರೆ ಅನ್ನದಾನವನ್ನು ಮಾತ್ರ ಎಂದಿಗೂ ಮಾಡಲಿಲ್ಲ. ಪ್ರಾಣಿಗಳಿಗೆ ನಿಜವಾದ ತೃಪ್ತಿ ಆಗುವದು ಊಟದಿಂದ ಮಾತ್ರ. ಇದನ್ನೆಲ್ಲ ತಿಳಿದು ನಾನು ಒಂದು ದಿನ ಅವಳಿಗಾಗಿ ಭೂಲೋಕಕ್ಕೆ ಬಂದೆ. ಒಬ್ಬ ಕಾಪಾಲಿಕ ಸಾಧುವಿನ ವೇಷ ತಳೆದೆ. ಒಂದು ಭಿಕ್ಷಾಪಾತ್ರೆ ಮುಂದೆ ಮಾಡಿ ಅವಳನ್ನು ಯಾಚಿಸಿದೆ. ಆಗ ಅವಳು ನನ್ನನ್ನು ಪ್ರಶ್ನಿಸಿದಳು.

**ಬ್ರಾಹ್ಮಣಿ:-** ಸಾಧುವೇ, ನೀನು ಎಲ್ಲಿಂದ ಬಂದೆ? ಏಕೆ ಬಂದೆ? ಎಲ್ಲಿಗೆ ಹೋಗುವೆ ಇದೆಲ್ಲವನ್ನೂ ನನಗೆ ಹೇಳು.

**ಕಾಪಾಲಿಕ:-** ಸುಂದರಿ, ನನಗೆ ಬೇರೆ ಏನೂ ಬೇಡ. ಏನಾದರು ಭಿಕ್ಷೆಯನ್ನು ನೀಡು.

ಕಾಪಾಲಿಕ ಸಾಧು ರೂಪದಿಂದ ಇರುವ ಈ ನನ್ನ ಮಾತನ್ನು ಕೇಳಿ ಬ್ರಹ್ಮಾಂಡಕೋಪ ಬಂದಿತು ಆ ಬ್ರಾಹ್ಮಣಿಗೆ, ಅವಳು ನನ್ನ ಮೇಲಿನ ಸಿಟ್ಟಿನಿಂದ ನನ್ನ ತಾಮ್ರದ ಭಿಕ್ಷಾಪಾತ್ರೆಯಲ್ಲಿ ಮಣ್ಣಿನ ಒಂದು ಪಿಂಡವನ್ನು (ಹೆಂಟೆ) ಹಾಕಿದಳು. ಅದನ್ನೇ ತೆಗೆದುಕೊಂಡು ನಾನು ಸ್ವರ್ಗಕ್ಕೆ ಹೋದೆ. ಮುಂದೆ ಆ ಬ್ರಾಹ್ಮಣಿಯು ವಾರ್ಧಕ್ಯದಿಂದ ಕಾಲೋಚಿತ ಮರಣವನ್ನಪ್ಪಿದಳು. ಅವಳು ಸದೇಹವಾಗಿ ಸ್ವರ್ಗಕ್ಕೆ ಆಗಮಿಸಿದಳು, ವ್ರತದ ಪ್ರಭಾವದಿಂದ. ನನಗೆ ನೀಡಿದ ಮಣ್ಣಿನ ಉಂಡೆಯ ಪ್ರಭಾವದಿಂದ ಅವಳಿಗೆ ಸ್ವರ್ಗಲೋಕದಲ್ಲಿ ದಿವ್ಯವೂ, ಭವ್ಯವೂ, ಸುಂದರವೂ ಆದ ಒಂದು ಮನೋಹರ ಮಂದಿರವು ದೊರೆಕಿತು. ಆದರೆ ಅವಳ ಮನೆಯಲ್ಲಿ ಧಾನ್ಯದ ರಾಶಿಯು ಮಾತ್ರ ಇರಲಿಲ್ಲ. ಅಕ್ಕಿ, ಬೇಳೆ, ಕಾಳು, ಕಡ್ಡಿ ಯಾವುದೂ ಅವಳ ಮನೆಯಲ್ಲಿ ಇರಲಿಲ್ಲ. ಇರಲಿಕ್ಕೆ ಅತ್ಯಂತ ಪ್ರಶಸ್ಥವಾದ ಉತ್ತಮ ಮನೆ ಇದ್ದಿತು. ಆದರೆ ಉಣ್ಣಲು ಮಾತ್ರ ಏನೂ ಇಲ್ಲ. ಅದನ್ನು ಕಂಡು ಕೂಡಲೇ ಅವಳು ಮನೆ ಬಿಟ್ಟು ಹೊರ ಬಿದ್ದಳು. ನನ್ನ ಬಳಿಗೆ ಬಂದು ಸಿಟ್ಟಿನಿಂದಲೇ ನುಡಿದಳು.

**ಬ್ರಾಹ್ಮಣಿ:-** ದೇವ, ನಾನು ವ್ರತ ಎಂದು ಶಾಸ್ತ್ರದಲ್ಲಿ ಎಷ್ಟು ವಿಹಿತವಾಗಿವೆಯೋ ಅವೆಲ್ಲವನ್ನೂ ಮಾಡಿದ್ದೇನೆ. ಸಕಲ ವಿಧವಾದ ಉಪವಾಸಗಳನ್ನು ಆಚರಿಸಿದ್ದೇನೆ. ದೇವದೇವನಾದ ಶ್ರೀಹರಿಯನ್ನು ಸರ್ವವಿಧದಿಂದಲೂ ಆರಾಧಿಸಿದ್ದೇನೆ. ಇಷ್ಟಾದರೂ ನನ್ನ ಮನೆಯಲ್ಲಿ ಒಂದು ಧಾನ್ಯದ ಕಣವೂ ಇಲ್ಲ. ಅನ್ನದ ತುತ್ತೂ ಇಲ್ಲ. ಅನ್ನ ಶೂನ್ಯವಾದ ಆ ಮಹಾಮಂದಿರದಲ್ಲಿ ನಾನು ಉಪವಾಸ ಇರಬೇಕೆ?

**ಶ್ರೀಹರಿ:-** ವ್ರತಪರಾಯಣಳೆ, ನೀನು ಈಗ ಮನೆಗೆ ಹೋಗು. ನಿನ್ನನ್ನು ನೋಡಲು ಕುತೂಹಲದಿಂದ ಕೂಡಿದ ದೇವತಾಸ್ತ್ರೀಯರು ಆಶ್ಚರ್ಯಚಕಿತರಾಗಿ ಬರುತ್ತಾರೆ. ನೀನು ಅವರಿಗೆ ನಿನ್ನ ಮನೆಯ ಬಾಗಿಲವನ್ನೇ ತೆರೆಯಬೇಡ. ಷಟ್‌ತಿಲಾ ಏಕಾದಶಿಯ ಪುಣ್ಯಕಥೆಯನ್ನು ಹೇಳುವವರೆಗೆ ನೀನು ಬಾಗಿಲ ಮುಚ್ಚಿಕೊಂಡೇ ಕುಳಿತರು. ಈ ಸುರಸುಂದರಿಯರು ಷಟ್‌ತಿಲಾ ಮಹಿಮೆಯನ್ನು ಹೇಳಿದ ಬಳಿಕವೇ ನೀನು ಬಾಗಿಲ ತೆರೆ.

ಈ ನನ್ನ ಮಾತನ್ನು ಕೇಳಿಕೊಂಡು ಆ ಬ್ರಾಹ್ಮಣಿಯು ತನ್ನ ಮನೆಗೆ ಹೋದಳು. ಅದೇ ವೇಳೆಯಲ್ಲಿ ಕೆಲವು ದೇವತಾಪತ್ನಿಯರು ಅವಳ ಮನೆಯ ಬಾಗಿಲು ಬಳಿಯಲ್ಲಿ ಬಂದು ಹೇಳಿದರು.

**ದೇವಪತ್ನಿಯರು:-** ಶುಭಾಂಗಿ, ನಾವು ನಿನ್ನನ್ನು ನೋಡಲು ಬಂದಿದ್ದೇವೆ. ನೀನು ಬೇಗನೇ ಬಾಗಿಲು ತೆರೆ.

**ಬ್ರಾಹ್ಮಣಿ:-** ನೀವು ನನ್ನನ್ನು ನೋಡಬೇಕು ಎಂದು ಇದ್ದರೆ ನನಗೆ ಷಟ್‌ತಿಲಾ ಪುಣ್ಯವನ್ನು ಹೇಳಿರಿ. ಸತ್ಯವನ್ನು ನುಡಿಯಿರಿ. ಅಂದರೆ ಮಾತ್ರ ನಾನು ಬಾಗಿಲವನ್ನು ತೆರೆಯುತ್ತೇನೆ.

ಇಷ್ಟಾದರೂ ಅವರು ಯಾರೂ ಷಟ್‌ತಿಲಾ ಏಕಾದಶಿಯ ಮಹಿಮೆಯನ್ನು ಅವಳಿಗೆ ಹೇಳಲಿಲ್ಲ. ಅಷ್ಟರಲ್ಲಿ ಅವಳನ್ನು ನೋಡಲು ಬೇರೊಬ್ಬ ಸುರಸುಂದರಿಯು ಅಲ್ಲಿಗೆ ಆಗಮಿಸಿದಳು ಅವಳು ಮಾತ್ರ ಈ ಬ್ರಾಹ್ಮಣಿಯ ಮೇಲಿನ ಕರುಣೆಯಿಂದ ಅವಳಿಗೆ

ಷಟ್‌ತಿಲಾ ಏಕಾದಶಿಯ ಮಹಿಮೆಯನ್ನು ನಿರೂಪಿಸಿದಳು. ಅನಂತರ ಆ ಬ್ರಾಹ್ಮಣಿಯು ತನ ಮನೆಯ ಬಾಗಿಲು ತೆರೆದಳು. ಆಗ ಎಲ್ಲ ದೇವಿಯರೂ ಅವಳ ಮನೆಯ ಒಳಗೆ ಬಂದರು. ಅಲ್ಲಿ ಈ ಬ್ರಾಹ್ಮಣಿಯು ತನ್ನ ಮನುಷ್ಯ ದೇಹದಿಂದಲೇ ನಿಂತುಕೊಂಡಿದ್ದಳು. ಅವಳು ತನ್ನ ವ್ರತೋಪವಾಸದ ಪುಣ್ಯದಿಂದ ಭೂಲೋಕದ ಪಾಂಚಭೌತಿಕ ದೇಹ ಸಹಿತವಾಗಿಯೇ ಸ್ವರ್ಗಕ್ಕೆ ಆಗಮಿಸಿದಳು. ನ್ನದಾನ ಮಾಡದ್ದರಿಂದ ಅವಳಿಗೆ ದಿವ್ಯ ದೇಹ ಬಂದಿರಲಿಲ್ಲ. ಸ್ವರ್ಗಲೋಕದಲ್ಲಿ ಬಂದು ನಿಂತ ಆ ಬ್ರಾಹ್ಮಣಿಯನ್ನು ನೋಡಿ ಆ ದೇವತಾ ಸ್ತ್ರೀಯರಿಗೆಲ್ಲ ಪರಮಾಶ್ಚರ್ಯ. ಇವಳು ದೇವತಾ ಸ್ತ್ರೀ ಅಲ್ಲ. ಗಂಧರ್ವ ಸ್ತ್ರೀ ಅಲ್ಲ. ಅಸುರ ಸ್ತ್ರೀ ಅಲ್ಲ. ನಾಗ ಸ್ತ್ರೀ ಅಲ್ಲ. ಅಂದಬಳಿಕ ಇವಳು ಸ್ವರ್ಗಕ್ಕೆ ಹೇಗೆ ಬಂದಳು? ಬಂದ ಬಳಿಕವೂ ಇವಳ ಈ ಕ್ಷುದ್ರವಾದ ಮನುಷ್ಯ ದೇಹವು ಅಳಿಯದೇ ಹಾಗೇ ಏಕೆ ಉಳಿದಿದೆ ಬ್ರಾಹ್ಮಣಿಯ ಮನುಷ್ಯ ದೇಹದ ಆ ದಯನೀಯ ಅವಸ್ಥೆಯನ್ನು ಕಂಡು ಅವರಿಗೆ ಕರುಣೆ ಉಕ್ಕಿಬಂದಿತು.

ಅವರೆಲ್ಲರೂ ದೇವತಾಸ್ತ್ರೀಯರು ಆ ಬ್ರಾಹ್ಮಣಿಗೆ ಷಟ್‌ತಿಲಾ ಏಕಾದಶಿಯ ಮಹಿಮೆಯನ್ನು ವಾಚನ ಮಾಡಿ ತಿಳಿಸಿ ಹೇಳಿದರು. ಅದರಂತೆ ಅವಳು ಆಚರಣೆ ಮಾಡಿದಳು. ಅದರಿಂದ ಮರುಚಣದಲ್ಲಿ ಆ ಬ್ರಾಹ್ಮಣಿಗೆ ದಿವ್ಯ ದೇಹವು ಪ್ರಾಪ್ತವಾಯಿತು. ಸ್ವರ್ಗೀಯ ಸೌಂದರ್ಯ, ದೇವೀ ರೂಪ, ಅಪ್ಸರಾ ಕಾಂತಿ, ಅವಳ ಆ ದಿವ್ಯ ದೇಹದಲ್ಲಿ ಕಳಕಳಿಸತೊಡಗಿದವು. ಅವಳ ಮನೆ ತುಂಬ ಧನಧಾನ್ಯ ಸಮೃದ್ಧಿ. ವಸ್ತ್ರಾಲಂಕಾರಗಳ ವೈಭವ, ಬಂಗಾರ ಮತ್ತು ರತ್ನಗಳ ಸಂಪತ್ತು ಹಾಗೂ ಸರ್ವ ಸಮೃದ್ಧಿಗಳು ತುಂಬಿ ತುಳುಕಿದವು.

ಆದುದರಿಂದ ಮಾನವರು ಷಟ್‌ತಿಲಾ ಏಕಾದಶಿಯ ಉಪವಾಸ ಹಾಗೂ ವ್ರತಾನುಷ್ಠಾನಗಳನ್ನು ತಪ್ಪದೇ ಮಾಡಬೇಕು. ಮತ್ತು ಎಳ್ಳಿನ ದಾನ ನೀಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಮಾಘ ಕೃಷ್ಣಪಕ್ಷದ ಷಟ್‌ತಿಲಾ ಏಕಾದಶಿಯ ಮಾಹಾತ್ಮ್ಯ ಎಂಬ ನಲವತ್ತೂರನೇಯ ಅಧ್ಯಾಯ ಮುಗಿದುದು*



## ಮಾಘ ಶುಕ್ಲಪಕ್ಷದ ಜಯಾ ಏಕಾದಶಿಯ ಮಹಿಮೆ — ಅಧ್ಯಾಯ - ೪೪

**ಧರ್ಮರಾಜ:-** ಜಗದೀಶ, ನೀನು ಮಾಘ ಕೃಷ್ಣಪಕ್ಷದ ಷಟ್‌ತಿಲಾ ಏಕಾದಶಿಯ ಮಹಿಮೆಯನ್ನು ಹೇಳಿದೆ. ಮಾಘ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಏನು? ಅದರ ವಿಧಾನ ಯಾವದು? ಅಂದು ಪೂಜನೀಯನಾದ ದೇವರು ಯಾರು?

**ಕೃಷ್ಣ:-** ಪಾಂಡುನಂದನ, ಮಾಘ ಶುಕ್ಲಪಕ್ಷದ ಏಕಾದಶಿಗೆ ಜಯಾ ಎಂದು ಹೆಸರು. ಇದು ಪರಮ ಪವಿತ್ರ ಹಾಗೂ ಪಾಪನಾಶಕ. ಇದು ಕಾಮವನ್ನು ನೀಡುವದು. ಮೋಕ್ಷವನ್ನೂ ಕೊಡುವದು. ಬ್ರಹ್ಮಹತ್ಯಾದಿ ಪಾಪಗಳನ್ನು ನಾಶಪಡಿಸುವದು. ಪಿಶಾಚ ಜನ್ಮವನ್ನು ಕೂಡ ಬಿಡಿಸುವದು. ಈ ಏಕಾದಶಿ ಮಾಡಿದವರು ಎಂದೂ ಭೂತ ಪ್ರೇತರಾಗುವದಿಲ್ಲ. ಪಿಶಾಚಿ ಜನ್ಮ ಹೊಂದುವದಿಲ್ಲ. ಈ ವಿಷಯದಲ್ಲಿ ಒಂದು ಪೌರಾಣಿಕ ಕಥೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ದೇವೇಂದ್ರನ ಆಳಿಕೆ ಸ್ವರ್ಗಸೀಮೆಯಲ್ಲಿ. ಎಲ್ಲ ಸುರಸತ್ತೊಮ ಸುಖವಾಸ್ತವ್ಯ ಆ ಅಮರಾವತಿಯಲ್ಲಿ. ಅವರೆಲ್ಲರಿಗೂ ಆಡಲು ನಂದನ, ಬೇಡಿದ್ದೆಲ್ಲ

ನೀಡಲು ಕಲ್ಪವೃಕ್ಷ, ಕುಡಿಯಲು ಅಮೃತ, ವಿಹರಿಸಲು ಅಪ್ಸರೆಯರು, ಆ ಭೋಗ ಭೂಮಿಯಲ್ಲಿ ಯಾವುದಕ್ಕೆ ಕೊರತೆ?

ಅಲ್ಲಿ ಒಂದು ದಿನ ಸುರಸುಂದರಿಯೊಂದಿಗೆ ಸ್ವಚ್ಛಂದದಿಂದ ಕಾಮಕೇಲೀ ಲೋಲನಾದ ಆ ಶಚೀಪತಿಯು ಆನಂದದಿಂದ ನರ್ತನವನ್ನು ಮಾಡುತ್ತಲಿದ್ದ. ಗಂಧರ್ವರು ಗಾಯನ ಮಾಡುತ್ತಿದ್ದರು. ಪುಷ್ಪದಂತ, ಚಿತ್ರಸೇನ, ಆತನ ಮಡದಿ ಮಾಲನಿ, ಅವಳ ಮಗಳಾದ ಪುಷ್ಪವಂತಿ ಎಲ್ಲರೂ ದೇವೇಂದ್ರನನ್ನು ಸಂತೋಷಪಡಿಸಲಿಕ್ಕಾಗಿ ನಕ್ಕುನಲಿದು, ಹಾಡಿ, ಕುಣಿದು, ನರ್ತನಸೇವೆಯನ್ನು ಸಲ್ಲಿಸುತ್ತಿದ್ದರು. ಆಗ ಅಲ್ಲಿಯೇ ಇದ್ದು ಆ ನೃತ್ಯಗೀತ ಸಮಾರಂಭದಲ್ಲಿ ಭಾಗವಹಿಸಿದ ಮಾಲ್ಯವಂತ ಎಂಬ ಗಂಧರ್ವ ಯುವಕನು, ಪುಷ್ಪವಂತಿಯ ರೂಪ ಸೌಂದರ್ಯದಿಂದ ಮರುಳಾದ. ಪುಷ್ಪವಂತಿಯು ತನ್ನ ಕುಡಿನೋಟ ಹಾಗೂ ಕಡೆನೋಟಗಳಿಂದ ಪುಷ್ಪದಂತನ ಮಗನಾದ ಮಾಲ್ಯವಂತನನ್ನು ಸಂಪೂರ್ಣ ಮೋಹಗೊಳಿಸಿದಳು. ಅವಳ ಲಲಿತ ಲಾವಣ್ಯ, ಕಮನೀಯ ಕಾಂತಿ, ವಿಲಾಸ ವೈವಿಧ್ಯ, ವನಪು ವೈಯ್ಯಾರಗಳನ್ನು ಕಂಡು ಮಾಲ್ಯವಂತನು ತೀರ ಹುಚ್ಚಾಗಿ ಹೋದ. ಆಗ ಅವರಿಬ್ಬರೂ ಜೋಡಿಯಾಗಿ ನೃತ್ಯ ಮಾಡಲಿಕ್ಕಾಗಿ ರಂಗಭೂಮಿಯ ಮೇಲೆ ಬಂದರು. ಇಬ್ಬರೂ ಮಧುರ ಕಂಠದಿಂದ ಹಾಡುತ್ತ ನರ್ತನದ ಭಂಗಿಯಲ್ಲಿ ಕುಣಿಯತೊಡಗಿದರು. ಆದರೆ ಪರಸ್ಪರ ಅನುರಾಗಪೂರ್ಣವಾದಕಟಾಕ್ಷ ವಿಕ್ಷೇಪದಿಂದ ಮೈಯಲ್ಲಿ ಮಿಂಚು ಸಂಚರಿಸಿದಂತಾಗಿ ಅವರಿಬ್ಬರಿಗೂ ಸಂಗೀತ ಲಯ, ನೃತ್ಯದ ತಾಳ, ಕುಣಿತದ ತೂಕ, ಮೇಲಿಂದ ಮೇಲೆ ತಪ್ಪತೊಡಗಿದವು. ನಡನಡುವೆ ಸಂಗೀತದ ಪಲ್ಲವಿಯನ್ನು ಕೂಡ ಮರೆತು ಅವರು ಪರಸ್ಪರ ನೋಡುತ್ತ ನಿಂತುಬಿಡುತ್ತಿದ್ದರು. ಇದರಿಂದ ದೇವೇಂದ್ರ ಸಿಟ್ಟಿಗೆದ್ದು ಬೆಂಕಿಯಮೊಟ್ಟೆ ಆದ. ಇಬ್ಬರನ್ನೂ ಕೋಪದಿಂದ ಶಪಿಸಿದ.

**ದೇವೇಂದ್ರ:-** ನೀವಿಬ್ಬರೂ ಕಾಮಾಂಧರಾಗಿ ತೂಕತಪ್ಪಿ ನಡೆದಿರಿ. ತಾಳ ತಪ್ಪಿ ಕುಣಿದಿರಿ. ರಾಗ ತಪ್ಪಿ ಹಾಡಿದಿರಿ. ನನ್ನ ಆಜ್ಞೆಯನ್ನು ಧಿಕ್ಕರಿಸಿದಿರಿ. ಆದರಿಂದ ನೀವು ಈಗಲೇ ಪಿಶಾಚಿ ಆಗಿರಿ. ಪಿಶಾಚಿ ದಂಪತಿಗಳಾಗಿ ಭೂಲೋಕದಲ್ಲಿ ಹೋಗಿ ಅಲ್ಲಿ ನಿಮ್ಮ ದುಷ್ಕರ್ಮದ ಫಲವನ್ನು ಅನುಭವಿಸಿರಿ.

ಹೀಗೆ ಕುಪಿತನಾದ ದೇವೇಂದ್ರನಿಂದ ಶಿಕ್ಷಿತರಾದ ಅಮರಲೋಕದ ಆ ಅಮರ ಪ್ರೇಮಿಗಳು ಪಿಶಾಚರಾಗಿ ಹಿಮಾಲಯ ಪರ್ವತಕ್ಕೆ ಬಂದು ಬಿದ್ದರು. ಅಲ್ಲಿಯ ಹಿಮಪಾತದಿಂದ ಕಡು ಕಷ್ಟವನ್ನು ಅನುಭವಿಸಿ ದುಃಖದಿಂದ ತೊಳಲಾಡತೊಡಗಿದರು. ಹಸಿವೆ, ಬಾಯಾರಿಕೆಗಳಿಂದ ಅವರಿಗೆ ಯಾವಾಗಲೂ ಹೊಟ್ಟೆಯಲ್ಲಿ ಉರಿ, ಸಂಕಟ, ರಾತ್ರಿ ನಿದ್ದೆ ಇಲ್ಲ. ಹಗಲು ನೆಮ್ಮದಿ ಇಲ್ಲ. ಪರಸ್ಪರವಾಗಿ ತಮ್ಮ ಸುಖದುಃಖಗಳನ್ನು ತೋಡಿಕೊಳ್ಳುತ್ತ ಗಿರಿಗಹ್ವರಗಳಲ್ಲಿ ಅಲೆದಾಡಿದರು. ದರಿ ಕೊರೆಗಳಲ್ಲಿ ಅಂಡಲೆದರು. ಮೈ ಕೊರೆಯುವ ಚಳಿಯಿಂದ ಹಲ್ಲು ಕಟಿಯುತ್ತ ಮೈಗೂದಲುನಿಮಿರಿ ವಿಚಿತ್ರವಾದ ಪೀಡೆಯನ್ನು ಅನುಭವಿಸಿದರು. ಆಗ ಗಂಡು ಪಿಶಾಚವು ತನ್ನ ಹೆಂಡತಿಯಾದ ಪಿಶಾಚಿಗೆ ಒಂದು ದಿನ ಹೇಳಿತು.

**ಪಿಶಾಚಿ:-** ನಾವು ಯಾವ ಮಹಾಪಾಪವನ್ನು ಮಾಡಿದ್ದೇವೋ, ಏನೋ, ನಮ್ಮ ಹಿಂದಿನ ದುಷ್ಟ ಕರ್ಮದಿಂದಲೇ ನಮಗೆ ಈ ಪಿಶಾಚ ಜನ್ಮ ಬಂದಿದೆ. ಆದ್ದರಿಂದ ಮಾನವರು ಸರ್ವಥಾ ದುಷ್ಕರ್ಮಗಳನ್ನು ಮಾಡಬಾರದು.

ಹೀಗೆ ಆ ಪಿಶಾಚ ದಂಪತಿಗಳು ದುಃಖ ಪಡುತ್ತ ಇರುವಾಗ ಮಾಘ ಶುಕ್ಲ ಪಕ್ಷದ ಜಯಾ ಎಂಬ ಏಕಾದಶಿ ತಿಥಿಯು ಬಂದಿತು. ಆ ದಿನ ಅವುಗಳಿಗೆ ಆಹಾರವೇ ಸಿಕ್ಕಲಿಲ್ಲ. ನೀರೂ ದೊರಕಲಿಲ್ಲ. ಅಂದು ಆ ಪಿಶಾಚಗಳು ಯಾವ ಪ್ರಾಣಿಯನ್ನೂ ಹಿಂಸಿಸಲಿಲ್ಲ. ಎಲೆಕಾಯಿಗಳನ್ನು ತಿನ್ನಲಿಲ್ಲ. ಅಶ್ವತ್ಥದ ಸಮೀಪದಲ್ಲಿ ದುಃಖ ಸಂತಪ್ತವಾಗಿ ಅವು ಕುಳಿತುಕೊಂಡವು. ರಾತ್ರಿ ಆದ ಬಳಿಕ ಹಿಮಾಲಯದ ವಿಪರೀತ ಚಳಿಯಿಂದಾಗಿ ಅವುಗಳಿಗೆ ನಿದ್ರೆ ಬರಲಿಲ್ಲ. ಅವು ಪರಸ್ಪರ ಅಂಗಾಂಗಗಳಿಗೆ ಒತ್ತಿ ಕೊಂಡು ಕಟ ಕಟ ನಡಗುತ್ತ ಬೆಳಗಾಗುವವರೆಗೆ ನಿದ್ದೆ ಇಲ್ಲದೆ ಎಚ್ಚರಾಗಿಯೇ ಕುಳಿತುಕೊಂಡವು. ಅಂದಿನ ರಾತ್ರಿ ಸರಿಯಿತು. ದ್ವಾದಶಿಯ ಸೂರ್ಯ ಉದಯಿಸಿದ. ಆಗ ನನ್ನ ಮನಸ್ಸಿನಲ್ಲಿ ಅವರನ್ನು ಉದ್ಧರಿಸಬೇಕೆಂದು ಅಪೇಕ್ಷೆ ಹುಟ್ಟಿತು. ಆ ಎರಡೂ ಪಿಶಾಚ ದಂಪತಿಗಳು ಸುದೈವದಿಂದ ಏಕಾದಶಿ ಉಪವಾಸ ಇದ್ದವು. (ಆಹಾರ ದೊರಕದ್ದರಿಂದ) ಜಾಗರ ಮಾಡಿದ್ದವು ರಾತ್ರಿ ಎಲ್ಲ. (ಚಳಿಯಿಂದ ನಿದ್ದೆ ಬರಲಿಲ್ಲ) ಅಂತೂ ಹೇಗೇ ಆಗಲೀ ಜಯಾ ಏಕಾದಶಿಯಂದು ಉಪವಾಸ, ಜಾಗರ ಎರಡೂ ಮಾಡಿದ್ದರಿಂದ ದ್ವಾದಶಿ ದಿನ ಅವೆರಡೂ ಪಿಶಾಚಿಗಳು ನನ್ನ (ವಿಷ್ಣುವಿನ) ಅನುಗ್ರಹದಿಂದ ಪಿಶಾಚಜನ್ಮದಿಂದ ಮುಕ್ತವಾದವು. ಅವುಗಳ ಮೊದಲಿನ ರೂಪವಾದ ಪುಷ್ಪವಂತೀ ಮಾಲ್ಯವಂತ ಎಂಬ ಅಪ್ಸರ ಜೋಡಿಗಳ ಮೂಲ ಸ್ವರೂಪವು ಅವುಗಳಿಗೆ ಮರಳಿ ಬಂದಿತು. ಅವರ ಮೊದಲಿನ ಗಾಢಪ್ರೇಮ ಮತ್ತೆ ಚಿಗುರಿತು. ಅಂದಿನ ಅನುರಾಗ ಮತ್ತೆ ಪಲ್ಲವಿಸಿತು. ಅವರು ತಮ್ಮ ಮೊದಲಿನ ವಸ್ತ್ರಾಲಂಕಾರಗಳನ್ನು ಉಟ್ಟು ತೊಟ್ಟು ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳಿದರು. ದೇವೇಂದ್ರನ ಮುಂದೆ ಹೋಗಿ ನಮಸ್ಕಾರ ಮಾಡಿದರು. ಇಷ್ಟು ಬೇಗ ಪಿಶಾಚ ಜನ್ಮದಿಂದ ಬಿಡುಗಡೆ ಹೊಂದಿ ಬಂದ ಅವರನ್ನು ನೋಡಿ ಆ ಅಮರಾವತಿಯ ಅರಸನಿಗೆ ಇನ್ನಿಲ್ಲದ ಅಚ್ಚರಿ. ಅವರನ್ನು ಕೇಳಿಯೇ ಬಿಟ್ಟ ಆ ಪಾಲೋಮೀಪತಿ.

**ಇಂದ್ರ:-** ನಿಮ್ಮ ಪಿಶಾಚತ್ವವು ಹೇಗೆ ತೊಲಗಿತು? ನಾನು ಶಾಪಕೊಟ್ಟು ನಿಮ್ಮನ್ನು ಸ್ವರ್ಗದಿಂದ ಕೆಳಗೆ ದೂಡಿದ್ದೆ. ಯಾವ ದೇವನ ದಯೆ ನಿಮಗೆ ಬಿಡುಗಡೆಯನ್ನು ತಂದಿತು?

**ಮಾಲ್ಯವಂತ:-** ಸ್ವಾಮಿ, ಸುರನಾಥ, ವಾಸುದೇವನ ಪ್ರಸಾದ. ಜಯಾ ಏಕಾದಶಿಯ ಪ್ರಭಾವ ಹಾಗೂ ನಿನ್ನ ಅನುಗ್ರಹ ಇವುಗಳಿಂದ ನಮ್ಮ ಪಿಶಾಚತ್ವವು ತೊಲಗಿ ಹೋಯಿತು.

ಅವರ ಈ ಮಾತನ್ನು ಕೇಳಿ ದೇವೇಂದ್ರನು ಅತ್ಯಾದರದಿಂದ ನುಡಿದ.

**ಇಂದ್ರ:-** ವಿಷ್ಣುವಿನಲ್ಲಿ ಭಕ್ತಿಯನ್ನು ಇಟ್ಟು ಹರಿವಾಸರವನ್ನು ಮಾಡಿದ ನೀವು ನಿಮ್ಮಷ್ಟಕ್ಕೆ ಪವಿತ್ರರಾದುದಲ್ಲದೇ ನನಗೂ ವಂದನೀಯರಾಗಿದ್ದೀರಿ. ವಿಷ್ಣು ಭಕ್ತರೆಲ್ಲರೂ ನನಗೆ ವಂದ್ಯರೇ ಸರಿ. ಇನ್ನು ಮೇಲೆ ಮಾಲ್ಯವಂತ ನೀನು ನಿನ್ನ ನೆಚ್ಚಿನ ನಲ್ಲೆಯಾದ ಈ ಪುಷ್ಪವಂತಿಯೊಡನೆ ಈ ಸುರಪುರದಲ್ಲಿ ಸ್ವಚ್ಛಂದವಾಗಿ ವಿಹರಿಸು. ಚಕ್ಕಂದದಿಂದ ನಲಿದಾಡು ಎಂದು ಹೇಳಿ ಅವರಿಗೆ ಮುಕ್ತ ವಿಹಾರಕ್ಕೆ ಅನುಮತಿ ನೀಡಿದ.

**ಕೃಷ್ಣ:-** ಧರ್ಮರಾಜ, ಈ ಕಾರಣದಿಂದ ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸುವ ಈ ಜಯಾ ಏಕಾದಶಿಯ ದಿನದಂದು ಉಪವಾಸ, ಜಾಗರ, ಸಕಾಲ ಪಾರಣೆ, ವಿಷ್ಣು ಪೂಜೆ ಮುಂತಾದ ಕಾರ್ಯಕಲಾಪಗಳನ್ನು ಅನೂಚಾನವಾಗಿ ಆಚರಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಮಾಘ ಶುಕ್ಲಪಕ್ಷದ ಜಯಾ ಏಕಾದಶಿಯ ಮಹಿಮೆ ಎಂಬ ನಲವತ್ತನಾಲ್ಕನೇಯ ಅಧ್ಯಾಯ ಮುಗಿದುದು*

## ಫಾಲ್ಗುಣ ಕೃಷ್ಣಪಕ್ಷದ ವಿಜಯಾ ಏಕಾದಶಿಯ ಮಾಹಾತ್ಮ್ಯ | ಅಧ್ಯಾಯ - ೪೫

**ಧರ್ಮರಾಜ:-** ವಾಸುದೇವ, ಫಾಲ್ಗುಣ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದನ್ನು ನನಗೆ ಹೇಳು.

**ಶ್ರೀಕೃಷ್ಣ:-** ಹಿಂದೆ ಬ್ರಹ್ಮನನ್ನು ಕುರಿತು ನಾರದಮುನಿ ಕೇಳಿದ್ದ ಇದೇ ಪ್ರಶ್ನೆಯನ್ನು. ಆಗ ನಾರದರನ್ನು ಕುರಿತು ಬ್ರಹ್ಮ ಹೇಳಿದುದನ್ನೇ ಈಗ ನಾನು ನಿನಗೆ ಹೇಳುತ್ತೇನೆ.

**ಬ್ರಹ್ಮ :-** ಈ ಏಕಾದಶಿಯು ಉಪವಾಸ ಮಾಡುವವರಿಗೆ ವಿಜಯವನ್ನು ತಂದುಕೊಡುವದು. ಮತ್ತು ಅವರ ಪಾಪವನ್ನು ಕಳೆಯುವದು. ಆದ್ದರಿಂದಲೇ ಇದಕ್ಕೆ ವಿಜಯಾ ಎಂದು ಹೆಸರು.

ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಿದ್ದ. ಪಂಚವಟಿಯಲ್ಲಿ ಸೀತಾಲಕ್ಷ್ಮಣರೊಂದಿಗೆ ವಾಸ ಮಾಡಿದ. ವಿಜಯನಾಮಕನಾದ ಆ ಶ್ರೀರಾಮಚಂದ್ರನ ಪ್ರೇಯಸಿಯಾದ ಸೀತೆಯನ್ನು ಕಾಮಾಂಧನಾದ ರಾವಣನು ಅಪಹರಿಸಿದ. ಅದರಿಂದ ಸಚ್ಚಿದಾನಂದ ವಿಗ್ರಹನಾದ ರಾಮನು ಕೂಡ (ಲೋಕ ದೃಷ್ಟಿಯಿಂದ) ಮೋಹಗೊಂಡ. ಸೀತೆಯನ್ನು ಹುಡುಕಲು ಲಕ್ಷ್ಮಣನೊಂದಿಗೆ ವನ ವನ ಅಲೆದ. ಮರಣೋನ್ಮುಖನಾದ ಜಟಾಯುವನ್ನು ನೋಡಿದ ಕಬಂಧನನ್ನು ಸಂಹರಿಸಿದ. ಹಾಗೇ ಗೊಂಡಾರಣ್ಯವಾದ ದಂಡಕಾರಣ್ಯದ ವನಗರ್ಭದಲ್ಲಿ ಅಂಡಲೆಯುವಾಗ ಆ ರಾಮನಿಗೆ ಏರ್ಪಟ್ಟಿತು ಸುಗ್ರೀವನೊಡನೆ ಸಖ್ಯ. ಕಪಿಗಳ ಹಿಂಡಿಗೆ ಹಿಂಡೇ ರಾಮಕಾರ್ಯಕ್ಕಾಗಿ ಸನ್ನದ್ಧ. ಹನುಮಂತನಿಂದ ಸಮುದ್ರದ ಮೇಲೆ ಹಾರಾಟ. ಲಂಕೆಗೆ ಉಡ್ಡಾಣ. ಅಶೋಕ ವನದಲ್ಲಿ ಹನುಮಂತನಿಂದ ಸೀತೆಯ ಸಂದರ್ಶನ. ಸೀತೆಗೆ ರಾಮನ ಸಂದೇಶದ ನಿವೇದನೆ. ಆ ಮಾರುತಿಯಿಂದ ಲಂಕೆಯ ದಹನ ತನ್ನ ಬಾಲದ ಬೆಂಕಿಯಿಂದ. ಮರಳಿ ಮತ್ತೊಮ್ಮೆ ಸಾಗರದ ಉಲ್ಲಂಘನೆ ಆ ಕಪಿಶ್ರೇಷ್ಠನಿಂದ. ಮರಳಿ ಹಾರಿ ಬಂದು ಶ್ರೀರಾಮನ ಸನ್ನಿಧಿಯಲ್ಲಿ ಸರ್ವ ಸೀತಾವಿದ್ಯಮಾನ ಕಥನ. ಆಗ ಸುಮಿತ್ರಾನಂದನನಾದ ಲಕ್ಷ್ಮಣನನ್ನು ಕುರಿತು ರಾಮನ ಪ್ರಶ್ನೆ.

**ರಾಮ:-** ಸುಮಿತ್ರಾಪುತ್ರ, ಈ ಸಾಗರ ಅಗಾಧ. ಅದರಲ್ಲಿಯೂ ತಿಮಿಂಗಿಲಗಳಿಂದ ತುಂಬಿಹೋಗಿದೆ ಈ ಹೆಗ್ಗಡಲಿನ ಒಡಲು. ಇದನ್ನು ದಾಟುವುದು ಹೇಗೆ? ಲಂಕೆಗೆ ಹೋಗುವುದು ಹೇಗೆ? ನನಗಂತೂ ತಿಳಿಯಲೊಲ್ಲದು.

**ಲಕ್ಷ್ಮಣ:-** ಅಣ್ಣ, ನೀನು ಸಾಮಾನ್ಯ ಮಾನವನೇ? ಪುರಾತನನಾದ ಪುರುಷೋತ್ತಮ. ಪುರಾಣಗಳೆಲ್ಲ ನಿನ್ನದೇ ಪ್ರತಿಪಾದನೆ. ದೇವತೆಗಳಿಗೆಲ್ಲ ನೀನೇ ಮೂಲ ಕಾರಣ. ಆದರೂ ನೀನು ನನ್ನನ್ನು ಕೇಳುತ್ತಲಿರುವದರಿಂದ ನಾನು ನಿನಗೆ ಒಂದು ದಾರಿಯನ್ನು ಹೇಳುತ್ತೇನೆ. ಇಲ್ಲಿಯೇ ಒಂದು ನಡುಗಡ್ಡೆಯಲ್ಲಿ ಬಕದಾಲ್ಭ್ಯ ಎಂಬ ಮುನಿ ಇರುತ್ತಾನೆ. ಇಲ್ಲಿಂದ ಅರ್ಧ ಯೋಜನೆದಲ್ಲಿಯೇ ಅವನ ಆಶ್ರಮ. ಅಲ್ಲಿ ಬ್ರಹ್ಮವನ್ನು ಅರಿತ ಬ್ರಹ್ಮಿಷ್ಠರು ಹಲವಾರು ಜನ. ನೀನು ಅಲ್ಲಿಗೆ ಹೋಗು. ಆ ಹಿರಿಯ ಋಷಿಪುಂಗವನನ್ನು ಕೇಳು.

ಲಕ್ಷ್ಮಣನ ಮಾತು ಹಿಡಿಸಿತು ರಾಮಭದ್ರನಿಗೆ. ಅವನು ಬಕದಾಲ್ಭ್ಯ ಮುನಿ ಇದ್ದಲ್ಲಿಗೆ ತೆರಳಿದ ಅವನಿಗೆ ತಲೆಬಾಗಿ ನಮಿಸಿದ. (ಲೋಕ ಶಿಕ್ಷಣಕ್ಕಾಗಿ) ಆ ಮಹಾಮುನಿಗೆ ಗೊತ್ತು ಈ ರಾಮ ಎಂದರೆ ಪುರಾಣ ಪುರುಷೋತ್ತಮ ಎಂದು. ಇವನು ಮನುಷ್ಯನಲ್ಲ ಸಾಕ್ಷಾತ್ ದೇವಾಧಿ

ದೇವ. ಯಾವುದೋ ಒಂದು ಕಾರಣಕ್ಕಾಗಿ ಮಾನವ ದೇಹ ತಳೆದಿದ್ದಾನೆ ಎಂದು. ಅಂಥ ಪ್ರಭು ಪರಮೇಶ್ವರ ತನ್ನ ಪರ್ಣಕುಟೀರದವರೆಗೆ ನಡೆದು ಬಂದದ್ದು ಅವನಿಗೆ ತನ್ನ ಅಹೋಭಾಗ್ಯ ಎನಿಸಿತು. ಬಂದಕಾರಣ ಏನು ಎಂದು ಬೆಸಗೊಂಡ ಆ ಮಹಾಮುನಿ ಶ್ರೀರಾಮನನ್ನು.

**ರಾಮ:-** ನಾನು ರಾವಣನ ರಾಜಧಾನಿಯಾದ ಲಂಕೆಯನ್ನೂ ಅಲ್ಲಿ ಇರುವ ರಾಕ್ಷಸರನ್ನೂ ಗೆಲ್ಲಲು ಬಂದಿದ್ದೇನೆ. ಅಪಾರ ಕಪಿಸೇನೆಯನ್ನು ನನ್ನೊಡನೆ ತಂದಿದ್ದೇನೆ. ಈಗ ಈ ಕಡಲಿನ ತಡಿಯಲ್ಲಿ ತಂಗಿದ್ದೇನೆ. ಈಗ ಈ ಅಪಾರವಾದ ಸಮುದ್ರವನ್ನು ನಿಮ್ಮ ಪ್ರಸಾದದಿಂದ ನಾನು ದಾಟಬೇಕಾಗಿದೆ. ಇದಕ್ಕೆ ಯಾವುದಾದರೂ ಒಂದು ಉಪಾಯವನ್ನು ಹೇಳಿರಿ. ಆ ಉಪಾಯವನ್ನು ಅರಿಯಲಿಕ್ಕಾಗಿಯೇ ನಾನು ಈಗ ನಿಮ್ಮ ಆಶ್ರಮಕ್ಕೆ ಬಂದದ್ದು.

**ಬಕದಾಲ್ಭ್ಯ:-** ರಾಮ, ನೀನು ಲಂಕೆಯನ್ನು ನಿನ್ನ ಅಂಕಿತದಲ್ಲಿ ತೆಗೆದುಕೊಂಡು ರಾಕ್ಷಸರನ್ನು ಗೆದ್ದು ವಿಜಯಶಾಲಿಯಾಗಿ ಕೀರ್ತಿಯನ್ನು ಪಡೆಯಲು ಒಂದು ಉತ್ತಮವಾದ ವ್ರತವನ್ನು ಹೇಳುತ್ತೇನೆ ಕೇಳು. ಈ ವ್ರತಾನುಷ್ಠಾನದ ಪ್ರಭಾವದಿಂದ ನೀನು ಶಂಕೆಯಿಲ್ಲದೇ ದಾಟುವೆ ಈ ಶರಧಿಯನ್ನು. ಫಾಲ್ಗುಣ ಕೃಷ್ಣಪಕ್ಷದಲ್ಲಿ ಬರುವ ವಿಜಯಾ ಎಂಬ ಏಕಾದಶಿ ವ್ರತವನ್ನು ನೀನು ಅನುಷ್ಠಾನ ಮಾಡು. ಅದರಿಂದ ನಿನಗೆ ವಿಜಯ ನಿಶ್ಚಿತ. ಇದರ ವಿಧಿಯನ್ನು ಹೇಳುತ್ತೇನೆ ಕೇಳು.

ಫಾಲ್ಗುಣ ಕೃಷ್ಣಪಕ್ಷದ ದಶಮಿ ದಿವಸ ಬಂಗಾರ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಕೊಡವನ್ನು ಮಾಡಿಸಿ, ಅದರಲ್ಲಿ ನೀರು ತುಂಬಿ, ಚಿಗುರೆಲೆಗಳನ್ನು ಹಾಕಿ, ಅಲಂಕರಿಸಿ ಕಲಶ ಸ್ಥಾಪನೆಯನ್ನು ಮಾಡಬೇಕು. ಸಪ್ತಧಾನ್ಯಗಳನ್ನು ಆ ಕಲಶದ ಕೆಳಗೆ ಹಾಕಬೇಕು. ಅದರ ಮೇಲೆ ಒಂದು ತಟ್ಟೆಯಲ್ಲಿ ಅಕ್ಕಿಯನ್ನು ಹಾಕಿ ಅದರ ಮಧ್ಯದಲ್ಲಿ ಬಂಗಾರದ ನಾರಾಯಣನ ಮೂರ್ತಿಯನ್ನು ಸ್ಥಾಪಿಸಬೇಕು. ಏಕಾದಶಿ ದಿನ ಪ್ರಾತಃಸ್ನಾನ ಮಾಡಿ ಆ ಕಲಶವನ್ನು ಕಂಠಮಾಲ್ಯ, ಅನುಲೇಪನ, ಅಲಂಕಾರಗಳಿಂದ ಶೃಂಗರಿಸಬೇಕು. ತೆಂಗಿನಕಾಯಿಯನ್ನೂ ಪೂಗೀ ಫಲವನ್ನೂ ದೇವರ ಪಕ್ಕದಲ್ಲಿ ಇಟ್ಟು ಧೂಪದೀಪ ನೈವೇದ್ಯಾದಿಗಳಿಂದ ಭಗವತ್ಪೂಜೆಯನ್ನು ಮಾಡಬೇಕು. ಅಂದು ಪೂರ್ಣ ಉಪವಾಸ ಮಾಡಿ ರಾತ್ರಿ ಜಾಗರ ಮಾಡಬೇಕು. ಜಾಗರದಲ್ಲಿ ದೇವರ ಎದುರು ಭಾಗವತಾದಿ ಹರಿಕಥೆಗಳನ್ನು ಹೇಳಿಸಬೇಕು. ದೇವರ ಎದುರು ತುಪ್ಪದ ನಂದಾದೀಪವನ್ನು ಬೆಳಗಿಸಬೇಕು. ದ್ವಾದಶಿ ದಿನ ಸೂರ್ಯೋದಯ ಕಾಲದಲ್ಲಿ ದೇವರ ಪೂಜೆ ಮಾಡಿ ಆ ಪೂರ್ಣ ಕುಂಭವನ್ನು ನದೀ ತಟಾಕ ಅಥವಾ ಸರೋವರದ ದಂಡೆಗೆ ಒಯ್ದು ಅಲ್ಲಿ ಸ್ಥಾಪಿಸಿ, ಪೂಜೆ ಮಾಡಿ ಆ ಕೊಡವನ್ನೂ, ಆ ಚಿನ್ನದ ದೇವರ ಮೂರ್ತಿಯನ್ನೂ, ವೇದ ಪಾರಂಗತರಾದ ವಿದ್ವಾಂಸರಿಗೆ ದಾನಕೊಡಬೇಕು. ಇದಲ್ಲದೇ ಬೇರೆ ಬೇರೆ ದಾನಗಳನ್ನು ನೀಡಬೇಕು. ಈ ವಿಧಿಯಿಂದ ರಾಮನೇ, ನಿನಗೆ ವಿಜಯವು ಪ್ರಾಪ್ತವಾಗುವದು.

ಭಕದಾಲ್ಭ್ಯ ಮುನಿಯ ಈ ಸಲಹೆಯಂತೆ ಶ್ರೀರಾಮಚಂದ್ರ ಆಚರಿಸಿದ ಆ ವಿಜಯಾ ಏಕಾದಶಿ ವ್ರತವನ್ನು, ಅದರಿಂದ ಆ ರಘುನಂದನನಿಗೆ ವಿಜಯವು ಪ್ರಾಪ್ತವಾಯಿತು. ಲಂಕೆಯ ಗೆಲವು, ರಾವಣನ ವಧೆ, ಸೀತೆಯ ಪ್ರಾಪ್ತಿ ಮೂರೂ ಈ ವಿಜಯಾ ಏಕಾದಶಿಯ ವ್ರತದ ಪ್ರಭಾವದಿಂದ ಶ್ರೀರಾಮನಿಗೆ ಪ್ರಾಪ್ತವಾದವು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಫಾಲ್ಗುಣ ಕೃಷ್ಣಪಕ್ಷದ ವಿಜಯಾ ಏಕಾದಶಿಯ ಮಾಹಾತ್ಮ್ಯ ಎಂಬ ನಲವತ್ತೈದನೇಯ ಅಧ್ಯಾಯ ಮುಗಿದುದು*

## ಫಾಲ್ಗುಣ ಶುಕ್ಲಪಕ್ಷದ ಏಕಾದಶಿಯ ಮಾಹಾತ್ಮ್ಯ | ಅಧ್ಯಾಯ - ೪೬

**ಧರ್ಮರಾಜ**:- ಫಾಲ್ಗುಣ ಶುಕ್ಲ ಪಕ್ಷದ ಏಕಾದಶಿಯ ಹೆಸರು ಏನು?

**ಶ್ರೀಕೃಷ್ಣ**:- ಪೂರ್ವಕಾಲದಲ್ಲಿ ಮಾಂಧಾತ ಮಹಾರಾಜ ವಶಿಷ್ಠರಿಗೆ ಪ್ರಶ್ನೆ ಮಾಡಿದಾಗ ವಶಿಷ್ಠರು ಅವನಿಗೆ ಅಮಲಕೀ ಏಕಾದಶಿಯ ವ್ರತವನ್ನು ಹೇಳಿದ್ದರು. ಅಮಲಿಕೀ ಏಕಾದಶಿಯ ದಿನ ಉಪವಾಸ ಮಾಡಿ ನೆಲ್ಲೀಗಿಡ ಇದ್ದಲ್ಲಿಗೆ ಹೋಗಿ ಅಲ್ಲಿ ಜಾಗರವನ್ನು ಮಾಡಬೇಕು. ಅದರಿಂದ ಸಾವಿರ ಹಸುಗಳನ್ನು ದಾನ ಮಾಡಿದ ಪುಣ್ಯಪ್ರಾಪ್ತಿ.

**ಮಾಂಧಾತ**:- ಪೂಜ್ಯರೇ, ಈ ಆಮಲಿಕೀ ಏಕಾದಶಿಯು ಎಂದು ಹುಟ್ಟಿತು? ಹೇಗೆ ಹುಟ್ಟಿತು? ಇದನ್ನೆಲ್ಲ ತಿಳಿಯಬೇಕೆಂದು ನನಗೆ ಪರಮ ಕುತೂಹಲ. ಇದನ್ನು ತಾವು ನಿರೂಪಿಸಿರಿ. ಇದು ಇಷ್ಟೇಕೆ ಪವಿತ್ರ? ಇಷ್ಟು ಪಾಪಗಳನ್ನು ಅದು ಹೇಗೆ ಪರಿಹರಿಸುವದು? ಅಂದು ನೆಲ್ಲಿಯ ಮರದ ಬುಡದಲ್ಲಿ ಜಾಗರ ಮಾಡಿದರೆ ಸಾವಿರ ಗೋದಾನ ಮಾಡಿದ ಫಲ ಹೇಗೆ ಬರುವದು?

**ವಶಿಷ್ಠ**:- ಈ ಭೂಲೋಕದಲ್ಲಿ ನೆಲ್ಲಿಯ ಮಹಾವೃಕ್ಷವು ಹೇಗೆ ಹುಟ್ಟಿತು ಎಂಬುದನ್ನು ಹೇಳುತ್ತೇನೆ ಕೇಳು. ಹಿಂದೆ ಸೃಷ್ಟಿಯ ಪೂರ್ವಕಾಲದಲ್ಲಿ ಈ ಪ್ರಪಂಚದ ತುಂಬ ಏಕಾರ್ಣವ ಸಾಗರ. ನೋಡಿದಲ್ಲೆಲ್ಲ ನೀರೇ ನೀರು. ಸ್ಥಾವರ ಜಂಗಮಾತ್ಮಕವಾದ ಸಂಸಾರವೆಲ್ಲವೂ ನೀರಿನಲ್ಲಿ ಮುಳುಗಿ ನಷ್ಟವಾಗಿದೆ. ದೇವತೆಗಳು, ದೈತ್ಯರು, ಹಾವು, ಹಕ್ಕಿ, ಎಲ್ಲ ಪ್ರಾಣಿಗಳು ನಷ್ಟ. ಆಗ ದೇವಾಧಿದೇವನಾದ ಶ್ರೀಹರಿಯು ತನ್ನ ಸ್ಥಾನದಲ್ಲಿ ವಿರಾಜಮಾನ. ಬಹುಕಾಲದ ಅನಂತರ ಆ ಭಗವಂತ ತನ್ನ ಯೋಗ ಮುದ್ರೆಯಿಂದ ಎಚ್ಚತ್ತ. ಅವನು ತನ್ನ ಬ್ರಾಹ್ಮ ಮುಖದಿಂದ ಉಗುಳಿದಾಗ ಒಂದು ಹನಿ ನೆಲದ ಮೇಲೆ ಬಿದ್ದಿತು. ಆ ಬಿಂದುವಿನಿಂದಲೇ ನೆಲ್ಲೀಗಿಡವು ಹುಟ್ಟಿತು. ಸ್ವಲ್ಪ ಸಮಯದಲ್ಲಿ ಅದು ಶಾಖೋಪಶಾಖೆಯಾಗಿ ಬೆಳೆದು ಫಲಭಾರದಿಂದ ಬಾಗಿ ತೂಗಾಡತೊಡಗಿತು. ಎಲ್ಲ ವೃಕ್ಷಗಳಲ್ಲಿ ಈ ನೆಲ್ಲಿಮರವೇ ಬ್ರಹ್ಮನಿರ್ಮಿತವಾದ ಪ್ರಪ್ರಥಮ ಮಹಾವೃಕ್ಷ. ಅನಂತರ ಹರಿಯ ಆಜ್ಞೆಯಿಂದ ಈ ಚರಾಚರ ಪ್ರಪಂಚವನ್ನೆಲ್ಲ ಸೃಷ್ಟಿಸಿದ ಆ ಚತುರ್ಮುಖ. ಆ ವಾಣೀಪತಿಯಿಂದ ಸೃಷ್ಟರಾದ ಎಲ್ಲ ದೇವಾಧಿದೇವತೆಗಳೂ ಹರಿಪ್ರಿಯವಾದ ಆ ಧಾತ್ರೀವೃಕ್ಷ ಇದ್ದಲ್ಲಿಗೆ ಬಂದರು. ಇದು ಯಾವ ಮರ ಎಂಬುದೇ ಅವರಿಗೆ ತಿಳಿಯದಂತಾಯಿತು. ಕೌತುಕಾಕ್ರಾಂತರಾಗಿ ಅವರೆಲ್ಲರೂ ಆ ಮಹಾಮರವನ್ನು ನಿರುಕಿಸುತ್ತ ನಿಂತುಕೊಂಡಾಗ ಒಮ್ಮೆಲೇ ಆಕಾಶವಾಣಿ ಆಯಿತು - ''ಇದು ಅಮಲಿಕೀ ಎಂಬ ಮರ. ಇದೊಂದು ವೈಷ್ಣವ ವೃಕ್ಷ. ಇದನ್ನು ನೆನೆದ ಮಾತ್ರಕ್ಕೆ ಗೋದಾನದ ಪುಣ್ಯ.

**ಆಮಲಕೀ ನಗೋ ಹ್ಯೇಷ ಪ್ರವರೋ ವೈಷ್ಣವೋ ಮತಃ ।**
**ಅಸ್ಯ ಸಂಸ್ಮರಣಾದೇವ ಲಭೇದ್ಗೋದಾನಜಂ ಫಲಂ ॥**

**ಸ್ಪರ್ಶನಾ ದ್ವಿಗುಣಂ ಪುಣ್ಯಂ ತ್ರಿಗುಣಂ ಭಕ್ಷಣಾದ್ ತಥಾ ।**
**ತಸ್ಮಾತ್ ಸರ್ವ ಪ್ರಯತ್ನೇನ ಸೇವ್ಯಾ ಆಮಲಕೀ ಸದಾ ॥**

ವೃಕ್ಷಗಳಲ್ಲಿ ಶ್ರೇಷ್ಠ ಈ ನೆಲ್ಲೀ ಮರ. ಇದಕ್ಕೆ 'ಆಮಲಕೀ' ಎಂದು ಹೆಸರು. ವಿಷ್ಣುವಿಗೆ ಇದು ಪರಮ ಪ್ರೀತ್ಯಾಸ್ಪದ. ಇದರ ಸ್ಮರಣದಿಂದ ಗೋದಾನ ಮಾಡಿದಷ್ಟು ಪುಣ್ಯ. ಇದನ್ನು ಸ್ಪರ್ಶಮಾಡಿದರೆ ಆ ಗೋದಾನದ ಎರಡು ಪಟ್ಟು ಪುಣ್ಯ. ಅದನ್ನು ಭಕ್ಷಣ ಮಾಡಿದರೆ ಮೂರು ಪಟ್ಟು. ಆದ್ದರಿಂದ ಆಮಲಕೀ ವೃಕ್ಷವನ್ನು ಸರ್ವಪ್ರಯತ್ನದಿಂದಲೂ ಸೇವಿಸಬೇಕು. ಈ ಗಿಡದ ಬುಡದಲ್ಲಿ ವಿಷ್ಣುವಿನ ಸನ್ನಿಧಾನ. ತುದಿಯಲ್ಲಿ ಬ್ರಹ್ಮನ ಆವಾಸ. ಮಧ್ಯದಲ್ಲಿ ರುದ್ರದೇವರ ಸ್ಥಿತಿ. ಟೊಂಗೆಗಳಲ್ಲಿ ಎಲ್ಲ ಮುನಿಗಳ ವಾಸ. ರೆಂಬೆ ಕೊಂಬೆಗಳಲ್ಲಿ ಎಲ್ಲ ದೇವತೆಗಳ ಸನ್ನಿಧಿ. ಈ ಮರದ ಎಲೆಗಳಲ್ಲಿ ಕೂಡ ದೇವತಾ ಸನ್ನಿಧಾನ. ಇದರ ಎಲ್ಲ ಹಣ್ಣುಕಾಯಿಗಳಲ್ಲಿ ಪ್ರಜಾಪತಿಗಳ ಸಾನ್ನಿಧ್ಯ ಒಟ್ಟಾರೆ ಈ ಧಾತ್ರೀ ವೃಕ್ಷವು ಸರ್ವದೇವತಾಮಯ. ಆದ್ದರಿಂದ ಹರಿಭಕ್ತರಾದವರು ಇದನ್ನು ಯಾವಾಗಲೂ ಪೂಜಿಸಬೇಕು.''

ಈ ಆಕಾಶವಾಣಿಯ ಆಕಸ್ಮಿಕ ಆದೇಶವನ್ನು ಕೇಳಿ ಋಷಿಗಳು ಪ್ರಶ್ನಿಸಿದರು. ಆ ಅಶರೀರ ಪುರುಷನನ್ನು ಕುರಿತು.

**ಋಷಿಗಳು:-** ನೀನು ಯಾರು? ನೀನು ಯಾವುದಾದರೂ ದೇವತೆಯೋ, ಅಥವಾ ಬೇರೊಬ್ಬನೋ? ಇದ್ದುದನ್ನು ಯಥಾರ್ಥವಾಗಿ ಹೇಳು.

**ಅಶರೀರವಾಣಿ :-** ನಾನು ಸಾಕ್ಷಾತ್ ಸನಾತನನಾದ ಮಹಾವಿಷ್ಣು. ಸರ್ವ ಪ್ರಾಣಿಗಳಿಗೂ ಕರ್ತಾ. ಸರ್ವಲೋಕಗಳ ಸೃಷ್ಟಾ ಎಂಥ ಜ್ಞಾನಿಯೂ ತನ್ನ ಚರ್ಮಚಕ್ಷುಸ್ಸಿನಿಂದ ನನ್ನನ್ನು ನೋಡಲಾರ.

ಭಗವಂತನ ಈ ಮಾತನ್ನು ಕೇಳಿ ಎಲ್ಲ ಬ್ರಹ್ಮಪುತ್ರರು ಭಕ್ತಿಯಿಂದ ಅವನನ್ನು ಸ್ತೋತ್ರ ಮಾಡಿದರು.

**ನಮೋ ಭೂತಾತ್ಮ ಭೂತಾಯ ಆತ್ಮನೇ ಪರಮಾತ್ಮನೇ ।**
**ಅಚ್ಯುತಾಯ ನಮೋ ನಿತ್ಯಂ ಅನಂತಾಯ ನಮೋನಮಃ ॥**
**ದಾಮೋದರಾಯ ಕವಯೇ ಯಜ್ಞೇಶಾಯ ನಮೋನಮಃ ।**

ಋಷಿಪುಂಗವರ ಭಕ್ತಿಭಾವ ಭರಿತವಾದ ಈ ಸ್ತೋತ್ರಥಿಂದ ಪರಿತುಷ್ಟನಾದ ಆ ಪರಮಾತ್ಮ. ಆ ಮಹರ್ಷಿಯನ್ನು ಕೇಳಿದ - ''ನಿಮಗೆ ಅಭೀಷ್ಟವಾದ ಯಾವ ವರವನ್ನು ನಾನು ನೀಡಲಿ'' ಎಂದು.

**ಋಷಿಗಳು :-** ಭಗವನ್, ನೀನು ನಮ್ಮ ಮೇಲೆ ನಿಜವಾಗಿಯೂ ಪ್ರೀತ ಪ್ರಸನ್ನನಾಗಿದ್ದರೆ ನಮಗೆ ಸ್ವರ್ಗ ಹಾಗೂ ಅಪವರ್ಗ (ಮೋಕ್ಷ)ಗಳನ್ನು ನೀಡುವ ಶ್ರೇಷ್ಠವಾದ ವ್ರತವನ್ನು ಹೇಳು. ಅದರಿಂದ ನಮಗೆ ಈ ಲೋಕದಲ್ಲಿ ಧನ ಧಾನ್ಯ ಸಮೃದ್ಧಿ. ಪರಲೋಕದಲ್ಲಿ ಪುಣ್ಯಪ್ರಾಪ್ತಿ ಎರಡೂ ಆಗಬೇಕು. ಅಲ್ಪಾಯಾಸದಿಂದ ಮಹಾಫಲವನ್ನು ನೀಡುವ ಉತ್ತಮವಾದ ಒಂದು ವ್ರತವನ್ನು ಹೇಳು.

**ವಿಷ್ಣು:-** ಫಾಲ್ಗುಣ ಶುಕ್ಲಪಕ್ಷದಲ್ಲಿ ದ್ವಾದಶೀ ದಿನ ಪುಷ್ಯ ನಕ್ಷತ್ರ ಯೋಗವಿದ್ದರೆ ಅದಕ್ಕೆ ಆಮಲಿಕೀ ದ್ವಾದಶಿ ಎನ್ನುವರು. ಅದರ ಹಿಂದಿನ ದಿನ ಆಮಲಿಕೀ ಏಕಾದಶಿ ಎಂದು ಕರೆಯಲ್ಪಡುತ್ತದೆ. ಅಂದು ಏಕಾದಶಿಯ ದಿನ ಉಪವಾಸ ಮಾಡಿ ರಾತ್ರಿ ಜಾಗರವನ್ನು

ಮಾಡಬೇಕು. ಅಚ್ಯುತನನ್ನು ಭಕ್ತಿಯಿಂದ ಅರ್ಚಿಸಬೇಕು. ಇದು ಎಲ್ಲ ವ್ರತಗಳಲ್ಲಿ ಅತ್ಯುತ್ತಮವಾದ ವ್ರತ.

**ಋಷಿಗಳು:-** ಈ ವ್ರತದ ಆಚರಣದ ವಿಧಿ ಏನು? ವಿಧಾನ ಯಾವುದು? ಇದರ ಮಂತ್ರಗಳು ಯಾವುವು? ಪೂಜೆ, ಪುರಸ್ಕಾರ, ನಮಸ್ಕಾರ ದೇವತಾ ಮೊದಲಾದವುಗಳನ್ನೆಲ್ಲ ಹೇಳು. ಆಗ ಸ್ನಾನ ಮಾಡುವುದು ಹೇಗೆ? ದಾನ ಮಾಡುವುದು ಹೇಗೆ? ಪೂಜೆಯ ಪ್ರಕಾರ ಯಾವುದು? ಅರ್ಘ್ಯದ ಮಂತ್ರ ಯಾವುದು? ಇದೆಲ್ಲವನ್ನೂ ಯಥಾರ್ಥವಾಗಿ ಹೇಳು.

**ವಿಷ್ಣು :-** ಏಕಾದಶಿಯ ದಿನ ಶುದ್ಧ ಉಪವಾಸದ ಸಂಕಲ್ಪವನ್ನು ಮೊದಲು ಮಾಡಬೇಕು.

**ಏಕಾದಶ್ಯಾಂ ನಿರಾಹಾರ ಸ್ಥಿತ್ವಾ ಚೈವ ಪರೇಹನಿ ।**
**ಭೋಕ್ಷ್ಯೇಽಹಂ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥**

''ಏಕಾದಶಿ ನಿರಾಹಾರನಾಗಿದ್ದು ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ಪಾರಣೆ ಮಾಡುವೆನು. ನಾನು ನಿನಗೆ ಶರಣು. ಅಚ್ಯುತನೇ, ನನ್ನನ್ನು ರಕ್ಷಿಸು.'' ಎಂದು ಸಂಕಲ್ಪಿಸಿ ಪ್ರಾರ್ಥಿಸಬೇಕು. ಆ ದಿನ ಪತಿತರು, ಚೋರರು, ನಾಸ್ತಿಕರು, ದುರಾಚಾರಿಗಳು, ಧರ್ಮದ ದಾರಿ ಬಿಟ್ಟವರು ಮುಂತಾದ ಪಾಪಿಗಳ ಜೊತೆ ಮಾತನಾಡಬಾರದು. ನದಿ, ಸರೋವರ, ಬಾವಿ, ಕೊನೆಗೆ ಮನೆಯಲ್ಲಿ ಆದರೂ ವಿಧಿಪೂರ್ವಕವಾಗಿ ಸ್ನಾನ ಮಾಡಬೇಕು. ನದೀ ಸರೋವರಗಳಲ್ಲಿ ಮೊದಲು ಮೃತ್ತಿಕಾ ಸ್ನಾನವನ್ನು ಮಾಡಬೇಕು. ಆಗ

**ಅಶ್ವಕ್ರಾಂತೇ ರಥ ಕ್ರಾಂತೇ ವಿಷ್ಣು ಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥**

ಎಂಬ ಮಂತ್ರವನ್ನು ಉಚ್ಚರಿಸಿ ಮಣ್ಣನ್ನು ಮೈಗೆ ಲೇಪಿಸಿಕೊಂಡು ಅವಗಾಹನಗೈದು ಮುಣುಗುಹಾಕಬೇಕು.

**ತ್ವಮಂಬು ಸರ್ವಭೂತಾನಾಂ ಜೀವನಂ ತನು ರಕ್ಷಕಂ ।**
**ಸ್ವೇದಜೋದ್ಭಿಜ್ಯ ಜಾತೀನಾಂ ರಸಾನಾಂ ಪತಯೇ ನಮಃ ॥**

ಎಂಬ ಮಂತ್ರವನ್ನು ಹೇಳಿ ನೀರಿನಲ್ಲಿ ಅವಗಾಹನ ಸ್ಥಾನವನ್ನು ಮಾಡಬೇಕು. ಅನಂತರ ಪರಶುರಾಮ ದೇವರನ್ನು ಶಾಸ್ತ್ರೋಕ್ತ ರೀತಿಯಿಂದ ಪೂಜಿಸಬೇಕು. ಅದಕ್ಕಿಂತ ಮೊದಲು ಒಂದು ಮಾಸಿ ಅಥವಾ ಅರ್ಧ ಮಾಸಿ ತೂಕದ ಬಂಗಾರದಿಂದ ಪರಶುರಾಮ ದೇವತೆಯ ಪ್ರತಿಮೆಯನ್ನು ಮಾಡಿಸಬೇಕು. ಮತ್ತು ಪೂಜಾ ಹೋಮವನ್ನು ಮಾಡಿ ನೆಲ್ಲೀಗಿಡ ಇರುವಲ್ಲಿಗೆ ಎಲ್ಲ ಸಲಕರಣೆ ಉಪಕರಣಗಳನ್ನು ತೆಗೆದುಕೊಂಡು ಹೋಗಬೇಕು. ಆ ಧಾತ್ರೀ ವೃಕ್ಷದ ತಲದ ಪ್ರದೇಶವನ್ನೂ ಮತ್ತು ಸುತ್ತುಮುತ್ತಲಿನ ಜಾಗವನ್ನೂ ಕಸಗುಡಿಸಿ ಸ್ವಚ್ಛಮಾಡಿಸಬೇಕು. ಅನಂತರ ತೂತು ಇಲ್ಲದ ಒಂದು ಕೊಡದಲ್ಲಿ ಐದು ರತ್ನಗಳನ್ನು ಹಾಕಿ, ಹೂಮಾಲೆ ಗಂಧ ಚಂದನಗಳನ್ನು, ಲೇಪಿಸಿ ಬಗೆಬಗೆಯ ಹಾರಗಳನ್ನು ಕೊರಳಲ್ಲಿ ಹಾಕಿ ಅಲಂಕರಿಸಿ ಕಲಶಸ್ಥಾಪನೆ ಮಾಡಬೇಕು. ಆ ಪೂರ್ಣ ಕುಂಭದ ಮೇಲೆ ಭತ್ತರಳಿನಿಂದ ತುಂಬಿದ ಒಂದು ಹರವಾದ ಪಾತ್ರೆಯನ್ನು ಇರಿಸಬೇಕು. ಆ ಪಾತ್ರದ ಮೇಲೆ ನಟ್ಟನಡುವೆ ಪರಶುರಾಮನ ಚಿನ್ನದ ಮೂರ್ತಿಯನ್ನು

ಪ್ರತಿಷ್ಠಾಪಿಸಬೇಕು. ಮತ್ತು ಕೆಳಗೆ ಹೇಳಿದ ಮಂತ್ರದಿಂದ ಅಡಿಯಿಂದ ಮುಡಿಯವರೆಗೆ ಕೈಯಿಂದ ಸ್ಪರ್ಶಮಾಡಿ ಹೂ ಹಾಗೂ ತುಳಸೀ ದಳಗಳನ್ನು ಏರಿಸಿ ನಮಃ ಎಂಬ ಶಬ್ದವನ್ನು ಉಚ್ಚರಿಸುತ್ತ ಪೂಜೆ ಮಾಡಬೇಕು.

**'ವಿಶ್ವರೂಪಿಣೇ ನಮಃ'**
ಎಂದು ಮೊಣಕಾಲುಗಳ ಮೇಲೆ ಹೂ ತುಳಸಿ ಏರಿಸಿ ಪೂಜಿಸಬೇಕು.

**'ಉಗ್ರಾಯ ನಮಃ'**
ಎಂದು ಎರಡೂ ತೊಡೆಗಳನ್ನು ಪೂಜಸಬೇಕು.

**'ದಾಮೋದರಾಯ ನಮಃ ಕಟಿಂ ಪೂಜಯಾಮಿ'**
ಎಂದು ಸೊಂಟದ ಮೇಲೆ ತುಳಸಿಯನ್ನು ಏರಿಸಬೇಕು.

**'ಪದ್ಮನಾಭಾಯ ನಮಃ ಉದರಂ ಪೂಜಯಾಮಿ । ಶ್ರೀ ವತ್ಸ ಧಾರಿಣೇ ನಮಃ'**
ಎಂದು ಎದೆಯನ್ನೂ

**'ಚಕ್ರಿಣೇ ನಮಃ ।'**
ಎಂದು ಎಡಗೈಯನ್ನೂ

**'ಗದಿನೇ ನಮಃ ।'**
ಎಂದು ಬಲಗೈಯನ್ನೂ

**'ವೈಕುಂಠಾಯ ನಮಃ ।'**
ಎಂದು ಮೂಗನ್ನೂ

**'ವಾಸುದೇವಾಯ ನಮಃ ।'**
ಎಂದು ಎರಡು ಕಣ್ಣುಗಳನ್ನೂ

**'ವಾಮನಾಯ ನಮಃ ।'**
ಎಂದು ಲಲಾಟವನ್ನೂ

**'ರಾಮಾಯ ನಮಃ ।'**
ಎಂದು ಹುಬ್ಬುಗಳನ್ನೂ

**'ಸರ್ವಾತ್ಮನೇ ನಮಃ ।'**
ಎಂದು ತಲೆಯನ್ನೂ ಹೂವು ಹಾಗೂ ತುಳಸಿಗಳನ್ನೂ ಏರಿಸಿ ಪೂಜೆ ಮಾಡಬೇಕು. ಅನಂತರ ದೇವರಿಗೆ

**''ನಮಸ್ತೇ ದೇವ ದೇವೇಶ, ಜಾಮದಗ್ನ್ಯ ನಮೋಸ್ತುತೇ ।**
**ಗ್ರಹಾಣಾರ್ಘ್ಯಮಿದಂ ದತ್ತ ಮಾಮಲಕ್ಯಾಯುತೋ ಹರ ॥''**
ಈ ಮಂತ್ರದಿಂದ ದೇವರಿಗೆ ಅರ್ಘ್ಯವನ್ನು ನೀಡಬೇಕು. ಅನಂತರ ವಿಷ್ಣು ಭಕ್ತರಿಂದ

ಕೂಡಿಕೊಂಡು ನೃತ್ಯ, ಗೀತ, ಮಂಗಳ ವಾದ್ಯ, ಧಾರ್ಮಿಕ ಪುರಾಣ, ಪ್ರವಚನಗಳಿಂದ ಜಾಗರವನ್ನು ಮಾಡಿ ಪ್ರಾತಃಕಾಲದಲ್ಲಿ ದೇವರಿಗೆ ಪೂಜೆ ಮಂಗಳಾರತಿಗಳನ್ನು ಮಾಡಬೇಕು. ಅನಂತರ ಆ ಭಗವಂತನ ಮೂರ್ತಿಗೂ ಹಾಗೂ ನೆಲ್ಲಿಯ ಮರಕ್ಕೂ ನೂರಾಎಂಟು ಅಥವಾ ಇಪ್ಪತ್ತೆಂಟು ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಬೇಕು. ಬಳಿಕ ಬ್ರಾಹ್ಮಣ ಭೋಜನವನ್ನು ಮಾಡಿಸಿ ಅವರಿಗೆ ಅಲ್ಲಿ ಸ್ಥಾಪನ ಮಾಡಿದ ಕಲಶವನ್ನೂ ಜೋಡು ವಸ್ತ್ರಗಳನ್ನೂ ಪಾದರಕ್ಷೆಯ ಜೋಡನ್ನೂ ''ಜಾಮದಗ್ನ್ಯಸ್ವರೂಪೇಣ ಪ್ರೀಯತಾಮ್ ಮಮ ಕೇಶವಃ ।'' ಎಂದು ನುಡಿದು ದಾನಕೊಡಬೇಕು. ಅನಂತರ ವಿಧಾನ ಪೂರ್ವಕವಾಗಿ ಬ್ರಾಹ್ಮಣ ಭೋಜನ ಮಾಡಿಸಿ ಬಳಿಕ ತನ್ನ ಇಷ್ಟಮಿತ್ರ ಕುಟುಂಬ ಪರಿವಾರದೊಂದಿಗೆ ತಾನು ಕೂಡ ಪಾರಣೆ ಮಾಡಬೇಕು.

ಈ ರೀತಿಯಾಗಿ ಈ 'ಆಮಲಿಕೀ' ಏಕಾದಶಿಯ ವ್ರತವನ್ನು ಫಾಲ್ಗುಣ ಶುಕ್ಲಪಕ್ಷದಲ್ಲಿ ಶಾಸ್ತ್ರೋಕ್ತರೀತಿಯಿಂದ ಮಾಡಿದರೆ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಹಾಗೂ ಸರ್ವ ದಾನಗಳನ್ನು ನೀಡಿದ ಪುಣ್ಯಗಳು ಪ್ರಾಪ್ತವಾಗುವವು. ಹೀಗೆ ಹೇಳಿ ಆ ಜಗದೀಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದ. ಆ ಭಗವಂತನ ಉಪದೇಶದಂತೆ ಆ ಎಲ್ಲ ಮುನಿಮಹರ್ಷಿಗಳು ಫಾಲ್ಗುಣ ಶುಕ್ಲಪಕ್ಷದಲ್ಲಿ ಉಪವಾಸ ಮಾಡಿ 'ಆಮಲಿಕೀ' ಏಕಾದಶೀ ವ್ರತವನ್ನು ಆಚರಿಸಿದರು. ಅದರಂತೆ ಧರ್ಮರಾಜ, ನೀನಾದರೂ ಕೂಡ ಸರ್ವಪಾಪ ಪ್ರಕ್ಷಾಲಕವಾದ ಈ ಅತ್ಯುತ್ತಮ ವ್ರತವನ್ನು ಆಚರಿಸು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಫಾಲ್ಗುಣ ಶುಕ್ಲಪಕ್ಷದ ಏಕಾದಶಿಯ ಮಾಹಾತ್ಮ್ಯ ಎಂಬ ನಲವತ್ತಾರನೇಯ ಅಧ್ಯಾಯ ಮುಗಿದುದು*



## ಚೈತ್ರ ಕೃಷ್ಣ ಪಕ್ಷದ ಪಾಪಮೋಚನೀ ಏಕಾದಶಿಯ ಪ್ರಭಾವ | ಅಧ್ಯಾಯ - ೪೭

**ಧರ್ಮರಾಜ:-** ಚೈತ್ರ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿ ಯಾವದು? ಅದರ ಹೆಸರು ಮಹಿಮೆ ವಿಧಾನಗಳನ್ನು ತಿಳಿಸು.

**ಕೃಷ್ಣ:-** ಹಿಂದೆ ಮಾಂಧಾತ ಚಕ್ರವರ್ತಿಗೆ ಲೋಮಶ ಮುನಿಗಳು ಈ ಏಕಾದಶಿಯ ಬಗೆಗೆ ಹೇಳಿದ್ದರು. ಅದನ್ನೇ ನಾನು ನಿನಗೆ ನಿರೂಪಿಸುತ್ತೇನೆ ಕೇಳು.

**ಮಾಂಧಾತ:-** ಚೈತ್ರ ಕೃಷ್ಣಪಕ್ಷದ ಏಕಾದಶಿಯ ವಿಧಿ ಫಲ ಪ್ರಯೋಜನಗಳನ್ನು ನನಗೆ ಬಿತ್ತರಿಸಿರಿ.

**ಲೋಮಶ:-** ಚೈತ್ರ ಕೃಷ್ಣಪಕ್ಷದ ಏಕಾದಶಿಗೆ ಪಾಪಮೋಚನೀ ಏಕಾದಶಿ ಎನ್ನುತ್ತಾರೆ. ಇದು ಉಪವಾಸ ಮಾಡಿದವರ ಪಿಶಾಚ ಜನ್ಮವನ್ನು ಅಂತ್ಯಗೊಳಿಸುತ್ತದೆ. ಈ ವಿಷಯದಲ್ಲಿ ಒಂದು ವಿಚಿತ್ರವಾದ ಬೋಧಪ್ರದ ಆಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವ ಕಾಲದಲ್ಲಿ ಚೈತ್ರರಥ ಎಂಬ ಸುಂದರವಾದ ಉಪವನದಲ್ಲಿ ದೇವೇಂದ್ರನೇ ಮೊದಲಾದ ದೇವತೆಗಳು ಗಂಧರ್ವ ಕನ್ಯೆಯರೊಂದಿಗೆ ಕ್ರೀಡಿಸುತ್ತಿದ್ದರು. ಆಗ ವಸಂತ ಮಾಸ. ಎಲ್ಲ ಕಡೆಗೂ ವಿಕಸಿತವಾದ ಪುಷ್ಪರಾಶಿಗಳ ಬಂಡನ್ನು ಉಂಡು ತುಂಬಿಗಳ ದಂಡು

ರಂಜನೀಯವಾಗಿ ಗೀತಗುಂಜಾರವವನ್ನು ಗೈಯ್ಯುತ್ತಿತ್ತು. ಹೀಗೆ ರಸಿಕರಾಜರಾದ ಸುರಪುರದ ಧುರೀಣರು ಸ್ವರ್ಗದ ಅಪ್ಸರೆಯರೊಂದಿಗೆ ಕಾವಕೇಲೀ ಲೀಲಾಲೋಲರಾದಾಗ ಆ ಸುಂದರ ಉದ್ಯಾನದ ಇನ್ನೊಂದು ಬದಿಯಲ್ಲಿ ಅನೇಕ ಮುನಿಮಹರ್ಷಿಗಳು ತಮ್ಮ ಸ್ವಾಧ್ಯಾಯ ತಪೋನುಷ್ಠಾನದಲ್ಲಿ ತಲ್ಲೀನರಾಗಿದ್ದರು. ಅವರಲ್ಲಿ ಮೇಧಾವಿ ಎಂಬ ತರುಣ ಋಷಿಯು ಅಲ್ಲಿ ತಪಿಸುತ್ತಿದ್ದ. ಬ್ರಹ್ಮಚಾರಿಯಾದ ಆ ತಪೋನಿಧಿಯನ್ನು ಕಂಡು ಆ ಅಮರಾವತಿಯ ತರಳೆಯರೆಲ್ಲರೂ ಆ ಮುನಿಯನ್ನು ಮರಳು ಮಾಡಬೇಕೆಂದು ಶೃಂಗಾರ ಚೇಷ್ಟೆಗಳನ್ನು ಪ್ರಾರಂಭಿಸಿದರು.

ಈ ಮೊದಲು ಚೈತ್ರರಥ ಉದ್ಯಾನದಲ್ಲಿ ಕುಳಿತು ಬ್ರಹ್ಮಚರ್ಯದಿಂದ ತಪಸ್ಸು ಮಾಡುವ ಆ ಮೇಧಾವಿ ಮುನಿಯ ಉಗ್ರವಾದ ವೈರಾಗ್ಯದ ಚರ್ಯೆಯನ್ನು ಕಂಡೇ ಎಲ್ಲ ಸ್ವರ್ಗದ ಲಲನೆಯರು ಬೆದರಿ ಇಷ್ಟುದಿನ ದೂರದೂರವೇ ಇರುತ್ತಿದ್ದರು. ಆ ಸುರಲೋಕ ಸುಂದರಿಯರಲ್ಲಿ ಮಂಜುಘೋಷಾ ಎಂಬ ಅಪ್ಸರೆಯು ರಂಭೆಗಿಂತ ರೂಪಿಸಿ, ರತಿಗಿಂತ ಚೆಲುವೆ, ಮಿಂಚಿಗಿಂತ ಚಂಚಲೆ, ಆದರೂ ಅವಳು ಮೇಧಾವಿ ಮುನಿಯ ಮನಃಸ್ಥೈರ್ಯಕ್ಕೆ ಬೆದರಿ ಮೂರು ಮೈಲು ದೂರೇ ಇದ್ದಳು. ಆದರೆ ಈಗ ವಂಸತಮಾಸ ಬಂದ ಬಳಿಕ ಸ್ವರ್ಗದಿಂದ ಅಲ್ಲಿಗೆ ನುಗ್ಗಿ ಬಂದ ತರಳೆಯರ ತಂಡದೊಂದಿಗೆ ಮಂಜುಘೋಷೆಯೂ ಕೂಡ ಮೇಧಾವಿ ಮುನಿಯ ಸಮೀಪದಲ್ಲಿ ಸುಳಿದಾಡಿದಳು. ತಂಬೂರಿಯ ತಂತಿಯನ್ನು ಮೀಟುತ್ತ ಮಧುರ ಕಂಠದಿಂದ ಗಾಯನಗೈದಳು. ತಾರುಣ್ಯದ ಕಾಂತಿಂಯಿದ ಮನ್ಮಥನಂತೆ ತೋರುವ ಆ ಮೇಧಾವಿ ಮುನಿಯ ತೇಜೋಭಾಸುರವಾದ ಮುಖಮಂಡಲವನ್ನು ಕಂಡು ಮಂಜುಘೋಷೆಯು ಮುಗ್ಧಳಾದಳು. ತನ್ನ ಬಗೆಬಗೆಯ ಹಾವಭಾವ ಹಾಗೂ ಬೆಡಗು ಬಿನ್ನಾಣಗಳಿಂದ ಮತ್ತು ಸುಮಧುರವಾದ ಸಂಗೀತ ಭಂಗಿಯಿಂದ ಆ ಮಹಾಮುನಿಯ ಮನಸ್ಸನ್ನು ಮೋಹಗೊಳಿಸಿದಳು. ಮಂಜುಘೋಷೆಯ ಮಧುರ ಮಂದಹಾಸ ಹಾಗೂ ಕಾಮಾಲಸ ಕಟಾಕ್ಷ ಬಾಣಗಳಿಂದ ಪೀಡಿತನಾದ ಆ ಮುನಿ ಅವಳ ಕೈವಶನಾದ. ಜಪ, ತಪ, ಅನುಷ್ಠಾನಗಳನ್ನೆಲ್ಲ ತೊರೆದ. ಧ್ಯಾನವನ್ನೂ ಮರೆತ. ಮಂಜುಘೋಷೆಯೊಂದಿಗೆ ಬಹುಕಾಲ ಆ ಮುನಿಯು ರಮಮಾಣನಾದ. ಅವನಿಗೆ ದಿನಗಳು ಉರುಳಿದ್ದು ತಿಳಿಯಲಿಲ್ಲ. ವರ್ಷಗಳು ಕಳೆದದ್ದು ಗೊತ್ತಾಗಲಿಲ್ಲ.

ಹೀಗೆ ಅನೇಕ ವರ್ಷಗಳ ಕಾಲ ಆ ಮೇಧಾವಿ ಮುನಿಯೊಂದಿಗೆ ವಾಸಿಸಿದ ಬಳಿಕ ಮಂಜುಘೋಷೆಯು ತನ್ನ ದೇವಲೋಕಕ್ಕೆ ಮರಳಿ ಹೋಗಬೇಕೆಂದು ಬಯಸಿ ಮುನಿಯ ಅಪ್ಪಣೆಯನ್ನು ಕೇಳಿದಳು. ಅದನ್ನು ಕೇಳಿ ಮೇಧಾವಿ ಮುನಿಯು ನುಡಿದ.

**ಮೇಧಾವಿಮುನಿ:-** ಸುಂದರಿ, ನೀನು ಇಂದೇ ಸಂಧ್ಯಾಕಾಲದಲ್ಲಿ ಬಂದಿರುವೆ. ಈಗಲೇ ಹೊರಟು ನಿಂತೆಯಾ? ಇಷ್ಟೇಕೆ ಅವಸರ? ಬೆಳಗಾಗುವ ವರೆಗೆ ಇಲ್ಲಿಯೇ ನಮ್ಮ ಆಶ್ರಮದಲ್ಲಿ ಇರು. ಎಂದು ಹೇಳಿದ.

ಮುನಿಯ ಈ ವಚನವನ್ನು ಕೇಳಿ ಮಂಜುಘೋಷೆಯು ಶಾಪದ ಹೆದರಿಕೆಯಿಂದ ಅಲ್ಲಿಯೇ ನಿಂತುಕೊಂಡಳು. ಹೀಗೆಯೇ ಅನೇಕ ವರ್ಷಗಳ ವರೆಗೆ ಮುನಿಯ ಕೋಪಶಾಪಗಳ ಭಯದಿಂದ ಹೆದರಿ ಆ ಸುರಲೋಕದ ಸುಂದರಿಯು ಆ ಋಷ್ಯಾಶ್ರಮದಲ್ಲಿಯೇ ನಿಲ್ಲಬೇಕಾಯಿತು. ಹೀಗೆ ಐವತ್ತೈದು ವರ್ಷ ಒಂಭತ್ತು ತಿಂಗಳು

ಕೂಡಿಕೊಂಡು ನೃತ್ಯ, ಗೀತ, ಮಂಗಳ ವಾದ್ಯ, ಧಾರ್ಮಿಕ ಪುರಾಣ, ಪ್ರವಚನಗಳಿಂದ ಜಾಗರವನ್ನು ಮಾಡಿ ಪ್ರಾತಃಕಾಲದಲ್ಲಿ ದೇವರಿಗೆ ಪೂಜೆ ಮಂಗಳಾರತಿಗಳನ್ನು ಮಾಡಬೇಕು. ಅನಂತರ ಆ ಭಗವಂತನ ಮೂರ್ತಿಗೂ ಹಾಗೂ ನೆಲ್ಲಿಯ ಮರಕ್ಕೂ ನೂರಾಎಂಟು ಅಥವಾ ಇಪ್ಪತ್ತೆಂಟು ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಬೇಕು. ಬಳಿಕ ಬ್ರಾಹ್ಮಣ ಭೋಜನವನ್ನು ಮಾಡಿಸಿ ಅವರಿಗೆ ಅಲ್ಲಿ ಸ್ಥಾಪನ ಮಾಡಿದ ಕಲಶವನ್ನೂ ಜೋಡು ವಸ್ತ್ರಗಳನ್ನೂ ಪಾದರಕ್ಷೆಯ ಜೋಡನ್ನೂ ''ಜಾಮದಗ್ನ್ಯಸ್ವರೂಪೇಣ ಪ್ರೀಯತಾಮ್ ಮಮ ಕೇಶವಃ।'' ಎಂದು ನುಡಿದು ದಾನಕೊಡಬೇಕು. ಅನಂತರ ವಿಧಾನ ಪೂರ್ವಕವಾಗಿ ಬ್ರಾಹ್ಮಣ ಭೋಜನ ಮಾಡಿಸಿ ಬಳಿಕ ತನ್ನ ಇಷ್ಟಮಿತ್ರ ಕುಟುಂಬ ಪರಿವಾರದೊಂದಿಗೆ ತಾನು ಕೂಡ ಪಾರಣೆ ಮಾಡಬೇಕು.

ಈ ರೀತಿಯಾಗಿ ಈ 'ಆಮಲಿಕೀ' ಏಕಾದಶಿಯ ವ್ರತವನ್ನು ಫಾಲ್ಗುಣ ಶುಕ್ಲಪಕ್ಷದಲ್ಲಿ ಶಾಸ್ತ್ರೋಕ್ತರೀತಿಯಿಂದ ಮಾಡಿದರೆ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಹಾಗೂ ಸರ್ವ ದಾನಗಳನ್ನು ನೀಡಿದ ಪುಣ್ಯಗಳು ಪ್ರಾಪ್ತವಾಗುವವು. ಹೀಗೆ ಹೇಳಿ ಆ ಜಗದೀಶ್ವರನು ಅಲ್ಲಿಯೇ ಅಂತರ್ಧಾನವನ್ನು ಹೊಂದಿದ. ಆ ಭಗವಂತನ ಉಪದೇಶದಂತೆ ಆ ಎಲ್ಲ ಮುನಿಮಹರ್ಷಿಗಳು ಫಾಲ್ಗುಣ ಶುಕ್ಲಪಕ್ಷದಲ್ಲಿ ಉಪವಾಸ ಮಾಡಿ 'ಆಮಲಿಕೀ' ಏಕಾದಶೀ ವ್ರತವನ್ನು ಆಚರಿಸಿದರು. ಅದರಂತೆ ಧರ್ಮರಾಜ, ನೀನಾದರೂ ಕೂಡ ಸರ್ವಪಾಪ ಪ್ರಕ್ಷಾಲಕವಾದ ಈ ಅತ್ಯುತ್ತಮ ವ್ರತವನ್ನು ಆಚರಿಸು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಫಾಲ್ಗುಣ ಶುಕ್ಲಪಕ್ಷದ ಏಕಾದಶಿಯ ಮಾಹಾತ್ಮ್ಯ ಎಂಬ ನಲವತ್ತಾರನೇಯ ಅಧ್ಯಾಯ ಮುಗಿದುದು*



## ಚೈತ್ರ ಕೃಷ್ಣ ಪಕ್ಷದ ಪಾಪಮೋಚಿನೀ ಏಕಾದಶಿಯ ಪ್ರಭಾವ | ಅಧ್ಯಾಯ - ೪೭

**ಧರ್ಮರಾಜ:-** ಚೈತ್ರ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿ ಯಾವದು? ಅದರ ಹೆಸರು ಮಹಿಮೆ ವಿಧಾನಗಳನ್ನು ತಿಳಿಸು.

**ಕೃಷ್ಣ:-** ಹಿಂದೆ ಮಾಂಧಾತ ಚಕ್ರವರ್ತಿಗೆ ಲೋಮಶ ಮುನಿಗಳು ಈ ಏಕಾದಶಿಯ ಬಗೆಗೆ ಹೇಳಿದ್ದರು. ಅದನ್ನೇ ನಾನು ನಿನಗೆ ನಿರೂಪಿಸುತ್ತೇನೆ ಕೇಳು.

**ಮಾಂಧಾತ:-** ಚೈತ್ರ ಕೃಷ್ಣಪಕ್ಷದ ಏಕಾದಶಿಯ ವಿಧಿ ಫಲ ಪ್ರಯೋಜನಗಳನ್ನು ನನಗೆ ಬಿತ್ತರಿಸಿರಿ.

**ಲೋಮಶ:-** ಚೈತ್ರ ಕೃಷ್ಣಪಕ್ಷದ ಏಕಾದಶಿಗೆ ಪಾಪಮೋಚಿನೀ ಏಕಾದಶಿ ಎನ್ನುತ್ತಾರೆ. ಇದು ಉಪವಾಸ ಮಾಡಿದವರ ಪಿಶಾಚ ಜನ್ಮವನ್ನು ಅಂತ್ಯಗೊಳಿಸುತ್ತದೆ. ಈ ವಿಷಯದಲ್ಲಿ ಒಂದು ವಿಚಿತ್ರವಾದ ಬೋಧಪ್ರದ ಅಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವ ಕಾಲದಲ್ಲಿ ಚೈತ್ರರಥ ಎಂಬ ಸುಂದರವಾದ ಉಪವನದಲ್ಲಿ ದೇವೇಂದ್ರನೇ ಮೊದಲಾದ ದೇವತೆಗಳು ಗಂಧರ್ವ ಕನ್ಯೆಯರೊಂದಿಗೆ ಕ್ರೀಡಿಸುತ್ತಿದ್ದರು. ಆಗ ವಸಂತ ಮಾಸ. ಎಲ್ಲ ಕಡೆಗೂ ವಿಕಸಿತವಾದ ಪುಷ್ಪರಾಶಿಗಳ ಬಂಡನ್ನು ಉಂಡು ತುಂಬಿಗಳ ದಂಡು

ರಂಜನೀಯವಾಗಿ ಗೀತಗುಂಜಾರವವನ್ನು ಗೈಯ್ಯುತ್ತಿತ್ತು. ಹೀಗೆ ರಸಿಕರಾಜರಾದ ಸುರಪುರದ ಧುರೀಣರು ಸ್ವರ್ಗದ ಅಪ್ಸರೆಯರೊಂದಿಗೆ ಕಾವಕೇಲೀ ಲೀಲಾಲೋಲರಾದಾಗ ಆ ಸುಂದರ ಉದ್ಯಾನದ ಇನ್ನೊಂದು ಬದಿಯಲ್ಲಿ ಅನೇಕ ಮುನಿಮಹರ್ಷಿಗಳು ತಮ್ಮ ಸ್ವಾಧ್ಯಾಯ ತಪೋನುಷ್ಠಾನದಲ್ಲಿ ತಲ್ಲೀನರಾಗಿದ್ದರು. ಅವರಲ್ಲಿ ಮೇಧಾವಿ ಎಂಬ ತರುಣ ಋಷಿಯು ಅಲ್ಲಿ ತಪಿಸುತ್ತಿದ್ದ. ಬ್ರಹ್ಮಚಾರಿಯಾದ ಆ ತಪೋನಿಧಿಯನ್ನು ಕಂಡು ಆ ಅಮರಾವತಿಯ ತರಳೆಯರೆಲ್ಲರೂ ಆ ಮುನಿಯನ್ನು ಮರಳು ಮಾಡಬೇಕೆಂದು ಶೃಂಗಾರ ಚೇಷ್ಟೆಗಳನ್ನು ಪ್ರಾರಂಭಿಸಿದರು.

ಈ ಮೊದಲು ಚೈತ್ರರಥ ಉದ್ಯಾನದಲ್ಲಿ ಕುಳಿತು ಬ್ರಹ್ಮಚರ್ಯದಿಂದ ತಪಸ್ಸು ಮಾಡುವ ಆ ಮೇಧಾವಿ ಮುನಿಯ ಉಗ್ರವಾದ ವೈರಾಗ್ಯದ ಚರ್ಯೆಯನ್ನು ಕಂಡೇ ಎಲ್ಲ ಸ್ವರ್ಗದ ಲಲನೆಯರು ಬೆದರಿ ಇಷ್ಟುದಿನ ದೂರದೂರವೇ ಇರುತ್ತಿದ್ದರು. ಆ ಸುರಲೋಕ ಸುಂದರಿಯರಲ್ಲಿ ಮಂಜುಘೋಷಾ ಎಂಬ ಅಪ್ಸರೆಯು ರಂಭೆಗಿಂತ ರೂಪಿಸಿ, ರತಿಗಿಂತ ಚೆಲುವೆ, ಮಿಂಚಿಗಿಂತ ಚಂಚಲೆ, ಆದರೂ ಅವಳು ಮೇಧಾವಿ ಮುನಿಯ ಮನಃಸ್ಥೈರ್ಯಕ್ಕೆ ಬೆದರಿ ಮೂರು ಮೈಲು ದೂರೇ ಇದ್ದಳು. ಆದರೆ ಈಗ ವಂಸತಮಾಸ ಬಂದ ಬಳಿಕ ಸ್ವರ್ಗದಿಂದ ಅಲ್ಲಿಗೆ ನುಗ್ಗಿ ಬಂದ ತರಳೆಯರ ತಂಡದೊಂದಿಗೆ ಮಂಜುಘೋಷೆಯೂ ಕೂಡ ಮೇಧಾವಿ ಮುನಿಯ ಸಮೀಪದಲ್ಲಿ ಸುಳಿದಾಡಿದಳು. ತಂಬೂರಿಯ ತಂತಿಯನ್ನು ಮೀಟುತ್ತ ಮಧುರ ಕಂಠದಿಂದ ಗಾಯನಗೈದಳು. ತಾರುಣ್ಯದ ಕಾಂತಿಯಿದ ಮನ್ಮಥನಂತೆ ತೋರುವ ಆ ಮೇಧಾವಿ ಮುನಿಯ ತೇಜೋಭಾಸುರವಾದ ಮುಖಮಂಡಲವನ್ನು ಕಂಡು ಮಂಜುಘೋಷೆಯು ಮುಗ್ಧಳಾದಳು. ತನ್ನ ಬಗೆಬಗೆಯ ಹಾವಭಾವ ಹಾಗೂ ಬೆಡಗು ಬಿನ್ನಾಣಗಳಿಂದ ಮತ್ತು ಸುಮಧುರವಾದ ಸಂಗೀತ ಭಂಗಿಯಿಂದ ಆ ಮಹಾಮುನಿಯ ಮನಸ್ಸನ್ನು ಮೋಹಗೊಳಿಸಿದಳು. ಮಂಜುಘೋಷೆಯ ಮಧುರ ಮಂದಹಾಸ ಹಾಗೂ ಕಾಮಾಲಸ ಕಟಾಕ್ಷ ಬಾಣಗಳಿಂದ ಪೀಡಿತನಾದ ಆ ಮುನಿ ಅವಳ ಕೈವಶನಾದ. ಜಪ, ತಪ, ಅನುಷ್ಠಾನಗಳನ್ನೆಲ್ಲ ತೊರೆದ. ಧ್ಯಾನವನ್ನೂ ಮರೆತ. ಮಂಜುಘೋಷೆಯೊಂದಿಗೆ ಬಹುಕಾಲ ಆ ಮುನಿಯು ರಮಮಾಣನಾದ. ಅವನಿಗೆ ದಿನಗಳು ಉರುಳಿದ್ದು ತಿಳಿಯಲಿಲ್ಲ. ವರ್ಷಗಳು ಕಳೆದದ್ದು ಗೊತ್ತಾಗಲಿಲ್ಲ.

ಹೀಗೆ ಅನೇಕ ವರ್ಷಗಳ ಕಾಲ ಆ ಮೇಧಾವಿ ಮುನಿಯೊಂದಿಗೆ ವಾಸಿಸಿದ ಬಳಿಕ ಮಂಜುಘೋಷೆಯು ತನ್ನ ದೇವಲೋಕಕ್ಕೆ ಮರಳಿ ಹೋಗಬೇಕೆಂದು ಬಯಸಿ ಮುನಿಯ ಅಪ್ಪಣೆಯನ್ನು ಕೇಳಿದಳು. ಅದನ್ನು ಕೇಳಿ ಮೇಧಾವಿ ಮುನಿಯು ನುಡಿದ.

**ಮೇಧಾವಿಮುನಿ:-** ಸುಂದರಿ, ನೀನು ಇಂದೇ ಸಂಧ್ಯಾಕಾಲದಲ್ಲಿ ಬಂದಿರುವೆ. ಈಗಲೇ ಹೊರಟು ನಿಂತೆಯಾ? ಇಷ್ಟೇಕೆ ಅವಸರ? ಬೆಳಗಾಗುವ ವರೆಗೆ ಇಲ್ಲಿಯೇ ನಮ್ಮ ಆಶ್ರಮದಲ್ಲಿ ಇರು. ಎಂದು ಹೇಳಿದ.

ಮುನಿಯ ಈ ವಚನವನ್ನು ಕೇಳಿ ಮಂಜುಘೋಷೆಯು ಶಾಪದ ಹೆದರಿಕೆಯಿಂದ ಅಲ್ಲಿಯೇ ನಿಂತುಕೊಂಡಳು. ಹೀಗೆಯೇ ಅನೇಕ ವರ್ಷಗಳ ವರೆಗೆ ಮುನಿಯ ಕೋಪಶಾಪಗಳ ಭಯದಿಂದ ಹೆದರಿ ಆ ಸುರಲೋಕದ ಸುಂದರಿಯು ಆ ಋಷ್ಯಾಶ್ರಮದಲ್ಲಿಯೇ ನಿಲ್ಲಬೇಕಾಯಿತು. ಹೀಗೆ ಐವತ್ತೈದು ವರ್ಷ ಒಂಭತ್ತು ತಿಂಗಳು

ಮೇಲೆ ಮೂರು ದಿನಗಳಷ್ಟು ಕಾಲವು ಅವಳಿಗೆ ಮುನಿಯೊಡನೆ ವಿಹಾರ ಸುಖವನ್ನು ಅನುಭವಿಸುವಲ್ಲಿಯೇ ಕಳೆದು ಹೋದವು. ಇಷ್ಟು ದೀರ್ಘಕಾಲದ ಅನಂತರ ಮತ್ತೆ ಮಂಜುಘೋಷೆಯು ಆ ಮೇಧಾವಿ ಮುನಿಯ ಬಳಿಗೆ ಬಂದು ತನಗೆ ಇಲ್ಲಿಂದ ತನ್ನ ಮನೆಗೆ ಹೋಗಲು ಅನುಮತಿ ಕೊಡಬೇಕು ಎಂದು ಕೇಳಿಕೊಂಡಳು.

**ಮೇಧಾವಿ:-** ನೀನು ಬಂದ ಬಳಿಕ ಇದೀಗ ಬೆಳಗಾಗಿದೆ. ನೀನು ಸಂಜೆಯಾಗುವವರೆಗೆ ಇಲ್ಲಿ ನಿಲ್ಲು. ನಾನು ಸಂಧ್ಯಾವಂದನವನ್ನು ಮುಗಿಸಿಕೊಂಡು ಬರುತ್ತೇನೆ.

ಮಹರ್ಷಿಯ ಈ ಮುಗ್ಧಮಾತುಗಳನ್ನು ಕೇಳಿ ನಗೆ ಬಂದಿತು ಆ ನಳಿನಾಕ್ಷಿಗೆ. ಅವಳು ತನ್ನ ಹವಳದುಟಿಯ ಮೇಲೆ ನಗೆಯ ಮುಗುಳನ್ನು ಅರಳಿಸಿ ಮಾತನಾಡಿದಳು.

**ಮಂಜುಘೋಷಾ:-** ವಿಪ್ರಶ್ರೇಷ್ಠರೆ, ನೀವು ಸಂಧ್ಯಾವಂದನೆ ಮಾಡದೇ ಎಷ್ಟೋ ವರ್ಷಗಳಾಗಿ ಹೋದವು. ನನ್ನ ಮೇಲೆ ಅನುಗ್ರಹವನ್ನು ಮಾಡಿ ಪ್ರೇಮ ಮತ್ತು ಕಾಮವಶರಾಗಿ ಎಷ್ಟು ಕಾಲವನ್ನು ಕಳೆದಿದ್ದೀರಿ ಎಂಬುದನ್ನು ಈಗಾದರೂ ಎಣಿಸಿ ನೋಡಿರಿ ಎಂದು ಬಿನ್ನವಿಸಿದಳು.

ಅವನ್ನು ಕೇಳಿ ಮುನಿಗೆ ಬಹಳ ಆಶ್ಚರ್ಯ ಎನಿಸಿತು. ತಾನು ಮಂಜುಘೋಷೆಯೊಡನೆ ಕಳೆದ ಕಾಲವನ್ನು ಲೆಕ್ಕ ಹಾಕಿದ. ಅಂದಿಗೆ ತಾನು ತಪೋನುಷ್ಠಾನವನ್ನು ಬಿಟ್ಟು ಪ್ರೇಮ ಜೀವನವನ್ನು ಪ್ರಾರಂಭಿಸಿ ಅಂದಿಗೆ ಐವತ್ತೇಳು ವರ್ಷಗಳಾಗಿದ್ದವು. ಬ್ರಹ್ಮಾಂಡ ಕೋಪ ಬಂದಿತು ಆ ಧರ್ಮಿಷ್ಠ ಮುನಿಗೆ. ತಾನು ಬಹು ವರ್ಷ ಕಷ್ಟಪಟ್ಟು ಸಂಪಾದಿಸಿದ ಪುಣ್ಯರಾಶಿಯನ್ನೆಲ್ಲ ಹಾಳುಮಾಡಲಿಕ್ಕಾಗಿಯೇ ಮಾರಿಯಾಗಿ ಈ ನಾರಿ ಬಂದಿದ್ದಾಳೆ ಎಂದು ಬಗೆದು ಅವನು ಆ ಮಂಜುಘೋಷೆಗೆ ಶಾಪ ಕೊಟ್ಟ.

**ಮುನಿ:-** ನಿನಗೆ ಧಿಕ್ಕಾರ ! ದುರಾಚಾರಿಯೆ, ನನ್ನ ತಪಸ್ಸನ್ನೆಲ್ಲ ನಾಶಮಾಡಿದೆ. ಪಾಪಿಷ್ಠಳೆ, ನನ್ನಂಥ ತಪಸ್ವಿ ಬ್ರಾಹ್ಮಣನನ್ನು ಮರಳು ಮಾಡಿ ತಪೋಭ್ರಷ್ಟನನ್ನಾಗಿ ಮಾಡಿದ್ದರಿಂದ ನೀನು ಪಿಶಾಚಿಯಾಗು.

ಆ ಮಹರ್ಷಿಯ ಶಾಪದಿಂದ ದಗ್ಧ ಮುಗ್ಧಳಾದ ಆ ಮಾನಿನಿಯು ವಿನಯದಿಂದ ಆ ಮುನಿಗೆ ವಂದಿಸಿ ಕೇಳಿಕೊಂಡಳು.

**ಮಂಜುಘೋಷಾ:-** ಮುನಿವರ್ಯರೆ, ನನ್ನ ಮೇಲೆ ಪ್ರಸನ್ನರಾಗಿರಿ. ನಿಮ್ಮ ಶಾಪವನ್ನು ಸೌಮ್ಯವನ್ನಾಗಿ ಮಾಡಿರಿ. ದೊಡ್ಡವರ ಜೊತೆಗೆ ಐದು ಹೆಜ್ಜೆಗಳನ್ನು ಇರಿಸಿದರೂ ಸಾಕು. ಸ್ಥಿರವಾದ ಸ್ನೇಹವು ಉಂಟಾಗುತ್ತದೆ ಎಂದು ಹಿರಿಯರ ಹೇಳಿಕೆ. ಅಂದಬಳಿಕ ನಾನು ನಿಮ್ಮ ಬಳಿಗೆ ಇಷ್ಟು ದೀರ್ಘಕಾಲ ಬಾಳುವೆಯನ್ನು ಮಾಡಿದ್ದೇನೆ. ನಿಮ್ಮ ಆಶೆ ಆಕಾಂಕ್ಷೆಗಳನ್ನು ಪೂರೈಸಿದ್ದೇನೆ. ನಿಮ್ಮ ಮನಸ್ಸನ್ನು ತಣಿಸಿದ್ದೇನೆ. ಈ ಕಾರಣಕ್ಕಾದರೂ ದಯವಿಟ್ಟು ನನ್ನ ಮೇಲೆ ಕರುಣೆತೋರಿರಿ.

**ಮುನಿ:-** ಭದ್ರೆ, ನಾನಾದರೂ ಏನು ಮಾಡಲಿ? ನಿನ್ನ ಸಂಗದಿಂದ ನನ್ನ ಎಷ್ಟು ವರ್ಷದ ತಪಸ್ಸು ನಷ್ಟವಾಗಿ ಹೋಯಿತು ! ಅದರಿಂದ ನನಗೆ ಕೋಪ ಬಂದಿತು. ಆ ನನ್ನ ಕೋಪವೇ ನಿನಗೆ ಶಾಪತಂದಿತು. ಆದರೂ ನಿನಗೆ ಒಂದು ಉಪಾಯವನ್ನು ಹೇಳುತ್ತೇನೆ. ಚೈತ್ರ ಕೃಷ್ಣಪಕ್ಷದ ಏಕಾದಶಿಯು ಎಲ್ಲ ಪಾಪಗಳನ್ನು ತೊಳೆದುಬಿಡುತ್ತದೆ. ಅದರಿಂದಲೇ

ಅದಕ್ಕೆ ಪಾಪಮೋಚನಿಕಾ ಎಂದು ಹೆಸರು ಬಂದಿದೆ. ಆ ಏಕಾದಶಿಯಂದು ನೀನು ಉಪವಾಸ ಮಾಡಿ ವಿಧಿಪೂರ್ವಕವಾಗಿ ಏಕಾದಶಿ ವ್ರತವನ್ನು ಅನುಷ್ಠಾನ ಮಾಡಿದರೆ ನಿನ್ನ ಪಿಶಾಚ ಭಾವವು ತಾನಾಗಿಯೇ ತೊಡೆದು ಹೋಗುವದು.

ಹೀಗೆ ಹೇಳಿ ಆ ಮೇಧಾವಿ ಮುನಿಯು ತನ್ನ ತಂದೆಯಾದ ಚ್ಯವನ ಋಷಿಗಳ ಬಳಿಗೆ ಹೋದ. ಅವನ ಮುಖವನ್ನು ನೋಡಿದ ಕೂಡಲೇ ಚ್ಯವನ ಋಷಿಗಳಿಗೆ ತಿಳಿದು ಹೋಯಿತು ಇವನ ತಪಭಂಗವಾಗಿದೆಯೆಂದು. ಮುಖ ನೋಡಿದ ಕೂಡಲೇ ಕೇಳಿದರು.

**ಚ್ಯವನ:-** ಮಗು, ಇದನ್ನೇನು ಮಾಡಿದೆ? ನಿನ್ನ ತಪಸ್ಸನ್ನೆಲ್ಲ ಏಕೆ ಹಾಳುಮಾಡಿಕೊಂಡೆ?

**ಮೇಧಾವಿ:-** ತಂದೆಯೆ, ನನ್ನ ಬುದ್ಧಿ ಹೋಯಿತು. ಕಾಲು ಜಾರಿತು. ಮನಸ್ಸು ಮಂಜುಘೋಷಾ ಎಂಬ ಅಪ್ಸರೆಗೆ ಸೋತಿತು. ಅವಳನ್ನು ಕೂಡಿದೆ. ಅನೇಕ ವರ್ಷಗಳ ಕಾಲ ಅವಳೊಡನೆ ಸರಸವಾಡಿದೆ. ನನ್ನ ಪುಣ್ಯರಾಶಿಯನ್ನು ಕಳೆದುಕೊಂಡೆ. ಪಾಪರಾಶಿಯನ್ನು ಬೆಳೆಸಿಕೊಂಡೆ. ಇದಕ್ಕೆ ಏನಾದರೂ ಪ್ರಾಯಶ್ಚಿತ್ತ ಉಂಟೆ? ಈ ನನ್ನ ಪಾಪದ ಮೊತ್ತವು ಕರಗಲು ಏನಾದರೂ ಉಪಾಯ ಇದ್ದರೆ ತಿಳಿಸಿರಿ.

**ಚ್ಯವನ:-** ಚೈತ್ರ ಮಾಸದ ಕೃಷ್ಣಪಕ್ಷದಲ್ಲಿ ಪಾಪಮೋಚಿನೀ ಏಕಾದಶಿಯ ದಿನ ಉಪವಾಸ, ಜಾಗರ, ಪಾರಣೆ ಮುಂತಾಗಿ ವಿಧಿಪೂರ್ವಕವಾಗಿ ವ್ರತವನ್ನು ಮಾಡಿದರೆ ಎಲ್ಲ ಪಾಪಸಂಚಯವು ತಾನಾಗಿಯೇ ಕ್ಷಯವನ್ನು ಹೊಂದುವದು.

ತಂದೆಯ ವಚನದಂತೆ ಆ ಮೇಧಾವಿ ಮುನಿಯು ಚೈತ್ರ ಕೃಷ್ಣ ಪಕ್ಷದಲ್ಲಿ ಪಾಪಮೋಚಿನೀ ವ್ರತವನ್ನು ಸಶಾಸ್ತ್ರವಾಗಿ ಪಾಲಿಸಿದ. ಅದರಿಂದ ಪಾಪವೆಲ್ಲವೂ ತಕ್ಷಣದಲ್ಲಿ ಪರಿಕ್ಷೀಣವಾಗಿ ಹೋಯಿತು. ಇತ್ತ ಅವನ ಪ್ರೇಯಸಿಯಾದ ಮಂಜು ಘೋಷೆಯೂ ಕೂಡ ಪಾಪಮೋಚಿನೀ ಏಕಾದಶೀ ವ್ರತವನ್ನು ಮಾಡಿ ಪಿಶಾಚಯೋನಿಯಿಂದ ಮುಕ್ತಳಾದಳು. ಮತ್ತು ದಿವ್ಯವಾದ ತನ್ನ ಮೊದಲಿನ ಅಪ್ಸರೆಯ ಕಾಂತಿ ಕಮನೀಯ ದೇಹವನ್ನು ಹೊಂದಿ ಸ್ವರ್ಗಲೋಕದಲ್ಲಿ ಅಂಗನಾಕುಲದ ಮಂಗಳ ಮುಕುಟಮಣಿಯಾಗಿ ಕಂಗೊಳಿಸಿದಳು.

**ಶ್ರೀಕೃಷ್ಣ:-** ಈ ಪಾಪಮೋಚಿನೀ ಏಕಾದಶಿಯನ್ನು ಮಾಡಿದವರೂ ಇದರ ಮಹಿಮೆಯನ್ನು ಕೇಳಿದವರೂ ಸರ್ವಪಾಪಗಳಿಂದ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಚೈತ್ರ ಕೃಷ್ಣ ಪಕ್ಷದ ಪಾಪಮೋಚಿನೀ ಏಕಾದಶಿಯ ಪ್ರಭಾವ ಎಂಬ ನಲವತ್ತೇಳನೇಯ ಅಧ್ಯಾಯ ಮುಗಿದುದು*

—o—

## ಚೈತ್ರ ಶುಕ್ಲಪಕ್ಷದ ಕಾಮದಾ ಏಕಾದಶಿಯ ಮಹಿಮೆ | ಅಧ್ಯಾಯ - ೪೮

**ಧರ್ಮರಾಜ:-** ವಾಸುದೇವ, ನಿನಗೆ ನನ್ನ ನಮಸ್ಕಾರಗಳು. ಚೈತ್ರಶುಕ್ಲ ಏಕಾದಶಿಯ ಹೆಸರು ಏನು?

**ಶ್ರೀ ಕೃಷ್ಣ:-** ಧರ್ಮರಾಜ, ಹಿಂದೆ ವಶಿಷ್ಠರು ದಿಲೀಪರಾಜನಿಗೆ ಹೇಳಿದ ಆ ಕಥಾಸಂದರ್ಭವನ್ನು ಹೇಳುತ್ತೇನೆ ಕೇಳು.

**ದಿಲೀಪ:-** ಗುರುಗಳೇ, ಚೈತ್ರ ಶುಕ್ಲಪಕ್ಷದಲ್ಲಿ ಯಾವ ಏಕಾದಶೀ ಬರುತ್ತದೆ?

**ವಶಿಷ್ಠ:-** ಚೈತ್ರ ಶುಕ್ಲಪಕ್ಷ ಏಕಾದಶಿಯನ್ನು ಕಾಮದಾ ಎಂದು ಕರೆಯುತ್ತಾರೆ. ಈ ವಿಷಯದಲ್ಲಿ ನಿನಗೆ ಹಿಂದಿನ ಒಂದು ಅಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವ ಕಾಲದಲ್ಲಿ ನಾಗಪುರ ಎಂಬ ನಗರದಲ್ಲಿ ಪುಂಡರೀಕನೇ ಮೊದಲಾದ ನಾಗರು ವಾಸಮಾಡುತ್ತಿದ್ದರು. ಅವರೆಲ್ಲರಿಗೂ ಪುಂಡರೀಕನೇ ರಾಜ. ಅನೇಕ ಗಂಧರ್ವರೂ ಅಪ್ಸರೆಯರೂ ಅವನ ಆಸ್ಥಾನದಲ್ಲಿ. ಲಲಿತ ಎಂಬ ಗಂಧರ್ವನು ಸಂಗೀತ ಕಾರ್ಯಕ್ರಮವನ್ನು ನಿರ್ದೇಶಿಸುವ ಗಾಯನ ಗುರುವಾಗಿದ್ದ. ಗಾನಗುರುವಾದ ಆ ಗಂಧರ್ವ ಒಳ್ಳೇ ರಸಿಕ ಪ್ರಾಣಿ. ಲಲಿತಾ ಎಂಬ ಅಪ್ಸರೆ ಅವನ ಮೆಚ್ಚಿನ ಮನದನ್ನೆ. ಇಬ್ಬರೂ ಗಾನತಾನ ಪ್ರಿಯರು. ರಾಗ ರಾಗಿಣಿಯರು. ಸುಸ್ವರ ಸಂಗೀತ ಸಮಾರಾಧನೆಯಲ್ಲಿ ಆಸಕ್ತರು. ರಾಗದಿಂದಲೇ ಅವರಿಬ್ಬರಲ್ಲಿಯೂ ಮೊದಲು ಅನುರಾಗವು ಅಂಕುರಿಸಿತು. ಆ ದಂಪತಿಗಳ ಹೃದಯಕ್ಕೆ ಶೃಂಗಾರ ಪ್ರೀತಿಯ ಬೇಸುಗೆ ಹಾಕಿತ್ತು. ಅದುದರಿಂದ ಅವರೀರ್ವರೂ ಹಗಲಿರುಳು ಬಗೆಬಗೆಯ ಸಂಗೀತ ನಾದಗಳ ತರಂಗಗಳಿಂದ ಪರಸ್ಪರರ ಅಂತರಂಗದಲ್ಲಿ ಅನುರಾಗದ ತರಂಗಗಳನ್ನು ಎಬ್ಬಿಸಿ ಸಂತಸದ ಸಾಗರದಲ್ಲಿ ಈಜಾಡುತ್ತಿದ್ದರು. ಲಲಿತನ ಹೃದಯದಲ್ಲಿ ಯಾವಾಗಲೂ ಲಲಿತೆಯದೇ ಧ್ಯಾನ. ಆ ಲಲಿತೆಯ ಆತ್ಮಕ್ಕೆ ಲಲಿತನದೇ ಧ್ಯಾನ. ಎತ್ತ ಇದ್ದರೂ ಇವನ ಚಿತ್ತ ಇವಳಿದ್ದಲ್ಲಿಯೇ, ಎಲ್ಲಿ ಹೋದರೂ ಅವನ ಮನಸ್ಸು ಇವಳಿದ್ದಲ್ಲಿಯೇ.

ಒಂದು ದಿನ ಪುಂಡರೀಕ ಮಹಾರಾಜನ ಆಸ್ಥಾನದಲ್ಲಿ ಲಲಿತನ ಸಂಗೀತ ಕಾರ್ಯಕ್ರಮ. ಅಂದು ಲಲಿತೆಯು ಅಲ್ಲಿಗೆ ಬಂದಿರಲಿಲ್ಲ. ಲಲಿತ ಒಬ್ಬನೇ ಅಲ್ಲಿ ನಿಂತು ತನ್ನ ಕಂಚಿನ ಕಂಠದಿಂದ ರಾಗಮಾಲಿಕೆಯನ್ನು ಪ್ರಾರಂಭಿಸಿದ್ದ. ಅವನ ಕಂಠ ರಾಜಸಭೆಯಲ್ಲಿ ಗಾನದ ಗಿರಡಿಗಳನ್ನು ಹೊರಡಿಸುತ್ತಿದ್ದರೂ ತಾನ ನಿತಾನಗಳನ್ನು ಹರಡುತ್ತಿದ್ದರೂ ಮನಸ್ಸು ಮಾತ್ರ ಲಲಿತೆಯನ್ನೇ ಧ್ಯಾನಿಸುತ್ತಿತ್ತು. ಲಲಿತೆಯಲ್ಲಿ ಚಿತ್ತವಿಟ್ಟು ಹಾಡತೊಡಗಿದಾಗ ಮಧ್ಯದಲ್ಲಿ ಸಂಗೀತದ ತಾಳ ಲಯಗಳು ತಪ್ಪಿಹೋದವು. ಅವನ ಈ ಸ್ಖಾಲಿತ್ಯವನ್ನು ಕಂಡುಹಿಡಿದ ಕರ್ಕಡ (ಕರ್ಕೋಟಕ) ಎಂಬ ನಾಗನು ಪುಂಡರೀಕ ರಾಜನಿಗೆ ಲಲಿತನ ಪ್ರಮಾದವನ್ನು ತಿಳಿಸಿದ. ತನ್ನ ಆಸ್ಥಾನದಲ್ಲಿ ಆಸ್ಥಾನ ಪಂಡಿತನಿಂದಲೇ ನಡೆದ ಈ ರಾಗ ಸ್ಖಲನವನ್ನು ಕಂಡು ಕ್ರೋಧತಪ್ತನಾದ ಆ ಮಹಾರಾಜ, ಮತ್ತು ಶಪಿಸಿದ.

**ಪುಂಡರೀಕ:-** ಕಾಮುಕನಾದ ಗಂಧರ್ವ, ನನ್ನ ಎದುರು ಹಾಡುವಾಗಲೂ ಮಡದಿಯನ್ನೇ ನೆನೆಸುತ್ತ ಸಂಗೀತದಲ್ಲಿ ಸ್ಖಲನವನ್ನುತೋರಿದೆ. ಇದು ಮಹಾಪ್ರಮಾದ. ನನಗೆ ಅಪಮಾನ. ಇದರಿಂದ ನೀನು ನರಮಾಂಸ ಭಕ್ಷಕನಾದ ರಾಕ್ಷಸನಾಗು.

ಪುಂಡರೀಕನ ಶಾಪದಿಂದ ತಕ್ಷಣದಲ್ಲಿಯೇ ಲಲಿತನಿಗೆ ಬಂದು ಬಿಟ್ಟಿತು ರಾಕ್ಷಸನ ರೂಪ. ಭಯಂಕರ ಆಕಾರ, ವಿಕಾರ ಮುಖ, ಅವಲಕ್ಷಣ ಕಣ್ಣು, ಹೊದರಿನಂಥ ಬಾಯಿ, ಒಂದು ಯೋಜನ ಉದ್ದವಾದ ತೋಳು, ಗುಡ್ಡದಂಥ ಗೋಣು ಇಂಥ ಅಕರಾಳ ವಿಕರಾಳವಾದ ಎಂಟು ಯೋಜನ ದೀರ್ಘವಾದ ಪತಿಯ ಈ ರಾಕ್ಷಸರೂಪವನ್ನು ನೋಡಿ ಲಲಿತೆಯು ಕೆಟ್ಟ ದನಿಯಿಂದ ಚೀರಿಕೊಂಡಳು. ಅಯ್ಯೋ ಎಲ್ಲಿ ಹೋಗಲಿ ಏನು ಮಾಡಲಿ ? ನನ್ನ ಪತಿಗೆ ಶಾಪದಿಂದ ಇಂಥ ಭಯಂಕರ ಈ ಶರೀರ ಬಂದುಬಿಟ್ಟಿತಲ್ಲ? ಎಂದು ಚಿಂತೆಯ ಸಂತಾಪದಿಂದ ಬೆಂದುಹೋದಳು ಆ ಸುಂದರಿ. ಹೀಗೆ ತನ್ನ ಪತಿ ಕ್ರೂರ ರಕ್ಕಸನಾದರೂ ಸತೀಮಣಿಯಾದ ಆ ಲಲಿತೆಯು ಪತಿಯ ಬೆನ್ನನ್ನು ಬಿಡಲಿಲ್ಲ. ಆ ಹುಂಬ ಶುಂಭ ರಕ್ಕಸನ ಬೆಂಬತ್ತಿ ಅನು ಹೋದಲ್ಲೆಲ್ಲ ಹೋದಳು. ತಿರುಗಿದಲ್ಲೆಲ್ಲ ತಿರುಗಿದಳು. ದುರ್ಗಮವಾದ ವನ ವೀಥಿಗಳಲ್ಲಿ ತಿರುಗಾಡಿದಳು. ನರಭಕ್ಷಕನಾದ ಆ ಪಾಪಿ ರಕ್ಕಸನು ಮನಬಂದಲ್ಲಿ ತಿರುಗಾಡಿ ಆಯಾಸಗೊಂಡು ರಾತ್ರಿ ನಿದ್ದೆಯಿಲ್ಲದೇ ಒದ್ದಾಡುತ್ತಿದ್ದ. ಅವನಿಗೆ ಹಗಲು ರಾತ್ರಿ ನಿದ್ದೆಯೇ ಇರಲಿಲ್ಲ. ಕಾಮರೂಪಿಯಾದ ಆ ರಾಕ್ಷಸನು ಹೋದಲ್ಲೆಲ್ಲ ಹೋಗಿ ನಡೆದಲ್ಲೆಲ್ಲ ನಡೆದು ಅವಳು ಅನುದಿನವೂ ದಮ್ಮನೇ ದಣಿದುಕೊಳ್ಳುತ್ತಿದ್ದಳು. ಅಳುತ್ತ ಅವನ ಹಿಂದೆ ಹಿಂದೆ ಅಡವಿ ಅಡವಿ ಅಲೆದಾಡುತ್ತಿದ್ದಳು.

ಒಂದು ದಿನ ಅವಳು ಗೊಂಡಾರಣ್ಯದಲ್ಲಿ ಅಲೆಯುತ್ತಿರುವಾಗ ಒಂದು ರಮಣೀಯವಾದ ಋಷ್ಯಾಶ್ರಮವು ಅವಳ ಕಣ್ಣಿಗೆ ಬಿದ್ದಿತು. ಆ ಏಕಾಂತ್ಯಾಶದಲ್ಲಿ ಮಂಡಿಸಿದ್ದರು ಓರ್ವ ಮಹಾಮಹರ್ಷಿ. ಲಲಿತೆಯು ಅಲ್ಲಿಗೆ ಹೋದಳು. ನಮಸ್ಕರಿಸಿದಳು ಆ ಮುನಿಪುಂಗವರ ಪಾದಪಲ್ಲವಗಳಿಗೆ. ಕೈ ಜೋಡಿಸಿಕೊಂಡು ನಿಂತಳು ಅವರ ಮುಂಭಾಗದಲ್ಲಿ ದುಃಖತಪ್ತಳಾದ ಅವಳನ್ನು ಕಂಡು ಮುನಿಗಳ ಹೃದಯವು ಕರಗಿತು. ಅವರು ಲಲಿತೆಯನ್ನು ಕುರಿತು ಮಾತನಾಡಿದರು.

**ಮುನಿ:-** ತಂಗಿ, ನೀನು ಯಾರು? ನೀನು ಇಲ್ಲಿಗೆ ಏಕೆ ಬಂದಿರುತ್ತಿ? ಎಲ್ಲಿಂದ ಬಂದಿರುತ್ತಿ? ಇದೆಲ್ಲವನ್ನು ನನ್ನ ಮುಂದೆ ಹೇಳು.

**ಲಲಿತಾ:-** ವೀರಧನ್ವ ಎಂಬ ಗಂಧರ್ವನ ಮಗಳು ನಾನು. ಲಲಿತಾ ಎಂದು ನನ್ನ ಹೆಸರು. ನಾನು ಇಲ್ಲಿಗೆ ಬಂದದ್ದು ನನ್ನ ಪತಿಯ ಸಲುವಾಗಿ. ನನ್ನ ಗಂಡನು ತಾನು ಮಾಡಿದ ಘೋರ ಪಾಪದಿಂದ ಅತ್ಯಂತ ರೌದ್ರರೂಪದ ರಾಕ್ಷಸನಾಗಿ ಮಾರ್ಪಟ್ಟಿದ್ದಾನೆ. ಅದನ್ನು ಕಂಡು ನಾನು ಸಂತಾಪದ ಕಡಲಿನಲ್ಲಿಯೇ ಕುದಿಯುತ್ತಲಿರುವೆ. ನಿಮಗೆ ಶರಣು ಬಂದಿದ್ದೇನೆ. ನೀವೇ ನನ್ನನ್ನು ಕಾಪಾಡಿರಿ. ನನ್ನ ಪತಿಯ ರಾಕ್ಷಸತ್ವವು ತೊಲಗಿಹೋಗುವದಕ್ಕೆ ಏನಾದರೂ ಉಪಾಯವಿದ್ದರೆ ಹೇಳಿರಿ.

**ಋಷಿ:-** ಶುಭಾಂಗಿ, ಚೈತ್ರಮಾಸದ ಶುಕ್ಲಪಕ್ಷದಲ್ಲಿ ಕಾಮದಾ ಎಂಬ ಏಕಾದಶಿಯು ಬರುತ್ತದೆ. ಅದು ಎಲ್ಲ ಪಾಪಗಳನ್ನು ತೊಡೆದುಹಾಕುತ್ತದೆ. ನೀನು ಆ ಏಕಾದಶಿ ವ್ರತವನ್ನು ವಿಧಿಪೂರ್ವಕವಾಗಿ ಮಾಡು. ಅದರಿಂದ ಬರುವ ಪುಣ್ಯವನ್ನೆಲ್ಲ ನಿನ್ನ ಪತಿಗೆ

ನೀಡು. ಕಾಮದಾ ಏಕಾದಶಿಯ ಪುಣ್ಯವನ್ನು ನೀನು ನಿನ್ನ ಪತಿಗೆ ಕೊಟ್ಟರೆ ಅವನು ತಕ್ಷಣವೇ ಆ ಪಿಶಾಚಿಯೋನಿಯಿಂದ ಬಿಡುಗಡೆ ಹೊಂದುತ್ತಾನೆ. ಮಹರ್ಷಿಗಳ ಈ ಮಾತನ್ನು ಕೇಳಿ ಹರ್ಷಪಕರ್ಷವಾಯಿತು ಲಲಿತೆಗೆ. ಅವಳು ಮುನಿಪಾದಗಳಿಗೆ ವಂದಿಸಿ ಮನೆಗೆ ಬಂದಳು. ಚೈತ್ರ ಶುಕ್ಲಪಕ್ಷದ ಕಾಮದಾ ಏಕಾದಶಿಯಂದು ಉಪವಾಸ ಮಾಡಿದಳು. ರಾತ್ರಿ ಜಾಗರಗೈದು ದ್ವಾದಶಿಯಂದು ವಾಸುದೇವ ಮೂರ್ತಿಯ ಪೂಜೆಯನ್ನು ಬ್ರಾಹ್ಮಣರಿಂದ ಮಾಡಿಸಿದಳು. ಅನಂತರ ಆ ಭಗವನ್ಮೂರ್ತಿಯ ಎದುರು ನಿಂತು ಬೇಡಿಕೊಂಡಳು.

**ಮಯಾತಂ ತದ್‌ವ್ರತಮ್ ಚೀರ್ಣಂ ಕಾಮದಾಯಾ ಉಪೋಕ್ಷಣಂ ।**
**ತಸ್ಯ ಪುಣ್ಯ ಪ್ರಭಾವೇಣ ಗಚ್ಛತ್ವತ್ಯ ಪಿಶಾಚತಾ ॥**

ನನ್ನ ಪತಿಯ ಉದ್ಧಾರಕ್ಕಾಗಿ ನಾನು ಈ ಕಾಮದಾ ಏಕಾದಶಿಯ ದಿನ ಉಪವಾಸವನ್ನು ಈ ವ್ರತಾನುಷ್ಠಾನವನ್ನು ಮಾಡಿದ್ದೇನೆ. ಈ ಪುಣ್ಯಪ್ರಭಾವದಿಂದ'ಪತಿಯ ಪಿಶಾಚ ಜನ್ಮವು ನೀಗಲಿ.

ಹೀಗೆ ಆ ಬಾಲೆಯ ಭಗವಂತನನ್ನು ಭಯಭಕ್ತಿಯಿಂದ ಬೇಡಿಕೊಂಡ ಕೂಡಲೇ ಅವಳ ಪತಿಯ ರಾಕ್ಷಸರೂಪ ಹೋಗಿ ಸುಂದರವಾದ ಗಾಂಧರ್ವರೂಪ ಬಂದಿತು. ಆಗ ಅವನು ತನ್ನ ಮಡದಿಯಾದ ಲಲಿತೆಯೊಂದಿಗೆ ದೇವಲೋಕದ ವಿಮಾನವನ್ನು ಆರೋಹಣ ಮಾಡಿದ. ಮೊದಲಿಗಿಂತ ಹೆಚ್ಚಿನ ರೂಪ ಸೌಂದರ್ಯಗಳು ಅವರಲ್ಲಿ ಮಿಂಚಿದವು. ಕಾಮದಾ ಏಕಾದಶಿಯ ಪ್ರಭಾವದಿಂದ ಅವರಿಬ್ಬರು ಲಲಿತೆ-ಲಲಿತಾ ದಂಪತಿಗಳು ಸ್ವರ್ಗದಲ್ಲಿ ಸ್ವಚ್ಛಂದವಾಗಿ ಆನಂದವಿಹಾರ ಗೈಯ ತೊಡಗಿದರು. ಆದುದರಿಂದ ಧರ್ಮರಾಜ, ಈ ಕಾಮದಾ ಏಕಾದಶಿ ವ್ರತವು ಅಪ್ರತಿಮವಾದುದು. ಎಲ್ಲರೂ ಈ ಕಾಮದಾ ಏಕಾದಶಿಯ ದಿನ ಉಪವಾಸವನ್ನು ಮಾಡಬೇಕು. ಇದರಿಂದ ಬ್ರಹ್ಮಹತ್ಯಾದಿ ಪಾಪಗಳು ಭೂತಪ್ರೇತ ಪಿಶಾಚಾದಿ ಜನ್ಮ ಜಾಡ್ಯಗಳು ನಷ್ಟವಾಗಿ ಹೋಗುತ್ತವೆ. ಈ ಅಖ್ಯಾನದ ಶ್ರವಣ ಪಠಣ ಮಾತ್ರದಿಂದಲೂ ವಾಜಪೇಯ ಯಜ್ಞ ಮಾಡಿದಷ್ಟು ಪುಣ್ಯ ಬರುವುದು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಚೈತ್ರ ಶುಕ್ಲಪಕ್ಷದ ಕಾಮದಾ ಏಕಾದಶಿಯ ಮಹಿಮೆ ಎಂಬ ನಲವತ್ತೆಂಟನೇಯ ಅಧ್ಯಾಯ ಮುಗಿದುದು*

—೦—

## ವೈಶಾಖ ಕೃಷ್ಣಪಕ್ಷದ ವರೂಥಿನಿ ಏಕಾದಶಿ ಆಖ್ಯಾನ ಮತ್ತು ವಿಧಾನ

ಅಧ್ಯಾಯ - ೪೯

**ಧರ್ಮರಾಜ:-** ವೈಶಾಖ ಕೃಷ್ಣಪಕ್ಷದಲ್ಲಿ ಯಾವ ಏಕಾದಶಿ ಬರುತ್ತದೆ? ಅದರ ಮಹಿಮೆ ಏನು? ಕೃಷ್ಣ, ಅದನ್ನು ನೀನು ನಮಗೆ ಹೇಳು. ನಿನಗೆ ನಮ್ಮ ಅನಂತ ವಂದನೆಗಳು.

**ಶ್ರೀಕೃಷ್ಣ:-** ವೈಶಾಖ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ವರೂಥಿನಿ ಎಂಬ ಸಾರ್ಥಕವಾದ ಹೆಸರು. ಈ ವ್ರತವು ಇಹಲೋಕದಲ್ಲಿ ಸೌಭಾಗ್ಯದಾಯಕ. ಪರಲೋಕದಲ್ಲಿ ಮೋಕ್ಷದಾಯಕ. ಈ ಏಕಾದಶಿ ವ್ರತವನ್ನು ಮಾಡಿದವರ ಪಾಪಗಳೆಲ್ಲ ಕಳೆಯುತ್ತವೆ. ಸೌಭಾಗ್ಯಗಳೆಲ್ಲ ಬೆಳೆಯುತ್ತವೆ. ದರಿದ್ರರು, ದುಃಖಿತರು, ಸೌಭಾಗ್ಯಹತಳೂ ಆದ ಹೆಂಗಸು ಈ ವರೂಥಿನಿ ಏಕಾದಶಿ ದಿನ ಉಪವಾಸ ಮಾಡಿದರೆ ಅವಳಿಗೆ ಈ ವ್ರತಾನುಷ್ಠಾನದ ಪ್ರಭಾವದಿಂದ ಭುಕ್ತಿ ಮುಕ್ತಿ ಸೌಭಾಗ್ಯ ಎಲ್ಲವೂ ದೊರೆಯುತ್ತವೆ. ಇದು ಸರ್ವ ಪಾಪಪರಿಹಾರಕ. ಇದರ ಆಚರಣೆಯಿಂದ ಮಾನವರಿಗೆ ಗರ್ಭವಾಸದ ದುಃಖವೇ ತಪ್ಪಿಹೋಗುವದು. ಈ ವ್ರತದ ಪ್ರಭಾವದಿಂದ ಹಿಂದೆ ಮಾಂಧಾತ ಮಹಾರಾಜನು ಸ್ವರ್ಗಲೋಕಕ್ಕೆ ತೆರಳಿದ. ಧುಂಧುಮಾರ ಮೊದಲಾದ ಅರಸರು ಇದರಿಂದ ಸದ್ಗತಿ ಹೊಂದಿದರು. ಈ ಏಕಾದಶಿಯನ್ನು ಮಾಡಿದ ಬಳಿಕವೇ ರುದ್ರದೇವರ ಕೈಯಲ್ಲಿಯ ಬ್ರಹ್ಮಕಪಾಲವು ಕೈಬಿಟ್ಟು ಹೋಯಿತು. ಹತ್ತು ಸಾವಿರ ವರ್ಷ ಅರಣ್ಯದಲ್ಲಿ ನಿಂತು ತಪಸ್ಸು ಮಾಡಿದರೆ ಬರುವಷ್ಟು ಪುಣ್ಯವು ಈ ವರೂಥಿನಿ ಏಕಾದಶಿ ಮಾಡುವದರಿಂದ ಲಭಿಸುವದು.

ರಾಜನೇ, ದಾನಗಳಲ್ಲಿ ಕುದುರೆ ದಾನ ಮಿಗಿಲು. ಆ ಅಶ್ವದಾನಕ್ಕಿಂತ ಗಜದಾನ ಹೆಚ್ಚು. ಗಜದಾನಕ್ಕಿಂತ ಭೂಮಿದಾನ, ಭೂಮಿ ದಾನಕ್ಕಿಂತ ತಿಲದಾನ, ತಿಲದಾನಕ್ಕಿಂತ ಸುವರ್ಣ ದಾನ, ಸುವರ್ಣದಾನಕ್ಕಿಂತ ಅನ್ನದಾನ ಉತ್ತರೋತ್ತರ ಉತ್ತಮದಾನ ಎನಿಸಿವೆ. ಅನ್ನದಾನ ಕ್ಕಿಂತ ಮಿಗಿಲಾದ ದಾನವಿಲ್ಲ. ಈ ಅನ್ನದಾನಕ್ಕೆ ಸಮಾನವಾದ ದಾನ ಎರಡು. ಒಂದು ಕನ್ಯಾದಾನ, ಮತ್ತು ಗೋದಾನ. ಈ ಮೂರು ದಾನ ಹಾಗೂ ಇತರ ನೂರು ದಾನಕ್ಕಿಂತ ಶ್ರೇಷ್ಠವಾದ ದಾನ ಎಂದರೆ ವಿದ್ಯಾದಾನ. ಅರ್ಥಾತ್ ಜ್ಞಾನದಾನ. ಈ ವರೂಥಿನಿ ಏಕಾದಶಿ ಮಾಡುವದರಿಂದ ಜ್ಞಾನದಾನಕ್ಕೆ ಸಮಾನವಾದ ಪುಣ್ಯವು ಅನಾಯಾಸವಾಗಿ ಲಭಿಸುವದು.

ಕನ್ಯೆಯನ್ನು ಮಾರಿ ಉಪಜೀವನ ಸಾಗಿಸುವವ ಮಹಾಪಾಪಿ. ಜನ್ಮಾಂತರದಲ್ಲಿ ಅವನು ಇಲಿಯಾಗಿ ಹುಟ್ಟುವನು. ಆದರೆ ಯಥಾಶಕ್ತಿ ಕನ್ಯೆಯನ್ನು ಅಲಂಕರಿಸಿ ಸಾಲಂಕೃತ ಕನ್ಯಾದಾನ ಮಾಡುವದರಿಂದ ಬರುವ ಪುಣ್ಯವನ್ನು ಎಣಿಸಲು ಅಂಕೆಗಳಲ್ಲಿ ಗುಣಿಸಲು ಸಂಖ್ಯೆಗಳಿಲ್ಲ. ಅದಕ್ಕೆ ಸರಿಸಮಾನ ಪುಣ್ಯಫಲವನ್ನು ಪಡೆಯಬಹುದು ಈ ವರೂಥಿನಿ ಏಕಾದಶಿಯ ಆಚರಣೆಯಿಂದ.

ದಶಮಿ, ಏಕಾದಶಿ, ದ್ವಾದಶಿ ಈ ಮೂರು ದಿನಗಳಿಗೆ ಕೂಡಿ ಹರಿವಾಸರ ಅಥವಾ ತಿಥಿತ್ರಯ ಎಂದು ಹೆಸರು. ಈ ಮೂರು ದಿನಗಳಲ್ಲಿ ಕೆಲವೊಂದು ಪದಾರ್ಥಗಳು ನಿಷಿದ್ಧವಾಗಿವೆ. ಅವುಗಳನ್ನು ತಿನ್ನಕೂಡದು. ದಶಮಿಯ ದಿನ ವಿಷ್ಣುಭಕ್ತನು,

**ಕಾಂಸ್ಯಂ ಮಾಂಸಂ ಮಸಾರಾಂಶ್ಚ ಚಣಕಾನ್ ಕೋದ್ರವಾಂಸ್ತಥಾ**
**ಶಾಕಂ ಮಧು ಪರಾನ್ನಂಚ ಪುನರ್ಭೋಜನ ಮೈಥುನೇ**
**ವೈಷ್ಣವೋ ವ್ರತ ಕರ್ತಾಚ ದಶಮ್ಯಾಂ ದಶವರ್ಜ್ಯಯೇತ್.**
ದಶಮಿಯ ದಿನ ಈ ಹತ್ತು ಪದಾರ್ಥಗಳನ್ನು ವರ್ಜ್ಯ ಮಾಡಬೇಕು.

**ದ್ಯೂತಂ ಕ್ರೀಡಾಂಚ ನಿದ್ರಾಂಚ ತಾಂಬೂಲಂ ದಂತಧಾವನಂ**
**ಪರಾಪವಾದಂ ಪೈಶುನ್ಯಂ ಸ್ತೇಯಂ ಹಿಂಸಾಂ ತಥಾರತಿಂ**
**ಕ್ರೋಧಂ ಚೈವ ಅನೃತಂ ವಾಕ್ಯ ಮೇಕಾದಶ್ಯಾಂ ವಿವರ್ಜಯೇತ್**
ಏಕಾದಶಿಯ ದಿನ ಜೂಜಾಟ, ನಿದ್ದೆ, ಎಲಿ ಅಡಿಕೆ, ಹುಲ್ಲುಜ್ಜುವದು, ಪರನಿಂದೆ. ಚಾಡಿಕೋರತನ, ಕಳವು. ಹಿಂಸೆ, ಸಂಭೋಗ, ಕೋಪ, ಸುಳ್ಳುಮಾತು ಈ ಹನ್ನೊಂದು ವಸ್ತುಗಳನ್ನು ಏಕಾದಶಿಯ ದಿನ ವರ್ಜಿಸಬೇಕು.

**ಕಾಂಸ್ಯಂ ಮಾಂಸಂ ಸುರಾಂ ಕ್ಷೌದ್ರಂ ತೈಲಂ ಪತಿತ ಭಾಷಣಂ**
**ವ್ಯಾಯಾಮಂಚ ಪ್ರವಾಸಂಚ ಪುನರ್ಭೋಜನ ಮೈಥುನಂ**
**ವೃಕ್ಷ ಪೃಷ್ಟಂ ಮಸೂರಾನ್ನಂ ದ್ವಾದಶ್ಯಾಂ ಪರಿವರ್ಜಯೇತ್**
ಕಾಂಸ್ಯ, ಮಾಂಸ, ಮದ್ಯ, ಜೇನುತುಪ್ಪ, ಎಣ್ಣೆ, ಪತಿತರೊಡನೆ ಸಂಭಾಷಣೆ, ವ್ಯಾಯಾಮ, ಪ್ರವಾಸ, ರಾತ್ರಿ ಊಟ, ಸ್ತ್ರೀಸಂಗ, ಎತ್ತಿನ ಮೇಲೆ ಹತ್ತುವದು, ಮಸೂರಾನ್ನ ಈ ಹನ್ನೆರಡನ್ನು ದ್ವಾದಶಿಯ ದಿನ ಪರಿತ್ಯಾಗ ಮಾಡಬೇಕು. ಹೀಗೆ ದಶಮಿ, ಏಕಾದಶಿ, ದ್ವಾದಶಿ ಮೂರೂ ದಿನಗಳಲ್ಲಿ ನಿಷಿದ್ಧ ವಸ್ತುಗಳನ್ನು ಪರಿತ್ಯಾಗ ಮಾಡಿ ಶಾಸ್ತ್ರೋಕ್ತ ವಿಧಿಯಿಂದ ವರೂಥಿನಿ ಏಕಾದಶಿ ದಿನ ಉಪವಾಸ ಮಾಡಿ ರಾತ್ರಿ ಜಾಗರಗೈದು ಮಧುಸೂದನನ ಪೂಜೆಯನ್ನು ಮಾಡಿದರೆ ಆ ಮನುಷ್ಯರು ಮಾಡಿದ ಎಲ್ಲ ಪಾಪಗಳು ನಷ್ಟವಾಗಿ ದಿವ್ಯಗತಿಯ ಪ್ರಾಪ್ತವಾಗುವವು. ಆದುದರಿಂದ ಪಾಪಭೀರುಗಳಾದವರು ಯಮನ ಭೀತಿಯನ್ನು ಹೋಗಲಾಡಿಸುವುದಕ್ಕಾಗಿ ವರೂಥಿನಿ ಏಕಾದಶಿಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ವೈಶಾಖ ಕೃಷ್ಣಪಕ್ಷದ ವರೂಥಿನಿ ಏಕಾದಶಿ ಆಖ್ಯಾನ ಮತ್ತು ವಿಧಾನ ಎಂಬ ನಲವತೊಂಬತ್ತನೇಯ ಅಧ್ಯಾಯ ಮುಗಿದುದು*

—○—

## ವೈಶಾಖ ಶುಕ್ಲಪಕ್ಷದ ಮೋಹಿನಿ ಏಕಾದಶಿಯ ಆಖ್ಯಾನ | ಅಧ್ಯಾಯ - ೫೦

**ಧರ್ಮರಾಜ:-** ವೈಶಾಖ ಶುಕ್ಲಪಕ್ಷದಲ್ಲಿ ಯಾವ ಏಕಾದಶಿಯು ಬರುತ್ತದೆ? ಅದರ ಹೆಸರು ಏನು? ಅದರಿಂದ ಬರುವ ಪುಣ್ಯ ಎಂಥದು? ಅದನ್ನು ಮಾಡುವ ವಿಧಾನ ಯಾವದು? ಇದೆಲ್ಲವನ್ನು ನನಗೆ ಹೇಳು.

**ಶ್ರೀಕೃಷ್ಣ:-** ಈ ವಿಷಯದಲ್ಲಿ ವಶಿಷ್ಠ ಹಾಗೂ ಶ್ರೀರಾಮಚಂದ್ರರ ನಡುವೆ ಹಿಂದೆ ನಡೆದ ಸಂಭಾಷಣೆಯನ್ನು ಹೇಳುತ್ತೇನೆ ಚಿತ್ತವಿಟ್ಟು ಆಲಿಸು.

**ಶ್ರೀರಾಮ:-** ವ್ರತಗಳಲ್ಲೆಲ್ಲ ಅತ್ಯುತ್ತಮ ವ್ರತ ಯಾವುದು?

**ವಸಿಷ್ಠ:-** ಶ್ರೀರಾಮ, ನಿನ್ನ ರಾಮ ಎಂಬ ನಾಮವನ್ನು ಉಚ್ಚರಿಸಿದ ಮಾತ್ರಕ್ಕೆ ಎಂಥೆಂಥ ಪಾಪಗಳು ಬಿಟ್ಟು ಹೋಗುತ್ತವೆ. ಆದರೂ ಲೋಕಕ್ಕೆ ಹಿತ ಮಾಡಲಿಕ್ಕಾಗಿ ನೀನು ಈ ಪ್ರಶ್ನೆಯನ್ನು ಮಾಡಿದ್ದೀಯ. ಅದಕ್ಕಾಗಿ ಪವಿತ್ರಗಳಲ್ಲಿ ಪವಿತ್ರವೂ ವ್ರತಗಳಲ್ಲಿ ಉತ್ತಮೋತ್ತಮವೂ ಆದ ಮೋಹಿನೀ ಏಕಾದಶಿ ವ್ರತದ ವಿಧಾನವನ್ನು ಹೇಳುತ್ತೇನೆ ಕೇಳು. ವೈಶಾಖ ಶುಕ್ಲಪಕ್ಷದ ಏಕಾದಶಿಗೆ ಮೋಹಿನೀ ಏಕಾದಶಿ ಎಂದು ಕರೆಯುತ್ತಾರೆ. ಇದರ ಹಿನ್ನೆಲೆಯ ಇತಿಹಾಸವನ್ನು ಕೇಳು. ಪೂರ್ವಕಾಲದಲ್ಲಿ ಸರಸ್ವತಿಯ ತಟಾಕದಲ್ಲಿ ಭದ್ರಾವತಿ ಎಂದು ಒಂದು ಪಟ್ಟಣ. ಅಲ್ಲಿ ಆಗ ಆಳುವ ಅರಸ ದ್ಯುತಿಮಂತ. ಆ ಕಾಲದಲ್ಲಿ ಆ ಪಟ್ಟಣದಲ್ಲಿ ಧನಪಾಲ ಎಂಬ ಹೆಸರಿನ ಓರ್ವ ಸತ್ಯನಿಷ್ಠನಾದ ವೈಶ್ಯನು ನೆಲೆಸಿದ್ದ. ಅವನ ಮನೆಯಲ್ಲಿ ಯಾವಾಗಲೂ ಧನಧಾನ್ಯಗಳ ಸಮೃದ್ಧಿ. ಆದರಿಂದ ಪುಣ್ಯಕರ್ಮಗಳ ಅಭಿವೃದ್ಧಿ. ಅವನು ಅನೇಕ ಅರವಟ್ಟಿಗೆಗಳನ್ನು ಕಟ್ಟಿದ್ದ ರಾಜ್ಯದ ಅನೇಕ ಕಡೆಗಳಲ್ಲಿ. ಮಠಗಳನ್ನು ಕಟ್ಟಿಸಿದ್ದ. ಉಪವನಗಳನ್ನು ನಿರ್ಮಿಸಿದ್ದ. ಹೊಂಡಗಳನ್ನು ತೋಡಿಸಿದ್ದ. ಬಾವಿಗಳನ್ನು ತೋಡಿಸಿದ್ದ. ಮನೆಗಳನ್ನು ಕಟ್ಟಿಸಿದ್ದ. ಅವನು ಶ್ರೀಹರಿಯ ಏಕನಿಷ್ಠ ಭಕ್ತ ಆ ಧನಪಾಲನಿಗೆ ಐದು ಜನ ಗಂಡು ಮಕ್ಕಳು. ಸುಮನ, ಧ್ಯುತಿಮಂತ, ಮೇಧಾವಿ, ಸುಕೃತ, ಧೃಷ್ಟಬುದ್ಧಿ ಎಂದು. ಅರಸನ ಈ ಐವರು ಮಕ್ಕಳಲ್ಲಿ ಮೊದಲಿನ ನಾಲ್ವರು ಸದಾಚಾರ ಸಂಪನ್ನರು, ಪಿತೃಭಕ್ತರು, ಧರ್ಮನಿಷ್ಠರು. ಆದರೆ ಕೊನೆಯವನಾದ ಧೃಷ್ಟಬುದ್ಧಿಯು ಮಾತ್ರ ದುಷ್ಟಬುದ್ಧಿಯೂ ಆಗಿದ್ದ. ಅವನಿಗೆ ಹಗಲಿರುಳು ಹೆರವರ ಹೆಣ್ಣಿನ ಹುಚ್ಚು ಹಂಬಲ. ಜೂಜಾಟವಂತೂ ಅವನಿಗೆ ವ್ಯಸನವಾಗಿಯೇ ಅಂಟಿಕೊಂಡಿತು. ಅವನು ಅನ್ಯಾಯ ಮಾರ್ಗದಿಂದ ತಂದೆ ಗಳಿಸಿಟ್ಟ ಹಣವನ್ನೆಲ್ಲ ಹಾಳುಮಾಡತೊಡಗಿದ. ತಿನ್ನಬಾರದ್ದನ್ನೆಲ್ಲ ತಿನ್ನುತ್ತಿದ್ದ. ಕುಡಿಯಬಾರದ ಮದ್ಯಾದಿಗಳನ್ನು ಕುಡಿಯುತ್ತಿದ್ದ ವೇಶ್ಯಾ ಸ್ತ್ರೀಯರ ಹೆಗಲ ಮೇಲೆ ಕೈ ಹಾಕಿಕೊಂಡು. ಅವನ ಈ ದುರ್ವ್ಯಾಪಾರಗಳನ್ನು ಕಂಡು ಅವನ ತಂದೆ ಅವನನ್ನು ಮನೆ ಬಿಟ್ಟು ಹೊರಹಾಕಿದ. ಅವನ ಬಂಧುಬಾಂಧವರೆಲ್ಲರೂ ಅವನನ್ನು ದೂರ ಮಾಡಿದರು. ಆಗ ನಿರಾಧಾರನಾದ ಆ ಧೃಷ್ಟಬುದ್ಧಿಯು ಕಂಗಾಲಾದ. ತನ್ನ ಮೈ ಮೇಲಿದ್ದ ಆಭರಣಗಳನ್ನು ಮಾರಿ ಕೆಲವು ದಿನಗಳನ್ನು ನೂಕಿದ. ದುಡಿಲ್ಲದ ಈ ದರಿದ್ರನ ಬಳಿಗೆ ಗಣಿಕೆಯರಾದರೂ ಏಕೆ ನಿಂತಾರು? ಅವರೆಲ್ಲರೂ ಇವನನ್ನು ತೆಗಳುತ್ತ ತೊರೆದುಹೋದರು.

ಕೊನೆಗೆ ಧನಹೀನ, ವಸ್ತ್ರಹೀನ, ದೀನನಾಗಿ ಹಸಿದು ಬಾಯ್ಬಿಡುತ್ತಿದ್ದ ಆ ಧೃಷ್ಟಬುದ್ಧಿಯು ಏನು ಮಾಡಲಿ, ಎಲ್ಲಿ ಹೋಗಲಿ, ಹೇಗೆ ಬದುಕಲಿ ಎಂದು

ಚಿಂತಿಸತೊಡಗಿದ. ಬೇರೆ ಗತಿಗಾಣದೇ ಕಳ್ಳತನವನ್ನು ಶುರುವು ಮಾಡಿದ. ಯಾವುದರಲ್ಲಿಯೂ ಅನುಭವ ಇಲ್ಲದ ಅವನು ಕೊನೆಗೆ ಕಳ್ಳತನಕ್ಕೆ ನಿಂತುಕೊಂಡ. ಅನುಭವವಿಲ್ಲದ ಅವನು ಊರಲ್ಲಿ ಒಂದು ಮನೆಯಲ್ಲಿ ಕನ್ನ ಕೊರೆದು ಲೂಟ ಹೊಡೆಯುವಾಗ ರಾಜಸೇವಕರ ಕೈಗೆ ಸಿಕ್ಕುಬಿದ್ದ. ಆದರೆ ಆ ರಾಜಕೀಯ ಅಧಿಕಾರಿಗಳು ಇವನ ತಂದೆಯಾದ ಮಹಾರಾಜನ ಮೇಲಿನ ಗೌರವದಿಂದ ಇವನನ್ನು ಬಿಟ್ಟು ಬಿಟ್ಟರು. ಬಿಟ್ಟ ಕೂಡಲೇ ಮತ್ತೆ ಕಳ್ಳತನ, ಅದರಿಂದ ಪುನಃ ಬಂಧನ. ಹೀಗೆ ಬಂಧನ ಬಿಡುಗಡೆಗಳು ತೆರಪಿಲ್ಲದೇ ನಡೆದವು. ಕೊನೆಗೆ ಒಮ್ಮೆ ಇವನು ಅವ್ಯಾಪಾರ ದುರ್ವ್ಯಾಪಾರಗಳಿಗೆ ಬೇಸತ್ತ ಅಧಿಕಾರಿಗಳು ಇವನನ್ನು ಹಿಡಿದು ಕಾಲುಗಳಿಗೆ ಬೇಡಿ ಜಡಿದರು. ಬಾರುಕೋಲಿನಿಂದ ಸರಿಯಾಗಿ ಹೊಡೆದರು. ಮತ್ತೆ ಮತ್ತೆ ಹೊಡೆದು ಜಡಿದರು. ಹಾಗೂ ರಾಜನ ಎದುರು ತಂದು ನಿಲ್ಲಿಸಿದರು. ಆಗ ಮಹಾರಾಜನು ನ್ಯಾಯ ನಿಷ್ಠುರನಾಗಿ ಮೂರ್ಖನೇ, ನೀನು ನನ್ನ ರಾಜ್ಯದಲ್ಲಿ ಇರಬೇಡ ಎಂದು ದಂಡಿಸಿ ಹೊರಗೆ ಹಾಕಿದ.

ಆಗ ಆ ಧೃಷ್ಟಕೇತುವು ನಾಡನ್ನು ಬಿಟ್ಟು ಕಾಡಿಗೆ ಬಂದ. ಅಲ್ಲಿ ಗುಡುಗುವ ಅನೇಕ ಸಿಂಹಗಳನ್ನು, ಗರ್ಜಿಸುವ ಹುಲಿಗಳನ್ನು, ಹೂಂಕರಿಸುವ ಕಾಡುಹಂದಿ, ಕಾಡುಕೋಣ ಮೊದಲಾದ ಕ್ರೂರ ಪ್ರಾಣಿಗಳನ್ನು ಸಂಹರಿಸಿದ. ಮಾಂಸಾಹಾರದ ಆಶೆಯಿಂದ ಆ ಅಡವಿಯಲ್ಲಿ ಕಂಡದ್ದನ್ನೆಲ್ಲ ಕೊಂದು ಹಾಕಿ ತಿಂದುಬಿಡುತ್ತಿದ್ದ. ಅರಣ್ಯದಲ್ಲಿರುವ ಪಶುಪಕ್ಷಿ, ನವಿಲು, ಚಕೋರ, ತುರುಕರು, ಹದ್ದು ಮುಂತಾದ ಎಲ್ಲ ಪಶು ಪಕ್ಷಿ ಮೃಗಗಳು ಅವನ ಮಾಂಸಾಹಾರಕ್ಕೆ ಬಲಿಯಾದವು. ಆದರೂ ತಂದೆ ತನ್ನನ್ನು ರಾಜಧಾನಿಯಿಂದ ಹೊರದಬ್ಬಿದ್ದಕ್ಕಾಗಿ ಅವನು ದುಃಖದಿಂದ ಕುದಿಯುತ್ತಿದ್ದ.

ಒಂದು ದಿನ ಅವನು ಕೌಂಡಿನ್ಯ ಮುನಿಗಳ ಆಶ್ರಮಕ್ಕೆ ಬಂದ. ವೈಶಾಖ ಮಾಸದಲ್ಲಿ ಗಂಗಾಜಲದಲ್ಲಿ ಸ್ನಾನಮಾಡಿ ಜಪ ಮಾಡುತ್ತ ಕುಳಿತ ಆ ಮುನಿಯ ಬಳಿಗೆ ಬಂದ. ಆಗ ಅವರು ಉಟ್ಟ ವಸ್ತ್ರದ ಒಂದು ಎಳೆಯ ಸ್ಪರ್ಶದಿಂದಲೇ ಅವನ ಪಾಪಗಳೆಲ್ಲವೂ ಸುಟ್ಟುಹೋದವು. ಅನಂತರ ಅವನು ಆ ಮುನಿಗಳ ಎದುರು ನಿಂತು ಕೈಜೋಡಿಸಿ ಕೇಳಿದ.

**ಧೃಷ್ಟಬುದ್ಧಿ:-** ದ್ವಿಜಶ್ರೇಷ್ಠರೆ, ಮುಕ್ತಿಯು ಹೇಗೆ ದೊರಕುವದು?

**ಕೌಂಡಿನ್ಯ:-** ವೈಶಾಖ ಶುಕ್ಲಪಕ್ಷದಲ್ಲಿ ಮೋಹಿನೀ ಎಂಬ ಏಕಾದಶಿಯು ಬರುತ್ತದೆ. ಅದನ್ನು ವಿಧ್ಯುಕ್ತವಾಗಿ ಆಚರಿಸಿದರೆ ಬೆಟ್ಟದಷ್ಟಿದ್ದರೂ ಪಾಪಗಳೆಲ್ಲವೂ ಸುಟ್ಟುಹೋಗುತ್ತವೆ. ಆದುದರಿಂದ ನೀನು ನನ್ನ ಆಜ್ಞೆಯಿಂದ ಆ ಮೋಹಿನೀ ಏಕಾದಶಿಯ ವ್ರತವನ್ನು ಮಾಡು.

ಕೌಂಡಿನ್ಯರ ಆದೇಶದಿಂದ ಧೃಷ್ಟಬುದ್ಧಿಯು ಪ್ರಸನ್ನ ಮನಸ್ಸಿನಿಂದ ಮೋಹಿನೀ ಏಕಾದಶಿಯನ್ನು ಸಾಂಗವಾಗಿ ಆಚರಿಸಿದ. ತನ್ನ ಪಾಪಗಳೆಲ್ಲವನ್ನು ತೊಳೆದುಕೊಂಡ. ಅಷ್ಟರಲ್ಲಿ ಅವನನ್ನು ಕರೆಯಲು ವೈಕುಂಠ ಲೋಕದಿಂದ ವಿಮಾನ ಬಂದಿತು. ಆ ಧೃಷ್ಟಬುದ್ಧಿಗೆ ಆಗಲೇ ದಿವ್ಯ ದೇಹವು ಪ್ರಾಪ್ತವಾಯಿತು. ಅನಂತರ ಅವನು ಗರುಡನ ಮೇಲೆ ಏರಿಕೊಂಡು ವೈಕುಂಠಲೋಕಕ್ಕೆ ತೆರಳಿದ. ಆದುದರಿಂದ ರಾಮಚಂದ್ರ, ಈ ಜಗತ್ತಿನಲ್ಲಿ ಮೋಹಿನೀ ವ್ರತಕ್ಕೆ ಮಿಗಿಲಾದ ವ್ರತವೇ ಇರುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ವೈಶಾಖ ಶುಕ್ಲಪಕ್ಷದ ಮೋಹಿನಿ ಏಕಾದಶಿಯ ಆಖ್ಯಾನ ಎಂಬ ಐವತ್ತನೇಯ ಅಧ್ಯಾಯ ಮುಗಿದುದು*

## ಜೇಷ್ಠ ಕೃಷ್ಣಪಕ್ಷದ ಅಪರಾ ಎಂಬ ಏಕಾದಶಿಯ ಮಾಹಾತ್ಮ್ಯ

**ಅಧ್ಯಾಯ - ೫೧**

**ಧರ್ಮರಾಜ:-** ಜ್ಯೇಷ್ಠ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ಮಹಿಮೆ ಏನು? ಇದನ್ನೆಲ್ಲ ಕೇಳಬೇಕೆಂದು ನನ್ನ ಅಪೇಕ್ಷೆ. ಜನಾರ್ದನನೇ ನೀನು ನನಗೆ ಅದನ್ನು ಹೇಳು.

**ಶ್ರೀಕೃಷ್ಣ:-** ಜೇಷ್ಠ ಕೃಷ್ಣಪಕ್ಷದ ಏಕಾದಶಿಯನ್ನು ಅಪರಾ ಏಕಾದಶಿ ಎಂದು ಕರೆಯುತ್ತಾರೆ.

ಈ ಏಕಾದಶಿಯನ್ನು ಮಾಡಿದ ಬಂಜೆಗೂ ಗಂಡುಮಗು ಆಗುತ್ತದೆ. ಬ್ರಾಹ್ಮಣರನ್ನು ಕೊಂದವನು, ಒಬ್ಬರ ವಂಶವನ್ನೇ ಧ್ವಂಸ ಮಾಡಿದವನು, ಚಿಕ್ಕಮಕ್ಕಳ ಕತ್ತು ಹಿಸುಕಿದವನು, ಹೆರವರ ನಿಂದೆಯನ್ನು ಮಾಡಿದವನು, ಅನ್ಯ ನಾರಿಯರೊಡನೆ ವಿಲಾಸಗೈಯುವವನು, ಸುಳ್ಳು ಸಾಕ್ಷಿ ಹೇಳಿದವನು, ಖೊಟ್ಟಿ ವೇದವನ್ನು ಪಠಿಸಿದವನು, ದುಷ್ಟ ಶಾಸ್ತ್ರವನ್ನು ಓದಿದವನು ಈ ಅಪರಾ ಏಕಾದಶಿಯ ವ್ರತದ ಸಮ್ಯಕ ಪರಿಪಾಲನೆಯಿಂದ ಪಾಪಮುಕ್ತರಾಗುವರು. ಕ್ಷಾತ್ರಧರ್ಮವನ್ನು ತ್ಯಜಿಸಿ ಯುದ್ಧರಂಗದಿಂದ ಓಡಿಹೋದ ಕ್ಷತ್ರಿಯ, ಧರ್ಮ ಬಿಟ್ಟ ಬ್ರಾಹ್ಮಣ, ವಿದ್ಯೆ ಕೊಟ್ಟು ಪಂಡಿತನನ್ನಾಗಿ ಮಾಡುವ ಗುರುವನ್ನು ನಿಂದಿಸುವ ಶಿಷ್ಯ ಈ ಅಪರಾ ಏಕಾದಶಿಯ ಆಚರಣೆಯಿಂದ ಹಾಗೂ ಉಪವಾಸ ಮಾಡಿ, ವಿಷ್ಣುವಿನ ಪೂಜೆಯನ್ನು ಮಾಡುವದರಿಂದ ಸಕಲ ವಿಧವಾದ ಘೋರ ಪಾತಕಗಳಿಂದ ಬಿಡುಗಡೆ ಹೊಂದಿ ವಿಷ್ಣುವಿನ ಲೋಕಕ್ಕೆ ಹೋಗುತ್ತಾರೆ. ಕಾಶಿಯಲ್ಲಿ ಗ್ರಹಣ ಕಾಲದಲ್ಲಿ ಸ್ನಾನ, ಮಕರ ಸಂಕ್ರಾಂತಿಯಲ್ಲಿ ಪ್ರಯಾಗ ಸ್ನಾನ, ಗಯಾದಲ್ಲಿ ಪಿಂಡದಾನ, ಗುರು ಸಿಂಹರಾಶಿಗೆ ಇದ್ದಾಗ ಗೋದಾವರೀ ಸ್ನಾನ, ಕನ್ಯಾಗತದಲ್ಲಿ ಎಂದರೆ ಗುರು ಕನ್ಯಾರಾಶಿಗೆ ಇದ್ದಾಗ ಕೃಷ್ಣಾನದಿಯಲ್ಲಿ ಸ್ನಾನ, ಬದರೀ ಯಾತ್ರೆ, ಕೇದಾರೇಶ್ವರ ದರ್ಶನ, ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಸುವರ್ಣ ದಾನ, ಹಾಗೂ ದಕ್ಷಿಣಾಸಹಿತವಾದ ಯಜ್ಞದ ಅನುಷ್ಠಾನಗಳಿಂದ ಬರುವ ಫಲವು ಈ ಅಪರಾ ಏಕಾದಶಿಯ ದಿನ ಬರುವ ಫಲದಿಂದ ಬರುವದು.

**ಪಾಪದ್ರುಮ ಕುಠಾರೀಯಂ ಪಾಪೇಂಧನ ದಾವಾನಲಃ ।**
**ಪಾಪಂಧಕಾರ ತರಣಿಃ ಪಾಪಸಾರಂಗ ಕೇಸರೀ ॥**

ಪಾಪವೆಂಬುವ ಮರಕ್ಕೆ ಈ ಅಪರಾ ಏಕಾದಶಿಯು ಒಂದು ನಿಶಿತವಾದ ಕುಠಾರ. ಪಾಪ ಎಂಬ ಸೌದೆಗೆ ಕಾಡ್ಗಿಚ್ಚು. ಪಾಪವೆಂಬ ಕತ್ತಲೆಗೆ ಸೂರ್ಯ. ಪಾಪವೆಂಬ ಜಿಗರೆಗೆ ಸಿಂಹವಿದ್ದಂತೆ ಇರುತ್ತದೆ. ಈ ಅಪರಾ ಏಕಾದಶಿ. ಲೋಕಹಿತಕ್ಕಾಗಿ ಇದನ್ನು ನಾನು ನಿನಗೆ ಹೇಳಿದ್ದೇನೆ. ಇದರ ಪಠಣದಿಂದಲೂ ಶ್ರವಣದಿಂದಲೂ ಸಾವಿರ ಗೋದಾನ ಮಾಡಿದ ಪುಣ್ಯ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜೇಷ್ಠ ಕೃಷ್ಣಪಕ್ಷದ ಅಪರಾ ಎಂಬ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತೊಂದನೇಯ ಅಧ್ಯಾಯ ಮುಗಿದುದು*

ಚಿಂತಿಸತೊಡಗಿದ. ಬೇರೆ ಗತಿಗಾಣದೇ ಕಳ್ಳತನವನ್ನು ಶುರುವು ಮಾಡಿದ. ಯಾವುದರಲ್ಲಿಯೂ ಅನುಭವ ಇಲ್ಲದ ಅವನು ಕೊನೆಗೆ ಕಳ್ಳತನಕ್ಕೆ ನಿಂತುಕೊಂಡ. ಅನುಭವವಿಲ್ಲದ ಅವನು ಊರಲ್ಲಿ ಒಂದು ಮನೆಯಲ್ಲಿ ಕನ್ನ ಕೊರೆದು ಲೂಟಿ ಹೊಡೆಯುವಾಗ ರಾಜಸೇವಕರ ಕೈಗೆ ಸಿಕ್ಕುಬಿದ್ದ. ಆದರೆ ಆ ರಾಜಕೀಯ ಅಧಿಕಾರಿಗಳು ಇವನ ತಂದೆಯಾದ ಮಹಾರಾಜನ ಮೇಲಿನ ಗೌರವದಿಂದ ಇವನನ್ನು ಬಿಟ್ಟು ಬಿಟ್ಟರು. ಬಿಟ್ಟ ಕೂಡಲೇ ಮತ್ತೆ ಕಳ್ಳತನ, ಅದರಿಂದ ಪುನಃ ಬಂಧನ. ಹೀಗೆ ಬಂಧನ ಬಿಡುಗಡೆಗಳು ತೆರಪಿಲ್ಲದೇ ನಡೆದವು. ಕೊನೆಗೆ ಒಮ್ಮೆ ಇವನು ಅವ್ಯಾಪಾರ ದುರ್ವ್ಯಾಪಾರಗಳಿಗೆ ಬೇಸತ್ತ ಅಧಿಕಾರಿಗಳು ಇವನನ್ನು ಹಿಡಿದು ಕಾಲುಗಳಿಗೆ ಬೇಡಿ ಜಡಿದರು. ಬಾರುಕೋಲಿನಿಂದ ಸರಿಯಾಗಿ ಹೊಡೆದರು. ಮತ್ತೆ ಮತ್ತೆ ಹೊಡೆದು ಜಡಿದರು. ಹಾಗೂ ರಾಜನ ಎದುರು ತಂದು ನಿಲ್ಲಿಸಿದರು. ಆಗ ಮಹಾರಾಜನು ನ್ಯಾಯ ನಿಷ್ಠುರನಾಗಿ ಮೂರ್ಖನೇ, ನೀನು ನನ್ನ ರಾಜ್ಯದಲ್ಲಿ ಇರಬೇಡ ಎಂದು ದಂಡಿಸಿ ಹೊರಗೆ ಹಾಕಿದ.

ಆಗ ಆ ಧೃಷ್ಟಕೇತುವು ನಾಡನ್ನು ಬಿಟ್ಟು ಕಾಡಿಗೆ ಬಂದ. ಅಲ್ಲಿ ಗುಡುಗುವ ಅನೇಕ ಸಿಂಹಗಳನ್ನು, ಗರ್ಜಿಸುವ ಹುಲಿಗಳನ್ನು, ಹೂಂಕರಿಸುವ ಕಾಡುಹಂದಿ, ಕಾಡುಕೋಣ ಮೊದಲಾದ ಕ್ರೂರ ಪ್ರಾಣಿಗಳನ್ನು ಸಂಹರಿಸಿದ. ಮಾಂಸಾಹಾರದ ಆಶೆಯಿಂದ ಆ ಅಡವಿಯಲ್ಲಿ ಕಂಡದ್ದನ್ನೆಲ್ಲ ಕೊಂದು ಹಾಕಿ ತಿಂದುಬಿಡುತ್ತಿದ್ದ. ಅರಣ್ಯದಲ್ಲಿರುವ ಪಶುಪಕ್ಷಿ, ನವಿಲು, ಚಕೋರ, ತುರುಕರು, ಹದ್ದು ಮುಂತಾದ ಎಲ್ಲ ಪಶು ಪಕ್ಷಿ ಮೃಗಗಳು ಅವನ ಮಾಂಸಾಹಾರಕ್ಕೆ ಬಲಿಯಾದವು. ಆದರೂ ತಂದೆ ತನ್ನನ್ನು ರಾಜಧಾನಿಯಿಂದ ಹೊರದಬ್ಬಿದ್ದಕ್ಕಾಗಿ ಅವನು ದುಃಖದಿಂದ ಕುದಿಯುತ್ತಿದ್ದ.

ಒಂದು ದಿನ ಅವನು ಕೌಂಡಿನ್ಯ ಮುನಿಗಳ ಆಶ್ರಮಕ್ಕೆ ಬಂದ. ವೈಶಾಖ ಮಾಸದಲ್ಲಿ ಗಂಗಾಜಲದಲ್ಲಿ ಸ್ನಾನಮಾಡಿ ಜಪ ಮಾಡುತ್ತ ಕುಳಿತ ಆ ಮುನಿಯ ಬಳಿಗೆ ಬಂದ. ಆಗ ಅವರು ಉಟ್ಟ ವಸ್ತ್ರದ ಒಂದು ಎಳೆಯ ಸ್ಪರ್ಶದಿಂದಲೇ ಅವನ ಪಾಪಗಳೆಲ್ಲವೂ ಸುಟ್ಟುಹೋದವು. ಅನಂತರ ಅವನು ಆ ಮುನಿಗಳ ಎದುರು ನಿಂತು ಕೈಜೋಡಿಸಿ ಕೇಳಿದ.

**ಧೃಷ್ಟಬುದ್ಧಿ:-** ದ್ವಿಜಶ್ರೇಷ್ಠರೆ, ಮುಕ್ತಿಯು ಹೇಗೆ ದೊರಕುವದು?

**ಕೌಂಡಿನ್ಯ:-** ವೈಶಾಖ ಶುಕ್ಲಪಕ್ಷದಲ್ಲಿ ಮೋಹಿನೀ ಎಂಬ ಏಕಾದಶಿಯು ಬರುತ್ತದೆ. ಅದನ್ನು ವಿಧ್ಯುಕ್ತವಾಗಿ ಆಚರಿಸಿದರೆ ಬೆಟ್ಟದಷ್ಟಿದ್ದರೂ ಪಾಪಗಳೆಲ್ಲವೂ ಸುಟ್ಟುಹೋಗುತ್ತವೆ. ಆದುದರಿಂದ ನೀನು ನನ್ನ ಆಜ್ಞೆಯಿಂದ ಆ ಮೋಹಿನೀ ಏಕಾದಶಿಯ ವ್ರತವನ್ನು ಮಾಡು.

ಕೌಂಡಿನ್ಯರ ಆದೇಶದಿಂದ ಧೃಷ್ಟಬುದ್ಧಿಯು ಪ್ರಸನ್ನ ಮನಸ್ಸಿನಿಂದ ಮೋಹಿನೀ ಏಕಾದಶಿಯನ್ನು ಸಾಂಗವಾಗಿ ಆಚರಿಸಿದ. ತನ್ನ ಪಾಪಗಳೆಲ್ಲವನ್ನು ತೊಳೆದುಕೊಂಡ. ಅಷ್ಟರಲ್ಲಿ ಅವನನ್ನು ಕರೆಯಲು ವೈಕುಂಠ ಲೋಕದಿಂದ ವಿಮಾನ ಬಂದಿತು. ಆ ಧೃಷ್ಟಬುದ್ಧಿಗೆ ಆಗಲೇ ದಿವ್ಯ ದೇಹವು ಪ್ರಾಪ್ತವಾಯಿತು. ಅನಂತರ ಅವನು ಗರುಡನ ಮೇಲೆ ಏರಿಕೊಂಡು ವೈಕುಂಠಲೋಕಕ್ಕೆ ತೆರಳಿದ. ಆದುದರಿಂದ ರಾಮಚಂದ್ರ, ಈ ಜಗತ್ತಿನಲ್ಲಿ ಮೋಹಿನೀ ವ್ರತಕ್ಕೆ ಮಿಗಿಲಾದ ವ್ರತವೇ ಇರುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ವೈಶಾಖ ಶುಕ್ಲಪಕ್ಷದ ಮೋಹಿನಿ ಏಕಾದಶಿಯ ಆಖ್ಯಾನ ಎಂಬ ಐವತ್ತನೇಯ ಅಧ್ಯಾಯ ಮುಗಿದುದು*

## ಜೇಷ್ಠ ಕೃಷ್ಣಪಕ್ಷದ ಅಪರಾ ಎಂಬ ಏಕಾದಶಿಯ ಮಾಹಾತ್ಮ್ಯ

ಅಧ್ಯಾಯ - ೫೧

**ಧರ್ಮರಾಜ:-** ಜ್ಯೇಷ್ಠ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರ ಮಹಿಮೆ ಏನು? ಇದನ್ನೆಲ್ಲ ಕೇಳಬೇಕೆಂದು ನನ್ನ ಅಪೇಕ್ಷೆ. ಜನಾರ್ದನನೇ ನೀನು ನನಗೆ ಅದನ್ನು ಹೇಳು.

**ಶ್ರೀಕೃಷ್ಣ:-** ಜೇಷ್ಠ ಕೃಷ್ಣಪಕ್ಷದ ಏಕಾದಶಿಯನ್ನು ಅಪರಾ ಏಕಾದಶಿ ಎಂದು ಕರೆಯುತ್ತಾರೆ.

ಈ ಏಕಾದಶಿಯನ್ನು ಮಾಡಿದ ಬಂಜೆಗೂ ಗಂಡುಮಗು ಆಗುತ್ತದೆ. ಬ್ರಾಹ್ಮಣರನ್ನು ಕೊಂದವನು, ಒಬ್ಬರ ವಂಶವನ್ನೇ ಧ್ವಂಸ ಮಾಡಿದವನು, ಚಿಕ್ಕಮಕ್ಕಳ ಕತ್ತು ಹಿಸುಕಿದವನು, ಹೆರವರ ನಿಂದೆಯನ್ನು ಮಾಡಿದವನು, ಅನ್ಯ ನಾರಿಯರೊಡನೆ ವಿಲಾಸಗೈಯುವವನು, ಸುಳ್ಳು ಸಾಕ್ಷಿ ಹೇಳಿದವನು, ಖೊಟ್ಟಿ ವೇದವನ್ನು ಪಠಿಸಿದವನು, ದುಷ್ಟ ಶಾಸ್ತ್ರವನ್ನು ಓದಿದವನು ಈ ಅಪರಾ ಏಕಾದಶಿಯ ವ್ರತದ ಸಮ್ಯಕ ಪರಿಪಾಲನೆಯಿಂದ ಪಾಪಮುಕ್ತರಾಗುವರು. ಕ್ಷಾತ್ರಧರ್ಮವನ್ನು ತ್ಯಜಿಸಿ ಯುದ್ಧರಂಗದಿಂದ ಓಡಿಹೋದ ಕ್ಷತ್ರಿಯ, ಧರ್ಮ ಬಿಟ್ಟ ಬ್ರಾಹ್ಮಣ, ವಿದ್ಯೆ ಕೊಟ್ಟು ಪಂಡಿತನನ್ನಾಗಿ ಮಾಡುವ ಗುರುವನ್ನು ನಿಂದಿಸುವ ಶಿಷ್ಯ ಈ ಅಪರಾ ಏಕಾದಶಿಯ ಆಚರಣೆಯಿಂದ ಹಾಗೂ ಉಪವಾಸ ಮಾಡಿ, ವಿಷ್ಣುವಿನ ಪೂಜೆಯನ್ನು ಮಾಡುವದರಿಂದ ಸಕಲ ವಿಧವಾದ ಘೋರ ಪಾತಕಗಳಿಂದ ಬಿಡುಗಡೆ ಹೊಂದಿ ವಿಷ್ಣುವಿನ ಲೋಕಕ್ಕೆ ಹೋಗುತ್ತಾರೆ. ಕಾಶಿಯಲ್ಲಿ ಗ್ರಹಣ ಕಾಲದಲ್ಲಿ ಸ್ನಾನ, ಮಕರ ಸಂಕ್ರಾಂತಿಯಲ್ಲಿ ಪ್ರಯಾಗ ಸ್ನಾನ, ಗಯಾದಲ್ಲಿ ಪಿಂಡದಾನ, ಗುರು ಸಿಂಹರಾಶಿಗೆ ಇದ್ದಾಗ ಗೋದಾವರೀ ಸ್ನಾನ, ಕನ್ಯಾಗತದಲ್ಲಿ ಎಂದರೆ ಗುರು ಕನ್ಯಾರಾಶಿಗೆ ಇದ್ದಾಗ ಕೃಷ್ಣಾನದಿಯಲ್ಲಿ ಸ್ನಾನ, ಬದರೀ ಯಾತ್ರೆ, ಕೇದಾರೇಶ್ವರ ದರ್ಶನ, ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಸುವರ್ಣ ದಾನ, ಹಾಗೂ ದಕ್ಷಿಣಾಸಹಿತವಾದ ಯಜ್ಞದ ಅನುಷ್ಠಾನಗಳಿಂದ ಬರುವ ಫಲವು ಈ ಅಪರಾ ಏಕಾದಶಿಯ ದಿನ ಬರುವ ಫಲದಿಂದ ಬರುವದು.

**ಪಾಪದ್ರುಮ ಕುಠಾರೀಯಂ ಪಾಪೇಂಧನ ದಾವಾನಲಃ ।**
**ಪಾಪಂಧಕಾರ ತರಣಿಃ ಪಾಪಸಾರಂಗ ಕೇಸರೀ ॥**

ಪಾಪವೆಂಬುವ ಮರಕ್ಕೆ ಈ ಅಪರಾ ಏಕಾದಶಿಯು ಒಂದು ನಿಶಿತವಾದ ಕುಠಾರ. ಪಾಪ ಎಂಬ ಸೌದೆಗೆ ಕಾಡ್ಗಿಚ್ಚು. ಪಾಪವೆಂಬ ಕತ್ತಲೆಗೆ ಸೂರ್ಯ. ಪಾಪವೆಂಬ ಚಿಗರೆಗೆ ಸಿಂಹವಿದ್ದಂತೆ ಇರುತ್ತದೆ. ಈ ಅಪರಾ ಏಕಾದಶಿ. ಲೋಕಹಿತಕ್ಕಾಗಿ ಇದನ್ನು ನಾನು ನಿನಗೆ ಹೇಳಿದ್ದೇನೆ. ಇದರ ಪಠಣದಿಂದಲೂ ಶ್ರವಣದಿಂದಲೂ ಸಾವಿರ ಗೋದಾನ ಮಾಡಿದ ಪುಣ್ಯ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜೇಷ್ಠ ಕೃಷ್ಣಪಕ್ಷದ ಅಪರಾ ಎಂಬ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತೊಂದನೇಯ ಅಧ್ಯಾಯ ಮುಗಿದುದು*

# ಜೇಷ್ಠ ಶುಕ್ಲಪಕ್ಷದ ನಿರ್ಜಲಾ ಎಂಬ ಏಕಾದಶಿಯ ಮಾಹಾತ್ಮ್ಯ

ಅಧ್ಯಾಯ - ೫೨

**ಧರ್ಮರಾಜ:-** ಕೃಷ್ಣಾ, ಜೇಷ್ಠ ಶುಕ್ಲಪಕ್ಷದಲ್ಲಿ ಯಾವ ಏಕಾದಶಿ ಬರುತ್ತದೆ?

**ಶ್ರೀಕೃಷ್ಣ:-** ಧರ್ಮರಾಜ, ಈ ವಿಷಯದಲ್ಲಿ ನೀನು ಇಲ್ಲಿಯೇ ಕುಳಿತ ಸತ್ಯವತಿಯ ಮಕ್ಕಳಾದ ಶ್ರೀ ವೇದವ್ಯಾಸ್ಯರನ್ನು ಪ್ರಶ್ನಿಸು. ಸರ್ವಶಾಸ್ತ್ರಗಳ ಸಾರಭೂತವಾದ ತತ್ವಗಳನ್ನು ಸರಿಯಾಗಿ ಅರಿತ ಜ್ಞಾನಮೂರ್ತಿಗಳು ಎಂದರೆ ಈ ವ್ಯಾಸ. ವೇದವೇದಾಂತ ಹಾಗೂ ವೇದಾಂಗಗಳ ಆಚೆಯ ದಡವನ್ನು ಕಂಡರಿಸಿದ ಧೀಮಂತರು ಈ ವೇದವ್ಯಾಸ.

**ಧರ್ಮರಾಜ:-** ನಡುಗಡ್ಡೆಯಲ್ಲಿ ಹುಟ್ಟಿ ದ್ವೈಪಾಯನ ಎಂದು ಪ್ರಸಿದ್ಧರಾದ ಭಗವಾನ್ ವ್ಯಾಸ, ವಿಷ್ಣು ಪ್ರೀತಿಕರವಾದ ಧರ್ಮವು ಯಾವದು? ಅದನ್ನು ತಿಳಿಸಿರಿ. ನಾನು ಮನು, ವಶಿಷ್ಠ ಮುಂತಾದ ಮುನಿ ಮನೀಷಿ ಮಾನ್ಯರು ನಿರೂಪಿಸಿದ ಧರ್ಮಗಳನ್ನು ಕೇಳಿದ್ದೇನೆ. ಆದರೆ ಈಗ ತಾವು ನನಗೆ ವೈಷ್ಣವ ಧರ್ಮಗಳನ್ನು ಅರುಹಿರಿ.

**ವೇದವ್ಯಾಸ:-** ಧರ್ಮರಾಜ, ನೀನು ಹಿಂದೆ ಕೇಳಿದ ಮನುಪ್ರಣೀತವಾದ ಧರ್ಮಗಳು ಹಾಗೂ ವೈದಿಕ ಧರ್ಮಗಳು, ಈ ಕಲಿಯುಗದಲ್ಲಿ ಆಚರಿಸಲು ಅಶಕ್ಯವಾಗಿವೆ. ಅಷ್ಟು ಕಠಿಣ ಧರ್ಮಾಚಾರಗಳನ್ನು ಕಲಿಯುಗದ ಜನರು ಅನುಷ್ಠಾನಗೈಯುವದು ಸಾಧ್ಯವಿಲ್ಲ. ಆದ್ದರಿಂದ ನಾನು ನಿನಗೆ ಬಹು ಸುಲಭ ಹಾಗೂ ಸುಖದ ಉಪಾಯವನ್ನು ಹೇಳುತ್ತೇನೆ. ಅದಕ್ಕೆ ಹತ್ತುವ ಧನ ಅಲ್ಪ. ಪಡುವ ಕಷ್ಟ ಇನ್ನೂ ಅಲ್ಪ. ಆದರೆ ಅದರಿಂದ ಬರುವ ಫಲ ಮಾತ್ರ ಮಹಾ ಮಹತ್ತರ. ಸರ್ವಪುರಾಣಗಳ ಸಾರಸಂದೇಶ ಎಂದರೆ ಶುಕ್ಲಪಕ್ಷ, ಕೃಷ್ಣಪಕ್ಷ ಎರಡೂ ಏಕಾದಶಿಯಂದು ಉಪವಾಸ ಮಾಡಿ, ದ್ವಾದಶಿಯ ದಿನ ಸ್ನಾನ ಮಾಡಿ ಮಡಿಯಿಂದ ಕೇಶವನ ಪೂಜೆಗೈಯಬೇಕು. ಅನಂತರ ಬ್ರಾಹ್ಮಣ ಭೋಜನ ಮಾಡಿಸಿ ತಾನು ಕೂಡ ಪಾರಣೆ ಮಾಡಬೇಕು. ಸೂತಕ ಅಥವಾ ಜನನಾಶೌಚ ಬಂದಾಗಲೂ ಈ ಏಕಾದಶಿಯನ್ನು ಬಿಡಬಾರದು. ಜೀವ ಇರುವವರೆಗೆ ಏಕಾದಶಿ ವ್ರತವನ್ನು ಆಚರಿಸಲೇಬೇಕು. ಎಂಥ ಪಾಪಿಷ್ಠರಾದರೂ ದುರಾಚಾರಿಗಳಾದರೂ ಧರ್ಮತ್ಯಾಗವನ್ನು ಮಾಡಿದ್ದರೂ, ಏಕಾದಶಿಯ ದಿನ ಉಪವಾಸ ಮಾಡಿದರೆ ಅವರಿಗೆ ಯಮನ ಬಳಿಗೆ ಹೋಗುವ ಪ್ರಸಂಗವೇ ಬರುವದಿಲ್ಲ. ಈ ಮಾತನ್ನು ಕೇಳಿ ತುಸು ನಡುಗಿದಂತೆ ಮಾಡಿ ಭೀಮಸೇನನು ವ್ಯಾಸರ ಬಳಿಗೆ ಬಂದು ನಮಸ್ಕರಿಸಿ ಅವರನ್ನು ಕುರಿತು ಪ್ರಶ್ನೆ ಹಾಕಿದ.

**ಭೀಮಸೇನ:-** ಪಿತಾಮಹ, ನಮ್ಮ ಮನೆಯಲ್ಲಿ ಏಕಾದಶಿಯ ದಿನ ಯಾರೂ ತಿನ್ನುವದಿಲ್ಲ. ಧರ್ಮರಾಜ, ಕುಂತಿ, ದ್ರೌಪದಿ, ಅರ್ಜುನ, ನಕುಲ, ಸಹದೇವ ಮುಂತಾದ ಪಾಂಡವ ಕುಲಕ್ಕೆ ಸಂಭಂಧಿಸಿದ ನರನಾರಿಯರಾರೂ ಏಕಾದಶಿಯ ದಿನ ಏನನ್ನೂ ತಿನ್ನುವದಿಲ್ಲ. ಅವರೆಲ್ಲರೂ ಏಕಾದಶಿಯ ವ್ರತವನ್ನು ತಪ್ಪದೇ ಪಾಲಿಸುವರು. ಆದರೆ ನನಗೆ ಮಾತ್ರ ಹಸಿವೆಯನ್ನು ತಾಳಲು ಆಗುವದಿಲ್ಲ. ಬೇಕಾದ ದಾನಧರ್ಮಗಳನ್ನು ನೀಡುತ್ತೇನೆ. ಕೇಶವನ ಪೂಜೆಯನ್ನು ಮಾಡುತ್ತೇನೆ.

**ವ್ಯಾಸ:-** ನಿಮಗೆ ಎಂದಿಗೂ ನರಕ ವಾಸ ದುಃಖ ಬರಬಾರದು ಹಾಗೂ ಸ್ವರ್ಗಾದಿಪುಣ್ಯಲೋಕಗಳ ಪ್ರಾಪ್ತಿಯು ನಿಶ್ಚಿತವಾಗಿಯೂ ಆಗಬೇಕು ಎಂದು ಅಪೇಕ್ಷೆ ಇದ್ದರೆ ಕೃಷ್ಣಪಕ್ಷ ಹಾಗೂ ಶುಕ್ಲಪಕ್ಷ ಎರಡೂ ಏಕಾದಶಿಗಳನ್ನು ತಪ್ಪದೇ ಮಾಡಬೇಕು.

**ಭೀಮಸೇನ:-** ಬುದ್ಧಿವಂತನಾದ ಅಜ್ಜ, ನಿನ್ನ ಎದುರು ನಾನು ನಿಜವನ್ನೇ ನುಡಿಯುತ್ತೇನೆ. ನನಗೆ ಒಂದೇ ಊಟದ ಮೇಲೆ ಇರಲು ಆಗುವದಿಲ್ಲ. ಅಂದಬಳಿಕ ಪೂರ್ಣ ಉಪವಾಸ ನನ್ನಿಂದ ಹೇಗೆ ಸಾಧ್ಯ? ನನ್ನ ಹೊಟ್ಟೆಯಲ್ಲಿ ಯಾವಾಗಲೂ ವೃಕ ಎಂಬ ಹೆಸರಿನ ಅಗ್ನಿಯು ಉರಿಯುತ್ತ ಇರುತ್ತದೆ. ನಾನು ಎಲ್ಲರಿಗಿಂತ ಹೆಚ್ಚು ಹೆಚ್ಚಾಗಿ ತಿಂದಾಗ ಮಾತ್ರ ಅದು ಶಾಂತವಾಗುತ್ತದೆ. ಆದ್ದರಿಂದ ನಾನು ಸಂಪೂರ್ಣವಾದ ಒಂದು ಏಕಾದಶಿ ಉಪವಾಸವನ್ನು ಕೂಡ ಮಾಡಲಾರೆ. ನಾನು ಉಳಿದ ಎಲ್ಲ ಧರ್ಮ ಕರ್ಮಗಳನ್ನೂ ಮಾಡುತ್ತೇನೆ. ಆದರೆ ಏಕಾದಶಿ ಉಪವಾಸವು ಮಾತ್ರ ನನಗೆ ಅಶಕ್ಯ. ಅದನ್ನು ಬಿಟ್ಟು ಸ್ವರ್ಗಾದಿ ದಿವ್ಯ ಫಲಗಳನ್ನು ಕೊಡುವ ಯಾವುದಾದರೂ ವ್ರತ, ವಿಧಾನ, ತಪಸ್ಸು ಇದ್ದರೆ ಅದನ್ನು ನನಗೆ ಹೇಳಿರಿ.

**ವೇದವ್ಯಾಸ:-** ಸೂರ್ಯನು ವೃಷಭ ಅಥವಾ ಮಿಥುನರಾಶಿಗೆ ಬಂದಾಗ ಜೇಷ್ಠ ಮಾಸದಲ್ಲಿ ಈ ಏಕಾದಶಿ ವ್ರತವನ್ನು ಮಾಡಬೇಕು.

**ಗಂಡೂಷಾಚಮನಂ ವಾರಿ ವರ್ಜಯಿತ್ವೋದಕಂ ಬುಧಃ ।**
**ಉಪಭುಂಜೀತನೈವೇಹ ವ್ರತಭಂಗೋನ್ಯಥಾ ಭವೇತ್ ॥**

ಏಕಾದಶಿಯ ಬಾಯಿ ಮುಕ್ಕಳಿಸುವ ನೀರು ಹಾಗೂ ಸಂಧ್ಯಾ ದೇವತಾರ್ಚನಾದಿ ಕಾಲದಲ್ಲಿ ಮಾಡುವ ನೀರಿನ ಆಚಮನ ಇವುಗಳ ಹೊರತು ಬೇರೆ ನೀರನ್ನು ಕುಡಿಯಬಾರದು ಮತ್ತು ಏನನ್ನೂ ತಿನ್ನಕೂಡದು. ಬೇರೆ ಏನಾದರೂ ತಿಂದರೆ ಅಥವಾ ಕುಡಿದರೆ ವ್ರತಭಂಗವಾಗುವದು. ಏಕಾದಶಿ ಉದಯ ಕಾಲದಿಂದ ಆರಂಭಿಸಿ ದ್ವಾದಶಿ ಸೂರ್ಯೋದಯದವರೆಗೆ ನೀರನ್ನು ಕುಡಿಯದೇ ಏನನ್ನೂ ತಿನ್ನದೇ ಮನುಷ್ಯನು ಹನ್ನೆರಡು ದ್ವಾದಶಿ ವ್ರತವನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ದೇವರ ಪೂಜೆಗೈದು ಬ್ರಾಹ್ಮಣರಿಗೆ ಭೋಜನ ಮಾಡಿಸಿ, ನೀರು ಕೊಟ್ಟು, ಬಂಗಾರವನ್ನು ದಕ್ಷಿಣಾರೂಪವಾಗಿ ಅರ್ಪಿಸಿ ಅನಂತರ ತಾನು ಇಷ್ಟಮಿತ್ರರೊಂದಿಗೆ ಊಟಮಾಡಬೇಕು. ಇದರಿಂದ ಒಂದು ವರ್ಷ ಏಕಾದಶಿ ಮಾಡಿದ ಪುಣ್ಯವು ಬರುವದು. ಜೇಷ್ಠ ಶುಕ್ಲ ಏಕಾದಶಿಯ ದಿನ ನಿರ್ಜಲ ಉಪವಾಸ ಮಾಡಿ ಭಗವದಾರಾಧನೆ ಮಾಡಿದವನ ಸನಿಹದಲ್ಲಿಯೂ ಸುಳಿಯಲಾರರು ದಂಡಧಾರಿಗಳಾದ ಯಮದೂತರು. ಆ ದಿನ ನೀರು ತುಂಬಿದ ಕೊಡವನ್ನು ವಸ್ತ್ರ ಹೊದಿಸಿ ಯಥಾಶಕ್ತಿ ಬಂಗಾರದೊಂದಿಗೆ ದಾನ ಕೊಡಬೇಕು. ಅದರಿಂದ ಒಂದು ಕೋಟಿ ಸುವರ್ಣದಾನದ ಪುಣ್ಯ ಬರುವದು. ಈ ನಿರ್ಜಲಾ ಏಕಾದಶಿಯ ದಿನ ಉಪವಾಸ ಮಾಡಿ ಪಾರಣೆಗೈಯುವ ಮುನ್ನ ಸ್ತ್ರೀಯರಾಗಲೀ, ಪುರುಷರಾಗಲೀ, ಶ್ರದ್ಧೆಯಿಂದ ಜಲಶಾಯಿಯಾದ ಎಂದರೆ ನೀರಿನಲ್ಲಿ ಶಯನ ಮಾಡಿದ ವಿಷ್ಣುವನ್ನು ಪೂಜಿಸಬೇಕು. ಮತ್ತು ಒಂದು ಪಾತ್ರೆಯಲ್ಲಿ ನೀರು ತುಂಬಿ ಅದರ ನೀರಿನಲ್ಲಿ ಹಸುವಿನ ಆಕಾರವನ್ನು ಬರೆದು ಜಲಧೇನುವನ್ನು ದಾನ ಕೊಡಬೇಕು. ಅಥವಾ ಗಟ್ಟಿಯಾಗಿ ಹೆರೆತು

ಘನೀಭೂತವಾದ ತುಪ್ಪದಿಂದ ಒಂದು ಹಸುವಿನ ಆಕಾರ ಮಾಡಿ ಅದನ್ನು ಯೋಗ್ಯ ವ್ಯಕ್ತಿಗೆ ದಾನ ನೀಡಬೇಕು. ಅಥವಾ ವಿದ್ವಾಂಸರಿಗೆ ಮೃಷ್ಟಾನ್ನ, ಪಕ್ವಾನ್ನಗಳ ಭೋಜನ ಮಾಡಿಸಿ ವಿಶೇಷ ದಕ್ಷಿಣೆಕೊಟ್ಟು ಸಂತೋಷಪಡಿಸಬೇಕು. ಈ ಏಕಾದಶಿಯ ದಿನ ಉಪವಾಸ ಮಾಡದೇ ಇದ್ದವರು ಮಹಾಪಾಪಿಗಳು ಮತ್ತು ದುರಾಚಾರಿಗಳು. ಈ ಏಕಾದಶಿಯಂದು ಭಗವಂತನಲ್ಲಿ ಭಕ್ತಿ ಮಾಡಿ ಶ್ರೀಹರಿಯನ್ನು ಪೂಜಿಸಿ ಉಪವಾಸವಿದ್ದು ರಾತ್ರಿ ಶ್ರೀ ಹರಿಯ ಮಂದಿರದಲ್ಲಿ ಜಾಗರ ಮಾಡುವವರು ತಮ್ಮ ಹಿಂದಿನ ನೂರು ತಲೆಯ ಪಿತೃಗಳನ್ನು ಮುಂದಿನ ನೂರು ಪೀಳಿಗೆಯ ಸಂತಾನವನ್ನು ವಿಷ್ಣುವಿನ ಮಂದಿರಕ್ಕೆ ಕರೆದೊಯ್ಯುವರು. ಅಂದು ಅನ್ನ, ವಸ್ತ್ರ, ಹಸು, ನೀರು, ಹಾಸಿಗೆ, ಆಸನ, ಕಮಂಡಲ, ಛತ್ರ, ಪಾದರಕ್ಷೆ ಮುಂತಾದವುಗಳನ್ನು ಸತ್ಪಾತ್ರದಲ್ಲಿ ದಾನ ಕೊಡಬೇಕು.

ಈ ಏಕಾದಶಿಯ ದಿನ ಪ್ರಾರಂಭದಲ್ಲಿಯೇ (ಇಂದು) ಆಹಾರವನ್ನು ಉಣ್ಣದೇ ನೀರನ್ನು ಕುಡಿಯದೇ ಪರಿಶುದ್ಧವಾದ ನಿರ್ಜಲ ಏಕಾದಶಿಯನ್ನು ಮಾಡುತ್ತೇನೆ ಎಂದು ಸಂಕಲ್ಪವನ್ನು ಮಾಡಬೇಕು. ಆಚಮನದ ಹೊರತು ಬಾಯಲ್ಲಿ ನೀರನ್ನು ಹಾಕದೇ ಉಪವಾಸ ಮಾಡಿ ದ್ವಾದಶಿಯಂದು ಗಂಧ, ಧೂಪ, ಹೂ, ತುಳಸಿ, ಬಟ್ಟೆ ಮುಂತಾದ ವಿಧಾನಗಳಿಂದ ವಿಧಿಪೂರ್ವಕವಾಗಿ ಪೂಜೆ ಮಾಡಬೇಕು. ಮತ್ತು ನೀರು ತುಂಬಿದ ಬಿಂದಿಗೆಯನ್ನು ವಿದ್ವಾಂಸರಿಗೆ ದಾನ ನೀಡಬೇಕು. ಆ ದಾನ ಕಾಲದಲ್ಲಿ

**ದೇವ ದೇವ ಹೃಷೀಕೇಶ ಸಂಸಾರಾರ್ಣವ ತಾರಕ ।**
**ಉದಕುಂಭ ಪ್ರದಾನೇನ ನಯಮಾಂ ಪರಮಾಂ ಗತಿಂ ॥**

ಎಂಬ ಮಂತ್ರವನ್ನು ಹೇಳಿ ಜಲಪೂರ್ಣ ಕುಂಭವನ್ನು ದಾನ ನೀಡಬೇಕು. ಮತ್ತು ತನ್ನ ಯೋಗ್ಯತೆ ಇದ್ದಷ್ಟು ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಹಾಗೂ ತನ್ನ ವೈಭವ ಹಾಗೂ ಯೋಗ್ಯತೆಯನ್ನು ಅನುಸರಿಸಿ ಯೋಗ್ಯರಾದ ಬ್ರಾಹ್ಮಣರಿಗೆ ಉದಕುಂಭ ದಾನವನ್ನು ಮಾಡಬೇಕು.

ಈ ಮಾತನ್ನು ಕೇಳಿ ಭೀಮಸೇನನು ತನ್ನ ನಿಯಮದ ಪ್ರಕಾರ ಏಕಾದಶಿ ಮಾಡುವಂತೆ ಆ ಏಕಾದಶಿಯ ದಿನವೂ ಉಪವಾಸ ಮಾಡಿ ದ್ವಾದಶಿಯ ದಿನ ಪಾರಣೆಗೈದು ಬ್ರಾಹ್ಮಣರ ಭೋಜನ ಮಾಡಿಸಿ ತಾನೂ ಕೂಡ ಸೋದರರೊಂದಿಗೆ ಊಟ ಮಾಡುತ್ತಿದ್ದ. ಈ ಏಕಾದಶಿ ವ್ರತವನ್ನು ಪಾಲಿಸುವದರಿಂದ ಸರ್ವಪಾಪದಿಂದ ವಿಮುಕ್ತನಾಗಿ ವಿಷ್ಣುಮಂದಿರಕ್ಕೆ ತೆರಳುತ್ತಾನೆ.

ಆದರಿಂದ ಈ ದ್ವಾದಶಿಯು ಪಾಂಡವ ದ್ವಾದಶಿ ಎಂದು ಪ್ರಸಿದ್ಧವಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜೇಷ್ಠ ಶುಕ್ಲಪಕ್ಷದ ನಿರ್ಜಲಾ ಎಂಬ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತೆರಡನೇಯ ಅಧ್ಯಾಯ ಮುಗಿದುದು*

—o—

# ಆಷಾಢ ಕೃಷ್ಣ ಪಕ್ಷದ ಯೋಗಿನೀ ಏಕಾದಶಿಯ ಮಾಹಾತ್ಮ್ಯ

ಅಧ್ಯಾಯ - ೫೩

**ಧರ್ಮರಾಜ:-** ಕೃಷ್ಣ, ಆಷಾಢ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿ ಯಾವುದು ಅದರ ಹೆಸರೇನು?

**ಶ್ರೀಕೃಷ್ಣ:-** ಆಷಾಢ ಕೃಷ್ಣಪಕ್ಷದಲ್ಲಿ ಬರುವ ಯೋಗಿನಿ ಎಂಬ ಏಕಾದಶಿಯು ಸರ್ವಪಾಪಪರಿಹಾರಕ ಆಗಿದೆ. ಸಂಸಾರ ಸಮುದ್ರದಲ್ಲಿ ಮುಳುಗುವವರಿಗೆ ಏಕಾದಶಿ ಒಂದು ಭದ್ರನೌಕೆ. ವ್ರತ ಮಾಡುವವರಿಗೆ ಸರ್ವ ವ್ರತಗಳ ಪುಣ್ಯಸಾರವನ್ನು ಪ್ರದಾನಮಾಡುವದು. ಈ ಯೋಗಿನಿ ವ್ರತ.

ಈ ವಿಷಯದಲ್ಲಿ ನಿನಗೆ ಒಂದು ಉಪಾಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಅಲಕಾಪಟ್ಟಣದಲ್ಲಿ ಶಿವಭಕ್ತನಾದ ಕುಬೇರನ ಆಡಳಿತ. ಅವನು ಪರಮ ಈಶ್ವರ ಭಕ್ತ. ಅನುದಿನವೂ ವಿಚ್ಛೇದವಿಲ್ಲದೇ ಅರ್ಚಿಸುತ್ತಿದ್ದ ಪರಶಿವನನ್ನು ಬಗೆಬಗೆಯ ಹೂ ಹಾರಗಳಿಂದ. ಅವನು ಈ ದೈನಂದಿನ ಪುಷ್ಪಾರ್ಚನೆಗೆ ಬೇಕಾಗುವ ಹೂಗಳನ್ನು ಆಯ್ದುಕೊಂಡು ಬರಲು ಹೇಮಮಾಲಿ ಎಂಬ ಹೆಸರಿನ ಯಕ್ಷನನ್ನು ನಿಯಮಿಸಿದ್ದ. ಆ ಹೇಮಮಾಲಿಯು ಬನಬನಗಳನ್ನು ತಿರುಗಿ ಚೈತ್ರವನ ಹಾಗೂ ನಂದನವನ. ಚಿತ್ರೋದ್ಯಾನ, ಮುಂತಾದ ಉಪವನಗಳಿಂದ ವಿವಿಧ ಪುಷ್ಪಗಳನ್ನು ಆಯ್ದು ತಂದು ಕುಬೇರನ ಶಿವಪೂಜೆಗೆ ಒದಗಿಸುತ್ತಿದ್ದ. ಅವನ ಮಡದಿ ವಿಶಾಲಾಕ್ಷಿ ಸಾವಿರ ಅಪ್ಸರೆಯರಲ್ಲಿಯೂ ಎದ್ದು ಕಾಣುವಂಥ ಚೆಲುವೆ. ಲಕ್ಷಾವಧಿ ಯಕ್ಷಿಯರಲ್ಲಿಯೂ ಸೌಂದರ್ಯದ ಅಧಿರಾಣಿ ಆಗಿದ್ದಳು ಈ ವಿಶಾಲಾಕ್ಷಿ. ಅವಳ ರೂಪಸಿರಿಗೆ ಮಾರು ಹೋದ ಹೇಮಮಾಲಿಯು ಒಂದು ದಿನ ಕುಬೇರನ ಪುಷ್ಪಾರ್ಚನೆಗೆ ಹೂಗಳನ್ನು ಆಯ್ದು ತಂದು ತನ್ನ ಮನೆಯಲ್ಲಿಯೇ ಇಟ್ಟುಕೊಂಡ. ಅವುಗಳನ್ನು ಒಯ್ದು ಒಡೆಯನ ಮನೆಗೆ ತಲುಪಿಸಲು ಅವನಿಂದ ಆಗಲಿಲ್ಲ. ತನ್ನ ಮೆಚ್ಚಿನ ಮನದನ್ನೆಯೊಡನೆ ಮಧುರಾಲಾಪ ಪ್ರೇಮಾಲಾಪ ಮಾಡುತ್ತ ಮನೆಯಲ್ಲಿಯೇ ಕುಳಿತುಕೊಂಡ. ಪತ್ನಿಯ ಪ್ರೇಮರಸದಲ್ಲಿ ಆಸಕ್ತನಾದ ಅವನು ಅಂದು ಕುಬೇರನ ಮನೆಗೆ ಹೋಗಲಿಲ್ಲ. ಹೂಗಳನ್ನು ತಂದು ಕೊಡಲಿಲ್ಲ.

ಅತ್ತ ಕುಬೇರ ಪ್ರತಿ ದಿನದಂತೆ ಪ್ರಾರಂಭಿಸಿದ ತನ್ನ ಶಿವಪೂಜೆಯನ್ನು. ಅಭಿಷೇಕ ಆದ ಬಳಿಕ ಪರಮೇಶ್ವರನ ಪೂಜೆಗೆ ಹೂಗಳು ಇಲ್ಲದಂತಾದವು. ಮಧ್ಯಾಹ್ನದ ವರೆಗೆ ಅವನು ಹೇಮಮಾಲಿಯ ದಾರಿಯನ್ನು ಕಾಯ್ದ. ಸೂರ್ಯ ನಡುನೆತ್ತಿಗೆ ಏರಿದ. ಹೇಮಮಾಲಿ ತನ್ನ ಮನೆಯಲ್ಲಿ ಕಾಂತಾಕೇಲೀಲೋಲನಾಗಿ ಕುಳಿತುಕೊಂಡ. ಸೂರ್ಯ ನೆತ್ತಿಗೆ ಏರಿದಾಗ ಯಕ್ಷರಾಜನ ಕೋಪವು ನೆತ್ತಿಗೇರಿತು. ಅವನ ಪರಿಚಾರಕರನ್ನು ಕರೆದು - ''ದೂತರೇ, ಹೇಮಮಾಲಿಯ ಮನೆಗೆ ಹೋಗಿ ಬನ್ನಿ. ಅವನು ಏನು ಮಾಡುತ್ತಿದ್ದಾನೆ? ಇಂದು ಶಿವಾರ್ಚನೆಗೆ ಅವನು ಏಕೆ ಹೂಗಳನ್ನು ತಂದು ಒಪ್ಪಿಸಲಿಲ್ಲ ? ತಿಳಿದುಕೊಂಡು ಬನ್ನಿರಿ'' ಎಂದು ಹೇಳಿ ಕಳುಹಿಸಿದ.

ಕೂಡಲೇ ಹೇಮಮಾಲಿಯ ಮನೆಗೆ ಓಡಿದರು ಕುಬೇರ ಕಿಂಕರರು. ಮನೆಯಲ್ಲಿ ಹೇಮಮಾಲಿಯು ತನ್ನ ತಾವರೆಮೊಗದ ಮಡದಿಯೊಡನೆ ಚಕ್ಕಂದದಿಂದ ವಿಹಾರಲೋಲನಾಗಿದ್ದ. ಅದನ್ನು ಆ ಸೇವಕರು ನೋಡಿಕೊಂಡು ಬಂದು ಯಕ್ಷರಾಜನಿಗೆ ವರದಿ ಒಪ್ಪಿಸಿದರು.

ಕುಬೇರ ಸ್ವಾಮಿಯು ಕೂಡಲೇ ಆ ಹೇಮಮಾಲಿಯನ್ನು ಹಿಡಿದು ತರಿಸಿದ ತನ್ನ ಸೇವಕರಿಂದ ಭಯಭ್ರಾಂತನಾದ ಹೇಮಮಾಲಿಯು ಸ್ನಾನಮಾಡದೇ ಕೆದರಿದ ಮುಡಿ ಹೆದರಿದ ಕಂಗಳಿಂದ ನಡಗುತ್ತ ಯಕ್ಷರಾಜನ ಎದುರು ಬಂದು ನಿಂತುಕೊಂಡ. ಅವನನ್ನು ಕಂಡ ಕೂಡಲೇ ಕೋಪ ಕೆರಳಿತು ಕುಬೇರನಿಗೆ. ತುಟಿ ಅದುರಿತು. ಕಂಠ ಗುಡುಗಿತು.

**ಕುಬೇರ:-** ದುರ್ಬುದ್ಧಿಯೇ, ನೀನು ನಿನ್ನ ಕಾಮಿನೀ ಕಿಂಕರನಾಗಿ ಶಂಕರನನ್ನು ತಿರಸ್ಕರಿಸಿದೆ. ಹೆಂಡತಿಗಾಗಿ ಹರನ ಹೂವಿನ ಸೇವೆಯನ್ನು ತಪ್ಪಿಸಿದೆ. ಅದುದರಿಂದ ಪಾಪಿಯೇ, ನಿನಗೆ ಕುಷ್ಠರೋಗ ತಗಲಲಿ. ಅತಿಕಾಮಿಯಾದ ನಿನಗೆ ಪತ್ನಿಯ ವಿಯೋಗವು ಆಗಲಿ. ಈ ಅಲಕಾ ಪಟ್ಟಣದಿಂದ ನೀನು ಸ್ಥಾನಭ್ರಷ್ಟನಾಗಿ ದೂರ ಹೋಗು ಪ್ರಮಥ ಗಣದಲ್ಲಿಯೇ ಅಧಮನಾದ ಹೇಮಮಾಲಿಯೇ, ಶಿವದ್ರೋಹಿಯಾದ ನಿನ್ನ ದೇಹಕ್ಕೆ ಹದಿನೆಂಟು ಬಗೆಯ ಕುಷ್ಠರೋಗಗಳು ಅಂಟಿಕೊಳ್ಳಲಿ.

ಹೀಗೆ ಐಶ್ವರ್ಯದ ಅಧಿಪತಿಯಾದ ಕುಬೇರನು ಶಾಪವನ್ನು ಎಸೆದ ಕೂಡಲೇ ಹೇಮಮಾಲಿಯು ತನ್ನ ಸ್ಥಾನದಿಂದ ಭ್ರಷ್ಟನಾದ. ಬಗೆಬಗೆಯ ಕುಷ್ಠರೋಗಗಳು ಅವನ ಮೈಯನ್ನು ಮುತ್ತಿದವು. ದುಃಖೋದ್ರೇಕದ ಪರಸೀಮೆಯನ್ನೇ ತಲುಪಿದ ಆ ಪಾಪಿ. ರಾತ್ರಿ ನಿದ್ರೆಯಿಲ್ಲ. ಹಗಲು ಸಮಾಧಾನವಿಲ್ಲ. ಮನಸ್ಸಿನ ನೆಮ್ಮದಿ ಯಾವ ಕಾಲದಲ್ಲಿಯೂ ಇಲ್ಲ. ಬಿಸಿಲಲ್ಲಿ ನಿಂತರೆ ಬೇಗುದಿ, ನೆರಳಲ್ಲಿ ಕುಳಿತರೂ ಸಂಕಟ. ಯಾವಾಗಲೂ ಉರಿ. ಶಿವಪೂಜೆಗೆ ಆತಂಕವನ್ನು ಉಂಟು ಮಾಡಿದ್ದರಿಂದ ಅವನ ನೆನಪಿನ ಶಕ್ತಿ ಕಳೆದುಹೋಗಿದ್ದಿತು. ಹೀಗೆ ರೋಗಾಕ್ರಾಂತನಾದ ಆ ಯಕ್ಷನು ಕಂಡಕಂಡಲ್ಲಿ ಅಂಡಲೆಯುತ್ತ ಕೊನೆಗೆ ಒಂದು ದಿನ ಹಿಮಾಲಯಕ್ಕೆ ಬಂದ.

ಆ ಹಿಮಗಿರಿಯ ಒಂದು ಶಿಖರದಲ್ಲಿ ಭಗವಾನ್ ಮಾರ್ಕಂಡೇಯ ಮಹರ್ಷಿ ಮಂಡಿಸಿದ್ದ. ಬ್ರಹ್ಮದೇವನಿಗೆ ಸಮಾನವಾದ ಆಯುಸ್ಸು ಆ ಮಾರ್ಕಂಡೇಯ ಮಹರ್ಷಿಗೆ. ಈ ಪಾಪಿ ದೂರಿಂದಲೇ ಕಂಡ ಆ ಮಹಾಮುನಿಯನ್ನು. ಭಕ್ತಿಯಿಂದ ವಂದಿಸಿದ ಆ ಋಷಿಪುಂಗವನ ಅಡಿದಾವರೆಗೆ. ಅಂಜಿಕೆಯಿಂದ ಗಡಗಡ ನಡಗುತ್ತಿರುವ ಆ ಯಕ್ಷನನ್ನು ದೂರದಿಂದಲೇ ನೋಡಿದ ಆ ಮೃಕಂಡು ಕುಮಾರ. ಕೈ ಮಾಡಿ ಕರೆದ. ಪ್ರೀತಿಯಿಂದ ನುಡಿದ.

**ಮಾರ್ಕಂಡೇಯ:-** ನಿನಗೇಕೆ ಈ ಕೆಟ್ಟ ರೋಗವು ತಗಲಿದೆ? ಇಂಥ ನಿಂದ್ಯವಾದ ಅವಸ್ಥೆ ನಿನಗೆ ಬರಲು ಕಾರಣವೇನು?

**ಹೇಮಮಾಲಿ:-** ಮಹಾಮುನಿಯೇ, ನಾನು ರಾಜರಾಜನಾದ ಕುಬೇರನ ಅನುಚರ. ಹೇಮಮಾಲಿ ಎಂಬ ಹೆಸರು ಹೊತ್ತ ಒಬ್ಬ ಕ್ಷುದ್ರ ಯಕ್ಷ. ನಾನು ನನ್ನ ಜಾತಿ ಸ್ವಭಾವಕ್ಕೆ ಅನುಗುಣವಾಗಿ ಮಹಾ ಸ್ವೈರ, ಕಾಂತಾಕಾಮಿ, ಪತ್ನೀಪ್ರೇಮಿ. ಪ್ರತಿದಿನ ನಮ್ಮ ಒಡನೆಯನಾದ ಕುಬೇರನ ಪರಮೇಶ್ವರನ ಪೂಜೆಗೆ ಪುಷ್ಪಗಳನ್ನು ಆಯ್ದು ತಂದುಕೊಡುವದು ನನ್ನ ಉದ್ಯೋಗ. ಅನುದಿನವೂ ಮಾನಸ ಸರೋವರ, ಹಾಗೂ ಚೈತ್ರರಥ, ನಂದನವನ ಮುಂತಾದ ಕಡೆಗಳಿಂದ ಒಳ್ಳೊಳ್ಳೆ ಕಂಪು ಸೂಸುವ ಅರಳು

ಮೊಗ್ಗುಗಳನ್ನು ತಂದುಕೊಡುವದು ನನ್ನ ಹೊಣೆಗಾರಿಕೆ. ಆದರೆ ಲಲನಾಲಂಪಟನಾದ ನಾನು ಒಂದು ದಿನ ಹೊತ್ತು ಗೊತ್ತಾಗದೇ ಮಡದಿಯೊಂದಿಗೆ ಸರಸಾಲಾಪ ಮಾಡುತ್ತ ಕುಳಿತೆ. ಕುಬೇರನು ಶಿವನಿಗೆ ಮಾಡುವ ಪುಷ್ಪಾರ್ಚನೆಯ ಸಮಯವು ಮೀರಿಹೋಯಿತು. ನಾನು ಬಾರದ್ದನ್ನೂ, ಹೂಗಳನ್ನು ತಾರದ್ದನ್ನೂ ಕಂಡು ಕೆಂಡದಂತಾದ ಕ್ರುದ್ಧ ಕುಬೇರ ನನಗೆ ಶಾಪ ಹಾಕಿದ. ಆದರಿಂದ ನನಗೆ ಅಂಟಿಕೊಂಡಿದೆ ಈ ಕುಷ್ಠ. ಬಾಳಿನುದ್ದಕ್ಕೂ ನನಗೆ ಕಷ್ಟ. ಎಲ್ಲಕ್ಕಿಂತ ನನಗೆ ಅಸಹನೀಯವಾದುದೆಂದರೆ ನನ್ನ ಮಡದಿಯೊಡನೆ ವಿಯೋಗ. ಈ ಕುಷ್ಠ ಹಾಗೂ ಭಾರ್ಯಾವಿಯೋಗದ ಕಷ್ಟ ಇವೆರಡರಿಂದ ಪೀಡಿತನಾದ ನಾನು ನಿನ್ನ ಬಳಿಗೆ ಬಂದಿದ್ದೇನೆ.

**"ಸತಾಂ ಸ್ವಭಾವತಶ್ಚಿತ್ತಂ ಪರೋಪಕರಣೇ ಕ್ಷಮಂ".**

ಸಜ್ಜನರ ಮನಸ್ಸು ಸ್ವಾಭಾವಿಕವಾಗಿ ಹೆರವರಿಗೆ ಉಪಕಾರ ಮಾಡುವದರಲ್ಲಿಯೇ ಸಮರ್ಥವಾಗಿರುತ್ತದೆ. ಆದುದರಿಂದ ನೀವು ನನ್ನನ್ನು ಕಾಪಾಡಿರಿ. ನಾನು ಅಪರಾಧಿಯಾಗಿದ್ದರೂ ಕ್ಷಮಿಸಿರಿ.

**ಮಾರ್ಕಂಡೇಯ:-** ನೀನು ನಿಜವನ್ನೇ ನುಡಿದೆ. ಒಂದೂ ಹುಸಿಯನ್ನು ಆಡಲಿಲ್ಲ. ಇದರಿಂದ ನನಗೆ ನಿನ್ನ ಮೇಲೆ ಹೆಚ್ಚಿನ ಪ್ರೀತಿ ಉಂಟಾಗಿದೆ. ನಿನಗೆ ಒಂದು ವ್ರತವನ್ನು ಉಪದೇಶಿಸುತ್ತೇನೆ ಕೇಳು.

ಆಷಾಢ ಕೃಷ್ಣಪಕ್ಷ ಏಕಾದಶಿ ದಿನದಂದು ಯೋಗಿನೀ ವ್ರತವನ್ನು ಆಚರಿಸಬೇಕು. ಈ ವ್ರತದ ಪುಣ್ಯದಿಂದ ಕುಷ್ಠಾದಿ ರೋಗಗಳು ದೂರವಾಗುತ್ತವೆ.

ಮಾರ್ಕಂಡೇಯ ಮುನಿಗಳ ಈ ಮಾತನ್ನು ಕೇಳಿ ಶಾಪಗ್ರಸ್ತನಾದ ಆ ಹೇಮಮಾಲಿಯು ಆ ಮಹರ್ಷಿಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದ. ಪರಮ ಸಂತುಷ್ಟರಾದ ಮಾರ್ಕಂಡೇಯ ಮುನಿಗಳು ಆ ಹೇಮಮಾಲಿಯನ್ನು ಎಬ್ಬಿಸಿದರು. ಈ ಯೋಗಿನೀ ಏಕಾದಶಿಯ ಉಪದೇಶವನ್ನು ಮಾಡಿದರು. ಗುರುಗಳ ಆದೇಶದಂತೆ ಅವನು ಏಕಾದಶಿ ವ್ರತವನ್ನು ಚೆನ್ನಾಗಿ ಆಚರಿಸಿದ. ಆ ಪುಣ್ಯದಿಂದ ಅವನಿಗೆ ಯಾವಜ್ಜನ್ಮ ಸುಖವು ಲಭ್ಯವಾಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಆಷಾಢ ಕೃಷ್ಣ ಪಕ್ಷದ ಯೋಗಿನೀ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಆಷಾಢ ಶುಕ್ಲಪಕ್ಷದ ಶಯನೀ ಏಕಾದಶಿಯ ಮಹಿಮೆ | ಅಧ್ಯಾಯ - ೫೪

**ಧರ್ಮರಾಜ:-** ಆಷಾಢ ಶುಕ್ಲ ಪಕ್ಷದಲ್ಲಿ ಬರುವ ಏಕಾದಶಿಯು ಯಾವದು? ಅದರ ಹೆಸರು ಏನು? ಅದನ್ನು ಆಚರಿಸುವ ವಿಧಿ ವಿಧಾನ ಏನು? ಅದನ್ನೆಲ್ಲ ಒಂದೊಂದಾಗಿ ಹೇಳು.

**ಶ್ರೀಕೃಷ್ಣ:-** ಆಷಾಢ ಶುಕ್ಲ ಪಕ್ಷ ಏಕಾದಶಿಗೆ ಶಯನೀ ಏಕಾದಶಿ ಎನ್ನುವರು. ಪಾಪಿಗಳ ಪಾಪನಾಶಕ್ಕಾಗಿಯೇ ಈ ಶಯನೀ ಏಕಾದಶಿಯನ್ನು ನಿರ್ಮಿಸಿದ್ದಾನೆ ಬ್ರಹ್ಮ.

ಆಷಾಢ ಶುಕ್ಲ ಏಕಾದಶಿಯ ಹೊರತು ಮೋಕ್ಷಪ್ರದವಾದುದು ಬೇರೆ ಇಲ್ಲ. ಈ ಏಕಾದಶಿಯಂದು ಕಮಲ ಪುಷ್ಪಗಳಿಂದ ವಾಮನ ದೇವರ ಪೂಜೆ ಮಾಡಿದರೆ ಮೂರು ಲೋಕಗಳನ್ನೇ ಪೂಜೆ ಮಾಡಿದ ಪುಣ್ಯ ಬರುವದು. ಆ ಶಯನೀ ಏಕಾದಶಿಯ ದಿನ ಉಪವಾಸ ಮಾಡಿದರೆ ಹರಿ, ಹರ, ಬ್ರಹ್ಮ ಎಂಬ ತ್ರಿಮೂರ್ತಿಗಳ ಪೂಜೆ ಮಾಡಿದಷ್ಟು ಪುಣ್ಯ ಪ್ರಾಪ್ತವಾಗುವದು.

**ಧರ್ಮರಾಜ:-** ಪುರುಷೋತ್ತಮ, ನನಗೆ ಇಲ್ಲಿ ಒಂದು ಸಂದೇಹ. ದೇವತೆಗಳಿಗೆಲ್ಲ ನಿಯಾಮಕನಾದ ನೀನು ಮಲಗುವದು ಹೇಗೆ? ನೀನು ಭೂಮಿಯಲ್ಲಿ ಸಕಲ ಪ್ರದೇಶವನ್ನು ಹೇಗೆ ವ್ಯಾಪಿಸಿದೆ? ನೀನೇ ಎಲ್ಲವನ್ನು ವ್ಯಾಪಿಸಿದ ಬಳಿಕ ಉಳಿದ ಜನ ಎಲ್ಲಿ ನೆಲೆಸುವರು? ಹೇಗೆ ಇರುವರು? ಈ ಎಲ್ಲ ನನ್ನ ಸಂಶಯಗಳನ್ನು ಹೋಗಲಾಡಿಸು.

**ಶ್ರೀಕೃಷ್ಣ:-** ರಾಜ ಶ್ರೇಷ್ಠ, ಶ್ರವಣ ಮಾತ್ರದಿಂದ ಸರ್ವಪಾಪಗಳನ್ನು ಪರಿಹರಿಸುವ ಈ ಶ್ರೀಹರಿಯ ಮಹಾಮಹಿಮೆಯನ್ನು ಕೇಳು. ಹಿಂದೆ ತ್ರೇತಾಯುಗದಲ್ಲಿ ಬಲಿ ಎಂಬ ದೈತ್ಯ ಚಕ್ರವರ್ತಿ ಇದ್ದ. ಅವನು ಪರಮ ವಿಷ್ಣು ಭಕ್ತ. ಬಗೆಬಗೆಯ ಯಜ್ಞಗಳಿಂದ ಶ್ರೀಹರಿಯನ್ನು ಉದ್ದೇಶಿಸಿ ಹೋಮ ಹವನ, ಪೂಜೆ ಮುಂತಾದವುಗಳನ್ನೂ ಹರಿಪ್ರೀತ್ಯರ್ಥವಾಗಿ ಬಗೆಬಗೆಯ ವ್ರತೋಪವಾಸಗಳನ್ನೂ ಮಾಡುತ್ತಲೇ ಇದ್ದ. ಇದರಂತೆ ಆ ಕಾಲದಲ್ಲಿ ರಾಜ್ಯವನ್ನು ಕಳೆದುಕೊಂಡ ದೇವೇಂದ್ರನು ವೇದೋಕ್ತ ವ್ರತಗಳಿಂದ ನನ್ನನ್ನು ಪೂಜಿಸಿದ. ಆಚಾರ್ಯ ಬೃಹಸ್ಪತಿಯು ಮಂತ್ರಸ್ತೋತ್ರಗಳಿಂದ ನನ್ನನ್ನು ಪೂಜಿಸಿದರು. ಆ ಸುರವೃಂದದ ಪ್ರಾರ್ಥನೆಯನ್ನು ಮನ್ನಿಸಿ ನಾನು ವಾಮನ ರೂಪದಿಂದ ಭೂಮಿಗೆ ಐದನೇಯ ಸಲ ಮತ್ತೆ ಅವತರಿಸಿ ಬಂದೆ. ಬಲಿಚಕ್ರವರ್ತಿಯಿಂದ ಪೂಜಿತನಾದೆ. ಮಾತಿನಿಂದಲೇ ದೈತ್ಯರನ್ನೆಲ್ಲ ನಾನು ಗೆದ್ದೆ. ಆಗ ಅವರು ಗುರು, ಶುಕ್ರ, ''ಇವನು ಸಾಕ್ಷಾತ್ ನಾರಾಯಣ'' ಎಂದು ಹೇಳಿ ದಾನ ಕೊಡಲು ಹೊರಟ ಬಲಿರಾಜನನ್ನು ತಡೆದು ನಿಲ್ಲಿಸಿದ. ಆದರೂ ಬಲಿರಾಜ ಅವನ ಮಾತನ್ನು ಕೇಳದೇ ನಾನು ಬೇಡಿದ ಮೂರು ಪಾದ ಭೂಮಿಯನ್ನು ದಾನ ನೀಡಿದ್ದೇನೆ ಎಂದು ಹೇಳಿ ಸಂಕಲ್ಪ ಮಾಡಿ ನನ್ನ ಕೈಯಲ್ಲಿ ನೀರನ್ನು ಬಿಟ್ಟ. ಆ ಕ್ಷಣದಲ್ಲಿಯೇ ನಾನು ತ್ರಿವಿಕ್ರಮ ರೂಪಿಯಾಗಿ ಬಾನುದ್ದ ಬ್ರಹ್ಮಾಂಡದಗಲ ಬೆಳೆದ ನಿಂತೆ. ಭೂಲೋಕದಲ್ಲಿ ನಾನು ಕಾಲು ಊರಿದ್ದೆ. ನನ್ನ ಮೊಣಕಾಲುಗಳು ಭುವರ್ಲೋಕವನ್ನು ವ್ಯಾಪಿಸಿದ್ದವು. ಸ್ವರ್ಲೋಕವೆಲ್ಲವೂ ನನ್ನ ಸೊಂಟದಿಂದ

ತುಂಬಿಹೋಯಿತು. ಮಹರ್ಲೋಕವನ್ನೆಲ್ಲ ನನ್ನ ಹೊಟ್ಟೆಯಲ್ಲಿ ಅಳವಡಿಸಿಕೊಂಡೆ. ಎದೆಯಲ್ಲಿ ಜನಲೋಕ, ಕೊರಳಲ್ಲಿ ತಪೋಲೋಕ, ಮುಖದಲ್ಲಿ ಸತ್ಯಲೋಕ ಹೊಂದಿಕೊಂಡವು. ಅದರ ಮೇಲಿನ ಭಾಗವನ್ನೆಲ್ಲ ನನ್ನ ತ್ರಿವಿಕ್ರಮ ರೂಪದ ತಲೆಯು ವ್ಯಾಪಿಸಿಕೊಂಡು ನಿಂತುಕೊಂಡಿತು. ಚಂದ್ರ, ಸೂರ್ಯ, ಗ್ರಹ, ನಕ್ಷತ್ರ, ಮುಂತಾದ ಎಲ್ಲ ಅಂತರಿಕ್ಷದ ಜ್ಯೋತಿಷ್ಪುಂಜಗಳು ನನ್ನಲ್ಲಿ ಅಡಗಿದವು. ಇಂದ್ರಾದಿ ದೇವತೆಗಳು ಯಕ್ಷ, ಗಂಧರ್ವನಾಗ ಕಿನ್ನರರು ಬಗೆ ಬಗೆಯ ವೇದಮಂತ್ರಗಳಿಂದ ನನ್ನನ್ನು ಹೊಗಳಿ ಹಾಡಿದರು. ಹೀಗೆ ನಾನು ನನ್ನ ಮೂರು ಪಾದಗಳಿಂದ ಭೂಮಿಯನ್ನೆಲ್ಲ ಅಳೆದು ತುಂಬಿ ನನ್ನ ಅರ್ಧ ಪಾದವನ್ನು ಬಲಿರಾಜನ ಬೆನ್ನಮೇಲೆ ಇರಿಸಿದೆ. ನನ್ನ ಪಾದದ ಭಾರವನ್ನು ತಾಳದೇ ಆ ಬಲಿರಾಜ ರಸಾತಲಕ್ಕೆ ಇಳಿದ. ಅವನ ಮೇಲೆ ಶ್ರೀಹರಿಯು ಅತ್ಯಂತ ಸುಪ್ರಸನ್ನನಾಗಿದ್ದಾನೆ. ಆಷಾಢ ಶುಕ್ಲಪಕ್ಷದ ಶಯನೀ ಏಕಾದಶಿಯ ದಿನ ನನ್ನ ಒಂದು ಮೂರ್ತಿಯು ಬಲಿರಾಜನ್ನು ಆಶ್ರಯಿಸಿ ನಿಂತುಕೊಂಡಿರುತ್ತದೆ. ನನ್ನ ಎರಡನೆಯ ಮೂರ್ತಿಯು ಹಾಲ್ಗಡಲ ಮಧ್ಯದಲ್ಲಿ ಆದಿಶೇಷನ ಬೆನ್ನಿನ ಮೇಲೆ ಶಯನ ಮಾಡಿರುತ್ತದೆ ಕಾರ್ತೀಕ ಮಾಸದ ವರೆಗೆ. ಈ ಆಷಾಢ ಶುಕ್ಲ ಶಯನೀ ಏಕಾದಶಿಯಿಂದ ಕಾರ್ತೀಕ ಶುಕ್ಲಪಕ್ಷದ ಪ್ರಭೋದಿನಿ ಏಕಾದಶಿಯ ವರೆಗೆ ನನ್ನ ಈ ಎರಡನೇಯ ಮೂರ್ತಿಯು ಹಾಲು ಕಡಲಿನ ನಟ್ಟನಡುವೆ ಶಯನ ಮಾಡಿರುತ್ತದೆ. ಈ ನಾಲ್ಕುತಿಂಗಳ ಅವಧಿಗೆ ಚಾತುರ್ಮಾಸ್ಯ ಎನ್ನುವರು. ಈ ಚಾತುರ್ಮಾಸ್ಯ ಕಾಲದಲ್ಲಿ ಮಾಡಿದ ಧರ್ಮಗಳು ಹಾಗೂ ವ್ರತ ಉಪವಾಸಗಳು ಮಹಾ ಪುಣ್ಯಪ್ರದ. ಶ್ರೀಹರಿಯು ಶೇಷಶಾಯಿಯಾಗುವ ದಿನವಾದ ಆಷಾಢ ಶುಕ್ಲ ಏಕಾದಶಿಗೆ ಶಯನೀ ಏಕಾದಶಿ ಎನ್ನುವರು. ಈ ಶಯನೀ ಏಕಾದಶಿಗಿಂತ ಪವಿತ್ರವಾದ ಬೇರೊಂದು ತಿಥಿಯೇ ಇಲ್ಲ. ಈ ಶಯನೀ ಏಕಾದಶಿಯಂದು ಶಂಖ ಚಕ್ರ ಗದಾಧಾರಿಯಾದ ನನ್ನನ್ನು (ಮಹಾವಿಷ್ಣುವನ್ನು) ಪೂಜಿಸಬೇಕು. ಅಂದು ಸಂಪೂರ್ಣ ಉಪವಾಸ ಮಾಡಬೇಕು. ರಾತ್ರಿಕಾಲದಲ್ಲಿ ಜಾಗರವನ್ನು ಭಕ್ತಿಯಿಂದ ಆಚರಿಸಬೇಕು. ಈ ಶಯನೀ ಏಕಾದಶಿ ದಿನದಂದು ಉಪವಾಸ, ಹರಿಪೂಜೆ, ಜಾಗರ ಈ ಮೂವರು ಮಾಡಿದವನು ಯಾರೇ ಇದ್ದರೂ ನನಗೆ ಪ್ರಿಯತಮ. ನಾಯಿ ಮಾಂಸ ತಿನ್ನುವ ಹೊಲೆಯನು ಈ ಆಷಾಢ ಶುಕ್ಲ ಏಕಾದಶಿ ಉಪವಾಸ ಮಾಡಿದರೆ ನಾನು ಅವನ ಎಲ್ಲ ಪಾಪಗಳನ್ನು ಕಳೆದು ಭುಕ್ತಿಯನ್ನು ಕೊಡುತ್ತೇನೆ. ಮುಕ್ತಿಯನ್ನೂ ನೀಡುತ್ತೇನೆ.

ಈ ಚಾತುರ್ಮಾಸ್ಯ ಕಾಲದಲ್ಲಿ ದೀಪದಾನ, ಮುತ್ತಲ ಎಲೆಯಲ್ಲಿ ಊಟ, ವ್ರತ, ಉಪವಾಸ ಮುಂತಾದವುಗಳನ್ನು ಮಾಡಿದವರು ನನಗೆ ಪರಮ ಪ್ರೀತ್ಯಾಸ್ಪದರು. ಈ ಚಾತುರ್ಮಾಸ್ಯ ಕಾಲದಲ್ಲಿ ಶ್ರೀಹರಿಯು ಶೇಷಶಯನ ಮಾಡಿದ ಬಳಿಕ ಪ್ರಭೋದಿನಿ ಏಕಾದಶಿಯವರೆಗೆ ನೆಲದ ಮೇಲೆ ಮಲಗಿಕೊಂಡವರು ನನಗೆ ಪರಮ ಪ್ರಿಯರು.

**ಶ್ರಾವಣೇ ವರ್ಜಯೇತ್ ಶಾಕಂ, ದಧೀ ಭಾದ್ರಪದೇ ತಥಾ ।**
**ದುಗ್ಧಮಾಶ್ವಯುಧಿ ತ್ಯಾಜ್ಯಂ ಕಾರ್ತಿಕೇ ದ್ವಿದಳಂ ತ್ಯಜೇತ್ ॥**
**ಅಥವಾ ಬ್ರಹ್ಮಚರ್ಯಸ್ಥಃ ಸಯಾದಿ ಪರಮಾಂ ಗತಿಂ ॥**

ಶ್ರಾವಣ ಮಾಸದಲ್ಲಿ ತರಕಾರಿ ಕಾಯಿಪಲ್ಲೆಗಳನ್ನು ತ್ಯಜಿಸಬೇಕು. ಭಾದ್ರಪದ ಮಾಸದಲ್ಲಿ ಮೊಸರನ್ನು ಬಿಡಬೇಕು. ಅಶ್ವೀನ ಮಾಸದಲ್ಲಿ ಹಾಲನ್ನು ಕುಡಿಯಬಾರದು. ಕಾರ್ತೀಕ ಮಾಸದಲ್ಲಿ ಬೇಳೆ ಆಗುವ ಕಾಳುಗಳನ್ನು ಬಿಟ್ಟುಬಿಡಬೇಕು. ಹೀಗೆ ನಾಲ್ಕೂ ತಿಂಗಳ

ಒಂದೊಂದು ಪದಾರ್ಥಗಳನ್ನು ಬಿಡಲು ಆಗದಿದ್ದರೆ ಈ ನಾಲ್ಕು ತಿಂಗಳ ಕಾಲ ಬ್ರಹ್ಮಚರ್ಯ ವ್ರತಸ್ಥನು ಆಗಬೇಕು. ಇದರಿಂದ ಮನುಷ್ಯನು ದಿವ್ಯಗತಿಯನ್ನು ಹೊಂದುತ್ತಾನೆ.

**ಏಕಾದಸ್ಯಾ ವ್ರತೇನೈವ ಪ್ರಮಾನ್ ಪಾಪೇನೈವ ವಿಮುಚ್ಯತೇ ।**
**ಕರ್ತವ್ಯಾ, ಸರ್ವದಾ ರಾಜನ್ ವಿಸ್ಮರ್ತವ್ಯಾನ್ ಕರ್ಹಿಚಿತ್ ॥**

ಏಕಾದಶಿಯ ದಿನ ಉಪವಾಸ ಮಾಡುವದರಿಂದಲೇ ಮನುಷ್ಯರ ಸಕಲ ಪಾಪಗಳೂ ನಷ್ಟವಾಗಿ ಹೋಗುತ್ತವೆ. ಆದುದರಿಂದ ಅವಶ್ಯವಾಗಿ ಏಕಾದಶಿಯ ದಿನ ಉಪವಾಸವನ್ನು ಮಾಡತಕ್ಕದ್ದು. ಎಂದೂ ಮರೆಯಬಾರದು.

**ಶಯನೀ ಬೋಧನೀ ಮಧ್ಯೇ ಯಾ ಕೃಷ್ಣೈಕಾದಶಿ ಭವೇತ್ ।**
**ಸೈವೋಪೋಷ್ಯಾ ಗೃಹಸ್ಥಸ್ಯ ನಾನ್ಯಾ ಕೃಷ್ಣಾ ಕದಾಚನ ॥**

ಆಷಾಢದ ಶಯನೀ ಏಕಾದಶಿ ಮತ್ತು ಕಾರ್ತೀಕದ ಭೋಧನೀ ಏಕಾದಶಿ ಈ ಎರಡರ ನಡುವೆ ಬರುವ ಕೃಷ್ಣಪಕ್ಷದ ಏಕಾದಶಿಗಳಲ್ಲಿಯೂ ಉಪವಾಸವನ್ನು ಮಾಡಲೇಬೇಕು. ಈ ಕೃಷ್ಣಪಕ್ಷದ ಏಕಾದಶಿಗಳೆಲ್ಲವೂ ಸಾಕ್ಷಾತ್ ಶ್ರೀಕೃಷ್ಣನ ಏಕದಾಶಿಗಳೇ. ಶ್ರೀಕೃಷ್ಣನಿಂದ ಅಭಿಮನ್ಯಮಾನವಾಗದಿರುವ ಯಾವ ಕೃಷ್ಣಪಕ್ಷದ ಏಕಾದಶಿಯೂ ಇರುವದಿಲ್ಲ. ಆದುದರಿಂದ ಕೃಷ್ಣಪಕ್ಷದ ಎಲ್ಲ ಏಕಾದಶಿಯಂದು ಎಲ್ಲ ಆಸ್ತಿಕರೂ ಉಪವಾಸವನ್ನು ಮಾಡಲೇಬೇಕು.

ಈ ಶಯನೀ ಏಕಾದಶಿಯ ಕಥೆಯನ್ನು ಕೇಳಿದವರು ಅಶ್ವಮೇಧ ಯಜ್ಞವನ್ನು ಮಾಡಿದ ಪುಣ್ಯವನ್ನೇ ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಆಷಾಢ ಶುಕ್ಲಪಕ್ಷದ ಶಯನೀ ಏಕಾದಶಿಯ ಮಹಿಮೆ ಎಂಬ ಐವತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ಶ್ರಾವಣ ಕೃಷ್ಣಪಕ್ಷದ ಕಾಮಿಕಾ ಏಕಾದಶಿಯ ಮಹಾತ್ಮ್ಯ, ವರ್ಣನ

**ಅಧ್ಯಾಯ - ೫೫**

**ಧರ್ಮರಾಜ:-** ಕೃಷ್ಣ, ಶ್ರಾವಣ ಕೃಷ್ಣಪಕ್ಷದಲ್ಲಿ ಯಾವ ಏಕಾದಶಿ ಬರುವದು? ಅದರ ಹೆಸರು ಏನು? ಅದೆಲ್ಲವನ್ನೂ ನನಗಾಗಿ ತಿಳಿಸು. ವಾಸುದೇವನಾದ ಗೋವಿಂದ, ನಿನಗೆ ನನ್ನ ನಮಸ್ಕಾರವಿರಲಿ.

**ಶ್ರೀಕೃಷ್ಣ:-** ಧರ್ಮರಾಜ, ಈ ವಿಷಯವನ್ನು ಹಿಂದೆ ನಾರದರು ಪ್ರಶ್ನೆ ಮಾಡಿದಾಗ ಬ್ರಹ್ಮದೇವರು ನಿರೂಪಿಸಿದರು. ಅದನ್ನೇ ನಾನು ನಿಮಗೆ ಈಗ ಹೇಳುತ್ತೇನೆ ಕೇಳಿರಿ.

**ನಾರದ:-** ಕಮಲದ ಆಸನದಲ್ಲಿ ಕುಳಿತ ಪಿತಾಮಹ, ಶ್ರಾವಣ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಏನು? ಅದಕ್ಕೆ ಅಧಿದೇವತೆ ಯಾರು? ಅದನ್ನು ಆರಾಧಿಸುವ ವಿಧಿ ಯಾವದು? ಅದರಿಂದ ಬರುವ ಪುಣ್ಯ ಎಂಥದು?

**ಬ್ರಹ್ಮ:-** ನಾರದ, ಜಗತ್ತಿಗೆಲ್ಲ ಹಿತವನ್ನು ಉಂಟುಮಾಡಲಿಕ್ಕೆ ನಾನು ಶ್ರಾವಣ ಕೃಷ್ಣ ಏಕಾದಶಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಅಂದು ಶಂಖಚಕ್ರಗದಾಧಾರಿಯಾದ ಶ್ರೀಧರ ಎಂಬ ಹೆಸರಿನಿಂದ ಪೂಜೆಯನ್ನು ಮಾಡಬೇಕು. ಹರಿ, ವಿಷ್ಣು, ಮಾಧವ,

ಮಧುಸೂದನ, ಶ್ರೀಧರ ಮುಂತಾದ ಹೆಸರುಗಳನ್ನು ಉಚ್ಚರಿಸುತ್ತ ಆ ದೇವದೇವೋತ್ತಮನನ್ನು ಪೂಜಿಸಬೇಕು. ಮತ್ತು ಅಂದು ಸಂಪೂರ್ಣ ಉಪವಾಸ ಇರಬೇಕು. ರಾತ್ರಿ ಜಾಗರವನ್ನು ತಪ್ಪದೇ ಆಚರಿಸಬೇಕು. ಆದರಿಂದ ಮನುಷ್ಯನಿಗೆ ಎಂದೂ ಮುಂದೆ ನರಕ ದರ್ಶನ ಆಗುವದಿಲ್ಲ. ಈ ವ್ರತದ ಪ್ರಭಾವದಿಂದ ಎಂಥ ಪಾಪಿಯಾದರೂ ಮುಂದೆ ಈ ಕಾಮಿಕಾ ಏಕಾದಶಿಯ ವ್ರತವನ್ನು ಆಚರಿಸಿದವನು ನೀಚ ಜಾತಿಯಲ್ಲಿ ಅಥವಾ ನೀಚ ಯೋನಿಯಲ್ಲಿ ಹುಟ್ಟುವದಿಲ್ಲ. ಆ ದಿನದಂದು ತುಳಸೀ ದಳಗಳಿಂದ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಎಂಟು ತೊಲೆಯ ಬಂಗಾರದ ಹೂ, ಮೂವತ್ತೆರಡು ತೊಲೆಯ ಬೆಳ್ಳಿಯ ಹೂಗಳಿಗಿಂತ ಒಂದು ತುಳಸೀ ದಳ ಏರಿಸಿದರೆ ಶ್ರೀಹರಿಯು ಸಂತುಷ್ಟನಾಗುತ್ತಾನೆ.

**ರತ್ನ ಮೌಕ್ತಿಕ ವೈಡೂರ್ಯ ಪ್ರಲಾಧಿಭಿ ರಕ್ಷಿತಃ ।**
**ನ ತುಷ್ಯತಿ ತಥಾ ವಿಷ್ಣುಃ ತುಲಸೀ ದಲತೋ ಯಥಾ ॥**

ರತ್ನ, ಮುತ್ತು, ವೈಡೂರ್ಯ, ಹವಳಗಳಿಂದ ಪೂಜೆ ಮಾಡಿದರೂ ಕೂಡ ಶ್ರೀಹರಿಗೆ ತುಳಸೀದಳದ ಪೂಜೆಯಿಂದ ಆದಷ್ಟು ಪ್ರೀತಿಯು ಉಂಟಾಗುವದಿಲ್ಲ.

**ತುಲಸೀ ಮಂಜರೀಭಿಷ್ಟ ಪೂಜಿತೋ ವನ ಕೇಶವಃ ।**
**ಅಜನ್ಮ ಪಾತಕಂ ತಸ್ಯ, ನಿಶ್ಚಯಂ ಯಾತಿ ಸಂಕ್ಷಯಂ ॥**

ತುಳಸಿಯ ಗೊನೆಗಳಿಂದ, ಹಾಗೂ ದಳಗಳಿಂದ ಅಥವಾ ಚಿಗುರುಗಳಿಂದ ಕೇಶವನ ಪೂಜೆ ಮಾಡಿದರೆ ಮಾನವನು ಹುಟ್ಟಿದ ದಿನದಿಂದ ಆರಂಭಿಸಿ ಮಾಡಿದ ಎಲ್ಲ ಪಾತಕಗಳೂ ನಿಶ್ಚಿತವಾಗಿಯೂ ನಾಶಹೊಂದುತ್ತವೆ.

**ಯಾವೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃ ಪಾವನೀ ।**
**ರೋಗಾಣಾಮಭಿವಂದಿತಾ ನಿರಸಿನಿ ಸಿಕ್ತಾಂತಕತ್ರಾಸಿನೀ ॥**
**ಪ್ರತ್ಯಾಸತ್ತಿ ವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ।**
**ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ ತಸ್ಮೈ ತುಲಸ್ಯೈ ನಮಃ ॥**

ನೋಡಿದ ಮಾತ್ರಕ್ಕೆ ಎಲ್ಲಪಾಪಗಳ ಸಮೂಹವನ್ನು ನಾಶಮಾಡುತ್ತದೆ ಈ ತುಳಸಿ. ಈ ತುಳಸಿಯನ್ನು ಮುಟ್ಟಿದರೆ ದೇಹವೆಲ್ಲವೂ ಪವಿತ್ರ. ಈ ತುಳಸೀ ಗಿಡಕ್ಕೆ ನಮಸ್ಕಾರ ಮಾಡಿದರೆ ರೋಗಗಳೆಲ್ಲೆಲ್ಲ ತೊಳೆದುಬಿಡುವದು. ಈ ತುಳಸಿಯ ಬಳ್ಳಿಗೆ ನೀರನ್ನು ಹನಿಸಿದರೆ ಅವರನ್ನು ಮುಟ್ಟಲಿಕ್ಕೂ ಯಮನು ಹೆದರುವ, ತುಳಸಿಯ ಬಳ್ಳಿಯನ್ನು ಬೆಳೆಸಿದರೆ ಆ ತುಳಸಿಯು ನಮಗೂ ಆ ಕೃಷ್ಣನಿಗೂ ಸಂಬಂಧವನ್ನು ಬೆಳೆಸುತ್ತಾಳೆ. ಶ್ರೀ ಹರಿಯ ಚರಣದಲ್ಲಿ ತುಳಸಿಯ ದಳಗಳನ್ನು ಇಟ್ಟರೆ ಮೋಕ್ಷ ರೂಪ ಫಲವೇ ದೊರಕುತ್ತದೆ. ಇಂಥ ತುಳಸಿಗೆ ನಮಸ್ಕಾರ.

ಈ ಶಯನೀ ಏಕಾದಶಿಯ ದಿನದಂದು ಹಗಲು ರಾತ್ರಿ ವಿಷ್ಣುವಿನ ಮುಂದೆ ದೀಪ ಉರಿಸಿದರೆ ಬರುವ ಪುಣ್ಯವು ಎಷ್ಟು ಎಂದು ಎಣಿಕೆ ಮಾಡಲು ಚಿತ್ರಗುಪ್ತನಿಗೆ ತಿಳಿಯದಂತಾಗುತ್ತದೆ. ಏಕಾದಶಿಯ ದಿನ ಶ್ರೀಕೃಷ್ಣನ ಎದುರು ಯಾರ ಮನೆಯಲ್ಲಿ ದೀಪವು ಬೆಳಗುವದೊ ಅವನ ಪಿತೃಗಳಿಗೆ ಸ್ವರ್ಗಲೋಕದಲ್ಲಿ ಅಮೃತಪ್ರಾಶನ.

**ಘೃತೇನ ದೀಪಂ ಪ್ರಜ್ವಾಲ್ಯ ತಿಲತೇಲೇನವ ಪುನಃ ।**
**ಪ್ರಯಾತಿ ಸೂರ್ಯಲೋಕೇಂಚ ದೀಪಕೋಟಿ ಶತಾರ್ಚಿತಃ ॥**

ದೇವರ ಎದುರು ತುಪ್ಪದ ದೀಪ ಅಥವಾ ಎಣ್ಣೆಯ ದೀಪವನ್ನು ಬೆಳಗಿಸಿದವರು ಕೋಟಿ ದೀಪಗಳಿಂದ ಪೂಜಿತರಾಗಿ ಸೂರ್ಯಲೋಕಕ್ಕೆ ಹೋಗುತ್ತಾರೆ.

ಈ ಕಾಮಿಕಾ ಏಕಾದಶಿಯ ಮಹಾಮಹಿಮೆಯನ್ನು ನಾನು ನಿನ್ನ ಮುಂದೆ ಹೇಳಿದ್ದೇನೆ. ಸರ್ವಪಾಪಗಳನ್ನೂ ಪರಿಹರಿಸುವ ಈ ಕಾಮಿಕಾ ಏಕಾದಶಿಯನ್ನು ಅವಶ್ಯವಾಗಿ ಎಲ್ಲರೂ ಪಾಲಿಸಬೇಕು. ಇದರಿಂದ ಬ್ರಹ್ಮಹತ್ಯಾದಿ ಮಹಾಪಾಪಗಳು ತೊಲಗುತ್ತವೆ. ಇದರಿಂದ ವಿಷ್ಣುವಿನ ಸ್ಥಾನವು ಲಭಿಸುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶ್ರಾವಣ ಕೃಷ್ಣಪಕ್ಷದ ಕಾಮಿಕಾ ಏಕಾದಶಿಯ ಮಹಾತ್ಮ್ಯ, ವರ್ಣನ ಎಂಬ ಐವತ್ತೈದನೇಯ ಅಧ್ಯಾಯ ಮುಗಿದುದು*



## ಶ್ರಾವಣ ಶುಕ್ಲಪಕ್ಷದ ಪುತ್ರದಾ ಏಕಾದಶಿಯ ಮಹಿಮೆ

**ಅಧ್ಯಾಯ - ೫೬**

**ಧರ್ಮರಾಜ:-** ಮಧುಸೂದನ, ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಏನು? ಅದರ ಮಹಿಮೆ ಏನು? ನನಗೆ ಹೇಳು.

**ಶ್ರೀಕೃಷ್ಣ:-** ದ್ವಾಪರ ಯುಗದ ಆದಿ ಭಾಗದಲ್ಲಿ ಮಾಹಿಷ್ಮತಿ ಪಟ್ಟಣದಲ್ಲಿ ಮಹೀಜಿತ್ ಎಂಬ ರಾಜನು ಪಟ್ಟಣವನ್ನು ಆಳುತ್ತಿದ್ದ. ಅವನಿಗೆ ಐಶ್ವರ್ಯ, ಅಧಿಕಾರ, ಸುಖ, ಸಂಪತ್ತು, ಶೌರ್ಯ, ತಾರುಣ್ಯ, ಸೌಭಾಗ್ಯ ಎಲ್ಲವೂ ಸಮೃದ್ಧವಾಗಿದ್ದರೂ ಮಕ್ಕಳು ಮಾತ್ರ ಆಗಿರಲಿಲ್ಲ. ಆದುದರಿಂದ ಅವನಿಗೆ ಆ ಭೋಗ, ಐಶ್ವರ್ಯ ಅಧಿಕಾರಗಳೆಲ್ಲವೂ ಸಂತೋಷದಾಯಕ ಆಗಲಿಲ್ಲ. ಮಕ್ಕಳಿಲ್ಲದವರಿಗೆ ಇಲ್ಲಿ ಸುಖ ಇಲ್ಲ. ಮುಂದೆ ಸದ್ಗತಿ ಇಲ್ಲ ಎಂಬ ಚಿಂತೆಯಲ್ಲಿಯೇ ಅವನ ಆಯುಷ್ಯದ ಬಹುಭಾಗ ಸವೆದುಹೋಯಿತು. ಮುಪ್ಪು ತನ್ನ ಮೂಲಗುರುತನ್ನು ತೋರತೊಡಗಿತು. ಅದರಿಂದ ಚಿಂತಾಚಕ್ರಾರೂಢನಾದ ಆ ಭೂಮಿಕಾಂತನು ಒಂದು ದಿನ ಸಭಾಮಧ್ಯದಲ್ಲಿ ತನ್ನ ಮುಂದೆಯೇ ಕುಳಿತ ಪ್ರಜಾಪ್ರತಿನಿಧಿಗಳನ್ನು ಕುರಿತು ಹೀಗೆ ನುಡಿದ - ಪ್ರಜಾ ಧುರೀಣರೇ, ನಾನು ಈ ಜನ್ಮದಲ್ಲಿಯಂತೂ ಯಾವ ಪಾಪವನ್ನೂ ಮಾಡಿಲ್ಲ. ಅನ್ಯಾಯದಿಂದ ಧನವನ್ನು ಗಳಿಸಿಲ್ಲ. ಹೆರವರ ಹಣವನ್ನು ನನ್ನ ಬೊಕ್ಕಸದಲ್ಲಿ ಎಂದೂ ತಂದು ಇರಿಸಿಲ್ಲ. ಬ್ರಾಹ್ಮಣರ ದ್ರವ್ಯವನ್ನು ಮುಟ್ಟಿಲ್ಲ. ದೇವಸ್ಥಾನದ ಧನವನ್ನು ಎಂದೂ ಅಪಹರಿಸಿಲ್ಲ. ಅಡವಿಟ್ಟ ವಸ್ತುವನ್ನು ಎಂದೂ ಎತ್ತಿಹಾಕಿಲ್ಲ. ಮಕ್ಕಳಂತೆ ಪ್ರಜೆಗಳನ್ನೆಲ್ಲ ಅಕ್ಕರತೆಯಿಂದ ಕಾಪಾಡಿದ್ದೇನೆ. ಬಂಧುಗಳಾಗಲಿ, ಮಕ್ಕಳಾಗಲೀ ತಪ್ಪುಮಾಡಿದರೆ ತಪ್ಪದೇ ಶಿಕ್ಷಿಸಿದ್ದೇನೆ. ದುಷ್ಟರನ್ನು ಶಿಕ್ಷಿಸಿದ್ದೇನೆ. ಇಷ್ಟಾದರೂ ನನಗೆ ಒಂದೂ ಸಂತಾನ ಆಗಲಿಲ್ಲ. ಇದಕ್ಕೆ ಕಾರಣ ಏನು ಇರಬಹುದು ನೀವೇ ಆಲೋಚನೆ ಮಾಡಿ ಹೇಳಿರಿ.

ಅರಸನ ಸವಾಲಿಗೆ ಸರಿಯಾಗಿ ಉತ್ತರ ಕೊಡಲು ಆಗದೇ ಪುರೋಹಿತರೂ ಪ್ರಜಾಪರಿವಾರದವರೂ, ಗುಪ್ತಾಲೋಚನೆ ನಡೆಸಿದರು. ರಾಜನ ಪ್ರಶ್ನೆಗೆ ಉತ್ತರ ಹೊಳೆಯದೇ ಅವರೆಲ್ಲರೂ ಅರಣ್ಯದ ಹಾದಿ ಹಿಡಿದರು. ಕಾಡು ಮೇಡು ಅಲೆದರು.

ಅರಣ್ಯದಲ್ಲಿ ಋಷಿಗಳಿಂದ ಅಧಿಷ್ಠಿತವಾದ ಪುಣ್ಯಾಶ್ರಮಗಳನ್ನೆಲ್ಲ ಅಲೆದಾಡಿದರು. ಹೇಗಾದರೂ ಮಾಡಿ ತಮ್ಮ ಅರಸನ ಚಿಂತಾ ಸಂತಾಪಗಳಿಗೆ ಪರಿಹಾರೋಪಾಯಗಳನ್ನು ಕಂಡು ಹಿಡಿಯಬೇಕು ಎಂಬ ಧೃಢಸಂಕಲ್ಪದಿಂದ ಅವರು ಪುಣ್ಯಾಶ್ರಮ ಸಂಚಾರ ಕೈಕೊಂಡಿದ್ದರು.

ಹೀಗೆಯೇ ಹುಡುಕುತ್ತಲಿದ್ದಾಗ ಒಂದು ಗೊಂಡಾರಣ್ಯದ ಮಧ್ಯದಲ್ಲಿ ಅವರಿಗೆ ಲೋಮಶ ಮಹಾಮುನಿಯ ದರ್ಶನವಾಯಿತು. ಅತ್ಯುಗ್ರವಾದ ಘೋರ ತಪಸ್ಸನ್ನು ಕೈಕೊಂಡಿದ್ದ ಆ ಮುನಿಮಾರ್ತಾಂಡ. ಆಹಾರ ಇಲ್ಲ, ಆಧಾರ ಇಲ್ಲ. ಅವಧಿ ಇಲ್ಲ. ಆತಂಕ ಇಲ್ಲ, ಅಂತಪಾರವಿಲ್ಲದೇ ಸಾಗಿತ್ತು ಮುನಿಮಹರ್ಷಿಯ ಸಂತತ ತಪ್ಪಸ್ಸು. ಸರ್ವಶಾಸ್ತ್ರಗಳಲ್ಲಿಯೂ ಸರ್ವಜ್ಞ ಆ ಮಹಾಮಹರ್ಷಿ. ಧರ್ಮದ ಸೂಕ್ಷ್ಮಾತಿಸೂಕ್ಷ್ಮವಾದ ಮರ್ಮವನ್ನು ಸರಿಯಾಗಿ ತಿಳಿದಿದ್ದ ಆ ಮುನಿಪುಂಗವ. ದೀರ್ಘಯುಷಿಯಾದ ಆ ತಪಸ್ವಿಗೆ ಮೈತುಂಬ ಕೂದಲು. ಆದುದರಿಂದಲೇ ಅವನಿಗೆ ಲೋಮಶ ಎಂದು ಹೆಸರು. ಒಂದು ಕಲ್ಪ ಕಾಲವು ಕಳೆದುಹೋದ ಬಳಿಕ ಅವನ ಮೈತುಂಬ ಪೊದೆಪೊದೆಯಾಗಿ ದಟ್ಟವಾಗಿ ಹಬ್ಬಿನಿಂತ ಕೇಶರಾಶಿಯಿಂದ ಒಂದು ಕೂದಲು ಉದುರುತ್ತಿತು. ಈ ಕೂದಲಗಳೆಲ್ಲ ಕಲ್ಪಕ್ಕೆ ಒಂದರಂತೆ ಉದುರಿ ಬಿದ್ದು ಹೋದ ಬಳಿಕ ಮೈಮೇಲೆ ಒಂದೂ ಕೂದಲು ಇಲ್ಲದಂತೆ ಅದನಂತರ ಅವನಿಗೆ ಮರಣ ಸಂಭವ. ಹೀಗೆ ಅನಂತ ಕಾಲದ ದೀರ್ಘಾಯುಷ್ಯವನ್ನೂ ಪಡೆದ ಈ ಲೋಮಶ ತ್ರಿಕಾಲ ಜ್ಞಾನಿ, ದೀರ್ಘಾಯುಷಿ, ಬ್ರಹ್ಮಕಲ್ಪ.

ಅವನನ್ನು ಕಂಡಕೂಡಲೇ ಹರ್ಷನಿರ್ಭರರಾದರು ಆ ಎಲ್ಲ ಮಂತ್ರಿ, ಪುರೋಹಿತ ಪ್ರಜಾಪರಿವಾರದ ಜನರು. - ''ಇಂಥ, ಮಹಾಮುನಿಯ ಸಂದರ್ಶನವು ಒದಗಿ ಬಂದದ್ದು ಜನ್ಮಾಂತರ ಸುಕೃತ ಮತ್ತು ಈ ಜನ್ಮದ ಸೌಭಾಗ್ಯ ಎಂದೇ ಬಗೆದರು. ವಿನಯದಿಂದ ತಲೆಬಗ್ಗಿಸಿದರು. ಭಕ್ತಿಯಿಂದ ನಮಸ್ಕರಿಸಿದರು. ಅವರ ಘನತೆಗೆ ತಕ್ಕಂತೆ ಪೂಜೆಯನ್ನು ಸಲ್ಲಿಸಿದರು. ಅವರ ಈ ಪೂಜೆ ಪರ್ಯುಪಾಸನೆಗಳಿಂದ ಪರಿತುಷ್ಟನಾದ ಆ ಮಹಾಮುನಿ ಮಾತನಾಡಿದ.

**ಲೋಮಶ:-** ನೀವೆಲ್ಲರೂ ನನ್ನ ಆಶ್ರಮದವರೆಗೆ ಏಕೆ ಬಂದಿರುತ್ತೀರಿ? ಅದರ ಕಾರಣ ಹೇಳಿರಿ. ನನ್ನನ್ನು ನೋಡಿದ ಮಾತ್ರಕ್ಕೆ ನಿಮಗೆ ಇಷ್ಟೇಕೆ ಹಿಗ್ಗು? ನನ್ನನ್ನು ಏಕೆ ಇಷ್ಟು ಪರಿಯಿಂದ ಹೊಗಳುವಿರಿ? ಮತ್ತೇಕೆ ಬಗೆಬಗೆಯಿಂದ ಪೂಜಿಸಿದಿರಿ? ನಿಮಗೆ ಯಾವ ಹಿತವನ್ನು ನಾನು ಉಂಟುಮಾಡಲಿ? ನಿಮ್ಮ ಅಪೇಕ್ಷೆ ಏನಿದ್ದರೂ ನಾನು ಪೂರ್ಣ ಮಾಡುತ್ತೇನೆ ಹೇಳಿರಿ.

**ಪರೋಪ ಕೃತಯೇ ಜನ್ಮ ಮಾಣ್ಯಶಾನಾಂ ನಸಂಶಯ ।**

ನನ್ನಂಥವರು ಹುಟ್ಟುವದು ಇನ್ನೊಬ್ಬರಿಗೆ ಉಪಕಾರ ಮಾಡಲಿಕ್ಕಾಗಿಯೇ ಇದರಲ್ಲಿ ಸಂಶಯವಿಲ್ಲ.

**ಪ್ರಜಾಪುರೋಹಿತರು:-** ಪೂಜ್ಯರೇ, ಈ ಪ್ರಪಂಚದಲ್ಲಿ ಬ್ರಹ್ಮದೇವರ ಅನಂತರ ನೀವೇ ಪರಮಶ್ರೇಷ್ಠರು. ನಿಮಗಿಂತ ಮಿಗಿಲಾದವರು ಇಲ್ಲಿ ಬೇರೆ ಯಾರು ಇಲ್ಲ. ತಮ್ಮ ಬಳಿಗೆ ನಮ್ಮದೊಂದು ಕಾರ್ಯ ಉಂಟು.

ಮಾಹಿಷ್ಮತಿ ನಗರದಲ್ಲಿ ಮಹೀಜಿತ್ ಮಹಾರಾಜನ ಆಡಳಿತ ಈಗ. ನಾವೆಲ್ಲರೂ ಅವನ ಪ್ರಜೆಗಳು. ಅವನು ನಮ್ಮನ್ನೆಲ್ಲ ಮಕ್ಕಳಂತೆ ಕಾಪಾಡುತ್ತಾನೆ. ಆದರೆ ಅವನಿಗೆ

ಮಕ್ಕಳೇ ಇಲ್ಲ. ಪುತ್ರಹೀನನಾದ ಮಹಾರಾಜನ ದುಃಖವನ್ನು ನೋಡಲಾಗದೇ ನಾವು ಅವನಿಗಾಗಿ ತಪಸ್ಸನ್ನು ಮಾಡಲು ಬಂದಿದ್ದೇವೆ ಈ ಅರಣ್ಯಕ್ಕೆ. ರಾಜನ ಭಾಗ್ಯದಿಂದ ಪ್ರಜೆಗಳ ಪುಣ್ಯದಿಂದ ಇಂದು ನಮಗೆ ತಮ್ಮ ದರ್ಶನ ಆಯಿತು.

**"ಮಹತಾಂ ದರ್ಶನೇನೈವ ಕಾರ್ಯ ಸಿದ್ಧಿರಭವೇಂದ್ರಣಾಮ್**

ದೊಡ್ಡವರ ದರ್ಶನ ಮಾತ್ರದಿಂದಲೇ ಮನುಷ್ಯರ ಕಾರ್ಯಗಳೆಲ್ಲವೂ ಸಿದ್ಧಿಸುವವು. ಆದುದರಿಂದ ಹೇಗಾದರೆ ನಮ್ಮ ಅರಸನಿಗೆ ಗಂಡು ಮಗು ಹುಟ್ಟುವದು? ಅಂಥ ಫಲಪ್ರದವಾದ ಉಪದೇಶವನ್ನು ನೀಡಿರಿ.

ಪ್ರಥ್ವೀಪತಿಯ ಪ್ರಧಾನಿ ಪ್ರಜಾಪುರೋಹಿತ ಪರಿವಾರದವರ ಈ ಬಿನ್ನಹವನ್ನು ಕೇಳಿ ಲೋಮಶ ಮುನಿಯು ಒಂದು ಕ್ಷಣ ಕಣ್ಣು ಮುಚ್ಚಿ ಧ್ಯಾನಸಕ್ತನಾಗಿ ಕುಳಿತ. ತನ್ನ ಒಳಗಣ್ಣಿನಿಂದ ಆ ಮಹೀಜಿತ್ ರಾಜನ ಭೂತ ಭವಿಷ್ಯವನ್ನೆಲ್ಲ ಕೆದಕಿ ಬೆದಕಿ ನೋಡಿದ. ಅನಂತರ ತನ್ನ ನಯನಗಳನ್ನು ಉನ್ಮೀಲನ ಮಾಡಿ ಪ್ರಶಾಂತ ಸ್ವರದಿಂದ ಉತ್ತರಿಸಿದ.

**ಲೋಮಶ:-** ಪೂರ್ವಜನ್ಮದಲ್ಲಿ ಈ ನಿಮ್ಮ ಅರಸನು ಓರ್ವ ವೈಶ್ಯನಾಗಿ ಜನಿಸಿದ್ದ. ವ್ಯಾಪಾರ ಉದ್ಯೋಗದ ಭರದಲ್ಲಿ ಅನೇಕ ಜನರನ್ನು ಶೋಷಿಸುತ್ತಿದ್ದ ಈ ದರಿದ್ರ ವೈಶ್ಯ. ಊರು ಊರು ತಿರುಗಿ ವ್ಯಾಪಾರ ಮಾಡುತ್ತ ಹಣದ ಆಶೆಯಿಂದ ಜನರನ್ನು ವಂಚಿಸುತ್ತಿದ್ದ. ಹೀಗೆ ಅವನು ಸಂಚಾರ ಕೈಕೊಂಡಾಗ ಒಂದು ದಿನ ದಾರಿಯಲ್ಲಿ ಬಿಸಿಲಿನ ಬೇಗೆಯಿಂದ ಬಳಲಿದ. ಬಾಯಾರಿಕೆಯಿಂದ ಅವನ ಗಂಟಲು ಕಿತ್ತಿ ಬರುವಂತೆ ಆಗಿತ್ತು. ಆಗ ಜೇಷ್ಠ ಮಾಸ ಶುಕ್ಲಪಕ್ಷ, ದಶಮಿಯ ದಿನ. ಮಧ್ಯಾಹ್ನದ ಸಮಯ. ಮುಗಿಲಿನ ನಟ್ಟನಡುವೆ ಬೆಂಕಿಯ ಉಂಡೆಯಂತೆ ಉರಿಯುತ್ತಿದ್ದಾನೆ ಬೇಸಿಗೆಯ ಭಾಸ್ಕರ. ಹೀಗೆ ನೀರಡಸಿ ನಡೆದ ಆ ವೈಶ್ಯನ ಕಣ್ಣೆದುರು ಒಂದು ಗ್ರಾಮದ ಹೊರಭಾಗದಲ್ಲಿ ನೀರು ತುಂಬಿದ ಒಂದು ಸರೋವರ ಕಂಡಿತು. ಕೂಡಲೇ ನೀರು ಕುಡಿಯಲು ಆ ವೈಶ್ಯ ಆ ಪುಷ್ಕರಣಿಯ ಬಳಿಗೆ ಧಾವಿಸಿದ. ಆಗ ಅದೇ ಕಾಲದಲ್ಲಿ ಬೇಸಿಗೆಯ ಬಿಸಿಲಿನಿಂದ ಬಸವಳಿದ ಒಂದು ಹಸು ಕರುವಿನೊಂದಿಗೆ ಆ ಜಲಾಶಯದಲ್ಲಿ ನೀರನ್ನು ಕುಡಿಯುತ್ತಿತ್ತು. ದುಷ್ಟಬುದ್ಧಿಯ ಆ ವೈಶ್ಯ ತುರುಕರು ಎರಡನ್ನೂ ಆ ಜಲಾಶಯದಿಂದ ಹೊಡೆದಟ್ಟಿ ಹೊರದೂಡಿ ಆ ಜಲಾಶಯದ ತಣ್ಣೀರನ್ನು ತಾನೊಬ್ಬನೇ ತೃಪ್ತಿಯಾಗುವವರೆಗೆ ಪಾನ ಮಾಡಿದ. ನೀರು ಕುಡಿಯುವ ಪ್ರಾಣಿಯನ್ನು ಅರ್ಧಕ್ಕೆ ಓಡಿಸಿದ ಆ ಪಾಪದಿಂದ ವೈಶ್ಯನು ಈ ಜನ್ಮದಲ್ಲಿ ಪುತ್ರಹೀನನಾಗಿದ್ದಾನೆ. ಬೇರೊಂದು ಜನ್ಮದ ಪುಣ್ಯದಿಂದ ಅವನು ಈ ಜನ್ಮದಲ್ಲಿ ಮಹಾರಾಜನೂ ಆಗಿದ್ದಾನೆ. ಈ ಐಶ್ವರ್ಯ, ಅಧಿಕಾರ, ಶ್ರೀಮಂತಿಕೆ, ಧೀಮಂತಿಕೆ, ಸೌಭಾಗ್ಯ, ಎಲ್ಲವೂ ಅವನ ಜನ್ಮಾಂತರದ ಪುಣ್ಯದ ಫಲ. ಅದರಂತೆ ಅವನ ನಪುತ್ರಿಕತೆಯು ಕೂಡ ಅವನ ಜನ್ಮಾಂತರದ ಪಾಪದ ಫಲ.

**ಪ್ರಜಾಪುರೋಹಿತ ಪರಿವಾರದವರು:-** ಪೂಜ್ಯರೇ, ಪುಣ್ಯದಿಂದ ಪಾಪವು ಕ್ಷೀಣಿಸುತ್ತದೆ ಎಂದು ಪುರಾಣದಲ್ಲಿ ಕೇಳಿದ್ದೇವೆ. ಆದ್ದರಿಂದ ಆ ರಾಜನ ಪಾಪವೆಲ್ಲವೂ ಕ್ಷಯಿಸಿ ಸಂತಾನದ ಪ್ರತಿಬಂಧಕವು ದೂರಾಗುವಂತೆ ಏನಾದರೂ ಪುಣ್ಯಕಾರ್ಯದ ಉಪದೇಶವನ್ನು ನೀಡಿರಿ. ನಿಮ್ಮ ಪ್ರಸಾದದಿಂದ ಆ ರಾಜನಿಗೆ ಪುತ್ರಜನನ ಆಗುವಂತೆ ಅನುಗ್ರಹಿಸಿರಿ.

**ಲೋಮಶ:-** ಶ್ರಾವಣಮಾಸ ಶುಕ್ಲಪಕ್ಷದಲ್ಲಿ ಒಂದು ಏಕಾದಶಿ ಬರುತ್ತದೆ. ಅದು ಬಯಸಿದ ಫಲವನ್ನೆಲ್ಲ ನೀಡುತ್ತದೆ. ಈ ರಾಜರಾಣಿಯರು ವಾಂಛಿತಪ್ರದವಾದ ಈ ಶ್ರಾವಣ ಶುಕ್ಲ ಏಕಾದಶಿಯನ್ನು ತಪ್ಪದೇ ಆಚರಿಸಲಿ. ಅದರಿಂದ ಅವನಿಗೆ ಇಷ್ಟಪ್ರೇಮವಾದ ಸಂತಾನವು ಲಭಿಸುವದು.

ಪರಮಸಂತೋಷವಾಯಿತು ಲೋಮಶನ ಮಾತನ್ನು ಕೇಳಿ ರಾಜ ಪರಿವಾರದವರಿಗೆ. ಅವರೆಲ್ಲರೂ ಭಕ್ತಿಯಿಂದ ವಂದಿಸಿದರು ಆ ಮಹಾಮುನಿಯನ್ನು ಶ್ರದ್ಧೆಯಿಂದ ಪ್ರದಕ್ಷಿಣೆ ಹಾಕಿದರು. ಅಪ್ಪಣೆ ಪಡೆದು ಮರಳಿದರು ಮಾಹಿಷ್ಮತಿ ನಗರಕ್ಕೆ ರಾಜದಂಪತಿಗಳಿಗೆ ತಿಳಿಸಿದರು. ಲೋಮಶರು ತಮಗೆ ನೀಡಿದ ಉಪದೇಶವನ್ನು ಅವರಿಗೆ ಬಿನ್ನವಿಸಿದರು. ಆ ಮುನಿಯ ಆದೇಶವನ್ನು ಪಾಲಿಸಬೇಕು ಎಂದು.

ಲೋಮಶಮಹಾಮುನಿಗಳ ನಿರ್ದೇಶವನ್ನು ತಲೆಯ ಮೇಲೆ ಹೊತ್ತು ರಾಜದಂಪತಿಗಳು ಶ್ರಾವಣ ಶುಕ್ಲಪಕ್ಷ ಏಕಾದಶಿಯನ್ನು ಪಾಲಿಸಿದರು ವಿಧಿಪೂರ್ವಕವಾಗಿ ಅದರಂತೆ ಮುನಿಯಿಂದ ಉಪದಿಷ್ಟರಾದ ಪ್ರಧಾನಿ ಪ್ರಜಾಪರಿವಾರದವರು ಕೂಡ ಆ ಏಕಾದಶಿ ವ್ರತವನ್ನು ಉಪವಾಸ, ಶ್ರೀಹರಿಪೂಜೆ, ಜಾಗರ, ಮುಂತಾದವುಗಳಿಂದ ಯಥಾಕ್ರಮವಾಗಿ ಆಚರಿಸಿದರು. ಮತ್ತು ಆ ಏಕಾದಶಿಯ ವ್ರತದ ಆಚರಣೆಯಿಂದ ಬಂದ ತಮ್ಮ ಪುಣ್ಯವನ್ನೆಲ್ಲ ಆ ರಾಜದಂಪತಿಗಳಿಗೆ ಸಂಕಲ್ಪಪೂರ್ವಕವಾಗಿ ಧಾರೆ ದಾನವಾಗಿ ನೀಡಿದರು. ಅಷ್ಟು ಜನರ ಶ್ರಾವಣ ಶುಕ್ಲ ಏಕಾದಶಿ ವ್ರತಾಚರಣದ ಪುಣ್ಯ, ಹಾಗೂ ಸ್ವಯಮಾಚರಣೆಯ ಪುಣ್ಯದಿಂದ ಮಹಾರಾಣಿಯು ಗರ್ಭವನ್ನು ಧರಿಸಿದಳು. ಸಕಾಲದಲ್ಲಿ ಶ್ರೇಷ್ಠವಾದ ಒಂದು ಗಂಡುಮಗುವಿಗೆ ಜನ್ಮವನ್ನಿತ್ತಳು.

ಹೀಗೆ ಶ್ರಾವಣ ಶುಕ್ಲಪಕ್ಷ ಏಕಾದಶಿಯ ದಿನ ಏಕಾದಶಿಯ ವ್ರತವನ್ನು ಪಾಲಿಸುವದರಿಂದ ಜನರ ಇಷ್ಟಾರ್ಥ ಪೂರ್ಣವಾಗುತ್ತದೆ. ಅಂದಿನಿಂದ ಆ ಏಕಾದಶಿಯು ಪುತ್ರದಾ ಏಕಾದಶಿ ಎಂದು ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಪಡೆಯಿತು.

ಶ್ರಾವಣ ಶುಕ್ಲಪಕ್ಷ ದ್ವಾದಶಿಯ ದಿನ ಶ್ರೀಹರಿಗೆ ಪವಿತ್ರಾರೋಪಣವನ್ನು ಮಾಡಬೇಕು. ಈ ಪವಿತ್ರವನ್ನು ಬಂಗಾರ, ಬೆಳ್ಳಿ, ತಾಮ್ರ ಅಥವಾ ರೇಶಿಮೆ, ದರ್ಭೆ, ಅರಳೆ, ಮುಂತಾದವುಗಳಿಂದ ಮಾಡಿದ ಎಳೆಗಳಿಂದ ಮಾಡಬೇಕು. ತ್ರಿಗಣಿತವಾದ ಮೂರು ಎಳೆಯ ಸೂತ್ರವನ್ನು ಮತ್ತೆ ತ್ರಿಗುಣಿತವನ್ನಾಗಿ ಹುರಿಹಾಕಿ ಶುದ್ಧೀಕರಿಸಬೇಕು. ಮೊದಲನೆಯ ದಿನವೇ ಗೋದೋಹಾಂತರಿತ ಕಾಲದಲ್ಲಿ ಎಂದರೆ ಬೆಳಗಿನಿಂದ ಸಾಯಂಕಾಲದವರೆಗೆ ಅಥವಾ ಸಾಯಂಕಾಲದಿಂದ ಬೆಳಗಿನವರೆಗೆ ಅಧಿವಾಸವನ್ನು ಮಾಡಬೇಕು. ಬ್ರಾಹ್ಮಣರಿಗೂ ಗುರುಗಳಿಗೂ ನಮಸ್ಕರಿಸಿ ಹಾಡು, ಪಾಡು, ಪುರಾಣ, ಮಂಗಳ ವಾದ್ಯಗಳಿಂದ ಜಾಗರ ಮಾಡಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಭಿಲ್ಲ, ಶೂದ್ರ, ಬೇಡ, ಮುಂತಾದ ಎಲ್ಲ ಧರ್ಮದವರೂ ಭಕ್ತಿಯಿಂದ ಈ ಪವಿತ್ರವನ್ನು ತಯಾರಿಸಬೇಕು. ಅನಂತರ ಆ ಪವಿತ್ರವನ್ನು ವಿಧಿಪೂರ್ವಕವಾಗಿ ಗುರುಗಳಿಗೆ ಅರ್ಪಿಸಬೇಕು. ಆ ಗುರುಗಳು ಅತೋದೇವ ಅವಂತುನಃ ಎಂಬ ಮಂತ್ರದಿಂದ ವಿಷ್ಣುವಿಗೆ ಆ ಪವಿತ್ರವನ್ನು ಅರ್ಪಿಸಬೇಕು.

**ಶೂದ್ರಸ್ತು ಮೂಲಮಂತ್ರೇಣ ಯಥಾ ವಿಷ್ಣೌ ತಥಾ ಶಿವೇ ।**
**ಅತೋ ದೇವತಿ ಮಂತ್ರೇಣ ದ್ವಿಜೋ ವಿಷ್ಣೌ ನಿವೇದಯೇತ್ ॥**

ಶೂದ್ರರು, ನಮೋ ನಾರಾಯಣಾಯ, ನಮಃ ಶಿವಾಯ ಎಂಬ ಮಂತ್ರದಿಂದ ಆ ಪವಿತ್ರವನ್ನು ವಿಷ್ಣುವಿಗೂ, ಶಿವನಿಗೂ ಏರಿಸಿ ತಾವು ಧರಿಸಬೇಕು. ದ್ವಿಜರು ಮಾತ್ರ ಅತೋ ದೇವ ಎಂಬ ಮಂತ್ರದಿಂದ ಈ ಪವಿತ್ರರೋಪಣವನ್ನು ಮಾಡಬೇಕು. ಈ ಸಂಸಾರದಲ್ಲಿ ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿ ಎರಡನ್ನೂ ಬಯಸುವವರು ವಿಧಿಪೂರ್ವಕವಾಗಿ ದೇವರಿಗೆ ಪವಿತ್ರಾರೋಹಣವನ್ನು ಮಾಡಬೇಕು. ಶ್ರಾವಣ ಶುದ್ಧ ದ್ವಾದಶಿಯ ದಿನ ಭಗವಂತನಿಗೆ ಪವಿತ್ರವನ್ನು ಸಮರ್ಪಿಸದ ವಿಷ್ಣುಭಕ್ತನು ಒಂದು ವರ್ಷದ ವರೆಗೆ ತಾನು ಮಡಿದ ವಿಷ್ಣುಪೂಜೆ ಎಲ್ಲವೂ ವ್ಯರ್ಥವಾಗಿ ಹೋಗುವದು.

ಈ ಪುತ್ರದಾ ಏಕಾದಶಿ ಹಾಗೂ ಪವಿತ್ರಾರೋಪಣದ ಮಹಿಮೆಯನ್ನು ಕೇಳಿದ ಮಾನವರು ಸಕಲ ವಿಧವಾದ ಪಾಪಗಳಿಂದಲೂ ಮುಕ್ತರಾಗುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶ್ರಾವಣ ಶುಕ್ಲಪಕ್ಷದ ಪುತ್ರದಾ ಏಕಾದಶಿಯ ಮಹಿಮೆಎಂಬ ಐವತ್ತಾರನೇಯ ಅಧ್ಯಾಯ ಮುಗಿದುದು*



## ಭಾದ್ರಪದ ಕೃಷ್ಣಪಕ್ಷದ ಅಜಾ ಏಕಾದಶಿಯ ಮಹಿಮೆ | ಅಧ್ಯಾಯ - ೫೭

**ಧರ್ಮರಾಜ:-** ಕೃಷ್ಣ, ಭಾದ್ರಪದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಏನು? ಅದರ ಮಹಿಮೆ ಏನು? ಇದನ್ನೆಲ್ಲ ಕೇಳಲು ನನಗೆ ಕುತೂಹಲ. ದಯವಿಟ್ಟು ಅದನ್ನು ಬಿತ್ತರಿಸು.

**ಶ್ರೀಕೃಷ್ಣ:-** ರಾಜನೇ, ಭಾದ್ರಪದ ಕೃಷ್ಣಪಕ್ಷದ ಏಕಾದಶಿಯನ್ನು ಅಜ ಏಕಾದಶಿ ಎಂದು ಕರೆಯುತ್ತಾರೆ. ಅದು ಸರ್ವಪಾಪ ಪ್ರನಾಶಕ. ಅಂದು ಸ್ನಾನ ಮಾಡಿ ಹೃಷಿಕೇಶನ ಪೂಜೆಗೈದು ಉಪವಾಸ, ಜಾಗರ, ದ್ವಾದಶೀ ಪಾರಣೆ, ಮುಂತಾದ ವಿಧಿಪೂರ್ವಕವಾಗಿ ಏಕಾದಶಿ ವ್ರತವನ್ನು ಆಚರಿಸಿದವರ ಪಾಪವೆಲ್ಲವೂ ಕಳೆದುಹೊಗುತ್ತದೆ. ಈ ವ್ರತದ ಶ್ರವಣ ಮಾತ್ರದಿಂದಲೇ ಎಷ್ಟೋ ಪಾಪಗಳ ಪರಿಹಾರ ಆಗುವದು. ಇಹಲೋಕ ಹಾಗೂ ಪರಲೋಕ, ಎರಡೂ ಕಡಗೆಳಲ್ಲಿ ಹಿತವನ್ನುಂಟುಮಾಡಲು ಈ ಅಜ ಏಕಾದಶಿಗಿಂತ ಮಿಗಿಲಾದ ಸಾಧನ ಇರುವದಿಲ್ಲ. ಇದು ಸತ್ಯ. ಇದರ ಯಾಥಾರ್ಥವನ್ನು ನಿನಗೆ ಮನಗಾಣಿಸಿ ಕೊಡಲಿಕ್ಕಾಗಿ ಒಂದು ಉಪಾಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಅಯೋಧ್ಯಾನಗರದಲ್ಲಿ ಹರಿಶ್ಚಂದ್ರ ಎಂಬ ಹೆಸರಿನ ಓರ್ವ ಚಕ್ರವರ್ತಿ ಮಹಾರಾಜ ಆಗಿಹೋದ. ಅವನು ಸತ್ಯಸಂಧ. ಅಖಂಡ ಭೂಮಂಡಲಕ್ಕೆಲ್ಲ ಅಧಿಪತಿ. ಯಾವುದೋ ಒಂದು ಕಾರಣಾಂತರದಿಂದ ಅವನು ರಾಜ್ಯವನ್ನು ಕಳೆದುಕೊಂಡ. ಅಧಿಕಾರ ಭ್ರಷ್ಟನಾದ. ಎಂದೂ ಇಲ್ಲದ ದಟ್ಟದಾರಿದ್ರ್ಯ ಬೆನ್ನಟ್ಟಿ ಬಂದಿತು ಆ ರಾಜರ್ಷಿಯನ್ನು ಕಡು ಬಡತನದ ಬೇಗೆಯಲ್ಲಿ ಬೆಂದುಹೋದ ಆ ರಾಜ ಕೊನೆಗೆ ತನ್ನ ಮಡದಿಯನ್ನೇ ಮಾರಿದ. ಮಗನನ್ನು ಮಾರಾಟ ಮಾಡಿದ. ತನ್ನನ್ನು ಕೂಡ ಮಾರಾಟಕ್ಕೆ ಹಚ್ಚಿದ. ಇಂಥ ಪುಣ್ಯ ಪ್ರತಾಪಿಯಾದ ಆ ಹರಿಶ್ಚಂದ್ರನು ಭಾಗ್ಯದ ವಿಪರ್ಯಾಸದಿಂದ ಓರ್ವ ಹೊಲೆಯನ ಮನೆಯ ಊಳಿಗದ ಆಳಾಗಿ ದುಡಿಯತೊಡಗಿದ. ಇಷ್ಟಾದರೂ

ಆ ದೊರೆ ತನ್ನ ಸತ್ಯನಿಷ್ಠೆಯನ್ನು ತೊರೆಯಲಿಲ್ಲ. ತಾನು ನುಡಿದ ಮಾತು ಹುಸಿ ಹೋಗಬಾರದೆಂದು ರಾಜಾಧಿರಾಜನಾದ ಆ ಮಹಾರಾಜ ಚಂಡಾಲನ ಮನೆಯ ದಾಸನಾಗಿ ರುದ್ರಭೂಮಿಯನ್ನು ಕಾಯತೊಡಗಿದ. ಹೆಣದ ಮೇಲಿನ ಬಟ್ಟೆಯನ್ನು ತೆಗೆದುಕೊಂಡು ತನ್ನ ಒಡೆಯನ ಆಜ್ಞೆಯಂತೆ ಸ್ಮಶಾನ ಕಾಯುತ್ತ ಎಷ್ಟೋ ವರ್ಷ ಕಳೆದ. ಆ ರಾಜ ರಾಜ್ಯಭ್ರಷ್ಟನಾದ. ಅಧಿಕಾರಭ್ರಷ್ಟನಾದ. ಐಶ್ವರ್ಯಭ್ರಷ್ಟನೂ ಆದ. ಆದರೆ ಸತ್ಯಭ್ರಷ್ಟನು ಮಾತ್ರ ಒಂದು ಸಲವೂ ಆಗಲಿಲ್ಲ ಆ ಪುಣ್ಯಾತ್ಮ.

ಹೀಗೆ ಗಟ್ಟಿಮನಸ್ಸಿನಿಂದ ಸುಡುಗಾಡುಗಟ್ಟೆಯನ್ನು ಕಾಯುತ್ತ ಆ ಮಹಾರಾಜನು ಎಷ್ಟೋ ವರ್ಷಗಳು ಉರುಳಿದವು. ಮಡದಿ, ಮಗ, ಹಾಗೂ ತಾನು, ಮೂವರ ಶೋಚನೀಯವಾದ ಈ ದುಃಖದುರವಸ್ಥೆ ಹಾಗೂ ದುರ್ದಶೆ ನೆನೆದು ಬಹು ದುಃಖವಾಯಿತು ಆ ಮಹಾರಾಜನಿಗೆ. ಈ ದುರವಸ್ಥೆಯಿಂದ ನನಗೆ ಇನ್ನು ಎಂದು ಬಿಡುಗಡೆ? ಹೇಗೆ ಮುಕ್ತಿ ಪರಿಹಾರದ ಮಾರ್ಗ ಯಾವುದು? ಎಂದು ಅವನು ಯೋಚಿಸತೊಡಗಿದ. ಅಷ್ಟರಲ್ಲಿ ಇದನ್ನೆಲ್ಲ ಜ್ಞಾನದೃಷ್ಟಿಯಿಂದ ನೋಡಿ ತಿಳಿದುಕೊಂಡು ಒಬ್ಬ ಮುನಿಪುಂಗವ ಆಗಮಿಸಿದ.

**ಪರೋಪಕರಣಾರ್ಥಾಯ ನಿರ್ಮಿತಾ ಬ್ರಹ್ಮಣಾ ದ್ವಿಜಾಃ ।**

ಹೆರವರಿಗೆ ಉಪಕಾರವನ್ನು ಮಾಡಲಿಕ್ಕಾಗಿಯೇ ಬ್ರಹ್ಮನು ದ್ವಿಜರನ್ನು ನಿರ್ಮಿಸಿದ್ದಾನೆ.

ಆ ದ್ವಿಜಶ್ರೇಷ್ಠನನ್ನು ಕಂಡು ಈ ರಾಜಶ್ರೇಷ್ಠನು ಎರಡೂ ಕೈಗಳನ್ನು ಜೋಡಿಸಿ ನಮಸ್ಕಾರ ಮಾಡಿದ. ತನ್ನ ಕಥೆಯನ್ನೆಲ್ಲ ಹೇಳಿದ. ವ್ಯಥೆಯನ್ನೆಲ್ಲ ತೋಡಿಕೊಂಡ ಮಹಾತ್ಮನಾದ ಹರಿಶ್ಚಂದ್ರನ ಈ ದಾರುಣ, ಮುನಿಪುಂಗವನಿಗೆ. ಅವರ ಹೆಸರು ಗೌತಮ. ಶಾಪಾನುಗ್ರಹ ಸಮರ್ಥ ಆ ಅಹಲ್ಯಾಪತಿ. ಒಂದು ಕ್ಷಣ ಕಣ್ಣು ಮುಚ್ಚಿ ಕುಳಿತ ಆ ಮಹಾಮುನಿ. ಮರುಚಣದಲ್ಲಿ ಕಣ್ಣುತೆರೆದ ಮೆಲ್ಲನೇ. ಕಮಲಕೋಶದಂತಿರುವ ಮುಖವನ್ನೂ ತೆರೆದ. ರಾಜನಿಗೆ ಉಪದೇಶಿಸಿದ.

**ಗೌತಮ:-** ಹರಿಶ್ಚಂದ್ರ, ಭಾದ್ರಪದ ಕೃಷ್ಣಪಕ್ಷದ ಏಕಾದಶಿ ತಿಥಿ ಪರಮ ಪವಿತ್ರ, ಪಾಪಪರಿಹಾರಕ. ಪುಣ್ಯರಾಶಿಪ್ರದ ಸುದೈವದಿಂದ. ಆ ಏಕಾದಶಿ ಇಂದಿನಿಂದ ಏಳನೆಯ ದಿನವೇ ಬರಲಿದೆ. ಅಂದು ನೀನು ಉಪವಾಸ ಮಾಡು. ಶ್ರೀಹರಿಯನ್ನು ಪೂಜಿಸು. ರಾತ್ರಿ ಜಾಗರ ಮಾಡು. ದ್ವಾದಶಿ ದಿನ ಪ್ರಾತಃಸ್ನಾನ ಹರಿಪೂಜೆ, ಪಾರಣೆಗಳನ್ನು ಸಕಾಲದಲ್ಲಿ ಆಚರಿಸು. ಇದರಿಂದ ಶ್ರೀಹರಿ ತುಷ್ಟನಾಗುವನು. ನಿನ್ನ ಪಾಪಗಳೆಲ್ಲವೂ ನಷ್ಟವಾಗುವವು. ನಿನ್ನ ಪಾಪ ಕ್ಷಯವಾದ ಬಳಿಕ ನಿನ್ನ ಮೊದಲಿನ ರಾಜ್ಯ, ಐಶ್ವರ್ಯ, ಅಧಿಕಾರ, ಮಡದಿ, ಮಕ್ಕಳು, ಸ್ಥಾನ, ಮಾನ, ಭೋಗ, ಭಾಗ್ಯ ಎಲ್ಲವೂ ನಿನ್ನನ್ನು ಹುಡುಕಿಕೊಂಡು ಬರುತ್ತವೆ.

ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದರು ಗೌತಮರು.

ಅನೂಚಾನವಾಗಿ ಪಾಲಿಸಿದ ಹರಿಶ್ಚಂದ್ರ ಮುನಿಯ ಆದೇಶವನ್ನು. ವಿಧ್ಯುಕ್ತವಾಗಿ ಆಚರಿಸಿದ ಆ ಏಕಾದಶಿಯನ್ನು. ಅದರಿಂದ ಅವನ ಪಾಪದ ರಾಶಿಯೆಲ್ಲವೂ ಕ್ಷಯಿಸಿತು. ಪ್ರತಿಬಂಧಕ ನಿವೃತ್ತಿಯೂ ಆಯಿತು. ಭಗವತ್ ಪ್ರಸಾದವು ಒದಗಿ ಬಂದಿತು. ಅವನಿಗೆ ಇಂಥ ದಾರುಣ ಪರಿಸ್ಥಿತಿಯನ್ನು ತಂದು ಒದಗಿಸಿದ ವಿಶ್ವಾಮಿತ್ರರು ಅವನ ಮೇಲೆ

ಕರುಣೋನ್ಮುಖರಾಗಿ ಅವನ ಮೊದಲಿನ ರಾಜ್ಯ, ಐಶ್ವರ್ಯ, ಸಿಂಹಾಸನಗಳನ್ನು ಪಡೆಯುವಂತೆ ಅನುಗ್ರಹಿಸಿದರು. ಇನ್ನೂ ಬಹು ಕಾಲ ಭೋಗಿಸಬೇಕಾದ ಅವನ ಪ್ರಾರಬ್ಧವೆಲ್ಲವೂ ಈ ಏಕಾದಶಿಯ ವ್ರತಪಾಲನೆಯಿಂದ ಉಪಮರ್ದವಾಗಿ ಬೇಗನೇ ಸವಿದು ಆ ಮಹಾರಾಜನಿಗೆ ಭಾಗ್ಯೋದಯದ ಪರ್ವಕಾಲವೇ ಒದಗಿ ಬಂದಿತು. ಈ ಏಕಾದಶಿಯ ಪುಣ್ಯಪ್ರಭಾವದಿಂದ ಮೃತನಾದ ಮಗ ಬದುಕಿ ಬಂದ. ಅಗಲಿದ ಹೆಂಡತಿಯೊಂದಿಗೆ ಮಧುರ ಮಿಲನ ಆಯಿತು. ಸ್ವರ್ಗದಿಂದ ದೇವತೆಗಳು ಪುಷ್ಪವೃಷ್ಟಿಯನ್ನು ಅವರ ಮೇಲೆ ಸುರಿಸಿದರು. ದೇವದುಂದುಭಿ ಮೊಳಗಿದವು. ಏಕಾದಶಿ ಪ್ರಭಾವದಿಂದ ಮಹಾರಾಜನು ಈ ಲೋಕದಲ್ಲಿ ಇರುವವರೆಗೆ ನಿಷ್ಕಂಟಕವಾದ ಪ್ರಾಜ್ಯ ಸಾಮ್ರಾಜ್ಯವನ್ನು ಅನುಭವಿಸಿದ. ತನ್ನ ವಿಶಾಲವಾದ ಸಾಮ್ರಾಜ್ಯದಲ್ಲಿ ಎಲ್ಲ ಪ್ರಜೆಗಳೂ ಕಡ್ಡಾಯವಾಗಿ ಏಕಾದಶಿ ವ್ರತವನ್ನು ಮಾಡಲೇಬೇಕು. ಎಂದು ಅನುಶಾಸನ ಗೈದ. ಇದರಿಂದ ಮರಣಾನಂತರವೂ ತನ್ನ ಪ್ರಜಾ, ಪ್ರಧಾನಿ, ಪುರೋಹಿತ, ಪರಿವಾರದವರೊಂದಿಗೆ ಸ್ವರ್ಗವನ್ನು ಸಾರಿದ. ಅಲ್ಲಿಯೂ ಗೌರವದ ಗದ್ದಿಗೆಯನ್ನೇ ಏರಿದ. ಶ್ರೀಹರಿಯ ಪರಮಾನುಗ್ರಹಕ್ಕೆ ಪ್ರಾತನು ಆದ.

ಈ ಏಕಾದಶಿಯ ವ್ರತವನ್ನು ಆಚರಿಸುವ ಮಾನವರು ಸರ್ವಪಾಪಗಳಿಂದ ಮುಕ್ತರಾಗಿ ಸ್ವರ್ಗಮಾರ್ಗಾನುಗಾಮಿಗಳಾಗುವರು. ಇದರ ಶ್ರವಣದಿಂದಲೂ, ಪಠಣದಿಂದಲೂ ಅಶ್ವಮೇಧಯಜ್ಞದ ಫಲ ಲಭಿಸುವದು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಭಾದ್ರಪದ ಕೃಷ್ಣಪಕ್ಷದ ಅಜಾ ಏಕಾದಶಿಯ ಮಹಿಮೆ ಎಂಬ ಐವತ್ತೇಳನೇಯ ಅಧ್ಯಾಯ ಮುಗಿದುದು*

—o—

## ಭಾದ್ರಪದ ಶುಕ್ಲಪಕ್ಷದ ಪದ್ಮಾ ಏಕಾದಶಿಯ ಮಾಹಾತ್ಮ್ಯ

ಅಧ್ಯಾಯ - ೫೮

**ಧರ್ಮರಾಜ:-** ಕೇಶವ, ಭಾದ್ರಪದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿ ಯಾವದು? ಅದರ ಹೆಸರೇನು? ಅದಕ್ಕೆ ಅಭಿಮಾನಿ ಆದ ದೇವರು ಯಾರು? ಅದರ ಆಚರಣೆಯ ವಿಧಿ ಯಾವದು? ವಿಧಾನ ಯಾವದು? ಇದೆಲ್ಲವನ್ನೂ ನನಗಾಗಿ ನಿರೂಪಿಸು.

**ಶ್ರೀಕೃಷ್ಣ:-** ಧರ್ಮರಾಜ, ಭಾದ್ರಪದ ಶುಕ್ಲಪಕ್ಷ ಏಕಾದಶಿಯ ಮಹಿಮೆ ಅತೀವ ಆಶ್ಚರ್ಯಕಾರಕ. ಇದನ್ನು ಹಿಂದೆ ನಾರದನಿಗೆ ಉಪದೇಶಿಸಿದ ಚತುರ್ಮುಖ ಬ್ರಹ್ಮ. ಅದನ್ನೇ ನಿನಗೆ ಹೇಳುತ್ತೇನೆ ಕೇಳು.

**ನಾರದ:-** ಪಿತಾಮಹ, ನಿನಗೆ ನಮಸ್ಕಾರ. ಭಾದ್ರಪದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಆ ದಿನ ಭಗವದಾರಾಧನೆಯನ್ನು ವಿಶೇಷವಾಗಿ ನಾನು ಮಾಡಬೇಕಾಗಿದೆ. ಅದಕ್ಕಾಗಿ ಆ ಏಕಾದಶಿಯ ನಾಮ ಮಹಿಮೆಗಳನ್ನು ತಿಳಿಯುವ ತವಕ ನನಗೆ.

**ಬ್ರಹ್ಮ:-** ನಾರದ, ನೀನು ಮುನಿಗಳಲ್ಲಿಯೇ ಶ್ರೇಷ್ಠ. ವಿಷ್ಣುಭಕ್ತರಲ್ಲಿ ಅಗ್ರಣಿ, ಮಹಾ ಭಗವದ್ಭಕ್ತ. ನೀನು ಪ್ರಶ್ನೆ ಕೇಳಿದ್ದು ಒಳ್ಳೆಯದೇ ಆಯಿತು. ಈ ಜಗತ್ತಿನಲ್ಲಿ ಏಕಾದಶಿಗೆ ಮಿಗಿಲಾದ ಬೇರೆ ತಿಥಿ ಇರುವದಿಲ್ಲ. ಭಾದ್ರಪದ ಶುಕ್ಲ ಏಕಾದಶಿಯನ್ನು ಪದ್ಮಾ ಎಂಬ ಹೆಸರಿನಿಂದ ಕರೆಯುತ್ತಾರೆ. ಆ ದಿನದಂದು ಹೃಷಿಕೇಶನನ್ನು ಪೂಜೆಮಾಡಿ, ಈ ಪದ್ಮಾ ಏಕಾದಶಿಯ ಉತ್ತಮವಾದ ವ್ರತವನ್ನು ಆಚರಿಸಬೇಕು. ಈ ವಿಷಯದಲ್ಲಿ ನಿನಗೆ ನಾನು ಒಂದು ಮನೋಹರವಾದ ಪೌರಾಣಿಕ ಕತೆಯನ್ನು ಹೇಳುತ್ತೇನೆ ಚಿತ್ತವಿಟ್ಟು ಆಲಿಸು.

ಪೂರ್ವಕಾಲದಲ್ಲಿ ಮಾಂಧಾತ ಎಂಬ ರಾಜರ್ಷಿ ಭೂಮಂಡಲವನ್ನು ಆಳುತ್ತಲಿದ್ದ. ಚತುಃಸಾಗರ ಪರ್ಯಂತ ಚಾಚಿದ ಅಖಂಡ ಭೂಮಂಡಲಕ್ಕೆಲ್ಲ ಏಕರಾಟ್ ಸಾಮ್ರಾಟ ಆದ ಆ ಮಾಂಧಾತ ಚಕ್ರವರ್ತಿ ಪರಿಮ ಪ್ರತಾಪಿ. ಮೇಲೆ ಸತ್ಯಸಂಧ. ಹೊಟ್ಟೆಯ ಮಕ್ಕಳಂತೆಯೇ ಎಲ್ಲ ಪ್ರಜೆಗಳನ್ನೂ ಧರ್ಮದಿಂದ ಕಾಪಾಡುತ್ತಿದ್ದ. ಅವನ ರಾಜ್ಯದಲ್ಲಿ ಒಮ್ಮೆಯೂ ಬರಗಾಲ ತಲೆದೋರಲಿಲ್ಲ. ಕ್ಷಾಮಡಾಮರಗಳು ಹಣಿಕಿ ಹಾಕಲಿಲ್ಲ. ಅಧಿವ್ಯಾಧಿಗಳು ಅವನ ಸಾಮ್ರಾಜ್ಯದ ಸೀಮೆಯಲ್ಲಿಯೇ ಪ್ರವೇಶಿಸಲಿಲ್ಲ. ಎಲ್ಲ ಜಾತಿ ಜನಾಂಗದ ಜನರೂ ತಮ್ಮ ತಮ್ಮ ವರ್ಣಾಶ್ರಮ ಉಚಿತವಾದ ಧರ್ಮಕರ್ಮಗಳನ್ನು ಆಚರಿಸುತ್ತ, ಹರಿವಾಯುಗಳ ಸೇವೆಗೈಯುತ್ತ, ಶ್ರದ್ಧೆಯ ಬದುಕನ್ನು ಬಾಳುತ್ತಲಿದ್ದರು. ಭೂಮಿಯು ಕಾಮಧೇನುವಿನಂತೆ ಪ್ರಜೆಗಳು ಬಯಸಿದ್ದನ್ನೆಲ್ಲ ನೀಡುತ್ತಿತ್ತು. ಹೀಗೆ ಅನೇಕ ವರ್ಷ ನಿರಾಂತಕವಾಗಿ ಆ ರಾಜರ್ಷಿ ರಾಜ್ಯವನ್ನು ನಡೆಸಿದ ಬಳಿಕ ಅವನ ಕರ್ಮವಿಪಾಕದಿಂದ ಅವನ ರಾಜ್ಯದಲ್ಲಿ ಅನಾವೃಷ್ಟಿಯು ತಲೆದೋರಿತು. ಮೂರುವರ್ಷಗಳ ವರೆಗೆ ಆಗಸದಲ್ಲಿ ಒಂದು ಮೋಡವೂ ಮೂಡಲಿಲ್ಲ. ಒಂದು ಹನಿ ಮಳೆಯೂ ಬೀಳಲಿಲ್ಲ. ಮಳೆ ಆಗದೇ ಬೆಳೆ ಬಾರದೇ ಪ್ರಜೆಗಳೆಲ್ಲರೂ ಹಸಿವೆಯಿಂದ ಕಸಿವಿಸಿಪಡತೊಡಗಿದರು. ಯಜ್ಞ ಯಾಗ, ವೇದಾಧ್ಯಯನ ಎಲ್ಲವೂ ನಿಂತುಕೊಂಡವು. ಬುಭುಕ್ಷಿತರಾದ ಜನ ಕಿಂಕರ್ತವ್ಯಮೂಢರಾಗಿ

ಧರ್ಮಾಚರಣೆಯನ್ನು ಮಾಡಲಿಕ್ಕಾಗದೇ ಕಂಗಾಲಾಗಿ ಪರಿತಪಿಸತೊಡಗಿದರು. ಕೊನೆಗೆ ನಿರಾಶರಾದ ಪ್ರಜೆಗಳೆಲ್ಲರೂ ಆ ರಾಜನ ಬಳಿಗೆ ಬಂದು ದೂರಿಕೊಂಡರು.

**ಪ್ರಜೆಗಳು:-** ಮಹಾರಾಜ, ನೀರು ಎಲ್ಲಕ್ಕಿಂತ ಮುಖ್ಯ. ಆ ನೀರು ಭಗವಂತನಿಗೂ ಆಶ್ರಯ. ಆ ನೀರಿನಲ್ಲಿ ಪವಡಿಸಿದ್ದರಿಂದಲೇ ಆ ಪರಮಾತ್ಮನಿಗೆ ನಾರಾಯಣ ಎಂದು ಹೆಸರು ಬಂದಿದೆ. ಸರ್ವಗತನಾದ ವಿಷ್ಣು ಮೋಡರೂಪದಿಂದ ಮಳೆಗರೆಯುತ್ತಾನೆ. ಮಳೆಯಿಂದ ಬೆಳೆ, ಬೆಳೆಯಿಂದ ಅನ್ನ, ಅನ್ನದಿಂದ ಪ್ರಜೆಗಳ ಬಾಳು. ಮಳೆ ಇಲ್ಲದಿದ್ದರೆ ಬೆಳೆ ಬೆಳೆಯದೇ, ಅನ್ನವಿಲ್ಲದೇ ಜನರೆಲ್ಲರೂ ಕ್ಷಯವನ್ನು ಹೊಂದುವರು. ಆದ್ದರಿಂದ ಹೇಗಾದರೂ ಮಾಡಿ ಜನರಿಗೆಲ್ಲ ಅನ್ನ ದೊರಕುವಂತೆ ಮಾಡು.

**ರಾಜ:-** ನೀವು ಹೇಳಿದ ಮಾತು ನಿಜ. ನಮ್ಮ ಹಿಂದಿನ ಹಿರಿಯರು ಬ್ರಹ್ಮನನ್ನು ಅನ್ನ ಎಂದೇ ಕರೆದಿರುವರು. ಅನ್ನದ ಮೇಲೆಯೇ ಎಲ್ಲ ಪ್ರಪಂಚವು ನಿಂತಿದೆ. ರಾಜನ ಅಪಚಾರದಿಂದಲೇ ಪ್ರಜಾ ಜನರಿಗೆ ಪೀಡೆ ಉಂಟಾಗುವದು ಎಂಬುದನ್ನು ನಾನು ಬಲ್ಲೆ. ನಾನಂತೂ ಬುದ್ಧಿಪೂರ್ವಕವಾಗಿ ಯಾವ ಪಾಪವನ್ನೂ ಮಾಡಿಲ್ಲ. ಆದರೂ ಪ್ರಜೆಗಳ ಹಿತಕ್ಕಾಗಿ ನನ್ನ ಶಕ್ತಿ ಮೀರಿ ಪ್ರಯತ್ನಿಸುತ್ತೇನೆ.

ಹೀಗೆ ಹೇಳಿ ಪ್ರಜಾ ಜನರನ್ನು ಸಂತೈಸಿ ಆ ರಾಜರ್ಷಿಯು ಅರಣ್ಯಕ್ಕೆ ಹೋದ. ಪುಣ್ಯಾಶ್ರಮ ಹಾಗೂ ಪರ್ಣಕುಟೀರಗಳನ್ನೆಲ್ಲ ಸುತ್ತಾಡಿದ. ಒಂದು ಆಶ್ರಮದಲ್ಲಿ ಬ್ರಹ್ಮಪುತ್ರರಾದ ಅಂಗಿರಸ ಪುತ್ರರು ತಪೋನುಷ್ಠಾನ ತತ್ಪರರಾಗಿ ಕುಳಿತಿದ್ದನ್ನು ನೋಡಿದ. ರಥದಿಂದ ಇಳಿದು ಮಹಾರಾಜ ಆ ಋಷಿಗಳ ಬಳಿಗೆ ಹೋಗಿ ಸಾಷ್ಟಾಂಗ ವಂದನೆ ಮಾಡಿದ. ಮಹರ್ಷಿಗಳು ಆ ಚಕ್ರವರ್ತಿಗೆ ಸ್ವಾಗತ ನೀಡಿ ಕುಶಲ ಪ್ರಶ್ನೆಯನ್ನು ಮಾಡಿದರು.

**ಮಾಂಧಾತ:-** ಪೂಜ್ಯರೇ, ನಾನೇನೋ, ಧರ್ಮದಿಂದಲೇ ರಾಜ್ಯವನ್ನು ಪಾಲಿಸುತ್ತಿದ್ದೇನೆ. ಆದರೂ ನನ್ನ ರಾಜ್ಯದಲ್ಲಿ ಭೀಕರವಾದ ಬರಗಾಲ, ಅನಾವೃಷ್ಟಿ ತಲೆದೋರಿದ. ಇದಕ್ಕೆ ಕಾರಣವಂತೂ ನನಗೆ ತಿಳಿಯುತ್ತಿಲ್ಲ. ಈ ಸಂಶಯದ ಪರಿಹಾರಕ್ಕಾಗಿಯೇ ನಾನು ತಮ್ಮ ಬಳಿಗೆ ಬಂದಿದ್ದೇನೆ. ನಮ್ಮ ಪ್ರಜರಿಗೆ ಯೋಗಕ್ಷೇಮವನ್ನು ಉಂಟುಮಾಡಿ ಅನುಗ್ರಹಿಸಿರಿ.

**ಅಂಗಿರಸ:-** ಮಹಾರಾಜ, ಇದು ಕೃತಯುಗ. ಎಲ್ಲ ಯುಗಗಳಲ್ಲಿಯೂ ಅತ್ಯುತ್ತಮ. ಇಲ್ಲಿ ಎಲ್ಲ ಜನರೂ ಬ್ರಹ್ಮನಿಷ್ಠರು. ಧರ್ಮವು ತನ್ನ ನಾಲ್ಕೂ ಚರಣಗಳಿಂದ ಒಡಗೂಡಿದೆ. ಈ ಯುಗದಲ್ಲಿ ಓರ್ವ ವೃಷಲನು ನಿನ್ನ ರಾಜ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದಾನೆ. ಆ ಕಾರಣದಿಂದ ಮೋಡಗಳು ಮಳೆಗರೆದಿಲ್ಲ. ಆದ್ದರಿಂದ ಶಾಸನ ಮಾಡು.

**ರಾಜ:-** ಮುನಿಗಳೇ, ಅವನು ಶೂದ್ರನಾದರೆ ಏನಾಯಿತು? ತಪಸ್ಸನ್ನು ಮಾಡುತ್ತಿರುವನಷ್ಟೆ? ತಪಸ್ಸನ್ನು ಮಾಡಲು ಎಲ್ಲರಿಗೂ ಅಧಿಕಾರ ಉಂಟು. ಶೂದ್ರನು ತಪಸ್ಸು ಮಾಡಿದರೆ ತಪ್ಪೇನು? ಆದ್ದರಿಂದ ಯಾವ ಅಪರಾಧವನ್ನೂ ಮಾಡದ ಆ ನಿರಪರಾಧಿ ಶೂದ್ರನನ್ನು ದಮನ ಮಾಡುವದು ನನ್ನ ಕೈಯಿಂದ ಆಗದ ಕೆಲಸ. ನಾನು ಅವನನ್ನು ಎಂದಿಗೂ ನಿಗ್ರಹಿಸಲಾರೆ. ನನ್ನ ರಾಜ್ಯದಲ್ಲಿ ತಲೆದೋರಿದ ಬರಗಾಲಕ್ಕೆ ಬೇರೆ ಯಾವುದಾದರೂ ಒಂದು ಉಪಾಯವನ್ನು ಹೇಳಿರಿ.

**ಅಂಗಿರಸ:-** ಮಹಾರಾಜ, ಹಾಗಾದರೆ ನೀನು ಭಾದ್ರಪದ ಶುಕ್ಲ ಏಕಾದಶಿಯ ದಿನ ವ್ರತವನ್ನು ಆಚರಿಸು. ಆ ವ್ರತದ ಪ್ರಭಾವದಿಂದ ರಾಜ್ಯದಲ್ಲಿ ಸುವೃಷ್ಟಿ ನಿಶ್ಚಿತವಾಗಿಯೂ ಆಗುವದು. ಸರ್ವಸಿದ್ಧಿಪ್ರದವಾದ ಈ ಏಕಾದಶಿ ವ್ರತವನ್ನು ಎಲ್ಲ ಪರಿವಾರದವರೂ ಪಾಲಿಸಲಿ.

ಮಹರ್ಷಿಯ ಈ ವಾಕ್ಯವನ್ನು ಕೇಳಿ ಮಹಾರಾಜ ಮರಳಿ ಬಂದ ರಾಜಧಾನಿಗೆ. ಭಾದ್ರಪದ ಏಕಾದಶಿಯನ್ನು ಯಥಾಸಾಂಗವಾಗಿ ಆಚರಿಸಿದ. ಅವನ ರಾಜ್ಯದಲ್ಲಿಯ ಎಲ್ಲ ಜಾತಿಜನಾಂಗದವರೂ ಪದ್ಮಾ ಏಕಾದಶಿ ವ್ರತವನ್ನು ಆಚರಿಸಿದರು. ಅದರಿಂದ ಸಮೃದ್ಧವಾಗಿ ಮಳೆ ಬಂದು ಅದರಿಂದ ಸಾಕಷ್ಟು ಅನ್ನ ವಸ್ತ್ರ ದೊರೆತು ಸಂತಸದ ಹೊನಲು ಹರಿಯಿತು. ಭೂಮಿ ಎಲ್ಲವೂ ಸುಜಲ, ಸುಫಲ, ಸಸ್ಯಶಾಲಿನಿ ಆಗಿ ಕಂಗೊಳಿಸಿತು. ಆದ್ದರಿಂದ ಎಲ್ಲರೂ ಈ ಪದ್ಮಾ ಏಕಾದಶಿಯನ್ನು ತಪ್ಪದೇ ಪಾಲಿಸಬೇಕು.

ಭಾದ್ರಪದ ಶುಕ್ಲ ದ್ವಾದಶಿ ದಿನ ಮೊಸರನ್ನ ಬ್ರಾಹಣರಿಗೆ ಉಣಬಡಿಸಬೇಕು. ಮತ್ತು ಮೊಸರು ಅನ್ನವನ್ನು ಒಂದು ಪಾತ್ರೆಯಲ್ಲಿ ಹಾಕಿ ಪಾತ್ರೆ ಸಹಿತವಾಗಿಯೇ ದಾನ ಕೊಡಬೇಕು. ಹಾಗೂ ನೀರಿನಿಂದ ತುಂಬಿದ ಬಿಂದಿಗೆಯನ್ನು ವಸ್ತ್ರವನ್ನು ಹೊದಿಸಿ ಕೊಡೆ ಹಾಗೂ ಪಾದರಕ್ಷೆಗಳೊಂದಿಗೆ ಒಬ್ಬ ಯೋಗ್ಯನಾದ ದ್ವಿಜನಿಗೆ ದಾನ ನೀಡಬೇಕು. ಆ ಕಾಲದಲ್ಲಿ ಶ್ರೀಹರಿಯನ್ನು

**ನಮೋ ನಮಸ್ತೇ ಗೋವಿಂದ ಬುಧ ಶ್ರವಣ ಸಂಜ್ಞಕ ।**
**ಅಘಾಘ ಸಂಕ್ಷಯಂ ಕೃತ್ವಾ ಸರ್ವ ಸೌಖ್ಯ ಪ್ರದೋಭವ ॥**
**ಭುಕ್ತಿ ಮುಕ್ತಿ ಪ್ರದಶ್ಚೈವ ಲೋಕಾನಾಂ ಸುಖದಾಯಕ ।**

ಎಂದು ಗೋವಿಂದನನ್ನು ವಂದಿಸಿ ನಮ್ಮ ಪಾಪರಾಶಿಗಳನ್ನೆಲ್ಲ ಕಳೆದು ಸರ್ವವಿಧವಾದ ಸೌಖ್ಯವನ್ನು ಉಂಟುಮಾಡು. ಇಹದಲ್ಲಿ ಭೋಗಭಾಗ್ಯವನ್ನು ಪರದಲ್ಲಿ ಮೋಕ್ಷವನ್ನು ನೀಡು ಎಂದು ಪ್ರಾರ್ಥಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಭಾದ್ರಪದ ಶುಕ್ಲಪಕ್ಷದ ಪದ್ಮಾ ಏಕಾದಶಿಯ ಮಾಹಾತ್ಮ್ಯಎಂಬ ಐವತ್ತೆಂಟನೇಯ ಅಧ್ಯಾಯ ಮುಗಿದುದು*

—o—

# ಅಶ್ವೀನ ಕೃಷ್ಣಪಕ್ಷದ ಇಂದಿರಾ ಏಕಾದಶಿಯ ಮಾಹಾತ್ಮ್ಯೆ

ಅಧ್ಯಾಯ - ೫೯

**ಯುಧಿಷ್ಠಿರ:-** ಮಧುಸೂದನ, ಅಶ್ವೀನ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರು ಏನು?

**ಶ್ರೀಕೃಷ್ಣ:-** ಅಶ್ವೀನ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಇಂದಿರಾ ಏಕಾದಶಿ ಎಂದು ಕರೆಯುತ್ತಾರೆ. ಈ ಏಕಾದಶಿ ವ್ರತದ ಆಚರಣೆಯಿಂದ ಕೀಳು ಕುಲದಲ್ಲಿ ಆಗಲಿ ನೀಚಯೋನಿಯಲ್ಲಿ ಆಗಲಿ ಜನಿಸಿದ ಪಿತೃಗಳಿಗೆ ಸದ್ಗತಿ ಆಗುವದು. ಈ ವಿಷಯದಲ್ಲಿ ಒಂದು ಪಾಪಪರಿಹಾರವಾದ ಉಪಾಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಮಾಹಿಷ್ಮತಿ ನಗರದಲ್ಲಿ ಇಂದ್ರಸೇನ ಎಂಬ ಪ್ರಖ್ಯಾತ ರಾಜ. ಅವನ ಆಡಳಿತವೊಂದು ಧರ್ಮಶಾಸನ. ನ್ಯಾಯ, ನೀತಿ, ನಿಯಮಬದ್ಧವಾದ ಅವನ ಈ ರಾಜ್ಯಪಾಲನೆಯಿಂದ ಪ್ರಜೆಗಳೆಲ್ಲರೂ ತೃಪ್ತರೂ ತುಷ್ಟರೂ ಆಗಿದ್ದರು. ಇದರಿಂದ ಅವನ ಕೀರ್ತಿ ದಿಗಂತ ವಿಶ್ರಾಂತ ಆಗಿದ್ದಿತು. ಆ ಮಾಹಿಷ್ಮತಿಯ ದೊರೆಗೆ ವಿಷ್ಣುವಿನಲ್ಲಿ ಪರಮಭಕ್ತಿ. ಅವನು ಹಗಲಿರುಳು ಮುಕ್ತಿಪ್ರದವಾದ ಗೋವಿಂದನ ನಾಮಗಳನ್ನು ಉಚ್ಚರಿಸುತ್ತಲೇ ಅಧ್ಯಾತ್ಮನಿಷ್ಠನಾಗಿ ಕಾಲವನ್ನು ಕಳೆಯುತ್ತಿದ್ದ. ಭಗವಂತನ ಪ್ರಸಾದದಿಂದ ಅವನಿಗೆ ಸಂಸಾರದಲ್ಲಿ ಯಾವ ಕೊರತೆಯೂ ಇರಲಿಲ್ಲ. ಸಂತಾನ, ಸಂಪತ್ತು, ಅಧಿಕಾರ, ಸೌಭಾಗ್ಯ ಎಲ್ಲವೂ ಸಮೃದ್ಧವಾಗಿಯೇ ಇದ್ದಿತು. ಮಾತು ಕೇಳುವ ಮಕ್ಕಳು, ಮನದ ಇಚ್ಛೆಯಂತೆ ನಡೆಯುವ ಮಡದಿ, ವಿಧೇಯರಾದ ಮಂತ್ರಿಗಳು, ರಾಜನಿಷ್ಠರಾದ ಪ್ರಜೆಗಳು, ಸಸ್ಯಶಾಲಿನಿಯಾದ ಭೂಮಿ, ಎಲ್ಲವೂ ಅವನಿಗೆ ಸಂತೋಷಕರವಾಗಿಯೇ ಇದ್ದಿತು.

ಒಂದು ದಿವಸ ರಾಜ, ಸಿಂಹಾಸನದ ಮೇಲೆ ಆಸೀನನಾದಾಗ ಮುಗಿಲಿನಿಂದ ಇಳಿದು ಬಂದ ತಂಬೂರಿಯ ಮುನಿ ನಾರದ. ಇಂದ್ರಸೇನ ಮಹಾರಾಜ ಭಕ್ತಿಯಿಂದ ಎದ್ದು ನಿಂತ. ಆದರದಿಂದ ಸ್ವಾಗತ ನೀಡಿದ. ಪ್ರೀತಿಯಿಂದ ಅರ್ಘ್ಯಪಾದ್ಯಾದಿ ಪೂಜೆಗೈದ. ಉನ್ನತವಾದ ಆಸನದ ಮೇಲೆ ಕೂಡಿಸಿ ಕೈ ಮುಗಿದು ತಮ್ಮ ಆಗಮನದಿಂದ ನಾನು ಮಾಡಿದ ಯಜ್ಞ, ಯಾಗ, ದೇವತಾ ಆರಾಧನೆ ಎಲ್ಲವೂ ಇಂದು ಸಫಲ. ತಮ್ಮ ದರ್ಶನದಿಂದ ನನ್ನ ಜನ್ಮ ಸಾರ್ಥಕ. ತಾವು ಇಲ್ಲಿಯವರೆಗೆ ಶ್ರಮವಹಿಸಿ ಬಂದ ಕಾರಣವೇನು? ಎಂದು ಬೆಸಗೊಂಡ.

**ನಾರದ:-** ರಾಜಶ್ರೇಷ್ಠ, ನಾನು ನಿನಗೆ ಈಗ ಒಂದು ಕೌತುಕದ ಮಾತನ್ನು ಹೇಳುತ್ತೇನೆ ಕೇಳು. ನಾನು ಈ ಮೊದಲು ಬ್ರಹ್ಮಲೋಕದಿಂದ ಯಮಲೋಕಕ್ಕೆ ಹೋಗಿದ್ದೆ. ಅತ್ಯಾದರದಿಂದ ನನ್ನನ್ನು ಪೂಜಿಸಿದ ಯಮಧರ್ಮ. ಉಚ್ಚ ಆಸನದ ಮೇಲೆ ಕುಳ್ಳಿರಿಸಿದ ನನ್ನನ್ನು. ಧರ್ಮನಿಷ್ಠರೂ, ಸತ್ಯಸಂಧರೂ, ಆದ ಅನೇಕ ಪುಣ್ಯವಂತರೂ, ಸೂರ್ಯಪುತ್ರನಾದ ಆ ಯಮಧರ್ಮನನ್ನು ಸೇವೆಗೈಯುತ್ತಿದ್ದರು. ಆ ಪ್ರೇತರಾಜನ ಪಟ್ಟಣದಲ್ಲಿ ನೆರದ ಯಮರಾಜನ ಆ ಸಭೆಯಲ್ಲಿ ನಾನು ನಿನ್ನ ತಂದೆಯನ್ನು ಕಂಡೆ. ಬಹುವಿಧವಾದ ಪುಣ್ಯ ಕಾರ್ಯಕಲಾಪಗಳನ್ನು ಬದುಕಿ ಇರುವವರೆಗೂ ಮಾಡಿದ ನಿನ್ನ ತಂದೆಯನ್ನು ಆ ಯಮಪುರಿಯಲ್ಲಿ ಕಂಡು ನನಗೆ ಬಹಳೇ ಕೌತುಕವಾಯಿತು. ಆಗ ನಿನ್ನ

ತಂದೆಯು ನನ್ನ ಬಳಿಗೆ ಬಂದು ನಿನಗೆ ಒಂದು ಸಂದೇಶವನ್ನು ತಿಳಿಸಲಿಕ್ಕೆ ಹೇಳಿದ್ದಾರೆ. ಅವರ ಸಂದೇಶವನ್ನು ನಿನಗೆ ತಿಳಿಸುತ್ತೇನೆ ಕೇಳು.

**ಇಂದ್ರಸೇನನ ತಂದೆ:-** ಮಾಹಿಷ್ಮತಿಯ ದೊರೆಯಾದ ಇಂದ್ರಸೇನ, ನೀನು ನನ್ನ ಮಗ. ನನ್ನ ಪೂರ್ವ ಜನ್ಮದ ಕರ್ಮವಿಪಾಕದಿಂದ ನಾನು ಈ ಯಮಲೋಕಕ್ಕೆ ಬರುವ ಪ್ರಸಂಗ ಬಂದಿದೆ. ನನ್ನನ್ನು ಬೇಗನೇ ಇಲ್ಲಿಂದ ಬಿಡುಗಡೆ ಮಾಡು. ಯಮಲೋಕದಿಂದ ನಿನ್ನ ತಂದೆಯಾದ ನನ್ನನ್ನು ಸ್ವರ್ಗಲೋಕಕ್ಕೆ ಹೋಗುವಂತೆ ಮಾಡು. ಯಮಲೋಕದ ಜನರನ್ನು ಇಂದ್ರಪುರಿಗೆ ವರ್ಗಾಯಿಸಲು ಇರುವ ಒಂದೇ ಒಂದು ಉಪಾಯವೆಂದರೆ ಇಂದಿರಾ ಏಕಾದಶಿ ವ್ರತದ ವಿಧ್ಯುಕ್ತ ಆಚರಣೆ. ಈ ಏಕಾದಶಿಯನ್ನು ಶಾಸ್ತ್ರೋಕ್ತ ರೀತಿಯಿಂದ ಆಚರಿಸಿ ನನ್ನನ್ನು ಯಮಪಟ್ಟಣದಿಂದ ನಿರ್ಜರರ ನಗರವಾದ ಅಮರಾವತಿಗೆ ಕಳಿಸಿಕೊಡು.

ಇಂದ್ರಸೇನ, ನಿನಗೆ ನಿನ್ನ ತಂದೆ ಯಮಯಾತನೆಯಿಂದ ಪಾರಾಗಿ ಸ್ವರ್ಗ ಸೌಖ್ಯವನ್ನು ಅನುಭವಿಸಬೇಕು ಎಂದು ಇದ್ದರೆ ಮೊದಲು ಈ ಇಂದಿರಾ ಏಕಾದಶಿಯನ್ನು ಆಚರಿಸು. ಆ ವ್ರತದ ಫಲದಿಂದ ಸ್ವರ್ಗವಾಸಿಯಾಗುವನು ನಿನ್ನನ್ನು ಹಡೆದ ತಂದೆ.

**ಇಂದ್ರಸೇನ:-** ಪೂಜ್ಯರೇ, ಆ ಇಂದಿರಾ ಏಕಾದಶಿಯ ವ್ರತದ ವಿಧಿ ಏನು? ವಿಧಾನ ಯಾವದು? ಅದನ್ನು ಯಾವ ತಿಂಗಳಲ್ಲಿ ಮಾಡಬೇಕು? ಯಾವ ಪಕ್ಷ ಹಾಗೂ ತಿಥಿಯಲ್ಲಿ ಆಚರಿಸಬೇಕು? ಇದೆಲ್ಲವನ್ನೂ ನಿರೂಪಿಸಿರಿ.

**ನಾರದ:-** ಅಶ್ವೀನ ಕೃಷ್ಣಪಕ್ಷ ದಶಮಿಯ ದಿನ ಈ ಇಂದಿರಾ ಏಕಾದಶಿಯ ವ್ರತದ ಪ್ರಾರಂಭ. ಅಂದು ಮುಂಜಾವಿನಲ್ಲಿಯೇ ಸ್ನಾನ. ಹಾಗೂ ಪೂಜಾದಿಗಳನ್ನು ಮುಗಿಸಬೇಕು. ಅನಂತರ ಮತ್ತೆ ಮಧ್ಯಾಹ್ನದಲ್ಲಿ ಸ್ನಾನ ಮಾಡಿ ಪಿತೃಗಳ ಪ್ರೀತಿಗಾಗಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಬೇಕು. ಅಂದು ಒಂದೇ ಹೊತ್ತು ಊಟಮಾಡಿ ರಾತ್ರಿ ನೆಲದ ಮೇಲೆಯೇ ಮಲಗಬೇಕು. ಮರುದಿನ ಏಕಾದಶಿಯಂದು ಪ್ರಾತಃಕಾಲದಲ್ಲಿ ಎದ್ದು ಹಲ್ಲುಗಳನ್ನು ಉಜ್ಜದೇ ಮುಖವನ್ನು ತೊಳೆದು ಕೊಳ್ಳಬೇಕು. ಅನಂತರ ದೇವರಿಗೆ ವಂದಿಸಿ ಶ್ರೀಹರಿಯ ಎದುರು ನಿಂತು ಉಪವಾಸದ ಸಂಕಲ್ಪವನ್ನು ಮಾಡಬೇಕು.

**ಅದ್ಯಸ್ಥಿತ್ವಾ ನಿರಾಹಾರಃ ಸರ್ವಭೋಗ ವಿವರ್ಜಿತಃ**
**ಶ್ವೋಭೋಕ್ಷೇ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ**

ಇಂದು ಊಟ ಉಪಹಾರ ಯಾವುದನ್ನು ತಿನ್ನದೇ ಎಲ್ಲ ಭೋಗಗಳನ್ನು ಬಿಟ್ಟು ಉಪವಾಸದಿಂದ ಇರುತ್ತೇನೆ. ನಾಳೆ ದ್ವಾದಶೀಯ ದಿನ ಪಾರಣೆ ಮಾಡಿ ಊಟ ಮಾಡುತ್ತೇನೆ. ಪುಂಡರೀಕಾಕ್ಷನಾದ ಅಚ್ಯುತ ನಿನಗೆ ನಾನು ಶರಣು ಬಂದಿದ್ದೇನೆ. ಎಂದು ಬೇಡಿಕೊಂಡು ಏಕಾದಶಿಯ ವ್ರತವನ್ನು ಧಾರಣಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಸಾಲಿಗ್ರಾಮ ಶಿಲೆಯನ್ನು ಮುಂದಿಟ್ಟುಕೊಂಡು ಸ್ನಾನಮಾಡಬೇಕು. ಅನಂತರ ಧೂಪ, ದೀಪ, ಗಂಧ, ಅಕ್ಷತೆ, ಹೂ,ಹಾರ, ಫಲಸಮರ್ಪಣ ಮಂಗಳಾರತಿ, ಮಂತ್ರಪುಷ್ಪ ಮುಂತಾದವುಗಳಿಂದ ಭಗವಂತನ ಪೂಜೆಯನ್ನು ಮಾಡಬೇಕು. ಬಳಿಕ ರಾತ್ರಿ ಕಾಲದಲ್ಲಿ ದೇವರ ನಾಮ ಸಂಕೀರ್ತನೆಗೈಯುತ್ತ ಜಾಗರಣ ಮಾಡಬೇಕು. ಮರುದಿನ ದ್ವಾದಶಿ ತಿಥಿಯಂದು ನಸುಕಿನಲ್ಲಿಯೇ ಎದ್ದು ಸ್ನಾನಮಾಡಿ ಭಕ್ತಿಯಿಂದ ದೇವರ

ಪೂಜೆಯನ್ನು ಮಾಡಬೇಕು. ಅನಂತರ ಪಿತೃಗಳ ಪ್ರೀತಿಗಾಗಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಬೇಕು. ಅಂದು ಶ್ರಾದ್ಧಕ್ಕೆ ಅಕ್ಕಿ, ಎಳ್ಳು, ಉದ್ದು, ಗೋದಿ, ಕಡಲೆ, ಕಣಕ ಮುಂತಾದವುಗಳಿಂದ ಬಗೆ ಬಗೆಯ ಭಕ್ಷ ಭೋಜ್ಯಗಳನ್ನು ತಯಾರಿಸಿ ಆ ಪವಿತ್ರವಾದ ಪಕ್ವಾನ್ನಗಳನ್ನು ಯೋಗ್ಯರಾದ ಜ್ಞಾನಿಗಳಿಗೆ ಊಟಕ್ಕೆ ಬಡಿಸಬೇಕು. ಅನಂತರ ವಿಪುಲವಾಗಿ ದಾನ ದಕ್ಷಿಣೆಯನ್ನು ನೀಡಿ ಸತ್ಕರಿಸಬೇಕು. ಅನಂತರ ಬಂಧುಬಳಗದವರಿಗಿಂದಲೂ ಮಗಳ ಮಕ್ಕಳಾದ ದೌಹಿತ್ರರೊಂದಿಗೂ ಹಾಗೂ ತನ್ನ ಗಂಡು ಹೆಣ್ಣು ಮಕ್ಕಳೊಂದಿಗೂ ಭೋಜನ ಮಾಡಬೇಕು. ಹೀಗೆ ಈ ಇಂದಿರಾ ಏಕಾದಶಿಯ ವ್ರತವನ್ನು ವಿಧಿಪೂರ್ವಕವಾಗಿ ಮೂರುದಿನ ಆಚರಿಸಬೇಕು. ಇದರಿಂದ ನಿನ್ನ ಪಿತೃಗಳು ನರಕಲೋಕದಿಂದ ಉದ್ಧಾರಹೊಂದಿ ಪಿತೃಲೋಕವನ್ನು ಕೂಡ ದಾಟಿ ವೈಕುಂಠ ಲೋಕಕ್ಕೆ ಹೋಗುವರು.

ಹೀಗೆ ಇಂದ್ರಸೇನ ಮಹಾರಾಜನಿಗೆ ಉಪದೇಶ ನೀಡಿ ನಾರದ ಮಹರ್ಷಿಗಳು ಅಲ್ಲಿಯೇ ಅಂತರ್ಧಾನ ಹೊಂದಿದರು.

ಅನಂತರ ಆ ಇಂದ್ರಸೇನ ಅರಸನು ನಾರದ ಮಹರ್ಷಿಗಳು ಹೇಳಿದ ವಿಧಿಯಿಂದ ಆ ಇಂದಿರಾ ಏಕಾದಶಿಯ ವ್ರತವನ್ನು ಆಚರಿಸಿದ. ಅವನ ಮಡದಿ ಮಕ್ಕಳು, ದಾಸದಾಸಿಯರು, ಅಂತಃಪುರದ ಪರಿವಾರ ವರ್ಗದವರು, ಅರಮನೆಯ ಕುಟುಂಬ ಪರಿಚಾರಕರೂ ಭಕ್ತಿಯಿಂದ ರಾಜನೊಡನೆ ಆ ಇಂದಿರಾ ಏಕಾದಶಿಯ ವ್ರತವನ್ನು ತಪ್ಪದೇ ಪಾಲಿಸಿದರು. ಆಗ ಆ ಏಕಾದಶಿಯ ವ್ರತದ ಪ್ರಭಾವದಿಂದ ಆ ಇಂದ್ರಸೇನರಾಜನ ಸಾಮ್ರಾಜ್ಯದಲ್ಲಿ ಪುಷ್ಪವೃಷ್ಟಿಯಾಯಿತು. ಸುರುಲೋಕದಿಂದ ಅವನ ಹಿಂದಿನ ತಲೆಮಾರಿನ ಪಿತೃಗಳೆಲ್ಲರೂ ಹರಿಮಂದಿರ ಸೇರಿದರು. ಇಂದ್ರಸೇನ ಮಹಾರಾಜನು ತಾನು ಬದುಕಿ ಇರುವವರೆಗೆ ನಿಷ್ಕಂಟಕವಾದ ಸಾಮ್ರಾಜ್ಯವನ್ನು ಆಳಿ ಐಹಿಕವಾದ ಸುಖೋಪಭೋಗಗಳನ್ನೆಲ್ಲ ಅನುಭವಿಸಿ ಮುಪ್ಪಿನಕಾಲದಲ್ಲಿ ಪ್ರಬುದ್ಧನಾದ ಮಗನಿಗೆ ರಾಜ್ಯಭಾರವನ್ನೆಲ್ಲ ಒಪ್ಪಿಸಿ ಮರಣಾನಂತರ ಸ್ವರ್ಗವನ್ನು ಹೊಂದಿದ. ಈ ಇಂದಿರಾ ವ್ರತದ ಮಹಿಮೆಯನ್ನು ಕೇಳಿದವರು ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಆಶ್ವೀನ ಕೃಷ್ಣಪಕ್ಷದ ಇಂದಿರಾ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಏಕಾದಶಿಯ ಮಹಿಮೆ

## ಅಧ್ಯಾಯ - ೬೦

**ಶ್ರೀಕೃಷ್ಣ :**-ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಏಕಾದಶಿಯ ಸರ್ವ ಪಾಪಪರಿಹಾರಕ. ಆ ಏಕಾದಶಿಯ ದಿನ ಉಪವಾಸ ಮಾಡಿ ಪದ್ಮನಾಭ ಎಂಬ ಹೆಸರಿನ ನನ್ನನ್ನು ಪೂಜೆ ಮಾಡಬೇಕು. ಇದರಿಂದ ಸಕಲ ವಿಧವಾದ ಘೋರ ಪಾಪಗಳು ನಷ್ಟವಾಗುವವು. ವಿಷ್ಣುಭಕ್ತನಾಗಿ ಶಿವನಿಂದೆಯನ್ನು, ಶಿವಭಕ್ತನಾಗಿ ವಿಷ್ಣುನಿಂದೆಯನ್ನು ಮಾಡಿದ ಮನುಷ್ಯನು ಹದಿನಾಲ್ಕು ಇಂದ್ರರ ಶಾಸನಕಾಲ ಇರುವವರೆಗೆ ರೌರವ ನರಕದಲ್ಲಿ ಯಮಯಾತನೆಯನ್ನು ಅನುಭವಿಸಬೇಕಾಗುವದು. ಅಂಥ ಮಹಾಪಾಪವು ಕೂಡ ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಎಂಬ ಏಕಾದಶಿಯ ದಿನ ಉಪವಾಸ ಹಾಗೂ ಪದ್ಮನಾಭನ ಪೂಜೆ ಇವುಗಳಿಂದ ನಾಶವಾಗುವವು. ಇದರ ಆಚರಣೆಯಿಂದ ಸಂತಾನ, ಸಂಪತ್ತು ಪ್ರಾಪ್ತವಾಗುವದಲ್ಲದೇ ಉಪವಾಸ ಮಾಡಿದವರ ಹಿಂದಿನ ತಾಯಿಯ ಹತ್ತು ತಲೆಯ ಹಾಗೂ ತಂದೆಯ ಹತ್ತು ತಲೆಯ ಪಿತೃಗಳು ವಿಷ್ಣುಲೋಕಕ್ಕೆ ಪ್ರಯಾಣ ಮಾಡುವರು.

**ಬಾಲತ್ವೇ ಯೌವನೇ ಚೈವ ವೃದ್ಧತ್ವೇಚ ನೃಪೋತ್ತಮ ।**
**ಉಪೋಶ್ಯೈಕಾದಶೀಂ ನೂನಂ ನೈವ ಪ್ರಾಪ್ನೋತಿ ದುರ್ಗತಿಂ ॥**

ಬಾಲ್ಯದಲ್ಲಿ ಹಾಗೂ ಯೌವನದಲ್ಲಿ ಮತ್ತು ಮುಪ್ಪಿನ ಕಾಲದಲ್ಲಿ ತಪ್ಪದೇ ಏಕಾದಶಿ ವ್ರತವನ್ನು ಪಾಲಿಸಬೇಕು. ಆದರಿಂದ ಎಂದಿಗೂ ಮಾನವರಿಗೆ ಎಂಥ ಪಾಪ ಮಾಡಿದರೂ ನರಕಾದ್ಯನರ್ಥಗಳೂ ಪ್ರಾಪ್ತವಾಗುವದಿಲ್ಲ. ಅಂದು ಬಂಗಾರ, ಭೂಮಿ, ಹಸು, ಎಳ್ಳು, ಪಾದರಕ್ಷೆ, ಕೊಡೆ, ವಸ್ತ್ರ, ನೀರು ಮುಂತಾದವುಗಳನ್ನು ದಾನ ನೀಡಿದವರು ಎಂದೂ ಯಮಲೋಕವನ್ನು ಕಾಣುವದಿಲ್ಲ.

**ಯಸ್ಯ ಪುಣ್ಯ ವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ।**
**ಸಲೋಹಕಾರ ಭ್ರಿಸ್ತ್ರೀವ ಸನ್ನಪಿ ನಜೀವತಿ ॥**

ಯಾವ ಪುಣ್ಯಕಾರ್ಯವನ್ನು ಮಾಡದೇ ವ್ಯರ್ಥವಾಗಿ ಯಾವ ಮನುಷ್ಯನಿಗೆ ದಿನಗಳು ಬರುತ್ತವೆ ಹಾಗೂ ಹೋಗುತ್ತವೆಯೋ ಆ ಮನುಷ್ಯನು ಉಸಿರಾಡಿಸುತ್ತಿದ್ದರೂ ಅವನು ಬದುಕಿದಂತೆ ಅಲ್ಲ. ಕಮ್ಮಾರನ ತೊಗಲಿನ ತಿದಿಯು ಉಸಿರಾಡಿಸಿದಂತೆ ಪುಣ್ಯಮಾಡದ ಮನುಷ್ಯನು ಬರೀ ಶ್ವಾಸೋಚ್ಛ್ವಾಸ ಮಾಡುತ್ತಾನೆ. ಅವನ ಜೀವನವೆಲ್ಲವೂ ವ್ಯರ್ಥ. ಆದುದರಿಂದ ಮನುಷ್ಯರು ಪಾಶಾಂಕುಶ ಏಕಾದಶಿಯ ದಿನದಲ್ಲಿ ಉಪವಾಸವನ್ನೂ ಶ್ರೀಹರಿಯ ಉಪಾಸನೆಯನ್ನೂ ಬಗೆಬಗೆಯ ಪುಣ್ಯಕರ್ಮಗಳನ್ನೂ ಮಾಡಿ ಉದ್ಧೃತರಾಗಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಅಶ್ವಿನ ಕೃಷ್ಣಪಕ್ಷದ ಪಾಶಾಂಕುಶ ಏಕಾದಶಿಯ ಮಾಹಾತ್ಮ್ಯ ಎಂಬ ಅರವತ್ತನೇಯ ಅಧ್ಯಾಯ ಮುಗಿದುದು*

—o—

ಪೂಜೆಯನ್ನು ಮಾಡಬೇಕು. ಅನಂತರ ಪಿತೃಗಳ ಪ್ರೀತಿಗಾಗಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಬೇಕು. ಅಂದು ಶ್ರಾದ್ಧಕ್ಕೆ ಅಕ್ಕಿ, ಎಳ್ಳು, ಉದ್ದು, ಗೋದಿ, ಕಡಲೆ, ಕಣಕ ಮುಂತಾದವುಗಳಿಂದ ಬಗೆ ಬಗೆಯ ಭಕ್ಷ ಭೋಜ್ಯಗಳನ್ನು ತಯಾರಿಸಿ ಆ ಪವಿತ್ರವಾದ ಪಕ್ವಾನ್ನಗಳನ್ನು ಯೋಗ್ಯರಾದ ಜ್ಞಾನಿಗಳಿಗೆ ಊಟಕ್ಕೆ ಬಡಿಸಬೇಕು. ಅನಂತರ ವಿಪುಲವಾಗಿ ದಾನ ದಕ್ಷಿಣೆಯನ್ನು ನೀಡಿ ಸತ್ಕರಿಸಬೇಕು. ಅನಂತರ ಬಂಧುಬಳಗದವರಿಗಿಂದಲೂ ಮಗಳ ಮಕ್ಕಳಾದ ದೌಹಿತ್ರರೊಂದಿಗೂ ಹಾಗೂ ತನ್ನ ಗಂಡು ಹೆಣ್ಣು ಮಕ್ಕಳೊಂದಿಗೂ ಭೋಜನ ಮಾಡಬೇಕು. ಹೀಗೆ ಈ ಇಂದಿರಾ ಏಕಾದಶಿಯ ವ್ರತವನ್ನು ವಿಧಿಪೂರ್ವಕವಾಗಿ ಮೂರುದಿನ ಆಚರಿಸಬೇಕು. ಇದರಿಂದ ನಿನ್ನ ಪಿತೃಗಳು ನರಕಲೋಕದಿಂದ ಉದ್ಧಾರಹೊಂದಿ ಪಿತೃಲೋಕವನ್ನು ಕೂಡ ದಾಟಿ ವೈಕುಂಠ ಲೋಕಕ್ಕೆ ಹೋಗುವರು.

ಹೀಗೆ ಇಂದ್ರಸೇನ ಮಹಾರಾಜನಿಗೆ ಉಪದೇಶ ನೀಡಿ ನಾರದ ಮಹರ್ಷಿಗಳು ಅಲ್ಲಿಯೇ ಅಂತರ್ಧಾನ ಹೊಂದಿದರು.

ಅನಂತರ ಆ ಇಂದ್ರಸೇನ ಅರಸನು ನಾರದ ಮಹರ್ಷಿಗಳು ಹೇಳಿದ ವಿಧಿಯಿಂದ ಆ ಇಂದಿರಾ ಏಕಾದಶಿಯ ವ್ರತವನ್ನು ಆಚರಿಸಿದ. ಅವನ ಮಡದಿ ಮಕ್ಕಳು, ದಾಸದಾಸಿಯರು, ಅಂತಃಪುರದ ಪರಿವಾರ ವರ್ಗದವರು, ಅರಮನೆಯ ಕುಟುಂಬ ಪರಿಚಾರಕರೂ ಭಕ್ತಿಯಿಂದ ರಾಜನೊಡನೆ ಆ ಇಂದಿರಾ ಏಕಾದಶಿಯ ವ್ರತವನ್ನು ತಪ್ಪದೇ ಪಾಲಿಸಿದರು. ಆಗ ಆ ಏಕಾದಶಿಯ ವ್ರತದ ಪ್ರಭಾವದಿಂದ ಆ ಇಂದ್ರಸೇನರಾಜನ ಸಾಮ್ರಾಜ್ಯದಲ್ಲಿ ಪುಷ್ಪವೃಷ್ಟಿಯಾಯಿತು. ಸುರುಲೋಕದಿಂದ ಅವನ ಹಿಂದಿನ ತಲೆಮಾರಿನ ಪಿತೃಗಳೆಲ್ಲರೂ ಹರಿಮಂದಿರ ಸೇರಿದರು. ಇಂದ್ರಸೇನ ಮಹಾರಾಜನು ತಾನು ಬದುಕಿ ಇರುವವರೆಗೆ ನಿಷ್ಕಂಟಕವಾದ ಸಾಮ್ರಾಜ್ಯವನ್ನು ಆಳಿ ಐಹಿಕವಾದ ಸುಖೋಪಭೋಗಗಳನ್ನೆಲ್ಲ ಅನುಭವಿಸಿ ಮುಪ್ಪಿನಕಾಲದಲ್ಲಿ ಪ್ರಬುದ್ಧನಾದ ಮಗನಿಗೆ ರಾಜ್ಯಭಾರವನ್ನೆಲ್ಲ ಒಪ್ಪಿಸಿ ಮರಣಾನಂತರ ಸ್ವರ್ಗವನ್ನು ಹೊಂದಿದ. ಈ ಇಂದಿರಾ ವ್ರತದ ಮಹಿಮೆಯನ್ನು ಕೇಳಿದವರು ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಆಶ್ವೀನ ಕೃಷ್ಣಪಕ್ಷದ ಇಂದಿರಾ ಏಕಾದಶಿಯ ಮಾಹಾತ್ಮ್ಯ ಎಂಬ ಐವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಏಕಾದಶಿಯ ಮಹಿಮೆ

ಅಧ್ಯಾಯ - ೬೦

**ಶ್ರೀಕೃಷ್ಣ :-** ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಏಕಾದಶಿಯ ಸರ್ವ ಪಾಪಪರಿಹಾರಕ. ಆ ಏಕಾದಶಿಯ ದಿನ ಉಪವಾಸ ಮಾಡಿ ಪದ್ಮನಾಭ ಎಂಬ ಹೆಸರಿನ ನನ್ನನ್ನು ಪೂಜೆ ಮಾಡಬೇಕು. ಇದರಿಂದ ಸಕಲ ವಿಧವಾದ ಘೋರ ಪಾಪಗಳು ನಷ್ಟವಾಗುವವು. ವಿಷ್ಣುಭಕ್ತನಾಗಿ ಶಿವನಿಂದೆಯನ್ನು, ಶಿವಭಕ್ತನಾಗಿ ವಿಷ್ಣುನಿಂದೆಯನ್ನು ಮಾಡಿದ ಮನುಷ್ಯನು ಹದಿನಾಲ್ಕು ಇಂದ್ರರ ಶಾಸನಕಾಲ ಇರುವವರೆಗೆ ರೌರವ ನರಕದಲ್ಲಿ ಯಮಯಾತನೆಯನ್ನು ಅನುಭವಿಸಬೇಕಾಗುವದು. ಅಂಥ ಮಹಾಪಾಪವು ಕೂಡ ಅಶ್ವೀನ ಶುಕ್ಲಪಕ್ಷದ ಪಾಶಾಂಕುಶ ಎಂಬ ಏಕಾದಶಿಯ ದಿನ ಉಪವಾಸ ಹಾಗೂ ಪದ್ಮನಾಭನ ಪೂಜೆ ಇವುಗಳಿಂದ ನಾಶವಾಗುವವು. ಇದರ ಆಚರಣೆಯಿಂದ ಸಂತಾನ, ಸಂಪತ್ತು ಪ್ರಾಪ್ತವಾಗುವದಲ್ಲದೇ ಉಪವಾಸ ಮಾಡಿದವರ ಹಿಂದಿನ ತಾಯಿಯ ಹತ್ತು ತಲೆಯ ಹಾಗೂ ತಂದೆಯ ಹತ್ತು ತಲೆಯ ಪಿತೃಗಳು ವಿಷ್ಣುಲೋಕಕ್ಕೆ ಪ್ರಯಾಣ ಮಾಡುವರು.

**ಬಾಲತ್ವೇ ಯೌವನೇ ಚೈವ ವೃದ್ಧತ್ವೇಚ ನೃಪೋತ್ತಮ ।**
**ಉಪೋಶ್ಯೈಕಾದಶೀಂ ನೂನಂ ನೈವ ಪ್ರಾಪ್ನೋತಿ ದುರ್ಗತಿಂ ॥**

ಬಾಲ್ಯದಲ್ಲಿ ಹಾಗೂ ಯೌವನದಲ್ಲಿ ಮತ್ತು ಮುಪ್ಪಿನ ಕಾಲದಲ್ಲಿ ತಪ್ಪದೇ ಏಕಾದಶಿ ವ್ರತವನ್ನು ಪಾಲಿಸಬೇಕು. ಅದರಿಂದ ಎಂದಿಗೂ ಮಾನವರಿಗೆ ಎಂಥ ಪಾಪ ಮಾಡಿದರೂ ನರಕಾದ್ಯನರ್ಥಗಳೂ ಪ್ರಾಪ್ತವಾಗುವದಿಲ್ಲ. ಅಂದು ಬಂಗಾರ, ಭೂಮಿ, ಹಸು, ಎಳ್ಳು, ಪಾದರಕ್ಷೆ, ಕೊಡೆ, ವಸ್ತ್ರ, ನೀರು ಮುಂತಾದವುಗಳನ್ನು ದಾನ ನೀಡಿದವರು ಎಂದೂ ಯಮಲೋಕವನ್ನು ಕಾಣುವದಿಲ್ಲ.

**ಯಸ್ಯ ಪುಣ್ಯ ವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ।**
**ಸಲೋಹಕಾರ ಭ್ರಿಸ್ತ್ರೇವ ಸನ್ನಪಿ ನಜೀವತಿ ॥**

ಯಾವ ಪುಣ್ಯಕಾರ್ಯವನ್ನು ಮಾಡದೇ ವ್ಯರ್ಥವಾಗಿ ಯಾವ ಮನುಷ್ಯನಿಗೆ ದಿನಗಳು ಬರುತ್ತವೆ ಹಾಗೂ ಹೋಗುತ್ತವೆಯೋ ಆ ಮನುಷ್ಯನು ಉಸಿರಾಡಿಸುತ್ತಿದ್ದರೂ ಅವನು ಬದುಕಿದಂತೆ ಅಲ್ಲ. ಕಮ್ಮಾರನ ತೊಗಲಿನ ತಿದಿಯು ಉಸಿರಾಡಿಸಿದಂತೆ ಪುಣ್ಯಮಾಡದ ಮನುಷ್ಯನು ಬರೀ ಶ್ವಾಸೋಚ್ಛ್ವಾಸ ಮಾಡುತ್ತಾನೆ. ಅವನ ಜೀವನವೆಲ್ಲವೂ ವ್ಯರ್ಥ. ಆದುದರಿಂದ ಮನುಷ್ಯರು ಪಾಶಾಂಕುಶ ಏಕಾದಶಿಯ ದಿನದಲ್ಲಿ ಉಪವಾಸವನ್ನೂ ಶ್ರೀಹರಿಯ ಉಪಾಸನೆಯನ್ನೂ ಬಗೆಬಗೆಯ ಪುಣ್ಯಕರ್ಮಗಳನ್ನೂ ಮಾಡಿ ಉದ್ಧೃತರಾಗಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಅಶ್ವೀನ ಕೃಷ್ಣಪಕ್ಷದ ಪಾಶಾಂಕುಶ ಏಕಾದಶಿಯ ಮಾಹಾತ್ಮ್ಯ ಎಂಬ ಅರವತ್ತನೇಯ ಅಧ್ಯಾಯ ಮುಗಿದುದು*

—೦—

## ಕಾರ್ತಿಕ ಕೃಷ್ಣಪಕ್ಷದ ರಮಾ ಏಕಾದಶಿಯ ಮಾಹಾತ್ಮ್ಯ | ಅಧ್ಯಾಯ - ೬೧

**ಶ್ರೀಕೃಷ್ಣ:-** ಧರ್ಮರಾಜ, ಕಾರ್ತೀಕ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ರಮಾ ಏಕಾದಶಿ ಎಂದು ಹೆಸರು. ಈ ಏಕಾದಶಿಯ ವ್ರತದ ಆಚರಣೆಯಿಂದ ಮಹಾ ಪಾಪಗಳೂ ಪರಿಹಾರ ಕಾಣುತ್ತವೆ. ಈ ವಿಷಯದಲ್ಲಿ ಒಂದು ಅಖ್ಯಾನ ಇದೆ.

ಪೂರ್ವ ಕಾಲದಲ್ಲಿ ಮುಚುಕುಂದ ಎಂಬ ರಾಜ ಪ್ರಖ್ಯಾತಿಯ ಶಿಖರವನ್ನು ಏರಿದ್ದ. ದೇವೇಂದ್ರನ ಜೊತೆಗೆ ಅವನಿಗೆ ಪ್ರಗಾಢ ಮೈತ್ರಿ. ಯಮ, ವರುಣ, ಕುಬೇರ, ವಿಭೀಷಣ ಮುಂತಾದವರೆಲ್ಲರೂ ಆ ವಿಷ್ಣುಭಕ್ತನ ಗೆಳೆಯರ ಬಳಗದಲ್ಲಿ. ಅವನ ರಾಜ್ಯ ನಿಷ್ಕಂಟಕ. ಶಾಸನ ಧರ್ಮಬದ್ಧ, ಪ್ರಜಾವರ್ಗ ಪರಿತೃಪ್ತ. ಆ ರಾಜರ್ಷಿಗೆ ಚಂದ್ರಭಾಗ ಎಂಬ ಒಬ್ಬ ಮಗಳು. ಮುಂದೆ ಅವಳೇ ಚಂದ್ರಭಾಗಾ ನದಿಯಾಗಿ ಹರಿದಳು. ನದ್ಯಭಿಮಾನಿಯಾದ ಆ ರಾಜಕುಮಾರಿಯನ್ನು ಚಂದ್ರಸೇನನ ಮಗನಾದ ಶೋಭನ ಎಂಬ ರಾಜಕುಮಾರನಿಗೆ ಮದುವೆ ಮಾಡಿ ಕೊಡಲಾಗಿತ್ತು.

ಒಂದು ದಿನ ಆ ಶೋಭನನು ಮಾವನಾದ ಮುಚುಕುಂದ ಮಹಾರಾಜನ ಮನೆಗೆ ಬಂದಿದ್ದ. ಆಗಲೇ ಏಕಾದಶಿ ತಿಥಿಯು ಬಂದಿತು. ಅದನ್ನು ತಿಳಿದು ರಾಜಕುಮಾರಿಯಾದ ಚಂದ್ರಭಾಗಿಗೆ ಚಿಂತೆಯಾಯಿತು. ಅವಳು ತನ್ನ ಮನಸ್ಸಿನಲ್ಲಿಯೇ ಯೋಚಿಸಿದಳು. ''ನನ್ನ ತಂದೆಯಾದ ಮುಚುಕುಂದ ಮಹಾರಾಜ ಪರಮ ವಿಷ್ಣುಭಕ್ತ. ನಿರ್ಜಲ ಏಕಾದಶಿಯನ್ನು ಪಾಲಿಸುವದು ಅವನ ವ್ರತ. ಅವನ ರಾಜ್ಯದಲ್ಲಿ ಕಡ್ಡಾಯವಾಗಿ ಎಲ್ಲರೂ ಏಕಾದಶಿಯನ್ನು ಪಾಲಿಸಲೇಬೇಕು. ಈ ವಿಷಯದಲ್ಲಿ ನನ್ನ ತಂದೆ ಬಹಳ ಕರ್ಮ ನಿಷ್ಠುರ. ಆದರೆ ನನ್ನ ಪತಿಯಾದ ಶೋಭನನ ಪ್ರಕೃತಿ ಸೂಕ್ಷ್ಮ. ಅವರಿಗೆ ಉಪವಾಸ ತಡೆಯುವದಿಲ್ಲ. ಹಸಿವೆಯನ್ನು ತಾಳಲಾಗುವದಿಲ್ಲ. ಈಗ ಏನು ಮಾಡಬೇಕು.''

ಹೀಗೆ ಚಂದ್ರಭಾಗಿಯು ಚಿಂತಾಕ್ರಾಂತಳಾಗಿ ಯೋಚಿಸುತ್ತಿರುವಾಗಲೇ ರಾಜನ ಡಂಗುರ ಕೇಳಿ ಬಂದಿತು.

**''ನಭೋಕ್ತವ್ಯಂ ನಭೋಕ್ತವ್ಯಂ ನಭೋಕ್ತವ್ಯಂ ಹರೇರ್ದಿನೇ.''**

''ಹರಿದಿನವಾದ ಏಕಾದಶಿಯಂದು ಯಾರೂ ಏನನ್ನೂ ತಿನ್ನಬಾರದು, ಉಣ್ಣಬಾರದು, ಭಕ್ಷಿಸಬಾರದು.''

ನಗಾರಿಯ ಸಪ್ಪಳದೊಂದಿಗೆ ಬಂದ ರಾಜಾಜ್ಞೆಯನ್ನು ಕೇಳಿ ಶೋಭನನು ಗಾಬರಿಯಾದ. ಮಡದಿಯಾದ ಚಂದ್ರಭಾಗಿಯ ಬಳಿಗೆ ಬಂದು ಕೇಳಿದ.

**ಶೋಭನ:-** ಪ್ರಿಯೇ, ಈಗ ನಾನು ಏನು ಮಾಡಲಿ? ಈ ಏಕಾದಶಿಯ ದಿನ ಉಪವಾಸ ಮಾಡಿದರೆ ನನಗೆ ತಡೆಯುವದಿಲ್ಲ. ನನ್ನ ಪ್ರಕೃತಿಯು ಬಹಳೇ ಅಶಕ್ತ. ಆಹಾರವಿಲ್ಲದೇ ನಾನು ಬದುಕುವದೇ ಶಕ್ಯವಿಲ್ಲ. ಆದರೆ ನಿಮ್ಮ ತಂದೆಯ ರಾಜ್ಯದಲ್ಲಿ ಏಕಾದಶಿಯ ದಿನ ಯಾರಿಗೂ ತಿನ್ನಲು ಅವಕಾಶವಿಲ್ಲ. ಇದಕ್ಕೆ ಉಪಾಯವೇನು?

**ಚಂದ್ರಭಾಗ:-** ಪ್ರಾಣನಾಥ, ನಮ್ಮ ತಂದೆಯ ಮನೆಯಲ್ಲಿ ಏಕಾದಶಿಯ ದಿನ ಯಾರೂ ಏನನ್ನೂ ತಿನ್ನುವಂತಿಲ್ಲ. ನೀರನ್ನೂ ಕುಡಿಯುವಂತಿಲ್ಲ. ನಮ್ಮ ತಂದೆಯ ಈ ರಾಜ್ಯದಲ್ಲಿ ಆನೆ

ಕುದುರೆಗಳೂ ಕೂಡ ಉಪವಾಸ ಮಾಡುತ್ತವೆ. ಪಶುಪಕ್ಷಿಗಳಿಗೂ ಈ ದಿನ ನಿರಾಹಾರ. ಮಾನವರಂತೂ ಯಾರೂ ಏಕಾದಶಿ ವ್ರತದ ಭಂಗವನ್ನು ಮಾಡುವದಿಲ್ಲ. ನೀವು ಇಂದು ಏನನ್ನಾದರೂ ಭಕ್ಷಿಸದರೆ ಲೋಕನಿಂದೆಗೂ ರಾಜಶಾಸನಕ್ಕೂ ಒಳಗಾಗುವಿರಿ. ಆದುದರಿಂದ ಗಟ್ಟಿ ಮನಸ್ಸು ಮಾಡಿ ಇಂದು ಉಪವಾಸ ಮಾಡಿಬಿಡಿರಿ.

**ಶೋಭನ:-** ಪ್ರಿಯೆ, ಹಾಗೇ ಆಗಲಿ. ನಾನು ನಿನ್ನ ಮಾತಿನಂತೆ ಈ ದಿನ ಉಪವಾಸ ಮಾಡುವೆನು. ನನ್ನ ಅದೃಷ್ಟದಲ್ಲಿ ಏನಿದೆಯೋ ಅದು ಆಗಲಿ.

ಹೀಗೆ ನುಡಿದು ಶೋಭನನು ಏಕಾದಶಿ ಉಪವಾಸದ ಸಂಕಲ್ಪವನ್ನು ಮಾಡಿದ. ಮನಸ್ಸನ್ನು ಗಟ್ಟಿ ಮಾಡಿದ. ಅವನ ಪ್ರಕೃತಿಯು ತೀರ ಪರಿಕ್ಷೀಣ. ಉಪವಾಸ ಮಾಡುವಷ್ಟು ಶಕ್ತಿಯೇ ಅವನ ದೇಹದಲ್ಲಿ ಇರಲಿಲ್ಲ. ಆದರೂ ಅಂದು ಅವನು ಮನಸ್ಥೈರ್ಯದಿಂದ ಉಪವಾಸ ಮಾಡಿದ. ಹಸಿವೆಯಿಂದ ಅವನಿಗೆ ಕಸಿವಿಸಿ ಆಯಿತು. ಭಯಂಕರ ಸಂಕಟವನ್ನು ತಾಳಲಾರದೇ ನೆಲಕ್ಕೆ ಬಿದ್ದ. ಹಸಿವೆಯ ಸಂಕಟವನ್ನು ಹತ್ತಿಕ್ಕಿಕೊಂಡು ಹೇಗೋ ದುಃಖದಿಂದ ಒದ್ದಾಡುತ್ತ ಹಗಲು ಕಳೆದ. ರಾತ್ರಿ ಕಾಲದಲ್ಲಿ ಮಾತ್ರ ಅವನ ಹಸಿವೆಯ ಕಸಿವಿಸಿ ದುಃಸ್ಸಹ ಆಯಿತು. ಆ ಸಂಕಟವನ್ನು ತಾಳಲಾರದೇ ಅವನು ಬೆಳತನಕ ನೆಲಕ್ಕೆ ಬಿದ್ದು ಹೊರಳಾಡಿದ. ಭೂಭುಕ್ಷಿತನಾಗಿ ಭೂಮಿಯಲ್ಲಿ ಉರುಳಾಡಿದ. ದ್ವಾದಶಿ ದಿನ ಸೂರ್ಯೋದಯ ಸಮಯಕ್ಕೆ ಶೋಭನನು ಮರಣಹೊಂದಿದ. ಮುಚುಕುಂದ ಮಹಾರಾಜ, ರಾಜೋಚಿತವಾದ ರೀತಿಯಲ್ಲಿ ಅಳಿಯನ ಔರ್ಧ್ವದೈಹಿಕ ಕಾರ್ಯಗಳನ್ನು ಮಾಡಿ ಮುಗಿಸಿದ. ಅವನ ಮಗಳಾದ ಚಂದ್ರಭಾಗೆಯು ಪತಿಯ ಅಂತ್ಯ ಸಂಸ್ಕಾರದ ಅನಂತರ ತಂದೆಯ ಮನೆಯಲ್ಲಿಯೇ ಉಳಿದುಕೊಂಡಳು.

ಇತ್ತ ಶೋಭನನು ರಮಾ ಏಕಾದಶಿಯ ದಿನ ಉಪವಾಸ ಮಾಡಿ ಮರಣ ಹೊಂದಿದ್ದರಿಂದ ಆ ಏಕಾದಶಿಯ ಪ್ರಭಾವದಿಂದ ಮಂದರಾಚಲದಲ್ಲಿ ದೇವಪುರ ಎಂಬ ನಗರದ ಮಹಾರಾಜನಾಗಿ ಜನಿಸಿದ. ಅಲ್ಲಿಯ ರತ್ನ ಸಿಂಹಾಸನವನ್ನು ಆರೋಹಣ ಮಾಡಿದ. ಗಂಧರ್ವರು ಅವನಿಗೆ ಛತ್ರಹಿಡಿದರು. ಅಪ್ಸರೆಯರು ಚಾಮರ ಬೀಸಿದರು. ದೇವಸುಂದರಿಯರು ಅವನ ಎದುರು ಹಾಡಿ ನರ್ತನ ಮಾಡಿದರು. ರತ್ನ ಖಚಿತವಾದ ಕಿರೀಟ ಕುಂಡಲಗಳನ್ನು ಹಾಕಿಕೊಂಡು ಹಾರ ಕೇಯೂರಗಳಿಂದ ಭೂಷಿತನಾಗಿ ಆ ದೇವಪುರಿಯ ಸಮ್ರಾಟನಾಗಿ ಶೋಭನನು ಸಾರ್ವಭೌಮ ಶಾಸನವನ್ನು ನಡೆಸಿದ.

ಮುಚುಕುಂದ ಮಹಾರಾಜನ ರಾಜಧಾನಿಯಲ್ಲಿ ಸೋಮಶರ್ಮ ಎಂಬ ಬ್ರಾಹ್ಮಣ ಇದ್ದ. ಅವನು ತೀರ್ಥಯಾತ್ರೆಯ ಪ್ರಸಂಗದಿಂದ ಪುಣ್ಯ ಕ್ಷೇತ್ರಗಳನ್ನು ಸಂಚರಿಸುತ್ತ ಮಂದರಾಚಲದ ಕಂದರದಲ್ಲಿ ಇರುವ ಸುಂದರವಾದ ಆ ದೇವಪುರಕ್ಕೆ ಬಂದ. ಅಲ್ಲಿ ರಾಜಸಿಂಹಾಸನದಲ್ಲಿ ಪ್ರತಿಷ್ಠಿತನಾದ ಶೋಭನ ಸಾರ್ವಭೌಮನನ್ನು ನೋಡಿದ. ಇವನು ತಮ್ಮ ದೊರೆಯಾದ ಮುಚುಕುಂದ ಮಹಾರಾಜನ ಅಳಿಯ ಶೋಭನ ಎಂದು ಅವನಿಗೆ ಗುರುತು ಹತ್ತಿತ್ತು. ಅನಂತರ ಸೋಮಶರ್ಮನು ಶೋಭನನ ಸಮೀಪಕ್ಕೆ ಹೋದ. ಶೋಭನನಿಗೂ ತನ್ನ ಮಾವನ ಊರಿನ ಸೋಮಶರ್ಮನ ಗುರುತು ಆಯಿತು. ಆಸನದಿಂದ ಎದ್ದು ನಿಂತು ದ್ವಿಜೋತ್ತಮನಾದ ಸೋಮಶರ್ಮನಿಗೆ ಅವನು ಭಕ್ತಿಯಿಂದ ವಂದಿಸಿದ. ತನ್ನ ಮಾವನಾದ ಮುಚುಕುಂದ ಮಹಾರಾಜ ಹಾಗೂ ಅವನ ಪರಿವಾರದ ಜನ ಹಾಗೂ ತನ್ನ ಪತ್ನಿಯಾದ ಚಂದ್ರಭಾಗ ಮುಂತಾದವರ ಕ್ಷೇಮ ಆರೋಗ್ಯಗಳ ಬಗ್ಗೆ ವಿಚಾರ ಮಾಡಿದ.

**ಸೋಮಶರ್ಮ:-** ಶೋಭನ ಮಹಾರಾಜ, ನಿನ್ನ ಮಾವನ ಮನೆಯಲ್ಲಿ ಎಲ್ಲವೂ ಕುಶಲ. ನಿನ್ನ ಪತ್ನಿಯಾದ ಚಂದ್ರಭಾಗೆಯು ಕ್ಷೇಮದಿಂದ ಇರುತ್ತಾಳೆ. ಮುಚುಕುಂದನ ರಾಜಧಾನಿಯಲ್ಲಿ ಎಲ್ಲರೂ ಆನಂದದಿಂದ ಇರುತ್ತಾರೆ. ಆದರೆ ನಿನ್ನ ವೃತ್ತಾಂತವನ್ನು ಹೇಳು. ಇದೆಲ್ಲವೂ ನನಗೆ ಅತ್ಯದ್ಭುತವಾಗಿ ತೋರುತ್ತಲಿದೆ. ಈ ನಿನ್ನ ಪಟ್ಟಣ ವಿಚಿತ್ರ. ಪರಮ ರಮಣೀಯ. ಅತ್ಯಂತ ಸುಂದರ. ಇಂಥ ಚಿತ್ರವಿಚಿತ್ರವಾದ ನಗರವನ್ನು ನಾನು ಎಂದೂ ನೋಡಿಲ್ಲ. ಎಂದೂ ಕಂಡಿಲ್ಲ. ಯಾರೂ ನೋಡಿಲ್ಲ. ಇಂಥ ಸುಂದರ ನಗರ, ಅದ್ಭುತ ಸಾಮ್ರಾಜ್ಯ ನಿನಗೆ ಹೇಗೆ ದೊರೆತವು?

**ಶೋಭನ:-** ಕಾರ್ತೀಕ ಕೃಷ್ಣಪಕ್ಷದಲ್ಲಿ ರಮಾ ಏಕಾದಶಿಯ ದಿನ ಮುಚುಕುಂದ ರಾಜಧಾನಿಯಲ್ಲಿ ಮಾವನ ಮನೆಯಲ್ಲಿ ನಾನು ಉಪವಾಸ ಮಾಡಿದೆ. ಆ ಪುಣ್ಯದಿಂದ ನನಗೆ ಈ ನಗರದ ಅಧಿಪತ್ಯವು ಪ್ರಾಪ್ತವಾಗಿದೆ. ಆದರೆ ಇದು ಅಸ್ಥಿರ. ಆದರೆ ನೀನು ಮಾತ್ರ ಇಂಥ ಸುಸ್ಥಿರವಾದ ಅಧಿಕಾರ, ಅಧಿಪತ್ಯ ಐಶ್ವರ್ಯ ದೊರಕುವಂತೆ ಪ್ರಯತ್ನ ಮಾಡು.

**ಸೋಮಶರ್ಮ:-** ಇದು ಏಕೆ ಅಸ್ಥಿರ? ಇದು ಸುಸ್ಥಿರವೂ ಆಗಬೇಕಾದರೆ ಏನು ಉಪಾಯ? ಅದನ್ನು ನನಗೆ ಹೇಳು. ನಿಶ್ಚಿತವಾಗಿಯೂ ನಾನು ಅದನ್ನು ಸಾಧಿಸುತ್ತೇನೆ.

**ಶೋಭನ:-** ವಿಪ್ರೋತ್ತಮ, ನಾನು ಈ ರಮಾ ಏಕಾದಶಿಯ ವ್ರತವನ್ನು ಶ್ರದ್ಧೆ ಇಲ್ಲದೇ ಮಾವನ ಶಾಸನ ಭಯದಿಂದ ಆಚರಿಸಿದೆ. ಅದರಿಂದ ನನಗೆ ಈ ರಾಜಧಾನಿಯ ಅಸ್ಥಿರವಾದ ಒಡೆತನ ದೊರಕಿದೆ. ನೀನು ಹೋಗಿ ನನ್ನ ಭಾರ್ಯೆ ಆದ ಚಂದ್ರಭಾಗೆಗೆ ಇದೆಲ್ಲ ಸಮಾಚಾರವನ್ನು ತಿಳಿಸು. ಮುಚುಕುಂದ ಮಹಾರಾಜನ ಮಗಳಾದ ಆ ಚಂದ್ರಭಾಗೆಯು ಪರಮವಿಷ್ಣು ಭಕ್ತಳು. ಅವಳಿಗೆ ಈ ಸಮಾಚಾರವನ್ನೆಲ್ಲ ತಿಳಿಸು. ಈ ನನ್ನ ಅಸ್ಥಿರವಾದ ಸ್ಥಾನವು ಸುಸ್ಥಿರವಾಗುವಂತೆ ಅವಳು ಮಾಡುತ್ತಾಳೆ.

ಶೋಭನನ ಮಾತುಗಳನ್ನು ಕೇಳಿಕೊಂಡು ಸೋಮಶರ್ಮನು ತನ್ನ ಊರಾದ ಮುಚುಕುಂದ ಮಹಾರಾಜನ ರಾಜಧಾನಿಗೆ ಮರಳಿ ಬಂದ. ಮುಚುಕುಂದ ಮಹಾರಾಜನ ಅಂತಃಪುರಕ್ಕೆ ಹೋಗಿ ಶೋಭನನ ಪತ್ನಿಯಾದ ಚಂದ್ರಭಾಗೆಗೆ ಅವಳ ಪತಿಯ ಸಮಾಚಾರ-ವನ್ನೆಲ್ಲ ತಿಳಿಸಿದ. ಶೋಭನನು ಮರುಜನ್ಮದಲ್ಲಿ ಅಸ್ಥಿರವಾದ ದೇವಪುರದ ಒಡೆತನವನ್ನು ಹೊಂದಿದ್ದು ಅದು ಸ್ಥಿರವಾಗುವಂತೆ ಮಾಡಲು ನಿನಗೆ ತಿಳಿಸಿದ್ದಾನೆ ಎಂದು ಹೇಳಿದ.

ಜನ್ಮಾಂತರ ಹೊಂದಿನ ತನ್ನ ಪತಿ ಶೋಭನನ ಈ ಸಂದೇಶವನ್ನು ಕೇಳಿ ಪರಮಾನಂದವಾಯಿತು ಚಂದ್ರಭಾಗೆಗೆ. ಆದರೆ ಅವಳಿಗೆ ತನ್ನ ಈ ಪತಿಯ ಸಂದೇಶವನ್ನು ಪಾಲಿಸುವದು ಎಂತು? ತನ್ನ ಪತಿಯ ಈಗಿನ ಸ್ಥಾನಮಾನಗಳು ಸ್ಥಿರಪಡುವಂತೆ ಯಾವ ಉಪಾಯವನ್ನು ಕೈಕೊಳ್ಳಬೇಕು ಎಂಬುದೇ ತಿಳಿಯದಂತಾಯಿತು. ಅವಳು ಸೋಮಶರ್ಮನಿಗೇ ಶರಣು ಹೋದಳು. - ಬ್ರಾಹ್ಮಣೋತ್ತಮ, ನಾನು ಜನ್ಮಾಂತರ ಹೊಂದಿದ ಆ ನನ್ನ ಪೂರ್ವ ಪತಿಯನ್ನು ಈ ಕಣ್ಣಿನಿಂದ ಕಾಣಲು ಉತ್ಕಂಠಿತಳಾಗಿದ್ದೇನೆ. ನನ್ನನ್ನು ಹೇಗಾದರೂ ಮಾಡಿ ಅಲ್ಲಿಗೆ ಕರೆದುಕೊಂಡು ಹೋಗು. ನನಗೆ ನನ್ನ ಮನದನ್ನನೊಂದಿಗೆ ಮಧುರ ಮಿಲನ ಆಗುವಂತೆ ಮಾಡು. ಆಗಲಿದ ಗಂಡ ಹೆಂಡಿರನ್ನು ಮತ್ತೆ ಕೂಡಿಸಿದರೆ ಮಹತ್ತರವಾದ ಪುಣ್ಯ ಎಂದು ಶಾಸ್ತ್ರಗಳು ಸಾರುತ್ತವೆ. ಆದುದರಿಂದ ಪತಿಯ ವಿಯೋಗ ವಿಹ್ವಲಳಾದ ನನಗೆ ಪತಿಸಂಯೋಗ ಆಗುವಂತೆ ಮಾಡು. ನಾನು ಸರ್ವ ಪ್ರಯತ್ನ ಮಾಡಿ ನನ್ನ ಪತಿಯ ಸ್ಥಾನವು ಧ್ರುವಸ್ಥಾನ ಆಗುವಂತೆ ಮಾಡುತ್ತೇನೆ.

ಚಂದ್ರಭಾಗೆಯ ಈ ಮಾತುಗಳನ್ನು ಕೇಳಿ ಸೋಮಶರ್ಮನು ಅವಳನ್ನು ಕರೆದುಕೊಂಡು ನೇರವಾಗಿ ನಡೆದ ಮಂದರಾಚಲಕ್ಕೆ. ಆ ಮಂದರಾಚಲದ ಸಮೀಪದಲ್ಲಿಯೇ ವಾಮದೇವ ಮಹರ್ಷಿಗಳ ಪುಣ್ಯಾಶ್ರಮ. ಆ ಮುನಿ ಮಾರ್ತಂಡರಿಗೆ ಸೋಮಶರ್ಮನು ಚಂದ್ರಭಾಗೆಯ ಮತ್ತು ಅವಳ ಪತಿಯಾದ ಶೋಭನನ ಸಮಾಚಾರವನ್ನು ತಿಳಿಸಿದ. ಈ ಪತಿಪತ್ನಿಯರ ಪುನರ್ಮಿಲನಕ್ಕಾಗಿ ತಾವು ಅನುಗ್ರಹಿಸಬೇಕು ಎಂದು ಬೇಡಿಕೊಂಡ.

ಅದನ್ನೆಲ್ಲ ಕೇಳಿ ಮಂತ್ರಸಿದ್ಧಿಯುಳ್ಳ ಆ ವಾಮದೇವ ಮಹರ್ಷಿಗಳು ವೇದ ಮಂತ್ರದಿಂದ ಚಂದ್ರಭಾಗೆಗೆ ಸ್ನಾನಮಾಡಿಸಿದರು. ಋಷಿಯ ಮಂತ್ರಪ್ರಭಾವದಿಂದ ಹಾಗೂ ರಮಾ ಏಕಾದಶಿಯ ಆಚರಣೆಯ ಪುಣ್ಯದಿಂದ ಚಂದ್ರಭಾಗೆಯು ತನ್ನ ಮನುಷ್ಯ ಶರೀರವನ್ನು ನೀಗಿ ದಿವ್ಯ ಶರೀರವನ್ನು ಪಡೆದಳು. ಮತ್ತು ದಿವ್ಯ ಗತಿಯನ್ನೂ ಹೊಂದಿದಳು. ಹಾಗೂ ಆನಂದದಿಂದ ಕಣ್ಣುಗಳನ್ನು ಅರಳಿಸಿ ಪತಿ ಶೋಭನನ ಬಳಿಗೆ ಬಂದಳು. ಚಂದ್ರಭಾಗೆಯನ್ನು ಕಂಡಕೂಡಲೇ ಶೋಭನನಿಗೆ ಆನಂದಸಾಗರದಲ್ಲಿ ಮಿಂದುಬಂದ ಅನುಭವವಾಯಿತು. ಅವನು ಆ ತನ್ನ ಮೆಚ್ಚಿನ ಮಡದಿಯನ್ನು ಪ್ರೀತಿಯಿಂದ ಕರೆದು ತನ್ನ ಪಕ್ಕದಲ್ಲಿ ಕೂಡಿಸಿಕೊಂಡ. ಆಗ ಚಂದ್ರಭಾಗೆಯು ನಲುಮೆತುಂಬಿ ತನ್ನ ಚೆಲುವಿನ ಚಂದ್ರಾಮನಂತಿದ್ದ ಶೋಭನನ್ನು ಕುರಿತು ನುಡಿದಳು.

**ಚಂದ್ರಭಾಗ:-** ನಾಥ, ನಾನು ತಂದೆಯ ಮನೆಯಲ್ಲಿ ಎಂಟು ವರ್ಷದವಳು. ಇದ್ದಾಗಲೇ ಏಕಾದಶಿಯ ದಿನ ಉಪವಾಸವನ್ನು ಮೊದಲು ಮಾಡಿದೆನು. ಮುಂದೆ ಇಂದಿನವರೆಗೂ ಎಂದೂ ಏಕಾದಶಿಯ ವ್ರತವನ್ನು ತಪ್ಪಿಸಿಲ್ಲ. ಈ ಸರ್ವ ಏಕಾದಶಿ ವ್ರತಗಳ ಆಚರಣೆಯ ಪುಣ್ಯ ಹಾಗೂ ವಾಮದೇವ ಮಹರ್ಷಿಗಳ ಪ್ರಸಾದದಿಂದ ನಾನು ದಿವ್ಯದೇಹವನ್ನು ಪಡೆದೆ. ನನ್ನ ಪತಿಯಾದ ನಿಮ್ಮನ್ನು ಮತ್ತೆ ಪಡೆದೆ. ಆ ಏಕಾದಶಿಯ ಪುಣ್ಯದಿಂದ ಈ ನಿಮ್ಮ ದೇವಪುರ ಒಡೆತನವು ನಿಮಗೆ ಇನ್ನೂ ಶಾಶ್ವತವಾಗಿ ಉಳಿಯುವುದು. ಆ ಸ್ಥಿರವಾದ ಸ್ಥಾನವು ಏಕಾದಶಿಯ ಪುಣ್ಯದಿಂದ ಸುಸ್ಥಿರವಾಗಿ ಮಾರ್ಪಡುವದು.

ಚಂದ್ರಭಾಗೆಯ ಹೇಳಿಕೆಯಂತೆ ಹರಿದಿನದ ವ್ರತಾಚರಣೆಯ ಪ್ರಭಾವದಿಂದ ಚಂದ್ರಭಾಗೆಯು ಶೋಭನನೊಂದಿಗೆ ದಿವ್ಯರೂಪವನ್ನು ಪಡೆದು ದಿವ್ಯಾಭರಣಗಳಿಂದ ಭೂಷಿತಳಾಗಿ ಮಂದರಾದ್ರಿಯ ಕಂದರದಲ್ಲಿರುವ ಆ ಸುಂದರವಾದ ದೇವಪುರಿಯಲ್ಲಿ ದಿವ್ಯಭೋಗಗಳನ್ನು ಚಿರಕಾಲ ಪರ್ಯಂತರ ಅನುಭವಿಸಿದಳು.

ಆದುದರಿಂದ ಈ ರಮಾ ಎಂಬ ಕಾರ್ತೀಕ ಕೃಷ್ಣಪಕ್ಷದ ಏಕಾದಶಿಯು ಚಿಂತಾಮಣಿಯಂತೆ ಚಿಂತಿಸಿದ್ದನ್ನೆಲ್ಲ ಕೊಡುತ್ತದೆ. ಕಾಮಧೇನುವಿನಂತೆ ಉಪವಾಸ ಮಾಡಿದವರ ಕಾಮನೆಗಳನ್ನೆಲ್ಲ ಪೂರ್ಣಮಾಡುತ್ತದೆ. ಆದುದರಿಂದ ಮನುಷ್ಯರು ಈ ರಮಾ ಏಕಾದಶಿಯನ್ನು ತಪ್ಪದೇ ಏಕಾದಶಿ ಉಪವಾಸ, ರಾತ್ರಿ ಜಾಗರ, ದ್ವಾದಶಿ ಪ್ರಾತಃಕಾಲ ಪಾರಣೆ ಮೂರು ದಿನಗಳಲ್ಲಿ ಶ್ರೀಹರಿಯ ಪೂಜೆ ಹೀಗೆ ಚತುರಂಗಗಳಿಂದ ಸಾಂಗವಾಗಿ ನೆರವೇರಿಸಬೇಕು.

ಏಕಾದಶಿಯಲ್ಲಿ ಕೃಷ್ಣಪಕ್ಷ ಏಕಾದಶಿ ಶುಕ್ಲಪಕ್ಷ ಏಕಾದಶಿ ಮೂಲಭೇದ ಮಾಡಬಾರದು. ತಿಂಗಳಿನ ಎರಡೂ ಏಕಾದಶಿ ದಿನಗಳಲ್ಲಿಯೂ ಉಪವಾಸ ಮಾಡಬೇಕು.

**ಧೇನು ಶ್ವೇತಾ ಯಥಾ ಕೃಷ್ಣಾ ಉಭಯೋಃ ಸದೃಶಂ ಪಯಃ ।**
**ತಥೈವ ತುಲ್ಯ ಫಲದಂ ಸ್ಮೃತಮೇಕಾದಶೀದ್ವಯಂ ॥**

ಆಕಳು ಕಪ್ಪೇ ಇರಲಿ ಅಥವಾ ಬೆಳ್ಳಗೇ ಇರಲಿ. ಹಾಲು ಎರಡರದೂ ಅಷ್ಟೇ. ಎರಡೂ ಶುಭ್ರವೇ. ಎರಡೂ ರುಚಿಕರವೇ. ಅದರಂತೆ ಶುಕ್ಲ ಏಕಾದಶಿ ಕೃಷ್ಣ ಏಕಾದಶಿ ಎರಡೂ ಸಮಾನವಾಗಿ ಪುಣ್ಯದಾಯಿಕ ಆಗಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾರ್ತಿಕ ಕೃಷ್ಣಪಕ್ಷದ ರಮಾ ಏಕಾದಶಿಯ ಮಾಹಾತ್ಮ್ಯ ಎಂಬ ಅರವತ್ತೊಂದನೇಯ ಅಧ್ಯಾಯ ಮುಗಿದುದು*



## ಕಾರ್ತೀಕ ಶುಕ್ಲಪಕ್ಷದ ಪ್ರಬೋಧಿನೀ ಏಕಾದಶಿಯ ಮಹಿಮೆ | ಅಧ್ಯಾಯ - ೬೨

**ಶ್ರೀಕೃಷ್ಣ:-** ಧರ್ಮರಾಜ, ಕಾರ್ತೀಕ ಶುಕ್ಲಪಕ್ಷದಲ್ಲಿ ಬರುವ ಪ್ರಬೋಧಿನೀ ಎಂಬ ಹೆಸರಿನ ಏಕಾದಶಿಯ ೨ಮಹಿಮೆಯನ್ನು ಬ್ರಹ್ಮದೇವರು ನಾರದರಿಗೆ ಮೊದಲು ನಿರೂಪಿಸಿದರು. ಅದನ್ನು ಯಥಾವತ್ತಾಗಿ ನಿನಗೆ ಹೇಳುತ್ತೇನೆ ಕೇಳು.

**ನಾರದ :-** ಧರ್ಮಕರ್ಮಗಳಿಗೆಲ್ಲ ಮೂಲಪ್ರವರ್ತಕನಾದ ಶ್ರೀಹರಿಯು ನಿದ್ರೆಯಿಂದ ಎದ್ದೇಳುವ ಪ್ರಬೋಧಿನೀ ಎಂಬ ಏಕಾದಶಿಯ ಮಹಿಮೆಯನ್ನು ವಿಸ್ತಾರವಾಗಿ ನನಗೆ ನಿರೂಪಿಸು.

**ಬ್ರಹ್ಮ:-** ಮುನಿಶ್ರೇಷ್ಠನಾದ ನಾರದ. ಪ್ರಬೋಧಿನಿಯ ಮಹಿಮೆ ಪಾಪ ನಾಶಕ, ಮತ್ತು ಪುಣ್ಯವರ್ಧಕ. ಈ ಪ್ರಬೋಧಿನಿ ಏಕಾದಶಿಯ ದಿನ ಉಪವಾಸ ಮಾಡುವದರಿಂದ ಜನರಿಗೆ ಸಂಪತ್ತು, ಸುಖ, ಸೌಭಾಗ್ಯಗಳು ಎಲ್ಲವೂ ದೊರಕುವವು. ಮತ್ತು ಸಾವಿರ ಅಶ್ವಮೇಧ ಯಜ್ಞಗಳನ್ನೂ ನೂರು ರಾಜಸೂಯ ಯಾಗಗಳನ್ನೂ ಮಾಡಿದ ಪುಣ್ಯವು ಬರುವದು. ಮೇರು ಮಂದರ ಪರ್ವತದಷ್ಟು ಎತ್ತರವಾದ ಮಾನವರ ಪಾಪ ಬೆಟ್ಟಗಳು ಈ ಒಂದೇ ಒಂದಾದ ಪ್ರಬೋಧಿನಿ ಏಕಾದಶಿಯ ಉಪವಾಸದಿಂದ ಸುಟ್ಟುಹೋಗುತ್ತವೆ. ಆ ದಿನ ರಾತ್ರಿ ಹರಿಯ ಧ್ಯಾನ ಮಾಡುತ್ತ ಜಾಗರವನ್ನು ಮಾಡಿದರೆ ಹಿಂದಿನ ಸಾವಿರ ಜನ್ಮಗಳಲ್ಲಿ ಸಂಚಿತವಾದ ಪಾಪರಾಶಿಯೆಲ್ಲವೂ ಅರಳೆಯ ರಾಶಿಯಂತೆ ದಗ್ಧವಾಗಿ ಹೋಗುವವು.

ಈ ಪ್ರಬೋಧಿನಿ ಏಕಾದಶಿ ಹಾಗೂ ದ್ವಾದಶಿ ದಿನಗಳಂದು ವಿಶೇಷವಾಗಿ ಏಕಾದಶಿಯ ರಾತ್ರಿ ಜಾಗರ ಕಾಲದಲ್ಲಿ ನೀಡಿದ ದಾನ, ಮಾಡಿದ ಜಪ, ಪೂಜೆ, ಭಜನೆ, ಸೇವೆ ಎಲ್ಲವೂ ಅಕ್ಷಯ ಪುಣ್ಯವನ್ನು ತಂದುಕೊಡುತ್ತವೆ.

ಕಾರ್ತಿಕ ಮಾಸದಲ್ಲಿ ಸರ್ವಪ್ರಯತ್ನದಿಂದಲೂ ದೇವದೇವೋತ್ತಮನಾದ ಶ್ರೀಹರಿಯ ಸೇವೆಯನ್ನು ಮಾಡಬೇಕು. ಈ ಕಾರ್ತಿಕದಲ್ಲಿ ಪರಾನ್ನವನ್ನು ಬಿಟ್ಟರೆ ಚಾಂದ್ರಾಯಣ ವ್ರತವನ್ನು ಮಾಡಿದ ಫಲ. ವೇದವೇದಾಂತಗಳ ಅಧ್ಯಯನ, ವಿಮರ್ಶೆ, ಪಾರಾಯಣಾದಿಗಳನ್ನು ಮಾಡಿದರೆ ಹತ್ತು ಸಾವಿರ ಯಜ್ಞಗಳನ್ನು ಮಾಡಿದ ಪುಣ್ಯ. ಭಾಗವತಾದಿ ಪುರಾಣಗಳ ಒಂದು ಅಥವಾ ಅರ್ಧ ಶ್ಲೋಕವನ್ನಾದರೂ ಕೇಶವನ ಎದುರು ಹೇಳಿದರೆ ಅಥವಾ ಶಾಸ್ತ್ರಶ್ರವಣ ಮಾಡಿದರೆ ನೂರು ಗೋದಾನ ಮಾಡಿದ ಪುಣ್ಯ. ವಿಷ್ಣುವಿನ

ಕಥೆಯನ್ನು ಕೇಳಿ ಪೌರಾಣಿಕನನ್ನು ತನ್ನ ಶಕ್ತಿಗೆ ಅನುಸಾರವಾಗಿ ಸತ್ಕರಿಸಿದರೆ ಅಕ್ಷಯಲೋಕ ಪ್ರಾಪ್ತಿ. ಭಗವದ್ಗೀತೆಯ ಪ್ರವಚನ, ಪಾರಾಯಣ, ಶ್ರವಣಾದಿಗಳನ್ನು ಮಾಡಿದರೆ ಪುನರ್ಜನ್ಮ ಇಲ್ಲ. ಕಾರ್ತಿಕ ಮಾಸದಲ್ಲಿ ದೇವರ ಎದುರು ವಿಷ್ಣುಕಥೆಯ ವಾಚನ, ಗೀತೆ, ನೃತ್ಯ, ವಾದ್ಯ ಮುಂತಾದ ಸೇವೆಗಳನ್ನು ಸಲ್ಲಿಸಿದರೆ ಆ ಮನುಷ್ಯನಿಗೆ ಮುಂದೆ ಗರ್ಭವಾಸ ದುಃಖವೇ ತಪ್ಪಿ ಹೋಗುವದು. ಕಾರ್ತಿಕದಲ್ಲಿ ವಿಶೇಷವಾಗಿ ಶ್ರೀಹರಿಯ ಪೂಜೆ, ಬಗೆಬಗೆಯ ಹಣ್ಣುಗಳ ದಾನ, ಹಾಗೂ ಶಂಖದಲ್ಲಿ ನೀರು ಹಾಕಿ ಶ್ರೀಹರಿಗೆ ಅರ್ಘ್ಯದಾನ, ಗುರುಪೂಜೆ, ಅನ್ನದಾನ, ದಾನದಕ್ಷಿಣೆ, ಭಾಗವತ ಪುರಾಣ, ಪಠಣ, ಪಾಠಣ, ಶ್ರವಣ ಮಾಡಿದವರಿಗೆ ಸರ್ವವಿಧವಾದ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವೂ ಎಲ್ಲ ಬಗೆಯಾದ ದಾನಗಳನ್ನು ನೀಡಿದ ಪುಣ್ಯವೂ ಕೋಟಿಪಟ್ಟು ಹೆಚ್ಚಾಗಿ ಬರುವದು.

ಕಾರ್ತಿಕದಲ್ಲಿ ಕೇದಿಗೆ, ಅಗಸ್ತಿಕುಸುಮ, ಮುನಿಪುಷ್ಪ, ತುಳಸೀದಳ ಮೊದಲಾದವುಗಳಿಂದ ಶ್ರೀಹರಿಯನ್ನು ಪೂಜಿಸದರೆ ಅಶ್ವಮೇಧ ಯಜ್ಞವನ್ನು ಮಾಡಿದಷ್ಟು ಪುಣ್ಯವು ಪ್ರಾಪ್ತವಾಗುವದು. ಕಾರ್ತಿಕ ಮಾಸದಲ್ಲಿ ಒಂಭತ್ತು ವಿಧವಾಗಿ ತುಳಸಿಯ ಸೇವೆಯನ್ನು ಮಾಡಬೇಕು.

**ದೃಷ್ಟಾ ಸ್ಪೃಷ್ಟಾ ತವಾಧ್ಯಾತಾ ನಾಮತಸ್ತುತಾ ।**
**ರೋಪಿತಾ ಸೇಚಿತಾ ನಿತ್ಯಂ ಪೂಜಿತಾ ತುಳಸೀ ಶುಭಾ ॥**

ತುಳಸಿಯ ಗಿಡವನ್ನು ನೋಡುವದು, ತುಳಸಿಯ ದಳಗಳನ್ನು ಮುಟ್ಟುವದು ಅಥವಾ ಧ್ಯಾನ ಮಾಡುವದು, ಸ್ಮರಿಸುವುದು, ನಾಮೋಚ್ಚಾರಣವನ್ನು ಮಾಡುವದು, ಸ್ತುತಿಸುವದು. ತುಳಸಿಯ ಮರವನ್ನು ನೋಡುವದು, ನೀರುಹಾಕಿ ಬೆಳೆಸುವದು ಮತ್ತು ಪೂಜೆ ಮಾಡುವುದು ಇವೇ ಮೊದಲಾಗಿ ಒಂಬತ್ತು ವಿಧವಾಗಿ ತುಳಸಿಯಲ್ಲಿ ಭಕ್ತಿಯನ್ನು ಮಾಡುವವರು ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗುವರು. ಆದುದರಿಂದ ಕಾರ್ತಿಕ ಮಾಸವು ಬಂದ ಕೂಡಲೇ ಕೋಮಲವಾದ ಎಳೆತುಳಸೀದಳಗಳಿಂದ ಮಹಾವಿಷ್ಣುವಿನ ಪೂಜೆಯನ್ನು ಭಕ್ತಿಯಿಂದ ಮಾಡಬೇಕು. ಹಿಂದಿನ ಯುಗದಲ್ಲಿ ನೂರು ಯಜ್ಞಗಳನ್ನು ಮಾಡಿ ಅನೇಕ ಬಗೆಯಾಗಿ ದಾನಗಳನ್ನು ಕೊಟ್ಟರೆ ಬರುವಷ್ಟು ಪುಣ್ಯವು ಕಲಿಯುಗದಲ್ಲಿ ತುಳಸೀದಳಗಳಿಂದ ಕೇಶವನ ಅರ್ಚನೆಯನ್ನು ಮಾಡುವದರಿಂದಲೇ ದೊರಕುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾರ್ತೀಕ ಶುಕ್ಲಪಕ್ಷದ ಪ್ರಬೋಧಿನೀ ಏಕಾದಶಿಯ ಮಹಿಮೆ ಎಂಬ ಅರವತ್ತೆಂರಡನೇಯ ಅಧ್ಯಾಯ ಮುಗಿದುದು*

—o—

ಅಧಿಕಮಾಸ ಕೃಷ್ಣಪಕ್ಷದ ಕಮಲಾ ಏಕಾದಶಿಯ ಮಾಹಾತ್ಮ್ಯ | ಅಧ್ಯಾಯ - ೬೩

**ಧರ್ಮರಾಜ:-** ಜನಾರ್ದನ, ಪುರುಷೋತ್ತಮ ಮಾಸ ಎಂದು ಪ್ರಸಿದ್ಧವಾದ ಅಧಿಕಮಾಸದ ಮಹಾತ್ಮೆಯನ್ನು ನನಗೆ ಬಿತ್ತರಿಸು. ಈ ಅಧಿಕಮಾಸವನ್ನು ಆಚರಿಸುವ ವಿಧಿ ಯಾವುದು? ಇದರ ಫಲ ಏನು? ಈ ಅಧಿಕ ಮಾಸದಲ್ಲಿ ಯಾವ ದೇವರ ಪೂಜೆಯನ್ನು ಮಾಡಬೇಕು? ಆಗ ಆಚರಿಸುವ ವ್ರತಗಳು ಯಾವವು? ಆ ಕಾಲದಲ್ಲಿ ನೀಡಿದ ಯಾವ ದಾನಕ್ಕೆ ಎಂಥ ಫಲ? ಆಗಿನ ಸ್ನಾನ ವಿಧಿಯೇನು? ಯಾವ ಮಂತ್ರವನ್ನು ಜಪಿಸಬೇಕು? ಆಗ ಭಗವಂತನನ್ನು ಪೂಜಿಸುವ ಬಗೆ ಯಾವುದು? ಆಗ ಎಂಥ ಅನ್ನವನ್ನು ಉಣ್ಣಬೇಕು? ಎಂಥ ಆಹಾರವನ್ನು ಸೇವಿಸಬೇಕು? ಎಲ್ಲವನ್ನೂ ನಿರೂಪಿಸಿರಿ.

**ಶ್ರೀಕೃಷ್ಣ:-** ಧರ್ಮರಾಯ, ವಿಲಕ್ಷಣ ಸ್ನೇಹ ನನಗೆ ನಿನ್ನ ಮೇಲೆ ಆದುದರಿಂದ ಪಾಪಧ್ವಂಸಕವಾದ ಆ ಪುರುಷೋತ್ತಮ ಮಾಸದ ಮಹಿಮೆಯನ್ನು ನಿನಗೆ ಹೇಳುತ್ತೇನೆ ಕೇಳು.

ಈ ಪುರುಷೋತ್ತಮ ಮಾಸ ಅರ್ಥಾತ್ ಅಧಿಕಮಾಸದಲ್ಲಿ ಬರುವ ಏಕಾದಶಿಗೆ ಕಮಲಾ ಏಕಾದಶಿ ಎಂದು ಕರೆಯುತ್ತಾರೆ. ಆ ದಿನ ಉಪವಾಸ ಮಾಡುವುದರಿಂದ ಸಂಪತ್ತಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯು ನಮ್ಮ ಮೇಲೆ ಸುಪ್ರಸನ್ನಳಾಗಿ ಅನುಗ್ರಹದ ದೃಷ್ಟಿಯನ್ನೇ ಕರೆಯುತ್ತಾಳೆ. ಅಂದು ಬ್ರಾಹ್ಮ ಮುಹೂರ್ತದಲ್ಲಿಯೇ ಎದ್ದು ಪುರುಷೋತ್ತಮನನ್ನು ಸ್ಮರಣೆ ಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಿ ದೇವರ ಪೂಜೆಗೈದು ಮಂತ್ರಜಪವನ್ನು ಮಾಡಬೇಕು. ನದೀತೀರದಲ್ಲಿ ಮಾಡಿದ ಜಪದ ಎರಡು ಪಟ್ಟು ಪುಣ್ಯವು ಮನೆಯಲ್ಲಿಯೆ ಬರುತ್ತದೆ. ಹಸುಗಳು ನಿಲ್ಲುವ ಗೋಷ್ಠದಲ್ಲಿ ಕುಳಿತು ಜಪಮಾಡಿದರೆ ಸಾವಿರ ಪಟ್ಟು ಅಧಿಕ ಪುಣ್ಯ, ಅಗ್ನಿಶಾಲೆಯಲ್ಲಿ ಮಾಡಿದ ಜಪದಿಂದ ನೂರುಪಟ್ಟು ಮಿಗಿಲಾದ ಪುಣ್ಯ. ದೇವತಾ ಸನ್ನಿಧಿ ಅಥವಾ ಶಿವಕ್ಷೇತ್ರಗಳಲ್ಲಿ ಮಾಡಿದರೂ ಯಥಾಧಿಕ ಪುಣ್ಯ. ತುಳಸೀ ಸನ್ನಿಧಿಯಲ್ಲಿ ಮಾಡಿದರೆ ಲಕ್ಷ ಪಟ್ಟು ಹೆಚ್ಚು ಪುಣ್ಯ.

ಪೂರ್ವಕಾಲದಲ್ಲಿ ಅವಂತೀನಗರದ ಶಿವಶರ್ಮ ಎಂಬ ಒಬ್ಬ ಬ್ರಾಹ್ಮಣ. ಅವನಿಗೆ ಐದು ಜನ ಗಂಡು ಮಕ್ಕಳು. ಅವರಲ್ಲಿ ಕೊನೆಯವನು ಮಾತ್ರ ಮಹಾದುಷ್ಟ, ಹಾಗೂ ಪಾಪಿಷ್ಠ. ಅವನನ್ನು ಅವನ ತಂದೆ ಊರು ಬಿಟ್ಟು ಹೊರಗೆ ಹಾಕಿದ. ಬಂಧು ಬಾಂಧವರೆಲ್ಲರೂ ಅವನನ್ನು ತೊರೆದರು. ಹೀಗೆ ಸರ್ವ ಆಪ್ತೇಷ್ಟರಿಂದ ಬಿಡಲ್ಪಟ್ಟ ಅವನು ಬಹುದೂರ ನಡೆದ ಆ ಬೆಂಗಾಡಿನಲ್ಲಿ. ಒಂದು ದಿನ ಸಂಚಾರ ಕ್ರಮದಿಂದ ಅವನು ತೀರ್ಥರಾಜ ಎನಿಸಿದ ಪ್ರಯಾಗ ಕ್ಷೇತ್ರಕ್ಕೆ ಬಂದ. ದೀನವದನನಾಗಿ ತ್ರಿವೇಣಿಯಲ್ಲಿ ಸ್ನಾನಮಾಡಿದ. ಅಲ್ಲಿಯೇ ಇರುವ ಋಷಿಗಳ ಆಶ್ರಮಗಳಲ್ಲಿ ಏನಾದರೂ ತಿನ್ನಲಿಕ್ಕೆ ಸಿಗಬಹುದು ಎಂದು ಹುಡುಕಾಡಿದ. ಎಲ್ಲಿಯೂ ಏನೂ ಸಿಗಲಿಲ್ಲ. ಹಾಗೆಯೇ ಹುಡುಕುತ್ತ ಹರಿಮಿತ್ರ ಮುನಿಯ ಆಶ್ರಮಕ್ಕೆ ಬಂದ. ಆಗ ಅಧಿಕಮಾಸ. ನೈಮಿತ್ತಕವಾಗಿ ಅಲ್ಲಿ ನೆರೆದಿದ್ದರು ಅನೇಕ ವಿದ್ವಾಂಸರು ಹಾಗೂ ಮುನಿಮಾನ್ಯರು. ಅವರಲ್ಲಿ ಒಬ್ಬ ಪಂಡಿತನು ಪುರುಷೋತ್ತಮ ಮಾಸದ ಮಹಾಮಹಿಮೆಯನ್ನು ಹೇಳುತ್ತಿದ್ದ. ಶಿವಶರ್ಮ ಬ್ರಾಹ್ಮಣನ

ಕೊನೆಯ ಮಗನಾದ ಜಯಶರ್ಮನು ಆಹಾರ ಪದಾರ್ಥವನ್ನು ಹುಡುಕುತ್ತ ಈ ಹರಿಮಿತ್ರಮುನಿಯ ಆಶ್ರಮಕ್ಕೆ ಬಂದು ಇಲ್ಲಿ ನಡೆದ ಪುರುಷೋತ್ತಮ ಮಾಸ ಮಹಾತ್ಮೆಯನ್ನು ಪಂಡಿತರಾದ ಪುರಾಣಿಕರ ಮುಖದಿಂದ ಕೇಳಿದ. ಅದರಲ್ಲಿಯೂ ಕಮಲಾ ಏಕಾದಶಿಯ ವ್ರತದ ಆಚರಣೆಯ ಪುಣ್ಯವನ್ನೂ, ವಿಧಾನವನ್ನೂ ಸರಿಯಾಗಿ ಕೇಳಿಕೊಂಡ. ಅವರೆಲ್ಲರ ಕೂಡ ಆ ಏಕಾದಶಿಯ ದಿನ ಅವನೂ ಉಪವಾಸ ಮಾಡಿದ. ಮತ್ತು ಅಲ್ಲಿ ನೆರೆದ ಭಕ್ತರೊಡನೆ ವಿಧಿಪೂರ್ವಕವಾಗಿ ಹರಿಪೂಜೆ, ಜಾಗರ, ದ್ವಾದಾಶಿ ಪಾರಣೆ ಎಲ್ಲವನ್ನೂ ಆಚರಿಸಿದ. ಹೀಗೆ ಮೂರು ದಿನ ಕಮಲಾ ಏಕಾದಶಿಯ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿದ ಬಳಿಕ ಒಂದು ದಿನ ರಾತ್ರಿಕಾಲದಲ್ಲಿ ಜಯಶರ್ಮನು ಮಲಗಿದಾಗ ಅವನು ಇದ್ದಲ್ಲಿಗೆ ಲಕ್ಷ್ಮೀದೇವಿಯು ಪ್ರಸನ್ನಳಾದಳು. ಮತ್ತು ಜಯಶರ್ಮನನ್ನು ಕುರಿತು ಮಾತನಾಡಿದಳು.

**ಲಕ್ಷ್ಮೀ:-** ನೀನು ಕಮಲಾ ಏಕಾದಶಿಯ ದಿನ ಈ ಪುಣ್ಯಾಶ್ರಮದಲ್ಲಿ ನಿಂತು ಉಪವಾಸ ಮಾಡಿರುವೆ. ಮತ್ತು ಪಂಡಿತರ ಬಾಯಿಂದ ಆ ಏಕಾದಶಿಯ ಮಹಿಮೆಯನ್ನು ಶ್ರವಣ ಮಾಡಿರುವಿ. ಅದರಿಂದ ನಾನು ಸುಪ್ರೀತಳಾಗಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡಿಕೋ.

**ಜಯಶರ್ಮ:-** ಸುಂದರಿ, ನೀನು ಯಾರು? ಇಂದ್ರನ ರಾಣಿಯಾದ ಶಚಿಯೋ, ಪರಮೇಶ್ವರನ ಪ್ರೇಯಸಿಯಾದ ಪಾರ್ವತಿಯೋ ಅಥವಾ ಬೇರೆ ಗಂಧರ್ವ ಸುಂದರಿಯೋ, ಕಿನ್ನರ ಕಾಮಿನಿಯೋ, ಸೂರ್ಯನ ಸತಿಯೋ, ಚಂದ್ರನ ಚೆಲುವೆಯೋ ನೀನು ಯಾರು? ನಿನ್ನಂಥ ತೇಜಸ್ವಿನಿಯಾದ ಸ್ತ್ರೀಯನ್ನು ನಾನು ಎಂದೂ ನೋಡಲಿಲ್ಲ. ನೀನು ಯಾರ ಮಡದಿ? ನನ್ನ ಮೇಲೆ ನೀನು ಹೇಗೆ ಪ್ರಸನ್ನಳಾಗಿರುವಿ?

**ಲಕ್ಷ್ಮೀ:-** ನೀನು ಕಮಲಾ ಏಕಾದಶಿಯ ದಿನ ಉಪವಾಸ ಮಾಡಿರುವಿಯಷ್ಟೇ. ಆದುದರಿಂದ ನಾನು ವೈಕುಂಠ ಲೋಕದಿಂದ ಇಲ್ಲಿಗೆ ಆಗಮಿಸಿದ್ದೇನೆ. ನಾನು ವಿಷ್ಣುಪತ್ನಿಯಾದ ಸಾಕ್ಷಾತ್ ಲಕ್ಷ್ಮೀ. ಭಗವಂತನ ಆದೇಶದಂತೆ ಇಲ್ಲಿಗೆ ಬಂದಿದ್ದೇನೆ. ನೀನು ಈಗ ಸಂಚರಿಸುತ್ತ ಬಂದ ಪ್ರದೇಶ ಪ್ರಯಾಗ ಕ್ಷೇತ್ರ. ಇಲ್ಲಿ ಇರುವ ಹರಿಮಿತ್ರ ಮುನಿಯ ಆಶ್ರಮದಲ್ಲಿ ಮಿಲಿತರಾದ ಮಹರ್ಷಿಗಳ ಸನ್ನಿಧಿಯಲ್ಲಿ ಪುರುಷೋತ್ತಮ ಮಾಸದ ಏಕಾದಶಿಯ ವ್ರತವನ್ನು ನೀನು ಆಚರಿಸಿದೆ. ಈ ವ್ರತದ ಪ್ರಭಾವದಿಂದ ನಾನು ನಿನ್ನ ಮೇಲೆ ಪ್ರಸನ್ನಳಾಗಿದ್ದೇನೆ.

**ಜಯಶರ್ಮ:-** ತಾಯಿ, ನೀನು ನನ್ನ ಮೇಲೆ ಪ್ರಸನ್ನಳಾಗಿದ್ದರೆ ಈ ಪುರುಷೋತ್ತಮ ಮಾಸದ ಹಾಗೂ ಏಕಾದಶಿಯ ಮಹಿಮೆಯನ್ನು ಹೇಳು.

**ಲಕ್ಷ್ಮೀ:-** ಪಕ್ಷಿಗಳಲ್ಲಿ ಗರುಡ ಶ್ರೇಷ್ಠ. ನದಿಗಳಲ್ಲಿ ಗಂಗೆ, ತಿಥಿಗಳಲ್ಲಿ ದ್ವಾದಶಿ. ಮಾಸಗಳಲ್ಲಿ ಅಧಿಕ ಮಾಸವು ಶ್ರೇಷ್ಠ. ಈ ಅಧಿಕ ಮಾಸದಲ್ಲಿ ಹರಿಯ ಪೂಜೆ ಹಾಗೂ ಅವನ ನಾಮಕೀರ್ತನೆಯನ್ನು ಮಾಡುವ ಮಾನವರ ಜನ್ಮ ಸಾರ್ಥಕ. ಈ ಅಧಿಕ ಮಾಸದಲ್ಲಿ ಏಕಾದಶಿ, ದ್ವಾದಶಿ ಹಾಗೂ ರಾತ್ರಿ ಶೇಷದಲ್ಲಿ ತ್ರಯೋದಶಿ ಪ್ರಾಪ್ತವಾದಾಗ ತ್ರಯೋದಶಿಯ ದಿನ ಪಾರಣೆ ಮಾಡಿದರೆ ನೂರು ಯಜ್ಞಗಳನ್ನು ಮಾಡಿದ ಪುಣ್ಯವು.

**ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹ ಮಪರೋಹನಿ ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥**

ಎಂಬ ಮಂತ್ರವನ್ನು ಉಚ್ಚರಿಸಿ ದೇವರ ಎದುರು ಪ್ರತಿಜ್ಞೆ ಮಾಡಿ ಭಕ್ತಿಯಿಂದ ಉಪವಾಸವನ್ನು ಮಾಡಬೇಕು. ಅಂದು ರಾತ್ರಿಕಾಲದಲ್ಲಿ ಹಾಡು, ಭಜನೆ, ಪುರಾಣ, ಪಾರಾಯಣ, ನೃತ್ಯ, ವಾದ್ಯ ಮುಂತಾದವುಗಳಿಂದ ದೇವರ ಎದುರು ಜಾಗರವನ್ನು ಮಾಡಬೇಕು. ದ್ವಾದಶಿಯ ದಿನ ಪ್ರಾತಃಕಾಲದಲ್ಲಿಯೇ ಎದ್ದು ಸ್ನಾನಮಾಡಿ ವಿಧಿಪೂರ್ವಕ-ವಾಗಿ ವಿಷ್ಣುವಿನ ಪೂಜೆಯನ್ನು ಮಾಡಬೇಕು. ಏಕಾದಶಿ ಹಾಗೂ ದ್ವಾದಶಿ ದಿನಗಳಂದು ದೇವರಿಗೆ ಕ್ಷೀರಾಭಿಷೇಕ ಹಾಗೂ ಪಂಚಾಮೃತದಿಂದ ಅಭಿಷೇಕ ಮಾಡಿದರೆ ವಿಷ್ಣುವಿನ ಸಾರೂಪ್ಯವು ಪ್ರಾಪ್ತವಾಗುತ್ತದೆ. ಹೀಗೆ ಶಾಸ್ತ್ರೋಕ್ತ ವಿಧಿಯಿಂದ ದೇವರನ್ನು ಪೂಜಿಸಿ

**ಅಜ್ಞಾನ ತಿಮಿರಾಂಧಸ್ಯ ವ್ರತೇನಾನೇನ ಕೇಶವ ।**
**ಪ್ರಸೀದ ಸುಮುಖೋ ಭೂತ್ವಾ ಜ್ಞಾನದೃಷ್ಟಿ ಪ್ರದೋಭವ ॥**

ಎಂದು ವಿಜ್ಞಾಪಿಸಿ, ಭಕ್ತಿಯಿಂದ ಬ್ರಾಹ್ಮಣರ ಭೋಜನ ಮಾಡಿಸಿ ದಕ್ಷಿಣೆ ಕೊಟ್ಟು ಪಂಚಮಹಾ ಯಜ್ಞಗಳನ್ನು ಮಾಡಿ ಬಂಧುಮಿತ್ರರೊಂದಿಗೆ ತಾನೂ ಪಾರಣೆಯನ್ನು ಮಾಡಬೇಕು.

ಲಕ್ಷ್ಮೀದೇವಿಯು ಆ ಜಯಶರ್ಮ ಬ್ರಾಹ್ಮಣನಿಗೆ ಹೀಗೆ ಕಮಲಾ ಏಕಾದಶಿಯ ಮಹಿಮೆಯನ್ನು ಬೋಧಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು. ಲಕ್ಷ್ಮೀದೇವಿಯ ಅನುಗ್ರಹದಿಂದ ಆ ಜಯಶರ್ಮನಿಗೆ ವಿಪುಲವಾದ ಐಶ್ವರ್ಯವು ದೊರಕಿತು. ಅವನು ಮಹಾ ಶ್ರೀಮಂತನಾಗಿ ತಂದೆಯ ಮನೆಗೆ ಆಗಮಿಸಿದ. ಲಕ್ಷ್ಮೀದೇವಿಯ ದಯೆಯಿಂದ ಭಾಗ್ಯವಂತನಾಗಿ ಬಂದ ಮಗನನ್ನು ತಂದೆತಾಯಿಗಳೂ ಹಾಗೂ ಸೋದರ ಪರಿವಾರದವರೂ ಆದರದಿಂದ ಸ್ವಾಗತಿಸಿದರು.

ಆದುದರಿಂದ ಮಾನವರೆಲ್ಲರೂ ಅಧಿಕಮಾಸದ ಕೃಷ್ಣಪಕ್ಷದಲ್ಲಿ ಬರುವ ಈ ಕಮಲಾ ಏಕಾದಶಿಯನ್ನು ತಪ್ಪದೇ ಆಚರಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಅಧಿಕಮಾಸ ಕೃಷ್ಣಪಕ್ಷದ ಕಮಲಾ ಏಕಾದಶಿಯ ಮಾಹಾತ್ಮ್ಯ ಎಂಬ ಅರವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಅಧಿಕ ಮಾಸದ ಶುಕ್ಲಪಕ್ಷದ ಕಾಮದಾ ಏಕಾದಶಿಯ ಮಾಹಾತ್ಮ್ಯ

ಅಧ್ಯಾಯ - ೬೪

**ಶ್ರೀಕೃಷ್ಣ:-**

**ಏಕಾದಶೀ ಕಲೌ ರಾಜನ್ ಭವಬಂಧವಿಮೋಚಿನೀ ।**
**ಕಾಮದಾ ಸರ್ವ ಕಾಮಾನಾಂ ಪಾಪಾನಾಂ ಪಾಪಃ ಭುಮಿ ॥**

ಧರ್ಮರಾಜ, ಕಲಿಯುಗದಲ್ಲಿ ಏಕಾದಶಿಯು ಮಾನವರನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಿಸುತ್ತದೆ. ಪಾಪಿಗಳ ಪಾಪಗಳನ್ನೆಲ್ಲ ಪರಿಹರಿಸಿ ಎಲ್ಲರ ಕಾಮನೆಗಳನ್ನು ಪೂರ್ಣ ಮಾಡುತ್ತದೆ. ಆದುದರಿಂದ ಅಧಿಕಮಾಸದಲ್ಲಿ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯನ್ನು ಕಾಮದಾ ಏಕಾದಶಿ ಎಂದು ಕರೆಯುತ್ತಾರೆ. ಶಾಸ್ತ್ರೋಕ್ತ ವಿಧಿಯಿಂದ ಏಕಾದಶಿ ವ್ರತವನ್ನು ಮಾಡುವವರು ಜೀವನ್ಮುಕ್ತರು ಹಾಗೂ ವಿಷ್ಣು ಸ್ವರೂಪಿಗಳು.

**ಧರ್ಮರಾಜ:-** ನೀನು ಹೇಳಿದಂತೆ ಏಕಾದಶಿ ವ್ರತವನ್ನು ಮಾಡಿದವರು ಪಾಪರೂಪಿಗಳಾಗಿಯೇ ಕಾಣಿಸುತ್ತಾರೆ. ಅವರೆಲ್ಲರೂ ವಿಷ್ಣುರೂಪರು ಹಾಗೂ ಜೀವನ್ಮುಕ್ತರು ಎಂದು ನೀನು ಹೇಳುತ್ತೀಯ. ಅದು ಹೇಗೆ?

**ಶ್ರೀಕೃಷ್ಣ:-** ಕಲಿಯುಗದಲ್ಲಿ ಭಕ್ತಿಯಿಂದ ಏಕಾದಶಿ ವ್ರತವನ್ನು ಮಾಡುವವರು ನಿಶ್ಚಿತವಾಗಿಯೂ ಮುಕ್ತರಾಗಿ ವಿಷ್ಣುವಿನ ಸಾರೂಪ್ಯವನ್ನು ಖಂಡಿತವಾಗಿಯೂ ಹೊಂದುತ್ತಾರೆ. ಆದುದರಿಂದ ಅವರು ಈಗಲೇ ವಿಷ್ಣುರೂಪ ಆದಂತೆ. ಏಕಾದಶಿಯ ವ್ರತದಿಂದ ಅವರ ಪಾಪಗಳೆಲ್ಲ ನಷ್ಟವಾಗಿ ಹೋಗಿರುವುದರಿಂದ ಅವರು ಜೀವನ್ಮುಕ್ತರಾದಂತೆಯೇ ಅಲ್ಲವೇ? ದಶಮಿ ಒಪ್ಪತ್ತು ಊಟ, ಏಕಾದಶಿಯ ದಿನ ನಿರ್ಜಲ ಉಪವಾಸ, ದ್ವಾದಶಿಯ ದಿನ ಪ್ರಾತಃಕಾಲ ಪಾರಣ, ಮೂರು ದಿನ ನಿರತಂರ ಭಗವತ್ಸೇವೆ ಈ ನಾಲ್ಕನ್ನು ಆಚರಿಸಿದವರು ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿಯನ್ನು ಹೊಂದುವದರಲ್ಲಿ ಸಂದೇಹವಿಲ್ಲ.

ಅಧಿಕಮಾಸದ ಶುಕ್ಲಪಕ್ಷದಲ್ಲಿ ಬರುವ ಕಾಮದಾ ಏಕಾದಶಿಯ ಮುನ್ನಾದಿನ ಸ್ನಾನಮಾಡಿ ಪುರುಷೋತ್ತಮನನ್ನು ಹೂವು, ತುಳಸಿ, ಧೂಪ, ದೀಪ, ವಿವಿಧ ನೈವೇದ್ಯ, ಮಂಗಳಾರತಿ ಮುಂತದವುಗಳಿಂದ ವಿಧಿಪೂರ್ವಕವಾಗಿ ಪೂಜಿಸಬೇಕು. ದಶಮಿ ಹತ್ತು ಪದಾರ್ಥಗಳನ್ನೂ, ಏಕಾದಶಿ ಹನ್ನೊಂದು ವಿಷಯಗಳನ್ನೂ, ದ್ವಾದಶಿ ಹನ್ನೆರಡು ಪದಾರ್ಥಗಳನ್ನೂ ತ್ಯಜಿಸಬೇಕು. ದಶಮಿಯ ದಿನ ಕಂಚಿನ ಪಾತ್ರೆಯ ಬಳಕೆ, ಮಾಂಸ, ಚೆನ್ನಂಗಿ ಬೇಳೆ, ಕಡಲೆ, ಹಾರುಕ ಧಾನ್ಯ, ಕಾಯಿಪಲ್ಯೆ, ಜೇನುತುಪ್ಪ, ಪರಾನ್ನ, ಎರಡನೇ ಹೊತ್ತು ಊಟ ಮತ್ತು ಮೈಥುನ ಈ ಹತ್ತನ್ನು ತ್ಯಜಿಸಬೇಕು. ದಶಮಿಯ ದಿನ ಈ ದಶಪದಾರ್ಥಗಳು ವರ್ಜ್ಯ ಆಗಿರುತ್ತವೆ. ಏಕಾದಶಿಯ ದಿನ ಏಕಾದಶ ಪದಾರ್ಥಗಳನ್ನು ತ್ಯಜಿಸಬೇಕು. ಜೂಜಾಟ, ನಿದ್ದೆ, ಎಲೆಅಡಿಕೆ, ಹಲ್ಲನ್ನು ಉಜ್ಜುವದು, ಪರನಿಂದೆ, ಚಾಡಿಹೇಳುವದು, ಕಳವು, ಹಿಂಸೆ, ರತಿಕ್ರೀಡೆ, ಕೋಪ, ಸುಳ್ಳುಮಾತು ಇವು ಹನ್ನೊಂದು ಏಕಾದಶಿಯ ದಿನ ವರ್ಜ್ಯ ಆಗಿರುತ್ತವೆ. ಇದರಂತೆ ದ್ವಾದಶಿಯ ದಿನ ದ್ವಾದಶ ವಿಷಯಗಳನ್ನು ಬಿಟ್ಟು ಬಿಡಬೇಕು. ಕಂಚಿನ ಪಾತ್ರೆಯಲ್ಲಿ ಊಟ, ಮಾಂಸ, ಚೆನ್ನಂಗಿಬೇಳೆ,

ಎಣ್ಣೆ, ಸುಳ್ಳು ಮಾತು, ವ್ಯಾಯಾಮ, ಪ್ರವಾಸ, ರಾತ್ರಿಊಟ, ಮೈಥುನ, ಎತ್ತನ್ನು ಏರುವದು. ಪರಾನ್ನ ಹಾಗೂ ತರಕಾರಿ ಈ ದ್ವಾದಶ ವಿಷಯಗಳನ್ನು ದ್ವಾದಶಿಯ ದಿನ ವರ್ಜಿಸಬೇಕು. ಹೀಗೆ ನಿಯಮಬದ್ಧನಾಗಿ ಏಕಾದಶಿ ಉಪವಾಸ ಮಾಡಿ ರಾತ್ರಿ ಜಾಗರಗೈದು ಪುರುಷೋತ್ತಮನನ್ನು ಪೂಜಿಸಿದರೆ ಕಾಮದಾ ಏಕಾದಶಿಯು ಮಾನವರ ಎಲ್ಲ ಕಾಮನೆಗಳನ್ನು ತನ್ನ ಹೆಸರಿಗೆ ತಕ್ಕಂತೆ ಪೂರ್ಣ ಮಾಡುತ್ತದೆ. ಈ ಏಕಾದಶಿಯ ಮಹಿಮೆಯನ್ನು ಕೇಳಿದವರು ಹೇಳಿದವರು ಪಾಪಮುಕ್ತರಾಗಿ ಸಾವಿರ ಗೋದಾನ ಮಾಡಿದ ಪುಣ್ಯಫಲವನ್ನು ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಅಧಿಕ ಮಾಸದ ಶುಕ್ಲಪಕ್ಷದ ಕಾಮದಾ ಏಕಾದಶಿಯ ಮಾಹಾತ್ಮ್ಯ ಎಂಬ ಅರವತ್ನಾಲ್ಕನೇಯ ಅಧ್ಯಾಯ ಮುಗಿದುದು*



## ಚಾತುರ್ಮಾಸ್ಯ ವ್ರತದ ವಿಧಿ

ಅಧ್ಯಾಯ - ೬೫

**ನಾರದ:-** ಮಹೇಶ್ವರ, ಚಾತುರ್ಮಾಸ್ಯ ಕಾಲದಲ್ಲಿ ಶ್ರೀಹರಿಯ ಶಯನ ಮಾಡಿದಾಗ ಯಾವ ಕರ್ತವ್ಯ ಕರ್ಮಗಳನ್ನು ಮಾಡಬೇಕು? ಆ ಕಾಲದಲ್ಲಿ ಷಡ್ರಸಗಳ ಪರಿತ್ಯಾಗ ಹಾಗೂ ನಖಕೇಶಗಳ ಧಾರಣೆ ಹಾಗೂ ಬೇರೆ ನಿಯಮಗಳಿಂದ ಯಾವ ಪುಣ್ಯಫಲವು ಬರುವದು? ಎಂದು ನನಗೆ ಹೇಳಿರಿ.

**ಮಹಾದೇವ:-** ಆಷಾಢ ಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಉಪವಾಸ ಮಾಡಿ ಚಾತುರ್ಮಾಸ್ಯ ಕಾಲದ ವ್ರತಗಳನ್ನು ಹಿಡಿಯಬೇಕು. ಕಾರ್ತೀಕ ಶುಕ್ಲ ದ್ವಾದಶಿಯವರೆಗೆ ಆಷಾಢ ಶುಕ್ಲ ಏಕಾದಶಿಯಿಂದ ನಾಲ್ಕು ತಿಂಗಳ ಕಾಲ ಶ್ರೀಹರಿಯು ಯೋಗನಿದ್ರೆಯನ್ನು ಸ್ವೀಕರಿಸುವದರಿಂದ ಈ ನಾಕು ತಿಂಗಳು ಯಜ್ಞ ಯಾಗಾದಿ ಕಾರ್ಯಗಳನ್ನಾಗಲಿ, ಮದುವೆ, ಮುಂಜಿ ಮುಂತಾದ ಬೇರೆ ಮಂಗಳ ಕರ್ಮಗಳನ್ನಾಗಲಿ, ಕ್ಷೇತ್ರಯಾತ್ರೆಗಳನ್ನಾಗಲಿ ಮಾಡಬಾರದು. ಅದಕ್ಕಾಗಿ ಚಾತುರ್ಮಾಸ್ಯ ಎಂದು ಹೆಸರು. ಆಗ ಪ್ರತ್ಯೇಕವಾದ ವ್ರತ ನಿಯಮಗಳನ್ನು ವಿಧಿಸಲಾಗಿದೆ. ಚಾತುರ್ಮಾಸ್ಯ ಕಾಲದಲ್ಲಿ ವಿದಿತವಾದ ಈ ವ್ರತ ನಿಯಮಗಳ ಅನುಷ್ಠಾನದಿಂದ ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯವು ದೊರಕುತ್ತದೆ.

ಸೂರ್ಯನು ಮಿಥುನರಾಶಿಗೆ ಬಂದಾಗ ಶ್ರೀಹರಿಯ ಶಂಖ, ಚಕ್ರ, ಗದಾಧಾರಿ ಯಾದ ಒಂದು ಮೂರ್ತಿಗೆ ಪಿತಾಂಬರವನ್ನು ಉಡಿಸಿ ಮಂಚದ ಮೇಲೆ ಶುಭ್ರವಾದ ಬೆಳ್ಳಗಿನ ವಸ್ತ್ರವನ್ನು ಹೊದಿಸಿ ದಿಂಬನ್ನು ಇಟ್ಟು ಮಲಗಿಸಬೇಕು. ಆ ಪ್ರತಿಮೆಗೆ ವಿಷ್ಣುಭಕ್ತರಾದವರು ಪಂಚಾಮೃತದಿಂದ ಅಭಿಷೇಕ ಮಾಡಿ ಗಂಧ, ಧೂಪ, ದೀಪ ಹಾರಗಳಿಂದ ಪೂಜಿಸಿ, ಪ್ರಾರ್ಥಿಸಬೇಕು.

**ಸುಕ್ತೇತ್ವೆ ್ತ ಜಗನ್ನಾಥಂ ಜಗತ್ ಸೂಕ್ತಂ ಭವೇವಿದಂ ।**
**ವಬುದ್ಧೇತ್ವೈಬುದ್ಧೇತ ಜಗತ್‌ಸರ್ವಂ ಚರಾಚರಂ ॥**

ಎಂದು ಪ್ರಾರ್ಥಿಸಿ ಆ ಪ್ರತಿಮೆಯನ್ನು ಮತ್ತೆ ಪರ್ಯಂಕದ ಮೇಲೆ ಮಲಗಿಸಬೇಕು. ಹೀಗೆ ಸ್ವಾಪ ಮುದ್ರೆಯಲ್ಲಿ ಪ್ರತಿಷ್ಠಿತವಾದ ಆ ಶ್ರೀಹರಿಯ

ಪ್ರತಿಮೆಯ ಎದುರಿಗೆ ನರರಾಗಲಿ, ನಾರಿಯರಾಗಲಿ ಭಕ್ತಿಯಿಂದ ಚಾತುರ್ಮಾಸ್ಯ ವ್ರತಗಳ ಪ್ರತಿಜ್ಞೆಯನ್ನು ಸ್ವೀಕರಿಸಬೇಕು.

ಈ ಚಾತುರ್ಮಾಸ್ಯ ಕಾಲದಲ್ಲಿ ಬೆಲ್ಲವನ್ನು ಬಿಟ್ಟರೆ ಮಧುರವಾಗಿ ಮಾತನಾಡಬಲ್ಲ ಪಾಂಡಿತ್ಯವು ಪ್ರಾಪ್ತವಾಗುವದು. ಎಣ್ಣೆಯನ್ನು ಬಿಟ್ಟರೆ ಸಂತಾನ ಸುಖ, ಚಾತುರ್ಮಾಸದಲ್ಲಿ ತುಪ್ಪವನ್ನು ಬಿಟ್ಟರೆ ಸುಂದರ ಶರೀರ. ವಾಸನೆ ಎಣ್ಣೆ ಲೇಪಿಸಿಕೊಳ್ಳುವದು ಬಿಟ್ಟರೆ ಸೌಭಾಗ್ಯ ಪ್ರಾಪ್ತಿ, ಹೂ ಮತ್ತು ಮಾಲೆಗಳನ್ನು ನಾಲ್ಕು ತಿಂಗಳು ಧರಿಸದಿದ್ದರೆ ವಿದ್ಯಾಧರ ಜನ್ಮ, ನಾಲ್ಕು ತಿಂಗಳ ಯೋಗಾಭ್ಯಾಸ ಮಾಡಿದರೆ ಬ್ರಹ್ಮಪದ ಪ್ರಾಪ್ತಿ. ಕಹಿ, ಸಿಹಿ, ಹುಳಿ, ಉಪ್ಪು, ಖಾರ, ವಗರು, ಈ ಷಡ್ರಸಗಳನ್ನು ಬಿಟ್ಟರೆ ಮಾನವನು ಮುಂದೆ ಎಂದೂ ಕುರೂಪಿ ಆಗುವದಿಲ್ಲ. ಅವನ ದೇಹ ದುರ್ಗಂಧದಿಂದ ನಾರುವದಿಲ್ಲ. ಚಾತುರ್ಮಾಸ್ಯದಲ್ಲಿ ತಾಂಬೂಲವನ್ನು ತ್ಯಜಿಸಿದರೆ ಭೋಗಭಾಗ್ಯಗಳು ದೊರಕುತ್ತವೆ. ಹಣ್ಣು ಕಾಯಿಗಳನ್ನು ತ್ಯಜಿಸಿದರೆ ಸಂತಾನ ಸುಖ. ಮುತ್ತಲ ಎಲೆಯಲ್ಲಿ ಊಟ ಮಾಡುವದರಿಂದ ಸುಖೋಪಭೋಗಗಳು ಸಿದ್ಧಿಸುವವು. ಹಾಲು, ಮೊಸರು ಬಿಟ್ಟರೆ ಭೂಲೋಕ, ಮೌನ ವ್ರತದಿಂದ ಸರ್ವಾಧಿಕಾರ, ನಾರಾಯಣ ಅಷ್ಟಾಕ್ಷರ ಮಂತ್ರ ಜಪದಿಂದ ಸ್ವರ್ಗಸೌಖ್ಯ, ನೆಲದ ಮೇಲೆ ಊಟ ಮಾಡುವದರಿಂದ ಸಾಮ್ರಾಜ್ಯಪ್ರಾಪ್ತಿ. ದೇವರ ಮನೆಯನ್ನು ಸಾರಿಸಿ ಗುಡಿಸಿದರೆ ವೈಕುಂಠಪ್ರಾಪ್ತಿ. ವಿಷ್ಣುವಿನ ಎದುರು ಗೀತವಾದ್ಯಗಳ ಸೇವೆ ಸಲ್ಲಿಸುವುದರಿಂದ ಗಂಧರ್ವಲೋಕ ಪ್ರಾಪ್ತಿ. ಪಂಚಗವ್ಯವನ್ನು ಪ್ರತಿದಿನ ಚಾತುರ್ಮಾಸ್ಯ ಕಾಲದಲ್ಲಿ ಪ್ರಾಶನಮಾಡಿದರೆ ಚಾಂದ್ರಾಯಣ ವ್ರತ ಮಾಡಿದ ಫಲ ಲಭಿಸುವದು. ಪ್ರತಿನಿತ್ಯ ವೇದ ವೇದಾಂತ, ಪಾಠ ಪ್ರವಚನ ಭಗವಂತನ ಪ್ರಬೋಧನ ಉತ್ಸವವನ್ನು ಮಾಡಿದರೆ ವಿಷ್ಣುಪದ ಪ್ರಾಪ್ತಿ. ತುಳಿಸಿ ಪೂಜೆಯಿಂದ ವಿಷ್ಣುಲೋಕ ಪ್ರಾಪ್ತಿ. ಮನೆಯಲ್ಲಿ ಅಥವಾ ನದಿಯಲ್ಲಿ ತಣ್ಣೀರಿನ ಸ್ನಾನದಿಂದ ನಿರ್ಮಲವಾದ ದೇಹಪ್ರಾಪ್ತಿ. ಕಲ್ಲಿನ ಮೇಲೆ ಊಟ ಮಾಡಿದರೆ ಪ್ರಯಾಗ ಸ್ನಾನ ಪುಣ್ಯ ಲಭಿಸುವದು. ಚಾತುರ್ಮಾಸ್ಯದಲ್ಲಿ ನೆಲದ ಮೇಲೆ ಮಲಗಿದಲ್ಲಿ ಮುಂದೆ ಹತ್ತು ಸಾವಿರ ವರ್ಷ ರೋಗ ಪೀಡಿತನು ಆಗುವದಿಲ್ಲ. ನಾಲ್ಕು ತಿಂಗಳ ಆಯಾಚಿತ ವೃತ್ತಿಯಿಂದ ಇರುವವನು ಮರುಭೂಮಿಯಲ್ಲಿ ಸರೋವರವನ್ನು ನಿರ್ಮಿಸಿದ ಪುಣ್ಯವನ್ನು ಪಡೆಯುತ್ತಾನೆ.

ಚಾತುರ್ಮಾಸ್ಯದಲ್ಲಿ ಮುಖ್ಯವಾಗಿ ಪ್ರಾಣಿ ಹಿಂಸೆಯನ್ನು ಸರ್ವಥಾ ಮಾಡಕೂಡದು. ಅಹಿಂಸೆ, ದಾನ, ದಯಾ, ಇಂದ್ರಿಯನಿಗ್ರಹ, ಇವು ನಾಲ್ಕು ಈ ನಾಲ್ಕು ತಿಂಗಳಲ್ಲಿ ಪಾಲಿಸಬೇಕಾದ ಮುಖ್ಯ ಧರ್ಮಗಳು. ಚಾತುರ್ಮಾಸ್ಯ ಕಾಲದಲ್ಲಿ ಜೇನುತುಪ್ಪವನ್ನು ಪರಿತ್ಯಾಗ ಮಾಡಬೇಕು. ಈ ಕಾಲದಲ್ಲಿ ತುಳಸಿ, ಎಳ್ಳು ದರ್ಭೆಗಳಿಂದ ತರ್ಪಣ ನೀಡಿದವರಿಗೆ ಕೋಟಿಪಟ್ಟು ಅಧಿಕಪುಣ್ಯ, ವೇದರುಕ್ಕುಗಳನ್ನು ಪ್ರತಿ ದಿನವೂ ಒಂದು ಅಥವಾ ಅರ್ಧ ರುಕ್ಕನ್ನಾದರೂ ವಿಷ್ಣುವಿನ ಮುಂದೆ ಪಠಿಸಬೇಕು. ಮತ್ತು ಮೈಥುನವನ್ನು ತ್ಯಜಿಸಬೇಕು. ಹಾಲು, ಮೊಸರು, ಮಜ್ಜಿಗೆ, ಬೆಲ್ಲ, ತರಕಾರಿ ಮುಂತಾದವುಗಳನ್ನು ಯಥಾಶಕ್ತಿ ವರ್ಜಿಸಬೇಕು. ಪ್ರತಿದಿನವೂ ನೆಲ್ಲಿಯಕಾಯಿಯನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಸಂಧ್ಯಾಕಾಲದಲ್ಲಿ ನಾಲ್ಕು ತಿಂಗಳ ಮೌನವನ್ನು ಆಚರಿಸಬೇಕು. ಭೋಜನ ಕಾಲದಲ್ಲಿಯೂ ಮೌನವನ್ನು ಆಚರಿಸುವದರಿಂದ ಹಾಗೂ ಸ್ವಯಂಪಾಕದ

ಭೋಜನ ಮಾಡುವದರಿಂದ ಹತ್ತುಸಾವಿರ ವರ್ಷ ಇಂದ್ರಲೋಕದಲ್ಲಿ ಗೌರವವನ್ನು ಹೊಂದುತ್ತಾನೆ. ಹರಟೆಹೊಡೆಯುತ್ತ ಊಟಮಾಡಿದರೆ ಆ ಅನ್ನವು ಅಶುಭ ಆಗುವದು. ಆದುದರಿಂದ ಮೌನ ಭೋಜನವು ಪ್ರಶಸ್ತವಾಗಿದೆ. ಚಾತುರ್ಮಾಸ್ಯದಲ್ಲಿ ಸುಳ್ಳು ಮಾತು, ಕೋಪ, ಕರ್ಕಶತೆ, ಪರ್ವಕಾದಲ್ಲಿ ಮೈಥುನ, ಅಭ್ಯಂಗ, ಮಾಂಸ, ಮದ್ಯ ಮುಂತಾದ ವಿಲಾಸ ಸಾಮಗ್ರಿಗಳನ್ನು ಪರಿತ್ಯಾಗ ಮಾಡಿದದವರು ಅಶ್ವಮೇಧಯಾಗ ಮಾಡಿದ ಪುಣ್ಯವನ್ನು ಹೊಂದುತ್ತಾರೆ. ಶ್ರೀಹರಿಯು ಶಯನಮಾಡಿದಾಗ ಶಕ್ಯವಾದ ನಿಯಮಗಳನ್ನೂ ಯಥಾಶಕ್ತಿ ದಾನಗಳನ್ನೂ ಹಿಂದೆ ಹೇಳಿದ ಕೆಲವಾರು ವ್ರತಗಳ್ನೂ ಅವಶ್ಯವಾಗಿ ಮಾಡಬೇಕು. ಇಲ್ಲದಿದ್ದರೆ ಮಾನವನು ಮಾಡಿದ ಪುಣ್ಯರಾಶಿಯೆಲ್ಲವೂ ನಾಶವಾಗಿ ಹೋಗುತ್ತದೆ.

**ನಾರದ:-** ವಿಶ್ವೇಶ್ವರ ಬ್ರಹ್ಮಚರ್ಯ ಎಂದರೆ ಏನು? ಅದರಿಂದ ಗೋವಿಂದನ ಪರಿತುಷ್ಟಿಯು ಹೇಗೆ ಆಗುವದು?

**ಮಹಾದೇವ:-** ತನ್ನ ಪತ್ನಿಯಲ್ಲಿಯೇ ಆಸಕ್ತವಾದವನು ಬ್ರಹ್ಮಚಾರಿ ಎಂದು ಪಂಡಿತರಿಂದ ಕರೆಯಲ್ಪಡುತ್ತಾನೆ. ತನ್ನ ಹೆಂಡತಿಯನ್ನು ಬಿಟ್ಟವನು ಚಾಂಡಾಲನಿಗಿಂತ ಪಾಪಿ ಎನಿಸುತ್ತಾನೆ. ಋತುಕಾಲದಲ್ಲಿ ಭಾರ್ಯಾಗಮನವು ಒಂದು ಶ್ರೇಷ್ಠ ಬ್ರಹ್ಮಚರ್ಯ ಎನಿಸುತ್ತದೆ. ದೋಷರಹಿತಳಾದ ಹಾಗೂ ಪತಿಭಕ್ತಳಾದ ಹೆಂಡತಿಯನ್ನು ತ್ಯಜಿಸಿದ ಪಾಪಿಯು ಶಿಶುಹತ್ಯಾ ಪಾತಕವನ್ನು ಹೊಂದುತ್ತಾನೆ.

ಚಾತುರ್ಮಾಸ್ಯ ಕಾಲದಲ್ಲಿ ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ, ದೇವತಾರ್ಚನ, ಪುರಾಣ ಶ್ರವಣ ಮುಂತಾದವುಗಳನ್ನು ಮಾಡಿದವರು ವಿಶೇಷವಾಗಿ ಶ್ರೀಹರಿಯ ನಾಮ ಜಪ ಮಾಡಿದವರು ಹರಿಯ ಮಂತ್ರ ಸ್ತೋತ್ರಗಳನ್ನು ಪಠಿಸಿದವರು ಭಕ್ತಿಯಿಂದ ವಿಷ್ಣುವಿನ ಪೂಜೆಗೈದವರು ಸರ್ವ ಪಾಪಗಳಿಂದ ಮುಕ್ತರಾಗಿ ವಿಷ್ಣುವಿನ ಲೋಕವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಚಾತುರ್ಮಾಸ್ಯ ವ್ರತದ ವಿಧಿ ಎಂಬ ಆರವತ್ತೈದನೇಯ ಅಧ್ಯಾಯ ಮುಗಿದುದು*

—o—

## ಚಾತುರ್ಮಾಸ್ಯ ವ್ರತದ ಉದ್ಯಾಪನ ವಿಧಿ

## ಅಧ್ಯಾಯ - ೬೬

**ನಾರದ:-** ಚಾತುರ್ಮಾಸ್ಯ ವ್ರತಗಳ ಉದ್ಯಾಪನ ವಿಧಿಯನ್ನು ನಿರೂಪಿಸಿರಿ.

**ಮಹಾದೇವ :-**ಯಾವುದೇ ವ್ರತವನ್ನು ಮಾಡಿ ಉದ್ಯಾಪನ ಮಾಡದಿದ್ದರೆ ಅವನಿಗೆ ಅದರ ಪೂರ್ಣ ಫಲವು ಬರುವದಿಲ್ಲ. ಮತ್ತು ಆ ವ್ರತವನ್ನು ಮಾಡುವಾಗ ಏನಾದರೂ ಲೋಪ, ದೋಷ ಒದಗಿದ್ದರೆ ಕುಷ್ಠರೋಗವು ತಗಲುವದು. ಮತ್ತು ಕುರುಡತನವು ಬರುವದು. ಆದುದರಿಂದ ಚಾತುರ್ಮಾಸ್ಯದಲ್ಲಿ ಆಚರಿಸಿದ ಎಲ್ಲ ವ್ರತಗಳಿಗೂ ಉದ್ಯಾಪನೆಯನ್ನು ಮಾಡಬೇಕು.

ಚಾತುರ್ಮಾಸ್ಯ ಪ್ರಾರಂಭದಲ್ಲಿ ಈ ವ್ರತಗಳನ್ನು ಹಿಡಿದು ಯಥಾವಿಧಿ ನಾಲ್ಕು ತಿಂಗಳು ಅವುಗಳನ್ನು ಪಾಲನೆ ಮಾಡಿ ಕೊನೆಗೆ ಕಾರ್ತೀಕ ಶುದ್ಧ ದ್ವಾದಶಿಯ ದಿನ ಜಗನ್ನಾಥನು ಶಯನದಿಂದ ಉಚ್ಚರಿತನಾದಾಗ ಬ್ರಾಹ್ಮಣರ ಹತ್ತಿರ ಹೋಗಿ ದೇವರನ್ನು ಪ್ರಾರ್ಥಿಸಿ ಅವರಿಗೆ ವಿಶೇಷವಾಗಿ ದಾನಗಳನ್ನು ನೀಡಬೇಕು.

ಚಾತುರ್ಮಾಸ್ಯದಲ್ಲಿ ನಾಲ್ಕು ತಿಂಗಳು ಎಣ್ಣೆಯನ್ನು ತಿನ್ನುವದನ್ನು ಬಿಟ್ಟವರು ತುಪ್ಪವನ್ನು ದಾನಕೊಡಬೇಕು. ತುಪ್ಪವನ್ನು ಬಿಟ್ಟಿದ್ದರೆ ಹಾಲನ್ನು ದಾನ ಕೊಡಬೇಕು. ಚಾತುರ್ಮಾಸ್ಯದಲ್ಲಿ ಮೌನವ್ರತವನ್ನು ಆಚರಿಸಿದರೆ ಎಳ್ಳಿನ ಉಂಡೆಗಳನ್ನು ಬಂಗಾರದೊಂದಿಗೆ ದಾನ ನೀಡಬೇಕು. ಚಾತುರ್ಮಾಸ್ಯ ಕಾಲದಲ್ಲಿ ಅನ್ನವನ್ನು ಸುವರ್ಣದೊಂದಿಗೆ ನೀಡಬೇಕು. ಊಟದಲ್ಲಿ ಮೊಸರು ಅನ್ನವನ್ನು ಉಣಿಸಬೇಕು. ನಾಲ್ಕು ತಿಂಗಳು ಮುತ್ತಲ ಎಲೆಯಲ್ಲಿ ಊಟಮಾಡಿದವನು ಉದ್ಯಾಪನೆಯ ದಿನ ತುಪ್ಪ ತುಂಬಿದ ಪಾತ್ರೆಯನ್ನು ದಾನಕೊಡಬೇಕು. ಚಾತುರ್ಮಾಸ್ಯದಲ್ಲಿ ರಾತ್ರಿ ಮಾತ್ರ ಭೋಜನ ಮಾಡಿದವರು ಬ್ರಾಹ್ಮಣರಿಗೆ ಷಡ್ರಸಗಳಿಂದ ಕೂಡಿದ ಪಕ್ವಾನ್ನವನ್ನು ಮಾಡಿ ಹಾಕಬೇಕು. ಉದ್ದು ಬಿಟ್ಟವರು ಕರು ಸಹಿತ ಗೋವನ್ನೂ, ನೆಲ್ಲಿಯ ಬೀಜ, ಎಲೆಗಳಿಂದ ನಿತ್ಯಸ್ನಾನ ಮಾಡಿದವರು ಒಂದು ಮಾಸಿ ಬಂಗಾರವನ್ನೂ, ಫಲಾಹಾರದ ವ್ರತಗಳನ್ನು ಮಾಡಿದವರು ಹಣ್ಣು ಹಂಪಲಗಳನ್ನೂ, ನೆಲದ ಮೇಲೆ ಶಯನದ ವ್ರತವನ್ನು ಆಚರಿಸಿದವರು ದಿಂಬು ಸಹಿತವಾದ ಅರಳೆಯ ಗಾದಿಯನ್ನೂ, ಬ್ರಹ್ಮಚರ್ಯ ಪಾಲಿಸಿದವರು ದಂಪತಿ ಭೋಜನವನ್ನೂ, ನಖಕೇಶ ವ್ರತಪಾಲಿಸಿದವರು ಪಾದರಕ್ಷೆಗಳನ್ನೂ, ಅಮಿಷತ್ಯಾಗ ಮಾಡಿದವರು ಕಪಿಲಧೇನುವನ್ನೂ, ದೀಪ ದಾನ ಮಾಡಿದವರು ಬಂಗಾರದ ದೀಪವನ್ನೂ, ಕಾಯಿಪಲ್ಲೆಯನ್ನು ಬಿಟ್ಟವರು ಕಾಯಿಪಲ್ಲೆಯನ್ನೂ, ಉದ್ದನ್ನು ಬಿಟ್ಟವರು ಬಂಗಾರದ ಒಂದು ಉದ್ದನ್ನೂ, ಮೈಥುನವನ್ನು ತ್ಯಜಿಸಿದವರು ಬೆಳ್ಳಿಯನ್ನೂ, ಎಲೆ ಅಡಿಕೆ ಬಿಟ್ಟವರು ಸುವರ್ಣ ನಾಣ್ಯ ಸಹಿತವಾದ ತಾಂಬೂಲವನ್ನೂ ಯೋಗ್ಯರಾದ ದ್ವಿಜರಿಗೆ ದಾನ ಕೊಡಬೇಕು. ಈ ಎಲ್ಲ ದಾನಗಳನ್ನು ಸ್ನಾನಮಾಡಿ, ವಿಷ್ಣುವನ್ನ ಪೂಜಿಸಿ, ದೇವರ ಎದುರಿಗೆ ಯೋಗ್ಯ ದ್ವಿಜರಿಗೆ ನೀಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಚಾತುರ್ಮಾಸ್ಯ ವ್ರತದ ಉದ್ಯಾಪನ ವಿಧಿ ಎಂಬ ಅರವತ್ತಾರನೇಯ ಅಧ್ಯಾಯ ಮುಗಿದುದು*

**ನಾರದ:-** ಸುರೋತ್ತಮನಾದ ಮಹಾದೇವ, ಯಮಲೋಕದಲ್ಲಿ ವೈತರಣೀ ಎಂಬ ಒಂದು ರಕ್ತದ ನದೀ ಇದೆಯಂತೆ. ಅದನ್ನು ದಾಟುವದು ಪ್ರಾಣಿಗಳಿಗೆ ದುಸ್ತರ ಎಂದು ಕೇಳಿದ್ದೇನೆ. ಯಮಲೋಕವನ್ನು ನೆನೆದರೇ ಮೈನಡುಗುತ್ತದೆ. ಈ ನರಕ ದುಃಖದಿಂದ ಬಿಡುಗಡೆಯಾಗಲು ಏನು ಮಾಡಬೇಕು? ಎಂಬುದನ್ನು ತಿಳಿಸು.

**ಮಹಾದೇವ:-** ನಾನು ಹಿಂದೆ ಒಂದು ಸಲ ದ್ವಾರಕಾಪಟ್ಟಣಕ್ಕೆ ಹೋಗಿದ್ದೆ. ಅಲ್ಲಿಯ ಉಪ್ಪಿನ ಕಡಲಿನಲ್ಲಿ ಸ್ನಾನಮಾಡಿದೆ. ಆಗ ಅಲ್ಲಿ ಮುದ್ಗಲ ಎಂಬ ಮುನಿಯು ನನಗೆ ಕಂಡುಬಂದ. ಅವನೊಬ್ಬ ಉರಿಯುವ ಸೂರ್ಯ. ಬೆಳಗುವ ಬೆಂಕಿ. ನನ್ನನ್ನು ನೋಡಿ ನಮಸ್ಕರಿಸಿ ನುಡಿದ. ಅವನ ಮುಖದ ಮೇಲೆ ಎದ್ದು ಕಾಣುತ್ತಿತ್ತು ಆಶ್ಚರ್ಯದ ಚರ್ಯೆ.

**ಮುದ್ಗಲ:-** ಪರಮೇಶ್ವರ, ನಾನು ಅಕಸ್ಮಾತ್ತಾಗಿ ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿದ್ದೆ. ನನ್ನ ಅಂಗಾಗಗಳನ್ನೆಲ್ಲ ಯಮದೂತರು ಹಿಡಿದುಕೊಂಡಿದ್ದರು. ಅವರು ಮುಟ್ಟಿದ ನನ್ನ ಅವಯವಗಳು ಈಗಲೂ ಉರಿಯುತ್ತಿವೆ. ಆ ಯಮಧರ್ಮನ ಕ್ರೂರ ಭಟರು ನನ್ನನ್ನು ಬಲಾತ್ಕಾರದಿಂದ ಜಗ್ಗುತ್ತ ಯಮನ ಬಳಿಗೆ ಕರೆದುಕೊಂಡು ಹೋದರು. ಪ್ರೇತರಾಜನ ಸಭೆಯಲ್ಲಿ ಒಯ್ದು ನನ್ನನ್ನು ನಿಲ್ಲಿಸಿದರು. ನಾನು ಕಣ್ಣು ತೆರೆದು ಯಮನನ್ನು ನೋಡಿದೆ. ಕೆಂಪಡರಿದ ಕಣ್ಣು, ಕಪ್ಪು ಕಪ್ಪಾದ ಮುಖ, ರೌದ್ರ ಆಕಾರ, ಮೃತ್ಯು, ವ್ಯಾಧಿ, ವಾತ, ಪಿತ್ತ ಮುಂತಾದ ರೋಗಗಳ ಪರಿವಾರ, ಭಯಂಕರ ವಿಕಾರ ಆಕಾರವುಳ್ಳ ಅನೇಕ ರಾಕ್ಷಸರೂ ಕೈಯಲ್ಲಿ ರುಂಡ, ಮುಂಡ, ತಲೆಬುರುಡೆಗಳನ್ನು ಹಿಡಿದ ಅನೇಕ ದಾನವರೂ ಆ ಯಮನ ಆಸ್ಥಾನದಲ್ಲಿ ಕುಳಿತಿದ್ದರು. ಧರ್ಮಾಧಿಕಾರಿಗಳೂ, ಚಿತ್ರಗುಪ್ತ ಮೊದಲಾದ ಲೇಖಕರೂ ಕೈ ಕಟ್ಟಿಕೊಂಡು, ಯಮನ ಎದುರು ನಿಂತುಕೊಂಡಿದ್ದರು. ಆಗ ಯಮಧರ್ಮನು ತನ್ನ ಕಿಂಕರರನ್ನು ಕುರಿತು ಕೇಳಿದ.

**ಯಮ:-** ದೂತರೇ, ನೀವು ಮುದ್ಗಲ ಎಂಬ ಎರಡು ವ್ಯಕ್ತಿಗಳ ಒಂದೇ ಹೆಸರಿನಿಂದ ಭ್ರಾಂತರಾಗಿದ್ದೀರಿ. ಕೌಂಡಿನ್ಯ ಗ್ರಾಮದಲ್ಲಿಯ ಭೀಮಕನ ಮಗನಾದ ಮುದ್ಗಲ ಎಂಬ ಕ್ಷತ್ರಿಯನು ಆಯುಷ್ಯ ತೀರಿ ಈಗ ಮರಣೋನ್ಮುಖನಾಗಿದ್ದಾನೆ. ಅವನನ್ನೇ ನೀವು ಇಲ್ಲಿ ಈಗ ತರಬೇಕಾಗಿದ್ದಿದು. ಅದರ ಬದಲಾಗಿ ಈಗ ನೀವು ಅದೇ ಮುದ್ಗಲ ಎಂಬ ಹೆಸರಿನ ಒಬ್ಬ ಋಷಿಯನ್ನು ಹೆಸರಿನ ಸಾಮ್ಯದಿಂದ ಈ ಯಮಲೋಕಕ್ಕೆ ಎಳೆದು ತಂದಿದ್ದೀರಿ. ಆದುದರಿಂದ ಈ ಮುದ್ಗಲ ಮಹರ್ಷಿಯನ್ನು ಬಿಟ್ಟುಬಿಡಿರಿ.

**ಯಮಕಿಂಕರರು:-** ಸ್ವಾಮಿ, ನಾವು ಕೌಂಡಿನ್ಯ ಗ್ರಾಮಕ್ಕೆ ಹೋದೆವು. ಅಲ್ಲಿ ಆಯುಷ್ಯ ಕ್ಷೀಣನಾದವರು ಯಾರು ಕಂಡುಬರಲಿಲ್ಲ. ಆಗ ನಾವು ಮುದ್ಗಲ ಎಂಬ ಹೆಸರಿನವನು ಇವನೇ ಕ್ಷೀಣಾಯುಷ್ಯನು ಆಗಿರಬಹುದು ಎಂದು ತಿಳಿದು ಎಳೆದು ತಂದೆವು. ಭ್ರಾಂತರಾದ ನಮಗೆ ಯಾರು ಆಯುಷರು, ಯಾರು ನಿರಾಯುಷರು ಎಂದು ತಿಳಿಯಲೇ ಇಲ್ಲ. ಭೀಮಕನ ಮಗನಾದ ಮುದ್ಗಲ ಎಂಬ ಹೆಸರಿನ ಬೇರೊಬ್ಬ ಕ್ಷತ್ರಿಯನ ಆಯುಷ್ಯ ಕ್ಷೀಣವಾಗಿದ್ದರೆ ಅವನು ಏಕೆ ನಮಗೆ ಕಂಡು ಬರಲಿಲ್ಲ?

**ಯಮ:-** ವೈತರಣೀ ಎಂಬ ದ್ವಾದಶಿಯ ದಿನ ಸ್ನಾನ, ಹರಿಪೂಜೆ, ಹಾಗೂ ಉಪವಾಸದ ಪಾರಣೆ ಮಾಡಿದವರು ಪ್ರಾಯಃ ಯಮದೂತರ ಕಣ್ಣಿಗೆ ಬೀಳಲಾರರು. ಮತ್ತು ಉಜ್ಜಯನಿಯಲ್ಲಿಯೂ, ಪ್ರಯಾಗದಲ್ಲಿಯೂ ಹಾಗೂ ಯಮುನಾ ನದಿಯಲ್ಲಿಯೂ ಮರಣ ಹೊಂದಿದವರೂ ಹಸು, ಎಳ್ಳು, ಆನೆ, ಬಂಗಾರ ಮುಂತಾದವುಗಳನ್ನು ದಾನ ನೀಡಿದವರೂ ಯಮಕಿಂಕರರ ಕಣ್ಣಿಗೆ ಬೀಳಲಾರರು.

**ಯಮದೂತರು:-** ಹಾಗಿದ್ದರೆ ಅದು ಯಾವ ವ್ರತ? ಅಂದು ಏನನ್ನು ಮಾಡಬೇಕು? ಅದನ್ನು ಯಾರು ಮಾಡಿದರು? ಇದೆಲ್ಲವನ್ನೂ ವಿಸ್ತಾರವಾಗಿ ನಮಗೆ ನಿರೂಪಿಸಿರಿ.

**ಯಮ:-** ಮಾರ್ಗಶೀರ್ಷ ಮಾಸದಲ್ಲಿ ಎಲ್ಲ ಕೃಷ್ಣಪಕ್ಷದ ಏಕಾದಶಿ ದಿನಗಳಂದು ಈ ವೈತರಣೀ ವ್ರತವನ್ನು ಒಂದು ವರ್ಷದವರೆಗೆ ಮಾಡಬೇಕು. ಕೃಷ್ಣ ಪಕ್ಷ ಏಕಾದಶಿ ದಿನ ಯಾವುದೇ ತಿಂಗಳಲ್ಲಿ ಈ ನಿಯಮವನ್ನು ಹಿಡಿದು.

**ಆದ್ಯಮೇ ದೇವ ದೇವೇಶ ಉಪವಾಸೋ ಭವಿಷ್ಯತಿ ।**
**ದ್ವಾದಶ್ಯಾಂ ಪೂಜ್ಯ ಗೋವಿಂದಂ ಭಕ್ತಿಭಆವ ಸಮನ್ವಿತಂ ।**
**ಸ್ವಪ್ನೆ ಇಂದ್ರಿಯ ವೈಕಲ್ಯಾದ್ಭೋಜನಂ ಯಚ್ಚ ಮೈಥುನಂ ।**
**ತತ್ಸರ್ವಂ ಕ್ಷಮೇಮೇ ದೇವ ಕೃಪಾಂ ಕೃತ್ವಾ ಮಮೋ ಪರಿ ।**

ದೇವಾಧಿದೇವತೆಗಳಿಗೆಲ್ಲ ಒಡೆಯನಾದ ಶ್ರೀಹರಿಯೇ, ನಾನು ಇಂದು ಉಪವಾಸ ಮಾಡುತ್ತೇನೆ ದ್ವಾದಶಿಯ ದಿನ ಭಕ್ತಿಯಿಂದ ಗೋವಿಂದನನ್ನು ಪೂಜಿಸಿ ಪಾರಣೆಯನ್ನು ಮಾಡುತ್ತೇನೆ. ಈ ಮೂರು ದಿನಗಳಲ್ಲಿ ನನ್ನ ಇಂದ್ರಿಯಗಳ ದೋಷದಿಂದ ಕನಸಿನಲ್ಲಿ ಭೋಜನ ಅಥವಾ ಮೈಥುನ ಮುಂತಾದವುಗಳನ್ನು ಮಾಡಿದ ಅಪರಾಧಗಳು ಘಟಿಸಿದ್ದರೆ ಅದೆಲ್ಲವನ್ನೂ ನನ್ನ ಮೇಲೆ ದಯೆಯನ್ನು ತೋರಿ ಕ್ಷಮೆಮಾಡು. ಹೀಗೆ ಪ್ರಾರ್ಥಿಸಿ ಮಧ್ಯಾಹ್ನದಲ್ಲಿ ಯಾವುದಾದರೂ ನದೀ ಸರೋವರಗಳಿಗೆ ತೀರ್ಥಸ್ನಾನ ಮಾಡಲು ಹೋಗಬೇಕು. ಹೋಗುವಾಗ ಮಣ್ಣು, ಗೋಮಯ, ಎಳ್ಳು ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ಅಶ್ವಕ್ರಾಂತೇ, ಮೃತಿಕೇಹರ ಮುಂತಾದ ಮಂತ್ರಗಳನ್ನು ಹೇಳಿ ಮೃತ್ತಿಕಾ ಸ್ನಾನವನ್ನೂ, ತಿಲ ಸ್ನಾನವನ್ನೂ ಮಾಡಬೇಕು. ಅನಂತರ ತುಳಸೀ ದಳವನ್ನು ತಲೆಯ ಮೇಲಿಟ್ಟುಕೊಂಡು ಭಗವಂತನ ನಾಮೋಚ್ಚಾರಣೆ ಮಾಡುತ್ತ ಅವಗಾಹನೆ ಮಾಡಿ ಸ್ನಾನವಿಧಿಯನ್ನು ಪೂರೆಯಿಸಬೇಕು. ಅನಂತರ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಟ್ಟು ವಿಷ್ಣುವನ್ನು ಪೂಜಿಸಬೇಕು. ಛಿದ್ರವಿಲ್ಲದ ಒಂದು ಕೊಡವನ್ನು ಸ್ಥಾಪಿಸಿ ಅದರಲ್ಲಿ ಐದು ಚಿಗುರೆಲೆಗಳ್ನೂ ಐದು ರತ್ನಗಳನ್ನೂ ಹಾಕಿ ಅದಕ್ಕೆ ಸುಗಂಧಿ ಹೂವಿನ ಮಾಲೆಯನ್ನು ಇಡಿಸಿ ನೀರು ತುಂಬಿ ಅದರ ಮೇಲೆ ಒಂದು ತಾಮ್ರದ ಪಾತ್ರವನ್ನು ಇಡಬೇಕು. ಅದರ ನಟ್ಟನಡುವೆ ಶ್ರೀಧರನ ಮೂರ್ತಿಯನ್ನು ಸ್ಥಾಪಿಸಿ ಪೂರ್ಣವಿಧಿಯಿಂದ ಪೂಜೆಯನ್ನು ಮಾಡಬೇಕು. ಅದರ ಮುಂದೆ ಮಣ್ಣು ಹಾಗೂ ಗೋಮಯದಿಂದ ಸಾರಿಸಿ ಅಕ್ಕಿ ಹಿಟ್ಟಿನಿಂದ ಮಂಡಲವನ್ನು ರಚಿಸಬೇಕು. ಅದರಲ್ಲಿ ಯಮಧರ್ಮನ ಕೈ ಕಾಲು ಅವಯವಗಳಿಂದ ಒಡಗೂಡಿದ ಮೂರ್ತಿಯನ್ನು ಮಾಡಿ ಆ ಯಮಧರ್ಮನ ಮುಂದೆ ತಾಮ್ರದ ಒಂದು ವೈತರಣೀ ನದಿಯನ್ನು ಇರಿಸಬೇಕು. ಮತ್ತು ಆ ಯಮನ ಪ್ರತಿಮೆಯಲ್ಲಿಯೂ ಹಾಗೂ ವಿಷ್ಣುವಿನ ಪ್ರತಿಮೆಯಲ್ಲಿಯೂ ಅವರಿಬ್ಬರನ್ನೂ ಭಕ್ತಿಯಿಂದ ಕೆಳಗಿನ ಮಂತ್ರಗಳನ್ನು ಹೇಳಿ ಆವಾಹಿಸಬೇಕು.

**ಆವಾಹಯಾಮಿ ದೇವೇಶಂ ಯಮಂ ವೈ ವಿಶ್ವರೂಪಿಣಂ ।**

ಎಂಬ ಮಂತ್ರದಿಂದ ಯಮನನ್ನು ಆ ಪ್ರತಿಮೆಯಲ್ಲಿ ಆವಾಹಿಸಬೇಕು. ಅದರಂತೆ

**ಈಹಾಭ್ಯೇಹಿ ಮಹಾಭಾಗ ಸಾನಿಧ್ಯಂ ಕುರು ಕೇಶವ ।**
**ಇದಂ ಪಾದ್ಯಂ ಶ್ರೀಯಃಕಾಂತ ಸೋಪವಿಷ್ಟಂ ಹರೇ ಪ್ರಭೋ ॥**

ಮಹಾನುಭಾವನಾದ ಕೇಶವನೇ ಇಲ್ಲಿಗೆ ಬಾ. ಈ ಪ್ರತಿಮೆಯಲ್ಲಿ ಸನ್ನಿಹಿತನಾಗು. ಇಕೋ ನಿನಗೆ ಅರ್ಘ್ಯ. ಇದೋ ನಿನಗೆ ಪಾದ್ಯ. ಲಕ್ಷ್ಮೀಕಾಂತನಾದ ಶ್ರೀಹರಿಯೇ ನಿನಗಾಗಿ ಇಲ್ಲಿ ಒಳ್ಳೇ ಆಸನವನ್ನು ಇರಿಸಿದ್ದೇನೆ. ವಿಶ್ವವನ್ನೇ ರಕ್ಷಣೆ ಮಾಡಲು ಬದ್ಧ ಕಂಕಣನಾದ ನೀನು ನನ್ನ ಮೇಲೆ ದಯೆಯನ್ನು ತೋರು ಎಂದು ಪ್ರಾರ್ಥಿಸಬೇಕು.

ಅನಂತರ

**ಭೂತಿದಾಯ ನಮಃ ಪಾದೌ ಪೂಜಯಾಮಿ**

ಎಂದು ಪಾದಗಳನ್ನು ಪೂಜಿಸಬೇಕು.

**ಅಶೋಕಾಯ ನಮಃ ಜಾನುನೀ ಪೂಜಯಾಮಿ**

ಎಂದು ಮೊಣಕಾಲುಗಳನ್ನೂ

**ಶಿವಾಯ ನಮಃ**

ಎಂದು ತೊಡೆಗಳನ್ನೂ

**ವಿಶ್ವಮೂರ್ತಯೇ ನಮಃ**

ಎಂದು ಸೊಂಟವನ್ನೂ

**ಕಂದರ್ಪಾಯ ನಮಃ**

ಎಂದು ಗುಹ್ಯೇಂದ್ರಿಯವನ್ನೂ

**ಆದಿತ್ಯಾಯ ನಮಃ**

ಎಂದು ವೃಷಣವನ್ನೂ

**ದಾಮೋದರಾಯ ನಮಃ**

ಎಂದು ಹೊಟ್ಟೆಯನ್ನೂ

**ವಾಸುದೇವಾಯ ನಮಃ**

ಎಂದು ಎರಡೂ ಸ್ತನಗಳನ್ನೂ

**ಶ್ರೀಧರಾಯ ನಮಃ**

ಎಂದು ಮುಖವನ್ನೂ

**ಕೇಶವಾಯ ನಮಃ**

ಎಂದು ಕೂದಲುಗಳನ್ನೂ

**ಶಾರಂಗಧರಾಯ ನಮಃ**

ಎಂದು ಬೆನ್ನನ್ನೂ

**ವರದಾಯ ನಮಃ**

ಎಂದು ಕಾಲುಗಳನ್ನೂ

**ಶಂಖ, ಚಕ್ರ, ಗದಾ, ಪದ್ಮ, ಖಡ್ಗ, ಪರಶುಪಾಣಯೇ ನಮಃ**
ಎಂದು ಶಂಖ ಚಕ್ರಾದಿ ಆಯುಧಗಳನ್ನೂ

**ಸರ್ವಾತ್ಮನೇ ತುಭ್ಯಂ ನಮಃ**
ಎಂದು ಪೂಜಿಸಬೇಕು. ಅನಂತರ

**ಮಚ್ಛಂ ಕೂರ್ಮಂ ವರಾಹಂಚ ನಾರಸಿಂಹಂಚ ವಾಮನಂ**
**ರಾಮಂ ರಾಮಂಚ ಕೃಷ್ಣಂಚ ಬುದ್ಧಂ ಕಲ್ಕ್ಯಂ ನಮೋಸ್ತುತೇ**
ಎಂದು ಮಂತ್ರ ಹೇಳಿ ಮಚ್ಛ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಮುಂತಾದ ದಶಾವತಾರ ರೂಪಿಯಾದ ಭಗವಂತನೇ ನಿನಗೆ ನಮೋನಮಃ ಎಂದು ಹೇಳಿ ವಿಷ್ಣುವಿನ ಧ್ಯಾನವನ್ನು ಮಾಡಿ ಪೂಜೆಗೈಯಬೇಕು.

ಅನಂತರ ಯಮಧರ್ಮನನ್ನು

**ಧರ್ಮರಾಜ ನಮಸ್ತೇಸ್ತು ಧರ್ಮರಾಜ ನಮೋಸ್ತುತೇ**
**ದಕ್ಷಿಣಾಧಿಪತೇ ತುಭ್ಯಂ ನಮೋ ಮಹಿಷವಾಹನ**
ಎಂದು ಯಮಧರ್ಮನ್ನು ಪ್ರಾರ್ಥಿಸಬೇಕು.

ಅನಂತರ

**ಚಿತ್ರಗುಪ್ತ ನಮಸ್ತುಭ್ಯಂ ವಿಚಿತ್ರಾಯ ನಮೋನಮಃ**
**ನರಕಾರ್ತಿ ಪ್ರಶಾಂತ್ಯರ್ಥಂ ಕಾಮಾನ್ ಯಚ್ಛಮಮೇಪ್ಸಿತಾನ್**
ಎಂದು ಚಿತ್ರಗುಪ್ತನನ್ನು ಪ್ರಾರ್ಥಿಸಿ ಬೇಡಿಕೊಳ್ಳಬೇಕು. ಬಳಿಕ

**ಯಮಾಯ ನಮಃ** **ಧರ್ಮರಾಜಾಯ ನಮಃ**
**ಮೃತ್ಯವೇ ನಮಃ** **ಅಂತಕಾಯ ನಮಃ**
**ವೈವಸ್ವತಾಯ ನಮಃ** **ಕಾಲಾಯ ನಮಃ**
**ಸರ್ವಭೂತಷಯಾಯ ನಮಃ** **ವೃಕೋದರಾಯ ನಮಃ**
**ಚಿತ್ರಾಯ ನಮಃ** **ಚಿತ್ರಗುಪ್ತಾಯ ನಮಃ**
**ನೀಲಾಯ ನಮಃ** **ಧಧ್ನಾಯ ನಮಃ**

ಎಂದು ಹನ್ನೆರಡು ನಾಮಗಳಿಂದ ಯಮಧರ್ಮನ ಪೂಜೆಯನ್ನು ಮಾಡಬೇಕು. ಅನಂತರ ಅಲ್ಲಿಯೇ ಮುಂದೆ ಇರಿಸಿದ ತಾಮ್ರದ ವೈತರಣಿಯಲ್ಲಿ ಯಮಲೋಕದ ಆ ವೈತರಣೀ ನದಿಯನ್ನು ಆವಾಹಿಸಿ ಹೀಗೆ ಪ್ರಾರ್ಥಿಸಬೇಕು.

**ವೈತರಣಿ ಸುದುಷ್ಪಾದೇ ಪಾಪಘ್ನಿ ಸರ್ವ ಕಾಮದೇ**
**ಇಹಾಭ್ಯೇಹಿ ಮಹಾಭಾಗೇ ಗ್ರಹಾಣಾರ್ಘ್ಯಂ ಮಯೊ ಕೃತಂ**
ದಾಟಲು ಅಶಕ್ಯವಾದ ವೈತರಣೀ ನದಿಯೇ, ನೀನು ಸರ್ವ ಕಾಮಪ್ರದಳೂ ಆಗಿರುವೆ. ನೀನು ಇಲ್ಲಿಗೆ ಬಾ. ನಾನು ನೀಡಿದ ಈ ಅರ್ಘ್ಯವನ್ನು ಸ್ವೀಕರಿಸು. ಎಲ್ಲ ಪ್ರಾಣಿಗಳಿಗೂ ಭಯವನ್ನು ಉಂಟು ಮಾಡುವ ಆ ವೈತರಣೀ ನದಿಯನ್ನು ಕೇಶವನ ದಯೆಯಿಂದ ನಾನು ದಾಟಲು ಬಯಸುತ್ತೇನೆ. ಈ ವೈತರಣಿಯ ತೀರದಲ್ಲಿಯೇ

ಪಿತೃಗಳು ಪ್ರತಿಷ್ಠಿತ ರಾಗಿದ್ದಾರೆ. ಎಲ್ಲ ಪಾಪಗಳ ಪರಿಹಾರಕ್ಕಾಗಿ ಈ ತಾಮ್ರದ ವೈತರಣೀ ನದಿಯನ್ನು ನಾನು ದಾನ ನೀಡುತ್ತೇನೆ.

ಅನಂತರ ಪೂರ್ಣ ಕಲಶದ ಮೇಲೆ ತಾಮ್ರದ ತಟ್ಟೆಯಲ್ಲಿ ಪ್ರತಿಷ್ಠಿಸಿದ ಕೇಶವನನ್ನು ಪೂಜೆ ಮಾಡಬೇಕು.

**ಕೃಷ್ಣ ಕೃಷ್ಣ ಜಗನ್ನಾಥ ಸಂಸಾರಾದುದ್ಧರಸ್ವಮಾಂ**
**ನಾಮಗ್ರಹಣ ಮಾತ್ರೇಣ ಸರ್ವಂ ಪಾಪಂ ಹರಸ್ವಮೇ**

ಜಗನ್ನಾಥನಾದ ಕೃಷ್ಣ, ನಿನ್ನ ನಾಮಗ್ರಹಣವನ್ನು ನಾನು ಮಾಡಿದ್ದೇನೆ. ಇಷ್ಟರಿಂದಲೇ ನನ್ನ ಎಲ್ಲ ಪಾಪಗಳನ್ನು ಪರಿಹರಿಸು ಎಂದು ಬೇಡಿಕೊಳ್ಳಬೇಕು.

**ಯಜ್ಞೋಪವೀತಂ ಪರಮಂ ಕಾರಿಕಂ ನವತಂತು ಭಿಃ**
**ಪ್ರತಿ ಗೃಹ್ಣೀಶ್ವರ ದೇವೇಶ, ಪ್ರೀತೋಯಚ್ಛ ಮಮೇಪ್ಸಿತಂ**

ಒಂಬತ್ತು ಎಳೆಗಳಿಂದ ಮಾಡಿದ ಯಜ್ಞೋಪವೀತವನ್ನು ಸ್ವೀಕರಿಸಿ ನನ್ನ ಇಷ್ಟಾರ್ಥವನ್ನು ದಯಪಾಲಿಸಿ ಎಂದು ಜನಿವಾರವನ್ನು ಕೇಶವನಿಗೆ ಅರ್ಪಿಸಬೇಕು. ಅನಂತರ ದೇವರ ಎದುರು ವಿವಿಧ ಪಕ್ವಾನ್ನಗಳನ್ನು ಇರಿಸಿ.

**ಪರಮಾನ್ನಂ ಸುಪಕ್ವಾನಂ ಸಮಸ್ತರಸ ಸಂಯುತಂ**
**ನಿವೇದಿತಂ ಮಯಾ ಭಕ್ತ್ಯಾ ಭಗವನ್ ಪ್ರತಿಗೃಹ್ಯತಾಂ**

ಎಂಬ ಮಂತ್ರದಿಂದ ದೇವರಿಗೆ ನೈವೇದ್ಯವನ್ನು ಸಮರ್ಪಿಸಬೇಕು. ಅನಂತರ

**ಓಂ ನಮೋ ಭಗವತೇ ವಾಸುದೇವಾಯ**

ಎಂಬ ದ್ವಾದಶಾಕ್ಷರ ಮಂತ್ರವನ್ನು ನೂರಾಎಂಟು, ಸಾವಿರದಾಎಂಟು ಯಥಾ ಶಕ್ತಿ ಜಪಿಸಬೇಕು. ಅನಂತರ

**ಪಂಚವರ್ತೀ ಪ್ರದೀಪೋಯಂ ದೇವೇಶಾರಾರ್ತಿಕಂ ತವ**
**ಮೋಹಾಂಧಕಾರ ದ್ಯುಮನೇ ಭಕ್ತಿಯುಕ್ತೋ ಭವಾರ್ತಿ ಹೃತ್**

ಎಂಬ ಮಂತ್ರದಿಂದ ಐದು ಬತ್ತಿಗಳನ್ನು ಹಚ್ಚಿ ದೇವರಿಗೆ ಮಂಗಳಾರತಿಯನ್ನು ಮಾಡಬೇಕು. ಬಳಿಕ

**ಸರ್ವಕಾಮ ದುಘೇ ದೇವಿ ಸರ್ವಾರಿಷ್ಟ ನಿವಾರಿಣಿ**
**ಆರೋಗ್ಯಂ ಸಂತತಿಂ ದೀರ್ಘಾ ದೇಹಿ ನಂದಿನಿ ವೇ ಸದಾ**
**ಗಾವೋ ಮಮಾಗ್ರತಸ್ಸಂತು ಗಾವೋ ಸಂತು ಪೃಷ್ಟತೆಃ**
**ನಾಕೇ ಮಾ ಮುಪತಿಷ್ಠಂತು ಹೇಮ ಶೃಂಗ್ಯಂ ಪಯೋಮುಚಃ**

ಎಂಬ ಮಂತ್ರವನ್ನು ಹೇಳಿ ಹಸುವನ್ನು ಪೂಜಿಸಿ ಗೋದಾನವನ್ನು ಮಾಡಬೇಕು. ಗೋದಾನದ ನಂತರ

**ಗಂಗ ದಾಯೈ ನಮಃ** ಎಂದು ಗದಾ ಮುದ್ರೆಯನ್ನು ಧರಿಸಬೇಕು.

**ಪಂ ಪದ್ಮನಾಭಾಯ ನಮಃ** ಎಂದು ಪದ್ಮವನ್ನು

**ಓಂ ಚಂ ಚಕ್ರರೂಪಿಣೇ ನಮಃ** ಎಂದು ಚಕ್ರವನ್ನೂ

**ಓಂ ಶಂ ಶಂಖರೂಪಿಣೇ ನಮಃ** ಎಂದು ಶಂಖವನ್ನು ಧರಿಸಬೇಕು.

ಹೀಗೆ ನಾಲ್ಕೂ ವಿಷ್ಣು ಚಿಹ್ನಗಳನ್ನು ಧರಿಸಿ ವೇದಧ್ಯಯನವನ್ನು ಅವಶ್ಯವಾಗಿ ನಿತ್ಯವೂ ಮಾಡಬೇಕು. ವಿಷ್ಣುಭಕ್ತರಾದವರು ತಪ್ತ ಮುದ್ರಾಧಾರಣವನ್ನು ಬ್ರಾಹ್ಮಣರಿಂದ ಮಾಡಿಸಿಕೊಳ್ಳಬೇಕು. ಮತ್ತು ಪ್ರತಿದಿನವೂ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಚಂಡಾಲ ಮೊದಲಾದ ಎಲ್ಲ ಜಾತಿ ಜನಾಂಗದವರೂ ಗೋಪೀಚಂದನವನ್ನೂ ದೇವರಿಗೆ ಏರಿಸಿದ ಗಂಧವನ್ನೂ ತಪ್ಪದೇ ಹಚ್ಚಿಕೊಳ್ಳಬೇಕು.

**ಚಂದನೇನ ಸುಗಂಧೇನ ಗೋಪಿಕಾ ಚಂದನೇನ ತು ।**
**ಚಂಡಾಲೋಽಪಿ ಭವೇಚ್ಛುದ್ಧ ಧಾರಣಾಚ್ಚ ನಸಂಶಯಃ ॥**

ಚಂದನ, ಗಂಧ ಹಾಗೂ ಗೋಪೀಚಂದನ ಇವುಗಳ ಧಾರಣದಿಂದ ಚಂಡಾಲನೂ ಕೂಡ ಶುದ್ಧನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

**ಊರ್ಧ್ವಪುಂಡ್ರ ಮೃಜಂ ಸೌಮ್ಯಂ ಸಚಿನ್ಹಂ ಧಾರಯೇದ್‌ಯಹಿ ।**
**ಸ ಚಂಡಾಲೋಪಿ ಶುದ್ಧಾತ್ಮಾ, ಪೂಜ್ಯಯೇವ ಸದಾದ್ವಿಜೈಃ ॥**

ಹಣೆಯ ಮೇಲೆ ಹಾಗೂ ಮೈಮೇಲೆ ಊರ್ಧ್ವಪುಂಡ್ರ ಎಂದರೆ ಉದ್ದವಾಗಿ ನಾಮವನ್ನು ಗೋಪೀಚಂದನದಿಂದ ಹಚ್ಚಿಕೊಂಡು ಮೇಲೆ ಶಂಖ ಚಕ್ರಾದಿ ಪಂಚಮುದ್ರೆಗಳನ್ನು ವಿಷ್ಣು ಚಿಹ್ನ ರೂಪವಾಗಿ ಧರಿಸಿದರೆ ಚಾಂಡಾಲನು ಕೂಡ ಪವಿತ್ರನಾಗುತ್ತಾನೆ. ಎಲ್ಲ ದ್ವಿಜರಿಂದಲೂ ಆ ಚಂಡಾಲನು ಪೂಜನೀಯ.

**ಚಾಂಡಾಲಾನಾಂ ಗೃಹೇ ದೂತಾಃ ತುಲಸೀ ಯತ್ರ ದೃಶ್ಯತೇ ।**
**ತತ್ರತ್ಯಾ ತುಲಸೀ ಗ್ರಾಹ್ಯಾ ಭಕ್ತಿಭಾವೇನ ಚೇತಸಾ ॥**

ದೂತರೇ, ಹೊಲೆಯನ ಮನೆಯಲ್ಲಿ ತುಳಸೀಗಿಡವು ಕಂಡರೆ, ಅದನ್ನು ಅವರು ಭಕ್ತಿ ಭಾವದಿಂದ ನೆಟ್ಟು ಬೆಳೆಸಿದ್ದರೆ ಅಂಥ ತುಳಸಿಯನ್ನು ತೆಗೆದುಕೊಂಡು ದೇವರನ್ನು ಪೂಜಿಸಬೇಕು.

ಹೀಗೆ ಯಮಧರ್ಮನು ತನ್ನ ದೂತರಿಗೆ ಉಪದೇಶಿಸಿ ನನ್ನನ್ನು ಬಿಟ್ಟು ಬಿಡಲು ಹೇಳಿದ. ಆಗ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡ ಯಮದೂತರು ನನ್ನನ್ನು ಬಿಟ್ಟುಬಿಟ್ಟರು. ಯಮಲೋಕದಿಂದ ಯಮಭಟರ ವಜ್ರಮುಷ್ಟಿಯಿಂದ ಬಿಡಲ್ಪಟ್ಟ ನಾನು ಇಲ್ಲಿ ದ್ವಾರಕಾಪಟ್ಟಣದಲ್ಲಿ ನಿನ್ನ ಎದುರು ಬಂದು ಬಿದ್ದಿದ್ದೇನೆ. ಅವರು ಬಿಗಿಯಾಗಿ ಒತ್ತಿ ಹಿಡಿದ ನನ್ನ ಅವಯವಗಳು ಇನ್ನೂ ನೋಯುತ್ತಲಿವೆ.

**ಮಹಾದೇವ:-** ದ್ವಾರಕಾಪಟ್ಟಣದಲ್ಲಿ ತನ್ನ ಎದುರೇ ಮೂರ್ಛಿತನಾಗಿ ಬಂದು ಬಿದ್ದು ಅನಂತರ ಚೇತರಿಸಿಕೊಂಡು ಎದ್ದ ಆ ಮುದ್ಗಲ ಮುನಿಯು ತನ್ನ ಆಕಸ್ಮಿಕವಾದ ಈ ಯಮಲೋಕಪ್ರವೇಶದ ಸಮಾಚಾರವನ್ನು ತಿಳಿಸಿ ಹೊರಟು ಹೋದ. ಆ ಯಮಲೋಕಕ್ಕೆ ದೈವವಶಾತ್ ಹೋಗಿ ಬಂದ ಆ ಮುದ್ಗಲ ಮುನಿಯು ಯಮಧರ್ಮನ ಮುಖದಿಂದ ಕೇಳಿದ ಉಪದೇಶವನ್ನೆಲ್ಲ ನನ್ನ ಎದುರಿಗೆ ಹೇಳಿಹೋದ.

ಗೋಪೀಚಂದನದ ಮಹಿಮೆಯನ್ನು ವಿಶೇಷವಾಗಿ ಯಮಧರ್ಮನು ಹೇಳಿದ್ದನ್ನು ತಿಳಿಸಿದ. ಗೋಪೀಚಂದನವು ಯಾರ ಮನೆಯಲ್ಲಿ ಇರುವದೋ ಅವರ ಮನೆಯೇ ಒಂದು ತೀರ್ಥ ಎಂದು ಸಾಕ್ಷಾತ್ ವಿಷ್ಣುವೇ ಹೇಳಿದ್ದಾನೆ.

**ವಿಷ್ಣೋಽಸ್ತು ತುಲಸೀ ಕಾಷ್ಠಂ ತಥಾವೈ ಮೂಲ ಮೃತ್ತಿಕಾ ।**
**ಗೋಪಿಕಾಚಂದನಂಚೈವ ತಥಾ ವೈ ಹರಿಚಂದನಂ ।**
**ಚತ್ವಾರ್ಯೆತಾನಿ ಸಂಮೇಲ್ಯ ಅಂಗ ಮುದ್ದರ್ತಯೋತ್ ಸುಧೀ ॥**

ತುಳಸೀ ಕಾಷ್ಠ, ತುಳಸೀ ಗಿಡದ ಬುಡದಲ್ಲಿಯ ಮೃತ್ತಿಕೇ ಮಣ್ಣು, ಚಂದನ, ಮತ್ತು ಹರಿಚಂದನ ಈ ನಾಲ್ಕನ್ನೂ ಕೂಡಿಸಿ ದೇಹಕ್ಕೆ ಲೇಪಿಸಿಕೊಳ್ಳಬೇಕು. ಹಾಗೂ ಸ್ನಾನ ಮಾಡಬೇಕು. ಅನಂತರ ಗೋಪೀಚಂದನವನ್ನು ತೇಯ್ದು ತಿಲಕವನ್ನು ಧರಿಸಬೇಕು.

**ಯೇನ ವಾ ಪುರುಷೇಣಾಪಿ ವಿಧೃತಂ ಗೋಪೀಚಂದನಂ ।**
**ಮದ್ಯಪೋ ಬ್ರಹ್ಮಹಾ ಚೈವ ಗೋಘ್ನೋವಾ ಬಾಲಹಾ ತಥಾ ॥**
**ಮುಚ್ಯತೇ ತಕ್ಷಣಾದೇವ ಗೋಪೀಚಂದನ ಧಾರಣಾತ್ ।**

ಮದ್ಯವನ್ನು ಕುಡಿಯಲಿ, ಬ್ರಹ್ಮಹತ್ಯೆಯನ್ನು ಮಾಡಲಿ. ಆಕಳನ್ನು ಹಿಂಸಿಸಲಿ, ಮಕ್ಕಳನ್ನು ಕೊಂದಿರಲಿ ಅಥವಾ ಯಾವ ಪಾಪವನ್ನೇ ಮಾಡಿರಲಿ ಗೋಪೀಚಂದನ ಧಾರಣ ಮಾತ್ರದಿಂದಲೇ ಪುರುಷರ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಯಮನ ಆರಾಧನೆ ಹಾಗೂ ವೈತರಣೀ ವ್ರತಗಳ ವಿಧಾನ ಎಂಬ ಆರವತ್ತೇಳನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುಭಕ್ತರ ಲಕ್ಷಣ ಹಾಗೂ ಮಾಹಾತ್ಮ್ಯ

ಅಧ್ಯಾಯ - ೬೮

**ಪರಮೇಶ್ವರ:-** ನಾರದ, ವೈಷ್ಣವರ ಲಕ್ಷಣವನ್ನು ಹೇಳುತ್ತೇನೆ ಕೇಳು. ವಿಷ್ಣುಭಕ್ತರಾದ ಪುರುಷರೆಲ್ಲರೂ ವೈಷ್ಣವ ಎಂದು ಕರೆಯಲ್ಪಡುತ್ತಾರೆ. ಕ್ಷಮಾ, ದಯೆ, ತಪಸ್ಸು, ಸತ್ಯ, ಇವು ನಾಲ್ಕು ವೈಷ್ಣವರ ಮುಖ್ಯ ಲಕ್ಷಣಗಳು. ಪರಿಶುದ್ಧವಾದ ಆಹಾರ, ಮತ್ತು ಅಹಿಂಸೆ ಇವು ಎರಡು ವೈಷ್ಣವರು ಪಾಲಿಸಬೇಕಾದ ಧರ್ಮಗಳು.

**ಶಂಖ ಚಕ್ರ ಗದಾ ಪದ್ಮಂ ನಿತ್ಯಂ ವೈಧಾರ ಯಂಶ್ಚಯಃ ।**
**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇದ್ಬುಧಃ ॥**
**ತಿಲಕಾನಿ ದ್ವಾದಶಧಾನಿತ್ಯಂ ವೈ ಧಾರಯೇತ್ ಬುಧಃ ।**
**ಧರ್ಮಾಧರ್ಮಂತು ಜಾನಾತಿ ಯಸ್ಸವೈಷ್ಣವ ಉಚ್ಯತೇ ॥**

ಪ್ರತಿನಿತ್ಯವೂ ಶಂಖ ಚಕ್ರ ಗದಾ ಪದ್ಮ ಮುಂತಾದ ವೈಷ್ಣವ ಲಾಂಛನಗಳನ್ನು ಧರಿಸಬೇಕು. ಕೊರಳಲ್ಲಿ ತುಳಸೀ ಕಾಷ್ಠದಿಂದ ಮಾಡಿದ ಮಾಲೆಯನ್ನೂ ಹನ್ನೆರಡು ನಾಮಗಳನ್ನೂ ನಿತ್ಯವೂ ಧಾರಣ ಮಾಡಬೇಕು. ಧರ್ಮ ಮತ್ತು ಅಧರ್ಮಗಳನ್ನು ತಿಳಿದುಕೊಂಡಿರಬೇಕು. ಇಂಥವನಿಗೆ ಮಾತ್ರ ವೈಷ್ಣವ ಎಂದು ಹೆಸರು. ಇಂಥ ವೈಷ್ಣವರ ದರ್ಶನ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುತ್ತವೆ. ಇಂಥ ವಿಷ್ಣುಭಕ್ತರ ಪೂಜೆಯನ್ನು ಮಾಡಿದರೆ ಸಾಕ್ಷಾತ್ ವಿಷ್ಣುವಿನ ಪೂಜೆಯನ್ನು ಮಾಡಿದಂತೆ. ಇಂಥ ವೈಷ್ಣವನು ಸಾಕ್ಷಾತ್ ವಿಷ್ಣು ಎಂದು ತಿಳಿದು ಅವರನ್ನು ಪೂಜಿಸಬೇಕು. ಇಂಥ ಓರ್ವ ವಿಷ್ಣುಭಕ್ತನಿಗೆ ಭೋಜನಮಾಡಿಸಿದರೆ ಸಾವಿರ ದ್ವಿಜರಿಗೆ ಭೋಜನ ಮಾಡಿಸಿದ ಪುಣ್ಯವು ಬರುವದು.

ಯಾವ ವಂಶದಲ್ಲಿ ಒಬ್ಬನಾದರೂ ವೈಷ್ಣವನು ಜನಿಸಿರುವನೋ, ಅಂಥ ಕುಲವು ಧನ್ಯ. ಮತ್ತು ಜಗನ್ಮಾನ್ಯ. ಈ ಲೋಕದಲ್ಲಿ ಹುಟ್ಟಿದ ವಿಷ್ಣುಭಕ್ತರು ವಿಷ್ಣುವಿಗೆ ಸಮಾನರು ಅರ್ಥಾತ್ ಮಹಾವಿಷ್ಣುವಿನ ಪವಿತ್ರ ಪ್ರತೀಕರು ಎಂದು ತಿಳಿಯಬೇಕು. ಅಂಥ ವೈಷ್ಣವನ ಪೂಜೆ ಮಾಡಿದರೆ ವಿಷ್ಣುವಿನ ಪೂಜೆ ಮಾಡಿದಂತೆ. ವಿಷ್ಣುವಂತೂ "**ಸರ್ವದೇವಮಯೋ ವಿಷ್ಣುಃ ಸರ್ವಲೋಕಮಯೋ ಹರಿಃ**" ಸರ್ವದೇವಮಯನೂ, ಸರ್ವಲೋಕಮಯನೂ ಆಗಿದ್ದಾನೆ. ಆದ್ದರಿಂದ ವಿಷ್ಣುವಿನ ಪೂಜೆ ಮಾಡಿದರೆ ಸರ್ವ ದೇವತೆಗಳ ಹಾಗೂ ಸರ್ವ ಜಗತ್ತಿನ ಪೂಜೆ ಮಾಡಿದಂತೆಯೇ ಆಗುವದು. ವಿಷ್ಣುಭಕ್ತನಿಗೆ ನೀಡಿದ ದಾನ, ಹಣ್ಣು, ಹಂಪಲ, ತರಕಾರಿ, ವಸ್ತ್ರ, ಅನ್ನ ಮುಂತಾದವುಗಳನ್ನು ವೈಷ್ಣವರಿಗೆ ದಾನ ಮಾಡಿದವರು ಧನ್ಯರು. ಅವರ ದರ್ಶನದಿಂದಲೇ ಮನುಷ್ಯನ ಪಾಪಗಳೆಲ್ಲವೂ ಪರಿಹೃತವಾಗುವವು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣುಭಕ್ತರ ಲಕ್ಷಣ ಹಾಗೂ ಮಾಹಾತ್ಮ್ಯ ಎಂಬ ಅರವತ್ತೆಂಟನೇಯ ಅಧ್ಯಾಯ ಮುಗಿದುದು*

—o—

**ನಾರದ :-** ಉಪವಾಸ ಮಾಡುವವರಿಗೆ ಅತ್ಯಂತ ಪುಣ್ಯಕರವಾದ ದ್ವಾದಶಿ ಯಾವುದು?

**ಮಹಾದೇವ:-** ಭಾದ್ರಪದ ಶುಕ್ಲಪಕ್ಷದಲ್ಲಿ ದ್ವಾದಶೀ ತಿಥಿಯು ಶ್ರವಣಾದಿಂದ ಕೂಡಿದರೆ ಅದು ಉಪವಾಸಕ್ಕೆ ಪ್ರಶಸ್ತವಾಗಿದೆ. ಅಂದು ನದೀ ಸಂಗಮ ತೀರ್ಥಾದಿಗಳಲ್ಲಿ ಸ್ನಾನಮಾಡಿ ಆ ಶ್ರವಣ ದ್ವಾದಶಿಯ ದಿನ ಉಪವಾಸ ಮಾಡಿದರೆ ಹನ್ನೆರಡು ದ್ವಾದಶೀ ಪರಿಪಾಲನೆ ಮಾಡಿದ ಪುಣ್ಯವು ಬರುವದು. ದ್ವಾದಶಿಯ ದಿನ ಶ್ರವಣಾ ಕೂಡಿದರೆ ಆಸ್ತಿಕನಾದ ಮನುಷ್ಯನು ನದೀಸಂಗಮ ತೀರ್ಥಗಳಲ್ಲಿ ಸ್ನಾನಮಾಡಿದರೆ ಗೋದಾನ ಮಾಡಿದ ಪುಣ್ಯ ಬರುವದು.

ನೀರಿನಿಂದ ತುಂಬಿದ ಕಲಶವನ್ನು ಸ್ಥಾಪಿಸಿ ಅದರ ಮೇಲೆ ಒಂದು ಪಾತ್ರವನ್ನು ಇರಿಸಿ ಅದರ ನಡುವೆ ಶ್ರೀಹರಿಯ ಮೂರ್ತಿಯನ್ನು ಕೂಡಿಸಬೇಕು. ಅದರ ಮುಂದೆ ತುಪ್ಪದಲ್ಲಿಯೇ ಮಾಡಿದ ಪದಾರ್ಥಗಳನ್ನು ನೈವೇದ್ಯಕ್ಕೆ ಇಡಬೇಕು. ಒಂಭತ್ತು ಉದಕುಂಭ (ಜಲಪೂರ್ಣ ಕಲಶ)ಗಳನ್ನು ತನ್ನ ಯೋಗ್ಯತೆಗೆ ತಕ್ಕಂತೆ ದಾನ ಕೊಡಬೇಕು. ಮತ್ತು ಶ್ರೀಹರಿಯನ್ನು ವಿಧಿಪೂರ್ವಕವಾಗಿ ಪೂಜೆಮಾಡಿ ರಾತ್ರಿ ಜಾಗರ ಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಗರುಡ ಧ್ವಜನಾದ ಶ್ರೀಹರಿಯನ್ನು ಪುಷ್ಪ, ಧೂಪ, ದೀಪ, ನೈವೇದ್ಯ, ಫಲ, ವಸ್ತ್ರ ಮುಂತಾದವುಗಳಿಂದ ಪೂಜೆಮಾಡಿ ಬೊಗಸೆ ತುಂಬ ಹೂಗಳನ್ನು ದೇವರ ಮೇಲೆ ಏರಿಸಬೇಕು.

**ನಮೋ ನಮಸ್ತೇ ಗೋವಿಂದ ಬುಧಶ್ರವಣ ಸಂಯುತ ।**
**ಅಘೌಘ ಸಂಕ್ಷಯಂ ಕೃತ್ವಾ ಸರ್ವ ಸೌಖ್ಯಪ್ರದೋ ಭವ ॥**

ಎಂದು ಮಂತ್ರವನ್ನು ಹೇಳಿ "ನಮ್ಮ ಎಲ್ಲ ಪಾಪಗಳನ್ನು ಪರಿಹರಿಸಿ ಸಕಲ ವಿಧವಾದ ಸೌಖ್ಯವನ್ನು ನೀಡು. ಗೋವಿಂದನೆ, ನಿನಗೆ ನಮ್ಮ ನಮಸ್ಕಾರ" ಎಂದು ಭಗವಂತನಿಗೆ ಬೇಡಿಕೊಳ್ಳಬೇಕು. ವೇದವೇದಾಂಗಗಳಲ್ಲಿ ಪಾರಂಗತನಾದ ಮತ್ತು ಪುರಾಣ ಪ್ರವಚನ ಮಾಡುವ ಬ್ರಾಹ್ಮಣನಿಗೆ ಅನ್ನದಾನವನ್ನು ಮಾಡಬೇಕು. ಈ ಶ್ರವಣ ದ್ವಾದಶಿ ವ್ರತವನ್ನು ನದೀ ತೀರದಲ್ಲಿ ಮಾಡಿದರೆ ವಿಶೇಷ ಪುಣ್ಯ. ಈ ವಿಷಯದಲ್ಲಿ ಒಂದು ಪುರಾತನವಾದ ಇತಿಹಾಸವನ್ನು ಹೇಳುತ್ತೇನೆ ಕೇಳು.

ದಾಸರ್ಕ ಎಂಬ ಒಂದು ದೇಶದ ಪಶ್ಚಿಮ ಭಾಗದಲ್ಲಿ ಒಂದು ಭಯಂಕರವಾದ ಮರುಪ್ರದೇಶ. ಅದು ಎಲ್ಲ ಪ್ರಾಣಿಗಳಿಗೂ ಭಯಂಕರ. ನೋಡಿದಲ್ಲೆಲ್ಲ ಕಾಯ್ದ ಮಳಲಿನ ರಾಶಿ. ಅಲ್ಲಲ್ಲಿ ದುಷ್ಟವಾದ ಹಾವುಗಳು. ದೂರ ದೂರದಲ್ಲಿ ಒಂದೊಂದು ಚಿಕ್ಕ ಚಿಕ್ಕ ಮರಗಳು. ಅವುಗಳ ನೆಳಲು ಅತ್ಯಲ್ಪ. ಅನೇಕ ಪ್ರಾಣಿಗಳು ಆ ಮರುಭೂಮಿಯ ತುಂಬ ಸತ್ತುಬಿದ್ದದ್ದು ಕಾಣಿಸುತ್ತಿತ್ತು. ಅಲ್ಲಿ ಎಲ್ಲಿಯೂ ನೀರು ಇಲ್ಲ. ನೀರಿನ ಸೆಲೆಗಳೂ ಇಲ್ಲ. ಆ ಭಾಗದ ಮೇಲುಗಡೆ ಆಗಸದಲ್ಲಿ ಮೋಡಗಳು ಮೂಡುತ್ತಿದ್ದಿಲ್ಲ. ಮಳೆ ಆಗುತ್ತಿದ್ದಿಲ್ಲ. ಅಲ್ಲಲ್ಲಿ ದಾರಿಯಲ್ಲಿ ನೀರಡಿಸಿದ ಮಕ್ಕಳನ್ನು ಬಗಲಲ್ಲಿ ಎತ್ತಿಕೊಂಡು ಹಲವಾರು ಪಾಂಥಸ್ಥರು ಗತತ್ರಾಣರೂ, ಕ್ಷೀಣಪ್ರಾಣರೂ, ಆಗಿ ಕಾಣುತ್ತಿದ್ದರು.

ಒಮ್ಮೆ ಒಬ್ಬ ವ್ಯಾಪಾರಿಯು ತನ್ನ ಗುಂಪಿನಿಂದ ತಪ್ಪಿಸಿಕೊಂಡು ದುರ್ದೈವದಿಂದ ಈ ಮರುಭೂಮಿಯಲ್ಲಿ ಪ್ರವೇಶ ಮಾಡಿದ. ಹಸಿವೆ ನೀರಡಿಕೆಗಳಿಂದ ತೊಳಲಿ ಬಳಲಿದ. ಹುಚ್ಚನಂತೆ ಎಲ್ಲಿಯೂ ನೀರನ್ನು ಕಾಣದೇ ಉದ್ಭ್ರಾಂತನಾಗಿ ಅಚೀಚೆ ಅಲೆದಾಡಿದ - ''ಎಲ್ಲಿ ಇದೆ ಊರು? ಎಲ್ಲಿ ಇದೆ ನೀರು? ನಾನು ಎಲ್ಲಿಗೆ ಹೊರಟಿದ್ದೆನು? ಈಗ ಎಲ್ಲಿ ಇರುತ್ತೇನೆ? ಇದಾವುದೂ ಅವನಿಗೆ ತಿಳಿಯದಂತಾಗಿತ್ತು. ಅವನಿಗೆ ಆ ನಿರ್ಜನವಾದ ರುಕ್ಷ ಅರಣ್ಯದಲ್ಲಿ ಹಸಿವೆ ಬಾಯಾರಿಕೆಯಿಂದ ಬಳಲುವ ಭೀಕರವಾದ ಹಲವಾರು ಪ್ರೇತಗಳು ಕಂಡುಬಂದವು. ಮತ್ತು ಆ ಪ್ರೇತಗಳ ನಟ್ಟ ನಡುವೆ ಒಂದು ಭಯಂಕರ ಪ್ರೇತವನ್ನು ನೋಡಿದ. ಆ ಪ್ರೇತವೂ ಕೂಡ ದಾರಿ ತಪ್ಪಿಸಿಕೊಂಡು ಮರುಭೂಮಿಯಲ್ಲಿ ಸಿಕ್ಕುಹಾಕಿಕೊಂಡು ದುಃಖಿಸುತ್ತಿರುವ ಈ ವೈಶ್ಯನನ್ನು ನೋಡಿತು. ಅವನನ್ನು ನೋಡಿ ಪ್ರೇತದ ಹೆಗಲ ಮೇಲೆ ಏರಿದ ಆ ಮತ್ತೊಂದು ಪ್ರೇತವು ಕೆಳಗೆ ಇಳಿದು ಆ ಪಥಭ್ರಷ್ಟನಾದ ವೈಶ್ಯನ ಬಳಿಗೆ ಬಂದು ನಮಸ್ಕಾರ ಮಾಡಿ ನುಡಿಯಿತು.

**ಪ್ರೇತ:-** ಈ ಘೋರವಾದ ಪ್ರದೇಶದಲ್ಲಿ ನೀನು ಹೇಗೆ ಪ್ರವೇಶ ಮಾಡಿದೆ?

**ವ್ಯಾಪಾರಿ:-** ನಾವು ಕೆಲವು ಜನ ವೈಶ್ಯರು ಕೂಡಿಕೊಂಡು ದೇಶದೇಶಾಂತರಗಳನ್ನು ವ್ಯಾಪಾರಕ್ಕಾಗಿ ಸುತ್ತಾಡುತ್ತಿದ್ದೆವು. ನಾನು ಒಮ್ಮೆ ಅಕಸ್ಮಾತ್ತಾಗಿ ದಾರಿಯಲ್ಲಿ ಆ ಗುಂಪಿನಿಂದ ತಪ್ಪಿಸಿಕೊಂಡು ಈ ಘೋರವಾದ ಮರುಪ್ರದೇಶದಲ್ಲಿ ಪ್ರವೇಶ ಮಾಡಿದೆ. ನನ್ನ ಪೂರ್ವಜನ್ಮದ ದುಷ್ಕರ್ಮದಿಂದ ಮರುಭೂಮಿಯಲ್ಲಿ ಅಲೆದಾಡುತ್ತಿದ್ದ ನನಗೆ ಈಗ ಎಲ್ಲಿಯೂ ನೀರು ದೊರಕದಂತಾಗಿದೆ. ಹಸಿವೆ ಬಾಯಾರಿಕೆಯಿಂದ ನಾನು ವ್ಯಾಕುಲನಾಗಿದ್ದೇನೆ. ನನಗೆ ತಲೆ ಸುತ್ತುತ್ತಲಿದೆ. ಪ್ರಾಣ ಹೋಗುವ ಪ್ರಸಂಗ ಬಂದಿದೆ. ಗಂಟಲು ಸೇದುತ್ತಲಿದೆ. ಹಸಿವೆಯಿಂದ ಹೊಟ್ಟೆಯಲ್ಲಿ ತಾಳಲಾರದ ಸಂಕಟ ಆಗುತ್ತಲಿದೆ. ಇದರಿಂದ ಪಾರಾಗುವ ಉಪಾಯವೇ ನನಗೆ ತೋಚದಂತಾಗಿದೆ. ನಾನು ಹೇಗೆ ಬದುಕಲಿ? ಹೇಗೆ ಮರಣದಿಂದ ಪಾರಾಗಲಿ?

ವ್ಯಾಪಾರಿಯ ಈ ಮಾತನ್ನು ಕೇಳಿ ಆ ಪ್ರೇತಕ್ಕೆ ಕರುಣೆ ಬಂದಂತೆ ಆಯಿತು. ಅದು ದಯೆದುಂಬಿ ಆ ವ್ಯಾಪಾರಿಗೆ ಹೇಳಿತು.

**ಪ್ರೇತ:-** ಅಕೋ, ಅಲ್ಲಿ ಒಂದು ಬನ್ನಿಯ ಗಿಡ ಇದೆ. ಅದರ ನೆರಳಿನಲ್ಲಿ ಒಂದು ಮೂಹೂರ್ತಕಾಲ ವಿಶ್ರಮಿಸು. ನನ್ನ ಅತಿಥ್ಯವನ್ನು ಸ್ವೀಕರಿಸು. ಅನಂತರ ಮುಂದೆ ಸುಖವಾಗಿ ಪ್ರಯಾಣ ಮಾಡು.

ಪ್ರೇತದ ಈ ಮಾತಿಗೆ ಒಪ್ಪಿಕೊಂಡ ಆ ವ್ಯಾಪಾರಿ. ಸಮೀಪದಲ್ಲಿ ಇರುವ ಬನ್ನಿಯ ಮರಕ್ಕೆ ಬಂದ. ಅದರ ನೆರಳಿನಲ್ಲಿ ವಿಶ್ರಮಿಸಿದ. ಅಲ್ಲಿಯೇ ಬನ್ನಿ ಮರದ ನೆರಳಿನಲ್ಲಿಯೇ ಒಂದು ಸುಂದರವಾದ ನೀರಿನ ದೋಣಿಯು ಇದ್ದಿತು. ಅದರ ತುಂಬ ಮೊಸರನ್ನ. ಮೇಲೆ ಮುಚ್ಚಳ ಮುಚ್ಚಲಾಗಿತ್ತು. ಇಂಥ ಅನೇಕ ಮೊಸರನ್ನದ ಗಡಿಗೆಗಳು ಅಲ್ಲಿ ಇಡಲ್ಪಟ್ಟಿದ್ದವು.

ಆ ಪ್ರೇತವು ಅಲ್ಲಿ ಇರುವ ಆ ಮೊಸರನ್ನವನ್ನು ಹಾಗೂ ನೀರನ್ನು ಆ ಅತಿಥಿಯಾದ ವೈಶ್ಯನಿಗೆ ನೀಡಿತು. ಒಳ್ಳೆ ಸವಿಸವಿಯಾದ ಆ ಮೊಸರನ್ನವನ್ನು ಉಂಡು ನೀರು ಕುಡಿದು ಆ ವೈಶ್ಯನು ಪರಿತೃಪ್ತನಾದ. ಅವನ ಹಸಿವೆ, ಬಾಯಾರಿಕೆ, ದಣಿವು ಎಲ್ಲವೂ ಕ್ಷಣದಲ್ಲಿ ಮಾಯವಾದವು. ಅನಂತರ ಅಲ್ಲಿ ಇನ್ನೂ ಅನೇಕ ಪ್ರೇತಗಳು ಬಂದವು. ಅವೆಲ್ಲವುಗಳಿಗೂ

ಮೊದಲಿನ ಪ್ರೇತವು ಆ ಜಲದ್ರೋಣಿಯಲ್ಲಿಯ ನೀರನ್ನೂ, ಗಡಿಗೆಗಳಲ್ಲಿಯ ಮೊಸರನ್ನವನ್ನೂ ನೀಡಿತು. ಆದರಿಂದ ಅಲ್ಲಿಗೆ ಬಂದ ಪ್ರೇತಗಳೆಲ್ಲವೂ ತೃಪ್ತಿಹೊಂದಿದವು.

ಹೀಗೆ ಅಲ್ಲಿಗೆ ಅತಿಥಿಯಾಗಿ ಬಂದ ಆ ವೈಶ್ಯ ವ್ಯಾಪಾರಿಯನ್ನೂ, ಮತ್ತು ಪ್ರೇತಗಳನ್ನೂ ಮೊಸರನ್ನವನ್ನು ತಿನಿಸಿ ಉಣಿಸಿ ನೀರು ಕುಡಿಸಿ, ತೃಪ್ತಿಪಡಿಸಿ ಅನಂತರ ಆ ಪ್ರೇತವು ಇವರೆಲ್ಲರೂ ಉಂಡು ಬಿಟ್ಟ ಉಚ್ಛಿಷ್ಟವಾದ ಮೊಸರನ್ನವನ್ನು ಉಂಡಿತು. ಕುಡಿದು ಬಿಟ್ಟ ನೀರನ್ನು ಕುಡಿಯಿತು. ಆ ಪ್ರೇತಾಧಿಪತಿಯು ಉಂಡು ತಿಂದ ಬಳಿಕ ಆ ಎಲ್ಲ ಗಡಿಗೆಗಳಲ್ಲಿಯ ಮೊಸರನ್ನವು ಮುಗಿದುಹೋಯಿತು. ಜಲಧಾನಿಯಲ್ಲಿರುವ ನೀರೆಲ್ಲವೂ ತೀರಿಹೋಯಿತು. ಇದನ್ನೆಲ್ಲ ಕಂಡು ವಿಸ್ಮಯಮೂಕನಾದ ವೈಶ್ಯ ವ್ಯಾಪಾರಿ ಮಾತನಾಡಿದ.

**ವೈಶ್ಯವ್ಯಾಪಾರಿ:-** ಪ್ರೇತಪತಿಯೇ, ನೀನು ಇಲ್ಲಿಯ ಗಡಿಗೆಯಲ್ಲಿರುವ ಸ್ವಲ್ಪೇ ಮೊಸರನ್ನ ಹಾಗೂ ನೀರಿನ ದೋಣಿಯಲ್ಲಿರುವ ಸ್ವಲ್ಪ ನೀರನ್ನು ನೀಡಿ ಬಹಳಷ್ಟು ಅತಿಥಿಗಳನ್ನು ತೃಪ್ತಿಪಡಿಸಿದೆ. ಇಷ್ಟು ಅಲ್ಪ ಜಲ, ಅಲ್ಪ ಅನ್ನಗಳಿಂದ ಇಷ್ಟು ಜನ ಅತಿಥಿ ಅಭ್ಯಾಗತರಿಗೆ ನೀನು ಹೇಗೆ ಉಣಬಡಿಸಿದೆ? ಹೇಗೆ ತೃಪ್ತಿಯನ್ನು ಉಂಟುಮಾಡಿದೆ? ಮತ್ತು ಮೈಯಲ್ಲಿ ಮಾಂಸವಿಲ್ಲದ ಹರಕು ಹೊಟ್ಟೆಯ ಇಷ್ಟು ಪ್ರೇತಗಳು ಈ ಘೋರವಾದ ಗೊಂಡಾರಣ್ಯದಲ್ಲಿ ಏಕೆ ಮನೆಮಾಡಿಕೊಂಡಿವೆ? ಈ ನನ್ನ ಸಂಶಯವನ್ನು ನೀನು ಹೋಗಲಾಡಿಸು.

**ಪ್ರೇತಪತಿ:-** ವೈಶ್ಯನೇ, ಪೂರ್ವಜನ್ಮದಲ್ಲಿ ನಾನೂ ನಿನ್ನಂತೆ ಒಬ್ಬ ವ್ಯಾಪಾರಿ. ವ್ಯಾಪಾರ, ಉದ್ಯೋಗ, ವ್ಯವಸಾಯಗಳಲ್ಲಿಯೇ ನನ್ನ ಜನ್ಮ ಕಳೆಯಿತು. ಆ ಕಾಲದಲ್ಲಿ ನನ್ನಷ್ಟು ದುಷ್ಟ ಮತ್ತು ಭ್ರಷ್ಟ ಭೂಮಂಡಲದಲ್ಲಿಯೇ ಯಾರೂ ಇರಲಿಲ್ಲ. ನನಗೆ ಆ ಜನ್ಮದಲ್ಲಿ ಭಾರೀ ಹಣದ ಹಪಾಹಪಿ. ವಿಪರೀತವಾದ ದುಡ್ಡಿನ ಲೋಭದಿಂದ ನಾನು ಯಾರಿಗೂ ಒಮ್ಮೆಯೂ ಭಿಕ್ಷೆಯನ್ನು ಕೊಡಲಿಲ್ಲ. ಒಂದು ದಿನವೂ ಅನ್ನ ನೀಡಲಿಲ್ಲ. ಆದರೆ ಸುದೈವದಿಂದ ನನಗೆ ಆ ಜನ್ಮದಲ್ಲಿ ಓರ್ವ ಬ್ರಾಹ್ಮಣ ಪಂಡಿತ ನನ್ನ ಮಿತ್ರನಾಗಿದ್ದ ಅವನು ಹಣವಂತನಾಗದಿದ್ದರೂ ಒಳ್ಳೇ ಗುಣವಂತ. ಒಂದು ಸಲ ಭಾದ್ರಪದ ಮಾಸದಲ್ಲಿ ಶ್ರವಣ ದ್ವಾದಶೀ ಯೋಗ ಇದ್ದಿತು. ಭಾದ್ರಪದ ಮಾಸದಲ್ಲಿ ಆ ಶ್ರವಣ ದ್ವಾದಶಿ ಯೋಗವಿದ್ದಾಗ ಆ ನನ್ನ ಮಿತ್ರನಾದ ಬ್ರಾಹ್ಮಣ ನನ್ನನ್ನು ಕರೆದುಕೊಂಡು ತಾಪೀ ಎಂಬ ನದೀ ತೀರಕ್ಕೆ ಹೋದ. ಆ ಸ್ಥಾನದಲ್ಲಿ ತಾಪೀ ಮತ್ತು ಚಂದ್ರಭಾಗಾ ನದಿಗಳ ಸಂಗಮವಾಗಿದ್ದಿತು.

ಚಂದ್ರನಿಂದ ಹುಟ್ಟಿ ಚಂದ್ರನ ಮಗಳು ಎನಿಸಿದ್ದಳು ಈ ಚಂದ್ರಭಾಗಾ ನದಿ. ತಾಪಿಯೂ ಸೂರ್ಯಪುತ್ರಿ. ಈ ಎರಡೂ ನದಿಗಳ ಸಂಗಮ ಸ್ಥಳ ಬಹಳ ಹೃದಯಂಗಮ. ಅವುಗಳಲ್ಲಿ ತಾಪೀ ನದಿಯ ನೀರು ಬಿಸಿಬಿಸಿ ಚಂದ್ರಭಾಗಿಯ ನೀರು ಒಳ್ಳೇ ತಣ್ಣಗೆ. ಹೀಗೆ ಬೆಚ್ಚಗಿನ ಹಾಗೂ ತಣ್ಣಗಿನ ಎರಡೂ ನದಿಗಳ ಮಧುರ ಮಿಲನವಾದ ಆ ಸಂಗಮದ ರಂಗದಲ್ಲಿ ಹೊಕ್ಕು ನಾನು ಸ್ನಾನ ಮಾಡಿದೆ. ಅನೇಕ ದ್ವಿಜರೂ ನನ್ನೊಂದಿಗೆ ಅಲ್ಲಿ ಮಿಂದು ಬಂದರು. ಶ್ರವಣಾ ಏಕಾದಶಿ ದಿನ ಎಲ್ಲರೂ ಅಲ್ಲಿ ಸ್ನಾನ ಮಾಡಿ ಉಪವಾಸ ಇದ್ದು ಶ್ರೀಹರಿಯ ಪೂಜೆ ಮಾಡಿದರು. ಅನಂತರ ಮೊಸರನ್ನದಿಂದ ತುಂಬಿದ ಮಣ್ಣಿನ ಮಡಕೆಗಳನ್ನು, ಕೊಡೆ, ಪಾದರಕ್ಷೆ, ಪಂಚೆ, ಮತ್ತು ಶ್ರೀಹರಿಯ ಪ್ರತಿಮೆ ಮುಂತಾದವುಗಳನ್ನು ಮಹಾದೇವನ ಎದುರು ಯೋಗ್ಯರಾದ ಜ್ಞಾನಿಗಳಿಗೆ ದಾನ

ನೀಡಿದರು. ನಾನು ಕೂಡ ಅವರೊಂದಿಗೆ ಅಲ್ಲಿ ಸ್ನಾನಮಾಡಿ ಉಪವಾಸ ಮಾಡಿ ಏಕಾದಶಿ ಜಾಗರಗೈದು ದ್ವಾದಶಿ ದಿವಸ ಒಂದು ಸುಂದರವಾದ ನೀರಿನ ಬಾನಿ ಹಾಗೂ ಕೊಡೆ, ಪಾದರಕ್ಷೆ, ಜೋಡುವಸ್ತ್ರ, ಶ್ರೀಹರಿಯ ಮೂರ್ತಿ ಇವುಗಳನ್ನು ಶ್ರೇಷ್ಠ ಬ್ರಾಹ್ಮಣರನ್ನು ಕರೆದು ದಾನಕೊಟ್ಟೆ. ಅನಂತರ ಈ ದಾನವಿಧಿಯನ್ನೆಲ್ಲ ಮುಗಿಸಿ ನಾನು ಮನೆಗೆ ಮರಳಿದೆ. ಮುಂದೆ ಕೆಲವುಕಾಲದ ಬಳಿಕ ನಾನು ಮರಣಹೊಂದಿದೆ. ಆ ಜನ್ಮದಲ್ಲಿ ನಾನು ಮೊದಲು ನಾಸ್ತಿಕನಾಗಿದ್ದುದರಿಂದ ಪ್ರೇತನಾದೆ. ಬಂಜರು ಭೂಮಿಯ ಈ ಘೋರಾರಣ್ಯದಲ್ಲಿ ಗತಿ ಇಲ್ಲದೇ ಹಾವಿನಂತೆ ಹರಿದಾಡುತ್ತಿದ್ದೆ. ನನ್ನ ಪೂರ್ವ ಪುಣ್ಯದಿಂದ ಇಂದು ಶ್ರವಣ ದ್ವಾದಶಿ ಯೋಗವಿರುತ್ತದೆ. ಹಿಂದೆ ನಾನು ಮಾಡಿದ ಪುಣ್ಯ ಪ್ರಭಾವದಿಂದ ನನಗೆ ಪ್ರತಿದಿನ ಮಧ್ಯಾಹ್ನ ಕಾಲದಲ್ಲಿ ಈ ನೀರು ತುಂಬಿದ ದೋಣಿ ಮತ್ತು ಮೊಸರನ್ನ ತುಂಬಿದ ಮಣ್ಣಿನ ಪಾತ್ರೆಗಳು ಇಲ್ಲಿ ನಮಗೆ ಲಭ್ಯವಾಗಿರುತ್ತವೆ. ಇದೀಗ ನನ್ನ ಅತಿಥಿಗಳಾಗಿ ಬಂದ ಈ ಎಲ್ಲ ಪ್ರೇತಗಳೂ ಕಳೆದ ಜನ್ಮದಲ್ಲಿ ವೇದಾಧ್ಯಯನಕ್ಕಾಗಿ ತೆಗೆದಿಟ್ಟ ಹಣವನ್ನು ಕದ್ದು ಬಿಟ್ಟು ಈಗ ಇವರೆಲ್ಲರೂ ಪ್ರೇತಗಳಾಗಿ ಅಂತರ್ಪಿಶಾಚಿಗಳಾಗಿ ನೀರಿಲ್ಲದ ಬಂಜರು ಭೂಮಿಯಲ್ಲಿ ಅಲೆಯುತ್ತಿವೆ. ಇವುಗಳಲ್ಲಿ ಪರಸ್ತ್ರೀ ಸಂಸರ್ಗದಿಂದ ಪ್ರೇತಜನ್ಮ ಕೆಲವರಿಗೆ ಬಂದಿದೆ. ಸ್ವಾಮಿದ್ರೋಹದಿಂದ ಹಲವರಿಗೆ ಪ್ರೇತತ್ವ ಪ್ರಾಪ್ತಿ. ಹೀಗೆ ಬಗೆಬಗೆಯ ಪಾಪಗಳಿಂದ ಭೂತಪ್ರೇತ ಪಿಶಾಚರೂಪರಾಗಿ ಈ ಮರುಭೂಮಿಯಲ್ಲಿ ಚಲಿಸುತ್ತಲಿರುವ ಈ ಎಲ್ಲ ಪ್ರೇತಗಳು ನನಗೆ ಇಲ್ಲಿ ಗೆಳೆಯಂದಿರು ಆಗಿರುತ್ತಾರೆ.

ಪರಮಾತ್ಮನಾದ ಶ್ರೀವಿಷ್ಣು ಅಕ್ಷಯ, ಅವನನ್ನು ಉದ್ದೇಶ ಮಾಡಿ ಅವನ ಪ್ರೀತ್ಯರ್ಥವಾಗಿ ನೀಡಿದ ದಾನವೂ ಅಕ್ಷಯವೇ ಆಗಿರುತ್ತದೆ. ನಾನು ನೀಡಿದ ಈ ಅಕ್ಷಯ ಅನ್ನದಾನದಿಂದ ಈ ಪ್ರೇತಗಳು ತೃಪ್ತಿಪಡೆದಿದ್ದರೂ ಅವುಗಳ ಪ್ರೇತಸ್ವಭಾವವು ಮಾತ್ರ ನೀಗಲಿಲ್ಲ. ಅವುಗಳ ಆ ದೌರ್ಬಲ್ಯವೂ ಕಡಿಮೆ ಆಗಲಿಲ್ಲ. ಇಂದು ನೀನು ಒಳ್ಳೇ ಶ್ರೇಷ್ಠ ಅತಿಥಿ ಆಗಿ ದೊರಕಿದೆ. ನಿನ್ನನ್ನು ಭಕ್ತಿಯಿಂದ ಪೂಜಿಸಿದೆ. ಶ್ರದ್ಧೆಯಿಂದ ನಿನಗೆ ನಾನು ಕುಡಿಯಲು ನೀರನ್ನು ನೀಡಿದೆ. ಮೊಸರು ಅನ್ನವನ್ನು ನಿನಗೆ ಉಣಬಡಿಸಿದೆ. ನಿನ್ನನ್ನು ತೃಪ್ತಿಪಡಿಸಿದೆ. ಇದರಿಂದ ಇನ್ನು ಮೇಲೆ ನನಗೆ ಈ ಪ್ರೇತಭಾವದಿಂದ ಬೇಗನೇ ಬಿಡುಗಡೆ ಆಗಲಿರುವದು. ನಾನು ದಿವ್ಯಗತಿಯನ್ನು ಹೊಂದುತ್ತೇನೆ. ಆದರೆ ನಾನು ಹೋದ ಬಳಿಕ ಈ ಪ್ರೇತಗಳು ಮಾತ್ರ ಅನಾಥ ಆಗುತ್ತವೆ. ಇನ್ನು ಇವುಗಳಿಗೆಲ್ಲ ಮೊಸರನ್ನ ಕೊಡುವವರು ಯಾರು? ನೀರು ಕೊಡುವವರು ಯಾರು? ಅವೆಲ್ಲವೂ ಇನ್ನುಮೇಲೆ ವಿಚಿತ್ರ ಪೀಡೆಯನ್ನು ಅನುಭವಿಸುವವು. ಆದ್ದರಿಂದ ಈಗ ಇವುಗಳ ಉದ್ಧಾರಕ್ಕಾಗಿ ಒಂದು ಉಪಾಯವನ್ನು ಮಾಡೋಣ. ನೀನು ಈಗ ಇವುಗಳಿಗೆ ಒಂದು ಉಪಕಾರ ಮಾಡು. ಈ ಎಲ್ಲ ಪ್ರೇತಗಳ ಹೆಸರು ಹಾಗೂ ಗೋತ್ರಗಳನ್ನು ಬರೆದು ಒಂದು ಸಂಪುಟದಲ್ಲಿ ಇಟ್ಟುಕೊ. ಅದನ್ನು ನಿನ್ನ ಬಗಲಲ್ಲಿಯೇ ಇರಿಸು. ನೀನು ಇಲ್ಲಿಂದ ಹಿಮಗಿರಿಗೆ ಹೋಗು. ಆ ಹಿಮಾಲಯ ಪರ್ವತದಲ್ಲಿ ನಿನಗೆ ಒಂದು ಗುಪ್ತನಿಧಿ ದೊರೆಯುವದು. ಅದನ್ನು ತೆಗೆದುಕೊಂಡು ನೀನು ಗಯಾಕ್ಷೇತ್ರಕ್ಕೆ ಪ್ರಯಾಣ ಬೆಳಸು. ಅಲ್ಲಿ ಶ್ರಾದ್ಧವನ್ನು ಮಾಡು. ನಾನು ಹೇಳಿದ ನಾಮಗೋತ್ರಗಳುಳ್ಳ ಈ ಎಲ್ಲ ಪ್ರೇತಗಳನ್ನು ಉದ್ದೇಶಿಸಿ, ಆ ಗಯಾ ಕ್ಷೇತ್ರದ ವಿಷ್ಣುಪಾದದಲ್ಲಿ ಶ್ರಾದ್ಧಮಾಡಿ ಪಿಂಡವನ್ನು ಹಾಕು. ಅದರಿಂದ ಈ ಎಲ್ಲ ಪ್ರೇತಗಳು ಉದ್ಧಾರ ಹೊಂದಲಿ.''

ಹೀಗೆ ಹೇಳಿ ಆ ಪ್ರೇತವು ವ್ಯಾಪಾರಿಯನ್ನು ಬೀಳ್ಕೊಟ್ಟಿತು. ಪ್ರೇತದ ಈ ಎಲ್ಲ ಮಾತುಗಳನ್ನು ಕೇಳಿ ಬಹಳ ಕುತೂಹಲ ಎನಿಸಿತು ಆ ವೈಶ್ಯನಿಗೆ. ಇದರ ಸತ್ಯತೆಯನ್ನು ಪರೀಕ್ಷೆ ಮಾಡಿಬಿಡಬೇಕೆಂದು ನಿರ್ಧರಿಸಿದ. ಅಲ್ಲಿಂದ ನೇರವಾಗಿ ತನ್ನ ಮನೆಗೆ ಮರಳಿದ. ಮನೆಯಿಂದ ಹಿಮಾಲಯಕ್ಕೆ ತೆರಳಿದ. ಅವನಿಗೆ ಆ ಪ್ರೇತದ ಹೇಳಿಕೆಯಂತೆ ಅಪಾರವಾದ ನಿಧಿ ಕಂಡಿತು. ಆದರೆ ಆಗಲೇ ದ್ರವ್ಯದ ಬಗ್ಗೆ ವೈರಾಗ್ಯ ಮೂಡಿದ ಆ ವೈಶ್ಯ ಆ ಹಿಮಗಿರಿಯಲ್ಲಿ ತನಗೆ ದೊರೆತ ಅಪರಂಪಾರ ಐಶ್ವರ್ಯ ನಿಧಿಯಲ್ಲಿಯ ಆರನೆಯ ಒಂದಂಶ ಮಾತ್ರ ತೆಗೆದುಕೊಂಡು ಗಯಾ ಕ್ಷೇತ್ರಕ್ಕೆ ಹೋದ. ಅಲ್ಲಿ ಶ್ರಾದ್ಧವನ್ನು ಮಾಡಿದ. ಮರುಭೂಮಿಯಲ್ಲಿ ಪ್ರೇತಪತಿಯು ಕೊಟ್ಟ ಎಲ್ಲ ನಾಮಗೋತ್ರಗಳನ್ನು ಉಚ್ಚಾರ ಮಾಡಿ ಪ್ರತಿಯೊಂದು ಪ್ರೇತದ ಹೆಸರಿನಿಂದ ಶ್ರಾದ್ಧ ಮಾಡಿ ವಿಷ್ಣುಪಾದದ ಮೇಲೆ ಪಿಂಡ ಹಾಕಿದ. ಪ್ರತಿದಿನ ಒಂದೊಂದು ಪ್ರೇತದ ಹೆಸರಿನಿಂದ ಶ್ರಾದ್ಧವನ್ನು ನೆರವೇರಿಸುತ್ತಿದ್ದ. ಅಂದು ರಾತ್ರಿ ಆ ವೈಶ್ಯನಿಗೆ ಕನಸಿನಲ್ಲಿ ಆ ಪ್ರೇತಗಳು ಕಾಣಿಸಿಕೊಂಡು ''ಮಹಾನುಭಾವ, ನಿನ್ನ ಪ್ರಸಾದದಿಂದ ನಾವು ಈಗ ಪ್ರೇತಜನ್ಮವನ್ನು ನೀಗಿದೆವು. ನೀನು ಈ ಗಯಾಕ್ಷೇತ್ರದಲ್ಲಿ ಶ್ರಾದ್ಧ ಮಾಡಿದ್ದರಿಂದ ನಾವು ಪ್ರೇತತ್ವದಿಂದ ಉದ್ಧಾರ ಹೊಂದಿ ಈಗ ದಿವ್ಯಗತಿಯನ್ನು ಹೊಂದಿದ್ದೇವೆ. ನೀನು ಮಾಡಿದ ಮಹೋಪಕಾರಕ್ಕಾಗಿ ನಾವು ಕೃತಜ್ಞರಾಗಿದ್ದೇವೆ. ನಿನಗೆ ನಮ್ಮ ನಮಸ್ಕಾರ.'' ಎಂದು ಹೇಳಿ ಉಪಕಾರವನ್ನು ಮನ್ನಿಸಿ ಭೆಟ್ಟಿಕೊಟ್ಟು ವಂದನೆಗೈದು ಹೋಗುತ್ತಿದ್ದವು.

ಹೀಗೆ ಆ ವ್ಯಾಪಾರಿಯು ಎಲ್ಲ ಪ್ರೇತಗಳ ಹೆಸರಿನಿಂದ ಗಯಾಕ್ಷೇತ್ರದಲ್ಲಿ ಶ್ರಾದ್ಧ ಮಾಡಿದ ಅವೆಲ್ಲವುಗಳನ್ನು ಪ್ರೇತಯೋನಿಯಿಂದ ಬಿಡುಗಡೆ ಮಾಡಿಸಿ ತನ್ನ ಮನೆಗೆ ತೆರಳಿದ. ಮನೆಯಲ್ಲಿಯೇ ಶ್ರೀಹರಿಯ ಧ್ಯಾನ ಮಾಡುತ್ತ ಕೆಲವು ಕಾಲ ವಾಸಿಸಿದ.

ಹಲವಾರು ದಿನಗಳು ಕಳೆದ ಬಳಿಕ ಭಾದ್ರಪದ ಶುಕ್ಲಪಕ್ಷದಲ್ಲಿ ಶ್ರವಣ ದ್ವಾದಶಿ ಯೋಗ ಬಂದಿತು. ಮತ್ತೆ ವೈಶ್ಯನು ತಾನೇ ಚಂದ್ರಭಾಗಾ ನದಿಗಳ ಸಂಗಮ ಕ್ಷೇತ್ರಕ್ಕೆ ತೆರಳಿದ. ಅಲ್ಲಿ ಸ್ನಾನ ಮಾಡಿದ. ವಿಷ್ಣುವನ್ನು ಪೂಜಿಸಿದ. ನೀರಿನ ದೋಣಿಯನ್ನು, ಮೊಸರನ್ನದ ಮಡಿಕೆಗಳನ್ನು ಯೋಗ್ಯ ವಿದ್ವಾಂಸರಿಗೆ ದಾನ ನೀಡಿದ. ಅನಂತರ ಮುಂದೆ ಹಲವಾರು ವರ್ಷಗಳ ಬಳಿಕ ಕಾಲ ಪ್ರಾಪ್ತವಾದ ಮರಣವನ್ನು ಹೊಂದಿದ. ಅದರಿಂದ ವೈಕುಂಠ ಲೋಕಕ್ಕೆ ಪ್ರಯಾಣ ಬೆಳೆಸಿದ. ಈಗಲೂ ಕೂಡ ಅವನು ಆ ವಿಷ್ಣುಲೋಕದಲ್ಲಿ ಆನಂದದಿಂದ ನಲಿದಾಡುತ್ತಿದ್ದಾನೆ.

ಆದ್ದರಿಂದ ಪ್ರತಿಯೊಬ್ಬರೂ ಇಹದಲ್ಲಿಯೂ ಪರದಲ್ಲಿಯೂ ಸರ್ವಸೌಭಾಗ್ಯ ಪ್ರದವಾದ ಮತ್ತು ಸರ್ವಪಾಪವನ್ನು ಪರಿಹರಿಸುವ, ಸದ್ಬುದ್ಧಿಯನ್ನು ನೀಡುವ ಶ್ರವಣ ದ್ವಾದಶಿಯ ವ್ರತವನ್ನು ಅವಶ್ಯವಾಗಿ ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶ್ರಾವಣ ದ್ವಾದಶೀ ವ್ರತ ವಿಧಾನ ಎಂಬ ಆರವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ನದೀ ತ್ರಿರಾತ್ರ ವ್ರತದ ಮಾಹಾತ್ಮ್ಯ



**ನಾರದ:-** ದೇವೋತ್ತಮನಾದ ಜಗನ್ನಾಥ, ನೀನು ನಿನ್ನ ಭಕ್ತರಿಗೆಲ್ಲ ಭುಕ್ತಿದಾಯಕ ಮತ್ತು ಮುಕ್ತಿ ಪ್ರದಾಯಕ. ಮಾನವರಿಗೆ ದುಃಖವನ್ನು ಕಾಣುವ ಪ್ರಸಂಗವೇ ಬಾರದಂಥ ಏನಾದರೂ ಉಪಾಯವು ಇದ್ದರೆ ತಿಳಿಸು.

**ಪರಮೇಶ್ವರ:-** ನಾರದ, ನದೀ ತ್ರಿರಾತ್ರ ವ್ರತದ ವಿಧಾನವನ್ನು ಹೇಳುತ್ತೇನೆ. ಕೇಳು, ಇದರಿಂದ ಮಾನವರಿಗೆ ಎಂದಿಗೂ ನರಕವನ್ನು ನೋಡುವ ಸಂದರ್ಭವೇ ಬರುವದಿಲ್ಲ. ಮತ್ತು ಈ ವ್ರತವನ್ನು ಆಚರಿಸಿದ ಮನುಷ್ಯರು ಆಯುಷ್ಯವನ್ನು, ಆರೋಗ್ಯವನ್ನು, ಸೌಭಾಗ್ಯವನ್ನು ಸುಖಸಂಪದವನ್ನು ಇಲ್ಲಿ ಹೊಂದಿ ಮುಂದೆ ಸ್ವರ್ಗಸುಖವನ್ನು ಪಡೆಯುತ್ತಾರೆ. ಆಷಾಢ ಮಾಸದಲ್ಲಿ ಅಥವಾ ವರ್ಷ ಋತುವಿನಲ್ಲಿ ಆಕಾಶದ ತುಂಬ ಮೋಡ ಗುಡುಗಿ, ಮಳೆಸುರಿದು, ನೀರಿನಿಂದ ನದಿಯಲ್ಲಿ ಮಹಾಪ್ರವಾಹ ಬಂದಾಗ ಮೂರು ರಾತ್ರಿ ಈ ವ್ರತವನ್ನು ಆಚರಿಸಬೇಕು. ನದಿಗೆ ಮಹಾಪೂರ ಬಂದಾಗ ಸ್ತ್ರೀಯರು ಆ ಪ್ರವಾಹದ ನೀರನ್ನು ಕಪ್ಪಾದ ಕೊಡದಲ್ಲಿ ತುಂಬಿಕೊಂಡು ಮನೆಗೆ ಒಯ್ಯಬೇಕು. ಪ್ರಾತಃಕಾಲದಲ್ಲಿ ನದಿಗೆ ಹೋಗಿ ಸ್ನಾನ ಮಾಡಿ ಮನೆಗೆ ಬಂದು ದೇವರ ಪೂಜೆಯನ್ನು ಪೂರೈಸಬೇಕು. ಶಕ್ತಿ ಇದ್ದರೆ ಮೂರು ದಿನ ಉಪವಾಸ ಮಾಡಬೇಕು. ಇಲ್ಲದಿದ್ದರೆ ಒಪ್ಪತ್ತು. ಊಟ ಮಾಡಿ ನಂದಾ ದೀಪವನ್ನು ದೇವರ ಮುಂದೆ ಹಚ್ಚಿ ಇಡಬೇಕು. ಎರಡೂ ಹೊತ್ತು ದೇವರ ಪೂಜೆಯನ್ನೂ, ನದೀ ಪೂಜೆಯನ್ನೂ, ಆಯಾ ಮಹಾನದಿಗಳ ನಾಮವನ್ನು ಉಚ್ಚರಿಸಿ ಮಾಡಬೇಕು. ಸ್ತ್ರೀಯರು ಮಹಾಪೂರದ ನೀರನ್ನು ತುಂಬಿಕೊಂಡು ತಂದ ಆ ಬಿಂದಿಗೆಯನ್ನು ಮನೆಯಲ್ಲಿ ಇಟ್ಟು ಕಲಶ ಸ್ಥಾಪನೆ ಮಾಡಿ ಅದರ ಒಳಗೆ ಶ್ರೀಹರಿಯನ್ನು ಜಲಶಾಯಿಯಾಗುವಂತೆ ಸ್ಥಾಪಿಸಬೇಕು.

ಅನಂತರ

**ನಮೋ ದೇವ್ಯೈ ಚ ಗಂಗೇತಿ ಗೌತಮೀತಿ ನದೀತಿ ಚ ।**
**ಸಿಂಧೋಚ್ಚೈವಚ ಕಾವೇರಿ ಸರಸ್ವತಿ ನಮೋಽಸ್ತುತೇ ॥**
**ತಾಪೀ ಪಯೋಷ್ಣೀ ಪೂರ್ಣೇತಿ ಮಹೇಂದ್ರ ಸುಖದೇತಿ ಚ ।**
**ಕಾಶ್ಯಪಿ ಗಂಡಕಿ ಚೈವ ಸಿಂಧುನದ್ಯೈ ನಮೋ ನಮಃ ॥**

ಎಂದು ಮಹಾನದಿಗಳನ್ನು ಅವೆಲ್ಲವುಗಳ ಹೆಸರನ್ನು ಹಿಡಿದು ಉಚ್ಚರಿಸಿ ನಮಸ್ಕಾರ ಮಾಡಬೇಕು.

ಆ ಬಳಿಕ

**ವರುಣಾಯ ನಮಸ್ತೇಽಸ್ತು ಜಲವಾಸ ಹರಿಪ್ರಿಯ ।**
**ಯಾದೋನಾಥ ರಸೇಶಾನ ಕಲ್ಯಾಣಂ ದೇಹಿ ಮೇ ಸದಾ ॥**
**ಗ್ರಹಾಣಾರ್ಘ್ಯಂ ಮಯಾ ದತ್ತಂ ದೇಹಿ ಮೇ ವಾಂಛಿತಂ ಫಲಂ ।**

ಎಂಬ ಮಂತ್ರವನ್ನು ಹೇಳಿ ವರುಣನಿಗೆ ಅರ್ಘ್ಯವನ್ನು ಕೊಡಬೇಕು. ಅನಂತರ ತುಪ್ಪದಲ್ಲಿ ಮಾಡಿದ ಪಕ್ವಾನ್ನಗಳನ್ನು ಎಲ್ಲ ನದೀದೇವಿಯರಿಗೂ ಮತ್ತು ತತ್ಪೂರ್ವದಲ್ಲಿ ಶ್ರೀಹರಿಗೂ ನೈವೇದ್ಯವನ್ನು ತೋರಿಸಬೇಕು.

**ನಮಸ್ತೇ ಕೇಶವಾನಂತ ಜಲಶಾಯಿನ್ ನಮೋಽಸ್ತುತೇ ।**
**ಪರಿಪಾಲಯ ಮಾಮೀಶ ಗೋವಿಂದ ವರದೋ ಭವ ॥**

ಎಂಬ ಕೇಶವನ ಪೂಜೆಯ ಅನಂತರ ಪ್ರಾರ್ಥನೆಯನ್ನು ಸಲ್ಲಿಸಬೇಕು. ಹೀಗೆ ಮೂರು ದಿನ ಉಪವಾಸವಿದ್ದು ದೇವರ ಪೂಜೆ ಮಾಡಿ ಕೊನೆಯ ದಿನ ಪಾರಣೆ ಮಾಡಬೇಕು. ಪಾರಣೆಗೆ ಹವಿಷ್ಯವಾದ ಅನ್ನವನ್ನು ಮಾತ್ರ ಉಪಯೋಗಿಸಬೇಕು. ಆ ಅನ್ನವನ್ನು ಏಳು ಬಿದಿರು ಕಟ್ಟಿಗೆಯ ಪಾತ್ರೆಗಳಲ್ಲಿಯೇ ಕುದಿಸಬೇಕು. ಹುಳಿ, ಖಾರ ಮತ್ತು ಜೇನುತುಪ್ಪ, ಉದ್ದು ಇವುಗಳನ್ನು ವರ್ಜಸಬೇಕು. ಹೀಗೆ ವರ್ಷಕ್ಕೆ ಮೂರು ದಿನ ಮಳೆಗಾಲದಲ್ಲಿ ವ್ರತವನ್ನು ಮಾಡಬೇಕು. ಹೀಗೆ ಮೂರು ವರ್ಷಮಾಡಿ ಕೊನೆಗೆ ಉದ್ಯಾಪನವನ್ನು ಆಚರಿಸಬೇಕು. ಉದ್ಯಾಪನದ ಕಾಲದಲ್ಲಿ ಕರೀಬಟ್ಟೆ ಹೊದಿಸಿದ ಗೋವನ್ನು, ಮತ್ತು ಎಳ್ಳನ್ನು ದಾನ ಕೊಡಬೇಕು. ವಾರುಣ ಮಂಡಲವನ್ನು ಮಾಡಿ, ಸರ್ವತೋ ಭದ್ರಮಂಡಲವನ್ನೂ ಅದರಲ್ಲಿ ಮೂಡಿಸಿ ಅದರ ನಡುವೆ ಕುಂಭ ಪ್ರತಿಷ್ಠಾಪನೆ ಮಾಡಿ ಕಲಶಸ್ಥಾಪನೆಯನ್ನು ಮಾಡಬೇಕು. ಬಂಗಾರದ ಒಂದು ನದೀ ರೂಪವಾಗಿ ವರುಣನ ಪ್ರತಿಮೆಯನ್ನು ಮಾಡಿಸಿ ಅದನ್ನು ವಿಧಿಪೂರ್ವಕವಾಗಿ ಪೂಜೆಮಾಡಿ ಯೋಗ್ಯರಾದ ದಂಪತಿಗಳನ್ನು ಕರೆದು ದಾನ ಕೊಡಬೇಕು. ಸರ್ವಶಾಸ್ತ್ರ ವಿದ್ವಾಂಸರಾದ ಗುರುಗಳಿಗೆ ಕೊಟ್ಟರೆ ವಿಶೇಷ ಫಲ. ಉದ್ಯಾಪನ ಕಾಲದಲ್ಲಿ ಯಥಾಶಕ್ತಿ ಭೂರಿ ಭೋಜನವನ್ನು ಮಾಡಿಸಬೇಕು. ಇದನ್ನು ಪೂರ್ವಕಾಲದಲ್ಲಿ ಅನೇಕ ದೇವತಾ ಪತ್ನಿಯರು, ಋಷಿ ಪತ್ನಿಯರು ಆಚರಿಸಿದ್ದಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ನದೀ ತ್ರಿರಾತ್ರ ವ್ರತದ ಮಾಹಾತ್ಮ್ಯ ಎಂಬ ಎಪ್ಪತ್ತನೇಯ ಅಧ್ಯಾಯ ಮುಗಿದುದು*



## ಭಗವಂತನ ನಾಮ ಮಾಹಾತ್ಮ್ಯ — ಅಧ್ಯಾಯ - ೭೧

**ನಾರದ :-** ವಿಶ್ವೇಶ್ವರ, ಭಗವಂತನ ನಾಮದಲ್ಲಿ ಶಕ್ತಿಯಾದರೂ ಎಷ್ಟು ಇರುತ್ತದೆ ? ಅದನ್ನು ಹೇಳು. ಆ ನಾಮದ ಮಹಿಮೆಯಾದರೂ ಏನು?

ಎಂದು ನಾರದರು ಪೂರ್ವಕಾಲದಲ್ಲಿ ಬ್ರಹ್ಮದೇವರನ್ನು ಕುರಿತು ಪ್ರಶ್ನೆ ಮಾಡಿದರು. ಆಗ ಬ್ರಹ್ಮದೇವರು ನಾರದರಿಗೆ ಹೀಗೆ ಉತ್ತರ ಕೊಟ್ಟರು.

**ಬ್ರಹ್ಮ :-** ಈ ಕಲಿಯುಗದಲ್ಲಿ ವಿಶೇಷವಾಗಿ ಭಗವಂತನ ನಾಮಸ್ಮರಣೆಯನ್ನು ಮಾಡುತ್ತ ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಬೇಕು. ಬೆಳಿಗ್ಗೆ, ಮಧ್ಯಾಹ್ನ ಸಾಯಂಕಾಲ ಮತ್ತು ರಾತ್ರಿ ಕಾಲದಲ್ಲಿ ನಾರಾಯಣನ ನಾಮಸ್ಮರಣದಿಂದ ಎಲ್ಲ ಪಾಪಗಳೂ ಕ್ಷಯವನ್ನು ಹೊಂದುತ್ತವೆ. ನಾರಾಯಣನ ನಾಮೋಚ್ಚಾರಣ ಮಾಡುವ ಮುಖವು ಪರಮಶ್ರೇಷ್ಠವಾದ ತೀರ್ಥ.

**ಸತ್ಯಂ ಸತ್ಯಂ ಪುನಃ ಸತ್ಯಂ ಭಾಷಿತಂ ಮಮ ಸುವ್ರತ ।**
**ನಾಮೋಚ್ಚಾರಣ ಮಾತ್ರೇಣ ಮಹಾ ಪಾಪಾತ್ ಪ್ರಮುಚ್ಯತೇ ॥**

ಪರಮಾತ್ಮನ ನಾಮೋಚ್ಚಾರ ಮಾತ್ರದಿಂದಲೇ ಮಾನವನು ಎಲ್ಲ ಮಹಾಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಈ ನನ್ನ ಹೇಳಿಕೆ ಸತ್ಯ ಸತ್ಯ ಸತ್ಯ.

**ರಾಮ ರಾಮೇತಿ ರಾಮೇತಿ ರಾಮೇತಿ ಚ ಪುನರ್ಜಪನ್ ।**
**ಸ ಚಂಡಾಲೋಽಪಿ ಪೂತಾತ್ಮಾ ಜಾಯತೇ ನಾತ್ರ ಸಂಶಯಃ ॥**

ರಾಮ, ರಾಮ, ರಾಮ ಮತ್ತೆ ರಾಮ ರಾಮ ಎಂದು ಪುನಃ ಪುನಃ ಜಪವನ್ನು ಮಾಡುತ್ತಲಿದ್ದ ಚಂಡಾಲನು ಕೂಡ ಪವಿತ್ರಾತ್ಮನು ಆಗುತ್ತಾನೆ ಇದರಲ್ಲಿ. ಸಂದೇಹ ಇಲ್ಲ. ಕೃಷ್ಣ, ಕೃಷ್ಣ ಎಂದು ಪಠಿಸುತ್ತ ಇದ್ದರೆ ವಿಷ್ಣು ಲೋಕವನ್ನೇ ಹೊಂದುತ್ತಾರೆ. ಕಲಿಯುಗದಲ್ಲಿ ನರಸಿಂಹ ದೇವರ ನಾಮೋಚ್ಚಾರಣೆ ಮಾಡಿದರೆ ಮಹಾ ಪಾಪದಿಂದ ಮುಕ್ತಿ ಆಗುತ್ತದೆ.

**ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥**

ಕೃತಯುಗದಲ್ಲಿ ಧ್ಯಾನ, ತ್ರೇತಾಯುಗದಲ್ಲಿ ಯಜ್ಞ, ದ್ವಾಪರದಲ್ಲಿ ಅರ್ಚನೆಗಳಿಂದ ಬರುವ ಪುಣ್ಯವು ಕಲಿಯುಗದಲ್ಲಿ ಕೇವಲ ಕೇಶವನ ನಾಮೋಚ್ಚಾರಣ ಮಾತ್ರದಿಂದ ಬರುವದು.

**ನಾರದ:-** ಶ್ರೀಹರಿಯ ರಾಮಕೃಷ್ಣಾದಿ ನಾಮಗಳ ಸ್ಮರಣೆ ಮಾಡಿದ ಮುಖವೇ ಮಹಾತೀರ್ಥ. ಸ್ಮರಣೆ ಮಾಡುವ ಮನುಷ್ಯನೇ ಒಂದು ದೊಡ್ಡ ಕ್ಷೇತ್ರ ಎಂದು ತಾವು ಅಪ್ಪಣೆ ಕೊಡಿಸಿದಿರಿ. ಅದೇನೋ ನಿಜ. ಆದರೆ ಇಂಥ ದೇವರ ನಾಮಗಳು ಎಷ್ಟು ಇರುತ್ತವೆ? ಅವುಗಳನ್ನೆಲ್ಲ ನನಗೆ ಹೇಳು.

**ಬ್ರಹ್ಮ:-** ನಿನಗೆ ಅದನ್ನು ಸರಿಯಾಗ ಕೈಲಾಸಪತಿಯಾದ ಶಂಕರನು ತಿಳಿಸುತ್ತಾನೆ. ಅವನ ಬಳಿಗೆ ಹೋಗು.

ಬ್ರಹ್ಮದೇವರ ಆದೇಶದಂತೆ ನಾರದರು ಕೈಲಾಸ ಪರ್ವತಕ್ಕೆ ಬಂದು ಪರಮೇಶ್ವರನಿಗೆ ನಮಸ್ಕಾರ ಮಾಡಿ, ಬ್ರಹ್ಮದೇವರ ಸಂದೇಶವನ್ನು ತಿಳಿಸಿ, ವಿಷ್ಣುವಿನ ಸಹಸ್ರನಾಮಗಳನ್ನು ತಮಗಾಗಿ ಹೇಳಲು ಕೇಳಿಕೊಂಡರು. ನಾರದರ ಈ ಬಿನ್ನಹವನ್ನು ಕೇಳಿಯೇ ಮಹಾದೇವರು **'ರೋಮಾಂಚಿತಸ್ತತೋ ಜಾತೋ ವಿಷ್ಣೋರ್ನಾಮಾನಿ ಸಂಸ್ಮರನ್'** ವಿಷ್ಣುವಿನ ನಾಮಗಳನ್ನು ನೆನೆದು ಮಹೇಶ್ವರನು ರೋಮಾಂಚಿತನಾದ ಮತ್ತು ನಾರದರನ್ನು ಕುರಿತು ಮಾತನಾಡಿದ.

**ಮಹೇಶ್ವರ:-** ನಾರದ, ವಿಷ್ಣುವಿನ ಈ ಸಹಸ್ರನಾಮಗಳು ಪರಮಗೌಪ್ಯವಾಗಿವೆ. ಹಿಂದೊಮ್ಮೆ ಪಾರ್ವತಿಯು ಏಕಾಂತದಲ್ಲಿ ನನ್ನನ್ನು ಕೇಳಿದಳು.

**ಪಾರ್ವತಿ:-** ಕೈಲಾಸಪತಿಯೇ, ನೀನು ಯಾವಾಗಲೂ ಜಪವನ್ನು ಮಾಡುತ್ತಲೇ ಇರುವೆ. ನೀನು ಮಾಡುವ ಜಪ ಯಾವುದು? ನೀನು ಈಶ್ವರ. ನಿನ್ನಿಂದಲೇ ಐಶ್ವರ್ಯ ಎಂಬ ಶಬ್ದವು ಹುಟ್ಟಿದೆ. ನಿನ್ನ ವೈಭವಕ್ಕೆ ಕೊರತೆ ಇಲ್ಲ. ಇಷ್ಟಾದರೂ ನೀನು ಆನೆಯ ತೊಗಲನ್ನು ಉಟ್ಟುಕೊಂಡಿರುವೆ. ಮೈತುಂಬ ಬೂದಿಯನ್ನು ಬಳಿದುಕೊಂಡಿರುವೆ. ಜಟಾಧಾರಿಯೇ ಆಗಿರುವೆ. ಇದೆಲ್ಲವೂ ಏತಕ್ಕಾಗಿ? ಯಾರನ್ನು ಮೆಚ್ಚಿಸಲಿಕ್ಕಾಗಿ ಈ ನಿನ್ನ ತಪಸ್ವೀ ವೇಷ?

**ಮಹಾದೇವ:-** ಭದ್ರೇ, ನೀನು ನನ್ನ ಪರಮಭಕ್ತಳು. ಮೆಚ್ಚಿನ ಮನದನ್ನೆ. ನಿನಗೆ ಪರಮ ಗೌಪ್ತವಾದ ವಿಷಯವನ್ನು ಹೇಳುತ್ತೇನೆ ಕೇಳು.

ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋನ ಜಾತುಚಿತ್ ।
ಸರ್ವೇ ವಿಧಿನಿಷೇಧಾಃ ಸ್ಯುರೇತಸ್ಯೈವ ವಿಧಿಂಕರಾಃ ॥

ಯಾವಾಗಲೂ ವಿಷ್ಣುವಿನ ಸ್ಮರಣೆಯನ್ನು ಮಾಡಬೇಕು. ಅವನನ್ನು ಎಂದಿಗೂ ಮರೆಯಬಾರದು. ವೇದಶಾಸ್ತ್ರಗಳಲ್ಲಿ ಹೇಳಿದ ಎಲ್ಲ ವಿಧಿನಿಷೇಧಗಳೂ ಈ ಎರಡು ಮಾತಿನ ತಾತ್ಪರ್ಯವಾಹಕವೇ ಆಗಿರುತ್ತವೆ.

ದೇವಿ, ಪೂರ್ವಕಾಲದಲ್ಲಿ ಎಲ್ಲ ಜನರೂ ಹರಿಯನ್ನೇ ಪೂಜಿಸುತ್ತಿದ್ದರು. ಅವನನ್ನೇ ಭಕ್ತಿಯಿಂದ ಆರಾಧಿಸುತ್ತಿದ್ದರು. ಬ್ರಹ್ಮ, ನಾನು, ಇಂದ್ರಾದಿ ದೇವತೆಗಳು ಮೊದಲಾದವರನ್ನು ಯಾರೂ ಪೂಜಿಸುತ್ತಲೇ ಇರಲಿಲ್ಲ. ಆಗ ನಾನು.

ಅಲಗಾ ಚಾತ್ಮನಃ ಪೂಜಾಂ ಸಮ್ಯ ಬ್ಜಾರಾಧಿತೋ ಹರಿಃ ।
ಮಯಾಸ್ಮಾದಪಿ ಚ ಶ್ರೇಷ್ಠ್ಯಂ ವಾಂಛತಾ ಹಂ ಕೃತಾರ್ಥಿತಃ ॥

ಎಲ್ಲಿಯೂ ನನ್ನ ಪೂಜೆ ದೊರೆಯದಂತಾದಾಗ ನಾನು ಶ್ರೀಹರಿಯನ್ನು ಆರಾಧಿಸಿ 'ನಿನಗಿಂತಲೂ ನಾನು ಹೆಚ್ಚಿನ ಶ್ರೇಷ್ಠತೆಯನ್ನೂ, ಪೂಜೆಯನ್ನೂ ಹೊಂದಬೇಕು' ಎಂದು ಕೇಳಿಕೊಂಡೆ ಆ ಪರಮಾತ್ಮನು ನನ್ನ ಇಚ್ಛೆಯನ್ನು ಪೂರ್ಣಮಾಡಿ ನನ್ನನ್ನೂ ಹಾಗೂ ಉಳಿದ ದೇವತೆಗಳನ್ನೂ ಕೃತಾರ್ಥರನ್ನಾಗಿ ಮಾಡಿದ.

ತತಃ ಸಾಕ್ಷಾತ್ ಜಗನ್ನಾಥಃ ಪ್ರಸನ್ನೋ ಭಕ್ತವತ್ಸಲಃ ।
ಅಂಶಾಂತೇನಾತ್ಮನೈವೈತಾನ್ ಪೂಜಯಾಮಾಸ ಕೇಶವಃ ॥
ದೇವಾನ್ ಪಿತೃನ್, ದ್ವಿಜಾನ್ ಹವ್ಯಕವ್ಯಾದ್ಯೈಃ ಕುರಣಾಮಯಃ ।
ತತಃ ಪ್ರಭೃತಿ ಪೂಜ್ಯಂತೇ ತ್ರೈಲೋಕ್ಯೇ ಸಚರಾಚರೇ ॥
ಬ್ರಹ್ಮಾದಯಃ ಸುರಾಸ್ಸರ್ವೇ ಪ್ರಸಾದಾತ್ ಶಾರ್ಙ್ಗ ಧನ್ವನಃ ।

ರುದ್ರದೇವರ ಹಾಗೂ ಉಳಿದ ದೇವತೆಗಳ ಮೇಲೆ ಕರುಣೆಯಿಂದ ಭಕ್ತವತ್ಸಲನಾದ ಆ ಜಗನ್ನಾಥನು ಅವರ ಮೇಲೆ ಪ್ರಸನ್ನನಾಗಿ ತಾನೇ ಒಂದೊಂದಾಗಿ ಅಂಶ, ಆವೇಶ, ಅವತಾರ ರೂಪಗಳಿಂದ ಭೂಲೋಕದಲ್ಲಿ ಇಳಿದು ಬಂದು ಈ ಎಲ್ಲ ಬ್ರಹ್ಮಾದಿ ದೇವತೆಗಳನ್ನು, ಮತ್ತು ಪಿತೃಗಳನ್ನು, ಬ್ರಾಹ್ಮಣರನ್ನು, ಹವ್ಯಕವ್ಯಾದಿಗಳಿಂದ ಸ್ವಯಂ ಪೂಜೆ ಮಾಡಿದ. ಜನರಿಗೆ ಉಳಿದ ದೇವತೆಗಳ ಪೂಜೆಯ ಪ್ರಕಾರವನ್ನು ತೋರಿಸಿ ಕೊಟ್ಟ. ಅಂದಿನಿಂದ ಈ ಮೂರು ಲೋಕಗಳಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ವಿಷ್ಣುವಿನ ಪ್ರಸಾದದಿಂದಲೇ ಎಲ್ಲ ಜನರಿಂದಲೂ ಪೂಜಿಸಲ್ಪಡುತ್ತಾರೆ.

ಹೀಗೆ ಎಲ್ಲ ದೇವತೆಗಳಿಗೂ ಮೂರು ಲೋಕಗಳಲ್ಲಿಯೂ ಪೂಜೆ ಹಾಗೂ ಗೌರವ, ಆದರಗಳು ಸಲ್ಲುವಂತೆ ಮಾಡಿ, ವಿಷ್ಣುವಿಗಿಂತ ಹೆಚ್ಚಿನ ಶ್ರೇಷ್ಠತೆ ಹಾಗೂ ಸ್ಥಾನಮಾನಗಳನ್ನು ಕೇಳಿದ ನನ್ನನ್ನು ಕುರಿತು ಆ ಭಕ್ತವತ್ಸಲನಾದ ಭಗವಂತನು ಹೀಗೆ ನುಡಿದ.

**ವಿಷ್ಣು:-** ಮಾಂ ಚೋವಾಚ ಯಥಾ ಮತ್ತಃ ಪೂಜ್ಯಃ ಶ್ರೇಷ್ಠೊ ಭವಿಷ್ಯಸಿ । ಶಂಕರ, ನೀನು ನನಗಿಂತಲೂ ಪೂಜ್ಯನೂ, ಶ್ರೇಷ್ಠನೂ ಆಗುವಿ.

ತ್ವಾಮಾರಾಧ್ಯ ತಥಾ ಶಂಭೋ ಗೃಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥

ಶಂಭೋ, ನಾನು ದ್ವಾಪರಾದಿ ಯುಗಗಳಲ್ಲಿ ನನ್ನ ಅಂಶದಿಂದ (ಸ್ವರೂಪಾಂಶ ಮತ್ತು ಭಿನ್ನಾಂಶ) ಗಳಿಂದ ಮನುಷ್ಯಾದಿ ಯೋನಿಗಳಲ್ಲಿ ಹುಟ್ಟಿ, ನಿನ್ನನ್ನು ಆರಾಧಿಸಿ ನಿನ್ನಿಂದ ವರವನ್ನು ಪಡೆಯುತ್ತಾನೆ.

**ಸ್ವಾಗಮೈಃ ಕಲ್ಪಿತೈಸ್ತ್ವಂಚ ಜನಾನ್ ಮದ್ವಿಮುಖಾನ್ ಕುರು ।**
**ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೀಶೋತ್ತರೋತ್ತರಾ ॥**

ನೀನು ನಿನ್ನ ಬುದ್ಧಿಯಿಂದಲೇ ಕಲ್ಪನೆ ಮಾಡಿ ಸ್ವಾಗಮ ಎಂದರೆ ಶೈವಾಗಮವನ್ನು ರಚಿಸು. ಅದರಿಂದ ಜನರನ್ನು ನನ್ನಿಂದ ವಿಮುಖರನ್ನಾಗಿ ಮಾಡು. ಮತ್ತು ನನ್ನ ನಿಜರೂಪವನ್ನು ಗೋಪನ ಮಾಡು (ಮುಚ್ಚಿಡು). ಅದರಿಂದ ಈ ಪ್ರಪಂಚದಲ್ಲಿ ಇರುವ ಉತ್ತಮ ಜೀವರಿಗೆ ಉತ್ತಮ ಸದ್ಗತಿ ಆಗುವದು. ಅಧಮರಿಗೆ ಅಧೋಗತಿಯೂ ಆಗುವದು.

**ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ ಮೋಹಯಿಷ್ಯತಿ ।**
**ತ್ವಂಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥**

ಜನರನ್ನೆಲ್ಲ ಮೋಹಗೊಳಿಸಲಿಕ್ಕಾಗಿ ನಾನು ಮೋಹವನ್ನು ಸೃಷ್ಟಿಸುತ್ತೇನೆ. ಪರಾಕ್ರಮಶಾಲಿಯಾದ ರುದ್ರನೆ, ನೀನು ಮೋಹಕವಾದ ಶಾಸ್ತ್ರವನ್ನು ರಚಿಸು, ನಿನ್ನ ಭಕ್ತರಿಂದಲೂ ಮಾಡಿಸು.

**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ ।**
**ಪ್ರಕಾಶಂ ಕುರು ಚಾತ್ಮಾನ ಮಪ್ರಕಾಶಂಚ ಮಾಂ ಕುರು ॥**

ಶಂಕರ, ನೀನು ಸುಳ್ಳುಸುಳ್ಳಾದ ಮತ್ತು ವಿಪರೀತವಾದ ಶಾಸ್ತ್ರಗಳನ್ನು ರಚಿಸು. ಅನ್ಯಥಾ ತತ್ವಗಳನ್ನು ತೋರಿಸು. ಮತ್ತು ನೀನೇ ಬೆಳಕಿಗೆ ಬಾ. ನನ್ನ ಸ್ವರೂಪವು ಆಚ್ಛಾದಿತವಾಗುವಂತೆ ಮಾಡು. ನನ್ನನ್ನು ಹಿಂದೆ ಇಟ್ಟು ನೀನು ಮುಂದೆ ಬಾ.

**ರುದ್ರ:-** ಭಗವನ್, ನೀನು ಈ ಜಗತ್ತಿಗೆಲ್ಲ ನಿಜವಾದ ಪ್ರಭು. ಸರ್ವ ಕರ್ತಾ. ಸರ್ವ ಸ್ವಾಮಿ. ನಿನ್ನನ್ನು ಮುಚ್ಚಿ ಇಟ್ಟು ಅಥವಾ ನಿನ್ನನ್ನು ಹಿಂದೆ ಹಾಕಿ ನಾನೇ ಶ್ರೇಷ್ಠ. ನಾನೇ ಸರ್ವೋತ್ತಮ ಎಂದು ನಾನು ಕಲ್ಪಿತವಾದ ಶಾಸ್ತ್ರಗಳನ್ನು ಮಾಡಿ ಜನರಲ್ಲಿ ಅನ್ಯಥಾ ಜ್ಞಾನವನ್ನು ಪ್ರಚುರಪಡಿಸಿದರೆ ನನಗೆ ಸಾವಿರ ಬ್ರಹ್ಮಹತ್ಯಾ ಪಾಪಗಳನ್ನು ಮಾಡಿದಕ್ಕಿಂತ ಹೆಚ್ಚಿನ ಪಾಪ ಬರುವದು. ಸಾವಿರ ಬ್ರಹ್ಮಹತ್ಯಾ ಪಾಪಗಳನ್ನು ಹೇಗಾದರೂ ಕಳೆದುಕೊಳ್ಳಬಹುದು. ಆದರೆ "ನಪುನಸ್ತ್ವದ ವಿಜ್ಞಾನಂ ಕಲ್ಪ ಕೋಟಿ ಶತೈರಪಿ" ನಿನ್ನ ಅಜ್ಞಾನ ಅಥವಾ ಅನ್ಯಥಾ ಜ್ಞಾನದಿಂದ ಎಂದರೆ ವಿಪರೀತ ಜ್ಞಾನದಿಂದ ಬರುವ ಪಾಪವು ಕೋಟಿಕಲ್ಪ ಕಾಲದವರೆಗೆ ಪ್ರಾಯಶ್ಚಿತ್ತ ಮಾಡಿಕೊಂಡರೂ ಕಳೆದುಹೋಗಲಾರದು.

**ತಸ್ಮಾನ್ ಮಯಾ ಕೃತಾ ಸ್ಪರ್ಧಾ ಪವಿತ್ರಃ ಸ್ಯಾಂ ಕಥಂ ಹರೇ ।**
**ತನ್ಮೇ ಕಥಯ ಗೋವಿಂದ ಪ್ರಾಯಶ್ಚಿತ್ತಂ ಯದಿಚ್ಛಸಿ ॥**

ಗೋವಿಂದ, ನಿನ್ನೊಂದಿಗೆ ಸ್ಪರ್ಧೆಗೆ ನಿಂತು, ನಿನಗಿಂತ ನಾನೇ ಶ್ರೇಷ್ಠ ಎಂದು ಎನಿಸಿಕೊಂಡರೆ ಮತ್ತು ಅಂಥ ಮೋಹಕವಾದ ಶಾಸ್ತ್ರಗಳನ್ನು ಮಾಡಿ, ವಿಷ್ಣುವಿಗಿಂತ ಶಿವನೇ ಶ್ರೇಷ್ಠ ಎಂದು ನಾನು ಸಾಧಿಸಿದರೆ ಇದಕ್ಕೆ ಏನು ಪ್ರಾಯಶ್ಚಿತ್ತ? ಅದನ್ನು ಹೇಳು.

''ತತಃ ಪ್ರಸನ್ನೋ ಭಗವಾನವೋಚತ್ ತತ್ವಮಾತ್ಮನಃ''

ಅನಂತರ ಆ ಶ್ರೀಹರಿಯು ನನ್ನ ಮೇಲೆ ಪ್ರಸನ್ನನಾಗಿ ತನ್ನ ದಿವ್ಯ ಸ್ವರೂಪವನ್ನು ನನಗೆ ಹೇಳಿದನು.

**ಯೇನಾಹ ಮಧಿಕಃ ಸ್ತಸ್ಮಾಧಭವಂ ನಗನಂದಿನೀ ।**
**ತಮೇವ ತಪಸಾ ನಿತ್ಯಂ ಭಜಾಮಿ ಸ್ತೌಮಿ ಚಿಂತಯೇ ॥**

ಪರ್ವತನಂದಿನಿಯಾದ ಪಾರ್ವತಿಯೆ, ನಾನು ಹರಿಯ ಆಜ್ಞೆಯಂತೆ ಸುಳ್ಳು ಜೊಳ್ಳಾದ ಕಲ್ಪಿತವಾದ ಶಾಸ್ತ್ರಗಳನ್ನು ರಚಿಸಿ ವಿಷ್ಣುವಿನಿಗಿಂತ ನಾನು ಅಧಿಕ ಎನಿಸಿ ಅದರ ಪ್ರಾಶ್ಚಿತ್ತ ರೂಪನಾಗಿ ನಾನು ಸದಾ ಸರ್ವದಾ ಆ ಹರಿಯನ್ನು ಕುರಿತು ತಪಸ್ಸನ್ನು ಮಾಡುತ್ತೇನೆ. ಅವನ ಭಜನೆಯನ್ನು ಮಾಡುತ್ತೇನೆ. ಅವನನ್ನೇ ಸುತ್ತಿಸುತ್ತೇನೆ. ಸಂತತವೂ ಮನಸ್ಸಿನಲ್ಲಿ ಚಿಂತಿಸುತ್ತೇನೆ.

ನನ್ನ ಪ್ರಿಯತಮೆಯಾದ ಪಾರ್ವತಿಯೆ, ನಿನಗೆ ನಾನು ಒಂದು ಬೀಜಮಾತನ್ನು ಹೇಳುತ್ತೇನೆ.

**ಪರಮೋ ವಿಷ್ಣುರೇವೈಕಃ ತಜ್ಞಾನಂ ಮುಕ್ತಿ ಸಾಧನಂ ।**
**ಶಾಸ್ತ್ರಾಣಾಂ ನಿರ್ಣಯಸ್ತ್ವೇಷಸ್ತದನ್ಯನ್ ಮೋಹನಾಯ ಚ ॥**

ಈ ಜಗತ್ತಿನಲ್ಲಿ ವಿಷ್ಣು ಒಬ್ಬನೇ ಪರಮ ಶ್ರೇಷ್ಠ. ಅವನ ಜ್ಞಾನವೇ ಮುಕ್ತಿಗೆ ಮುಖ್ಯ ಸಾಧನ. ಇದು ಎಲ್ಲ ಶಾಸ್ತ್ರಗಳ ನಿರ್ಣಯ. ಇದಕ್ಕೆ ವಿಪರೀತವಾದುದೆಲ್ಲವೂ ಮೋಹಕ.

**ಜ್ಞಾನಂ ವಿನಾಚಯಾ ಮುಕ್ತಿಃ ಸಾಮ್ಯಾಂ ಮಮ ವಿಷ್ಣುನಾ**
**ತೀರ್ಥಾದಿ ಮಾತ್ರತೋ ಜ್ಞಾನಂ ಮಮಾಧಿಕ್ಯಂಚ ವಿಷ್ಣುತಃ ॥**
**ಅಭೇದಶ್ಚಾಸ್ಮದಾದಿನಾಂ ಮುಕ್ತಾನಾಂ ಹರಿಣಾ ತಥಾ ।**
**ಇತ್ಯಾದಿ ಸರ್ವಂ ಮೋಹಾಯ ಕಥ್ಯತೇ ಸತಿ ನಾನ್ಯಥಾ ॥**
**ತೇನಾದ್ವಿತಿಯ ಮಹಿಮಾ ಜಗತ್ಪೂಜ್ಯೋಸ್ಮಿ ಪಾರ್ವತೀ ॥**

ಪಾರ್ವತೀ, ಜ್ಞಾನವಿಲ್ಲದೇ ಮೋಕ್ಷವಾಗುವದು. ವಿಷ್ಣುವಿಗೂ ನನಗೂ (ಶಿವನಿಗೂ) ಸಮಾನತೆ ಇರುತ್ತದೆ. ತೀರ್ಥಸ್ನಾನಾದಿಗಳಿಂದಲೇ ಜ್ಞಾನವಾಗುತ್ತದೆ. ವಿಷ್ಣುವಿನಿಗಿಂತ ಶಿವನೇ ಶ್ರೇಷ್ಠ. ಶಿವ ಮತ್ತು ವಿಷ್ಣು ಇಬ್ಬರೂ ಒಂದೇ. ಮುಕ್ತರಿಗೂ ಶ್ರೀಹರಿಗೂ ಭೇದವಿಲ್ಲ. ಇವೇ ಮೊದಲಾದ ಮಾತುಗಳು ಅಜ್ಞಜನ ಮೋಹನಾರ್ಥವಾಗಿ ಹೇಳಲ್ಪಟ್ಟಿರುತ್ತವೆ. ಇದು ವಾಸ್ತವಿಕ ವಿಷಯ ಅಲ್ಲ, ಈ ಮೋಹಕವಾದ ಶಾಸ್ತ್ರಾನುಸಾರವಾಗಿಯೇ ನಾನು ಅದ್ವಿತೀಯ ಮಹಾಮಹಿಮೋಪೇತನಾದ ಸರ್ವೋತ್ತಮ ಎಂದು ನಾನು ಜಗತ್ಪೂಜ್ಯನು ಆಗಿರುತ್ತೇನೆ. ಇದೆಲ್ಲವೂ ಮೋಹಕ. ವಾಸ್ತವವಾಗಿ ಶ್ರೀಹರಿಯೇ ಸರ್ವಶ್ರೇಷ್ಠ. ಸರ್ವಸ್ವಾಮಿ. ಅವನ ಜ್ಞಾನದಿಂದಲೇ ಮುಕ್ತಿ. ವಿಷ್ಣುವಿಗೂ ನನಗೂ ಸಾಮ್ಯವೂ ಇಲ್ಲ ಅಭೇಧವೂ ಇಲ್ಲ. ಮುಕ್ತರಿಗೂ ಶ್ರೀಹರಿಗೂ, ನನಗೂ ಶ್ರೀಹರಿಗೂ, ಸರ್ವಜೀವಜರಾತ್ಮಕ ಪ್ರಪಂಚಕ್ಕೂ ಶ್ರೀಹರಿಗೂ ಯಥಾರ್ಥವಾದ ಭೇದವೇ ಇರುತ್ತದೆ.

**ಪಾರ್ವತಿ:-**

**ತನ್ಮೇ ಕಥಯ ದೇವೇಶ ಯಥಾಹ ಮಪಿ ಶಂಕರ ।**
**ಸರ್ವೇಶ್ವರೀ ನಿರುಪಮಾ ತವಸ್ಯಾಂ ಸದೃಶೀ ಪ್ರಭೋ ॥**

ದೇವೇಶನಾದ ಶಂಕರ, ನೀನು ಶ್ರೀಹರಿಯ ನಾಮವನ್ನೇ ತಪಸ್ವೀ ವೇಷದಿಂದ ಸರ್ವದಾ ಜಪಿಸುತ್ತೇನೆ ಎಂದು ಹೇಳುತ್ತೇನೆ. ನಾನು ನಿನ್ನ ಹೆಂಡತಿ ಅಲ್ಲವೆ? ನೀನು ಇಷ್ಟು ಭಕ್ತಿಯಿಂದ ಸ್ಮರಣೆ ಮಾಡುವ ಆ ವಿಷ್ಣುವಿನ ನಾಮಜಪವನ್ನು ನಾನೂ ಮಾಡಿದರೆ ಮಾತ್ರ ನಿನಗೆ ತಕ್ಕ ಹೆಂಡತಿ ಆಗುತ್ತೇನೆ. ಆದ್ದರಿಂದ ನೀನು ಜಪಿಸುವ ಆ ವಿಷ್ಣುವಿನ ಸಹಸ್ರನಾಮ ಜಪಗಳನ್ನು ಹೇಳು.

**ಮಹಾದೇವ:-** ಪ್ರಿಯೇ, ನೀನು ಬಹಳ ಒಳ್ಳೆಯ ಪ್ರಶ್ನೆಯನ್ನು ಮಾಡಿದೆ. ಮೂರು ಲೋಕದಲ್ಲಿಯೇ ಮುಕ್ತಿಪ್ರದವಾದ ವಿಷ್ಣುವಿನ ನಾಮಸಹಸ್ರವನ್ನು ಹೇಳುತ್ತೇನೆ ಕೇಳು.

ಹೀಗೆ ಹೇಳಿ ಪರಮೇಶ್ವರನು ಸುಪ್ರಸಿದ್ಧವಾದ ವಿಷ್ಣುಸಹಸ್ರನಾಮವನ್ನು ಪಾರ್ವತಿಗೆ ಉಪದೇಶಿಸಿದನು. ''ಇದನ್ನು ವಿಷ್ಣುಭಕ್ತಿ ಇಲ್ಲದವರಿಗೆ ಹೇಳಬಾರದು. ಭಕ್ತಿಯುಳ್ಳ ಶಿಷ್ಯನಿಗೂ, ಮಗನಿಗೂ, ಗೆಳೆಯನಿಗೂ ಇದನ್ನು ಉಪದೇಶಿಸಬೇಕು. ಈ ವಿಷ್ಣು ಸಹಸ್ರನಾಮದ ಪಾರಾಯಣದಿಂದ ಮಕ್ಕಳಿಲ್ಲದವರಿಗೆ ಸಂತಾನ ಆಗುತ್ತದೆ. ರೋಗಿಗಳಿಗೆ ರೋಗ ಪರಿಹಾರ. ರಾಜ್ಯಭ್ರಷ್ಟರಿಗೆ ರಾಜ್ಯಪ್ರಾಪ್ತಿ. ಇದನ್ನು ಪಾರಾಯಣ ಮಾಡಿದರೆ ಎಲ್ಲ ವೇದಗಳನ್ನು ಪಾರಾಯಣ ಮಾಡಿದ ಹಾಗೆ. ಎಲ್ಲ ಮಂತ್ರಗಳನ್ನೂ ಪಠಿಸಿದಷ್ಟು ಪುಣ್ಯ ಬರುವುದು.

**ನಾಸ್ತಿ ವಿಷ್ಣೋಃ ಪರೋಧರ್ಮೋ ನಾಸ್ತಿ ಮಂತ್ರೋ ಹ್ಯವೈಷ್ಣವಃ ।**
**ನಾಸ್ತಿ ವಿಷ್ಣೋಃ ಪರಂ ಸತ್ಯಂ ನಾಸ್ತಿ ವಿಷ್ಣೋಃ ಪರೋ ಮಖಃ ॥**

ವಿಷ್ಣುವಿನಿಗಿಂತ ಮಿಗಿಲಾದ ಧರ್ಮ ಇಲ್ಲ. ವಿಷ್ಣುವಿನ ಮಹಿಮೆಯನ್ನು ಬಣ್ಣಿಸದ ಮಂತ್ರ ಇಲ್ಲ. ವಿಷ್ಣುವಿಗಿಂತ ಹೆಚ್ಚಿನ ಸತ್ಯವಿಲ್ಲ. ವಿಷ್ಣುವಿಗಿಂತ ಬೇರೆ ಯಾಗ ಯಜ್ಞವಿಲ್ಲ.

**ಪಾರ್ವತಿ -**

**ಧನ್ಯಾಸ್ಮ್ಯನುಗ್ರಹೀತಾಸ್ಮಿ ಕೃತಾರ್ಥಾಸ್ಮಿ ಜಗತ್ಪತೇ ।**
**ಯನ್ಮಯೇದಂ ಶ್ರುತಂ ಸ್ತೋತ್ರಂ ತ್ವದ್ ರಹಸ್ಯಂ ಸುದುರ್ಲಭಮ್ ॥**

ಜಗತ್ಪತಿಯಾದ ಪರಮೇಶ್ವರ, ನಿನ್ನ ಮುಖದಿಂದ ಈ ವಿಷ್ಣು ಸಹಸ್ರನಾಮವನ್ನು ಕೇಳಿ ನಾನು ಧನ್ಯಳಾದೆ. ಅನುಗ್ರಹಿತಳೂ ಆದೆ. ಕೃತಾರ್ಥಳೂ ಆದೆ.

**ಯಮುದ್ದಿಶ್ಯ ಸದಾನಾಥ ಮಹೇಶೋಪಿ ದಿಗಂಬರಃ ।**
**ಜಟಿಲೋ ಭಸ್ಮ ಲಿಪ್ತಾಂಗೋ ತಪಸ್ವೀ ವೀಕ್ಷತೇ ಜನೈಃ ॥**
**ತತೋಧಿಕೋಸ್ತಿ ದೇವಃ ಕೋ ಲಕ್ಷ್ಮೀಕಾಂತಾಮ್ಮಧುದ್ವಿಷಃ ।**
**ಯತ್ ತತ್ವಂ ಚಿಂತ್ಯತೇ ನಿತ್ಯಂ ತ್ವಯಾ ಯೋಗೇಶ್ವರೇಣ ಹಿ ॥**

ಯಾವ ಭಗವಂತನನ್ನು ಕುರಿತು ತಪಸ್ಸನ್ನು ಮಾಡಲಿಕ್ಕಾಗಿ ನನ್ನ ಪತಿಯಾದ ನೀನು ಮಹಾ ಈಶ್ವರನಾದರೂ ದಿಗಂಬರನಾಗಿ, ಜಟಧಾರಿಯಾಗಿ, ಮೈಗೆ ಬೂದಿ ಬಳಿದುಕೊಂಡು, ತಪಸ್ವೀ ರೂಪದಿಂದ ಸರ್ವದಾ ನಾಮಸ್ಮರಣವನ್ನು ಮಾಡುತ್ತಲಿರುವಿಯೋ ಅಂಥ ಲಕ್ಷ್ಮೀದೇವಿಗೆ ಪತಿಯಾದ ಮಧುಸೂದನನ ಹೊರತು ಹೆಚ್ಚಿನ ದೇವನು ಈ ಜಗತ್ತಿನಲ್ಲಿ ಯಾವನು ಇರುತ್ತಾನೆ? ಯೋಗೇಶ್ವರನಾದ ನೀನು ಯಾವ ಪರಮಾತ್ಮನ ನಾಮವನ್ನು ನಿತ್ಯವೂ ಪಠಿಸುತ್ತಲಿರುವೆಯೋ ಅಂಥ ಪುರುಷೋತ್ತಮ ನಾರಾಯಣನಿಗಿಂತ ಶ್ರೇಷ್ಠರು ಯಾರು ಇರುತ್ತಾರೆ?

**"ತತಃ ಪ್ರಸನ್ನೋ ಭಗವಾನವೋಚತ್ ತತ್ವಮಾತ್ಮನಃ"**

ಅನಂತರ ಆ ಶ್ರೀಹರಿಯು ನನ್ನ ಮೇಲೆ ಪ್ರಸನ್ನನಾಗಿ ತನ್ನ ದಿವ್ಯ ಸ್ವರೂಪವನ್ನು ನನಗೆ ಹೇಳಿದನು.

**ಯೇನಾಹ ಮಧಿಕಃ ಸ್ತ್ರಸ್ಮಾಧಭವಂ ನಗನಂದಿನೀ ।**
**ತಮೇವ ತಪಸಾ ನಿತ್ಯಂ ಭಜಾಮಿ ಸ್ತೌಮಿ ಚಿಂತಯೇ ॥**

ಪರ್ವತನಂದಿನಿಯಾದ ಪಾರ್ವತಿಯೆ, ನಾನು ಹರಿಯ ಆಜ್ಞೆಯಂತೆ ಸುಳ್ಳು ಜೊಳ್ಳಾದ ಕಲ್ಪಿತವಾದ ಶಾಸ್ತ್ರಗಳನ್ನು ರಚಿಸಿ ವಿಷ್ಣುವಿನಿಗಿಂತ ನಾನು ಅಧಿಕ ಎನಿಸಿ ಅದರ ಪ್ರಾಶಶ್ಚಿತ್ತ ರೂಪನಾಗಿ ನಾನು ಸದಾ ಸರ್ವದಾ ಆ ಹರಿಯನ್ನು ಕುರಿತು ತಪಸ್ಸನ್ನು ಮಾಡುತ್ತೇನೆ. ಅವನ ಭಜನೆಯನ್ನು ಮಾಡುತ್ತೇನೆ. ಅವನನ್ನೇ ಸುತ್ತಿಸುತ್ತೇನೆ. ಸಂತತವೂ ಮನಸ್ಸಿನಲ್ಲಿ ಚಿಂತಿಸುತ್ತೇನೆ.

ನನ್ನ ಪ್ರಿಯತಮೆಯಾದ ಪಾರ್ವತಿಯೆ, ನಿನಗೆ ನಾನು ಒಂದು ಬೀಜಮಾತನ್ನು ಹೇಳುತ್ತೇನೆ.

**ಪರಮೋ ವಿಷ್ಣುರೇವೈಕಃ ತಜ್ಞಾನಂ ಮುಕ್ತಿ ಸಾಧನಂ ।**
**ಶಾಸ್ತ್ರಾಣಾಂ ನಿರ್ಣಯಸ್ತ್ವೇಷಸ್ತದನ್ಯನ್ ಮೋಹನಾಯ ಚ ॥**

ಈ ಜಗತ್ತಿನಲ್ಲಿ ವಿಷ್ಣು ಒಬ್ಬನೇ ಪರಮ ಶ್ರೇಷ್ಠ. ಅವನ ಜ್ಞಾನವೇ ಮುಕ್ತಿಗೆ ಮುಖ್ಯ ಸಾಧನ. ಇದು ಎಲ್ಲ ಶಾಸ್ತ್ರಗಳ ನಿರ್ಣಯ. ಇದಕ್ಕೆ ವಿಪರೀತವಾದುದೆಲ್ಲವೂ ಮೋಹಕ.

**ಜ್ಞಾನಂ ವಿನಾಚಯಾ ಮುಕ್ತಿಃ ಸಾಮ್ಯಾಂ ಮಮ ವಿಷ್ಣುನಾ**
**ತೀರ್ಥಾದಿ ಮಾತ್ರತೋ ಜ್ಞಾನಂ ಮಮಾಧಿಕ್ಯಂಚ ವಿಷ್ಣುತಃ ॥**
**ಅಭೇದಶ್ಚಾಸ್ಮದಾದಿನಾಂ ಮುಕ್ತಾನಾಂ ಹರಿಣಾ ತಥಾ ।**
**ಇತ್ಯಾದಿ ಸರ್ವಂ ಮೋಹಾಯ ಕಥ್ಯತೇ ಸತಿ ನಾನ್ಯಥಾ ॥**
**ತೇನಾದ್ವಿತಿಯ ಮಹಿಮಾ ಜಗತ್ಪೂಜ್ಯೋಸ್ಮಿ ಪಾರ್ವತೀ ॥**

ಪಾರ್ವತೀ, ಜ್ಞಾನವಿಲ್ಲದೇ ಮೋಕ್ಷವಾಗುವದು. ವಿಷ್ಣುವಿಗೂ ನನಗೂ (ಶಿವನಿಗೂ) ಸಮಾನತೆ ಇರುತ್ತದೆ. ತೀರ್ಥಸ್ನಾನಾದಿಗಳಿಂದಲೇ ಜ್ಞಾನವಾಗುತ್ತದೆ. ವಿಷ್ಣುವಿನಿಗಿಂತ ಶಿವನೇ ಶ್ರೇಷ್ಠ. ಶಿವ ಮತ್ತು ವಿಷ್ಣು ಇಬ್ಬರೂ ಒಂದೇ. ಮುಕ್ತರಿಗೂ ಶ್ರೀಹರಿಗೂ ಭೇದವಿಲ್ಲ. ಇವೇ ಮೊದಲಾದ ಮಾತುಗಳು ಅಜ್ಞಜನ ಮೋಹನಾರ್ಥವಾಗಿ ಹೇಳಲ್ಪಟ್ಟಿರುತ್ತವೆ. ಇದು ವಾಸ್ತವಿಕ ವಿಷಯ ಅಲ್ಲ, ಈ ಮೋಹಕವಾದ ಶಾಸ್ತ್ರಾನುಸಾರವಾಗಿಯೇ ನಾನು ಅದ್ವಿತೀಯ ಮಹಾಮಹಿಮೋಪೇತನಾದ ಸರ್ವೋತ್ತಮ ಎಂದು ನಾನು ಜಗತ್ಪೂಜ್ಯನು ಆಗಿರುತ್ತೇನೆ. ಇದೆಲ್ಲವೂ ಮೋಹಕ. ವಾಸ್ತವವಾಗಿ ಶ್ರೀಹರಿಯೇ ಸರ್ವಶ್ರೇಷ್ಠ. ಸರ್ವಸ್ವಾಮಿ. ಅವನ ಜ್ಞಾನದಿಂದಲೇ ಮುಕ್ತಿ. ವಿಷ್ಣುವಿಗೂ ನನಗೂ ಸಾಮ್ಯವೂ ಇಲ್ಲ ಅಭೇಧವೂ ಇಲ್ಲ. ಮುಕ್ತರಿಗೂ ಶ್ರೀಹರಿಗೂ, ನನಗೂ ಶ್ರೀಹರಿಗೂ, ಸರ್ವಜೀವಜರಾತ್ಮಕ ಪ್ರಪಂಚಕ್ಕೂ ಶ್ರೀಹರಿಗೂ ಯಥಾರ್ಥವಾದ ಭೇದವೇ ಇರುತ್ತದೆ.

**ಪಾರ್ವತಿ:-**

**ತನ್ಮೇ ಕಥಯ ದೇವೇಶ ಯಥಾಹ ಮಪಿ ಶಂಕರ ।**
**ಸರ್ವೇಶ್ವರೀ ನಿರುಪಮಾ ತವಸ್ಯಾಂ ಸದೃಶೀ ಪ್ರಭೋ ॥**

ದೇವೇಶನಾದ ಶಂಕರ, ನೀನು ಶ್ರೀಹರಿಯ ನಾಮವನ್ನೇ ತಪಸ್ವೀ ವೇಷದಿಂದ ಸರ್ವದಾ ಜಪಿಸುತ್ತೇನೆ ಎಂದು ಹೇಳುತ್ತೇನೆ. ನಾನು ನಿನ್ನ ಹೆಂಡತಿ ಅಲ್ಲವೆ? ನೀನು ಇಷ್ಟು ಭಕ್ತಿಯಿಂದ ಸ್ಮರಣೆ ಮಾಡುವ ಆ ವಿಷ್ಣುವಿನ ನಾಮಜಪವನ್ನು ನಾನೂ ಮಾಡಿದರೆ ಮಾತ್ರ ನಿನಗೆ ತಕ್ಕ ಹೆಂಡತಿ ಆಗುತ್ತೇನೆ. ಆದ್ದರಿಂದ ನೀನು ಜಪಿಸುವ ಆ ವಿಷ್ಣುವಿನ ಸಹಸ್ರನಾಮ ಜಪಗಳನ್ನು ಹೇಳು.

**ಮಹಾದೇವ:-** ಪ್ರಿಯೇ, ನೀನು ಬಹಳ ಒಳ್ಳೆಯ ಪ್ರಶ್ನೆಯನ್ನು ಮಾಡಿದೆ. ಮೂರು ಲೋಕದಲ್ಲಿಯೇ ಮುಕ್ತಿಪ್ರದವಾದ ವಿಷ್ಣುವಿನ ನಾಮಸಹಸ್ರವನ್ನು ಹೇಳುತ್ತೇನೆ ಕೇಳು.

ಹೀಗೆ ಹೇಳಿ ಪರಮೇಶ್ವರನು ಸುಪ್ರಸಿದ್ಧವಾದ ವಿಷ್ಣುಸಹಸ್ರನಾಮವನ್ನು ಪಾರ್ವತಿಗೆ ಉಪದೇಶಿಸಿದನು. ''ಇದನ್ನು ವಿಷ್ಣುಭಕ್ತಿ ಇಲ್ಲದವರಿಗೆ ಹೇಳಬಾರದು. ಭಕ್ತಿಯುಳ್ಳ ಶಿಷ್ಯನಿಗೂ, ಮಗನಿಗೂ, ಗೆಳೆಯನಿಗೂ ಇದನ್ನು ಉಪದೇಶಿಸಬೇಕು. ಈ ವಿಷ್ಣು ಸಹಸ್ರನಾಮದ ಪಾರಾಯಣದಿಂದ ಮಕ್ಕಳಿಲ್ಲದವರಿಗೆ ಸಂತಾನ ಆಗುತ್ತದೆ. ರೋಗಿಗಳಿಗೆ ರೋಗ ಪರಿಹಾರ. ರಾಜ್ಯಭ್ರಷ್ಟರಿಗೆ ರಾಜ್ಯಪ್ರಾಪ್ತಿ. ಇದನ್ನು ಪಾರಾಯಣ ಮಾಡಿದರೆ ಎಲ್ಲ ವೇದಗಳನ್ನು ಪಾರಾಯಣ ಮಾಡಿದ ಹಾಗೆ. ಎಲ್ಲ ಮಂತ್ರಗಳನ್ನೂ ಪಠಿಸಿದಷ್ಟು ಪುಣ್ಯ ಬರುವುದು.

**ನಾಸ್ತಿ ವಿಷ್ಣೋಃ ಪರೋಧರ್ಮೋ ನಾಸ್ತಿ ಮಂತ್ರೋ ಹ್ಯವೈಷ್ಣವಃ ।**
**ನಾಸ್ತಿ ವಿಷ್ಣೋಃ ಪರಂ ಸತ್ಯಂ ನಾಸ್ತಿ ವಿಷ್ಣೋಃ ಪರೋ ಮಖಃ ॥**

ವಿಷ್ಣುವಿನಿಗಿಂತ ಮಿಗಿಲಾದ ಧರ್ಮ ಇಲ್ಲ. ವಿಷ್ಣುವಿನ ಮಹಿಮೆಯನ್ನು ಬಣ್ಣಿಸದ ಮಂತ್ರ ಇಲ್ಲ. ವಿಷ್ಣುವಿಗಿಂತ ಹೆಚ್ಚಿನ ಸತ್ಯವಿಲ್ಲ. ವಿಷ್ಣುವಿಗಿಂತ ಬೇರೆ ಯಾಗ ಯಜ್ಞವಿಲ್ಲ.

**ಪಾರ್ವತಿ -**

**ಧನ್ಯಾಸ್ಮ್ಯನುಗ್ರಹೀತಾಸ್ಮಿ ಕೃತಾರ್ಥಾಸ್ಮಿ ಜಗತ್ಪತೇ ।**
**ಯನ್ಮಯೇದಂ ಶ್ರುತಂ ಸ್ತೋತ್ರಂ ತ್ವದ್ ರಹಸ್ಯಂ ಸುದುರ್ಲಭಮ್ ॥**

ಜಗತ್ಪತಿಯಾದ ಪರಮೇಶ್ವರ, ನಿನ್ನ ಮುಖದಿಂದ ಈ ವಿಷ್ಣು ಸಹಸ್ರನಾಮವನ್ನು ಕೇಳಿ ನಾನು ಧನ್ಯಳಾದೆ. ಅನುಗ್ರಹಿತಳೂ ಆದೆ. ಕೃತಾರ್ಥಳೂ ಆದೆ.

**ಯಮುದ್ದಿಶ್ಯ ಸದಾನಾಥ ಮಹೇಶೋಪಿ ದಿಗಂಬರಃ ।**
**ಜಟಿಲೋ ಭಸ್ಮ ಲಿಪ್ತಾಂಗೋ ತಪಸ್ವೀ ವೀಕ್ಷತೇ ಜನೈಃ ॥**
**ತತೋಧಿಕೋಸ್ತಿ ದೇವಃ ಕೋ ಲಕ್ಷ್ಮೀಕಾಂತಾಮ್ಮಧುದ್ವಿಷಃ ।**
**ಯತ್ ತತ್ವಂ ಚಿಂತ್ಯತೇ ನಿತ್ಯಂ ತ್ವಯಾ ಯೋಗೇಶ್ವರೇಣ ಹಿ ॥**

ಯಾವ ಭಗವಂತನನ್ನು ಕುರಿತು ತಪಸ್ಸನ್ನು ಮಾಡಲಿಕ್ಕಾಗಿ ನನ್ನ ಪತಿಯಾದ ನೀನು ಮಹಾ ಈಶ್ವರನಾದರೂ ದಿಗಂಬರನಾಗಿ, ಜಟಧಾರಿಯಾಗಿ, ಮೈಗೆ ಬೂದಿ ಬಳಿದುಕೊಂಡು, ತಪಸ್ವೀ ರೂಪದಿಂದ ಸರ್ವದಾ ನಾಮಸ್ಮರಣವನ್ನು ಮಾಡುತ್ತಲಿರುವಿಯೋ ಅಂಥ ಲಕ್ಷ್ಮೀದೇವಿಗೆ ಪತಿಯಾದ ಮಧುಸೂದನನ ಹೊರತು ಹೆಚ್ಚಿನ ದೇವನು ಈ ಜಗತ್ತಿನಲ್ಲಿ ಯಾವನು ಇರುತ್ತಾನೆ? ಯೋಗೇಶ್ವರನಾದ ನೀನು ಯಾವ ಪರಮಾತ್ಮನ ನಾಮವನ್ನು ನಿತ್ಯವೂ ಪಠಿಸುತ್ತಲಿರುವೆಯೋ ಅಂಥ ಪುರುಷೋತ್ತಮ ನಾರಾಯಣನಿಗಿಂತ ಶ್ರೇಷ್ಠರು ಯಾರು ಇರುತ್ತಾರೆ?

**ಮುಷಿತಾಸ್ಮಿ ತ್ವಯಾ ನಾಥ ಚಿರಂ ಯದಯಹಮೀಶ್ವರಃ ।**
**ಪ್ರಕಾಶಿತೋ ನಮೇ ಯಸ್ಮಾತ್ ತ್ವದಾದ್ಯಾ ದಿವ್ಯಶಕ್ತಯಃ ॥**

ನಾಥ, ನೀನು ಇಷ್ಟು ದಿನ ನನಗೆ ಮೋಸ ಮಾಡಿದೆ. ಯಾವ ಪರಮಾತ್ಮನಿಂದ ನೀನೇ ಮೊದಲಾದ ದಿವ್ಯ ಶಕ್ತಿಗಳು ಹೊರಹೊಮ್ಮಿರುತ್ತವೆಯೋ ಅಂಥ ಜಗದೀಶ್ವರನಾದ ವಿಷ್ಣುವಿನ ಮಹಿಮೆಯನ್ನು ಇಷ್ಟು ದಿನ ನನ್ನಿಂದ ಬಚ್ಚಿಟ್ಟಿದ್ದು ಯಾಕೆ?

**ಅಹೋ ಸರ್ವೇಶ್ವರೋ ವಿಷ್ಣುಃ ಸರ್ವ ದೇವೋತ್ತಮೋತ್ತಮಃ ।**
**ಭವದಾದಿ ಗುರುರ್ಮೂಢೈಃ ಸಾಮಾನ್ಯ ಇವ ವೀಕ್ಷ್ಯತೇ ॥**

ವಿಷ್ಣುವು ಸರ್ವರಿಗೂ ಈಶ್ವರ. ಎಲ್ಲ ದೇವತೆಗಳಲ್ಲಿಯೂ ಉತ್ತಮೋತ್ತಮ. ಅತ್ಯುತ್ತಮ. ನಿನಗೂ ಗುರು. ನಿನಗೆ ಮೂಲಕಾರಣನಾದ ಬ್ರಹ್ಮದೇವನಿಗೂ ಮೂಲಗುರು. ಇಂಥ ಜಗದ್ಗುರುವಾದ ಸರ್ವಸ್ವಾಮಿಯಾದ ಸರ್ವೇಶ್ವರನಾದ ಶ್ರೀಹರಿಯನ್ನು ಮೂಢರು ಸಾಮಾನ್ಯ ದೇವತೆ ಎಂದು ನೋಡುತ್ತಾರೆ. ಇದು ಅತ್ಯಾಶ್ಚರ್ಯ.

ನಾನು ಚಿಕ್ಕವಳಿದ್ದಾಗ ನನ್ನ ತಂದೆಯ ಪ್ರಜೆಗಳು ಹಸಿವೆಯಿಂದ ಕಂಗಾಲಾದದ್ದನ್ನು ನೋಡಿದೆ. ಅವರೆಲ್ಲರನ್ನೂ ಪೋಷಿಸುವದು ನಮ್ಮ ತಂದೆಗೆ ಅಶಕ್ಯವಾಗಿದ್ದಿತು. ಆಗ ನಾನು ವಿಷ್ಣುಪತ್ನಿಯಾದ ಲಕ್ಷ್ಮೀದೇವಿಯನ್ನು ಆರಾಧಿಸಿದೆ. ಅವಳು ನನ್ನ ಮೇಲೆ ಅನುಗ್ರಹ ಮಾಡಿದಳು. ಅನಂತರ **''ಶ್ರೀಯಮಾರಾಧ್ಯ ವೈಭ್ಯತಾ''** ಶ್ರೀದೇವಿಯ ಪ್ರಸಾದದಿಂದ ನಾನು ಆ ಪ್ರಜೆಗಳನ್ನೆಲ್ಲ ರಕ್ಷಣೆ ಮಾಡಿದೆ.

**ತಯಾ ವಿನಾ ಕ್ವದೇವತ್ವಂ ಕ್ವೈಶ್ವರ್ಯಂ ಕ್ವ ಪರಿಗ್ರಹಃ ।**
**ಸರ್ವೇ ಭವಂತಿ ಜೀವಂತೋ ಯಾತನಾಸ್ವೇವ ಸಂಸ್ಥಿತಾಃ ॥**

ಆ ಲಕ್ಷ್ಮೀದೇವಿಯ ಅನುಗ್ರಹವಿಲ್ಲದೇ ಯಾರಿಗೆ ದೇವತ್ವವು ಲಭಿಸೀತು? ಐಶ್ವರ್ಯವು ಹೇಗೆ ದೊರಕೀತು? ಮಡದಿ, ಮಕ್ಕಳು, ಅಧಿಕಾರ, ಸೌಭಾಗ್ಯ, ಮೊದಲಾದ ಯಾವುದು ತಾನೇ ಮನುಷ್ಯನಿಗೆ ಪ್ರಾಪ್ತವಾದೀತು? ಆ ತಾಯಿಯ ಅನುಗ್ರಹವಿಲ್ಲದಿದ್ದರೆ ಎಲ್ಲ ಪ್ರಾಣಿಗಳೂ ಕಡುಕಷ್ಟದಲ್ಲಿಯೇ ಕಾಲ ಕಳೆಯಬೇಕಾದೀತು. ಇಂಥ ಕಮಲಾದೇವಿಯು ಯಾವನ ವಶವರ್ತಿನಿಯಾಗಿರುವಳೋ ಅಂಥ ವಿಷ್ಣುವಿಗೆ ಸಮಾನರಾದ ದೇವತೆಗಳು ಯಾರು ಇರುತ್ತಾರೆ?

**ತ್ವನ್ಮಯತ್ವಾತ್ ಪ್ರಮಾದಾದ್ವಾ ಶಕ್ನೋಮಿ ಪಠಿತುಂ ನಚೇತ್ ।**
**ವಿಷ್ಣೋಃ ಸಹಸ್ರನಾಮ್ನೈ ತತ್ ನಾಮ್ನೈಕೇತು ಯೇನ ಸ್ಯಾತ್**
**ತತ್ ಫಲಂ ಭ್ರೂಹಿಮೆ ಪ್ರಭೋ ॥**

ಪ್ರಭು, ನಾನು ನಿನ್ನಲ್ಲಿಯೇ ಅನುರಕ್ತಳಾಗಿರುವದರಿಂದಾಗಲೀ, ಅಥವಾ ಪ್ರಮಾದ ದಿಂದಾಗಲೀ, ಈ ವಿಷ್ಣು ಸಹಸ್ರನಾಮವನ್ನು ಪಠಿಸಲಿಕ್ಕಾಗದಿದ್ದರೆ ಈ ವಿಷ್ಣು ಸಹಸ್ರನಾಮ ಪಠಣದ ಪುಣ್ಯವು ಬರುವಂತಹ ಒಂದೇ ನಾಮವನ್ನು ಹೇಳು.

ಮಹಾದೇವ:-

**ರಾಮರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।**
**ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥**

ಸುಂದರಿ, ರಾಮ, ರಾಮ, ಎಂಬ ಮನೋಹರವಾದ ಈ ರಾಮನಾಮವನ್ನು ಉಚ್ಚರಿಸುತ್ತ ನಾನು ಮನೋಹರನಾದ ಸುಂದರ ಮುಖದ ಆ ಶ್ರೀರಾಮನ ಚಿಂತೆಯಲ್ಲಿಯೇ ಆನಂದಪಡುತ್ತೇನೆ. ಈ ಒಂದು ರಾಮನಾಮವು ವಿಷ್ಣುವಿನ ಸಹಸ್ರನಾಮಗಳಿಗೆ ಸಮಾನವಾಗಿದೆ.

**ಬ್ರಾಹ್ಮಣಾ ವಾ ಕ್ಷತ್ರಿಯಾ ವಾ ವೈಶ್ಯಾ ವಾ ಗಿರಕನ್ಯಕೇ ।**
**ಶೂದ್ರಾವಾಥ ವಿಶೇಷೇಣ ಪಠಂತ್ಯನುದಿನಂ ಯದಿ ॥**
**ಧನಧಾನ್ಯ ಸಮಾಯುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ।**

ಬ್ರಾಹ್ಮಣರಾಗಲೀ, ಕ್ಷತ್ರಿಯರಾಗಲೀ, ವೈಶ್ಯರಾಗಲೀ, ವಿಶೇಷವಾಗಿ ಶೂದ್ರರು ಪ್ರತಿ ದಿನವೂ ಈ ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಿದರೆ ಇಲ್ಲಿ ಇರುವವರೆಗೆ ಧನಧಾನ್ಯ ಐಶ್ವರ್ಯವನ್ನು ಹೊಂದಿ ಕೊನೆಗೆ ವಿಷ್ಣುಪದವನ್ನು ಹೊಂದುವರು. ವಿಷ್ಣುಸಹಸ್ರನಾಮ ಪಠಣವನ್ನು ವ್ಯಗ್ರ ಮನಸ್ಸಿನಿಂದ ಮಾಡಬಾರದು. ಅರುಣೋದಯ ಕಾಲದಲ್ಲಿ ಇದನ್ನು ಪಠಿಸಿದವರ ಆಯುಷ್ಯ, ಬಲ, ಕಾಂತಿ, ಐಶ್ವರ್ಯ ಎಲ್ಲವೂ ದಿನದಿನಕ್ಕೆ ಅಭಿವೃದ್ಧಿ ಆಗುತ್ತವೆ. ಈ ವಿಷ್ಣುಸಹಸ್ರನಾಮದ ಒಂದೊಂದು ನಾಮವನ್ನು ಹೇಳಿ ದೇವರಿಗೆ ಒಂದೊಂದು ತುಳಸೀ ದಳ ಏರಿಸಿದರೆ ಕೋಟಿ ಯಜ್ಞ ಮಾಡಿದ ಫಲ ಬರುವದು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ನದೀ ತ್ರಿರಾತ್ರ ವ್ರತದ ಮಾಹಾತ್ಮ್ಯ ಎಂಬ ಎಪ್ಪತ್ತೊಂದನೇಯ ಅಧ್ಯಾಯ ಮುಗಿದುದು*



## ಶ್ರೀರಾಮರಕ್ಷಾ ಸ್ತೋತ್ರ | ಅಧ್ಯಾಯ - ೭೨

**ಮಹಾದೇವ:-** ಓಂ ಶ್ರೀರಾಮರಕ್ಷಾ ಸ್ತೋತ್ರಸ್ಯ ವಿಶ್ವಾಮಿತ್ರೋ ಋಷಿಃ ಶ್ರೀರಾಮೋ ದೇವತಾ ಅನುಷ್ಟುಪ್ ಛಂದಃ ವಿಷ್ಣು ಪ್ರೀತ್ಯರ್ಥೇ ಜಪೇ ವಿನಿಯೋಗಃ - ಶ್ರೀರಾಮರಕ್ಷಾ ಸ್ತೋತ್ರ ಎಂಬ ಮಹಾಮಂತ್ರಕ್ಕೆ ವಿಶ್ವಾಮಿತ್ರ ಮಹರ್ಷಿಗಳೇ ದ್ರಷ್ಟಾರರು. ಶ್ರೀರಾಮನೇ ದೇವರು. ಅನುಷ್ಟುಪ ಛಂದಸ್ಸು. ವಿಷ್ಣುವಿನ ಪ್ರೀತ್ಯರ್ಥವಾಗಿ ಶ್ರೀರಾಮರಕ್ಷಾ ಸ್ತೋತ್ರ ಮಾಡುತ್ತೇನೆ ಎಂದು ಸಂಕಲ್ಪಿಸಿ, ಮಹಾದೇವರಿಂದ ಉಪದಿಷ್ಟವಾದ ಈ ಶ್ರೀರಾಮರಕ್ಷಾ ಸ್ತೋತ್ರವನ್ನು ಪಠಿಸಬೇಕು.

### ರಾಮರಕ್ಷಾ ಸ್ತೋತ್ರ

**ಅತಸೀ ಪುಷ್ಪಸಂಕಾಶಂ ಪೀತವಾಸ ಸಮಚ್ಯುತಂ ।**
**ಧ್ಯಾತ್ವಾವೈ ಪುಂಡರೀಕಾಕ್ಷಂ ಶ್ರೀರಾಮಂ ವಿಷ್ಣುಮವ್ಯಯಮ್ ॥೧॥**
**ಪಾತುಮೇ ಹೃದಯಂ ರಾಮಃ ಶ್ರೀಕಂಠಃ ಕಂಠಮೇವಚ ।**
**ನಾಭಿಂ ಪಾತು ಮಖತ್ರಾತಾ ಕಟಿಂ ಮೇ ವಿಶ್ವರಕ್ಷಕಃ ॥೨॥**
**ಕರೌಪಾತು ದಾಶರಥಿಃ ಪಾದೌಮೇ ವಿಶ್ವರೂಪಧೃಕ್ ।**
**ಚಕ್ಷುಷೀ ಪಾತು ವೈದೇವಃ ಸೀತಾಪತಿರನುತ್ತಮಃ ॥೩॥**

ಶಿಖಾಂಮೇ ಪಾತು ವಿಶ್ವಾತ್ಮಾ ಕರ್ಣೌಮೇ ಪಾತು ಕಾಮದಃ ।
ಪಾರ್ಶ್ವಯೋಸ್ತು ಸುರತ್ರಾತಾ ಕಾಲಕೋಟದುರಾಸದಃ ॥೪॥

ಅನಂತಃ ಸರ್ವದಾಪಾತು ಶರೀರಂ ವಿಶ್ವನಾಯಕಃ ।
ಜಿಹ್ವಾಂಮೇ ಪಾತು ಪಾಪಘ್ನೋ ಲೋಕಶಿಕ್ಷೌ ಪ್ರವರ್ತಕಃ ॥೫॥

ರಾಘವಃ ಪಾತುಮೇ ದಂತಾನ್ ಕೇಶಾನ್ ರಕ್ಷತು ಕೇಶವಃ ।
ಸಖಿನೀ ಪಾತುಮೇ ದತ್ತ ವಿಜಯೋನಾಮ ವಿಶ್ವಸೃಕ್ ॥೬॥

ಏತಾಂ ರಾಮಬಲೋ ಪೇತಾಂ ರಕ್ಷಾಂ ಯೋ ವೈಪುಮಾನ್ ಪಠೇತ್ ।
ಸಚಿರಾಯುಃ ಸುಖೀ ವಿದ್ವಾನ್ ಲಭತೇ ದಿವ್ಯ ಸಂಪದಮ್ ॥೭॥

ರಕ್ಷಾಂ ಕರೋತಿ ಭೂತೇಭ್ಯಃ ಸದಾ ರಕ್ಷತಿ ವೈಷ್ಣವೀ ।
ರಾಮೇತಿ ರಾಮಭದ್ರೇತಿ ರಾಮಚಂದ್ರೇತಿ ಯಃ ಸ್ಮರೇತ್ ॥೮॥

ಸುಪ್ತ್ವಾವಾಥ ಗೃಹೇವಾಪಿ ಮಾರ್ಗೇ ಗಚ್ಛಂತ ಏವ ವಾ ।
ಯೇ ಪಠಂತಿ ನರಶ್ರೇಷ್ಠಾಸ್ತನರಾಃ ಪುಣ್ಯಭಾಗಿನಃ ॥೯॥

ಅಗಸೀ ಹೂವಿನಂತೆ ನೀಲಬಣ್ಣ ಉಳ್ಳ, ಪೀತಾಂಬರವನ್ನು ಉಟ್ಟುಕೊಂಡ, ಸಕಲ ವಿಧ ನಾಶರಹಿತನಾದ, ತಾವರೆಗಣ್ಣಿನ ವಿಷ್ಣುಸ್ವರೂಪಿಣಿಯಾದ ಶ್ರೀರಾಮಚಂದ್ರನನ್ನು ಧ್ಯಾನಮಾಡಿ ಶ್ರೀರಾಮರಕ್ಷಾ ಸ್ತೋತ್ರವನ್ನು ಪಠಿಸುತ್ತೇನೆ.

ಶ್ರೀರಾಮ ನನ್ನ ಹೃದಯವನ್ನು ರಕ್ಷಿಸಲಿ. ಒಳ್ಳೇ ಸುಂದರವಾದ ಕಂಠವುಳ್ಳ ಶ್ರೀರಾಮನು ನನ್ನ ಕಂಠವನ್ನು ಕಾಪಾಡಲಿ. ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿದ ಶ್ರೀರಾಮನು ನನ್ನ ನಾಭಿಯನ್ನು ರಕ್ಷಿಸಲಿ. ಜಗತ್ತನ್ನೆ ರಕ್ಷಿಸುವ ಆ ಹರಿಯು ನನ್ನ ನಡುವನ್ನು ರಕ್ಷಿಸಲಿ. ವಿಶ್ವರೂಪಧಾರಿಯಾದ ಆ ದಶರಥ ಕುಮಾರನು ನನ್ನ ಪಾದಗಳನ್ನು ಮತ್ತು ಹಸ್ತಗಳನ್ನು ರಕ್ಷಿಸಲಿ. ಸೀತಾಪತಿಯು ನನ್ನ ಎರಡೂ ಕಣ್ಣುಗಳನ್ನು ಕಾಯಲಿ. ವಿಶ್ವಸ್ವಾಮಿಯಾದ ರಾಮನು ನನ್ನ ಚಂಡಕಿಯನ್ನೂ ಇಷ್ಟಾರ್ಥಗಳನ್ನು ಪೂರೈಸುವ ಆ ರಾಮನು ನನ್ನ ಎರಡೂ ಕಿವಿಗಳನ್ನು ರಕ್ಷಿಸಲಿ. ಸುರರನ್ನು ರಕ್ಷಿಸುವ ಹರಿಯು ನನ್ನ ದೇಹದ ಎಡಬಲ ಬದಿಗಳನ್ನು ರಕ್ಷಿಸಲಿ. ಅನಂತ ಎಂಬ ಹರಿಯು ನನ್ನ ಶರೀರವನ್ನು, ಪಾಪಪರಿಹಾರಕನಾದ, ಶ್ರೀರಾಮನು ನನ್ನ ನಾಲಿಗೆಯನ್ನು, ರಘುಕುಲಕೇತುವು ನನ್ನ ಹಲ್ಲುಗಳನ್ನು, ಕೇಶವನು ಕೂದಲಗಳನ್ನು, ದತ್ತವಿಜಯ ಎಂಬ ಶ್ರೀಹರಿಯು ನನ್ನ ಎರಡೂ ತೊಡೆಗಳನ್ನು ರಕ್ಷಿಸಲಿ. ಈ ರಾಮರಕ್ಷಾ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದ ಮನುಷ್ಯನು ದೀರ್ಘಾಯುಷ್ಯವನ್ನೂ ಸಂಪತ್ತನ್ನೂ ಸುಖವನ್ನೂ ಹೊಂದುತ್ತಾನೆ. ಈ ರಾಮರಕ್ಷಾ ಸ್ತೋತ್ರವನ್ನು ಮನೆಯಲ್ಲಿ ಮಲಗಿದಾಗ, ಕುಳಿತಾಗ ಮತ್ತು ಮಾರ್ಗದಲ್ಲಿ ನಡೆಯುವಾಗ ಪಠಿಸಬೇಕು. ಇದರ ಪಾಠ ಮಾತ್ರದಿಂದ ಮಾನವರ ಪಾಪಗಳೆಲ್ಲ ಕಳೆದುಹೋಗಿ ದಿವ್ಯ ಸದ್ಗತಿ ಉಂಟಾಗುವದು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶ್ರೀರಾಮರಕ್ಷಾ ಸ್ತೋತ್ರ ಎಂಬ ಎಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ದೇವಿ, ಧರ್ಮದ ಮಹಾತ್ಮೆಯನ್ನು ಹೇಳುತ್ತೇನೆ ಕೇಳು. ಧರ್ಮದಿಂದಲೇ ಅರ್ಥ, ಕಾಮ, ಮೋಕ್ಷ ಮೂರನ್ನೂ ಮನುಷ್ಯರು ಪಡೆಯುತ್ತಾರೆ. ಆದುದರಿಂದ ವಿವೇಕ ಉಳ್ಳವರು ಧರ್ಮವನ್ನೇ ಸರ್ವ ರೀತಿಯಿಂದ ಸಾಧಿಸಬೇಕು. ತಪಸ್ಸು, ದಾನ, ವ್ರತ, ನಿಯಮ ಇವುಗಳಿಂದ ಮನುಷ್ಯನು ಸ್ವರ್ಗವನ್ನು ಪಡೆಯುತ್ತಾನೆ. ಇವುಗಳಿಗೆ ಸಾತ್ವಿಕ ಧರ್ಮವೆನ್ನುತ್ತಾರೆ. ಅನಂತರ ಆ ಮನುಷ್ಯನು ಭೂಲೋಕದಲ್ಲಿ ಹುಟ್ಟಿ ಸಾಮ್ರಾಜ್ಯಾಧಿಕಾರವನ್ನು ಹೊಂದುತ್ತಾನೆ. ಅನಂತರ ಮತ್ತೊಂದು ಜನ್ಮವನ್ನು ಹೊಂದಿ ವಿಷ್ಣುವಿನಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡಿ ಮೋಕ್ಷವನ್ನು ಪಡೆಯುತ್ತಾನೆ.

ರಾಜಸ ತಪಸ್ಸಿನಿಂದ ಮನುಷ್ಯನಿಗೆ ರಾಜಸ ಭಾವವು ಬರುತ್ತದೆ ಸುಖ ದುಃಖ ಮಿಶ್ರವಾದ ಸಾಂಸಾರಿಕ ಸ್ವರೂಪವು ಮುಂದುವರಿಯುತ್ತದೆ. ತಾಮಸವಾದ ತಪಸ್ಸಿನಿಂದ ಮಾನವನು ಕ್ರೂರಕರ್ಮಿಯಾಗಿ ಘೋರ ಕಾರ್ಯಗಳನ್ನು ಮಾಡುತ್ತಾನೆ. ಆ ತಾಮಸ ತಪಸ್ಸಿನಿಂದ ಅಲ್ಪಸ್ವಲ್ಪ ಭೋಗ ಐಶ್ವರ್ಯಗಳು ದೊರಯಬಹುದು. ಅದು ಯಾವದೂ ಶಾಶ್ವತವಲ್ಲ. ಅದು ರಾಕ್ಷಸ ತಪಸ್ಸು ಎನಿಸುತ್ತದೆ. ಆದರೆ ಶಾಶ್ವತವಾದ ದುಃಖರಹಿತವಾದ ಸುಖವು ದೊರೆಯುವದು ಸಾತ್ವಿಕ ತಪಸ್ಸಿನಿಂದ ಮಾತ್ರ ಸಾಧ್ಯ. ದ್ರವ್ಯ, ಅಧಿಕಾರ, ಕಾಮ, ಪ್ರೇಮ, ರಾಕ್ಷಸೀ ಮಹತ್ವಾಕಾಂಕ್ಷೆ, ಅಸೂಯಾ, ಸ್ಪರ್ಧೆ, ಪರೋಪಕಾರ, ಸೇಡಿನ ಭಾವನೆ ಮುಂತಾದ ಕ್ಷುದ್ರ ಬಯಕೆಗಳಿಂದ ಪ್ರೇರಿತರಾಗಿ ಮಾಡುವ ರಾಜಸ ತಾಮಸ ತಪಸ್ಸುಗಳು ಎಷ್ಟೇ ಉಗ್ರವಾಗಿದ್ದರೂ ನಿರಾಹಾರವಾಗಿದ್ದರೂ ಘೋರ ದೇಹದಂಡನ ಪ್ರಧಾನವಾಗಿದ್ದರೂ ಅಂಥ ತಪಸ್ಸಿನಿಂದ ಅಪಾಯಗಳೇ ಹೆಚ್ಚು. ಆದರೆ ಸಾತ್ವಿಕ ತಪಸ್ಸು ಮಾಡುವವರು ವಿಷಯಗಳಿಂದ ನಿವೃತ್ತರಾಗಿ, ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡು, ಮನೆಯಲ್ಲಿಯೇ ಇದ್ದು, ದೇವರ ಧ್ಯಾನಮಾಡುತ್ತ, ಸಾತ್ವಿಕ ತಪಸ್ಸನ್ನು ಮಾಡುತ್ತಲಿದ್ದರೆ ಅದರಿಂದ ಪುಣ್ಯ ಅಧಿಕ, ಫಲ ವಿಶೇಷ. ಅವರು ಇದ್ದ ಮನೆಯೇ ತಪೋವನ. ಅವರ ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಿಗಿಂತ ಮಿಗಿಲಾದದ್ದು. ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಿಗಿಂತಲೂ ಶ್ರೇಷ್ಠವೆಂದು ಬ್ರಹ್ಮಾದಿ ದೇವತೆಗಳು ಹೇಳಿದ್ದಾರೆ. ತಪಸ್ವಿಗಳು ಸನ್ಯಾಸಿಗಳು ಬ್ರಹ್ಮಚಾರಿಗಳು ಅಡವಿಯಲ್ಲಿ ತಪಸ್ಸುಮಾಡಿ ಹಸಿವೆಯಿಂದ ಬಳಲಿ ಬೆಂಡಾಗಿ ಗೃಹಸ್ಥರ ಮನೆಗೆ ಬಂದು ಅನ್ನೋದಕವನ್ನು ಸ್ವೀಕರಿಸಿ ತೃಪ್ತರಾಗುತ್ತಾರೆ. ಅನ್ನದಾನ ಮಾಡುವ ಗೃಹಸ್ಥಾಶ್ರಮಿಗೆ ಅನಾಯಾಸವಾಗಿ ಆತಿಥಿಗಳಾಗಿ ಬಂದವರ ತಪಸ್ಸಿನಲ್ಲಿಯ ಒಂದು ಭಾಗವು ತಾನಾಗಿಯೇ ಲಭ್ಯವಾಗುವದು.

**ಗೃಹಾಶ್ರಮಃ ಪುಣ್ಯತಮಃ ಸರ್ವದಾ ತೀರ್ಥವದ್ಗೃಹಮ್ ।**
**ಅಸ್ಮಿನ್ ಗೃಹಾಶ್ರಮೇ ಪುಣ್ಯೇ ದಾನಂ ದೇಯಂ ವಿಶೇಷತಃ ॥**

ಗೃಹಸ್ಥಾಶ್ರಮವು ಅತ್ಯಂತ ಪುಣ್ಯದಾಯಕ. ಬಂದ ಆತಿಥಿಗಳಿಗೆಲ್ಲ ಅನ್ನ ನೀಡುವ ಉದಾರ ಗೃಹಸ್ಥನ ಮನೆ ಎಂದರೆ ಒಂದು ತೀರ್ಥ ಇದ್ದಂತೆ. ಈ ಗೃಹಸ್ಥಾಶ್ರಮದಲ್ಲಿದ್ದ ಮನುಷ್ಯರು ಹೆಚ್ಚು ಹೆಚ್ಚು ಆಗಿ ದಾನವನ್ನು ಮಾಡುತ್ತಾ ಇರಬೇಕು.

**ದೇವಾನಾಂ ಪೂಜನಂ ಯತ್ರ ಅತಿಥೀನಾಂ ಚ ಭೋಜನಂ ।**
**ಪಥಿಕಾನಾಂ ಚ ಶರಣಂ ಚರಣಮತೋ ಧನ್ಯ ತಮೋ ಗ್ರಹೀ ॥**

ಯಾವ ಗೃಹಸ್ಥನು ಮನೆಯನ್ನು ಮಾಡಿಕೊಂಡು ಅತಿಥಿ ಅಭ್ಯಾಗತರನ್ನು ಸತ್ಕರಿಸಿ ತೃಪ್ತಿಪಡಿಸುವನೋ ಅಂಥವರ ಮನೆಯನ್ನು ಲಕ್ಷ್ಮೀ ಎಂದೂ ಬಿಟ್ಟು ಹೋಗುವದಿಲ್ಲ. ಆ ಮನೆಯಲ್ಲಿದ್ದವರ ಆಯುಷ್ಯ ಕ್ಷೀಣಿಸುವದಿಲ್ಲ. ಸಂತಾನದ ತಂತು ಎಂದೂ ಕಡಿಯುವದಿಲ್ಲ.

ಗೃಹಸ್ಥಾಶ್ರಮಿಗಳು ಸತ್‌ಪಾತ್ರದಲ್ಲಿ ಪುಣ್ಯಕಾಲದಲ್ಲಿ ತನ್ನ ಶಕ್ತಿಯನ್ನು ಅನುಸರಿಸಿ ನಿತ್ಯ ದಾನವನ್ನು ನೀಡಬೇಕು. ಗ್ರಹಣ, ಪರ್ವಕಾಲ, ಶ್ರಾದ್ಧ, ಚಾತುರ್ಮಾಸ್ಯ, ಹಬ್ಬ, ಹರಿದಿನ, ದ್ವಾದಶೀ ಮುಂತಾದ ವಿಶೇಷ ದಿನಗಳಲ್ಲಿ ನೈಮಿತ್ತಿಕ ದಾನವನ್ನು ಕೊಡಬೇಕು. ದಾನವನ್ನು ತಾನೇ ನ್ಯಾಯ ಮಾರ್ಗದಿಂದ ಗಳಿಸಿದ ಹಣದಿಂದಲೇ ನೀಡಬೇಕು. ಬೇರೊಬ್ಬರ ಹಣವನ್ನು ತೆಗೆದುಕೊಂಡು ದೇವತಾ ಕಾರ್ಯವನ್ನು ಮಾಡಿದರೆ ಅಥವಾ ದಾನಮಾಡಿದರೆ ಆ ದಾನಿಯು ಮೊದಲು ನರಕದರ್ಶನ ಮಾಡಿಕೊಂಡು ಅನಂತರ ಸ್ವರ್ಗಕ್ಕೆ ಹೋಗುತ್ತಾನೆ. ತೀರ್ಥಕ್ಷೇತ್ರಗಳಲ್ಲಿ ದಾನ ನೀಡುವದರಿಂದ ಅತ್ಯಧಿಕ ಪುಣ್ಯವು ಬರುವದು. ಅಭಕ್ಷ್ಯ ಭಕ್ಷಣಗಳನ್ನು ಮಾಡಿದವರು, ಭ್ರೂಣಹತ್ಯೆ ಗೈದವರು, ಗುರು ಪತ್ನಿಯೊಡನೆ ಸರಸವಾಡಿದವರು, ಸುಳ್ಳು ಮಾತು ಆಡಿದವರು, ಸಜ್ಜನರನ್ನು ಪೀಡಿಸಿದವರು, ವಿಶ್ವಾಸಘಾತ ಮಾಡಿದವರು, ವೇದ, ಧರ್ಮ, ದೇವರನ್ನು ನಿಂದಿಸಿದವರು ಮುಂದೆ ತಮಗೆ ಆಗಲಿರುವ ನರಕಾದ್ಯನರ್ಥಗಳನ್ನು ತಪ್ಪಿಸಬೇಕೆಂದಿದ್ದರೆ ಈ ಜನ್ಮದಲ್ಲಿಯೇ ಅಧಿಕಾಧಿಕವಾದ ದಾನವನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ದಾನ ಧರ್ಮಗಳ ಮಹಿಮೆ ಎಂಬ ಎಪ್ಪತ್ತೂರನೇಯ ಅಧ್ಯಾಯ ಮುಗಿದುದು*



## ಗಂಡಿಕಾ ತೀರ್ಥ ಮಹಿಮೆ

**ಅಧ್ಯಾಯ - ೭೪**

**ಮಹಾದೇವ:-** ದೇವಿ, ಗಂಡಿಕಾ ನದಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಗಂಗಾ ನದಿಯಂತೆ ಪರಮ ಪವಿತ್ರ ಈ ಗಂಡಿಕಾ ನದಿ. ಇದರ ಇನ್ನೊಂದು ವಿಶೇಷ ಅಂದರೆ ಈ ಗಂಡಿಕಾ ನದಿಯಲ್ಲಿ ಮಾತ್ರ ಸಾಲಿಗ್ರಾಮಗಳ ಉತ್ಪತ್ತಿಯಾಗುವದು. ಈ ನದಿಯ ದರ್ಶನ ಮಾಡಿಕೊಂಡ ನರ, ವಾನರ, ಮರ, ಪಶು, ಪಕ್ಷಿ, ಪ್ರಾಣಿ ಎಲ್ಲವೂ ಪುಣ್ಯಭಾಗಿಗಳಾಗುತ್ತವೆ. ಈ ನದಿಯಲ್ಲಿರುವ ಕಲ್ಲುಗಳು ಸಾಲಿಗ್ರಾಮ ರೂಪಗಳಾಗಿರುತ್ತವೆ. ಈ ಸಾಲಿಗ್ರಾಮಗಳು ಮಚ್ಛ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮಕೃಷ್ಣ ಸಾಲಿಗ್ರಾಮಗಳೆಂದು ಬಗೆಬಗೆಯ ರೀತಿಯವು ಇರುತ್ತವೆ. ಇದಲ್ಲದೆ ಕಲ್ಕಿ, ಕಪಿಲ ಮುಂತಾದ ಆಕಾರದ ಲಕ್ಷಣಗಳುಳ್ಳ ಸಾಲಿಗ್ರಾಮಗಳು ಈ ಗಂಡಕೀ ನದಿಯಲ್ಲಿ ಇರುತ್ತವೆ. ಈ ಸಾಲಿಗ್ರಾಮಗಳ ಸ್ಪರ್ಶದಿಂದಲೇ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುತ್ತವೆ. ಇಂಥ ಅನೇಕ ಸಾಲಿಗ್ರಾಮಗಳಿಗೆ ಜನ್ಮಸ್ಥಳವಾದ ಗಂಡಿಕಾ ನದಿಯ ದರ್ಶನ, ಸ್ಪರ್ಶನ, ಸ್ನಾನ, ಪಾನಗಳಿಂದಲೇ ಎಲ್ಲ ಜಾತಿ, ಜನಾಂಗದ ಜನರೆಲ್ಲರೂ

ಪಾಪಮುಕ್ತರಾಗುವರು. ವಿಶೇಷವಾಗಿ ಆಷಾಢಮಾಸದಲ್ಲಿ ಆ ಗಂಡಿಕೀ ನದಿಯ ಸ್ನಾನ, ದಾನ, ಧರ್ಮಾದಿಗಳಿಂದ ವಿಶೇಷ ಪುಣ್ಯ ಪ್ರಾಪ್ತಿ. ಆದುದರಿಂದಲೇ ನಾನು,

**ಮಾಸೈಕಂ ವಿಧಿನಾ ಚೈವ ಸ್ನಾನಂ ತತ್ರಕರೋಮ್ಯಹಂ ।**
**ತಾರಕಂ ತತ್ರ ವಿಶದಂ ಜಪಾಮಿತು ನಿರಂತರಂ ॥**
**ಅತೋಽಹಂ ವೈಷ್ಣವೋ ಜಾತೋ ವಿಷ್ಣುಕ್ಷೇತ್ರೇ ಯತೋ ಗತಃ ।**

ನಾನು ಪ್ರತಿವರ್ಷ ಆಷಾಢಮಾಸ ಒಂದು ತಿಂಗಳವರೆಗೆ ಗಂಡಕೀ ನದೀ ತೀರದಲ್ಲಿದ್ದು ವಿಧಿಪೂರ್ವಕವಾಗಿ ಅಲ್ಲಿ ಸ್ನಾನವನ್ನು ಮಾಡುತ್ತೇನೆ. ಅಲ್ಲಿ ರಾಮನಾಮವೆಂಬ ತಾರಕ ಮಂತ್ರವನ್ನು ಜಪಿಸುತ್ತೇನೆ. ಆ ವಿಷ್ಣು ಕ್ಷೇತ್ರದಲ್ಲಿದ್ದು ವಿಷ್ಣು ಮಂತ್ರವನ್ನು ಜಪಿಸಿದ್ದರಿಂದ ನಾನು ವೈಷ್ಣವನಾಗಿದ್ದೇನೆ. ಗಂಡಕೀ ನದಿಗೆ ಹೋಗಿ ಅಲ್ಲಿ ಸ್ನಾನ, ಹರಿಪೂಜೆ ಮಾಡಿ ಶಂಖಚಕ್ರಾದಿ ವೈಷ್ಣವ ಚಿನ್ಹಗಳನ್ನು ಧರಿಸಬೇಕು.

**ಬ್ರಾಹ್ಮಣೈಶ್ಚ ವಿಶೇಷೇಣ ಶಂಖಚಕ್ರಾದಿ ಧಾರಣೇ ।**
**ಕೃತೇಸತಿ ಮಹಾದೇವಿ ವೈಷ್ಣವಾಸ್ತೇಹಿ ಮಾನವಾಃ ॥**

ಸದಾಚಾರಿಗಳಾದ ಬ್ರಾಹ್ಮಣರಿಂದ ಶಂಖಚಕ್ರಾದಿ ಚಿನ್ಹಗಳನ್ನು ಧಾರಣಮಾಡಿಸಿಕೊಂಡರೆ ಮತ್ತು ತಾನೂ ಮಾಡಿಕೊಂಡರೆ ವೈಷ್ಣವರೆಂದನಿಸುವರು.

**ನ ಗಂಡಿಕಾ ಸಮಂ ತೀರ್ಥಂ ನ ವ್ರತಂ ದ್ವಾದಶೀ ಸಮಮ್ ।**
**ನ ದೇವಃ ಕೇಶವಾದನ್ಯೋ ಭೂಯೋಭೂಯೋವ ರಾನನೇ ॥**

ಗಂಡಿಕಾ ನದಿಗೆ ಸಮಾನವಾದ ತೀರ್ಥವಿಲ್ಲ. ದ್ವಾದಶಿಗೆ ಸಮಾನವಾದ ವ್ರತವಿಲ್ಲ. ಕೇಶವನಿಗೆ ಸಮಾನನಾದ ದೇವನಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಶ್ರಾದ್ಧ ಕಾಲದಲ್ಲಿ ಪಠಿಸಬೇಕಾದ, ಔರ್ಧ್ವದೇಹಿಕ ರಾಮ ಸ್ತೋತ್ರ

ಅಧ್ಯಾಯ - ೭೫

**ಮಹಾದೇವ:-** ಶ್ರಾದ್ಧ ಕಾಲದಲ್ಲಿಹಾಗೂ ಪ್ರತಿದಿನ ಸಂಧ್ಯಾಕಾಲದಲ್ಲಿ ಮುಂದೆ ಹೇಳಲಿರುವ ರಾಮದೇವರ ಸ್ತೋತ್ರವನ್ನು ಪಠಿಸಿದರೆ ಶ್ರಾದ್ಧವು ಅಕ್ಷಯವಾಗುವದು. ಪೂರ್ವಕಾಲದಲ್ಲಿ ಬ್ರಹ್ಮನು ನಾರದನನ್ನು ಕುರಿತು ಈ ಅಭ್ಯುದಯಿಕ ಔರ್ಧ್ವದೈಹಿಕ ಸ್ತೋತ್ರವನ್ನು ನಿರೂಪಿಸಿದ್ದು ಅದನ್ನು ನಾನು ನಿನಗೆ ಹೇಳುತ್ತೇನೆ -

**ಭಗವಾನ್ ನಾರಾಯಣಃ ಶ್ರೀಮಾನ್ ದೇವಶ್ಚಕ್ರಾಯುಧೋ ಹರಿಃ ।**
**ಶಾರ್ಙ್ಗಧಾರೀ ಹೃಷೀಕೇಶಃ ಪುರಾಣ ಪುರುಷೋತ್ತಮಃ ॥೧॥**

**ಪ್ರಭವಶ್ಚಾವ್ಯಯ ಸ್ತ್ವಂಚ ಉಪೇಂದ್ರೋ ಮಧುಸೂದನಃ ।**
**ಪ್ರಶ್ನಿಗರ್ಭೋದ್ಧೃತಾರ್ಚಿಸ್ತ್ವಂ ಪದ್ಮನಾಭೋ ರಣಾಂತಕೃತ್ ॥೨॥**

**ದೇವಾನಾಂ ಪೂಜನಂ ಯತ್ರ ಅತಿಥೀನಾಂ ಚ ಭೋಜನಂ ।**
**ಪಥಿಕಾನಾಂ ಚ ಶರಣಂ ಚರಣಮತೋ ಧನ್ಯ ತಮೋ ಗೃಹೀ ॥**

ಯಾವ ಗೃಹಸ್ಥನು ಮನೆಯನ್ನು ಮಾಡಿಕೊಂಡು ಅತಿಥಿ ಅಭ್ಯಾಗತರನ್ನು ಸತ್ಕರಿಸಿ ತೃಪ್ತಿಪಡಿಸುವನೋ ಅಂಥವರ ಮನೆಯನ್ನು ಲಕ್ಷ್ಮೀ ಎಂದೂ ಬಿಟ್ಟು ಹೋಗುವದಿಲ್ಲ. ಆ ಮನೆಯಲ್ಲಿದ್ದವರ ಆಯುಷ್ಯ ಕ್ಷೀಣಿಸುವದಿಲ್ಲ. ಸಂತಾನದ ತಂತು ಎಂದೂ ಕಡಿಯುವದಿಲ್ಲ.

ಗೃಹಸ್ಥಾಶ್ರಮಿಗಳು ಸತ್‌ಪಾತ್ರದಲ್ಲಿ ಪುಣ್ಯಕಾಲದಲ್ಲಿ ತನ್ನ ಶಕ್ತಿಯನ್ನು ಅನುಸರಿಸಿ ನಿತ್ಯ ದಾನವನ್ನು ನೀಡಬೇಕು. ಗ್ರಹಣ, ಪರ್ವಕಾಲ, ಶ್ರಾದ್ಧ, ಚಾತುರ್ಮಾಸ್ಯ, ಹಬ್ಬ, ಹರಿದಿನ, ದ್ವಾದಶೀ ಮುಂತಾದ ವಿಶೇಷ ದಿನಗಳಲ್ಲಿ ನೈಮಿತ್ತಿಕ ದಾನವನ್ನು ಕೊಡಬೇಕು. ದಾನವನ್ನು ತಾನೇ ನ್ಯಾಯ ಮಾರ್ಗದಿಂದ ಗಳಿಸಿದ ಹಣದಿಂದಲೇ ನೀಡಬೇಕು. ಬೇರೊಬ್ಬರ ಹಣವನ್ನು ತೆಗೆದುಕೊಂಡು ದೇವತಾ ಕಾರ್ಯವನ್ನು ಮಾಡಿದರೆ ಅಥವಾ ದಾನಮಾಡಿದರೆ ಆ ದಾನಿಯು ಮೊದಲು ನರಕದರ್ಶನ ಮಾಡಿಕೊಂಡು ಅನಂತರ ಸ್ವರ್ಗಕ್ಕೆ ಹೋಗುತ್ತಾನೆ. ತೀರ್ಥಕ್ಷೇತ್ರಗಳಲ್ಲಿ ದಾನ ನೀಡುವದರಿಂದ ಅತ್ಯಧಿಕ ಪುಣ್ಯವು ಬರುವದು. ಅಭಕ್ಷ್ಯ ಭಕ್ಷಣಗಳನ್ನು ಮಾಡಿದವರು, ಭ್ರೂಣಹತ್ಯೆ ಗೈದವರು, ಗುರು ಪತ್ನಿಯೊಡನೆ ಸರಸವಾಡಿದವರು, ಸುಳ್ಳು ಮಾತು ಆಡಿದವರು, ಸಜ್ಜನರನ್ನು ಪೀಡಿಸಿದವರು, ವಿಶ್ವಾಸಘಾತ ಮಾಡಿದವರು, ವೇದ, ಧರ್ಮ, ದೇವರನ್ನು ನಿಂದಿಸಿದವರು ಮುಂದೆ ತಮಗೆ ಆಗಲಿರುವ ನರಕಾದ್ಯನರ್ಥಗಳನ್ನು ತಪ್ಪಿಸಬೇಕೆಂದಿದ್ದರೆ ಈ ಜನ್ಮದಲ್ಲಿಯೇ ಅಧಿಕಾಧಿಕವಾದ ದಾನವನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ದಾನ ಧರ್ಮಗಳ ಮಹಿಮೆ ಎಂಬ ಎಪ್ಪತ್ಮೂರನೇಯ ಅಧ್ಯಾಯ ಮುಗಿದುದು*



## ಗಂಡಿಕಾ ತೀರ್ಥ ಮಹಿಮೆ

**ಅಧ್ಯಾಯ - ೭೪**

**ಮಹಾದೇವ:-** ದೇವಿ, ಗಂಡಿಕಾ ನದಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಗಂಗಾ ನದಿಯಂತೆ ಪರಮ ಪವಿತ್ರ ಈ ಗಂಡಿಕಾ ನದಿ. ಇದರ ಇನ್ನೊಂದು ವಿಶೇಷ ಅಂದರೆ ಈ ಗಂಡಿಕಾ ನದಿಯಲ್ಲಿ ಮಾತ್ರ ಸಾಲಿಗ್ರಾಮಗಳ ಉತ್ಪತ್ತಿಯಾಗುವದು. ಈ ನದಿಯ ದರ್ಶನ ಮಾಡಿಕೊಂಡ ನರ, ವಾನರ, ಮರ, ಪಶು, ಪಕ್ಷಿ, ಪ್ರಾಣಿ ಎಲ್ಲವೂ ಪುಣ್ಯಭಾಗಿಗಳಾಗುತ್ತವೆ. ಈ ನದಿಯಲ್ಲಿರುವ ಕಲ್ಲುಗಳು ಸಾಲಿಗ್ರಾಮ ರೂಪಗಳಾಗಿರುತ್ತವೆ. ಈ ಸಾಲಿಗ್ರಾಮಗಳು ಮಚ್ಛ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮಕೃಷ್ಣ ಸಾಲಿಗ್ರಾಮಗಳೆಂದು ಬಗೆಬಗೆಯ ರೀತಿಯವು ಇರುತ್ತವೆ. ಇದಲ್ಲದೆ ಕಲ್ಕಿ, ಕಪಿಲ ಮುಂತಾದ ಆಕಾರದ ಲಕ್ಷಣಗಳುಳ್ಳ ಸಾಲಿಗ್ರಾಮಗಳು ಈ ಗಂಡಕೀ ನದಿಯಲ್ಲಿ ಇರುತ್ತವೆ. ಈ ಸಾಲಿಗ್ರಾಮಗಳ ಸ್ಪರ್ಶದಿಂದಲೇ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುತ್ತವೆ. ಇಂಥ ಅನೇಕ ಸಾಲಿಗ್ರಾಮಗಳಿಗೆ ಜನ್ಮಸ್ಥಳವಾದ ಗಂಡಿಕಾ ನದಿಯ ದರ್ಶನ, ಸ್ಪರ್ಶನ, ಸ್ನಾನ, ಪಾನಗಳಿಂದಲೇ ಎಲ್ಲ ಜಾತಿ, ಜನಾಂಗದ ಜನರೆಲ್ಲರೂ

ಪಾಪಮುಕ್ತರಾಗುವರು. ವಿಶೇಷವಾಗಿ ಆಷಾಢಮಾಸದಲ್ಲಿ ಆ ಗಂಡಿಕೀ ನದಿಯ ಸ್ನಾನ, ದಾನ, ಧರ್ಮಾದಿಗಳಿಂದ ವಿಶೇಷ ಪುಣ್ಯ ಪ್ರಾಪ್ತಿ. ಆದುದರಿಂದಲೇ ನಾನು,

**ಮಾಸೈಕಂ ವಿಧಿನಾ ಚೈವ ಸ್ನಾನಂ ತತ್ರಕರೋಮ್ಯಹಂ ।**
**ತಾರಕಂ ತತ್ರ ವಿಶದಂ ಜಪಾಮಿತು ನಿರಂತರಂ ॥**
**ಅತೋऽಹಂ ವೈಷ್ಣವೋ ಜಾತೋ ವಿಷ್ಣುಕ್ಷೇತ್ರೇ ಯತೋ ಗತಃ ।**

ನಾನು ಪ್ರತಿವರ್ಷ ಆಷಾಢಮಾಸ ಒಂದು ತಿಂಗಳವರೆಗೆ ಗಂಡಕೀ ನದೀ ತೀರದಲ್ಲಿದ್ದು ವಿಧಿಪೂರ್ವಕವಾಗಿ ಅಲ್ಲಿ ಸ್ನಾನವನ್ನು ಮಾಡುತ್ತೇನೆ. ಅಲ್ಲಿ ರಾಮನಾಮವೆಂಬ ತಾರಕ ಮಂತ್ರವನ್ನು ಜಪಿಸುತ್ತೇನೆ. ಆ ವಿಷ್ಣು ಕ್ಷೇತ್ರದಲ್ಲಿದ್ದು ವಿಷ್ಣು ಮಂತ್ರವನ್ನು ಜಪಿಸಿದ್ದರಿಂದ ನಾನು ವೈಷ್ಣವನಾಗಿದ್ದೇನೆ. ಗಂಡಕೀ ನದಿಗೆ ಹೋಗಿ ಅಲ್ಲಿ ಸ್ನಾನ, ಹರಿಪೂಜೆ ಮಾಡಿ ಶಂಖಚಕ್ರಾದಿ ವೈಷ್ಣವ ಚಿನ್ಹಗಳನ್ನು ಧರಿಸಬೇಕು.

**ಬ್ರಾಹ್ಮಣೈಶ್ಚ ವಿಶೇಷೇಣ ಶಂಖಚಕ್ರಾದಿ ಧಾರಣೇ ।**
**ಕೃತೇಸತಿ ಮಹಾದೇವಿ ವೈಷ್ಣವಾಸ್ತೇಹಿ ಮಾನವಾಃ ॥**

ಸದಾಚಾರಿಗಳಾದ ಬ್ರಾಹ್ಮಣರಿಂದ ಶಂಖಚಕ್ರಾದಿ ಚಿನ್ಹಗಳನ್ನು ಧಾರಣಮಾಡಿಸಿ ಕೊಂಡರೆ ಮತ್ತು ತಾನೂ ಮಾಡಿಕೊಂಡರೆ ವೈಷ್ಣವರೆಂದನಿಸುವರು.

**ನ ಗಂಡಿಕಾ ಸಮಂ ತೀರ್ಥಂ ನ ವ್ರತಂ ದ್ವಾದಶೀ ಸಮಮ್ ।**
**ನ ದೇವಃ ಕೇಶವಾದನ್ಯೋ ಭೂಯೋಭೂಯೋವ ರಾನನೇ ॥**

ಗಂಡಿಕಾ ನದಿಗೆ ಸಮಾನವಾದ ತೀರ್ಥವಿಲ್ಲ. ದ್ವಾದಶಿಗೆ ಸಮಾನವಾದ ವ್ರತವಿಲ್ಲ. ಕೇಶವನಿಗೆ ಸಮಾನನಾದ ದೇವನಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಶ್ರಾದ್ಧ ಕಾಲದಲ್ಲಿ ಪಠಿಸಬೇಕಾದ, ಔರ್ಧ್ವದೇಹಿಕ ರಾಮ ಸ್ತೋತ್ರ

ಅಧ್ಯಾಯ - ೭೫

**ಮಹಾದೇವ:-** ಶ್ರಾದ್ಧ ಕಾಲದಲ್ಲಿಹಾಗೂ ಪ್ರತಿದಿನ ಸಂಧ್ಯಾಕಾಲದಲ್ಲಿ ಮುಂದೆ ಹೇಳಲಿರುವ ರಾಮದೇವರ ಸ್ತೋತ್ರವನ್ನು ಪಠಿಸಿದರೆ ಶ್ರಾದ್ಧವು ಅಕ್ಷಯವಾಗುವದು. ಪೂರ್ವಕಾಲದಲ್ಲಿ ಬ್ರಹ್ಮನು ನಾರದನನ್ನು ಕುರಿತು ಈ ಅಭ್ಯುದಯಿಕ ಔರ್ಧ್ವದೈಹಿಕ ಸ್ತೋತ್ರವನ್ನು ನಿರೂಪಿಸಿದ್ದು ಅದನ್ನು ನಾನು ನಿನಗೆ ಹೇಳುತ್ತೇನೆ -

ಭಗವಾನ್ ನಾರಾಯಣಃ ಶ್ರೀಮಾನ್ ದೇವಶ್ಚಕ್ರಾಯುಧೋ ಹರಿಃ ।
ಶಾರ್ಙ್ಗಧಾರೀ ಹೃಷೀಕೇಶಃ ಪುರಾಣ ಪುರುಷೋತ್ತಮಃ ॥೧॥

ಪ್ರಭವಶ್ಚಾವ್ಯಯ ಸ್ತ್ವಂಚ ಉಪೇಂದ್ರೋ ಮಧುಸೂದನಃ ।
ಪ್ರಶ್ನಿಗರ್ಭೋದೃತಾರ್ಚಿಸ್ತ್ವಂ ಪದ್ಮನಾಭೋ ರಣಾಂತಕೃತ್ ॥೨॥

ಏಕಶೃಂಗೋ ವರಾಹಸ್ತ್ವಂ ಭೂತಭವ್ಯಂ ಭವಾಂತ್ಮಕಃ ।
ಅಕ್ಷರಂ ಬ್ರಹ್ಮ ಸತ್ಯಂತು ಆದೌ ಚಾಂತೇಚ ರಾಘವ ॥೩॥

ತ್ವಂಯಜ್ಞಸ್ತ್ವಂ ವಷಟ್ಕಾರ ಸತ್ತ್ವಮೋಂಕಾರಃ ಪರಂತಪಃ
ಶತಧನ್ವಾ ವಸುಃ ಪೂರ್ವ ವಸೂನಾಂತ್ವಂ ಪ್ರಜಾಪತಿಃ ॥೪॥

ತ್ರಯಾಣಾಮಪಿ ಲೋಕಾನಾಮಾದಿ ಕರ್ತಾಸ್ಯವ ಪ್ರಭುಃ
ರುದ್ರಾಣಾಮಷ್ಟಮೋ ರುದ್ರಃ ಸಾಧ್ಯಾನಾಮಕಿ ಪಂಚವಃ ॥೫॥

ಅಶ್ವಿನೌಚಾಪಿ ಕರ್ಣೌತೇ ಸೂರ್ಯ ಚಂದ್ರೌಚ ಚಕ್ಷುಷೀ ।
ಅಂತೇಚಾದೌಚ ಮಧ್ಯೇಚ ದೃಶ್ಯಸೇತ್ವಂ ಪರಂತಪಃ ॥೬॥

ಪ್ರಭವೋ ನಿರ್ಧಂಚಾಸ್ಯ ನವಿದುಃ ಕೊಭ ವಾನಿತಿ ।
ದೃಶ್ಯಸೇ ಸರ್ವಲೋಕೇಷು ಗೋಷುಚ ಬ್ರಾಹ್ಮಣೇಷುಚ ॥೭॥

ತ್ರೀನ್ ಲೋಕಾನ್ ಧಾರಯನ್ನಾಸೇ ದೇವಗಂಧರ್ವ ದಾನವಾನ್ ।
ಅಹಂತೆ ಹೃದಯಂ ರಾಮ ಜಿವ್ಹಾ ದೇವೀ ಸರಸ್ವತೀ ॥೮॥

ದೇವಾ ರೋಮಾಣಿ ಗಾತ್ರೇಷು ನಿರ್ಮಿತಾಸ್ತೇ ಸ್ವಮಾಯಯಾ ।
ನಿಮಿಷಸ್ತೇ ಸ್ಮೃತಾರಾತ್ರಿರುನ್ಮೇಷೋದಿ ವನಸ್ತಥಾ ॥೯॥

ಸೀತಾಲಕ್ಷ್ಮೀರ್ಭವಾನ್ ವಿಷ್ಣುಃ ದೇವಃ ಕೃಷ್ಣಃ ಪ್ರಜಾಪತಿಃ ।
ವಾದಾರ್ಥಂ ರಾವಣಸ್ಯತ್ವಂ ಪ್ರವಿಷ್ಟೋ ಮಾನುಷೀಂ ತನುಂ ॥೧೦॥

ತದಿದಂಚ ತ್ವಯಾ ಕಾರ್ಯಂ ಕೃತಂ ಧರ್ಮ ಭೃತಾಂ ವರ ।
ನಿಹತೋ ರಾವಣೋರಾಮ ಪ್ರಹೃಷ್ಟಾ ದೇವತಾಃ ಕೃತಾಃ ॥೧೧॥

ಅಮೋಘಂ ದೇವ ವೀರ್ಯಂತೇ ನತೇ ಮೋಘಃ ಪರಾಕ್ರಮಃ ।
ಅಮೋಘಂ ದರ್ಶನಂರಾಮ ನ ಚ ಮೋಘ ಸ್ತವಸ್ತವಃ ॥೧೨॥

ಶಾರ್ಙ್ಗದನಸ್ಸು, ಸುದರ್ಶನಚಕ್ರ ಮೊದಲಾದ ಆಯುಧಗಳನ್ನು ಧರಿಸಿದ ಶ್ರೀಮನ್ನಾರಾಯಣನೆಂದರೆ ರಾಮರೂಪಿಯಾದ ನೀನೇ. ನಿನ್ನನ್ನೇ ಇಂದ್ರಿಯಗಳಿಗೆ ನಿಯಾಮಕನಾದುದರಿಂದ ಹೃಷೀಕೇಶನೆಂದೂ ಪುರಾಣ ಪುರುಷೋತ್ತಮನೆಂದೂ ಕರೆಯುತ್ತಾರೆ. ನಾಶರಹಿತನಾದ ನೀನು ಈ ಜಗತ್ತಿಗೆಲ್ಲ ಮೂಲಕಾರಣ. ಇಂದ್ರನನ್ನು ನಿಯಮಿಸುವುದರಿಂದ ಉಪೇಂದ್ರ. ಮಧು ದೈತ್ಯನನ್ನು ಕೊಂದದ್ದರಿಂದ ನೀನು ಮಧುಸೂದನ. ಪ್ರಶ್ನಿ ಎಂಬ ತಾಯಿಯ ಹೊಟ್ಟೆಯಿಂದ ಹುಟ್ಟಿದ್ದರಿಂದ ತೇಜಸ್ವಿಯಾದ ನಿನ್ನನ್ನು ಪ್ರಶ್ನಿ ಗರ್ಭ ಎಂದೂ ನಿನ್ನ ಹೊಕ್ಕಳದಲ್ಲಿ ಹೊಂದಾವರೆ ಹುಟ್ಟಿದ್ದರಿಂದ ನಿನ್ನನ್ನು ಪದ್ಮನಾಭನೆಂದೂ ಕರೆಯುವರು. ಎಲ್ಲ ಯಜ್ಞಗಳ ಮುಖ್ಯ ಉದ್ದೇಶವಾದುದರಿಂದ ನಿನಗೆ ಯಜ್ಞ ಅನ್ನುವರು. ವೇದ ಪ್ರತಿಪಾದ್ಯನಾದುದರಿಂದ ನೀನೇ ಓಂಕಾರ. ವಸುಗಗಳಿಗೆಲ್ಲ ನೀನೇ ಪ್ರಜಾಪತಿ. ಮೂರು ಲೋಕಗಳಿಗೆಲ್ಲ ನೀನೇ ಕಾರಣ. ರುದ್ರ ಗಣದಲ್ಲಿ ನೀನು ಎಂಟನೇ ರುದ್ರ. ಸಾಧ್ಯರಲ್ಲಿ ನೀನು ಪಂಚಮ ಸಾಧ್ಯ. ಅಶ್ವಿನೀಕುಮಾರರಿಗೆ ನಿನ್ನ ಕಿವಿಯೇ ನೆಲೆ, ಸೂರ್ಯಚಂದ್ರರಿಗೆ ನಿನ್ನ ಕಣ್ಣು ಆಶ್ರಯ.

ಈ ಪ್ರಪಂಚದ ಮೊದಲು ಮಧ್ಯ ಕೊನೆಗಳನ್ನು ವ್ಯಾಪಿಸಿಕೊಂಡು ಇರುವವನು ನೀನೇ. ಮೂರು ಲೋಕಗಳನ್ನೂ ದೇವಾಸುರ ಗಂಧರ್ವರನ್ನೂ ನೀನೇ ಧರಿಸಿಕೊಂಡು ನಿಂತಿರುವೆ. ನಾನು ನಿನ್ನ ಹೃದಯವಿದ್ದಂತೆ. ಸರಸ್ವತಿಯೇ ನಿನ್ನ ನಾಲಿಗೆ. ದೇವತೆಗಳು ನಿನ್ನ ರೋಮ ರೋಮವನ್ನು ಆಶ್ರಯಿಸಿಕೊಂಡು ಇರುತ್ತಾರೆ. ನಿನ್ನ ಇಚ್ಛೆಯಿಂದ ಎಲ್ಲರನ್ನು ಸೃಷ್ಟಿಮಾಡಿರುತ್ತೀ. ನೀನು ಕಣ್ಣು ಮುಚ್ಚಿದ್ದಾಗ ರಾತ್ರಿ, ತೆರೆದಾಗ ಹಗಲು, ಸೀತಾದೇವಿಯೇ ಸಾಕ್ಷಾತ್ ಲಕ್ಷ್ಮೀ. ನೀನೇ ಸ್ವಯಂ ವಿಷ್ಣು ಕೃಷ್ಣ, ರಾವಣನನ್ನು ವಧಿಸುವದಕ್ಕಾಗಿ ನೀನು ಮನುಷ್ಯ ದೇಹವನ್ನು ಧರಿಸಿರುವೆ. ಆ ರಾಕ್ಷಸ ಸಂಹಾರ ರೂಪವಾದ ಕಾರ್ಯವು ಈಗ ಮುಗಿದಿದೆ. ರಾವಣನನ್ನು ನೀನು ಸಂಹರಿಸಿರುವೆ. ದೇವತೆಗಳನ್ನು ಸಂತೋಷಪಡಿಸಿರುವೆ. ನಿನ್ನ ದಿವ್ಯವಾದ ಪರಾಕ್ರಮವು ಅಮೋಘವಾಗಿದೆ. ನಿನ್ನ ಶಕ್ತಿಯು ಎಂದೂ ವ್ಯರ್ಥವಾಗುವಂತಹದಲ್ಲ. ನಿನ್ನ ದರ್ಶನವು ಎಂದೂ ವ್ಯರ್ಥವಾಗುವದಿಲ್ಲ. ಈ ನಿನ್ನ ಸ್ತೋತ್ರವು ವ್ಯರ್ಥವಲ್ಲ.

ಶ್ರಾದ್ಧ ಕಾಲದಲ್ಲಿ ಪಿಂಡಪೂಜೆಯ ಮೊದಲು ಮತ್ತು ಅನಂತರ ಈ ರಾಮನ ಸ್ತೋತ್ರ ಪಠಿಸಿದರೆ ಶ್ರಾದ್ಧವು ಅಕ್ಷಯವಾಗುವದು. ಶಂಖಚಕ್ರಾದಿಗಳನ್ನು ಧಾರಣಮಾಡಿ ಕೊರಳಲ್ಲಿ ಪದ್ಮಾಕ್ಷ ಮಾಲೆಯನ್ನು ಹಾಕಿಕೊಂಡು ಈ ಶ್ರೀರಾಮಸ್ತೋತ್ರವನ್ನು ಜಪಿಸುತ್ತ ಶ್ರಾದ್ಧವನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶ್ರಾದ್ಧ ಕಾಲದಲ್ಲಿ ಪಠಿಸಬೇಕಾದ, ಔರ್ಧ್ವದೇಹಿಕ ರಾಮ ಸ್ತೋತ್ರ ಎಂಬ ಎಪ್ಪತ್ತೈದನೇಯ ಅಧ್ಯಾಯ ಮುಗಿದುದು*



## ಋಷಿಪಂಚಮೀ ವ್ರತ ವಿಧಾನ

**ಅಧ್ಯಾಯ - ೭೬**

**ಮಹಾದೇವ:-** ಸುಂದರಿ, ನಾನು ಹಿಂದೆ ಒಂದು ದಿನ ಮಹಾವಿಷ್ಣುವನ್ನು ಕೇಳಿದೆ, ''ಎಲ್ಲ ವ್ರತಗಳಲ್ಲಿ ಉತ್ತಮವಾದ ವ್ರತ ಯಾವದು?'' ಎಂದು. ಶ್ರೀ ಹರಿಯು ಆ ನನ್ನ ಪ್ರಶ್ನೆಗೆ ಹೇಳಿದ ಉತ್ತರವನ್ನೇ ನಿನಗೆ ನಿರೂಪಿಸುತ್ತೇನೆ. ಇದೊಂದು ಉತ್ತಮವಾದ ವ್ರತ. ರಜಸ್ವಲೆಯಾದ ನಾರಿಯು ಮಾಡಿದ ಮಹಾಪಾಪಗಳೆಲ್ಲವೂ ಈ ವ್ರತದ ಅನುಷ್ಠಾನದಿಂದ ತೊಳೆದುಹೋಗುವವು.

**ವಿಷ್ಣು:-** ಪೂರ್ವಕಾಲದಲ್ಲಿ ದೇವಶರ್ಮ ಎಂಬ ಹೆಸರಿನ ಒಬ್ಬ ಬ್ರಾಹ್ಮಣನಿದ್ದ. ಅವನು ಸುಶೀಲ ಮತ್ತು ಸದಾ ಅಧ್ಯಯನಶೀಲ. ವೇದಗಳಲ್ಲಿ ಪಾರಂಗತ. ಶಾಸ್ತ್ರಗಳಲ್ಲಿ ಮಹಾಪಂಡಿತ. ಷಟ್ಕರ್ಮನಿರತ. ಅಗ್ನಿಹೋತ್ರವನ್ನು ಇಟ್ಟಿದ್ದ ಆ ದೇವಶರ್ಮಾ. ಆದ್ದರಿಂದ ಎಲ್ಲ ವರ್ಣದ ಜನರೂ ಅವನನ್ನು ಪೂಜಿಸುತ್ತಿದ್ದರು. ಭಾದ್ರಪದ ಶುಕ್ಲಪಕ್ಷ ಪಂಚಮೀ ತಿಥಿಯಂದು ದೇವಶರ್ಮನ ತಂದೆಯ ಶ್ರಾದ್ಧ. ಭಕ್ತಿಯಿಂದ ಜಿತೇಂದ್ರಿಯನಾಗಿ ದೇವಶರ್ಮನು ತಂದೆಯ ಶ್ರಾದ್ಧ ಮಾಡುತ್ತಲಿದ್ದ. ಅದಕ್ಕಾಗಿ ಎಲ್ಲ ಸೀದಾಸಾಮಗ್ರಿ ಪಾತ್ರೆ ಪರಡೆ ಮುಂತಾದ ಸರ್ವವಿಧ ಸಿದ್ಧತೆಯನ್ನು ಮಾಡಿಕೊಂಡಿದ್ದ. ಅವನ ಹೆಂಡತಿಯ ಪತಿಯ ಆಜ್ಞೆಯಂತೆ ನವರಸೋಪೇತವಾದ ಪಾಕವನ್ನು ಮಾಡಲು ಎಲ್ಲ ಏರ್ಪಾಡುಗಳನ್ನು ಮಾಡಿಕೊಂಡಿದ್ದಳು.

ಒಂದು ಪಾತ್ರೆಯಲ್ಲಿ ಹಾಲನ್ನು ತುಂಬಿ ಇಟ್ಟಿದ್ದಳು. ಅವಳು ಕಾರ್ಯಾಂತರಕ್ಕಾಗಿ ಬೇರೆ ಕೋಣೆಯಲ್ಲಿ ಹೋದಾಗ ಆ ಮನೆ ಕಾಯುವ ನಾಯಿಯು ಒಳಗೆ ಬಂದು ದೊಡ್ಡ ಪಾತ್ರೆಯಲ್ಲಿರುವ ಹಾಲನ್ನು ನೆಕ್ಕತೊಡಗಿತು. ಅದನ್ನು ನೋಡಿ ಯಜಮಾನಿಯು ಸಿಟ್ಟಿಗೆದ್ದು ಕಟ್ಟಿಗೆಯಿಂದ ಆ ನಾಯಿಯನ್ನು ಬಲವಾಗಿ ಹೊಡೆದಳು. ಅದರಿಂದ ನಾಯಿಯ ಸೊಂಟ ಮುರಿದು ಅದು ನರಳುತ್ತ ಹೊರಗೆ ಹೋಯಿತು. ಅನಂತರ ಆ ಬ್ರಾಹ್ಮಣ ದಂಪತಿಗಳು ಅದನ್ನು ತಿಳಿದು ನಾಯಿ ಮುಟ್ಟಿದ ಆ ಪಾತ್ರೆ ಪದಾರ್ಥಗಳನ್ನೆಲ್ಲ ಹೊರಗೆ ಹಾಕಿ ಮನೆಯನ್ನು ಶುದ್ಧೀಕರಿಸಿ ಹೊಸ ಪಾತ್ರೆಗಳನ್ನು ಹಾಗೂ ಪದಾರ್ಥಗಳನ್ನು ಕೊಂಡು ತಂದು ಅಡಿಗೆ ಮಾಡಿದರು. ಮುನ್ನ ದಿನವೇ ಮನೆಮನೆಗೆ ಹೋಗಿ ಬ್ರಾಹ್ಮಣರಿಗೆ ಆಮಂತ್ರಣ ಕೊಟ್ಟು ಬಂದಿದ್ದರು. ಅಂದು ಮಧ್ಯಾಹ್ನ ಸಕಾಲದಲ್ಲಿ ಎಲ್ಲ ಬ್ರಾಹ್ಮಣರು ಅಲ್ಲಿಗೆ ಆಗಮಿಸಿದರು. ಅವರೆಲ್ಲರಿಗೂ ದೇವಶರ್ಮನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ಪಾದ ಪ್ರಕ್ಷಾಲನೆ ಮಾಡಿದ. ಮನೆಯ ಮಧ್ಯದಲ್ಲಿ ಅವರೆಲ್ಲರನ್ನೂ ಒಳ್ಳೇ ಆಸನದಲ್ಲಿ ಕುಳ್ಳಿರಿಸಿದ. ಪಿಂಡಪ್ರದಾನಾದಿ ಶ್ರಾದ್ಧ ವಿಧಿಗಳನ್ನು ಎಲ್ಲ ಮಾಡಿದ ಬಳಿಕ, ಪಕ್ವಾನ್ನ ಭೋಜನ ಹಾಕಿ ಅವರೆಲ್ಲರನ್ನು ತೃಪ್ತಿಪಡಿಸಿದ. ಅನಂತರ ಆ ಬ್ರಾಹ್ಮಣರಿಗೆಲ್ಲ ತಾಂಬೂಲ, ವಸ್ತ್ರ, ದಕ್ಷಿಣೆಗಳನ್ನು ನೀಡಿದ. ಅನಂತರ ವೇದ ವೇದಾಂತ ಪಾರಂಗತರಾದ ಆ ಎಲ್ಲ ಬ್ರಾಹ್ಮಣರು ಆ ದೇವಶರ್ಮ ದಂಪತಿಗಳಿಗೆ ಆಶೀರ್ವಾದ ನೀಡಿ ತಮ್ಮ ತಮ್ಮ ಮನೆಗೆ ತೆರಳಿದರು. ಅನಂತರ ದೇವಶರ್ಮನು ತನ್ನ ವಂಶದ ಬಂಧು-ಬಾಂಧವರನ್ನೂ ಆಪ್ತಮಿತ್ರ ಪರಿವಾರ ದವರನ್ನೂ ಕರೆದು ಅವರಿಗೆಲ್ಲ ಮೃಷ್ಟಾನ್ನ ಭೋಜನ ಮಾಡಿಸಿ ತಾನೂ ಭೋಜನ ಮಾಡಿದ.

ಅಂದು ಸಾಯಂಕಾಲ ದೇವಶರ್ಮನು ತನ್ನ ಮನೆಯ ಮುಂದಿನ ಅಂಗಳದಲ್ಲಿಯ ಕಟ್ಟೆಯ ಮೇಲೆ ಕುಳಿತುಕೊಂಡಿದ್ದ. ಆಗ ಅವನ ಹೆಂಡತಿಯು ನೀರು ತಂದು ಪತಿಯ ಕಾಲು ತೊಳೆದು ನಮಸ್ಕರಿಸಿ ಪತಿಯ ಪಾದೋದಕವನ್ನು ಶಿರಸಾ ಧಾರಣಮಾಡಿ ತಾನು ಕೆಲಸಕ್ಕೆ ಒಳಗೆ ಹೋದಳು.

ಸೊಂಟ ಮುರಿದ ಹೆಣ್ಣು ನಾಯಿಯು ಅಲ್ಲಿಯೇ ಬಾಗಿಲದ ಸಮೀಪದಲ್ಲೇ ಬಿದ್ದುಕೊಂಡಿತ್ತು. ಅವರ ಮನೆಯ ಎತ್ತು ಅಲ್ಲಿಯೇ ನಿಂತುಕೊಂಡಿತ್ತು. ಅವು ಎರಡೂ ಪ್ರಾಣಿಗಳು ಪರಸ್ಪರ ಮಾತನಾಡತೊಡಗಿದವು. ಮಹಾ ಪಂಡಿತನಾದ ದೇವಶರ್ಮನಿಗೆ ಪಶುಪಕ್ಷಿಗಳ ಭಾಷೆಯು ಅರ್ಥವಾಗುತ್ತಿತ್ತು. ಅವು ಎರಡೂ ಮಾತನಾಡುವದನ್ನು ಚಿತ್ತವಿಟ್ಟು ಆಲಿಸಿದ. ಆ ನಾಯಿ ಮತ್ತು ಎತ್ತು ಜನ್ಮಾಂತರದಲ್ಲಿ ಪತಿಪತ್ನಿಗಳಾದ್ದವು. ಈಗ ನಡುಮುರಿದ ಹೆಣ್ಣು ನಾಯಿಯು ತನ್ನ ಪತಿಯನ್ನು ಕುರಿತು ಹೀಗೆ ನುಡಿಯಿತು.

**ನಾಯಿಯು:-** ಕಾಂತ, ನನಗೆ ಇಂದು ಭಯಂಕರ ದುಃಖ ಆಗಿದೆ. ನನ್ನ ಸೊಸೆಯು ಕ್ರೌರ್ಯದಿಂದ ನನಗೆ ಭಯಂಕರ ಪ್ರಹಾರವನ್ನು ಮಾಡಿ ಸೊಂಟವನ್ನೇ ಮುರಿದಿದ್ದಾಳೆ. ಅದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು. ನಾನು ಸುಳ್ಳು ಮಾತನಾಡುವದಿಲ್ಲ. ನಿನ್ನೆ ಈ ಮನೆಯಲ್ಲಿ ಶ್ರಾದ್ಧದ ತಯಾರಿಯನ್ನು ಮಾಡಲಾಗಿತ್ತು. ಹಾಲು ತಂದು ಇಟ್ಟಿದ್ದರು. ಆ ಹಾಲಿನ ಪಾತ್ರೆಗೆ ಅಕಸ್ಮಾತ್ತಾಗಿ ಒಂದು ಹಾವು ಬಂದು ಬಾಯಿ ಹಾಕಿತು. ತನ್ನ ವಿಷವನ್ನೆಲ್ಲ ಅದರಲ್ಲಿ ಕಕ್ಕಿತು. ಅದು ನನ್ನ ಕಣ್ಣಿಗೆ ಕಂಡಿತು. ಈ ಹಾಲನ್ನು ತಿಳಿಯದೆ ನನ್ನ ಸೊಸೆಯು ಮರು ದಿನ ಮೊಸರು ಮಾಡಿ ಬಡಿಸಿದರೆ ಬ್ರಾಹ್ಮಣರೆಲ್ಲ ಸತ್ತುಹೋಗುವರು

ಎಂದು ನಾನು ಅದನ್ನು ಬುದ್ಧಿಪೂರ್ವಕವಾಗಿ ಮುಟ್ಟಿ ಬಾಯಿಹಾಕಿದೆ. ಅದನ್ನು ನನ್ನ ಸೊಸೆಯು ನೋಡಿ ಬಡಿಗೆಯಿಂದ ಬಡೆದು ನನ್ನ ಸೊಂಟ ಮುರಿದಳು. ಈಗ ನನಗೆ ಓಡಾಡಲಿಕ್ಕೆ ಬಾರದಂತೆ ಆಗಿದೆ. ನಾನು ಆ ಹಾಲಿನ ಪಾತ್ರೆಯನ್ನು ಮುಟ್ಟಿ ಮೈಲಿಗೆ ಮಾಡದಿದ್ದರೆ ವಿಷದೂಷಿತವಾದ ಆ ಹಾಲು ಮೊಸರು ಮುಂತಾದವುಗಳನ್ನು ತಿಂದು ಎಲ್ಲ ಬ್ರಾಹ್ಮಣರೂ ಮನೆಯ ಜನರೂ ಸತ್ತುಹೋಗುತ್ತಿದ್ದರು. ಇದನ್ನು ತಿಳಿಯದೆ ನನ್ನ ಸೊಸೆಯು ನನ್ನನ್ನು ಹೊಡೆದು ಬಡೆದು ನನ್ನ ನಡ ಮುರಿದು ನರಳುವಂತೆ ಮಾಡಿದ್ದಾಳೆ.

**ಎತ್ತು:-** ಈಗ ನನ್ನ ದುಃಖವನ್ನು ಹೇಳುತ್ತೇನೆ ಕೇಳು. ಈ ದೇವಶರ್ಮ ಪೂರ್ವಜನ್ಮದಲ್ಲಿ ನನ್ನ ಮಗ. ಇಂದು ಅವನು ನನ್ನನ್ನು ಉದ್ದೇಶಿಸಿ ಬ್ರಾಹ್ಮಣ ಭೋಜನವನ್ನೇನೋ ಚೆನ್ನಾಗಿ ಮಾಡಿಸಿದ್ದಾನೆ. ಆದರೆ ಆ ಭೋಜನದ ಗಡಿಬಿಡಿಯಲ್ಲಿ ನನ್ನ ಕಡೆಗೆ ಯಾರದೂ ಲಕ್ಷವೇ ಇಲ್ಲ. ಈಗ ನನಗೆ ಯಾರೂ ಹುಲ್ಲನ್ನು ಹಾಕಿಲ್ಲ. ನೀರನ್ನು ಕುಡಿಸಿಲ್ಲ. ಹಸಿವೆ ಬಾಯಾರಿಕೆಗಳಿಂದ ಈಗ ಕಂಗಲಾಗಿದ್ದೇನೆ. ಹಿಂದಿನ ಪಾಪದಿಂದ ನನ್ನನ್ನು ಉಪವಾಸ ಕೂಡಿಸಿ ಇಲ್ಲಿಯ ಗೂಟಕ್ಕೆ ಬಿಗಿದು ಕಟ್ಟಿದ್ದಾರೆ.

ದೇವಶರ್ಮನು ಈ ನಾಯಿ ಹಾಗೂ ಎತ್ತುಗಳ ಮಾತುಗಳನ್ನು ಕೇಳಿದ. ಅವರಿಬ್ಬರೂ ತನ್ನ ಜನ್ಮಾಂತರದ ತಾಯಿ ತಂದೆಗಳೆಂದು ಖಾತ್ರಿಯಾಯಿತು. ಮತ್ತು ದುಃಖವೂ ಆಯಿತು. ಅದರಿಂದ ಅಂದು ರಾತ್ರಿ ಅವನಿಗೆ ನಿದ್ರೆಯೇ ಬರಲಿಲ್ಲ.

ಬೆಳಗಾದ ಕೂಡಲೇ ಅವನು ನೇರವಾಗಿ ವಶಿಷ್ಠರ ಆಶ್ರಮಕ್ಕೆ ಬಂದ. ಅವರಿಗೆ ವಂದಿಸಿ ಅವರನ್ನು ಕುರಿತು ನುಡಿದ. ಪೂಜ್ಯರೇ, ಇಂದು ತಮ್ಮ ದರ್ಶನವಾಯಿತು ನನ್ನ ಜನ್ಮ ಸಫಲವಾಯಿತು. ನನ್ನ ತಪಸ್ಸು ಸಾರ್ಥಕವಾಯಿತು. ಇಂದು ನಮ್ಮ ಹಿಂದಿನ ಪಿತೃಗಳೆಲ್ಲರೂ ತೃಪ್ತರಾದರು. ನಾನು ನಮ್ಮ ತಂದೆಯ ಶ್ರಾದ್ಧವನ್ನು ವಿಧಿಪೂರ್ವಕ ಮಾಡಿದೆ. ಎಲ್ಲ ಬ್ರಾಹ್ಮಣರ ಹಾಗೂ ಕುಟುಂಬದ ಜನರ ಭೋಜನವನ್ನು ಮಾಡಿಸಿದೆ. ಭೋಜನಾನಂತರ ಅಲ್ಲಿ ಒಂದು ನಾಯಿ ಬಂದಿತ್ತು. ಅದು ನಮ್ಮ ಮನೆಯಲ್ಲಿರುವ ಎತ್ತನ್ನು ಕುರಿತು ಮಾತನಾಡಿತು. ಹಾವಿನ ವಿಷ ಬಿದ್ದ ಹಾಲನ್ನು ತಾನು ಮುಟ್ಟಿ ಮೈಲಿಗೆ ಮಾಡಿ ಎಲ್ಲ ಬ್ರಾಹ್ಮಣರ ಜೀವ ಉಳಿಸಿದ್ದನ್ನು ಹೇಳಿತು. ಅದಕ್ಕಾಗೆ ಮನೆಯ ಯಜಮಾನಿಯು ತನ್ನ ಸೊಂಟವನ್ನು ಮುರಿದ ಸಮಾಚಾರವನ್ನೂ ತಿಳಿಸಿತು. ಅದರಂತೆ ಆ ಎತ್ತು ಕೂಡ ಇಡೀ ದಿನ ತನಗೆ ಯಾರೂ ಒಂದು ಹಿಡಿ ಹುಲ್ಲು ಹಾಕಿಲ್ಲ. ನೀರು ಕುಡಿಸಿಲ್ಲ ಎಂದು ತನ್ನ ದುಃಖವನ್ನು ಹೇಳಿಕೊಂಡಿತು. ಇದನ್ನು ಕೇಳಿ ನನಗೇ ಬಹಳ ದುಃಖವಾಯಿತು. ರಾತ್ರಿ ನಿದ್ದೆಯು ಕೂಡ ನನಗೆ ಬರಲಿಲ್ಲ. ಇದೇ ಚಿಂತೆಯಲ್ಲಿಯೇ ರಾತ್ರಿ ಕಳೆಯಿತು. ಆ ನಾಯಿ ಮತ್ತು ಎತ್ತು ಇವೆರಡೂ ನನ್ನ ಜನ್ಮಾಂತರದ ತಾಯಿ ತಂದೆಗಳು. ಅವರಿಬ್ಬರ ಈ ದುರವಸ್ಥೆಯನ್ನು ಕಂಡು ನನಗೆ ಮಹಾ ದುಃಖವಾಗಿದೆ. ಅದರ ಪರಿಹಾರಕ್ಕೆ ಏನು ಉಪಾಯ?

**ವಶಿಷ್ಠ:-** ನಿಮ್ಮ ತಂದೆತಾಯಿಗಳ ಪೂರ್ವಜನ್ಮದ ಕಥೆಯನ್ನು ಹೇಳುತ್ತೇನೆ ಕೇಳು. ಭಾದ್ರಪದ ಶುದ್ಧ ಪಂಚಮೀ ದಿನ ಮಾಡಬೇಕಾದ ಋಷೀ ಪಂಚಮೀ ವ್ರತವನ್ನು ತಂದೆಯ ಶ್ರಾದ್ಧದ ನಿಮಿತ್ತದಿಂದ ನಿನ್ನ ತಂದೆಯು ಆಚರಿಸಲಿಲ್ಲ. ಆದರೆ ಶ್ರಾದ್ಧವನ್ನು ಮಾತ್ರ ಶ್ರದ್ಧೆಯಿಂದ ಮಾಡಿದ. ಅನೇಕ ಬ್ರಾಹ್ಮಣರನ್ನು ಆಮಂತ್ರಿಸಿದ್ದ. ಅವನ ಹೆಂಡತಿ ಅಂದು ಮುಟ್ಟಾಗಿದ್ದಳು. ಅವಳು ಅಂದು ಹೊರಗೆ ಕೂಡದೆ ಹಾಗೇ ಮೈಲಿಗೆಯಿಂದಲೇ ಅಡಗೆ ಮಾಡಿ ಬಡಿಸಿದಳು. ದುರ್ದೈವದಿಂದ ಇದು ನಿನ್ನ ತಂದೆಗೆ ತಿಳಿಯಲಿಲ್ಲ.

**ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ ।**
**ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುಧ್ಯತಿ ॥**

ಮುಟ್ಟಾದ ಹೆಣ್ಣುಮಕ್ಕಳು ಮುಟ್ಟಿನ ಮೊದಲದಿನ ಚಾಂಡಾಲಿನಿ ಇದ್ದಂತೆ. ಎರಡನೇ ದಿನ ಬ್ರಹ್ಮಘಾತಿನಿ. ಮೂರನೇ ದಿನ ರಜಕೀ. ನಾಲ್ಕನೇ ದಿನ ಶುದ್ಧಳಾಗುವಳು. ಆದರೆ ಆ ಹೆಣ್ಣುಮಗಳು ರಜಸ್ವಲೆಯಾದರೂ ಮನೆಯಲ್ಲಿ ಮುಟ್ಟಿ ಅಡಿಗೆ ಮಾಡಿದ್ದರಿಂದ ಆ ಪಾಪದ ದುಷ್ಪರಿಣಾಮವಾಗಿ ಅದೇ ಮನೆಯ ಬಾಗಿಲ ಕಾಯುವ ನಾಯಿ ಆಗಿ ಹುಟ್ಟಿದ್ದಾಳೆ. ಅವಳ ಗಂಡನು ಈಗ ಎತ್ತು ಆಗಿ ಹುಟ್ಟಿದ್ದಾನೆ. ಈಗ ಅವರಿಬ್ಬರ ಪಾಪ ಪರಿಹಾರವಾಗಬೇಕಾಗಿದ್ದರೆ ಭಾದ್ರಪದ ಶುದ್ಧ ಪಂಚಮೀ ದಿನ ಋಷಿಪಂಚಮೀ ವ್ರತವನ್ನು ಪಾಲಿಸಬೇಕು. ಅದರಿಂದ ರಜಸ್ವಲಾ ದೋಷದಿಂದ ಬಂದ ಪಾಪವು ನಾಶ ಹೊಂದುತ್ತದೆ. ಅದರ ವಿಧಾನವನ್ನು ಹೇಳುತ್ತೇನೆ ಕೇಳು.

ನದೀ, ಭಾವಿ, ತಟಾಕ ಎಲ್ಲಿಯಾದರೂ ಸ್ನಾನಮಾಡಿ ಬ್ರಾಹ್ಮಣರ ಅಥವಾ ತನ್ನ ಮನೆಯಲ್ಲಿ ಗೋಮಯದಿಂದ ಮಂಡಲವನ್ನು ಮಾಡಿ ಅದರ ಮೇಲೆ ಒಂದು ಕಲಶ ಸ್ಥಾಪನೆ ಮಾಡಬೇಕು. ಆ ಕಲಶದ ಮೇಲೆ ಋಷಿಗಳು ತಿನ್ನುವ ಧಾನ್ಯದಿಂದ ತುಂಬಿದ ಒಂದು ಪಾತ್ರೆಯನ್ನು ಇರಿಸಬೇಕು. ಅದರಲ್ಲಿ ಸಪ್ತಋಷಿಗಳನ್ನು ಸ್ಥಾಪಿಸಿ ಯಜ್ಞೋಪವೀತ ಕಟಿಸೂತ್ರ. ಬಂಗಾರ, ಫಲ, ಹಣ್ಣು ಹಂಪಲ ಎಲ್ಲವನ್ನು ಇರಿಸಬೇಕು. ಅನಂತರ ಸಪ್ತ ಋಷಿಗಳನ್ನು ಆವಾಹಿಸಿ ವಿಧಿಪೂರ್ವಕವಾಗಿ ವ್ರತವನ್ನು ಹಿಡಿದವರು ಋಷಿಗಳನ್ನು ಪೂಜೆ ಮಾಡಬೇಕು. ಆ ಮೇಲೆ ನೈವೇದ್ಯಕ್ಕೆ ಇಟ್ಟ ಋಷಿಧಾನ್ಯದಿಂದ ಒಂದು ಹೊತ್ತು ಊಟ ಮಾಡಬೇಕು. ಮತ್ತು ಘೃತರಹಿತವಾದ ತಿಲ, ಯಮ ಮುಂತಾದವುಗಳನ್ನು ದಕ್ಷಿಣೆ ಸಹಿತವಾಗಿ "**ಋಷಯಃ ಪ್ರೀಯಂತಾಂ**" ಎಂದು ಹೇಳಿ ದಾನ ಕೊಡಬೇಕು. ಮತ್ತು ಧೂಪ ದೀಪ ನೈವೇದ್ಯ ಅರ್ಘ್ಯ ಮುಂತಾದವುಗಳನ್ನು ಶಾಸ್ತ್ರ ವಿಧಾನ ಪೂರ್ವಕ ಕೊಡಬೇಕು.

**ಋಷಯಃ ಸಂತುಮೇ ನಿತ್ಯಂ ವ್ರತ ಸಂಪೂರ್ಣ ಕಾರಿಣಃ ।**
**ಪೂಜಾಂ ಗೃಣ್ಹಂತು ಮದ್ದತ್ತಾಂ ಋಷಿಭ್ಯೋಸ್ತುನಮೋನಮಃ ॥**

ಋಷಿಗಳು ನನ್ನ ವ್ರತವು ಸಂಪೂರ್ಣವಾಗುವಂತೆ ಮಾಡಲಿ. ನಾನು ಮಾಡಿದ ಪೂಜೆಯನ್ನು ಸ್ವೀಕರಿಸಲಿ. ಋಷಿಗಳಿಗೆ ನನ್ನ ನಮಸ್ಕಾರಗಳು.

**ಪುಲಸ್ತ್ಯಃ ಪುಲಹಶ್ಚೈವ ಕ್ರತುಃ ಪ್ರಾಚೇತಸ ಸ್ತಥಾ ।**
**ವಸಿಷ್ಠ ಮಾರಿಚಾತ್ರೇಯಾ ಅರ್ಘ್ಯಂ ಗೃಣ್ಹಂತುವೋ ನಮಃ ॥**

ಪುಲಸ್ತ್ಯ ಪುಲಹ ಕ್ರತು ಪ್ರಾಚೇತಸ ವಶಿಷ್ಠ ಮಾರೀಚ ಆತ್ರೇಯ ಎಂಬ ಹೆಸರಿನ ಸಪ್ತ ಋಷಿಗಳೇ ನಾನು ನೀಡಿದ ಅರ್ಘ್ಯವನ್ನು ಸ್ವೀಕರಿಸಿರಿ. ಹೀಗೆ ಹೇಳಿ ಧೂಪ ದೀಪ ಮುಂತಾದವುಗಳಿಂದ ಶಾಸ್ತ್ರೋಕ್ತವಾಗಿ ಋಷಿಪೂಜೆಯನ್ನು ಮಾಡಬೇಕು. ಇದರಿಂದ ರಜಸ್ವಲಾ ಸಂಪರ್ಕದಿಂದ ಉಂಟಾದ ಪಾಪವು ಪರಿಹಾರವಾಗುವದು. ಮತ್ತು ಉಳಿದ ಪಾಪಗಳೂ ಕೂಡ ಬಿಟ್ಟು ಹೋಗುವವು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಋಷಿಪಂಚಮೀ ವ್ರತ ವಿಧಾನ ಎಂಬ ಎಪ್ಪತ್ತಾರನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ :-** ಪರ್ವತನಂದಿನಿ, ನಾನು ನಿನಗೆ ಈಗ ಅಪಾಮಾರ್ಜನ ಸ್ತೋತ್ರವನ್ನು ಹೇಳುತ್ತೇನೆ. ಇದನ್ನು ಪೂರ್ವದಲ್ಲಿ ಪುಲಸ್ತ್ಯ ಮುನಿಗಳು ದಾಲ್ಭ್ಯಮಹರ್ಷಿಗಳಿಗೆ ಹೇಳಿದ್ದಾರೆ. ಈ ಸ್ತೋತ್ರವು. ಸರ್ವರೋಗಗಳಿಗೆ ಶಾಮಕ. ದೋಷಗಳ ಪರಿಹಾರಕ. ಮಂಗಲ ಪ್ರದಾಯಕ.

**ದಾಲ್ಭ್ಯಮುನಿ:-** ಪೂಜ್ಯರಾದ ಪುಲಸ್ತ್ಯರೆ, ಈ ಭೂಲೋಕದಲ್ಲಿ ಅನೇಕ ಪ್ರಾಣಿಗಳು ಕುಷ್ಠಾದಿ ರೋಗಗಳಿಂದ ಬಳಲುತ್ತಾರೆ. ಹಲವರು ಶನಿ ಮಂಗಳ ಮುಂತಾದ ದುಷ್ಟಗ್ರಹಗಳಿಂದ ಪೀಡಿತರಾಗುತ್ತಾರೆ. ವಿಷದ ಬಾಧೆಯಿಂದ ಬಳಲುವವರು ಎಷ್ಟೋ ಜನ. ರೋಗರುಜಿನಿಗಳಿಂದ ಕಷ್ಟಪಡುವ ಜನರಿಗಂತೂ ಲೆಕ್ಕವೇ ಇಲ್ಲ. ಇನ್ನೂ ಹಲವಾರು ಜನರು ಮಂತ್ರ, ಮಾಟ, ಕೃತ್ಯಾ, ಪಿಶಾಚ ಮುಂತಾದವುಗಳ ಉಪದ್ರವದಿಂದ ಬಹಳಷ್ಟು ಕಷ್ಟನಷ್ಟಗಳಿಗೆ ಒಳಗಾಗುತ್ತಾರೆ. ಈ ಯಾವ ಪೀಡೆಗಳೂ ಜನರನ್ನು ಬಾಧಿಸದಂತೆ ಮಾಡಲು ಏನಾದರೂ ಉಪಾಯ ಇದೆಯೆ? ಇದ್ದರೆ ಅದನ್ನು ತಿಳಿಸಿರಿ.

**ಪುಲಸ್ತ್ಯ :-** ಮುನಿಶ್ರೇಷ್ಠ, ಯಾವ ಜನರು ವ್ರತ ಉಪವಾಸ ನಿಯಮ ಮುಂತಾದವುಗಳಿಂದ ಶ್ರೀಹರಿಯನ್ನು ಆರಾಧಿಸಿರುವದಿಲ್ಲವೋ ಅವರು ರೋಗಿಷ್ಠರಾಗಿ ಕಷ್ಟನಿಷ್ಠುರಗಳನ್ನು ಅನುಭವಿಸುತ್ತಾರೆ. ಯಾರು ವ್ರತವನ್ನು ಮಾಡಲಿಲ್ಲವೋ ಪುಣ್ಯವನ್ನು ಗಳಿಸಲಿಲ್ಲವೋ ದಾನವನ್ನು ನೀಡಲಿಲ್ಲವೋ ತಪಸ್ಸನ್ನು ಮಾಡಲಿಲ್ಲವೋ ತೀರ್ಥಯಾತ್ರೆಯನ್ನು ಗೈಯಲಿಲ್ಲವೋ ದೇವರನ್ನು ಪೂಜಿಸಲಿಲ್ಲವೋ ಮತ್ತು ಧಾರಾಳವಾಗಿ ಅನ್ನದಾನವನ್ನು ಮಾಡಲಿಲ್ಲವೋ ಅಂಥ ಜನರೇ ಈ ಜನ್ಮದಲ್ಲಿ ರೋಗ, ಪಿಶಾಚ, ಮಂತ್ರ, ಮಾಟ, ವಿಷಗ್ರಹ ಮುಂತಾದವುಗಳಿಂದ ಪೀಡಿತರಾಗಿ ಕಾಯಕ್ಲೇಶವನ್ನು ಹೊಂದುತ್ತಾರೆ. ಆದರೆ ವಿಷ್ಣುವಿನ ಸೇವೆಯನ್ನು ಭಕ್ತಿಯಿಂದ ಮಾಡಿದ ಮನುಷ್ಯನು ಪೂರ್ಣ ಆರೋಗ್ಯವನ್ನು ಹೊಂದುತ್ತಾನೆ. ಸುಖಸಮೃದ್ಧಿಗಳನ್ನು ಪಡೆಯುತ್ತಾನೆ. ಹರಿಯ ಸೇವಕನಿಗೆ ಆದಿವ್ಯಾಧಿಗಳು ಬಾಧಿಸುವದಿಲ್ಲ. ವಿಷಪಿಶಾಚ, ಗ್ರಹ ಮುಂತಾದವುಗಳ ಪೀಡೆ ಉಂಟಾಗುವದಿಲ್ಲ. ಏಕಾದಶೀ ವ್ರತ ಉಪವಾಸಾದಿಗಳಿಂದ ಶ್ರೀಹರಿಯನ್ನು ಸಂತೋಷಪಡಿಸಿದವರು ರೋಗಮುಕ್ತರೂ ಸೌಖ್ಯಯುಕ್ತರೂ ಸರ್ವವಿಧ ದುಃಖದಿಂದ ರಹಿತರೂ ಆಗುವರು. ವಿಷ್ಣುಭಕ್ತರನ್ನು ಸುದರ್ಶನ ಚಕ್ರಮುಂತಾದ ಅವನ ಆಯುಧಗಳು ಸರ್ವದಾ ರಕ್ಷಣಮಾಡುತ್ತವೆ.

**ದಾಲ್ಭ್ಯ :-** ಜನ್ಮಾಂತರದಲ್ಲಿ ಗೋವಿಂದನ ಆರಾಧನೆಯನ್ನು ಮಾಡದೇ ಇದ್ದುದರಿಂದ ಈಗ ದುಃಖವನ್ನು ಪಡುತ್ತಿರುವ ಮಾನವರು ಏನು ಮಾಡಬೇಕು ಅನ್ನುವದನ್ನು ಹೇಳಿರಿ. ''ಶ್ರೀಹರಿಯು ಎಲ್ಲ ಪ್ರಾಣಿಗಳಲ್ಲಿ ಇರುತ್ತಾನೆ'' ಎಂದು ತಿಳಿದ ಜ್ಞಾನಿಭಕ್ತರು ಇಂಥ ದುಃಖಾರ್ತ ಜನರನ್ನು ಕಂಡು ಯಾವ ಉಪಾಯವನ್ನು ಮಾಡಬೇಕು ಎನ್ನುವದನ್ನು ತಿಳಿಸಿರಿ.

**ಪುಲಸ್ತ್ಯ :-** ರೋಗ ಪಿಶಾಚ ವಿಷಾದಿ ಬಾಧೆಗಳಿಂದ ಪೀಡಿತರಾದವರು ಶುಚಿರ್ಭೂತರಾಗಿ ತಮ್ಮಷ್ಟಕ್ಕೆ ತಾವೇ ಮುಂದೆ ಹೇಳಿದ ಮಂತ್ರಗಳಿಂದ ತಮ್ಮ

ಅಂಗಾಂಗಳಲ್ಲಿ ವಿವಿಧ ರೂಪಿಯಾದ ಶ್ರೀಹರಿಯನ್ನು ಚಿಂತನಮಾಡಿ ನ್ಯಾಸ ಮಾಡಿಕೊಳ್ಳಬೇಕು. ವಿಷ್ಣುವಿನ ಹಲವಾರು ಅಭಿನ್ನವಾದ ರೂಪಗಳು ತನ್ನ ಬೇರೆ ಬೇರೆ ಯಾದ ಅವಯವಗಳಲ್ಲಿ ನಿಂತುಕೊಂಡು. ಅಧಿವ್ಯಾಧಿಗಳನ್ನು ಪರಿಹರಿಸಿ ಕಲ್ಯಾಣವನ್ನು ಉಂಟುಮಾಡಲಿ ಎಂದು ಪ್ರಾರ್ಥಿಸಿ, ಆ ಭಗವದ್ರೂಪಗಳು ತನ್ನ ಇಂಥ ಅವಯವಗಳಲ್ಲಿ ಸನ್ನಿಹಿತವಾಗಲಿ ಎಂದು ಚಿಂತಿಸಿ ಆ ಅವಯವಗಳನ್ನು ಮುಟ್ಟಿಕೊಂಡು ಭಗನ್ನಾಮಗಳನ್ನು ಉಚ್ಚರಿಸುವದೇ ನ್ಯಾಸ ಎನಿಸುವದು.

''ಶಿಖಾಯಾಂ ಶ್ರೀಧರಂ ನ್ಯಸಾಮಿ'' ಎಂದು ಚಂಡಿಕೆಯನ್ನು ಮುಟ್ಟಿಕೊಳ್ಳಬೇಕು. ''ಶಿಖಾಧಃ ಶ್ರೀಕರಂ ನ್ಯಸಾಮಿ'' ಎಂದು ಚಂಡಿಕೆಯ ಬುಡವನ್ನು ಮುಟ್ಟಬೇಕು. ''ಹೃಷೀಕೇಶಂ ಕೇಶೇಷು ನ್ಯಸಾಮಿ'' ಎಂದು ಕೂದಲಗಳನ್ನು ಮುಟ್ಟಬೇಕು. ''ಮೂರ್ಧ್ನಿನಾರಾಯಣಂ'' ಎಂದು ತಲೆಯನ್ನೂ ''ಶ್ರೋತ್ರೇ ವಿಷ್ಣುಂ'' ಎಂದು ಕಿವಿಯ ಮೇಲುಭಾಗವನ್ನೂ ''ಲಲಾಟೇ ಜಲಶಾಯಿನಂ'' ಎಂದು ಹಣೆಯನ್ನೂ ''ಭ್ರೂಯುಗೇ ವಿಷ್ಣುಂ ನ್ಯಸಾಮಿ'' ಎಂದು ಎರಡೂ ಹುಬ್ಬುಗಳನ್ನೂ ''ಬ್ರೂಮಧ್ಯೇ ಹರಿಂ ನ್ಯಸಾಮಿ'' ಎಂದು ಎರಡೂ ಬ್ರೂಮಧ್ಯದಲ್ಲಿ ಹರಿಯನ್ನು ನ್ಯಾಸಮಾಡಬೇಕು.

'ನರಸಿಂಹಂ ನಾಸಿಕಾಗ್ರೇ ನ್ಯಸಾಮಿ' ಎಂದು ಮೂಗಿನ ತುದಿಯಲ್ಲಿ ನೃಸಿಂಹ ದೇವರನ್ನೂ 'ಕರ್ಣಯೋಃ ಅರುಣಂ ನ್ಯಸಾಮಿ' ಎಂದು ಎರಡೂ ಕಿವಿಗಳನ್ನು ಮುಟ್ಟಿಕೊಳ್ಳಬೇಕು. 'ಚಕ್ಷುಷೋಃ ಪುಂಡರೀಕಾಕ್ಷಂ ನ್ಯಸಾಮಿ' ಎಂದು ಎರಡೂ ಕಣ್ಣುಗಳಲ್ಲಿ ಪುಂಡರೀಕಾಕ್ಷನನ್ನು ನ್ಯಾಸಮಾಡುತ್ತೇನೆ ಎಂದು ಕಣ್ಣುಗಳನ್ನು ಸ್ಪರ್ಶ ಮಾಡಿಕೊಳ್ಳಬೇಕು. ಹೀಗೆ 'ಕಪೋಲಯೋಃ ಕಲ್ಕಿನಾಥಂ' ಎಂದು ಎರಡೂ ಗಲ್ಲಗಳಲ್ಲಿ ಕಲ್ಕಿರೂಪಿಯಾದ ಶ್ರೀಹರಿಯು ಸನ್ನಿಹಿತನಾಗಿದ್ದಾನೆ, ಎಂದು ಗಲ್ಲಗಳನ್ನು ಸ್ಪರ್ಶಮಾಡಬೇಕು. ಇದರಂತೆ ಎರಡೂ ಕಿವಿಗಳ ಬುಡದಲ್ಲಿ ವಾಮನನ್ನೂ, ಗೋವಿಂದನನ್ನು ಮುಖದಲ್ಲಿಯೂ, ಹಲ್ಲಿನ ಸಾಲಿನಲ್ಲಿ ಮುಕುಂದನನ್ನೂ, ನಾಲಿಗೆಯಲ್ಲಿ ವಾಕ್‌ಪತಿ ಎನಿಸಿದ ವಿಷ್ಣುವನ್ನೂ, ಗದ್ದದಲ್ಲಿ ಶ್ರೀರಾಮನನ್ನೂ, ಕಂಠದಲ್ಲಿ ವೈಕುಂಠನನ್ನೂ, ತೋಳಿನ ಕೆಳಗೆ ದೈತ್ಯಾರಿಯನ್ನೂ, ಎರಡು ಬಗಲುಗಳಲ್ಲಿ ಕಂಸಾರಿಯನ್ನೂ, ಎರಡು ಭುಜಗಳಲ್ಲಿ ಶಾರ್ಙಪಾಣಿಯನ್ನೂ, ಬೆರಳಿನ ಸಾಲುಗಳಲ್ಲಿ ಗೋಪಾಲಕೃಷ್ಣನನ್ನೂ, ಎದೆಯಲ್ಲಿ ಅಧೋಕ್ಷಜನನ್ನೂ, ಹೃದಯ ಮಧ್ಯದಲ್ಲಿ ಶ್ರೀವತ್ಸನನ್ನೂ, ಎರಡೂ ಮೊಲೆಗಳ ಮೇಲೆ ಅನಿರುದ್ಧನನ್ನೂ, ಉದರದಲ್ಲಿ ದಾಮೋದರನನ್ನೂ, ಹೊಕ್ಕಳದಲ್ಲಿ ಪದ್ಮನಾಭನನ್ನೂ, ಹೊಕ್ಕಳದ ಕೆಳಗೆ ಕೇಶವನನ್ನೂ ಜನನೇಂದ್ರಿಯದಲ್ಲಿ ಭೂದೇವಿ ಗಂಡನಾದ ಶ್ರೀಹರಿಯನ್ನೂ, ಗುದದಲ್ಲಿ ಗದಾಗ್ರಜನನ್ನೂ, ಸೊಂಟದಲ್ಲಿ ಪೀತಾಂಬರಧಾರಿಯಾದ ಶ್ರೀ ವಿಷ್ಣುವನ್ನೂ, ಎರಡೂ ತೊಡೆಗಳಲ್ಲಿ ಮಧುಸೂದನನ್ನೂ, ಎರಡೂ ಮೊಳಕಾಲುಗಳ ಮಂಡೆಯಲ್ಲಿ ಜನಾರ್ದನನ್ನೂ ಕಾಲಿನ ಗೆಣ್ಣುಗಳಲ್ಲಿ ಶೇಷಶಾಯಿಯನ್ನೂ, ಎರಡೂ ಪಾದಗಳಲ್ಲಿ ತ್ರಿವಿಕ್ರಮನನ್ನೂ, ಹೆಬ್ಬೆರಳಿನಲ್ಲಿ ಶ್ರೀಪತಿಯನ್ನೂ, ಅಂಗಾಲಿನಲ್ಲಿ ಧರಣೀಧರನನ್ನೂ, ರೋಮಕೂಪಗಳಲ್ಲಿ ವಿಷ್ವಕ್‌ಸೇನನನ್ನೂ ಧ್ಯಾನಮಾಡಿ ಆ ಆ ಅಂಗಗಳನ್ನು ಮುಟ್ಟಿ ನ್ಯಾಸಮಾಡಿ ಕೊಳ್ಳಬೇಕು. ಅನಂತರ ದೇಹದ ಒಳಗೆ ಇರುವ ಮಾಂಸದಲ್ಲಿ ಮಚ್ಛರೂಪಿಯಾದ ಹರಿಯನ್ನು ನ್ಯಾಸಮಾಡಬೇಕು. ತನ್ನ ದೇಹದ ಮೇದಸ್ಸಿನಲ್ಲಿ

ಕೂರ್ಮನನ್ನೂ, ನೆಣದ ನಡುವೆ ವರಾಹನನ್ನೂ, ಎಲ್ಲ ಮೂಳೆಗಲ್ಲಿ ಅಚ್ಯುತನನ್ನೂ ಮಜ್ಜಾದಲ್ಲಿ ದ್ವಿಜ ಪ್ರಿಯನನ್ನೂ, ವೀರ್ಯದಲ್ಲಿ ಶ್ವೇತಪತಿಯನ್ನೂ, ಸರ್ವಾಂಗದಲ್ಲಿ ಯಜ್ಞಪುರುಷನನ್ನೂ ನ್ಯಾಸಮಾಡಬೇಕು.

ಇಷ್ಟೆಲ್ಲ ನ್ಯಾಸವನ್ನು ವಿಧಿಪೂರ್ವಕವಾಗಿ ಮಾಡಿಕೊಂಡ ಮನುಷ್ಯನು ಸಾಕ್ಷಾತ್ ನಾರಾಯಣನೇ ಆಗುತ್ತಾನೆ. ಎಂದರೆ ತನ್ಮಯನಾಗಿ,ತತ್ಪರನಾಗಿ, ತಲ್ಲೀನನಾಗಿ ತದ್ರೂಪಿ ಎನಿಸುತ್ತಾನೆ. ಈ ನ್ಯಾಸವಿಧಿಯನ್ನು ಮಾಡುವಾಗ ಬೇರೆ ಯಾವ ಮಾತುಗಳನ್ನೂ ಆಡಬಾರದು.

ಇಷ್ಟೆಲ್ಲ ನ್ಯಾಸವಿಧಿಯನ್ನು ಮಾಡಲು ಶಕ್ತಿ ಶುದ್ಧಿ, ಭಕ್ತಿ, ಆಚಾರ ಮುಂತಾದವುಗಳು ಇಲ್ಲದಿದ್ದಲ್ಲಿ ಅವನ ಗುರು ಅಥವಾ ಹಿರಿಯರಲ್ಲಿ ಒಬ್ಬರು ತುದಿ ಬುಡಗಳನ್ನು ಕತ್ತರಿಸದೇ ಇದ್ದ ದರ್ಭಗಳನ್ನು ತೆಗೆದುಕೊಂಡು ಮೇಲೆ ಹೇಳಿದ ಪದ್ಧತಿಯಿಂದ ''ಶಿಖಾಯಾಂ ಶ್ರೀಧರಂ ನ್ಯಸಾಮಿ'' ಎಂದು ಮುಂತಾಗಿ ಭಗವನ್ನಾಮವನ್ನು ಉಚ್ಚಾರ ಮಾಡಿ ಆ ದರ್ಭೆಯಿಂದ ರೋಗಿಯ ಎಲ್ಲ ಅವಯವಗಳನ್ನು ಸ್ಪರ್ಶಮಾಡಿ ನ್ಯಾಸ ಮಾಡಬೇಕು. ವಿಷ್ಣುಭಕ್ತರಾದವರು ರೋಗಿಗಳ ಅಂಗಾಂಗಗಳನ್ನು ಮೇಲಿನ ಮಂತ್ರಗಳಿಂದ ನೀರಿನಿಂದ ಪ್ರೋಕ್ಷಣ ಮಾಡಬೇಕು. ಮತ್ತು

**ಓಂ ನಮಃ ಶ್ರೀ ಪರಮಾರ್ಥಾಯ ಪುರುಷಾಯ ಮಹಾತ್ಮನೆ ।**
**ಅರೂಪ ಬಹುರೂಪಾಯ ವ್ಯಾಪಿನೆ ಪರಮಾತ್ಮನೆ ॥**
**ವಾರಾಹಂ ನಾರಸಿಂಹಂಚ ವಾಮನಂಚ ಸುಖಪ್ರದಂ ।**
**ನಮಾಮಿ ಪುಂಡರೀಕಾಕ್ಷಂ ದೇವದೇವಂ ಜಗದ್ಗುರುಂ ॥**

ಹೀಗೆ ಪ್ರಾರ್ಥನೆಯನ್ನು ಮಾಡಿ ವಿಷ್ಣುವಿನ ಮೇಲೆ ಹೇಳಿದ ಎಲ್ಲ ನಾಮಗಳನ್ನು ಬಾಯಿಯಿಂದ ಉಚ್ಚರಿಸಿ ಧ್ಯಾನಮಾಡಿ ರೋಗಿಯ ಅಂಗಾಂಗಗಳನ್ನು ಸ್ಪರ್ಶಮಾಡಿ ಎಲ್ಲ ನಾಮಗಳ ಅಂಗನ್ಯಾಸ ಮಾಡಬೇಕು.

ಮಾಟ, ಮಂತ್ರ ಅಥವಾ ಬೇರೆ ವಿಧವಾದ ಅಭಿಚಾರಿಕ ಉಪದ್ರವಗಳಿಗೆ ಈಡಾದ ಮನುಷ್ಯನ ಅಂಗಾಂಗಗಳನ್ನು ಸ್ಪರ್ಶಮಾಡಿ ಈ ಕೆಳಗಿನ ಮಂತ್ರವನ್ನು ಹೇಳಬೇಕು.

**ಗೋವಿಂದ ಪದ್ಮನಾಭಾಯ ವಾಸುದೇವಾಯ ಭೂಭೃತೇ ।**
**ನಮಸ್ಕೃತ್ಯ ಪ್ರವಕ್ಷ್ಯಾಮಿ ಯತ್ತತ್ ಸಿಧ್ಯತು ಮೇವಚಃ ॥**
**ತ್ರಿವಿಕ್ರಮಾಯ ರಾಮಾಯ ವೈಕುಂಠಾಯ ನರಾಯ ಚಃ ।**
**ಶ್ರೀವರಾಹ ನೃಸಿಂಹಾಯ ವಾಮನಾಯ ಮಹಾತ್ಮನೇ ॥**
**ಹಯಗ್ರೀವಾಯ ಶುಭ್ರಾಯ ಹೃಷೀಕೇಶ ಹರಾಶುಭಂ ।**
**ಪರೋಪತಾಪ ಮಹಿತಂ ಪ್ರಯುಕ್ತಂ ಚಾಭಿಚಾರಿಕಂ ॥**

ಗೋವಿಂದ ಪದ್ಮನಾಭ ವಾಸುದೇವ ರೂಪಿಯಾದ ಶ್ರೀಹರಿಯೆ, ನಿನಗೆ ನಮಸ್ಕಾರ. ನಾನು ಮುಂದೆ ಹೇಳಿದ ಮಾತು ಸಿದ್ಧಿಸಲಿ. ತ್ರಿವಿಕ್ರಮ, ರಾಮ, ವರಾಹ, ನರಸಿಂಹ, ವಾಮನ, ಹಯಗ್ರೀವ, ಹೃಷೀಕೇಶ, ನಿನಗೆ ನಮಸ್ಕಾರ. ಬೇರೆಯವರು ಮಾಡಿಸಿದ ಮಂತ್ರ ಮಾಟ ಮುಂತಾದ ಅಭಿಚಾರಕ ಉಪದ್ರವಗಳು ಈ ಮನುಷ್ಯನನ್ನು ಬಿಟ್ಟು ತೊಲಗಿ ಹೋಗಲಿ ಎಂದು ಹೇಳಬೇಕು.

ವಿಷಪ್ರಯೋಗವಾದವರಿಗೆ ಮುಂದೆ ಹೇಳಿದ ಮಂತ್ರಗಳಿಂದ ನೀರನ್ನು ಅಭಿಮಂತ್ರಿಸಿ ಪ್ರೋಕ್ಷಣ ಮಾಡಬೇಕು.

**ಗರಸ್ಪರ್ಶ ಮಹಾರೋಗ ಪ್ರಯೋಗಂ ಜರಯಾಜರ ।**
**ನಮೋಽಸ್ತು ವಾಸುದೇವಾಯ ನಮಃ ಕೃಷ್ಣಾಯ ಖಡ್ಗಿನೇ ॥**

ವಾಸುದೇವನಿಗೆ ನಮಸ್ಕಾರ. ಖಡ್ಗಧಾರಿಯಾದ ಶ್ರೀಕೃಷ್ಣನೆ, ಇವನಿಗೆ ವಿಷಪ್ರಯೋಗದಿಂದ ಉಂಟಾದ ಬಾಧೆಯನ್ನು ಬೇಗನೆ ನಾಶಪಡಿಸು.

ಯಾವದೇ ದುಃಖದಿಂದ ಅಥವಾ ಗ್ರಹಬಾಧೆಯಿಂದ ಪೀಡಿತನಾದ ಮನುಷ್ಯನ ದುಃಖ ಶಾಂತಿಗಾಗಿ ನರಸಿಂಹ ದೇವರನ್ನು ಕೆಳಗಿನ ಮಂತ್ರದಿಂದ ಪ್ರಾರ್ಥಿಸಬೇಕು.

**ಮರ್ದ ಮರ್ದ ಮಹಾದಂಷ್ಟ್ರ ಮರ್ದ ಮರ್ದಚತತ್ಫಲಂ**
**ನರಸಿಂಹ ಕರಾಲಾಸ್ಯದಂತಪ್ರಾಂತ ನಖೋಜ್ವಲ ।**
**ಭಂಕ್ಷ್ವ ಭಂಕ್ಷ್ವ ನಿನಾದೇನ ದುಃಖಾನ್ಯಸ್ಯಾರ್ತಿನಾಶನ ॥**

ಭೀಕರವಾದ ಮುಖದ ಹಲ್ಲಿನ ತುದಿಯಿಂದಲೂ ಹಾಗೂ ಉಗುರುಗಳಿಂದಲೂ ಅತ್ಯುಗ್ರವಾಗಿ ತೋರುವ ನೃಸಿಂಹ ದೇವರೆ, ಈ ಮನುಷ್ಯನ ದುಃಖವನ್ನು ನಾಶಮಾಡು. ಪಾಪಗಳನ್ನೆಲ್ಲ ಮರ್ದನ ಮಾಡು. ಅವನ ದುರ್ದೈವವನ್ನೂ ದಾರಿದ್ರ್ಯವನ್ನೂ ದುಃಖವನ್ನೂ ನಷ್ಟಗೊಳಿಸು, ಎಂಬ ಮಂತ್ರವನ್ನು ಹೇಳಿ, ಈ ಮಂತ್ರದಿಂದ ಅಭಿಮಂತ್ರಿತವಾದ ನೀರನ್ನು ದುಃಖಿತನಾದ ಮನುಷ್ಯನ ಮೇಲೆ ಪ್ರೋಕ್ಷಿಸಬೇಕು.

ಪ್ರತಿದಿನವೂ ಜ್ವರ ಬರುತ್ತಿದ್ದರೆ ಅಥವಾ ಎರಡು ದಿನಕ್ಕೊಮ್ಮೆ ಮೂರು ದಿನಕ್ಕೊಮ್ಮೆ ಅಥವಾ ನಾಲ್ಕು ದಿನಕ್ಕೊಮ್ಮೆ ಚಾತುರ್ಥಿಕಾದಿ ಜ್ವರಗಳು ಬರುತ್ತಿದ್ದರೆ ಅಥವಾ ಯಾವಾಗಲೂ ಮೈ ಜ್ವರದಿಂದ ಕಾಯುತ್ತಲಿದ್ದರೆ ಈ ಕೆಳಗೆ ಹೇಳಿದ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಅದರಿಂದ ಆ ರೋಗಿಗೆ ಮಾರ್ಜನ ಮಾಡಬೇಕು.

**ಪ್ರಶಮಂ ಸರ್ವ ದುಃಖಾನಾಂ ನಯತ್ವಸ್ಯ ಜನಾರ್ದನಃ ।**
**ಏಕಾಹಿಕಂ ದ್ವ್ಯಾಹಿಕಂ ತಥಾ ತ್ರಿ ತ್ರಿದಿವಸಜ್ವರಂ ॥**

**ಚಾತುರ್ಥಿಕಂ ತಥಾತ್ಯುಗ್ರಂ ತಥಾ ವೈ ಸತತಜ್ವರಂ ।**
**ದೋಷೋತ್ಥಂ ಸನ್ನಿಪಾತೋತ್ಥಂ ತಥೈವಗಂತುಕಂ ಜ್ವರಂ ॥**

ಈ ಮಂತ್ರದಿಂದ ರೋಗಿಗೆ ಮಾರ್ಜನವನ್ನು ಮಾಡಬೇಕು.

ತಲೆಶೂಲಿ, ಕಣ್ಣು ಉರಿ, ಉದರಶೂಲೆ ಮತ್ತು ಶ್ವಾಸೋಚ್ಛ್ವಾಸದ ತಾಪದಲ್ಲಿ ದೇಹದ ನಡುಕ, ಪೃಷ್ಠಭಾಗದ ರೋಗ, ಮೂಗಿನ ರೋಗ, ಪಾದರೋಗ ಕುಷ್ಠರೋಗ, ಕ್ಷಯ, ಕಾಮಣೀ, ಪ್ರಮೇಹ, ವಾತರೋಗ, ಹುಣ್ಣು ಮುಂತಾದ ರೋಗಗಳು ಬಂದಿದ್ದರೆ ಈ ಮುಂದಿನ ಮಂತ್ರಗಳಿಂದ ನೀರನ್ನು ಅಭಿಮಂತ್ರಿಸಿ ಪ್ರೋಕ್ಷಿಸಬೇಕು.

**ಅನುಚ್ಛ್ವಾಸಂ ಮಹಾಶ್ವಾಸಂ ಪರಿತಾಪಂ ಸವೇಪಥುಂ ।**
**ಗುದ ಘ್ರಾಣಾಂಘ್ರಿ ರೋಗಾಂಶ್ಚ ಕುಷ್ಠರೋಗಂ ತಥಾ ಕ್ಷಯಂ ॥**

ಕಾಮಲಾದೀಂಶ್ಚ ತಥಾ ರೋಗಾನ್ ಪ್ರಮೇಹಾದೀಂಶ್ಚ ದಾರುಣಾನ್।
ಯೇ ವಾತಪ್ರಭವಾ ರೋಗಾ ಲೂತಾವಿಸ್ಫೋಟಕಾದಯಃ ॥

ತೇ ಸರ್ವೇ ವಿಲಯಂ ಯಾಂತು ವಾಸುದೇವಾಪಮಾರ್ಜಿತಾಃ ।
ವಿಲಯಂ ಯಾಂತು ತೇ ಸರ್ವೇ ವಿಷ್ಣೋರುಚ್ಚಾರಣೇನ ವಾ ॥
ಕ್ಷಯಂ ಗಚ್ಛಂತು ಚಾಶೇಷಾಸ್ತೇ ಚಕ್ರಾಭಿಹತಾ ಹರೇಃ ।
ಈ ಮಂತ್ರದಿಂದ ಆ ರೋಗಿಗೆ ಮಾರ್ಜನ ಮಾಡಬೇಕು.

ಯಾರಾದರೂ ವಿಷ ಹಾಕಿದ್ದರೆ ಅಥವಾ ಪ್ರಾಣಿಗಳು ಕಚ್ಚಿ ಚೂರಿಕೊಂಡು ನಂಜು ಆಗಿದ್ದರೆ ಆಗ ಈ ಮುಂದಿನ ಮಂತ್ರವನ್ನು ಜಪಿಸಿ ಮಾರ್ಜನ ಮಾಡಬೇಕು.

ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೇಷಜಾತ್ ।
ನಶ್ಯಂತಿ ಸಕಲಾ ರೋಗಾಃ ಸತ್ಯಂಸತ್ಯಂ ವದಾಮ್ಯಹಮ್ ॥

ಸ್ಥಾವರಂ ಜಂಗಮಂ ಕೃತ್ರಿಮಂ ಚಾಪಿ ಯದ್ವಿಷಂ ।
ದಂತೋದ್ಭವಂ ನಖೋದ್ಭೂತ ಮಾಕಾಶ ಪ್ರಭವಂ ಚ ಯತ್ ॥

ಭೂತಾದಿ ಪ್ರಭವಂ ಯಚ್ಚ ವಿಷಮತ್ಯಂತ ದುಃಸಹಮ್ ।
ಶಮಂ ನಯತು ತತ್ಸರ್ವಂ ಕೀರ್ತಿತೊಸ್ಯ ಜನಾರ್ದನಃ ॥

ಎಲ್ಲ ತರಹದ ವಿಷದ ಬಾಧೆಯನ್ನು ಜನಾರ್ದನನು ಶಮನಗೊಳಿಸಲಿ ಎಂದು ಬೇಡಿಕೊಳ್ಳಬೇಕು.

ಭೂತ, ಪ್ರೇತ, ಗ್ರಹ, ಶಾಕಿನೀ, ಡಾಕಿನೀ, ರೇವತೀ, ವೃದ್ಧಿಕಾ, ಮುಖ ಮಂಡಲಿಕಾ ಮತ್ತು ಇತರು ಮಾತ್ರ ಗೃಹಗಳು, ಬಾಲಗ್ರಹ ಮುಂತಾದವುಗಳು ಕಾಡತೊಡಗಿದಾಗ ವಿಷ್ಣುವಿನ ಬಾಲಲೀಲೆಯನ್ನು ಪಠಿಸಿ ಮುಂದೆ ಹೇಳಿದ ಮಂತ್ರಗಳಿಂದ ಮಾರ್ಜನ ಮಾಡಬೇಕು.

ಗ್ರಹಾನ್ ಪ್ರೇತಗ್ರಹಾಂಶ್ಚೈವ ತಥಾನ್ಯಾನ್ ಶಾಕಿನೀಗ್ರಹಾನ್ ।
ಮುಖಮಂಡಲಿಕಾನ್ ಕ್ರೂರಾನ್ ರೇವತೀಂ ವೃದ್ಧಿರೇವತೀಂ ॥

ವೃದ್ಧಿಕಾಖ್ಯಾನ್ ಗ್ರಹಾಂಶ್ಚೋಗ್ರಾನ್ ತಥಾ ಮಾತೃಗ್ರಹಾನಪಿ ।
ಬಾಲಸ್ಯ ವಿಷ್ಣೋಶ್ಚರಿತಂ ಹಂತು ಬಾಲಗ್ರಹಾನಪಿ ॥

ಶ್ರೀ ಕೃಷ್ಣನ ಬಾಲಲೀಲೆಗಳನ್ನು ಶ್ರವಣ ಪಠಣ ಮಾಡೋಣದರಿಂದ ಎಲ್ಲ ವಿಧವಾದ ಬಾಲಗ್ರಹ, ಮಾತೃಗ್ರಹ, ಶಾಕಿನೀಗ್ರಹ, ಮೊದಲಾದ ಯಾವತ್ತೂ ಗ್ರಹಗಳು ಶಾಂತವಾಗುತ್ತವೆ. ಪ್ರೌಢರಿಗೆ ಬಾಧೆ ಗ್ರಹಗಳು ನಾಶವಾಗಬೇಕಾದರೆ, ನರಸಿಂಹ ದೇವರ ದೈತ್ಯ ಭಯಂಕರವಾದ ರೂಪವನ್ನು ಚಿಂತಿಸಿ ಮುಂದೆ ಹೇಳಿದ ಮಂತ್ರ ಪಠಿಸಬೇಕು.

ಶ್ರೀನೃಸಿಂಹ ಮಹಾಸಿಂಹ ಜ್ವಾಲಾ ಮಾಲೋಜ್ವಲಾನನ ।
ಗ್ರಹಾನ ಶೇಷಾನ್ ಸರ್ವೇಶ ನುದಸ್ವಾಸ್ಯ ತ್ರಿಲೋಚನ ॥

ವೃದ್ಧಾನಾಂ ಯೇ ಗ್ರಹಾಃ ಕೇಚಿತ್ ಬಾಲಾನಾಂ ಚಾಪಿ ಯೇ ಗ್ರಹಾಃ ।
ನೃಸಿಂಹದರ್ಶನಾದೇವ ನಶ್ಯಂತೆ ತತ್ಕ್ಷಣಾದಪಿ ॥

ದಂಷ್ಟ್ರಾಕರಾಲವದನೋ ನೃಸಿಂಹೋ ದೈತ್ಯಭೀಷಣಃ ।
ತಂ ದೃಷ್ಟ್ವಾ ತೇ ಗ್ರಹಾಃ ಸರ್ವೇ ದೂರಂ ಯಾಂತಿ ವಿಶೇಷತಃ ॥

ನೃಸಿಂಹ ದೇವರ ಈ ಮಂತ್ರದಿಂದ ಎಲ್ಲ ಪಾಪಗ್ರಹಗಳು ದೂರ ಸರಿದು ಹೋಗುವವು.

ವಿಷ್ಣುವಿನ ಕೈಯಲ್ಲಿದ್ದ ಸುದರ್ಶನ ಚಕ್ರವನ್ನು ಪ್ರಾರ್ಥನೆ ಮಾಡಿ ಬೇಡಿಕೊಂಡರೆ ವಿಷ ಜ್ವರ ಪೀಡೆ ಮುಂತಾದ ಎಲ್ಲ ಪಾಪಗ್ರಹಾಪಾಯಗಳು ದೂರವಾಗುವವು.

ಸುದರ್ಶನ ಮಹಾತೇಜಶ್ಛಿಂಧಿ ಛಿಂದಿ ಮಹಾಜ್ವರಂ ।
ಛಿಂದಿ ವಾತಾಂ ಚ ಲೂತಾಂ ಚ ಛಿಂದಿ ಮಹಾಘೋರಂ ವಿಷಂ ॥

ಓಂ ನಮೋ ಭಗವತೇ ಸುದರ್ಶನಾಯ ದುಃಖದಾರಣ ವಿಗ್ರಹ ।
ಓಂ ಹ್ರಾಂಹ್ರಾಂ ಹ್ರೂಂಹ್ರೂಂ ಪ್ರಧಾರೇಣ ಕುಠಾರೇಣ ಜಹಿ ದ್ವಿಷಃ ॥

ಕ್ಷಿಪ್ತ್ವಾ ಸುದರ್ಶನಂ ಚಕ್ರಂ ಜ್ವಾಲಾ ಮಾಲಾವಿಭೀಷಣಂ ।
ಸರ್ವದುಷ್ಟೋಪಶಮನಂ ಕುರು ದೇವ ವರಾಚ್ಯುತ ॥

ಸುದರ್ಶನ ಮಹಾಜ್ವಾಲ ಛಿಂದಿ ಛಿಂಧಿ ಮಹಾರವ ।
ಸರ್ವದುಃಖಾನಿ ರಕ್ಷಾಂಸಿ ಪಾಪಾನಿ ಚ ವಿಭೀಷಣ ॥

ಹೀಗೆ ಸುದರ್ಶನ ಚಕ್ರವನ್ನು ಪ್ರಾರ್ಥನೆ ಮಾಡಿ ಬೇಡಿಕೊಂಡು, ಅಂಗನ್ಯಾಸ ಮಾಡಿಕೊಂಡು ಮಾರ್ಜನ ವಿಧಿಯಿಂದ ರೋಗಿಗೆ ಪ್ರೋಕ್ಷಣೆ ಮಾಡಿದರೆ ಎಂಥ ಗ್ರಹಬಾಧೆ, ವಿಷಬಾಧೆ, ಭೂತಪ್ರೇತ ಬಾಧೆಗಳಿದ್ದರೂ ತತ್‌ಕ್ಷಣದಲ್ಲಿ ನಾಶವಾಗುವವು. ಈ ಮಂತ್ರಗಳಿಂದ ದೇವರನ್ನು ಪ್ರಾರ್ಥಿಸಿ, ಮತ್ತು ಮೇಲೆ ಹೇಳಿದ ಮಂತ್ರಗಳಿಂದ ಅಂಗಾಂಗ ನ್ಯಾಸ ವಿಧಿಯನ್ನು ಪೂರೈಸಿ, ಕರ್ಮಠನಾದ ಸದಾಚಾರ ಸಂಪನ್ನನಾದ ವಿಷ್ಣು ಭಕ್ತನು ಅಭಿಮಂತ್ರಿತವಾದ ನೀರಿನಿಂದ ಗ್ರಹಪೀಡಿತನಾದ ಅಥವಾ ವಿಷಬಾಧಿತನಾದ ಅಥವಾ ಪ್ರೇತಾವಿಷ್ಟನಾದ ಪುರುಷನ ಮೇಲೆ ಮಾರ್ಜನ ವಿಧಿಯಿಂದ ಪ್ರೋಕ್ಷಣ ಮಾಡಿದರೆ ಶ್ರೀಹರಿಯು ನಿಶ್ಚಿತವಾಗಿಯೂ ರಕ್ಷಣೆ ಮಾಡುತ್ತಾನೆ. ಶ್ರೀಹರಿಯಲ್ಲಿ ಅಚಲವಾದ ನಿಷ್ಠೆ ಮತ್ತು ಅವ್ಯಭಿಚರಿತವಾದ ಭಕ್ತಿಯುಳ್ಳ ವಿಷ್ಣುಭಕ್ತನು ತನ್ನ ಭಗವನ್ನಿಷ್ಠೆಯನ್ನೂ ವಿಷ್ಣು ಸರ್ವೋತ್ತಮತ್ವ ಜ್ಞಾನವನ್ನೂ ಪಣಕ್ಕೆ ಹಚ್ಚಿ ರೋಗಿಗೆ ಅಪಾಮಾರ್ಜನೆಯನ್ನು ಮಾಡಬೇಕು.

ರಕ್ಷಾಂ ಕರೋತಿ ವಿಶ್ವಾತ್ಮಾ ನರಸಿಂಹಃ ಸ್ವಗರ್ಜಿತೈಃ ।
ಭುವ್ಯಂತರಿಕ್ಷೇ ಚ ತಥಾ ಪೃಷ್ಠತಃ ಪಾರ್ಶ್ವತೋಗ್ರತಃ ॥
ತೇನ ಸತ್ಯೇನ ಸಕಲಂ ದುಃಖಮಸ್ಯ ಪ್ರಣಶ್ಯತು

ವಿಶ್ವ ವ್ಯಾಪಿಯಾದ ನೃಸಿಂಹ ದೇವರು ತನ್ನ ಗರ್ಜನೆಯಿಂದಲೇ ಭೂಮಿ ಅಂತರಿಕ್ಷ ಹಿಂದೆ ಮುಂದೆ ಕೆಳಗೆ ಎಲ್ಲ ಕಡೆಗೂ ನಂಬಿದವರನ್ನು ರಕ್ಷಿಸುತ್ತಾನೆ. ಈ ಮಾತು ನಿಜವಾಗಿದ್ದರೆ ಈ ರೋಗಿಯ ಎಲ್ಲ ದುಃಖಗಳು ನಾಶವಾಗಲಿ.

ಯಥಾ ಯೋಗೇಶ್ವರೋ ವಿಷ್ಣುಃ ಸರ್ವದೇವೇಷುಗೀಯತೇ ।
ತೇನ ಸತ್ಯೇನ ಸಕಲಂ ದುಃಖಮಸ್ಯ ಪ್ರಣಶ್ಯತು ॥

ಯೋಗೇಶ್ವರನಾದ ವಿಷ್ಣುವು. ಸರ್ವೇಶ್ವರ ಎಂದು ಎಲ್ಲ ದೇವತೆಗಳಿಂದಲೂ ಹೊಗಳಿ ಹಾಡಲ್ಪಡುತ್ತಾನೆ. ಈ ಮಾತು ನಿಜವಿದ್ದರೆ ಇವನ ದುಃಖವೆಲ್ಲವೂ ನಾಶವಾಗಲಿ.

**ಪರಮಾತ್ಮಾ ಯಥಾ ವಿಷ್ಣುಃ ವೇದಾಂಗೇಷು ಚ ಗೀಯತೇ ।**
**ತೇನ ಸತ್ಯೇನ ವಿಶ್ವಾತ್ಮಾ ಸುಖದೋಽಸ್ತ್ವಸ್ಯ ಕೇಶವಃ ॥**

ಎಲ್ಲ ವೇದವೇದಾಂಗಗಳಲ್ಲಿ ಶ್ರೀ ವಿಷ್ಣುವೇ ಪರಮಶ್ರೇಷ್ಠನಾದ ಸರ್ವಸ್ವಾಮಿ ಎಂದು ಬಣ್ಣಿಸಲ್ಪಟ್ಟದ್ದು ನಿಜವಿದ್ದರೆ ಆ ಸತ್ಯದಿಂದ ಕೇಶವನು ಇವನಿಗೆ ಸುಖವನ್ನುಂಟು ಮಾಡಲಿ.

**ಶಾಂತಿರಸ್ತು ಶಿವಂ ಚಾಸ್ತು ಪ್ರಣಶ್ಯತ್ವಸುಖಂ ಚ ಯತ್ ।**
**ಹತಂ ಮಯಾ ದುಃಖ ಮಶೇಷಮಸ್ಯ ಸ್ವಸ್ಥೋ ಭವತ್ವೇಷ ವಚೋ ಯಥಾ ಹರೇಃ ॥**

ಇವನಿಗೆ ಶಾಂತಿ ಸಿಗಲಿ. ಕಲ್ಯಾಣವಾಗಲಿ. ಇವನ ದುಃಖ ದುರವಸ್ಥೆಗಳೆಲ್ಲ ದೂರಾಗಲಿ. ನಾನು ಶ್ರೀಹರಿಯನ್ನು ಪ್ರಾರ್ಥಿಸಿ ಅಪಾಮಾರ್ಜನ ವಿಧಿಯಿಂದ ಶ್ರೀಹರಿಯ ಆಜ್ಞೆಯಂತೆ ಇವನ ದುಃಖವನ್ನೆಲ್ಲ ದೂರಮಾಡಿದ್ದೇನೆ.

**ಯದಸ್ಯ ದುರಿತಂ ಕಿಂಚಿತ್ ಕ್ಷಿಪ್ತಂ ತಲ್ಲವಣಾಂಭಸಿ ।**
**ಸ್ವಾಸ್ಥ್ಯಮಸ್ಯ ಸದೈವಾಸ್ತು ಹೃಷೀಕೇಶಸ್ಯ ಕೀರ್ತನಾತ್ ॥**

ಇವನಲ್ಲಿ ಇನ್ನೂ ಏನಾದರೂ ಪಾಪಶೇಷ ಉಳಿದಿದ್ದರೆ ಅದೆಲ್ಲವೂ ಉಪ್ಪಿನ ಸಮುದ್ರದಲ್ಲಿ ಎಸೆಯಲ್ಪಟ್ಟಿದೆ. ಕೇಶವನ ಸ್ತೋತ್ರ, ಸ್ಮರಣೆ ಪ್ರಾರ್ಥನೆಯನ್ನು ಮಾಡಿದ್ದರಿಂದ ಈ ಮನುಷ್ಯನಿಗೆ ಆರೋಗ್ಯ ಭಾಗ್ಯವು ಲಭಿಸಲಿ.

ಹೀಗೆ ವಿಷ್ಣುಭಕ್ತರಾದವರು ರೋಗ ಬಾಧೆ ಪೀಡೆಗಳು ಜನರಿಗೆ ಬಂದಾಗ ಮೇಲೆ ಹೇಳಿದ ಅಪಾಮಾರ್ಜನ ವಿಧಿಯಿಂದ ಅವರಿಗೆ ಮಾರ್ಜನವನ್ನು ಮಾಡಿ ಪೀಡೆಗಳನ್ನು ಕಳೆಯಬೇಕು. ಈ ಅಪಾಮಾರ್ಜನೆಯನ್ನು ದ್ರವ್ಯದ ಆಶೆಗಾಗಿ ಅಥವಾ ಪ್ರತಿಷ್ಠೆಗಾಗಿ ಎಂದೂ ಮಾಡಬಾರದು. ಇಂಥ ಅಪಾಮಾರ್ಜನ ಮಾಡಿದ ಬಳಿಕ ಅವರಿಂದ ಕಿಂಚಿತ್ತಾದರೂ ದ್ರವ್ಯವನ್ನು ಸ್ವೀಕರಿಸಕೂಡದು. ದ್ರವ್ಯದ ಆಶೆಯಿಂದ ಮಾಡಿದರೆ ಅಪಾಮಾರ್ಜನವು ಸಿದ್ಧಿಸುವದೇ ಇಲ್ಲ. ನಿರಪೇಕ್ಷ ಬುದ್ಧಿಯಿಂದಲೇ ವಿಷ್ಣುಭಕ್ತರಾದವರು ಈ ಅಪಮಾರ್ಜನ ವಿಧಿಯಿಂದ ಆರ್ತರಾದವರ ದುಃಖವನ್ನು ಕಳೆಯಬೇಕು.

**ಮಹಾದೇವ:-** ಈ ಅಪಾಮಾರ್ಜನ ಸ್ತೋತ್ರವನ್ನು ಸಂತಾನಾಪೇಕ್ಷಿಗಳು ಭಕ್ತಿಯಿಂದ ಪಠಿಸಬೇಕು. ಕೊರಳಲ್ಲಿ ತುಳಸೀ ಮಾಲೆಯನ್ನು ಹಾಕಿಕೊಂಡು ವೈಷ್ಣವ ಚಿನ್ಹಗಳಾದ ಶಂಖಚಕ್ರಾದಿಗಳನ್ನು ಧರಿಸಿ ಈ ಸ್ತೋತ್ರವನ್ನು ಪಠಿಸಿದರೆ ಬಾಲಕರ ಬಾಧೆಗಳೆಲ್ಲವೂ ದೂರವಾಗುತ್ತವೆ. ಮತ್ತು ಮಕ್ಕಳಿಗೆ ಆರೋಗ್ಯ ಭಾಗ್ಯವು ಲಭಿಸುತ್ತದೆ. ಈ ಸ್ತೋತ್ರ ಪಾಠ ಮಾಡಿದವರು ಇಹಲೋಕದಲ್ಲಿ ಸೌಖ್ಯವನ್ನು ಹೊಂದಿ ಮುಂದೆ ವಿಷ್ಣುಲೋಕಕ್ಕೆ ಪ್ರಯಾಣಮಾಡುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಅಪಾಮಾರ್ಜನ ಸ್ತೋತ್ರದ ಪಾಠ ವಿಧಿ ಎಂಬ ಎಪ್ಪತ್ತೇಳನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುವಿನ ಮಾಹಾತ್ಮ್ಯೆ

ಅಧ್ಯಾಯ - ೭೮

**ಪಾರ್ವತಿ:-** ಪ್ರಭು, ವಿಶ್ವೇಶ್ವರ, ವಿಷ್ಣುವಿನ ಮಾಹಾತ್ಮ್ಯವನ್ನು ಹೇಳು. ವಿಷ್ಣು ಮಹಿಮೆಯನ್ನು ಕೇಳಿದವರು ಪುನಃ ಈ ಸಂಸಾರದಲ್ಲಿ ಮರಳಿ ಹುಟ್ಟುವದಿಲ್ಲ.

**ಮಹಾದೇವಿ:-** ಸುಂದರಿ, ಮೋಕ್ಷಪ್ರದವಾದ ಭಗವಾನ್ ವಾಸುದೇವನ ಮಹಾಮಹಿಮೆಯನ್ನು ಹೇಳುವೆ ಕೇಳು. ಹಿಂದೆ ಒಂದು ದಿನ ಧರ್ಮರಾಜನು ನಾರಾಯಣ ಪರಾಯಣರಾದ ಭೀಷ್ಮರನ್ನು ಕುರಿತು ಪ್ರಶ್ನೆ ಮಾಡಿದ.

**ಧರ್ಮರಾಜ:-** ಶ್ರೀಕೃಷ್ಣಭಕ್ತರಾದ ಕುರುಕುಲ ಪಿತಾಮಹ, ಈ ಜಗತ್ತಿನಲ್ಲಿ ಅನೇಕ ಮುನಿಗಳು ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಧರ್ಮವೇ ಶ್ರೇಷ್ಠ ಎಂದು ಕೆಲವರ ಹೇಳಿಕೆ. ಧನವು ಶ್ರೇಷ್ಠ, ಎಂದು ಹಲವರ ಅಭಿಪ್ರಾಯ. ದಾನವನ್ನು ಹೊಗಳುವವರು ಅನೇಕ ಜನ. **"ಸಂಘೇ ಶಕ್ತಿಃ ಕಲೌಯುಗೇ"** ಎಂದು ಸಂಘವನ್ನು ಪ್ರಶಂಸಿಸುವವರು ಹಲವಾರು ಜನ. ಮತ್ತೆ ಕೆಲವರು ಸಾಂಖ್ಯವನ್ನು ಹಲವರು ಯೋಗವನ್ನು ಇತರರು ಜ್ಞಾನವನ್ನು ಎಷ್ಟೋ ಜನರು ಧ್ಯಾನವನ್ನು, ಇನ್ನೂ ಕೆಲವರು ವೈರಾಗ್ಯವನ್ನು, ಮತ್ತೆ ಹಲಕೆಲವರು ಅಗ್ನಿಷ್ಟೋಮಾದಿ ಕರ್ಮಗಳನ್ನು ಶ್ರೇಷ್ಠವೆಂದು ಬಣ್ಣಿಸುತ್ತಾರೆ. ಕಲ್ಲು, ಕಟ್ಟಿಗೆ, ಬಂಗಾರ, ಮಣ್ಣು ಎಲ್ಲವೂ ಸಮವೆಂದು ತಿಳಿದುಕೊಂಡು ಕೆಲ ವಿರಕ್ತರು ಆತ್ಮಜ್ಞಾನವೇ ಸರ್ವಶ್ರೇಷ್ಠವೆಂದು ಸಾಧಿಸಿದರೆ ಯಮನಿಯಮಾದಿಗಳೇ ಭವತಾರಕವೆಂದು ಪ್ರತಿಪಾದಿಸುವ ಎಷ್ಟೋ ಮನೀಷಿಗಳು ಇರುತ್ತಾರೆ. ಕೆಲವು ತಪಸ್ವಿಗಳು ಭೂತದಯೆಯೇ ಮುಖ್ಯ ಧರ್ಮವೆಂದು ವಾದಿಸುತ್ತಾರೆ. ಇನ್ನು ಕೆಲ ಕರ್ಮಠರು 'ಶೌಚ' ಎಂದರೆ ಮಡಿಯಿಂದ ದೇವತಾರ್ಚನ ಮಾಡುವದೇ ಶ್ರೇಷ್ಠ ಕರ್ತವ್ಯವೆಂದೂ ಹೇಳುತ್ತಾರೆ.

ಹೀಗೆ ಬಲ್ಲಿದರಾದ ವಿದ್ವಾಂಸರೇ ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದಾಗ ಶ್ರೀಸಾಮಾನ್ಯನು ಸಂಶಯದಿಂದ ಆಕುಲಿತನಾಗುತ್ತಾನೆ. ಮುಗ್ಧರಾದ ಪಾಮರ ಜನರು ಯಾವುದನ್ನು 'ಪರಮಕೃತ್ಯ' ಎಂದು ಆಚರಿಸಬೇಕು? ಯಾವುದನ್ನು 'ಶ್ರೇಷ್ಠ' ಎಂದು ತಿಳಿಯಬೇಕು?

ಮಹಾಪ್ರಾಜ್ಞನಾದ ದೇವವ್ರತ, ನೀನು ಸರ್ವಶಾಸ್ತ್ರಗಳಲ್ಲಿಯೂ ಪರಿನಿಷ್ಠಿತ ಪಂಡಿತ. ಧರ್ಮದ ಮರ್ಮವನ್ನು ಚೆನ್ನಾಗಿ ಅರಿತ ಜ್ಞಾನವೃದ್ಧ. ನೀನು ಈ ನನ್ನ ಎರಡು ಪ್ರಶ್ನೆಗಳಿಗೆ ಈಗ ಉತ್ತರ ನೀಡು. ಈ ಜಗತ್ತಿನಲ್ಲಿ ಸರ್ವಶ್ರೇಷ್ಠವಾದ ವಸ್ತು ಯಾವುದು? ಮಾನವರ ಅವಶ್ಯ ಕರ್ತವ್ಯ ಕರ್ಮವಾವುದು?

**ಭೀಷ್ಮ:-** ಧರ್ಮರಾಜ, ನೀನು ಒಳ್ಳೆಯ ಪ್ರಶ್ನೆ ಮಾಡಿದೆ. ನಾನು ನಿನಗೆ ಈಗ ಅವಶ್ಯವಾಗಿ ಶ್ರೋತವ್ಯವೂ, ಎಲ್ಲರಿಂದ ಜ್ಞಾತವ್ಯವೂ ಆದ ಒಂದು ತತ್ವವನ್ನು ತಿಳಿಸುವೆ ಕೇಳು. ನೀನು ಕೇಳಿದ ಪ್ರಶ್ನೆಗೆ ಸಂಬಂಧಿಸಿದಂತೆ ಒಂದು ಪ್ರಾಚೀನ ಉಪಾಖ್ಯಾನ ಇರುತ್ತದೆ. ಹಿಂದೆ ಒಮ್ಮೆ ಮಹರ್ಷಿ ನಾರದರಿಗೂ ಪುಂಡರೀಕನಿಗೂ ಸಂವಾದ ನಡೆಯಿತು.

ಪೂರ್ವಕಾಲದಲ್ಲಿ ಪುಂಡರೀಕ ಎಂಬ ಒಬ್ಬ ಬ್ರಾಹ್ಮಣ. ವೇದದಲ್ಲಿ ವಿದ್ವಾಂಸ. ಶಾಸ್ತ್ರದಲ್ಲಿ ಮಹಾಪಂಡಿತ. ಬುದ್ಧಿಯಲ್ಲಿ ಬೃಹಸ್ಪತಿ. ವೇದ-ವೇದಾಂಗಗಳೆಲ್ಲವೂ ಅವನಿಗೆ ಅಂಗೈಯಲ್ಲಿನ ನೆಲ್ಲಿ. ಇಂದ್ರಿಯಗಳೆಲ್ಲವೂ ಅವನ ಅಧೀನ. ಕಾಮಕ್ರೋಧಗಳನ್ನು ಎಂದೋ ಗೆದ್ದಿದ್ದಾನೆ. ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಲಿದ್ದ ಆತ ವಿಷ್ಣುವಿನ ಪರಮಭಕ್ತ. ತಪಸ್ಸು ಸ್ವಾಧ್ಯಾಯಗಳಲ್ಲಿ ನಿರತನಾದ ಆ ಪುಂಡರೀಕ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಗ್ನಿಕಾರ್ಯವನ್ನು ಮಾಡಿ ವಿಷ್ಣುವನ್ನು ಶಾಸ್ತ್ರೋಕ್ತವಾಗಿ ಪೂಜಿಸುತ್ತಿದ್ದ. ಅದರಂತೆ ತಂದೆತಾಯಿಗಳನ್ನು ಸಾಕ್ಷಾತ್‌ದೇವರೆಂದು ಬಗೆದು ಅವರ ಸೇವೆ ಮಾಡುತ್ತಿದ್ದ. ಬ್ರಹ್ಮವಿದ್ಯೆಯನ್ನು ಚೆನ್ನಾಗಿ ಅಭ್ಯಸಿಸಿದ್ದ. ಪ್ರಾಣಾಯಾಮ ಪರಾಯಣನಾಗಿ ಭಿಕ್ಷೆಯಿಂದ ಉಪಜೀವನ ಸಾಗಿಸುತ್ತಿದ್ದ. ಹೀಗೆ ಭಗವದಾರಾಧನೆಯಲ್ಲಿಯೇ ತನ್ನ ಜೀವನವನ್ನು ಸಾರ್ಥಕಗೊಳಿಸುತ್ತಲಿದ್ದ ಆ ಪುಂಡರೀಕನಿಗೆ ಸಂಸಾರದಲ್ಲಿ ಅಸಾರತೆಯ ಬುದ್ಧಿ ಹುಟ್ಟಿತು. ಪರಮ ಭಗವದ್ಭಕ್ತನಾದ ಅವನು ಮನೆ ಮಾರು ತೊರೆದ. ಬಂಧು-ಬಳಗವನ್ನು ಬಿಟ್ಟ. ಹೊಲ, ಮನೆ, ಐಶ್ವರ್ಯ, ಭೋಗಸಾಮಗ್ರಿ, ತಾಯಿ, ತಂದೆ, ಮಿತ್ರ, ಧನ, ಧಾನ್ಯ, ಎಲ್ಲವನ್ನೂ ತೊರೆದು ವಿರಕ್ತನಾಗಿ ಪುಣ್ಯತೀರ್ಥ ಕ್ಷೇತ್ರಯಾತ್ರೆಯನ್ನು ಕೈಗೊಂಡ. ದಾರಿಯಲ್ಲಿ ದೊರೆತ ಹಣ್ಣು, ಕಾಯಿ, ಗಡ್ಡೆ, ಗೆಣಸು, ಕಂದಮೂಲ, ಫಲ ಮುಂತಾದವುಗಳನ್ನು ತಿನ್ನುತ್ತ ಸಂಚಾರಗೈಯುತ್ತ ಗಂಗಾನದಿಗೆ ಬಂದ. ಕೆಲದಿನ ಗಂಗಾಸ್ನಾನ ಮಾಡಿ ನಂತರ ಯಮುನಾ, ಗೋಮತೀ, ಗಂಡಕೀ, ಶತದ್ರುಪಯೋಷ್ಣೀ, ಸರಸ್ವತಿ, ನರ್ಮದಾ, ಶೋಣಾ ಮುಂತಾದ ನದ-ನದಿಗಳಲ್ಲಿ ಸ್ನಾನ ಮಾಡಿ ಪ್ರಯಾಗ, ಪ್ರಭಾಸ, ಪುಷ್ಕರ, ನೈಮಿಷಾರಣ್ಯ, ಕುರುಕ್ಷೇತ್ರ ಮುಂತಾದ ಎಲ್ಲ ಕ್ಷೇತ್ರಗಳನ್ನು ಸಂದರ್ಶಿಸಿದ.

ಹಿಮಾಲಯ, ಗೋವರ್ಧನ, ವಿಂಧ್ಯ ಮುಂತಾದ ಪುಣ್ಯ ಪರ್ವತಗಳಿಂದ ಉದ್ಭವಿಸಿದ ನೀರಿನಲ್ಲಿ ಮಿಂದು, ಎಲ್ಲ ಕ್ಷೇತ್ರಯಾತ್ರೆ ಮುಗಿಸಿ ಕೊನೆಗೆ ಪುರಾಣ ಪ್ರಸಿದ್ಧವಾದ ಸಾಲಿಗ್ರಾಮ ಕ್ಷೇತ್ರಕ್ಕೆ ಬಂದ. ಆ ಕ್ಷೇತ್ರದಲ್ಲಿ ಇರುವ ದೇವಹ್ರದ ತೀರ್ಥದಲ್ಲಿಯೂ, ಜನ್ಮಾಂತರದ ಜಾತಿಸ್ಮರಣೆಯನ್ನು ತಂದುಕೊಡುವ ಸರಸ್ವತೀ ನದಿಯಲ್ಲಿಯೂ, ಚಕ್ರಕುಂಡದಲ್ಲಿಯೂ, ಚಕ್ರನದೀ ತೀರದಲ್ಲಿಯೂ ಬೇರೆ ಬೇರೆ ತೀರ್ಥಕ್ಷೇತ್ರಗಳಲ್ಲಿಯೂ ಸ್ನಾನ ದೇವತಾರ್ಚನೆ ಮಾಡಿ, ಪೂತಾತ್ಮನಾಗಿ ಆ ಪುಂಡರೀಕನು ಅಲ್ಲಿಯೇ ಧ್ಯಾನಯೋಗ ಪರಾಯಣನಾಗಿ ವಾಸಮಾಡಿದ. ಶಾಸ್ತ್ರೋಕ್ತ ವಿಧಿಯಿಂದ ಭಕ್ತಿಪೂರ್ವಕವಾಗಿ ಗರುಡಧ್ವಜನನ್ನು ಆರಾಧನೆಗೈದ. ಏಕಾಕಿಯಾಗಿ ಏಕಾಗ್ರ ಮನಸ್ಸಿನಿಂದ ಕಂದಮೂಲ ಫಲಾಶನನಾಗಿ ಯಮನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಮುಂತಾದವುಗಳಿಂದ ಚೆನ್ನಾಗಿ ಯೋಗಾಭ್ಯಾಸ ಮಾಡಿ ಸರ್ವೇಶ್ವರನಾದ ಶ್ರೀಹರಿಯನ್ನು ಆರಾಧಿಸಿ ದೇಹಶುದ್ಧಿಯನ್ನೂ ಆತ್ಮಶುದ್ಧಿಯನ್ನೂ, ಮನಶ್ಶುದ್ಧಿಯನ್ನೂ ಸಂಪಾದಿಸಿದ.

ಇದರಿಂದ ಪುಂಡರೀಕೇಕ್ಷಣನಾದ ಆ ಪರಮಾತ್ಮನು ಆ ಪುಂಡರೀಕನ ಮೇಲೆ ಸುಪ್ರಸನ್ನನಾದ. ಒಂದು ದಿನ ಅವನನ್ನು ನೋಡಲು ನಾರದ ಮಹರ್ಷಿಗಳು ಆಗಮಿಸಿದರು. ತೇಜೋಮಂಡಲ ಮಂಡಿತರಾದ, ಹಾಗೂ ಜಟಾಮಂಡಲಭಾಸ್ವರರಾದ,

ವೀಣಾಪಾಣಿಗಳಾದ ಆ ಮುನಿಮಾರ್ತಾಂಡರನ್ನು ಕಂಡು ಅತ್ಯಾಶ್ಚರ್ಯವಾಯಿತು ಆ ಪುಂಡರೀಕನಿಗೆ. ಯಾರು ಆಗಿರಬಹುದು ಈ ಮಹಾತ್ಮ? ಮುಗಿಲಿನಲ್ಲಿಯ ಸೂರ್ಯನೋ? ನೆಲದ ಮೇಲಿನ ಅಗ್ನಿಯೊ? ಸ್ವರ್ಗದಲ್ಲಿನ ಇಂದ್ರನೋ? ಸಮುದ್ರನಾಥನಾದ ವರುಣನೋ? ಯಾರೀ ತೇಜೋಮೂರ್ತಿ? ಇವನ ವೇಷ ಸುಮನೋಹರ. ಮುಖಮಂಡಲ ತೇಜಃಪುಂಜ. ಆಕಾರ ಅತ್ಯದ್ಭುತ. ಕೈಯಲ್ಲಿ ವೀಣೆ, ಬಾಯಲ್ಲಿ ಭಗವನ್ನಾಮಸ್ಮರಣೆ. ಸಂತತ ಶ್ರೀಹರಿಯ ನಾಮಕೀರ್ತನೆ. ಯಾರಿರಬಹುದು ಈ ಸತ್ಪುರುಷ? ಎಂದು ಚಿಂತಿಸುತ್ತಲೇ ನಿಂತುಕೊಂಡ ಕ್ಷಣಹೊತ್ತು. ನಂತರ ಕೇಳಿದ - ''ಪೂಜ್ಯರೇ, ತಾವು ಯಾರು? ತೇಜೋಮೂರ್ತಿಗಳಾದ ತಮ್ಮಂಥವರ ದರ್ಶನ ಈ ಲೋಕದಲ್ಲಿ ದುರ್ಲಭ. ನಾನು ನಿಮ್ಮಂಥ ವರ್ಚಸ್ವಿಗಳಾದ ತಪಸ್ವಿಗಳನ್ನೇ ಹುಟ್ಟಿದ ಬಳಿಕ ಕಂಡಿಲ್ಲ. ಆದುದರಿಂದ ದಯವಿಟ್ಟು ನನಗೆ ತಿಳಿಸಿ. ತೇಜೋನಿಧಿಗಳೂ, ತಪೋನಿಧಿಗಳೂ ಆದ ತಾವು ಯಾರು?

**ನಾರದ:-** ಪುಂಡರೀಕ, ನಾನು ನಿನ್ನನ್ನು ನೋಡಬೇಕೆಂಬ ಕುತೂಹಲದಿಂದ ಬಂದಿರುವೆ. ನಿನ್ನಂಥ ಭಗವದ್ಭಕ್ತರು ದುರ್ಲಭ. ನಿಮ್ಮಂಥವರ ದರ್ಶನ ಇನ್ನೂ ದುರ್ಲಭ.

**ಸ್ಮೃತಃ ಸಂತೋಷತೋ ವಾಪಿ ಪೂಜಿತೋ ವಾ ದ್ವಿಜೋತ್ತಮ ।**
**ಪುನಾತಿ ಭಗವದ್ಭಕ್ತಶ್ಚಾಂಡಾಲೋಽಪಿ ಯದೃಚ್ಛಯಾ ॥**

ಚಾಂಡಾಲನಾದರೂ ಚಿಂತೆಯಿಲ್ಲ. ಭಗವದ್ಭಕ್ತನಾಗಿದ್ದರೆ ಅವನ ಸ್ಮರಣೆ ಮಾಡಿದರೂ ಮನುಷ್ಯನು ಪವಿತ್ರನಾಗುವನು. ಅಕಸ್ಮಾತ್ತಾಗಿ ಅಂಥ ಭಗವದ್ಭಕ್ತನಾದ ಚಾಂಡಾಲನನ್ನು ಸಂತೋಷಪಡಿಸಿ ಪೂಜಿಸಿದರೆ ಪೂಜೆ ಮಾಡಿದ ನರನು ಪೂತಾತ್ಮನಾಗುತ್ತಾನೆ.

**ದಾಸೋಽಹಂ ವಾಸುದೇವಸ್ಯ ದೇವದೇವಸ್ಯ ಶಾರ್ಙ್ಗಿಣಃ ।**
**ಶಂಖಚಕ್ರ ಗದಾಪಾಣೇಃ ತ್ರೈಲೋಕಸ್ಯೈಕ ಚಕ್ಷುಷಃ ॥**

ನಾನು ದೇವದೇವನಾದ ವಾಸುದೇವನ ದಾಸ. ಶಂಖ, ಚಕ್ರ, ಗದಾ, ಶಾರ್ಙ್ಗ ಮುಂತಾದ ಆಯುಧಗಳನ್ನು ಧರಿಸಿದ ಹರಿಯು ಮೂರು ಲೋಕಕ್ಕೆಲ್ಲ ಒಂದು ಕಣ್ಣು ಇದ್ದಂತೆ. ನಾನೊಬ್ಬ ಅಂಥ ಶ್ರೀಹರಿಯ ಭಕ್ತ. ನನ್ನ ಹೆಸರು ನಾರದ.

**ಪುಂಡರೀಕ:-** ನಾನು ಇಂದು ಧನ್ಯನಾದೆ. ದೇವಾಧಿದೇವತೆಗಳಿಗೆಲ್ಲ ನಾನಿಂದಿನಿಂದ ಪರಮ ಪೂಜ್ಯನಾಗುತ್ತೇನೆ. ತಮ್ಮಂಥ ಭಗವದ್ಭಕ್ತರ ದರುಶನವಾದ ಬಳಿಕ ನನ್ನ ಪಿತೃಗಳು ಇಂದು ಕೃತಾರ್ಥರು. ನನ್ನ ಹುಟ್ಟು ಇಂದು ಸಫಲ. ದೇವ ಮುನಿಗಳೇ, ಜನ್ಮಜನ್ಮಾಂತರದ ಕರ್ಮಜಾಲದಲ್ಲಿ ಸಿಕ್ಕು ಒದ್ದಾಡುತ್ತಿರುವ ನಾನು ಏನನ್ನು ಮಾಡಬೇಕು? ಮಾನವ ಜೀವಿತದ ಮುಖ್ಯ ಕರ್ತವ್ಯವಾವುದೆನ್ನುವದನ್ನು ನನಗೆ ತಾವು ಉಪದೇಶಿಸಿರಿ.

**ನಾರದ:-** ಈ ಲೋಕದಲ್ಲಿ ಶಾಸ್ತ್ರಗಳು ಅನೇಕ. ಕರ್ಮಗಳು ಅಸಂಖ್ಯ. ಧರ್ಮಗಳೂ ಬಹಳ ಅದರಿಂದಲೇ ಈ ಜಗತ್ತು ಬಹುವಿಧವಾಗಿದೆ. ಕೆಲವರು ಇದೆಲ್ಲವೂ ವಿಜ್ಞಾನ ಮಾತ್ರ, ಕ್ಷಣಿಕ ಎಂದೆನ್ನುತ್ತಾರೆ. ಹಲವರು ದೇವರೇ ಇಲ್ಲವೆಂದು ಬಣ್ಣಿಸುತ್ತಾರೆ. ಅವ್ಯಕ್ತ ಎಂಬ ಹೆಸರಿನ ಪ್ರಕೃತಿಯಿಂದಲೇ ಎಲ್ಲವೂ ಹುಟ್ಟಿ ಪ್ರಕೃತಿಯಲ್ಲಿಯೇ ಎಲ್ಲವೂ

ಲೀನವಾಗುವದು. ಆದುದರಿಂದ ಪ್ರಕೃತಿ ಅಥವಾ ಪ್ರಧಾನವೇ ಸರ್ವಶ್ರೇಷ್ಠ ಎಂದು ಹಲವರ ಪ್ರತಿಪಾದನೆ. ಆ ಶರೀರ ಬಿಟ್ಟು ಬೇರೆ ಆತ್ಮವೇ ಇಲ್ಲ ಎಂದು ವಾದಿಸುವವರೂ ಕೆಲವರು. ಆನೆ, ಇರುವೆ, ಕ್ರಿಮಿ, ಕೀಟ ಮುಂತಾದವುಗಳಲ್ಲಿ ಆ ಆತ್ಮವೇ ಅಂಥ ಆಕಾರದಿಂದಲೇ ಅದೇ ಪ್ರಮಾಣದಲ್ಲಿಯೇ ಹಿಂದೆ, ಇಂದು, ಮುಂದೆ ಇರುತ್ತವೆ. ಅನಾದಿ ಕಾಲದಿಂದ ಈಗಿದ್ದಂತೆಯೇ ಸಂಸಾರವು ಸ್ವಯಂಭೂ ಆಗಿಯೇ ಹುಟ್ಟಿಬರುತ್ತದೆ. ತಾನಾಗಿಯೇ ಸತ್ತುಹೋಗುತ್ತದೆ. ಇದಕ್ಕೊಬ್ಬ ಕರ್ತಾ; ಭರ್ತಾ; ಸಂಹರ್ತಾ ಎಂದರೆ ಹುಟ್ಟಿಸುವವ; ಕಾಯುವವ; ಸಂಹರಿಸುವವ ಬೇರೊಬ್ಬನಿಲ್ಲ ಎಂದು ಕೆಲವರ ವಾದ. ಪ್ರತ್ಯಕ್ಷ ಕಂಡದ್ದು ಮಾತ್ರ ಸತ್ಯ. ಕಾಣದಿದ್ದುದು ಇಲ್ಲವೇ ಇಲ್ಲ. ಸ್ವರ್ಗನರಕಾದಿಗಳೆಲ್ಲ ಸುಳ್ಳು ಎಂದು ಎಷ್ಟೋ ಜನರ ಪ್ರತಿಪಾದನೆ. ಕೆಲವರು ಈಶ್ವರನಿರುತ್ತಾನೆಂದೂ ಮತ್ತೆ ಕೆಲವರು ಈಶ್ವರನಿಲ್ಲವೆಂದೂ ವಾದ ಹೂಡುವರು. ಹೀಗೆ ಬಗೆಬಗೆಯ ಮಾನವೀಯ ಬುದ್ಧಿ ವೈಚಿತ್ರ್ಯದಿಂದ ವಿವಿಧ ವಾದಗಳು, ತರ್ಕಗಳು, ಶಾಸ್ತ್ರಗಳು ಹುಟ್ಟಿಕೊಂಡಿವೆ. ಆದರೆ ಅವರ ಅವರ ಸ್ವಕಪೋಲಕಲ್ಪಿತವಾದ ಈ ಯಾವ ವಾದಗಳಿಗೂ ಮೂಲಭೂತವಾಗಿ ಪ್ರಮಾಣ ವಚನಗಳಿರುವದಿಲ್ಲ. ಆದುದರಿಂದ ಪ್ರಾಚೀನರಾದ ಮಹಾ ತಪಸ್ವಿಗಳಿಂದ ದೃಷ್ಟವಾದ ಪೌರುಷೇಯವಾದ ವೇದವು ಮಾತ್ರ ಪರಮಾರ್ಥ ಸಾಧಕವಾದ ಮುಖ್ಯ ಪ್ರಮಾಣವಾಗಿದೆ.

**ಆಗಮೋ ಮುನಿಭಿಃ ಪ್ರೋಕ್ತಃ ಪೂರ್ವರೂಪ ಕ್ರಮಾಗತಃ ।**
**ಪ್ರಮಾಣಂ ಸತು ವಿಜ್ಞೇಯಃ ಪರಮಾರ್ಥ ಪ್ರಸಾದಕ ॥**

ಪ್ರಾಚೀನರಾದ ಋಷಿಮುನಿಗಳು ಕಂಡರಸಿದ (ದೃಷ್ಟವಾದ) ಸನಾತನವಾದ, ಅದಿ ನಿತ್ಯವಾದ ಪೂರ್ವರೂಪದ ಕ್ರಮದಿಂದ ಬಂದ ಆಗಮವು ಪರಮ ಪ್ರಮಾಣವೂ ಹಾಗೂ ಪರಮಾರ್ಥಸಾಧಕವೂ ಆಗಿರುತ್ತದೆ.

**ಯದಭ್ಯಾಸಬಲಾಜ್ಞಾನಂ ರಾಗದ್ವೇಷಿ ಮಲಾಪಹಂ ।**
**ಉತ್ಪದ್ಯತೇ ದ್ವಿಜಶ್ರೇಷ್ಠ ಸೋಽಯ ಮಾಗಮ ಸಂಜ್ಞಕಃ ॥**

ಯಾವುದರ ಅಭ್ಯಾಸದಿಂದ ರಾಗದ್ವೇಷಾದಿ ದೋಷವನ್ನು ಹೊಡೆದುಹಾಕುವ ದಿವ್ಯ ಜ್ಞಾನ ಉಂಟಾಗುವದೋ ಅದಕ್ಕೆ ಅಗಮ ಎನ್ನುವರು. ಈ ಜಗತ್ತಿನಲ್ಲಿ ವ್ಯಕ್ತಿ ಸ್ವರೂಪದಿಂದ ಇದ್ದು ಈ ಜಗತ್ತನ್ನೆಲ್ಲ ನಿಯಮಿಸುವ, ರಕ್ಷಿಸುವ ಚಿನ್ಮಾತ್ರವಾದ, ಅನಂತರ ಗುಣಪರಿಪೂರ್ಣವಾದ, ನಿರ್ದೋಷವಾದ, ನಿತ್ಯ ಸತ್ಯವಾದ ತತ್ವಕ್ಕೆ ವಿಷ್ಣು ಎಂದು ಹೆಸರು. ಅದು ವಿಶ್ವವ್ಯಾಪಿ. ಯೋಗಿಧ್ಯೇಯ ಅವತಾರರೂಪಗಳಲ್ಲಿ ಭಿನ್ನ ಭಿನ್ನವಾಗಿ ಕಂಡರೂ ಅಭಿನ್ನ. ಸ್ವಗತ ಭೇದವರ್ಜಿತ.

ನಾನು ಹಿಂದೆ ಬ್ರಹ್ಮಲೋಕಕ್ಕೆ ಹೋದಾಗ ಬ್ರಹ್ಮದೇವನಿಗೆ ನಮಸ್ಕರಿಸಿ ಕೇಳಿದೆ. ಶ್ರೇಷ್ಠವಾದ ಜ್ಞಾನವಾವುದು? ಉತ್ತಮ ಯೋಗವಾವುದು? ಆಗ ನನ್ನ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮದೇವ ಇಂತು ನುಡಿದರು.

ಬ್ರಹ್ಮ:-

**ನಾರಾಯಣೋ ಜಗದ್ಧಾಮ ಪರಮಾತ್ಮಾ ಸನಾತನಃ ।**
**ಜಗತಃ ಸೃಷ್ಟಿಸಂಹಾರ ಪರಿಪಾಲನ ತತ್ಪರಃ ॥**

ಜಗದಾಧಾರನಾದ ಆ ನಾರಾಯಣನಿಗೆ ಪರಮಾತ್ಮಾ ಎಂದು ಹೇಳುತ್ತಾರೆ. ಜಗತ್ತಿನ ಸೃಷ್ಟಿ ಸಂಹಾರ, ಪಾಲನಾದಿಗಳನ್ನು ಅವನೇ ಮಾಡುತ್ತಾನೆ.

**ಯಃ ಪರಂಪರಾಪ್ರೋಕ್ತ ಪುರುಷಃ ಪಂಚವಿಂಶಕಃ ।**
**ಸ ಏವ ಸರ್ವಭೂತಾತ್ಮಾ ತೇನ ಇತ್ಯಭಿಧೀಯತೇ ॥**

ವೇದಶಾಸ್ತ್ರಗಳನ್ನು ಅರಿತ ಋಷಿಮುನಿಗಳು ಪರಂಪರೆಯಿಂದ ಈ ನಾರಾಯಣನನ್ನೇ ಪುರುಷ ಎಂದು ಕರೆಯುತ್ತಿದ್ದಾರೆ. ಅವನೇ ಇಪ್ಪತ್ತೈದನೇ ತತ್ವ. ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚತನ್ಮಾತ್ರ ಹಾಗೂ ಪಂಚಮಹಾಭೂತಿಗಳು, ಅಹಂಕಾರ, ಮನಸ್ಸು, ಬುದ್ಧಿ, ಚಿತ್ತ ಈ ಇಪ್ಪತ್ತನಾಲ್ಕು ತತ್ವಗಳನ್ನೆಲ್ಲ ನಿಯಂತ್ರಿಸುವ ಪರಮ ಪುರುಷನಾದ ಶ್ರೀಹರಿಯು ಇಪ್ಪತ್ತೈದನೆಯ ಸರ್ವಪ್ರಾಣಿಗಳ ಅಂತರ್ಯಾಮಿಯಾಗಿ ಸರ್ವನಿಯಾಮಕನಾಗಿ ಎಲ್ಲರ ಒಳಗೂ ಹೊರಗೂ ಇರುತ್ತಾನೆ. ಅವನಿಂದಲೇ ಈ ಪ್ರಪಂಚವೆಲ್ಲವೂ ಹುಟ್ಟಿರುತ್ತದೆ ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ.

**ಅನ್ಯಥಾ ಮಂದಬುದ್ಧೀನಾಂ ಪ್ರತಿಭಾತಿ ದುರಾತ್ಮನಾಮ್ಗ ।**
**ಕುತರ್ಕನಜ್ಞಾನದುಷ್ಟಾನಾಂ ವಿಭಕ್ತೇಂದ್ರಿಯ ವಾದಿನಾಮ್ ॥**

ಮಂದಬುದ್ಧಿಗಳಿಗೂ, ದುರಾತ್ಮರಿಗೂ ಕುತರ್ಕನಜ್ಞಾನದಿಂದ ಕಲುಷಿತ ಬುದ್ಧಿಯುಳ್ಳ ದುಷ್ಟ ಚೇತನರಿಗೂ, ಕೇವಲ ಇಂದ್ರಿಯಗೋಚರವಾದದ್ದು ಮಾತ್ರ ಸತ್ಯವೆಂದು ಹೇಳುವ ನಾಸ್ತಿಕರಿಗೂ, ಈ ಜಗತ್ತೆಲ್ಲ ಮಿಥ್ಯೆಯೆಂದೂ ಕ್ಷಣಿಕವೆಂದೂ ಪ್ರಕೃತಿ ಜನ್ಯವೆಂದೂ ವಿಷ್ಣುವಿಗಿಂತ ಅನ್ಯದೇವತಾಸ್ಪಷ್ಟವೆಂದೂ ಹೇಳುವ ಪ್ರಾಜ್ಞಂಮನ್ಯರಿಗೆ ಅನ್ಯಥಾಕಾರವಾದ ಜ್ಞಾನವೇ ಉಂಟಾಗಿರುತ್ತದೆ. ವಾಸ್ತವ ಸತ್ಯವೆಂದರೆ ಇಷ್ಟು ಮಾತ್ರ.

**ನಾರಾಯಣಪರೋ ಧರ್ಮಃ ತಥಾ ಲೋಕಾಶ್ಚ ಶಾಶ್ವತಾಃ ।**
**ನಾರಾಯಣಪರಾ ಯಜ್ಞಾಃ ಶಾಸ್ತ್ರಾಣಿ ವಿವಿಧಾನಿ ಚ ॥**

ಎಲ್ಲ ಧರ್ಮಗಳಲ್ಲೂ ಮುಖ್ಯ ಪ್ರತಿಪಾದಿತವಾದ ಸರ್ವೋತ್ತಮ ವಸ್ತು ಎಂದರೆ ನಾರಾಯಣ. ಮತ್ತು ಈ ಶಾಶ್ವತವಾದ ಎಲ್ಲ ಲೋಕಗಳಿಗೂ ನಾರಾಯಣನೇ ಮುಖ್ಯ ಶಾಸಕ, ಉತ್ಪಾದಕ, ಸಂಹಾರಕ. ಎಲ್ಲ ಯಜ್ಞಗಳೂ ನಾರಾಯಣನ ಉದ್ದೇಶದಿಂದಲೇ ಮಾಡಲ್ಪಡುತ್ತವೆ. ಸರ್ವಶಾಸ್ತ್ರಗಳಿಗೆ ಮುಖ್ಯ ಪ್ರತಿಪಾದ್ಯ ನಾರಾಯಣ.

**ಈಶ್ವರಃ ಸರ್ವಭೂತಾನಾಂ ವಿಷ್ಣುಸ್ತ್ರೈಲೋಕ್ಯ ಪಾಲಕಃ ।**
**ತಸ್ಮಿನ್ನೇತಜ್ಜಗತ್ಸರ್ವಂ ತಿಷ್ಠತಿ ಪ್ರಭವತ್ಯಪಿ ॥**

ಸರ್ವಭೂತಗಳಿಗೂ ಈಶ್ವರನಾದ ವಿಷ್ಣುವು ಮೂರು ಲೋಕಗಳನ್ನೂ ಪಾಲಿಸುತ್ತಾನೆ. ಅವನನ್ನು ಆಧರಿಸಿಕೊಂಡೇ ಈ ಜಗತ್ತೆಲ್ಲ ನಿಂತಿದೆ. ಅವನಿಂದಲೇ ಈ ಜಗತ್ತೆಲ್ಲವೂ ಹುಟ್ಟುತ್ತದೆ.

**ಜಗತ್ ಸಂಹರತೆ ರುದ್ರಃ ಪಾಲನೆ ವಿಷ್ಣುರುಚ್ಯತೆ ।**
**ಉತ್ಪತ್ತೌ ಚಾಹಮೇ ವಾಜಃ ತಥಾನ್ಯೇ ಲೋಕಪಾಲಕಾಃ ॥**

ವಿಷ್ಣುವೇ ರುದ್ರ ಎಂಬ ಹೆಸರಿನಿಂದ ಆ ಎಲ್ಲ ಜಗತ್ತನ್ನು ಸಂಹರಿಸುತ್ತಾನೆ. ಸ್ವಯಂ

ವಿಷ್ಣು ಜಗತ್ತನ್ನು ಪಾಲನೆ ಮಾಡುತ್ತಾನೆ. ವಿಷ್ಣುವೇ ಬ್ರಹ್ಮ ಎಂಬ ನಾಮದಿಂದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಇದರಂತೆ ಎಲ್ಲ ಲೋಕಪಾಲಕರ ಹೆಸರಿನಿಂದ ಶ್ರೀಹರಿಯೇ ತತ್ ತತ್ ಶಬ್ದವಾಚ್ಯನಾಗಿ ಹದಿನಾಲ್ಕು ಲೋಕಗಳನ್ನು ಪಾಲನ ಮಾಡುತ್ತಾನೆ.

**ತಮೇವ ಶರಣಂ ಯಾತ ಸರ್ವ ಸಂಹಾರಕಾರಕಂ ।**
**ಸಪಿತಾ ಜನಿತಾಽಸ್ಮಾಕಂ ಕೀರ್ತಿದೋ ಮಧುಸೂದನಾಃ ॥**

ಸರ್ವರ ಸಂಹಾರ ಕಾರಣನಾದ ಶ್ರೀಹರಿಯನ್ನೇ ನೀವೆಲ್ಲರು ಶರಣು ಹೋಗಿರಿ. ಈ ಜಗತ್ತನ್ನು ಹುಟ್ಟಿಸಿದವನೂ ಸಂಹರಿಸುವವನೂ ಅವನೇ ಆದರೆ ನನ್ನಲ್ಲಿದ್ದು ನನ್ನ ಕೈಯಿಂದ ಸೃಷ್ಟಿಮಾಡಿಸಿ ಸೃಷ್ಟಿಕರ್ತಾ ಎಂದು ನನಗೆ ಕೀರ್ತಿಯನ್ನು ತಂದುಕೊಡುತ್ತಾನೆ. ರುದ್ರನಲ್ಲಿದ್ದು ಎಲ್ಲರನ್ನೂ ಸಂಹಾರ ಮಾಡಿಸಿ ರುದ್ರನಿಗೆ ಸಂಹಾರಕರ್ತಾ ಎಂದು ಕೀರ್ತಿಯನ್ನು ತಂದುಕೊಡುತ್ತಾನೆ. ನಾವೆಲ್ಲರೂ ನಿಮಿತ್ತ ಮಾತ್ರ. ನಮ್ಮೆಲ್ಲರನ್ನು ಹುಟ್ಟಿಸಿದ ತಂದೆಯಾದ ಆ ಶ್ರೀಹರಿಯೇ ವೇದಶಾಸ್ತ್ರಗಳಲ್ಲಿ **'ಯೋನಃಪಿತಾಜನಿತಾ'** ಎಂದು ಮುಂತಾಗಿ ಜನಿತಾ ಪಿತಾ ಮುಂತಾದ ಶಬ್ದಗಳಿಂದ ಹೊಗಳಲ್ಪಟ್ಟಿದ್ದಾನೆ.

ಹೀಗೆ ಬ್ರಹ್ಮದೇವರಿಂದ ಉಪದಿಷ್ಟರಾದ ಎಲ್ಲ ದೇವತೆಗಳು ಶ್ರೀ ಜನಾರ್ದನನನ್ನು ಆರಾಧಿಸಿ ನಮಸ್ಕರಿಸಿದರು. ಆದುದರಿಂದ ನಾರದ, ನೀನೂ ಕೂಡ ನಾರಾಯಣನನ್ನು ನೆನೆ. ಅವನ ನಾಮಸ್ಮರಣೆ ಮಾಡು **''ಓಂ ನಮೋ ನಾರಾಯಣಾಯ''** ಎಂಬ ಮಂತ್ರವನ್ನು ಸರ್ವದಾ ಜಪಿಸು. ಅಂಬರೀಷ, ಪ್ರಹ್ಲಾದ, ಭರತ ಮುಂತಾದ ಅನೇಕ ರಾಜಮಹಾರಾಜರು ಕೇಶವನ ಆರಾಧನೆಗೈದು ಮುಕ್ತಿಯನ್ನು ಹೊಂದಿದ್ದಾರೆ. ಸಾವಿರ ಜನ್ಮದಲ್ಲಿ ಒಮ್ಮೆಯಾದರೂ ಮನುಷ್ಯನಿಗೆ **''ದಾಸೋಽಹಂ ವಿಷ್ಣು ಭಕ್ತಾನಾಂ''** ನಾನು ವಿಷ್ಣುಭಕ್ತನ ದಾಸ ಎಂಬುವ ಬುದ್ಧಿ ಹುಟ್ಟಿದರೆ ವಿಷ್ಣುವಿನ ಸಾಲೋಕ್ಯವನ್ನೇ ಹೊಂದುತ್ತಾನೆ.

**ಭೀಷ್ಮ:-** ಹೀಗೆ ಹೇಳಿ ದೇವರ್ಷಿ ನಾರದರು ಅಲ್ಲಿಯೇ ಅಂತರ್ಧಾನ ಹೊಂದಿದರು. ಅವರ ಉಪದೇಶದಂತೆ ಧರ್ಮಾತ್ಮನಾದ ಪುಂಡರೀಕನು ನಾರಾಯಣೈ ಕನಿಷ್ಠನಾಗಿ **''ಓಂ ನಮೋ ನಾರಾಯಣಾಯ''** ಎನ್ನುವ ಅಷ್ಟಾಕ್ಷರ ಮಂತ್ರವನ್ನು ಜಪಿಸುತ್ತ, ಹೃದಯ ಪುಂಡರೀಕದಲ್ಲಿ ಶ್ರೀನಾರಾಯಣ ಧ್ಯಾನಮಾಡುತ್ತ, ಶಾಲಿಗ್ರಾಮಕ್ಷೇತ್ರದಲ್ಲಿ ಬಹುಕಾಲ ತಪಸ್ಸು ಮಾಡುತ್ತ ನಿಂತುಕೊಂಡ. ಸ್ವಪ್ನದಲ್ಲಿಯೂ ಕೂಡ ಮತ್ತೊಬ್ಬ ದೇವನನ್ನು ಉಪಾಸಿಸುತ್ತಿದ್ದಿಲ್ಲ. ತಪಸ್ಸು, ಬ್ರಹ್ಮಚರ್ಯ, ಶೌಚ, ನಾಮಸ್ಮರಣ ಮತ್ತು ಭಕ್ತಿವಿಶೇಷಗಳಿಂದ ಅವನು ಶ್ರೀಹರಿಯ ಪರಮ ಪ್ರಸಾದವನ್ನು ಹೊಂದಿ ದಿವ್ಯ ಸಿದ್ಧಿಯನ್ನು ಪಡೆದ. ಶಂಖಚಕ್ರಗದಾಪಾಣಿಯಾದ ಪೀತಾಬಂರ ಧಾರಿಯಾದ ಅಚ್ಯುತ ಒಂದು ದಿನ ಆ ಪುಂಡರೀಕನಿಗೆ ತನ್ನ ದಿವ್ಯ ದರ್ಶನವನ್ನು ಅನುಗ್ರಹಿಸಿದ. ಪುಂಡರೀಕನು ತನ್ನ ನಯನ ಪುಂಡರೀಕವನ್ನು ತೆರೆದು ತನ್ನ ಎದುರು ಪ್ರತ್ಯಕ್ಷವಾಗಿ ನಿಂತಿರುವ, ಹೊಂದಾವರೆಯಂತೆ ಸುಂದರ ನೇತ್ರವುಳ್ಳ ಸಾಕ್ಷಾತ್ ಶ್ರೀಹರಿಯನ್ನು ನೋಡಿದ. ಕೈಗಳಲ್ಲಿ ಶಂಖಚಕ್ರ, ಗದಾಪದ್ಮಗಳು, ನಡುವಿನಲ್ಲಿ ಪೀತಾಂಬರ, ಕೈಯಲ್ಲಿ ಕಂಕಣ, ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಹಾರ, ಬಾಹುಗಳಲ್ಲಿ ಕೇಯೂರ, ಹೃದಯದಲ್ಲಿ ಶ್ರೀವತ್ಸ,

ಕಂಠದಲ್ಲಿ ಕೌಸ್ತುಭ, ಹೃದಯದಲ್ಲಿ ವನಮಾಲೆ, ತಲೆಯ ಮೇಲೆ ಹೊಳೆಯುವ ಮಣಿ ಮುಕುಟ. ವಕ್ಷಸ್ಥಲದಲ್ಲಿ ಮುತ್ತಿನಮಾಲೆಯೊಂದಿಗೆ ಯಜ್ಞೋಪವೀತ. ಇಂಥ ದಿವ್ಯ ಸುಂದರವಾದ ಭಗವಂತನನ್ನು ಕಂಡ ಮೇಲೆ ಪುಂಡರೀಕನು ಆನಂದತುಂದಿಲನಾಗಿ ಕೈಜೋಡಿಸಿ ಭಗವಂತನನ್ನು ಪ್ರಾರ್ಥಿಸತೊಡಗಿದನು.

**ನಮೋಽಸ್ತು ವಿಷ್ಣವೇ ತುಭ್ಯಂ ಸರ್ವಲೋಕೈಕ ಚಕ್ಷುಷೇ ।**
**ನಿರಂಜನಾಯ ನಿತ್ಯಾಯ ನಿರ್ಗುಣಾಯ ಮಹಾತ್ಮನೇ ॥**

ಮಹಾತ್ಮನೂ, ಸತ್ವಾದಿ ಪ್ರಾಕೃತ ಗುಣರಹಿತನೂ, ನಿತ್ಯನೂ, ನಿರ್ದೋಷನೂ, ಆದ ಎಲ್ಲ ಲೋಕದ ಕಣ್ಣಾದ ವಿಷ್ಣುವೆ, ನಿನಗೆ ನನ್ನ ನಮಸ್ಕಾರ.

**ನಮಃ ಸಮಸ್ತ ವೇದಾಂತ ವಿಶ್ರುತಾತ್ಮ ವಿಭೂತಯೇ ।**
**ತ್ವಮೇವ ಸರ್ವದೇವೇಶ ಕಾರಣಂ ಕೈಟಭಾರ್ದನ ॥**

ಕೈಟಭ ಎಂಬ ದೈತ್ಯನನ್ನು ಮರ್ದನಮಾಡಿದ ಪರಮಾತ್ಮನೆ, ನೀನೇ ಈ ಪ್ರಪಂಚಕ್ಕೆಲ್ಲ ಕಾರಣ. ಎಲ್ಲ ವೇದವೇದಾಂತಗಳಲ್ಲಿ ನಿನ್ನ ಮಹಿಮೆಯು ಹೊಗಳಲ್ಪಟ್ಟಿದೆ. ಇಂಥ ನಿನಗೆ ನನ್ನ ನಮಸ್ಕಾರ. ಪುಂಡರೀಕನ ಈ ಸ್ತೋತ್ರವನ್ನು ಕೇಳಿ ಪ್ರೀತ ಪ್ರಸನ್ನನಾದ ಆ ಭಗವಂತನು ಸ್ನಿಗ್ಧಗಂಭೀರವಾದ ಧ್ವನಿಯಲ್ಲಿ ಹೇಳಿದ.

**ವಿಷ್ಣು:-** ಪುಂಡರೀಕ, ನಾನು ನಿನ್ನ ಮೇಲೆ ಸುಪ್ರಸನ್ನ. ನೀನು ಬೇಕಾದ ವರ ಬೇಡು. ನೀಡುವೆ.

**ಪುಂಡರೀಕ:-** ಸ್ವಾಮಿ, ನೀನೇನೋ ನನಗೆ ಹಿತವನ್ನು ಮಾಡಬೇಕು. ವಾಂಛಿತ-ವಾದುದನ್ನು ನೀಡಬೇಕು. ಎಂದು ಬಂದು ನಿಂತಿರುವೆ. ಆದರೆ ಅಂಥ ಹಿತಾಹಿತ ಪರಿಜ್ಞಾನ ನನಗೆಲ್ಲಿ? ನನಗೆ ಯಾವುದು ಹಿತವೋ ಅದನ್ನು ನೀನೇ ವಿಚಾರಮಾಡಿ ದಯಪಾಲಿಸು.

**ಮಹಾವಿಷ್ಣು :-** ಪುಂಡರೀಕ, ನಿನಗೆ ಕಲ್ಯಾಣವಾಗಲಿ. ಇಷ್ಟು ದಿನ ಪರೋಪಕಾರಕ್ಕಾಗಿಯೇ ನಿನ್ನ ದೇಹವನ್ನು ಸವೆಯಿಸಿದ ನೀನು ನನ್ನೊಡನೆ ವೈಕುಂಠ ಲೋಕಕ್ಕೆ ಬಂದುಬಿಡು. ಸರ್ವದಾ ನನ್ನ ಜೊತೆಗೇ ಇರುವೆಯಂತೆ. ಪರಮಾತ್ಮನು ಹೀಗೆ ನುಡಿದ ಕೂಡಲೇ ಪುಂಡರೀಕನ ಮೇಲೆ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಸ್ವರ್ಗಲೋಕದಲ್ಲಿ ದೇವದುಂದುಭಿಗಳು ಮೊಳಗಿದವು. ಬ್ರಹ್ಮಾದಿ ದೇವತೆಗಳು ಸಾಧು ! ಸಾಧು ! ಎಂದು ಪ್ರಶಂಸಿಸಿದರು. ಸಿದ್ಧರು ಹೊಗಳಿದರು. ಗಂಧರ್ವರು ಹಾಡಿದರು. ಕಿನ್ನರರು ಕುಣಿದರು. ಅನಂತರ ಆ ಜಗದ್ವೀಶ್ವರನು ಪುಂಡರೀಕನನ್ನು ಕರೆದುಕೊಂಡು ಗರುಡಾರೂಢನಾಗಿ ಅಲ್ಲಿಂದ ತೆರಳಿದ ಶ್ರೀಹರಿ.

**ಭೀಷ್ಮ:-** ಧರ್ಮರಾಜ, ಆದುದರಿಂದ ನೀನೂ ಸಹ ಆ ವಿಷ್ಣುವಿನಲ್ಲೇ ಮನಸ್ಸನ್ನು ನೆಟ್ಟು ಆ ವಿಷ್ಣುಭಕ್ತರನ್ನು ವಿಶೇಷವಾಗಿ ಪೂಜಿಸು. ಭಗವದ್ಭಕ್ತರ ಪೂಜೆಯಿಂದ ಭಗವಂತ ಪ್ರೀತನಾಗುತ್ತಾನೆ.

**ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।**
**ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥**

'ಹರಿ' ಎಂಬ ಎರಡಕ್ಷರಗಳನ್ನು ಯಾರುಚ್ಚರಿಸುತ್ತಾರೋ ಅವರು ಮೋಕ್ಷಕ್ಕಾಗಿ ಹೊರಟುನಿಂತಂತೆಯೇ ಸರಿ.

**ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಮ ಮಂಗಲಂ ।**
**ಯೇಷಾಮಿಂದೀವರ ಶ್ಯಾಮಃ ಹೃದಯಸ್ಥೋ ಜನಾರ್ದನಃ ॥**

ಕನ್ನೈದಿಲೆಯಂತೆ ಕಾಂತಿಯುಳ್ಳ ಶ್ರೀಹರಿಯನ್ನು ಹೃದಯಲ್ಲಿಟ್ಟುಕೊಂಡು ಯಾರು ಧ್ಯಾನಗ್ಯೆಯುವರೋ, ಅವರಿಗೆ ಸೋಲು ಎಲ್ಲಿ? ಅವರಿಗೆ ಯಾವಾಗಲೂ ವಿಜಯವು ಕಟ್ಟಿಟ್ಟದ್ದು. ಅವರಿಗೆ ಎಲ್ಲ ವಿಧವಾದ ಸಿದ್ಧಿ, ಸಮೃದ್ಧಿಗಳ ಲಾಭವು ನಿಶ್ಚಿತ.

**ಮಹಾದೇವ:-** ಪಾರ್ವತಿ, ವಿಷ್ಣುವಿನ ಈ ನಾಮಮಾಹಾತ್ಮ್ಯವನ್ನು ಕೇಳಿದವರು ಚತುರ್ವಿಧ ಪುರುಷಾರ್ಥವನ್ನು ಹೊಂದುತ್ತಾರೆ.

**ಕಲೌ ವೈ ಹರಿಗೀತಂ ತು ಸ್ವಗೃಹೇ ವಾ ವಿಶೇಷತಃ ।**
**ಸಾಮಗಾನ ಸಮಂ ಪ್ರೋಕ್ತಂ ದೇವಾರ್ಚನ ಸಮಾಧಿಷು ॥**

ಕಲಿಯುಗದಲ್ಲಿ ತನ್ನ ಮನೆಯಲ್ಲಿ ದೇವರ ಪೂಜಾ ಸಮಯದಲ್ಲಿ ಮತ್ತು ಧ್ಯಾನ, ಉಪಾಸನೆ, ಆರಾಧನೆಯ ಸಂದರ್ಭಗಳಲ್ಲಿ ಶ್ರೀಹರಿಯ ನಾಮಪಠನ, ಮಹಿಮಾ ಗಾಯನ ಇವು ಸಾಮವೇದದ ಗಾಯನಕ್ಕೆ ಸಮವಾಗಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣುವಿನ ಮಾಹಾತ್ಮ್ಯ ಎಂಬ ಎಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*



## ಗಂಗಾ ಮಾಹಾತ್ಮ್ಯ

**ಅಧ್ಯಾಯ - ೭೯**

**ಪಾರ್ವತಿ:-** ಪ್ರಭು, ಗಂಗೆಯ ಮಹಾಮಹಿಮೆಯನ್ನು ನನಗೆ ನಿರೂಪಣೆ ಮಾಡು. ನಾನು ಹಿಂದೆ ಗಂಗೆಯ ಉತ್ಪತ್ತಿ ಹೇಗಾಯಿತೆಂಬುದನ್ನು ಕೇಳಿರುವೆ. ಆದರೆ ಅದರ ಮಹಿಮೆಯನ್ನು ಕೇಳಿಲ್ಲ. ಅದನ್ನು ನೀನು ಈಗ ನಿರೂಪಿಸು.

**ಮಹಾದೇವ:-** ಹಿಂದೆ ಭೀಷ್ಮರು ಶರತಲ್ಪದಲ್ಲಿ ಮಲಗಿಕೊಂಡಾಗ ಅವರನ್ನು ಕಾಣಲಿಕ್ಕಾಗಿ ಅತ್ರಿ, ವಶಿಷ್ಠ, ಪುಲಹ, ವಿಶ್ವಾಮಿತ್ರ, ಜಮದಗ್ನಿ, ಮಾರ್ಕಂಡೇಯ, ನಾರದ, ಪರ್ವತ, ಪರಶುರಾಮ, ಋಚೀಕ, ಬೃಹಸ್ಪತಿ, ವ್ಯಾಸ, ದುರ್ವಾಸ, ಗಾಲವ, ಭರದ್ವಾಜ ಮೊದಲಾದ ಎಲ್ಲ ಋಷಿಗಳೂ ಆಗಮಿಸಿದ್ದರು. ಅವರೆಲ್ಲರನ್ನೂ ಧರ್ಮರಾಜನು ಪೂಜಿಸಿ, ಯಥೋಚಿತವಾದ ಆಸನಗಳ ಮೇಲೆ ಕೂಡಿಸಿ ನಮಸ್ಕರಿಸಿ ಭೀಷ್ಮರನ್ನು ಕುರಿತು ಪ್ರಶ್ನಿಸಿದ.

**ಧರ್ಮರಾಜ:-** ಈ ಪ್ರಪಂಚದಲ್ಲಿ ಪುಣ್ಯ ದೇಶವಾವುದು? ಶ್ರೇಷ್ಠ ಪರ್ವತಗಳು ಯಾವವು? ಉತ್ತಮ ಆಶ್ರಮಗಳು ಯಾವವು? ಧರ್ಮಾರ್ಥಿಗಳು ಯಾವ ಸ್ಥಾನಗಳನ್ನು ಆಶ್ರಯಿಸಬೇಕು?

**ಭೀಷ್ಮ:-** ನರೋತ್ತಮ, ಈ ವಿಷಯದಲ್ಲಿ ಶಿಬಿಚಕ್ರವರ್ತಿ ಹಾಗೂ ಓರ್ವ ಸಿದ್ಧನ ನಡುವೆ ನಡೆದ ಸಂವಾದವನ್ನು ಹೇಳುವೆ ಕೇಳು.

ಪೂರ್ವಕಾಲದಲ್ಲಿ ಉಂಛ ವೃತ್ತಿಯಿಂದ ಉಪಜೀವನ ಮಾಡುವ ಓರ್ವ ಸಿದ್ಧಪುರುಷನು ಭೂಮಂಡಲದಲ್ಲಿ ಎಲ್ಲೆಡೆಗೆ ಸಂಚರಿಸುತ್ತ ಶಿಬಿಚಕ್ರವರ್ತಿಯ ಮನೆಗೆ ಬಂದ. ರಾಗದ್ವೇಷರಹಿತನಾದ ಆ ಸಿದ್ಧ ವೈಷ್ಣವರಲ್ಲಿ ಶ್ರೇಷ್ಠ. ಸದಾ ನಾರಾಯಣೈ ಕನಿಷ್ಠ, ಯೋಗಾಭ್ಯಾಸದಲ್ಲಿ ನಿತ್ಯಸಕ್ತ, ಶಂಖಚಕ್ರಾದಿ ಚಿಹ್ನಧಾರಕ. ತ್ರಿಕಾಲದಲ್ಲಿಯೂ ಭಕ್ತಿಯಿಂದ ಶ್ರೀಹರಿಯನ್ನು ಪೂಜಿಸುತ್ತಿದ್ದ. ಅಂಥ ಮಹಾಪುರುಷ ತನ್ನ ಮನೆಗೆ ಬಂದದ್ದನ್ನು ನೋಡಿ ಅವನಿಗೆ ಯಥೋಚಿತವಾದ ಆತಿಥ್ಯ ನೀಡಿ ಶಿಬಿ ಚಕ್ರವರ್ತಿಯು ಕೈ ಮುಗಿದು ಕೇಳಿದ.

**ಶಿಬಿ:-** ಪೂಜ್ಯರೇ, ಪುಣ್ಯ ದೇಶಗಳು, ಯಾವವು? ಪುಣ್ಯ ಪರ್ವತಗಳು ಯಾವವು? ಪುಣ್ಯಾಶ್ರಮಗಳು ಯಾವವು? ಇದನ್ನು ನನಗೆ ತಿಳಿಸಿ.

**ಸಿದ್ಧ:-** ಯಾವ ದೇಶದಲ್ಲಿ ದೇವನದಿಯಾದ ಗಂಗೆ ಹರಿದಿರುವಳೋ, ಆ ದೇಶ ಪುಣ್ಯ ದೇಶ. ಆ ಪರ್ವತ ಪುಣ್ಯ ಪರ್ವತ. ಆ ಗಂಗಾತೀರದಲ್ಲಿರುವ ಆಶ್ರಮಗಳು ಪುಣ್ಯಾಶ್ರಮಗಳು. ಗಂಗೆಯ ನೀರಿನಲ್ಲಿ ಮೀಯುವದರಿಂದ ಬರುವಷ್ಟು ಪುಣ್ಯ ನೂರು ಯಜ್ಞಗಳಿಂದಲೂ ಬರಲಾರದು. ಸಾವಿರ ಚಂದ್ರಾಯಣ ವ್ರತಗಳನ್ನು ಮಾಡಿದರೆ ಬರುವ ಪುಣ್ಯ ಕೇವಲ ಗಂಗಾಸ್ನಾನದಿಂದ ಬರುತ್ತದೆ. ಬ್ರಹ್ಮಹತ್ಯೆ, ಗೋಹತ್ಯೆ, ಸುರಾಪಾನ ಮುಂತಾದ ಮಹಾಪಾಪಗಳೆಲ್ಲವೂ ಬಿಟ್ಟು ಹೋಗುವವು. ಈ ದೇವನದೀ ಸ್ನಾನದಿಂದ, ಅದರಲ್ಲಿಯೂ ಗಂಗಾ, ಯಮುನಾ ಸರಸ್ವತೀ ಈ ಮೂರು ತ್ರಿವೇಣೀಸಂಗಮದಲ್ಲಿ ಸ್ನಾನ ಮಾಡಿ ಮಾಧವನ ದರ್ಶನ ಮಾಡಿ, ವಟವೃಕ್ಷದ ದರ್ಶನ ಮಾಡಿದವರು ವೈಕುಂಠಲೋಕಕ್ಕೆ ಹೋಗುತ್ತಾರೆ. ಗಂಗಾದ್ವಾರ, ಕುಶಾವ್ರತ, ನೀಲಪರ್ವತ, ಕನಖಲತೀರ್ಥ, ಇಷ್ಟು ಕಡೆ ಸ್ನಾನ ಮಾಡಿದವರಿಗೆ ಪುನರ್ಜನ್ಮವಿಲ್ಲ.

**ದೇವಾನಾಂ ಪ್ರವರೋ ವಿಷ್ಣುಃ ಯಜ್ಞಾನಾಂ ಚಾಶ್ವಮೇಧತಃ ।**
**ಅಶ್ವತ್ಥಃ ಸರ್ವವೃಕ್ಷಾಣಾಂ ನದೀ ಭಾಗೀರಥೀ ವರಾ ॥**

ದೇವತೆಗಳಲ್ಲಿ ವಿಷ್ಣುವು ಶ್ರೇಷ್ಠ. ಯಜ್ಞಗಳಲ್ಲಿ ಅಶ್ವಮೇಧವು ಉತ್ತಮ. ಸಕಲ ವೃಕ್ಷಗಳಲ್ಲಿ ಅಶ್ವತ್ಥವೃಕ್ಷವು ಪರಮ ಶ್ರೇಷ್ಠ. ನದಿಗಲ್ಲಿ ಗಂಗಾ ನದಿಯು ಸರ್ವಶ್ರೇಷ್ಠ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಗಂಗಾ ಮಾಹಾತ್ಮ್ಯ ಎಂಬ ಎಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—○—

## ವೈಷ್ಣವರ ಲಕ್ಷಣ

**ಅಧ್ಯಾಯ - ೮೦**

**ಪಾರ್ವತಿ:-** ವಿಶ್ವೇಶ್ವರ, ವೈಷ್ಣವರ ಲಕ್ಷಣವಾವುದು? ಆ ವಿಷ್ಣುಭಕ್ತರ ಮಹಿಮೆಯೇನು? ಇದೆಲ್ಲವನ್ನೂ ನನಗೆ ಹೇಳು.

**ಮಹಾದೇವ:-**

**ವಿಷ್ಣೋರಯಂ ಯತಃ ಪ್ರೋಕ್ತೋಹ್ಯತೋ ವೈ ವೈಷ್ಣವೋ ಮತಃ ।**

ವಿಷ್ಣುವಿನ ಸಂಬಂಧಿಯಾದವ ಅರ್ಥಾತ್ ವಿಷ್ಣುವಿನ ಭಕ್ತ, ವೈಷ್ಣವ ಎಂದೆನಿಸುತ್ತಾನೆ.

**ಶೌಚ ಸತ್ಯ ಕ್ಷಮಾಯುಕ್ತೋ ರಾಗದ್ವೇಷ ವಿವರ್ಜಿತಃ ।**
**ವೇದವಿದ್ಯಾ ವಿಚಾರಜ್ಞೋ ಯಃ ಸ ವೈಷ್ಣವ ಉಚ್ಯತೇ ॥**

ಶೌಚ, ಸತ್ಯ, ಕ್ಷಮ, ಮುಂತಾದ ಗುಣಸಹಿತನೂ, ರಾಗದ್ವೇಷ ರಹಿತನೂ ವೇದವಿದ್ಯೆಯ ಎಲ್ಲ ವಿಚಾರಬಲ್ಲವನೂ ಆದ ವಿಷ್ಣುಭಕ್ತ ವೈಷ್ಣವ ಎನ್ನಿಸುತ್ತಾನೆ.

**ಕಂಠೇ ಮಾಲಾಧರೋ ಯಸ್ತು ಮುಖೇ ರಾಮಂ ಸದೋಚ್ಚರೇತ್ ।**
**ಗಾನಂ ಕುರ್ಯಾತ್ ಸದಾ ಭಕ್ತ್ಯಾ ಸ ನರೋ ವೈಷ್ಣವಃ ಸ್ಮೃತಃ ॥**

ಕೊರಳಲ್ಲಿ ತುಳಸೀಮಾಲೆಯನ್ನು ಧರಿಸಿ ಬಾಯಿಯಿಂದ ರಾಮನಾಮವನ್ನು ಉಚ್ಚರಿಸುತ್ತ ಭಕ್ತಿಯಿಂದ ಭಗವಂತನನ್ನು ಗಾನರೂಪದಿಂದ ಕೊಂಡಾಡುವವನು ವೈಷ್ಣವ. ಪ್ರತಿದಿನವೂ ಶಾಲಿಗ್ರಾಮ, ಚಕ್ರಾಂಕಿತ, ಶ್ರೀಕೃಷ್ಣನ ಪ್ರತಿಮೆ, ಇವುಗಳ ಪೂಜೆಯನ್ನು ವಿಧಿಪೂರ್ವಕವಾಗಿ ಯಾರು ಮಾಡುವರೋ, ಮತ್ತು ಶ್ರೀಹರಿಯಲ್ಲಿ ನವ ವಿಧವಾದ ಭಕ್ತಿಯನ್ನು ಯಾರು ಮಾಡುವರೋ ಅಂಥ ನರನು ವೈಷ್ಣವ ಎಂದು ಕರೆಯಲ್ಪಡುವನು.

**ಕಲೌ ಧನ್ಯತಮಾಃ ಶೂದ್ರಾಃ ವಿಷ್ಣುಧ್ಯಾನ ಪರಾಯಣಾಃ ।**
**ಇಹ ಲೋಕೇ ಸುಖಂ ಭುಕ್ತ್ವಾ ಯಾಂತಿ ವಿಷ್ಣುಂ ಸನಾತನಮ್ ॥**

ಈ ಕಲಿಯುಗದಲ್ಲಿ ವಿಷ್ಣುವಿನ ಧ್ಯಾನದಲ್ಲಿಯೇ ಆಸಕ್ತರಾಗಿ ಭಗವನ್ನಾಮವನ್ನು ಕೊಂಡಾಡುವ ಶೂದ್ರರೂ ಸಹ ಧನ್ಯಧನ್ಯರು. ಅವರು ಇಲ್ಲಿರುವವರೆಗೆ ಸುಖವಾಗಿದ್ದು ಮುಂದೆ ವೈಕುಂಠಲೋಕಕ್ಕೆ ಪ್ರಯಾಣ ಬೆಳೆಸುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವೈಷ್ಣವರ ಲಕ್ಷಣ ಎಂಬ ಎಂಬತ್ತನೇಯ ಅಧ್ಯಾಯ ಮುಗಿದುದು*

—o—

## ಸರ್ವ ಮಾಸಗಳ ವಿಧಿವಿಧಾನಗಳ ವರ್ಣನೆ

**ಅಧ್ಯಾಯ - ೮೧**

**ಪಾರ್ವತೀ:-** ಎಲ್ಲ ಮಾಸಗಳ ವಿಧಿವಿಧಾನಗಳನ್ನು ಹೇಳಿರಿ. ಯಾವ ತಿಂಗಳಲ್ಲಿ ಯಾವ ತಿಥಿಯಲ್ಲಿ ಯಾವ ದೇವರ ಪೂಜೆ ಮಾಡಬೇಕು? ಅದರ ಮಹಿಮೆಯೇನು? ಎಲ್ಲವನ್ನೂ ನನಗೆ ತಿಳಿಸಿ ಹೇಳಿರಿ.

**ಮಹಾದೇವ :-** ಚೈತ್ರ ಶುಕ್ಲಪಕ್ಷದ ಏಕಾದಶಿಯ ದಿನದಂದು ದೇವರಿಗೆ ಡೋಲೋತ್ಸವವನ್ನು ಮಾಡಬೇಕು. ತೊಟ್ಟಿಲಲ್ಲಿ ದೇವರನ್ನು ಕೂಡಿಸಿ ಮಂತ್ರ, ಸ್ತೋತ್ರ,

ಹಾಡುಗಳಿಂದ ತೂಗುತ್ತ ಡೋಲೋತ್ಸವವನ್ನು ಮಾಡಿದವರು ಸಾವಿರ ಪಾಪಗಳನ್ನು ಮಾಡಿದ್ದರೂ ನಷ್ಟವಾಗುತ್ತವೆ. ಶ್ರೀಕೃಷ್ಣನನ್ನು ತೂಗುಮಂಚದ ಮೇಲೆ ಕೂಡಿಸಿ ಹಾಡಿ ಪಾಡಿ ಭಗವನ್ಮಹಿಮೆಯನ್ನು ಕೊಂಡಾಡುತ್ತ ಮಂಚ ಅಥವಾ ತೊಟ್ಟಿಲನ್ನು ಕೈಯಿಂದ ತೂಗಬೇಕು. ಡೋಲಾರೂಢನಾದ ಗೋವಿಂದನ ಎದುರು ಏಕಾದಶೀ ದಿನ ಜಾಗರ ಮಾಡಬೇಕು. ಕೇಶವನ ಈ ಡೋಲೋತ್ಸವವನ್ನು ನೋಡಲು, ವಾಸುಕಿ ಮೊದಲಾದ ಸರ್ಪಗಳೂ, ಇಂದ್ರಾದಿ ದೇವತೆಗಳೂ, ಪ್ರಹ್ಲಾದ ಮೊದಲಾದ ಭಕ್ತರೂ ಬಂದು ನಿಂತಿರುತ್ತಾರೆ. ತೊಟ್ಟಿಲು ಅಥವಾ ಮಂಚದಲ್ಲಿ ದೇವರನ್ನು ದಕ್ಷಿಣಕ್ಕೆ ಮುಖ ಮಾಡಿಸಿ ಕೂಡಿಸಬೇಕು. ಮತ್ತು ಆ ದೇವರನ್ನು ವಿಧಿಪೂರ್ವಕವಾಗಿ ಪೂಜೆ ಮಾಡಬೇಕು. ತೊಟ್ಟಿಲಲ್ಲಿರುವ ಶ್ರೀ ಕೃಷ್ಣನನ್ನು

**ಓಂ ಡೋಲಾರೂಢಾಯ ವಿದ್ಮಹೇ ಮಾಧವಾಯಚ ಧೀಮಹಿ ।**
**ತನ್ನೋ ದೇವಃ ಪ್ರಚೋದಯಾತ್ ॥**

ಎಂಬ ಗಾಯತ್ರೀಯಿಂದ ಪೂಜೆ ಮಾಡಬೇಕು. ಮತ್ತು **''ಮಾಧವಾಯ ಗೋವಿಂದಾಯ ಶ್ರೀಕಂಠಾಯ ನಮೋನಮಃ''** ಎಂಬ ಮಂತ್ರದಿಂದ ವಿಧಿಪೂರ್ವಕವಾಗಿ ವಿಷ್ಣುವಿನ ಪೂಜೆಯನ್ನು ಮಾಡಬೇಕು. ತೊಟ್ಟಿಲಲ್ಲಿ ಲಕ್ಷ್ಮೀದೇವಿಯನ್ನು ವಿಷ್ಣುವಿನ ಪಕ್ಕದಲ್ಲಿ ಕೂಡಿಸಬೇಕು. ದೇವರ ಎದುರು ನಾರದ ಮೊದಲಾದ ಋಷಿಗಳನ್ನೂ, ವಿಷ್ವಕ್ಸೇನ ಮೊದಲಾದ ಪಾರ್ಷದರನ್ನೂ ಇರಿಸಿರಬೇಕು. ತಾಳ, ತಮ್ಮಟೆ, ಶಂಖ, ಜಾಗಟೆ, ಭೇರಿ ಮುಂತಾದ ಐದು ಮಂಗಳವಾದ್ಯಗಳನ್ನು ಮೊಳಗಿಸುತ್ತ ಜಾಗರದಲ್ಲಿ ಯಾಮ ಯಾಮಕ್ಕೆ ಒಮ್ಮೆ ಪ್ರಹರಕ್ಕೊಮ್ಮೆ ಮಂಗಳಾರತಿಯನ್ನು ಮಾಡಬೇಕು. **''ಓಂ ನಮೋ ಭಗವತೇ ವಾಸುದೇವಾಯ''** ಎಂಬ ಮಂತ್ರವನ್ನು ಕನಿಷ್ಠ ನೂರಎಂಟು ಸಲ ದೇವರೆದುರು ಪಠಿಸಬೇಕು. ತೆಂಗಿನಕಾಯಿ, ಬಾಳೆಹಣ್ಣು, ಹಾಲು, ಮೊಸರು, ತುಪ್ಪ ಮೊದಲಾದವುಗಳನ್ನು ಭಗವಂತನಿಗೆ ನಿವೇದಿಸಬೇಕು.

**ದೇವದೇವ ಜಗನ್ನಾಥ ಶಂಖಚಕ್ರಗದಾಧರ ।**
**ಅರ್ಘ್ಯಂ ಗೃಹಾಣ ಮೇ ದೇವ ಕೃಪಾಂ ಕುರು ಮಮೋಪರಿ ॥**

ಎಂಬ ಮಂತ್ರದಿಂದ ದೇವರಿಗೆ ಅರ್ಘ್ಯವನ್ನು ನೀಡಬೇಕು. ಜಾಗರಕ್ಕೆ ಬಂದವರೆಲ್ಲರೂ ದೇವರ ತೊಟ್ಟಿಲನ್ನು ತೂಗಬೇಕು. ಡೋಲಾರೂಢನಾದ ಗೋವಿಂದನ ಎದುರು ಪುರಾಣ, ಪ್ರವಚನ, ಗಾಯನ, ನರ್ತನ, ವಾದನ ಮುಂತಾದ ಬಗೆ ಬಗೆಯ ಸೇವೆಯನ್ನು ಸಲ್ಲಿಸಬೇಕು. ದೇವರ ಈ ಡೋಲೋತ್ಸವವು ನಡೆದಲ್ಲಿ ಜಗತ್ತಿನಲ್ಲಿಯ ಎಲ್ಲ ತೀರ್ಥಕ್ಷೇತ್ರಗಳೂ ಬಂದಿರುತ್ತವೆ. ಆದುದರಿಂದ ದೇವರ ಈ ತೊಟ್ಟಿಲ ಪೂಜೆಯನ್ನು ಒಂದು ದೊಡ್ಡ ಉತ್ಸವದಂತೆ ಉತ್ಸಾಹದುಂಬಿ ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಸರ್ವ ಮಾಸಗಳ ವಿಧಿವಿಧಾನಗಳ ವರ್ಣನೆ ಎಂಬ ಎಂಬತ್ತೊಂದನೇಯ ಅಧ್ಯಾಯ ಮುಗಿದುದು*

—o—

# ಚೈತ್ರಶುದ್ಧ ದ್ವಾದಶೀ ದಿನದಂದು ದಮನಕೋತ್ಸವದ ವಿಧಿ

ಅಧ್ಯಾಯ - ೮೨

**ಮಹಾದೇವ:-** ಈ ಚೈತ್ರಮಾಸದಲ್ಲಿ ದ್ವಾದಶಿಯ ದಿನ ದಮನಕೋತ್ಸವವನ್ನು ವಿಧಿಪೂರ್ವಕವಾಗಿ ಮಾಡಬೇಕು. ಅದರಲ್ಲಿಯೂ ವೈಷ್ಣವರು ಈ ದಮನಕ ಸೇವೆಯನ್ನು ಸಲ್ಲಿಸಲೇಬೇಕು. ಚೈತ್ರಶುದ್ಧ ದ್ವಾದಶಿಯ ದಿನ ದಮನಮಂಜರಿಯಿಂದ ('ದವನ' ದಿಂದ) ದೇವಪೂಜೆ ಮಾಡಿದರೆ ವಿಶೇಷವಾಗಿ ಭಗವತ್ಪ್ರೀತಿಯುಂಟಾಗುವದು. ಇದಕ್ಕೂ ಮೊದಲು ಉಪವನಕ್ಕೆ ಹೋಗಿ ರತಿಯಿಂದೊಡಗೂಡಿದ ಕಾಮನ ಪೂಜೆಯನ್ನು ಮಾಡಬೇಕು.

**ಕಾಮದೇವ ನಮಸ್ತೇಸ್ತು ವಿಶ್ವಮೋಹನ ಕಾರಕ ।**
**ವಿಷ್ಣೋರರ್ಥೇ ವಿಚೇಷ್ಯಾಮಿ ಕೃಪಾಂ ಕುರು ಮಮೋಪರಿ ॥**

ಎಂದು ಪ್ರಾರ್ಥಿಸಿ ದವನದಳಗಳನ್ನು ಆಯ್ದುಕೊಂಡು, ಕರಂಡಕದಲ್ಲಿ ತುಂಬಿಕೊಂಡು ಊದಿಸುತ್ತ, ಬಾರಿಸುತ್ತ ವೈಭವದಿಂದ ಮನೆಗೆ ತೆಗೆದುಕೊಂಡು ಬರಬೇಕು. ಏಕಾದಶೀ ದಿನ ಅಧಿವಾಸನ ಪೂರ್ವಕವಾಗಿ ಪೂಜೆಯನ್ನು ಮಾಡಬೇಕು. ದೇವರ ಮುಂದೆ ಸರ್ವತೋಭದ್ರ ಮಂಡಲ ಮಾಡಿ ರತಿ ಕಾಮರನ್ನು ಸ್ಥಾಪನೆ ಮಾಡಿ ಅವರ ಮುಂದೆ ಬಿಳಿ ಬಟ್ಟೆ ಹಾಸಿ, ಅಲ್ಲಿ ಆಯ್ದುತಂದ ದವನದ ಕರಂಡಕವನ್ನು ಸ್ಥಾಪಿಸಬೇಕು. ಅನಂತರ ಕಾಮನ ಪೂಜೆಯನ್ನು ಮುಂದೆ ಹೇಳಿದ ಮಂತ್ರಗಳಿಂದ ಮಾಡಬೇಕು.

**ಕ್ಲೀಂ ಕಾಮದೇವಾಯ ನಮಃ**
**ಹ್ರೀಂ ರತ್ಯೈ ನಮಃ**

ಎಂದು ಹೇಳಿ ಗಂಧ, ಪುಷ್ಪ, ಧೂಪ, ದೀಪ, ಮಂಗಳಾರತಿಗಳನ್ನು ಮಾಡಿ ಪೂಜಿಸಬೇಕು.

**ಮದನಾಯ ನಮಃ** ಎಂದು ಪೂರ್ವ ದಿಕ್ಕಿನಲ್ಲಿ ಕಾಮನನ್ನು ಆವಾಹಿಸಬೇಕು.

**ಮನ್ಮಥಾಯ ನಮಃ** ಎಂದು ಆಗ್ನೇಯ ದಿಕ್ಕಿನಲ್ಲಿ
**ಕಂದರ್ಪಾಯ ನಮಃ** ಎಂದು ದಕ್ಷಿಣ ದಿಕ್ಕಿನಲ್ಲಿ
**ಅನಂಗಾಯ ನಮಃ** ಎಂದು ನೈರುತ್ಯ ದಿಕ್ಕಿನಲ್ಲಿ
**ಭಸ್ಮಶರೀರಾಯ ನಮಃ** ಎಂದು ಪಶ್ಚಿಮ ದಿಕ್ಕಿನಲ್ಲಿ
**ಸ್ಮರಾಯ ನಮಃ** ಎಂದು ವಾಯವ್ಯ ದಿಕ್ಕಿನಲ್ಲಿ
**ಈಶ್ವರಾಯ ನಮಃ** ಎಂದು ಉತ್ತರ ದಿಕ್ಕಿನಲ್ಲಿ
**ಪುಷ್ಪಬಾಣಾಯ ನಮಃ** ಎಂದು ಈಶಾನ್ಯ ದಿಕ್ಕಿನಲ್ಲಿ

ಕಾಮನನ್ನು ಪೂಜಿಸಿ ಮಧ್ಯದಲ್ಲಿ ಕೇಶವನನ್ನು ಪೂಜಿಸಬೇಕು. ದೇವರ ಮುಂದೆ ಇರಿಸಿದ ದವನ ಮಂಜರಿಗಳನ್ನೂ ಪೂಜಿಸಿ ''ತತ್ಪುರುಷಾಯ ವಿದ್ಮಹೇ ಕಾಮದೇವಾಯ ಧೀಮಹಿ ತನ್ನೋಽನಂಗಃ ಪ್ರಚೋದಯಾತ್'' ಎಂದು ಕಾಮಗಾಯತ್ರಿಯಿಂದ ನೂರೆಂಟು ಸಲ ಅಭಿಮಂತ್ರಿಸಿ ನಮಸ್ಕಾರ ಮಾಡಬೇಕು. ಅನಂತರ

**ದೇವ ದೇವ ನಮಸ್ತೇಸ್ತು ಶ್ರೀ ವಿಶ್ವೇಶ ನಮೋಸ್ತು ತೇ ।**
**ಹೃಸ್ಥಾನ್ ಪೂರಯ ಮೇ ವಿಷ್ಣೋ ಕಾಮಾನ್ ಕಾಮೇಶ್ವರೀ ಪ್ರಿಯ॥**

ಕಾಮನ ಅಂತರ್ಯಾಮಿಯಾದ ಪ್ರದ್ಯುಮ್ನರೂಪಿ ಶ್ರೀಹರಿಯೇ, ನಿನಗೆ ನನ್ನ ನಮಸ್ಕಾರ. ನೀನು ನನ್ನ ಮನೋರಥಗಳನ್ನೆಲ್ಲ ಪೂರ್ತಿಮಾಡು. ಅನಂತರ ಕೈಯಲ್ಲಿ ದವನಮಂಜರಿಯ ಒಂದು ಮುಷ್ಟಿ ದಳಗಳನ್ನು ಹಿಡಿದು ''ಓಂ ನಮೋ ನಾರಾಯಣಾಯ' ಎಂಬ ಮೂಲ ಮಂತ್ರದಿಂದ ವಿಷ್ಣುವಿಗೆ ಸಮರ್ಪಿಸಬೇಕು. ಅನಂತರ ಗಂಧ, ಧೂಪ, ನೈವೇದ್ಯ, ಮಂತ್ರ ಪುಷ್ಪ ಮುಂತಾದವುಗಳಿಂದ ಪೂಜಿಸಿ ಗೀತ, ವಾದ್ಯ, ನೃತ್ಯಗಳಿಂದ ಸೇವೆ ಸಲ್ಲಿಸಬೇಕು. ದೇವರ ಮುಂದೆ ಸ್ಥಾಪಿಸಿದ ಕಲಶದಲ್ಲಿನ ನೀರಿನಲ್ಲಿ ದೇವರಿಗೆ ಜಲಕ್ರೀಡೆಯನ್ನು ಮಾಡಿಸಬೇಕು. ಅನಂತರ ತನ್ನ ಗುರುವನ್ನು ವಸ್ತ್ರ, ಅಲಂಕಾರ, ದಕ್ಷಿಣಾದಿಗಳಿಂದ ಪೂಜಿಸಬೇಕು. ಈ ರೀತಿ ದವನಮಂಜರಿಯಿಂದ ವಿಷ್ಣುವನ್ನು ಪೂಜೆ ಮಾಡಿದವ, ಹಾಗೂ ಇದನ್ನು ನೋಡಿದವ ಸರ್ವಪಾಪಗಳಿಂದ ಮುಕ್ತರಾಗುವರು.

ಚೈತ್ರ ವೈಶಾಖ ಮಾಸದಲ್ಲಿ ದವನಮಂಜರಿಯಿಂದ ದೇವರ ಪೂಜೆಯನ್ನು ಮಾಡಿದರೆ ಸಾವಿರ ಗೋದಾನ ಮಾಡಿದ ಫಲ. ವಸಂತ ಋತುವಿನಲ್ಲಿ ಮಲ್ಲಿಗೆಯ ಹೂವಿನಿಂದ ದೇವರ ಪೂಜೆ ಮಾಡಿದವನು ಮುಕ್ತಿಭಾಗಿ ಆಗುವನು. ದವನ, ಮರುಗ ಇವೆರಡೂ ಶ್ರೀಹರಿಗೆ ತಕ್ಷಣದಲ್ಲಿ ಸಂತೋಷವನ್ನು ಮಾಡುವ ವಸ್ತುಗಳು. ಅದುದರಿಂದ ಒಂದೊಂದೇ ದವನದ ದಳಗಳನ್ನು ತೆಗೆದುಕೊಂಡು ದೇವರ ನಾಮೋಚ್ಚಾರ ಮಾಡುತ್ತ ಭಗವಂತನಿಗೆ ಏರಿಸಿದರೆ ಮನುಷ್ಯನು ಚತುರ್ಭುಜನಾದ ಶ್ರೀಹರಿಯ ಸೇವೆಗಾಗಿ ವೈಕುಂಠ ಲೋಕಕ್ಕೆ ತೆರಳುವನು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಂಬತ್ತರಡನೇಯ ಅಧ್ಯಾಯ ಮುಗಿದುದು*

—o—

## ವೈಶಾಖ, ಜೇಷ್ಠ, ಆಷಾಢ ಮಾಸಗಳಲ್ಲಿ ವಿಷ್ಣುವಿಗೆ ಜಲಶಯನೋತ್ಸವ

**ಅಧ್ಯಾಯ - ೮೩**

**ಮಹಾದೇವ:-** ವೈಶಾಖ ಹುಣ್ಣಿಮೆಯ ದಿನ ನಾರಾಯಣನನ್ನು ನೀರಿನ ಮಧ್ಯದಲ್ಲಿ ಶಯನಮಾಡಿಸಿ ಉತ್ಸವವನ್ನು ಮಾಡಬೇಕು. ಏಕಾದಶಿಯ ದಿನದಂದು ಬಂಗಾರ, ಬೆಳ್ಳಿ, ಅಥವಾ ತಾಮ್ರ ಅಥವಾ ಮಣ್ಣಿನ ಪಾತ್ರೆಯಲ್ಲಿ ಸುಗಂಧವಾದ ತಣ್ಣಗಿನ ನೀರನ್ನು ತುಂಬಿ ಅದರಲ್ಲಿ ಗೋಪಾಲ ಅಥವಾ ರಾಮ, ಅಥವಾ ಶಾಲಿಗ್ರಾಮ ಅಥವಾ ಬೇರೆ ಯಾವುದಾದರೂ ವಿಷ್ಣು ಪ್ರತಿಮೆಯನ್ನು ಮಲಗಿಸಬೇಕು.

''**ಶಯನಂ ಕುರು ದೇವೇಶ ಜಲೇಸ್ಮಿನ್ ವೈ ಸುರೇಶ್ವರ**'' ಎಂದು ಪ್ರಾರ್ಥನೆ ಮಾಡಿ ಗೀತ, ವಾದ್ಯ, ನೃತ್ಯಗಳಿಂದ ಅಂದು ರಾತ್ರಿ ಜಾಗರ ಮಾಡಿ (ಏಕಾದಶೀ ದಿನ) ಹುಣ್ಣಿಮೆಯ ವರೆಗೆ ಉತ್ಸವವನ್ನು ಮಾಡಬೇಕು. ದ್ವಾದಶಿಯ ದಿನ ವಿಶೇಷವಾಗಿ ಜಲಶಾಯಿಯಾದ ವಿಷ್ಣುವಿನ ಪೂಜೆಯನ್ನು ವೈಶಾಖ ಮಾಸದಲ್ಲಿ ಭಕ್ತಿಯಿಂದ ಮಾಡಿದವರು ಸರ್ವಪಾಪಗಳಿಂದ ಮುಕ್ತರಾಗುವರು.

''**ಓಂ, ಹ್ರಾಂ, ಹ್ರೀಂ ರಾಮಾಯ ನಮಃ**'' ಎಂದು ಪೂಜೆಮಾಡುವಾಗ ಮಂತ್ರವನ್ನು ಹೇಳಬೇಕು. ದ್ವಾದಶಿಯ ದಿನ ರಾತ್ರಿಕಾಲದಲ್ಲಿಯೂ ಜಲಪಾತ್ರದಲ್ಲಿ ಮಾಧವನನ್ನು

ಸ್ಥಾಪಿಸಿ ಅದರಲ್ಲಿ ಗಂಧೋದಕವನ್ನು ಹಾಕಿ ವಿವಿಧ ಪುಷ್ಪಗಳಿಂದ ಸಾಲಿಗ್ರಾಮವನ್ನು ಪೂಜೆಮಾಡಿದವನು ಮೋಕ್ಷ ಹೊಂದುತ್ತಾನೆ.

"ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀಜನವಲ್ಲಭಾಯ ನಮಃ" ಎಂಬ ಮಂತ್ರದಿಂದ ನೀರನ್ನು ಅಭಿಮಂತ್ರಿಸಬೇಕು.

**ದೇವದೇವ ಮಹಾಭಾಗ ಶ್ರೀವತ್ಸಕೃತಲಾಂಛನ ।**
**ಮಹಾದೇವ ನಮಸ್ತೇಽಸ್ತು ನಮಸ್ತೇ ವಿಶ್ವಭಾವನಃ ।**
**ಅರ್ಘ್ಯಂ ಗೃಹಾಣ ಭೋ ದೇವ ಮುಕ್ತಿಂ ಮೇ ದೇಹಿಸರ್ವದಾ ॥**

ಎಂಬ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು. ಹೀಗೆ ವೈಶಾಖ ಮಾಸದಲ್ಲಿ ವೇದೋಕ್ತ ಮಂತ್ರಗಳಿಂದ ಜಲಶಾಯಿಯಾದ ಭಗವಂತನನ್ನು ತುಳಸೀ, ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದವುಗಳಿಂದ ಪೂಜೆಮಾಡಿದವನು ರಾಗದ್ವೇಷಗಳಿಂದ ಮುಕ್ತನಾಗಿ ಇಹಲೋಕದಲ್ಲಿ ಸೌಖ್ಯ ಅನುಭವಿಸಿ ಮುಂದೆ ವಿಷ್ಣುಲೋಕವನ್ನು ಹೊಂದುವನು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಂಬತ್ತಮೂರನೇಯ ಅಧ್ಯಾಯ ಮುಗಿದುದು*



## ವಿಷ್ಣುವಿಗೆ ಪವಿತ್ರಾರೋಪಣ ವಿಧಿ — ಅಧ್ಯಾಯ - ೮೪

ಶ್ರಾವಣಮಾಸದಲ್ಲಿ ವಿಷ್ಣುವಿಗೆ ಪವಿತ್ರವನ್ನು ಏರಿಸಬೇಕು. ಈ ಪವಿತ್ರಾರೋಪಣದಿಂದ ಭಕ್ತನು ಆ ಇಡೀ ವರ್ಷದಲ್ಲಿ ಮಾಡಿದ ಪೂಜೆಯು ಸಂಪೂರ್ಣವಾಗುತ್ತದೆ. ಬ್ರಾಹ್ಮಣ ಸ್ತ್ರೀ ತಯಾರಿಸಿದ ಅಥವಾ ಹರಿಭಕ್ತನಾದ ಶೂದ್ರನು ತಂದಕೊಟ್ಟ ಇಲ್ಲವೇ ಕೊಂಡು ತಂದ ರೇಶ್ಮೆಯ ದಾರದಿಂದ ಈ ಪವಿತ್ರವನ್ನು ಮಾಡಬೇಕು. ಯೋಗ್ಯತೆ ಇರುವವರು ಬಂಗಾರ, ಬೆಳ್ಳಿ ಅಥವಾ ತಾಮ್ರದ ತಂತಿಯಿಂದಲೂ ಈ ಪವಿತ್ರವನ್ನು ಮಾಡಬಹುದು. ಇದನ್ನು ಮೂರು ಎಳೆಯಾಗಿ ಮಾಡಿ ನೀರಿನಿಂದ ತೊಳೆಯಬೇಕು. ವಿಷ್ಣುವಿನ ಪ್ರತಿಮೆಯ ತಲೆಯಿಂದ ಪಾದದವರೆಗೆ ಅಥವಾ ಮೊಳಕಾಲವರೆಗೆ ಇಲ್ಲವೇ ನಾಭಿಯವರೆಗೆ ಬರುವಂತೆ ಪವಿತ್ರವನ್ನು ತಯಾರಿಸಬೇಕು. ಆ ಪವಿತ್ರವನ್ನು ಶಿವನ ಲಿಂಗಕ್ಕೂ ಅದರ ಪ್ರಮಾಣಕ್ಕೆ ತಕ್ಕಂತೆ ಮಾಡಿ ಗಂಗಾ ಮತ್ತು ಸರ್ಪಗಳ ಆಕಾರವಾಗಿ ಏರಿಸಬೇಕು. ವಿಷ್ಣು ಪ್ರತಿಮೆಗೆ ವನಮಾಲೆಯ ಆಕಾರದಿಂದ ತಂತುಗಳನ್ನು ಮಣಿಸಿ ಸುಂದರವಾಗಿ ಪವಿತ್ರವನ್ನು ನಿರ್ಮಿಸಿ ಅರ್ಪಿಸಬೇಕು. ಎಲ್ಲ ದೇವತೆಗಳಿಗೂ ಅಂಬರೀಷ, ಧ್ರುವ, ಪ್ರಹ್ಲಾದ ಮೊದಲಾದ ಭಗವದ್ಭಕ್ತರಿಗೂ ವಿಷ್ಣುವಿಗೆ ಅರ್ಪಿತವಾದ ಈ ಪವಿತ್ರವನ್ನು ಬೇರೆ ಬೇರೆ ದಿವಸಗಳಲ್ಲಿ ಅರ್ಪಿಸಬೇಕು. ಪ್ರತಿಪದೆಯ ದಿನ ಕುಬೇರನಿಗೆ, ದ್ವಿತೀಯಾ ದಿನದಂದು ಲಕ್ಷ್ಮೀದೇವಿಗೆ, ತದಿಗೆಯಂದು ಪಾರ್ವತಿಗೂ, ಚತುರ್ಥೀದಿನ ಗಣಪತಿಗೂ, ಪಂಚಮೀ ದಿನ ಚಂದ್ರನಿಗೂ, ಷಷ್ಠಿಯ ದಿನ ಸ್ಕಂದನಿಗೂ, ಸಪ್ತಮಿಯ ದಿನ ಸೂರ್ಯನಿಗೂ ಅಷ್ಟಮಿಯ ದಿನ ದುರ್ಗಾದೇವಿಗೂ ಬ್ರಾಹ್ಮೀ,

ವಾರಾಹೀ, ವೈಷ್ಣವೀ, ಈಶಾನೀ ಮುಂತಾದ ಮಾತೃಗಣಗಳಿಗೆ ನವಮೀ ದಿನದಂದೂ ಯಮನಿಗೆ ದಶಮೀ ದಿನದಂದೂ, ಏಕಾದಶೀ ದಿನ ಸರ್ವಭಗವದ್ಭಕ್ತರಿಗೂ ದ್ವಾದಶೀ ದಿನ ಮಾಧವನಿಗೂ ತ್ರಯೋದಶೀದಿನ ಕಾಮನಿಗೂ, ಚತುರ್ದಶೀದಿನ ಮಹಾದೇವನಿಗೂ, ಹುಣ್ಣಿಮೆಯದಿನ ಬ್ರಹ್ಮನಿಗೂ ಈ ಪವಿತ್ರವನ್ನು ಅರ್ಪಿಸಬೇಕು. ಆ ಪವಿತ್ರದಲ್ಲಿ ಕನಿಷ್ಠ ಹನ್ನೆರಡಾದರೂ ಗ್ರಂಥಿಗಳು ಇರಬೇಕು. ಮಧ್ಯಮಪಕ್ಷ ಇಪ್ಪತ್ತುನಾಲ್ಕು ಉತ್ತಮಪಕ್ಷ ಮೂವತ್ತಾರು ಗ್ರಂಥಿಗಳು ಇರಬೇಕು.

ಆ ಪವಿತ್ರವನ್ನು ಕರ್ಪೂರ, ಕೇಶರ, ಕುಂಕುಮ, ಚಂದನ, ಅರಿಷಿಣ ಮೊದಲಾದವುಗಳಿಂದ ಉಜ್ಜಿ ಬಣ್ಣಬಣ್ಣದ್ದಾಗಿ ಕಾಣುವಂತೆ ಮಾಡಿ ಹೊಸ ಸಂಪುಷ್ಪದಲ್ಲಿ ದೇವರ ಸಮೀಪದಲ್ಲಿ ಮೊದಲು ಇರಿಸಬೇಕು. ಮೊದಲು ದೇವರ ಪೂಜೆಯನ್ನು ಮಾಡಿ, ಸಮೀಪದಲ್ಲಿಯೇ ಅಧಿವಾಸನವನ್ನು ಮಾಡಿಸಿ, ಅನಂತರ ಪವಿತ್ರದ ಪೂಜೆಯನ್ನು ಮಾಡಬೇಕು. ಆ ಪವಿತ್ರ ಸೂತ್ರಗಳಲ್ಲಿ

**ಕ್ರಿಯಾ ಚ ಪೌರುಷೀ ವೀರಾ ಚತುರ್ಥೀ ಚಾಪರಾಜಿತಾ ।**
**ಜಯಾ ಚ ವಿಜಯಾಚೈವ ಮುಕ್ತಿದಾ ಚ ಸದಾಶಿವ ॥**
**ಮನೋನ್ಮಣೀ ತು ನವಮೀ ದಶಮೀ ಸರ್ವತೋನ್ಮುಖೀ ॥**

ಇವು ಹತ್ತು ಪವಿತ್ರ ಗ್ರಂಥಿಯ ದೇವತೆಗಳಿದ್ದು, ಇವರನ್ನೂ ಮತ್ತು ಸೂತ್ರದೇವತೆಗಳಾದ ಬ್ರಹ್ಮ, ವಿಷ್ಣು, ರುದ್ರ, ಈ ತ್ರಿಮೂರ್ತಿಗಳನ್ನೂ ಆ ಪವಿತ್ರದಲ್ಲಿ ಆವಾಹಿಸಬೇಕು. ಶಾಸ್ತ್ರೋಕ್ತ ವಿಧಿಯಿಂದ ಈ ಎಲ್ಲ ದೇವತೆಗಳನ್ನು ಆ ಪವಿತ್ರದಲ್ಲಿ ಅವಾಹನ ಮುದ್ರೆಯಿಂದ "**ಆವಾಹಿತೋ ಭವ**" ಎಂದೂ, ಸನ್ನಿಧೀಕರಣ ಮುದ್ರೆಯಿಂದ "**ಸನ್ನಿಹೋತ ಭವ**" ಎಂದೂ ರಕ್ಷಾ ಮುದ್ರೆಯಿಂದ ಅಲ್ಲಿಯೇ ಸುರಕ್ಷಿತವಾಗಿ ಸ್ಥಾಪಿಸಿ, ಧೇನು ಮುದ್ರೆಯಿಂದ ಅಮೃತೀಕರಣವನ್ನು ಮಾಡಿ ದೇವರ ಎದುರಿಗೆ ಸ್ಥಾಪಿಸಿದ ಕಲಶೋದಕದಿಂದ "**ಓಂ ಶ್ರೀ ಕೃಷ್ಣಾಯ ನಮಃ**" ಎಂಬ ಮಂತ್ರದಿಂದ ಪ್ರೋಕ್ಷಣೆಗೈದು ಗಂಧ, ಧೂಪ, ದೀಪ, ನೈವೇದ್ಯಾದಿ ಷೋಡಶೋಪಚಾರ ಪೂಜೆಯನ್ನು ವಿಧ್ಯುಕ್ತವಾಗಿ ಮಾಡಬೇಕು. ಅನಂತರ ಪವಿತ್ರದ ದೇವತೆಗಳನ್ನು ಪೂಜಿಸಿ ಗಂಧದಿಂದ ಸುವಾಸಿತವನ್ನಾಗಿ ಮಾಡಿ, ಧೂಪದಿಂದ ಸುರಭೀಕರಿಸಿ ದೇವರ ಎದುರು ನಮಸ್ಕಾರ ಮುದ್ರೆಯಿಂದ ದೇವರನ್ನು ಅಭಿಮಂತ್ರಿಸಬೇಕು.

**ಆಮಂತ್ರಿತೋ ಮಹಾದೇವ ಸಾರ್ಧಂ ದೇವ್ಯಾ ಗಣಾಧಿಭಿಃ ।**
**ಮಂತ್ರೈರ್ವಾ ಲೋಕಪಾಲೈಶ್ಚ ಸಹಿತಃ ಪರಿವಾರಿತೈ ॥**

ಎಂದು ಮಹಾದೇವರನ್ನು ಶಿವಪ್ರತಿಮೆಯಲ್ಲಿ ಆವಾಹಿಸಬೇಕು.

**ಆಗಚ್ಛ ಭಗವನ್ ವಿಷ್ಣೋ ವಿಧಿ ಸಂಪೂರ್ಣಹೇತವೇ ।**
**ಪ್ರಾತಸ್ತ್ವತ್ಪೂಜನಂ ಕುರ್ಮಃ ಸಾನ್ನಿಧ್ಯಂ ನಿಯತಂ ಕುರು ॥**

ಎಂಬ ಮಂತ್ರವನ್ನು ಹೇಳಿ ಗಂಧವನ್ನೂ, ಪವಿತ್ರವನ್ನೂ ವಿಷ್ಣುವಿನ ಚರಣದ ಮೇಲೆ ಇಟ್ಟು ಮರುದಿನ ಪ್ರಾತಃಕಾಲದಲ್ಲಿ ಸ್ನಾನ, ದೇವತಾರ್ಚನಾದಿ ನಿತ್ಯಕರ್ಮಾನುಷ್ಠಾನ ಮಾಡಿ ಪುಣ್ಯಾಹವಾಚನ, ಸ್ವಸ್ತಿವಾಚನ, ಜಯ ಘೋಷ, ಘಂಟಾವಾದನ ಮುಂತಾದ ಶಬ್ದಗಳಿಂದ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಅನಂತರ.

**ಓಂ ವಾಸುದೇವಾಯ ವಿದ್ಮಹೇ ವಿಷ್ಣುದೇವಾಯ ಧೀಮಹಿ ।**
**ತನ್ನೋ ದೇವಃ ಪ್ರಚೋದಯಾತ್ ॥**

ಎಂಬ ಮಂತ್ರದಿಂದ ವಿಷ್ಣುವಿಗೆ ಪವಿತ್ರವನ್ನು ಏರಿಸಬೇಕು. ಎಲ್ಲ ಕಡೆಗೂ ದೀಪಗಳನ್ನು ಹಚ್ಚಿ ಇಡಬೇಕು. ನಾಲ್ಕು ವಿಧವಾದ ಭಕ್ಷ್ಯ, ಭೋಜ್ಯ, ನೈವೇದ್ಯಗಳನ್ನು ಸಿದ್ಧಪಡಿಸಿ ಭಗವಂತನಿಗೆ ಅರ್ಪಿಸಬೇಕು. ಬಳಿಕ ತನ ಗುರುವನ್ನು ವಸ್ತ್ರಾಲಂಕಾರದಿಂದ ಪೂಜಿಸಿ ಅವರ ಕಡೆಯಿಂದ ಪವಿತ್ರವನ್ನು ಇಸಿದುಕೊಂಡು ತಾನು ಧಾರಣಮಾಡಬೇಕು. ಮತ್ತು ಅಲ್ಲಿ ಬಂದ ಎಲ್ಲ ವಿಷ್ಣುಭಕ್ತರಿಗೂ ತಾಂಬೂಲ ದಕ್ಷಿಣಾಸಹಿತವಾಗಿ ಪವಿತ್ರವನ್ನು ಕೊಡಬೇಕು.

**ಮಂತ್ರ ಹೀನಂ ಕ್ರಿಯಾ ಹೀನಂ ಭಕ್ತಿ ಹೀನಂ ತು ಕೇಶವ ।**
**ಯತ್ಪೂಜಿತೋ ಮಯಾ ಸಮ್ಯಕ್ ಸಂಪೂರ್ಣಂ ಯಾತು ಮೇ ಧ್ರುವಂ ॥**

ಎಂಬ ಮಂತ್ರದಿಂದ ಶ್ರೀಕೃಷ್ಣನಲ್ಲಿ ತಾನು ಮಾಡಿದ ಕರ್ಮವನ್ನು ಸಮರ್ಪಿಸಬೇಕು. ಅನಂತರ ವಿಷ್ಣುಭಕ್ತರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ತಾನೂ ಅಪ್ತೇಷ್ಟರೊಂದಿಗೆ ಊಟಮಾಡಬೇಕು. ಈ ರೀತಿಯಿಂದ ವಿಷ್ಣುವಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಲ್ಲ ಜಾತಿಯವರೂ ಪವಿತ್ರಾರ್ಪಣ ಮಾಡಿ ಉತ್ಸವವನ್ನು ಆಚರಿಸಿದರೆ ಶ್ರೀಹರಿಯು ಪ್ರೀತನಾಗಿ ಸದ್ಗತಿಯನ್ನು ನೀಡುವನು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣುವಿಗೆ ಪವಿತ್ರಾರೋಪಣ ವಿಧಿ ಎಂಬ ಎಂಬತ್ತಾಲನೇಯ ಅಧ್ಯಾಯ ಮುಗಿದುದು*

—○—

## ಬಗೆಬಗೆಯ ಹೂಗಳಿಂದ ಶ್ರೀಹರಿಯ ಪೂಜೆ | ಅಧ್ಯಾಯ - ೮೫

**ಪಾರ್ವತಿ:-** ಸುರೇಶ್ವರ, ಯಾವಯಾವ ಮಾಸದಲ್ಲಿ ಯಾವ ಯಾವ ಹೂಗಳಿಂದ ವಿಷ್ಣುವಿನ ಪೂಜೆಯನ್ನು ಮಾಡಬೇಕು? ಇದನ್ನು ನನಗೆ ಹೇಳು.

**ಮಹಾದೇವ:-** ಪಾರ್ವತಿ, ಚೈತ್ರಮಾಸದಲ್ಲಿ ಸಂಪಿಗೆ ಹೂವಿನಿಂದಾಗಲೀ ಮಲ್ಲಿಗೆ ಹೂವಿನಿಂದಾಗಲೀ ಸರ್ವೇಶ್ವರನಾದ ವಿಷ್ಣುವನ್ನು ಪೂಜಿಸಬೇಕು. ಇದರಂತೆ ದವನ, ಮರುಗ, ಕಮಲ ಮುಂತಾದ ಪುಷ್ಪಗಳಿಂದಲೂ ಭಗವಂತನ ಪೂಜೆ ಆಚರಿಸಬೇಕು. ವೈಶಾಖ ಮಾಸದಲ್ಲಿ ಕೇದಿಗೆಯಿಂದ ವಿಷ್ಣುವನ್ನು ಪೂಜಿಸಬೇಕು. ಜ್ಯೇಷ್ಠ ಮಾಸದಲ್ಲಿ ಸುಗಂಧಿಯಾದ ಬೇರೆ ಬೇರೆ ಹೂಗಳಿಂದ ಶ್ರೀಹರಿಯನ್ನು ಅರ್ಚಿಸಬೇಕು. ಆಷಾಢ ಮಾಸದಲ್ಲಿ ಕರವೀರ, ಕಮಲ, ಕದಂಬಕುಸುಮ ಮುಂತಾದವುಗಳಿಂದ ಭಗವಂತನನ್ನು ಪೂಜಿಸಬೇಕು. ಮುಗಿಲಿನಲ್ಲಿ ಮೋಡ ಮೂಡಿದಾಗ ಮೋಡದಂತೆ ಕಪ್ಪಾದ ಶ್ರೀಹರಿಯನ್ನು ಕದಂಬ ಕುಸುಮಗಳಿಂದ ಪೂಜೆ ಮಾಡಿದರೆ ಭಗವಂತನು ಸುಪ್ರೀತನಾಗುತ್ತಾನೆ. ಶ್ರಾವಣ ಮಾಸದಲ್ಲಿ ಅಗಸೆಯ ಹೂ, ದವನದಳ ಮತ್ತು ಬಗೆಬಗೆಯ ಹೂಗಳಿಂದ ದೇವರನ್ನು ಪೂಜಿಸಬೇಕು. ಭಾದ್ರಪದ ಮಾಸದಲ್ಲಿ ಸಂಪಿಗೆ, ರಕ್ತಸಿಂಧೂರ, ಶ್ವೇತ, ಪುಷ್ಪ, ಕಲ್ಹಾರ ಮುಂತಾದ ಹೂಗಳಿಂದ ದೇವರನ್ನು ಪೂಜಿಸಬೇಕು. ಆಶ್ವೀಜ ಮಾಸದಲ್ಲಿ ಜಾಜಿಮಲ್ಲಿಗೆ, ಕಮಲ ಮುಂತಾದ ಪುಷ್ಪಗಳಿಂದ ಭಗವಂತನನ್ನು

ಅರ್ಚಿಸಬೇಕು. ಕಾರ್ತೀಕ ಮಾಸದಲ್ಲಿ ಎಳ್ಳು ಹೂ, ಮತ್ತು ಆ ಕಾಲದಲ್ಲಿ ಅರಳಿದ ಬೇರೆ ಬೇರೆ ಸುಗಂದಿ ಹೂಗಳಿಂದ ಭಗವಂತನನ್ನು ಪೂಜಿಸಬೇಕು ವಿಶೇಷವಾಗಿ ಕಾರ್ತೀಕದಲ್ಲಿ ಬಕುಲಪುಷ್ಪ, ಪುನ್ನಾಗ ಮತ್ತು ಚಂಪಕಪುಷ್ಪಗಳಿಂದ ದೇವಪೂಜೆ ಮಾಡಬೇಕು. ಇದರಂತೆ ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಮುಂತಾದ ತಿಂಗಳುಗಳಲ್ಲಿ ಆ ಆ ಕಾಲದಲ್ಲಿ ಅರಳಿದ ಸುವಾಸನೆಯಿಂದ ಯುಕ್ತವಾದ ಬಗೆಬಗೆಯ ಹೂಗಳಿಂದ ದೇವಪೂಜೆ ಮಾಡಬೇಕು. ನಿತ್ಯವೂ ಎಷ್ಟು ಹೂಗಳಿದ್ದರೂ ಅವುಗಳೊಡನೆ ತುಳಸಿಯ ಮಂಜರಿಗಳನ್ನೂ ದೇವರಿಗೆ ಅರ್ಪಿಸಬೇಕು. ಯಾವ ಹೂ ದೊರೆಯದಿದ್ದರೂ ಸರ್ವಪ್ರಯತ್ನ ಮಾಡಿ ತುಳಸಿಯನ್ನು ಸಂಪಾದಿಸಿ ದೇವರಿಗೆ ಸಮರ್ಪಿಸಬೇಕು. ತುಳಸಿಯಿಲ್ಲದ ಪೂಜೆಯನ್ನು ದೇವರು ಸ್ವೀಕರಿಸುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಬಗೆಬಗೆಯ ಹೂಗಳಿಂದ ಶ್ರೀಹರಿಯ ಪೂಜೆ ಎಂಬ ಎಂಬತ್ತೈದನೇಯ ಅಧ್ಯಾಯ ಮುಗಿದುದು*



ಕಾರ್ತಿಕ ಮಾಹಾತ್ಮ್ಯ

**ಅಧ್ಯಾಯ - ೮೬**

**ಸೂತ:-** ಒಂದು ದಿನ ನಾರದ ಮುನಿಯು ಕಲ್ಪವೃಕ್ಷದ ಹೂ ಹಿಡಿದು ದ್ವಾರಕಾ ಪಟ್ಟಣಕ್ಕೆ ಆಗಮಿಸಿದ. ಆಗ ಕೃಷ್ಣನು ಆ ಮುನಿಗೆ ಅರ್ಘ್ಯಾದಿಗಳಿಂದ ಸ್ವಾಗತ ನೀಡಿ ಉಚ್ಚ ಆಸನದ ಮೇಲೆ ಕೂಡಿಸಿದ. ನಾರದರು ದೇವಲೋಕದಿಂದ ಬರುವಾಗ ಕಲ್ಪವೃಕ್ಷದ ಹೂಗಳನ್ನು ಹೊರಹೊರೆಯಾಗಿ ತಂದು ಶ್ರೀಕೃಷ್ಣನಿಗೆ ಅರ್ಪಿಸಿದರು. ಆಗ ಕೃಷ್ಣನು ತನ್ನ ಹದಿನಾರು ಸಾವಿರ ಒಂದುನೂರಾ ಎಂಟು ಮಡದಿಯರಿಗೆ ಹಂಚಿಕೊಟ್ಟನು. ಆದರೆ ಸತ್ಯಭಾಮೆಯ ಹೆಸರು ಮರೆತು ಹೋದದ್ದರಿಂದ ಅವಳಿಗೆ ಆ ಸುರಲೋಕದ ಪುಷ್ಪವು ದೊರೆಯಲಿಲ್ಲ. ಅದರಿಂದ ಸಿಟ್ಟಿಗೆದ್ದ ಸತ್ಯಭಾಮೆಯು ಕ್ರೋಧಾಗಾರ (ಸಿಟ್ಟಿಗೆದ್ದಾಗ ಕುಳಿತುಕೊಳ್ಳುವ ಮನೆ)ವನ್ನು ಪ್ರವೇಶಿಸಿದಳು. ಇದನ್ನು ತಿಳಿದ ಕೃಷ್ಣ ತಾನೂ ಸತ್ಯಭಾಮೆಯ ಬಳಿಗೆ ಹೋಗಿ ಅವಳನ್ನು ಸಂತೈಸಿ ಗರುಡನನ್ನು ನೆನೆಸಿದ. ಮನಸ್ಸಿನಿಂದ ನೆನೆದ ಮಾತ್ರಕ್ಕೆ ಗರುಡ ಅಲ್ಲಿಗೆ ಆಗಮಿಸಿದ. ಆಗ ಕೃಷ್ಣನು ಸತ್ಯಭಾಮೆಯನ್ನು ಕರೆದು ಹೇಳಿದ.

**ಕೃಷ್ಣ:-** ಸತ್ಯಭಾಮೆ, ಕುಪಿತಳಾಗಬೇಡ. ನಿನಗಾಗಿ ನಾನು ಈಗಲೇ ಸ್ವರ್ಗಲೋಕಕ್ಕೆ ಹೋಗಿ ದೇವೇಂದ್ರನೊಡನೆ ಯುದ್ಧಮಾಡಿ ಆ ಕಲ್ಪವೃಕ್ಷವನ್ನು ಕಿತ್ತು ತಂದು ನಿನ್ನ ಮನೆಯಂಗಳದಲ್ಲಿಯೇ ನೆಟ್ಟುಬಿಡುವೆ. ನಾನು ಹೂಗಳನ್ನು ಹಂಚುವಾಗ ನಿನ್ನನ್ನು ಮರೆತ ತಪ್ಪಿಗಾಗಿ ಕ್ಷಮೆ ಕೇಳುತ್ತೇನೆ.

ಹೀಗೆ ಹೇಳಿ ಸತ್ಯಭಾಮೆಯನ್ನು ಕರೆದುಕೊಂಡೇ ಕೃಷ್ಣನು ದೇವಲೋಕಕ್ಕೆ ಗರುಡಾರೂಢನಾಗಿ ಪ್ರಯಾಣ ಮಾಡಿದ. ಅಲ್ಲಿ ದೇವೇಂದ್ರನನ್ನು ಕರೆದು ಕಲ್ಪವೃಕ್ಷವನ್ನು ಸತ್ಯಭಾಮೆಗಾಗಿ ಕೊಡು ಎಂದು ಕೇಳಿದ.

**ಇಂದ್ರ:-** ಕೃಷ್ಣ, ಇದು ದೇವಲೋಕದ ದಿವ್ಯ ವೃಕ್ಷ. ಇದನ್ನು ಭೂಲೋಕಕ್ಕೆ ಒಯ್ಯುಕೂಡದು.

ದೇವೇಂದ್ರನ ಈ ಮಾತನ್ನು ಕೇಳಿ ಕೋಪ ಬಂದಿತು ಶ್ರೀ ಕೃಷ್ಣನಿಗೆ. ನಾಕಲೋಕದ ಅಧಿಪತಿಯ ನಿಷೇಧದ ನುಡಿಯನ್ನು ಲೆಕ್ಕಿಸದೇ ಕಿತ್ತಿಬಿಟ್ಟ ನನ್ನ ಕೈಯಿಂದಲೇ ಆ ಕಲ್ಪವೃಕ್ಷವನ್ನು. ಅದನ್ನು ಗರುಡನ ಮೇಲೆ ಇಟ್ಟುಕೊಂಡ. ಆಗ ದೇವೇಂದ್ರನು ಕೋಪದಿಂದ ತನ್ನ ಭೀಕರವಾದ ವಜ್ರಾಯುಧವನ್ನು ಎತ್ತಿ ಗರುಡನನ್ನು ತಾಡನ ಮಾಡಿದ. ಗರುಡನು ಇಂದ್ರನಿಗೆ ಶಾಸನಮಾಡಲು ಸಮರ್ಥನಾಗಿದ್ದರೂ ಕೃಷ್ಣನ ಅಭಿಪ್ರಾಯವನ್ನು ತಿಳಿದು ದೇವೇಂದ್ರನಿಗೆ ಪ್ರತಿಯಾಗಿ ಏನನ್ನೂ ಮಾಡದೇ ಅವನಿಗೆ ಗೌರವ ಸಲ್ಲಿಸಲಿಕ್ಕಾಗಿ ತನ್ನ ಒಂದು ರೆಕ್ಕೆಯನ್ನು ಅಲ್ಲಿಯೇ ಕಳಚಿ ಗಕ್ಕನೇ ಗಗನಕ್ಕೆ ಹಾರಿದ. ಅವನ ಆ ಕಳಚಿದ ರೆಕ್ಕೆಯಿಂದ ೩ ಹಕ್ಕಿಗಳು ಹುಟ್ಟಿದವು. ನವಿಲು, ಮುಂಗಲಿ, ಮೈನಾಕ ಎಂಬ ಮೂರು ವಿಧವಾದ ಹಕ್ಕಿಗಳು ಹುಟ್ಟಿಕೊಂಡವು. ಅನಂತರ ಗರುಡನು ದ್ವಾರಕಾ ಪಟ್ಟಣಕ್ಕೆ ಆಗಮಿಸಿ ಸತ್ಯಭಾಮೆಯ ಮನೆಯಲ್ಲಿ ಆ ಕಲ್ಪವೃಕ್ಷವನ್ನು ತಂದು ಇಟ್ಟ. ತನ್ನ ಮನೆಯಂಗಳದಲ್ಲಿಯೇ ದೇವಲೋಕದ ಹೂವಿನ ಹೆಮ್ಮರ ಬಂದಿಳಿದದ್ದನ್ನು ನೋಡಿ ಹಿಡಿಸಲಾರದ ಹಿಗ್ಗು, ಕೃಷ್ಣಕಾಮಿನಿಯಾದ ಆ ಸತ್ಯಭಾಮೆಗೆ. ಇದಕ್ಕೆಲ್ಲ ಮೂಲಕಾರಣರಾದ ನಾರದ ಮುನಿಯನ್ನು ಅವಳು ಅತ್ಯಾದರದಿಂದ ಆದರಿಸಿ ಪೂಜಿಸಿ ಸಂತಸದುಂಬಿ ನುಡಿದಳು.

**ಸತ್ಯಭಾಮಾ :-** ನಾರದರೇ, ನನಗೆ ಈ ಜನ್ಮದಲ್ಲಿ ಶ್ರೀಕೃಷ್ಣನಂಥ ಪತಿ ದೊರಕಿದ್ದಾನೆ. ಮನೆಯ ಅಂಗಳದಲ್ಲಿ ಬಯಸಿದ್ದನ್ನು ನೀಡುವ ಕಲ್ಪವೃಕ್ಷ ಶೋಭಿಸುತ್ತಿದೆ. ಈ ಭಾಗ್ಯವು ಮುಂದೆ ಎಲ್ಲ ಜನ್ಮಗಳಲ್ಲೂ ದೊರೆಯುವಂತೆ ಮಾಡಲು ಏನು ಉಪಾಯ? ಅದನ್ನು ಹೇಳಿರಿ.

**ನಾರದ :-** ಸತ್ಯಭಾಮೆ, ನೀನು ಸಾಕ್ಷಾತ್ ಮಹಾಲಕ್ಷ್ಮೀ. ಲೋಕೋಪಕಾರಕ್ಕಾಗಿ ಈ ಪ್ರಶ್ನೆಯನ್ನು ಕೇಳಿರುವಿ. ಅದೇ ದೃಷ್ಟಿಯಿಂದ ನಾನು ನಿನಗೆ ಉಪಾಯವನ್ನು ಹೇಳುವೆ. ಮುತ್ತೈದೆಯರಾದ ಸ್ತ್ರೀಯರಿಗೆ ತುಲಾಪುರುಷದಾನದಿಂದ ಇಂಥ ಮಹಾ ಸೌಭಾಗ್ಯವು ಪ್ರಾಪ್ತವಾಗುತ್ತದೆ. ನಾರದರ ಹೇಳಿಕೆಯಂತೆ ಸತ್ಯಭಾಮಾ ದೇವಿಯು ವಿಧಿಪೂರ್ವಕವಾಗಿ ಶ್ರೀಕೃಷ್ಣನ ತುಲಾಭಾರವನ್ನು ಮಾಡಿ ಕಲ್ಪವೃಕ್ಷ ಸಹಿತವಾಗಿ (ನಾರದರಿಗೆ) ಶ್ರೀಕೃಷ್ಣನನ್ನು ದಾನಕೊಟ್ಟಳು. ಅನಂತರ ನಾರದರು ಶ್ರೀಕೃಷ್ಣನ ಪ್ರತ್ಯಾಮ್ನಾಯವಾಗಿ ವಿಶೇಷ ದಕ್ಷಿಣೆಯನ್ನು ಸ್ವೀಕರಿಸಿ, ಶ್ರೀಕೃಷ್ಣನನ್ನು ಮರಳಿ ಸತ್ಯಭಾಮೆಗೆ ಒಪ್ಪಿಸಿ ಅವಳು ದಾನ ನೀಡಿದ ಉಳಿದೆಲ್ಲ ಪದಾರ್ಥ ತೆಗೆದುಕೊಂಡು ಸ್ವರ್ಗಲೋಕಕ್ಕೆ ತೆರಳಿದರು.

ನಾರದರು ಹೋದ ಬಳಿಕ ಸತ್ಯಭಾಮೆಯು ಆನಂದದಿಂದ ಹೊಂದಾವರೆಯಂತೆ ಅರಳಿದ ಸುಂದರ ಮುಖದಿಂದ ಮಂದಹಾಸ ಮಾಡಿ ಶ್ರೀಕೃಷ್ಣನನ್ನು ಕುರಿತು ಮಾತನಾಡಿದಳು.

**ಸತ್ಯಭಾಮೆ:-** ಪ್ರಭು, ಇಂದು ನಾನು ಧನ್ಯಳಾದೆ. ನನ್ನ ಜೀವನ ಇಂದು ಸಫಲ. ಇಂದು ನನ್ನ ಜನ್ಮ ಸಾರ್ಥಕಗೊಂಡಿದೆ. ನಾನು ಕೃತಕೃತ್ಯಳಾಗಿರುವೆ. ನನಗೆ ಜನ್ಮ ನೀಡಿದ ತಾಯ್ತಂದೆಯರೂ ಧನ್ಯರಾಗಿದ್ದಾರೆ. ನಿನ್ನ ೧೬೦೦೦ ಮಡದಿಯರಲ್ಲಿ ನಾನೇ ನಿನಗೆ ಪರಮ ಪ್ರೀತ್ಯಾಸ್ಪದಳು ಎಂದು ತಿಳಿದಿದ್ದೇನೆ. ಏಕೆಂದರೆ ಆದಿಪುರುಷನಾದ ನಿನ್ನನ್ನು ನಾನು ಕಲ್ಪವೃಕ್ಷ ಸಹಿತವಾಗಿಯೇ ನಾರದರಿಗೆ ಇಂದು ದಾನ ನೀಡಿದೆ. ದೇವಲೋಕದ ಈ ಕಲ್ಪವೃಕ್ಷವು ಇಂದು ನನ್ನ ಮನೆಯ ಮೊಗಸಾಲೆಯನ್ನು ಅಲಂಕರಿಸಿರುತ್ತದೆ. ಮೂರ್ಲೋಕದ ಅಧಿಪತಿಯಾದ ಶ್ರೀಕೃಷ್ಣನಿಗೆ ನಾನು ಮೆಚ್ಚಿನ ಮನದನ್ನೆಯಾಗಿದ್ದೇನೆ.

ಅರ್ಚಿಸಬೇಕು. ಕಾರ್ತೀಕ ಮಾಸದಲ್ಲಿ ಎಳ್ಳು ಹೂ, ಮತ್ತು ಆ ಕಾಲದಲ್ಲಿ ಅರಳಿದ ಬೇರೆ ಬೇರೆ ಸುಗಂದಿ ಹೂಗಳಿಂದ ಭಗವಂತನನ್ನು ಪೂಜಿಸಬೇಕು ವಿಶೇಷವಾಗಿ ಕಾರ್ತೀಕದಲ್ಲಿ ಬಕುಲಪುಷ್ಪ, ಪುನ್ನಾಗ ಮತ್ತು ಚಂಪಕಪುಷ್ಪಗಳಿಂದ ದೇವಪೂಜೆ ಮಾಡಬೇಕು. ಇದರಂತೆ ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಮುಂತಾದ ತಿಂಗಳುಗಳಲ್ಲಿ ಆ ಆ ಕಾಲದಲ್ಲಿ ಅರಳಿದ ಸುವಾಸನೆಯಿಂದ ಯುಕ್ತವಾದ ಬಗೆಬಗೆಯ ಹೂಗಳಿಂದ ದೇವಪೂಜೆ ಮಾಡಬೇಕು. ನಿತ್ಯವೂ ಎಷ್ಟು ಹೂಗಳಿದ್ದರೂ ಅವುಗಳೊಡನೆ ತುಳಸಿಯ ಮಂಜರಿಗಳನ್ನೂ ದೇವರಿಗೆ ಅರ್ಪಿಸಬೇಕು. ಯಾವ ಹೂ ದೊರೆಯದಿದ್ದರೂ ಸರ್ವಪ್ರಯತ್ನ ಮಾಡಿ ತುಳಸಿಯನ್ನು ಸಂಪಾದಿಸಿ ದೇವರಿಗೆ ಸಮರ್ಪಿಸಬೇಕು. ತುಳಸಿಯಿಲ್ಲದ ಪೂಜೆಯನ್ನು ದೇವರು ಸ್ವೀಕರಿಸುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಬಗೆಬಗೆಯ ಹೂಗಳಿಂದ ಶ್ರೀಹರಿಯ ಪೂಜೆ ಎಂಬ ಎಂಬತ್ತೈದನೇಯ ಅಧ್ಯಾಯ ಮುಗಿದುದು*



## ಕಾರ್ತಿಕ ಮಾಹಾತ್ಮ್ಯ — ಅಧ್ಯಾಯ - ೮೬

**ಸೂತ:-** ಒಂದು ದಿನ ನಾರದ ಮುನಿಯು ಕಲ್ಪವೃಕ್ಷದ ಹೂ ಹಿಡಿದು ದ್ವಾರಕಾ ಪಟ್ಟಣಕ್ಕೆ ಆಗಮಿಸಿದ. ಆಗ ಕೃಷ್ಣನು ಆ ಮುನಿಗೆ ಅರ್ಘ್ಯಾದಿಗಳಿಂದ ಸ್ವಾಗತ ನೀಡಿ ಉಚ್ಚ ಆಸನದ ಮೇಲೆ ಕೂಡಿಸಿದ. ನಾರದರು ದೇವಲೋಕದಿಂದ ಬರುವಾಗ ಕಲ್ಪವೃಕ್ಷದ ಹೂಗಳನ್ನು ಹೊರಹೊರೆಯಾಗಿ ತಂದು ಶ್ರೀಕೃಷ್ಣನಿಗೆ ಅರ್ಪಿಸಿದರು. ಆಗ ಕೃಷ್ಣನು ತನ್ನ ಹದಿನಾರು ಸಾವಿರ ಒಂದುನೂರಾ ಎಂಟು ಮಡದಿಯರಿಗೆ ಹಂಚಿಕೊಟ್ಟನು. ಆದರೆ ಸತ್ಯಭಾಮೆಯ ಹೆಸರು ಮರೆತು ಹೋದದ್ದರಿಂದ ಅವಳಿಗೆ ಆ ಸುರಲೋಕದ ಪುಷ್ಪವು ದೊರೆಯಲಿಲ್ಲ. ಅದರಿಂದ ಸಿಟ್ಟಿಗೆದ್ದ ಸತ್ಯಭಾಮೆಯು ಕ್ರೋಧಾಗಾರ (ಸಿಟ್ಟಿಗೆದ್ದಾಗ ಕುಳಿತುಕೊಳ್ಳುವ ಮನೆ)ವನ್ನು ಪ್ರವೇಶಿಸಿದಳು. ಇದನ್ನು ತಿಳಿದ ಕೃಷ್ಣ ತಾನೂ ಸತ್ಯಭಾಮೆಯ ಬಳಿಗೆ ಹೋಗಿ ಅವಳನ್ನು ಸಂತೈಸಿ ಗರುಡನನ್ನು ನೆನೆಸಿದ. ಮನಸ್ಸಿನಿಂದ ನೆನೆದ ಮಾತ್ರಕ್ಕೆ ಗರುಡ ಅಲ್ಲಿಗೆ ಆಗಮಿಸಿದ. ಆಗ ಕೃಷ್ಣನು ಸತ್ಯಭಾಮೆಯನ್ನು ಕರೆದು ಹೇಳಿದ.

**ಕೃಷ್ಣ:-** ಸತ್ಯಭಾಮೆ, ಕುಪಿತಳಾಗಬೇಡ. ನಿನಗಾಗಿ ನಾನು ಈಗಲೇ ಸ್ವರ್ಗಲೋಕಕ್ಕೆ ಹೋಗಿ ದೇವೇಂದ್ರನೊಡನೆ ಯುದ್ಧಮಾಡಿ ಆ ಕಲ್ಪವೃಕ್ಷವನ್ನು ಕಿತ್ತು ತಂದು ನಿನ್ನ ಮನೆಯಂಗಳದಲ್ಲಿಯೇ ನೆಟ್ಟುಬಿಡುವೆ. ನಾನು ಹೂಗಳನ್ನು ಹಂಚುವಾಗ ನಿನ್ನನ್ನು ಮರೆತ ತಪ್ಪಿಗಾಗಿ ಕ್ಷಮೆ ಕೇಳುತ್ತೇನೆ.

ಹೀಗೆ ಹೇಳಿ ಸತ್ಯಭಾಮೆಯನ್ನು ಕರೆದುಕೊಂಡೇ ಕೃಷ್ಣನು ದೇವಲೋಕಕ್ಕೆ ಗರುಡಾರೂಢನಾಗಿ ಪ್ರಯಾಣ ಮಾಡಿದ. ಅಲ್ಲಿ ದೇವೇಂದ್ರನನ್ನು ಕರೆದು ಕಲ್ಪವೃಕ್ಷವನ್ನು ಸತ್ಯಭಾಮೆಗಾಗಿ ಕೊಡು ಎಂದು ಕೇಳಿದ.

**ಇಂದ್ರ:-** ಕೃಷ್ಣ, ಇದು ದೇವಲೋಕದ ದಿವ್ಯ ವೃಕ್ಷ. ಇದನ್ನು ಭೂಲೋಕಕ್ಕೆ ಒಯ್ಯುಕೂಡದು.

ದೇವೇಂದ್ರನ ಈ ಮಾತನ್ನು ಕೇಳಿ ಕೋಪ ಬಂದಿತು ಶ್ರೀ ಕೃಷ್ಣನಿಗೆ. ನಾಕಲೋಕದ ಅಧಿಪತಿಯ ನಿಷೇಧದ ನುಡಿಯನ್ನು ಲೆಕ್ಕಿಸದೇ ಕಿತ್ತಿಬಿಟ್ಟ ನನ್ನ ಕೈಯಿಂದಲೇ ಆ ಕಲ್ಪವೃಕ್ಷವನ್ನು. ಅದನ್ನು ಗರುಡನ ಮೇಲೆ ಇಟ್ಟುಕೊಂಡ. ಆಗ ದೇವೇಂದ್ರನು ಕೋಪದಿಂದ ತನ್ನ ಭೀಕರವಾದ ವಜ್ರಾಯುಧವನ್ನು ಎತ್ತಿ ಗರುಡನನ್ನು ತಾಡನ ಮಾಡಿದ. ಗರುಡನು ಇಂದ್ರನಿಗೆ ಶಾಸನಮಾಡಲು ಸಮರ್ಥನಾಗಿದ್ದರೂ ಕೃಷ್ಣನ ಅಭಿಪ್ರಾಯವನ್ನು ತಿಳಿದು ದೇವೇಂದ್ರನಿಗೆ ಪ್ರತಿಯಾಗಿ ಏನನ್ನೂ ಮಾಡದೇ ಅವನಿಗೆ ಗೌರವ ಸಲ್ಲಿಸಲಿಕ್ಕಾಗಿ ತನ್ನ ಒಂದು ರೆಕ್ಕೆಯನ್ನು ಅಲ್ಲಿಯೇ ಕಳಚಿ ಗಕ್ಕನೇ ಗಗನಕ್ಕೆ ಹಾರಿದ. ಅವನ ಆ ಕಳಚಿದ ರೆಕ್ಕೆಯಿಂದ ೩ ಹಕ್ಕಿಗಳು ಹುಟ್ಟಿದವು. ನವಿಲು, ಮುಂಗಲಿ, ಮೈನಾಕ ಎಂಬ ಮೂರು ವಿಧವಾದ ಹಕ್ಕಿಗಳು ಹುಟ್ಟಿಕೊಂಡವು. ಅನಂತರ ಗರುಡನು ದ್ವಾರಕಾ ಪಟ್ಟಣಕ್ಕೆ ಆಗಮಿಸಿ ಸತ್ಯಭಾಮೆಯ ಮನೆಯಲ್ಲಿ ಆ ಕಲ್ಪವೃಕ್ಷವನ್ನು ತಂದು ಇಟ್ಟ. ತನ್ನ ಮನೆಯಂಗಳದಲ್ಲಿಯೇ ದೇವಲೋಕದ ಹೂವಿನ ಹೆಮ್ಮರ ಬಂದಿಳಿದದ್ದನ್ನು ನೋಡಿ ಹಿಡಿಸಲಾರದ ಹಿಗ್ಗು, ಕೃಷ್ಣಕಾಮಿನಿಯಾದ ಆ ಸತ್ಯಭಾಮೆಗೆ. ಇದಕ್ಕೆಲ್ಲ ಮೂಲಕಾರಣರಾದ ನಾರದ ಮುನಿಯನ್ನು ಅವಳು ಅತ್ಯಾದರದಿಂದ ಆದರಿಸಿ ಪೂಜಿಸಿ ಸಂತಸದುಂಬಿ ನುಡಿದಳು.

**ಸತ್ಯಭಾಮಾ :-** ನಾರದರೇ, ನನಗೆ ಈ ಜನ್ಮದಲ್ಲಿ ಶ್ರೀಕೃಷ್ಣನಂಥ ಪತಿ ದೊರಕಿದ್ದಾನೆ. ಮನೆಯ ಅಂಗಳದಲ್ಲಿ ಬಯಸಿದ್ದನ್ನು ನೀಡುವ ಕಲ್ಪವೃಕ್ಷ ಶೋಭಿಸುತ್ತಿದೆ. ಈ ಭಾಗ್ಯವು ಮುಂದೆ ಎಲ್ಲ ಜನ್ಮಗಳಲ್ಲೂ ದೊರೆಯುವಂತೆ ಮಾಡಲು ಏನು ಉಪಾಯ? ಅದನ್ನು ಹೇಳಿರಿ.

**ನಾರದ :-** ಸತ್ಯಭಾಮೆ, ನೀನು ಸಾಕ್ಷಾತ್ ಮಹಾಲಕ್ಷ್ಮೀ. ಲೋಕೋಪಕಾರಕ್ಕಾಗಿ ಈ ಪ್ರಶ್ನೆಯನ್ನು ಕೇಳಿರುವಿ. ಅದೇ ದೃಷ್ಟಿಯಿಂದ ನಾನು ನಿನಗೆ ಉಪಾಯವನ್ನು ಹೇಳುವೆ. ಮುತ್ತೈದೆಯರಾದ ಸ್ತ್ರೀಯರಿಗೆ ತುಲಾಪುರುಷದಾನದಿಂದ ಇಂಥ ಮಹಾ ಸೌಭಾಗ್ಯವು ಪ್ರಾಪ್ತವಾಗುತ್ತದೆ. ನಾರದರ ಹೇಳಿಕೆಯಂತೆ ಸತ್ಯಭಾಮಾ ದೇವಿಯು ವಿಧಿಪೂರ್ವಕವಾಗಿ ಶ್ರೀಕೃಷ್ಣನ ತುಲಾಭಾರವನ್ನು ಮಾಡಿ ಕಲ್ಪವೃಕ್ಷ ಸಹಿತವಾಗಿ (ನಾರದರಿಗೆ) ಶ್ರೀಕೃಷ್ಣನನ್ನು ದಾನಕೊಟ್ಟಳು. ಅನಂತರ ನಾರದರು ಶ್ರೀಕೃಷ್ಣನ ಪ್ರತ್ಯಾಮ್ನಾಯವಾಗಿ ವಿಶೇಷ ದಕ್ಷಿಣೆಯನ್ನು ಸ್ವೀಕರಿಸಿ, ಶ್ರೀಕೃಷ್ಣನನ್ನು ಮರಳಿ ಸತ್ಯಭಾಮೆಗೆ ಒಪ್ಪಿಸಿ ಅವಳು ದಾನ ನೀಡಿದ ಉಳಿದೆಲ್ಲ ಪದಾರ್ಥ ತೆಗೆದುಕೊಂಡು ಸ್ವರ್ಗಲೋಕಕ್ಕೆ ತೆರಳಿದರು.

ನಾರದರು ಹೋದ ಬಳಿಕ ಸತ್ಯಭಾಮೆಯು ಆನಂದದಿಂದ ಹೊಂದಾವರೆಯಂತೆ ಅರಳಿದ ಸುಂದರ ಮುಖದಿಂದ ಮಂದಹಾಸ ಮಾಡಿ ಶ್ರೀಕೃಷ್ಣನನ್ನು ಕುರಿತು ಮಾತನಾಡಿದಳು.

**ಸತ್ಯಭಾಮೆ:-** ಪ್ರಭು, ಇಂದು ನಾನು ಧನ್ಯಳಾದೆ. ನನ್ನ ಜೀವನ ಇಂದು ಸಫಲ. ಇಂದು ನನ್ನ ಜನ್ಮ ಸಾರ್ಥಕಗೊಂಡಿದೆ. ನಾನು ಕೃತಕೃತ್ಯಳಾಗಿರುವೆ. ನನಗೆ ಜನ್ಮ ನೀಡಿದ ತಾಯ್ತಂದೆಯರೂ ಧನ್ಯರಾಗಿದ್ದಾರೆ. ನಿನ್ನ ೧೬೦೦೦ ಮಡದಿಯರಲ್ಲಿ ನಾನೇ ನಿನಗೆ ಪರಮ ಪ್ರೀತ್ಯಾಸ್ಪದಳು ಎಂದು ತಿಳಿದಿದ್ದೇನೆ. ಏಕೆಂದರೆ ಆದಿಪುರುಷನಾದ ನಿನ್ನನ್ನು ನಾನು ಕಲ್ಪವೃಕ್ಷ ಸಹಿತವಾಗಿಯೇ ನಾರದರಿಗೆ ಇಂದು ದಾನ ನೀಡಿದೆ. ದೇವಲೋಕದ ಈ ಕಲ್ಪವೃಕ್ಷವು ಇಂದು ನನ್ನ ಮನೆಯ ಮೊಗಸಾಲೆಯನ್ನು ಅಲಂಕರಿಸಿರುತ್ತದೆ. ಮೂರ್ಲೋಕದ ಅಧಿಪತಿಯಾದ ಶ್ರೀಕೃಷ್ಣನಿಗೆ ನಾನು ಮೆಚ್ಚಿನ ಮನದನ್ನೆಯಾಗಿದ್ದೇನೆ.

ಇದಕ್ಕಿಂತ ಇನ್ನೇನು ಬೇಕು? ದೇವ, ನಿನ್ನಲ್ಲಿ ನನ್ನದು ಒಂದೇ ಪ್ರಾರ್ಥನೆ. ಕಲ್ಪಕಾಲದವರೆಗೂ ನನಗೆ ನಿನ್ನಿಂದ ವಿಯೋಗವಾಗಬಾರದು. ನಿನ್ನ ಪ್ರೀತಿಯ ಅವಿಚ್ಛಿನ್ನವಾಗಿ ಇದರಂತೆಯೇ ನನ್ನ ಮೇಲೆ ಉಳಿಯಬೇಕು. ಮತ್ತು ದಿನೇ ದಿನೇ ಬೆಳೆಯಬೇಕು. ಇದಕ್ಕೇನು ಉಪಾಯ? ಹೇಳು.

**ಶ್ರೀಕೃಷ್ಣ:-** ಭಾಮೆ, ನನಗೆ ನಿನಗಿಂತಲೂ ಪ್ರಿಯಳಾದ ಹೆಣ್ಣು ಪ್ರಪಂಚದಲ್ಲಿಯೇ ಇಲ್ಲ. ನೀನೇ ನನ್ನ ಪ್ರಾಣಪ್ರಿಯೆ ಪ್ರೇಯಸಿ. ನೀನು ಬೇಡಿದ್ದರಿಂದ ಸ್ವರ್ಗಲೋಕದ ಅರಸನಾದ ಇಂದ್ರನ ವಿರೋಧವನ್ನು ಲೆಕ್ಕಿಸದೇ ಕಲ್ಪವೃಕ್ಷವನ್ನು ಕಿತ್ತುಕೊಂಡು ಬಂದೆ. ನಿನಗಾಗಿ ನಾನು ಏನು ಮಾಡಲೂ ಸಿದ್ಧ. ನಿನಗೇನು ಬೇಕಾದರೂ ಪ್ರಶ್ನೆ ಕೇಳು. ಎಲ್ಲದಕ್ಕೂ ಸಮಾಧಾನ ನೀಡುವೆ. ನಿನ್ನ ಮನಸ್ಸಿನಲ್ಲಿದ್ದುದನ್ನು ಕೇಳು.

**ಸತ್ಯಭಾಮಾ:-** ಸ್ವಾಮಿ, ನಾನೊಬ್ಬ ಈ ಭೂಲೋಕದ ಮಣ್ಣಿನ ಮಗಳು. ಈಗ ಮರ್ತ್ಯಭಾವವನ್ನು ಮೀರಿ ನಿನ್ನ ಅರ್ಧಾಂಗಿನಿಯಾದೆ. ನಿನ್ನೊಡನೆ ಗರುಡಾರೂಢಳಾಗಿ ಮೆರೆಯುತ್ತಲಿದ್ದೇನೆ. ಮನಬಂದತ್ತ ಹೋಗುತ್ತೇನೆ. ಮನಸ್ಸಿಗೆ ಬಂದುದನ್ನು ಮಾಡುತ್ತೇನೆ. ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರಳಾಗಿದ್ದೇನೆ. ಇಷ್ಟೆಲ್ಲ ಶುಭ ಸೌಭಾಗ್ಯಗಳು ನನಗೆ ಬರಬೇಕಾದರೆ ನಾನು ಜನ್ಮಾಂತರದಲ್ಲಿ ಯಾವ ದಾನ ನೀಡಿದ್ದೆ? ಎಂಥ ವ್ರತವನ್ನು ಮಾಡಿದ್ದೆ? ಎಂಥ ತಪಸ್ಸನ್ನು ಆಚರಿಸಿದ್ದೆ? ಇದನ್ನೆಲ್ಲ ಹೇಳು. ಜನ್ಮಾಂತರದಲ್ಲಿ ನನ್ನ ನಡೆ ನುಡಿಗಳು ಹೇಗಿದ್ದವು? ನಾನು ಯಾರ ಮಗಳಾಗಿದ್ದೆ?

**ಶ್ರೀಕೃಷ್ಣ :-** ಕಾಂತೆ, ನಿನ್ನ ಜನ್ಮಾಂತರದ ವೃತ್ತಾಂತವನ್ನು ಹೇಳುವೆ ಕೇಳು. ಕೃತಯುಗದ ಕೊನೆಯ ಭಾಗದಲ್ಲಿ ಮಯಾಪುರಿಯಲ್ಲಿ ಅತ್ರಿವಂಶದಲ್ಲಿ ದೇವಶರ್ಮನೆಂಬ ಬ್ರಾಹ್ಮಣನೊಬ್ಬನಿದ್ದ. ಅವನು ವೇದದಲ್ಲಿ ಪಂಡಿತ. ವೇದಾಂಗಗಳಲ್ಲಿ ಪಾರಂಗತ. ವೇದಾಂತದಲ್ಲಿ ಪರಿಣತಜ್ಞ. ಅತಿಥಿಗಳನ್ನು ದೇವರಂತೆ ಪೂಜಿಸುತ್ತಿದ್ದ. ಅಗ್ನಿಹೋತ್ರ ಇಟ್ಟಿದ್ದ. ಅವನೊಬ್ಬ ಸೂರ್ಯಭಕ್ತ. ಪ್ರತಿದಿನವೂ ಸೂರ್ಯನಾರಾಯಣನನ್ನು ಆರಾಧಿಸುತ್ತಿದ್ದ. ಆ ದೇವಶರ್ಮನಿಗೆ ಮುಪ್ಪಿನ ಕಾಲದಲ್ಲಿ ಗುಣವತಿಯೆಂಬ ಅನ್ವರ್ಥಕ ನಾಮಳಾದ ಕನ್ಯಾಮಣಿಯು ಹುಟ್ಟಿದಳು. ಆ ಗುಣವತಿಯನ್ನು ದೇವಶರ್ಮನು ತನ್ನಲ್ಲಿಯೇ ವೇದಶಾಸ್ತ್ರಗಳನ್ನು ಓದಿ ವಿದ್ವಾಂಸನಾದ ಚಂದ್ರ ಎಂಬ ಶಿಷ್ಯನಿಗೆ ಧಾರೆ ಎರೆದು ಮದುವೆ ಮಾಡಿಕೊಟ್ಟ. ದೇವಶರ್ಮನಿಗೆ ಗುಣವತಿಯ ಹೊರತು ಬೇರೆ ಸಂತಾನ ಇರಲಿಲ್ಲ.

ಒಂದು ದಿನ ದೇವಶರ್ಮ ಹಾಗೂ ಅವನ ಅಳಿಯ ಚಂದ್ರರು ದರ್ಭೆ, ಅರಳೀ ಕಟ್ಟಿಗೆಗಳನ್ನು ತೆಗೆದುಕೊಂಡು ಬರಲು ಹಿಮಾಲಯ ಪರ್ವತದ ಶೈಲಶಿಖರದಲ್ಲಿರುವ ಒಂದು ಉಪವನಕ್ಕೆ ತೆರಳಿದರು. ಹೈಮಾಚಲದ ಉತ್ತುಂಗ ಶೃಂಗಾಂಗಣದಲ್ಲಿರುವ ಆ ಪುಷ್ಪೋದ್ಯಾನದ ಕುಸುಮ ಸಮೃದ್ಧಿಯನ್ನೂ, ವನಶ್ರೀ ವೈಭವವನ್ನೂ ನೋಡಿ ಸಮಿತ್ಪುಷ್ಪಗಳನ್ನು ಆಯ್ದುಕೊಂಡು ಮುದಿತಮಾನಸರಾದ ಅವರು ಚಕ್ಕಂದದಿಂದ ಸಂಚರಿಸುತ್ತಲಿರುವಾಗ ಅಲ್ಲಿ ಘೋರರೂಪಿಯಾದ ಓರ್ವ ರಾಕ್ಷಸನು ಕಣ್ಣಿಗೆ ಬಿದ್ದ. ಅವನನ್ನು ಕಂಡಕೂಡಲೇ ಆ ದೇವಶರ್ಮ ಅವನ ಅಳಿಯ ಇಬ್ಬರೂ ಭಯಭ್ರಾಂತರಾಗಿ ನಡುಗತೊಡಗಿದರು. ಭಯೋದ್ರೇಕದಿಂದ ಅವರಿಗೆ ಓಡಿಹೋಗಲೂ ಆಗಲಿಲ್ಲ. ಯಮದೂತನಂತಿದ್ದ ಆ ರಾಕ್ಷಸನು ಆ ಇಬ್ಬರೂ ಅಳಿಯ ಮಾವರನ್ನು ಕ್ರೌರ್ಯದಿಂದ

ಕೊಂದು ತಿಂದುಬಿಟ್ಟನು. ಸುದೈವದಿಂದ ಅವರು ಹೂ, ತುಳಸಿ ಕೊಯ್ಯಲೆಂದು ಬಂದ ಆ ಸ್ಥಳವು ಪುಣ್ಯಕ್ಷೇತ್ರವಾಗಿದ್ದಿತು. ಆ ಪುಣ್ಯಕ್ಷೇತ್ರದಲ್ಲಿ ಮರಣ ಹೊಂದಿದ್ದರಿಂದ ಮತ್ತು ಯಾವ ಜನ್ಮ ಅವರು ಮಾಡಿದ ಸೂರ್ಯನಾರಾಯಣನ ಆರಾಧನೆಯಿಂದಲೂ ಅವರಿಬ್ಬರನ್ನೂ ದೇವದೂತರು ಬಂದು ವೈಕುಂಠ ಲೋಕಕ್ಕೆ ಕರೆದೊಯ್ದರು. ಆ ಜನ್ಮದಲ್ಲಿ ಬುದ್ಧಿಬಂದಾಗಿನಿಂದ ಸಾಯುವವರೆಗೆ ಆ ಇಬ್ಬರೂ ಮಾಡಿದ ಸವಿತೃಮಂಡಲ ಮಧ್ಯವರ್ತಿಯಾದ ನಾರಾಯಣನ ನಿತ್ಯ ನಿರಂತರ ಪೂಜಾಪರ್ಯುಪಾಸನೆಯಿಂದ ನಾನು ಸುಪ್ರೀತನಾದೆ. ಅನಂತರ ಅವರ್ಬ್ಬಿಬರೂ ನನ್ನ ವೈಕುಂಠ ಮಂದಿರದಲ್ಲಿಯೇ ನನ್ನ ಸಾರೂಪ್ಯವನ್ನು ಹೊಂದಿ ಸೂರ್ಯಸಮಾನವಾದ ಕಾಂತಿಯಿಂದ ನನ್ನ ಸನ್ನಿಧಾನದಲ್ಲಿಯೇ ಇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕ ಮಾಹಾತ್ಮ್ಯ ಎಂಬ ಎಂಬತ್ತಾರನೇಯ ಅಧ್ಯಾಯ ಮುಗಿದುದು*



## ಗುಣವತಿಗೆ ಕಾರ್ತೀಕ ಮಾಸದಲ್ಲಿ ಮಾಡಿದ ಶ್ರೀಹರಿಯ ಸೇವೆಯಿಂದ ಸತ್ಯಭಾಮಾ ಜನ್ಮಪ್ರಾಪ್ತಿ

**ಅಧ್ಯಾಯ - ೮೭**

**ಶ್ರೀಕೃಷ್ಣ:-** ಅನಂತರ ಇತ್ತ ಮನೆಯಲ್ಲಿ ಗುಣವತಿಯು ತನ್ನ ತಂದೆ ಮತ್ತು ಗಂಡ ಇಬ್ಬರೂ ರಕ್ಕಸನಿಂದ ಹಿಮಾಚಲದ ಪುಷ್ಪೋದ್ಯಾನದಲ್ಲಿಯೇ ಕೊಲ್ಲಲ್ಪಟ್ಟಿದ್ದನ್ನು ಕೇಳಿ ದುಃಖಸಂತಪ್ತಳಾದಳು. ಕಣ್ಣೀರಿನ ಕೋಡಿ ಹರಿಸುತ್ತ ಕರುಣಾಜನಕವಾಗಿ ಶೋಕ ಮಾಡಿದಳು.

**ಗುಣವತಿ:-** ಹಾ ! ತಂದೆಯೇ, ಪೂಜ್ಯನಾದ ಪತಿದೇವ, ನೀವಿಬ್ಬರೂ ನನ್ನನ್ನು ಅನಾಥಳನ್ನಾಗಿ ಮಾಡಿ ಎಲ್ಲಿಗೆ ಹೊರಟುಹೋದಿರಿ? ಬಾಲೆಯಾದ ನಾನು ನಿಮ್ಮಿಬ್ಬರನ್ನು ಕಳೆದುಕೊಂಡು ಹೇಗೆ ಜೀವಿಸಲಿ? ಈ ಮನೆಯಲ್ಲಿ ನನಗೆ ಇನ್ನು ಮುಂದೆ ಭೋಜನವನ್ನು ಕೊಡುವವರು ಯಾರು? ಬಟ್ಟೆಯನ್ನು ಒದಗಿಸುವವರು ಯಾರು? ನನಗೆ ಇನ್ನು ಯಾವ ಕಾರ್ಯವನ್ನು ಮಾಡಲೂ ಬಾರದು. ಯಾವ ವಿಷಯದಲ್ಲೂ ನಾನು ಕುಶಲಳಲ್ಲ. ಪ್ರೀತಿಯಿಂದ ಇನ್ನು ಮೇಲೆ ನನ್ನನ್ನು ಪಾಲಿಸುವವರಾರು? ಲಾಲಿಸುವವರಾರು? ಅಯ್ಯೋ, ನನ್ನ ಸೌಭಾಗ್ಯವೇ ಹೋಯಿತಲ್ಲ? ಸುಖಸರ್ವಸ್ವವೇ ಹಾಳಾಯಿತಲ್ಲ? ನನ್ನ ಸತ್ಯಾನಾಶ ಆಗಿಹೋಯಿತು. ನಾನಿನ್ನು ಹೇಗೆ ಬಾಳಲಿ? ಹೇಗೆ ಬದುಕಲಿ? ಯಾರಿಗೆ ಶರಣು ಹೋಗಲಿ?

ಹೀಗೆ ಬಿರುಗಾಳಿಗೆ ನೆಲಕ್ಕೆ ಉರುಳಿದ ಬಾಳೆಯ ಕಂಬದಂತೆ ನೆಲದ ಮೇಲೆ ಉರುಳಿಬಿದ್ದು ಶೋಕಿಸಿದಳು. ಕುರಿಯಂತೆ ದುಃಖಿಸಿದಳು. ಬಹುಕಾಲ ಕರುಣೆಯ ಕಾದಂಬಿನಿಯಾಗಿ ಅತ್ತು ಗೋಗರೆದು ಅನಂತರ ಕೆಲ ಸಮಯದ ಬಳಿಕ ತನ್ನಷ್ಟಕ್ಕೆ ತಾನೇ ಸಾವರಿಸಿಕೊಂಡು ಮೇಲೆದ್ದಳು. ಮನೆಯಲ್ಲಿಯ ಪದಾರ್ಥಗಳನ್ನೆಲ್ಲ ಮಾರಾಟ ಮಾಡಿ ಬಂದ ಹಣದಿಂದ ತನ್ನ ಗಂಡ ಹಾಗೂ ತಂದೆಯ ಅಂತ್ಯ ಸಂಸ್ಕಾರ ಹಾಗೂ ಔರ್ಧ್ವದೈಹಿಕ ಕ್ರಿಯಾಕಲಾಪಗಳನ್ನೆಲ್ಲ ಮಾಡಿ ಮುಗಿಸಿದಳು. ತಾನು ಅದೇ ಊರಿನಲ್ಲಿ

ವಿಷ್ಣುಭಕ್ತಿಪರಳಾಗಿ ಜಿತೇಂದ್ರಿಯಳಾಗಿ ಮಡಿಮೈಲಿಗೆಯನ್ನು ಚೆನ್ನಾಗಿ ಅರಿತು ಸದಾಚಾರ ಸಂಪನ್ನಳಾಗಿ ದೇವಬ್ರಾಹ್ಮಣರ ಸೇವೆಯನ್ನು ಮಾಡುತ್ತ ವಾಸಮಾಡಿದಳು ಶಿಷ್ಟ ವಿಶಿಷ್ಟರ ಮನೆಯಲ್ಲಿ ದುಡಿದು, ಸೇವೆಮಾಡಿ ಅವರು ನೀಡಿದ ಸೀದಾಸಾಮಗ್ರಿಗಳಿಂದ ಹೇಗೋ ಉಪಜೀವನ ಸಾಗಿಸಿದಳು. ಅವಳು ಆ ಜನ್ಮದಲ್ಲಿ ಅತ್ಯಂತ ನಿಷ್ಠೆಯಿಂದ ವ್ರತಗಳು ಮಾತ್ರ ಪಾಲಿಸಿಕೊಂಡು ಬಂದಳು. ೧) ಏಕಾದಶೀ ವ್ರತ ೨) ಕಾರ್ತೀಕ ವ್ರತ.

ಪ್ರೇಯಸಿಯಾದ ಸತ್ಯಭಾಮೆ, ಈ ಎರಡೂ ವ್ರತಗಳು ನನಗೆ ಅತ್ಯಂತ ಪ್ರೀತ್ಯಾಸ್ಪದ. ಈ ಎರಡು ವ್ರತಗಳಿಂದ ಮಾನವರಿಗೆ ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿ ಇವೆರಡೂ ನಿಶ್ಚಿತ. ಈ ವ್ರತಗಳ ಅನುಷ್ಠಾನದಿಂದ ಭಕ್ತರಿಗೆ ಸಂತಾನ, ಸಂಪತ್ತು, ಸೌಭಾಗ್ಯ ಸಮೃದ್ಧಿಯುಂಟಾಗುವದು.

ಕಾರ್ತೀಕ ಮಾಸದಲ್ಲಿ ಸೂರ್ಯನು ತುಲಾರಾಶಿಯಲ್ಲಿದ್ದಾಗ ಪ್ರತಿನಿತ್ಯವೂ ನಸುಕಿನಲ್ಲಿಯೇ ಎದ್ದು ಸ್ನಾನಮಾಡಿದವರ ಮಹಾ ಮಹಾ ಪಾಪಗಳೂ ಬಿಟ್ಟು ಹೋಗುವು. ಕಾರ್ತೀಕದಲ್ಲಿ ವಿಷ್ಣುಮಂದಿರದಲ್ಲಿ ಕಸಗುಡಿಸಿ ರಂಗವಲ್ಲಿ ಹಾಕಿದರೆ, ಸಾರಣೆ ಕಾರಣೆ ಮಾಡಿದರೆ, ಅಥವಾ ವಿಷ್ಣುಪೂಜೆ ಮಾಡಿದರೆ ಆ ಮಾನವರು ಜೀವನ್ಮುಕ್ತರಾದಂತೆಯೇ. ಕಾರ್ತೀಕ ಮಾಸದಲ್ಲಿ ದಶಮೀ, ಏಕಾದಶೀ, ದ್ವಾದಶಿ ಈ ಮೂರು ದಿನ ಸ್ನಾನ, ಜಾಗರ, ದೀಪದಾನ, ತುಳಸೀವನಸೇವನಾದಿಗಳನ್ನು ಮಾಡಿದವರು ದೇವತೆಗಳಿಗೂ ಅಭಿನಂದನೀಯರಾಗುವರು.

ಗುಣವತಿಯು ಪ್ರತಿ ವರ್ಷವೂ ಕಾರ್ತೀಕ ವ್ರತವನ್ನೂ, ದೀಪಾರಾಧನೆಯನ್ನೂ ದೇವಮಂದಿರದ ಸಾರಣೆ, ಕಾರಣೆ, ಸಂಮಾರ್ಜನ, ರಂಗವಲ್ಲಿ, ಸ್ವಸ್ತಿಕಾದಿ ಚಿತ್ರಣ ಮುಂತಾದ ಸೇವೆಗಳನ್ನು ತಪ್ಪದೇ ಮಾಡುತ್ತಿದ್ದಳು. ಮತ್ತು ವರ್ಷದ ೧೨ ತಿಂಗಳಲ್ಲಿ ಬರುವ ಇಪ್ಪತ್ತನಾಲ್ಕೂ ಏಕಾದಶೀ ದಿನಗಳಂದು ಉಪವಾಸ, ಜಾಗರ, ಹರಿಭಜನ, ತಪ್ಪದೇ ಮಾಡುತ್ತಿದ್ದಳು. ದ್ವಾದಶೀ ದಿನದಂದು ಪಾರಣೆ, ಯಥಾಶಕ್ತಿ ದಾನ, ಹರಿಪೂಜೆ ಗುರುಗಳ ಆರಾಧನೆಯನ್ನು ಮಾಡುತ್ತಿದ್ದಳು.

ಹೀಗೆ ಅನೇಕ ವರ್ಷಗಳ ಕಾಲ ಕಾರ್ತೀಕ ವ್ರತ, ಏಕಾದಶೀ ವ್ರತ ಮಾಡುತ್ತಲೇ ಅವಳ ದೇಹ ಸವೆಯಿತು. ಮುಪ್ಪು ಅಡರಿತು. ವಾರ್ಧಕ್ಯದಲ್ಲಿ ಅವಳಿಗೆ ಜ್ವರ ಹಿಡಿಯಿತು. ಮುಪ್ಪಿನ ಕಾಲದಲ್ಲಿ ಅವಳು. ಗಂಗಾಸ್ನಾನ ಮಾಡಲು ಮೆಲ್ಲಮೆಲ್ಲನೇ ನಡೆಯುತ್ತ ಗಂಗಾತೀರಕ್ಕೆ ಹೋದಳು. ಗಂಗೆಯ ನೀರಿನಲ್ಲಿ ಇಳಿದಳು. ಶೀತಲವಾದ ಗಂಗೆಯ ತಣ್ಣಗಿನ ನೀರಿನಲ್ಲಿ ಮುಳುಗು ಹಾಕಿದ ಕೂಡಲೇ ಅವಳ ಮೈಯಲ್ಲಿ ಭಯಂಕರವಾದ ನಡುಕ ಹುಟ್ಟಿ ನಡುನೀರಿನಲ್ಲಿಯೇ ಅವಳು ಕುಸಿದು ಪ್ರಾಣಬಿಟ್ಟಳು. ಕೂಡಲೇ ಸ್ವರ್ಗದಿಂದ ವಿಮಾನ ಬಂದಿತು. ಶಂಖಚಕ್ರಗದಾ ಪದ್ಮಾದಿ ವೈಷ್ಣವ ಚಿಹ್ನೆಗಳನ್ನು ಧರಿಸಿದ ವಿಷ್ಣುದೂತರು ಅವಳನ್ನು ವಿಮಾನದಲ್ಲಿ ಕೂಡಿಸಿಕೊಂಡು ಚಾಮರ ಬೀಸುತ್ತ ವೈಕುಂಠಕ್ಕೆ ಕರೆದೊಯ್ದರು. ಆ ಗುಣವತಿಯು ಕಾರ್ತೀಕ ವ್ರತದ ಪುಣ್ಯದಿಂದ ವಿಮಾನಾರೂಢಳಾಗಿ ಅಗ್ನಿಶಿಖೆಯಂತೆ ದೇದೀಪ್ಯಮಾನವಾದ ಕಾಂತಿಯಿಂದ ಕಂಗೊಳಿಸುತ್ತ ನನ್ನ ಸನ್ನಿಧಿಗೆ ಬಂದಳು.

ಅನಂತರ ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಂತೆ ನಾನು ಭೂಲೋಕಕ್ಕೆ ಕೃಷ್ಣಾವತಾರ ಮಾಡಿ ಇಳಿದು ಬಂದೆ. ವೈಕುಂಠಲೋಕದ ನನ್ನ ಅನೇಕ ಪಾರ್ಷದರೂ ನನ್ನೊಡನೆ ಭೂತಳಕ್ಕೆ

ಅವತರಿಸಿ ಬಂದರು. ನಿನ್ನ ಹಿಂದಿನ ಜನ್ಮದ ತಂದೆಯಾದ ದೇವಶರ್ಮನು ಸತ್ರಾಜಿತ ಎಂಬ ಯಾದವನಾಗಿ ಹುಟ್ಟಿದನು. ಕಳೆದ ಜನ್ಮದಲ್ಲಿ ಗುಣವತಿಯೆಂಬ ಅನ್ವರ್ಥಕವಾದ ಹೆಸರನ್ನು ಪಡೆದ ನೀನು ಕಾರ್ತೀಕ ವ್ರತ ಹಾಗೂ ಏಕಾದಶೀ ವ್ರತಗಳನ್ನು ಯಾವಜ್ಜನ್ಮ ಪಾಲಿಸಿದ ಪುಣ್ಯಪ್ರಭಾವದಿಂದ ಈ ಜನ್ಮದಲ್ಲಿ ಸತ್ಯಭಾಮೆಯಾಗಿ ಹುಟ್ಟಿರುವೆ. ಕಳೆದ ಜನ್ಮದಲ್ಲಿ ನೀನು ಗುಣವತಿಯಾಗಿದ್ದಾಗ ಒಂದು ವಿಷ್ಣುಮಂದಿರದ ದ್ವಾರದಲ್ಲಿ ತುಳಸಿಯ ಬನವನ್ನು ಮಾಡಿದ್ದೆ. ಆ ಪುಣ್ಯದಿಂದ ಈ ಜನ್ಮದಲ್ಲಿ ನಿನ್ನ ಮನೆಯ ಅಂಗಳದಲ್ಲಿ ಕಲ್ಪವೃಕ್ಷವು ಸ್ಥಿರಸ್ಥಾಪಿತವಾಗಿದೆ. ಹಿಂದೆ ನೀನು ಕಾರ್ತೀಕವ್ರತ ಮಾಡಿದ್ದರಿಂದ ಸೌಂದರ್ಯ ಶ್ರೀ ಉಕ್ಕುತ್ತಲಿದೆ. ಮನೆಯಲ್ಲಿಯೂ ಐಶ್ವರ್ಯವು ತುಂಬಿತುಳುಕುತ್ತಲಿದೆ. ನೀನು ಅಂದು ಮಾಡಿದ ವ್ರತ, ಉಪವಾಸ, ದಾನ, ಧರ್ಮ, ಪ್ರದಕ್ಷಿಣೆ, ನಮಸ್ಕಾರ ಮುಂತಾದ ಎಲ್ಲ ಕರ್ಮಗಳನ್ನೂ ತತ್ವಂತರ್ಗತನಾದ ನಾರಾಯಣನಿಗೆ ಅರ್ಪಿಸಿದ್ದರಿಂದ ಈ ಜನ್ಮದಲ್ಲಿ ನನ್ನ ಕೈ ಹಿಡಿದು ಪ್ರೀತಿಯ ಮಡದಿಯಾಗಿರುವೆ. ಆಗ ಹುಟ್ಟಿನಿಂದ ಸಾಯುವವರೆಗೆ ಕಾರ್ತೀಕ ವ್ರತವನ್ನು ತಪ್ಪದೇ ಮಾಡಿದ್ದರಿಂದ ನಿನಗೆ ಈ ಜನ್ಮದಲ್ಲಿ ನನ್ನಿಂದ ಎಂದೂ ವಿಯೋಗವು ಉಂಟಾಗುವದಿಲ್ಲ. ಹೀಗೆ ಕಾರ್ತೀಕ ಮಾಸದಲ್ಲಿ ಭಕ್ತಿಯಿಂದ ವ್ರತ, ದೀಪಾರಾಧನೆ, ಉಪವಾಸ, ಜಾಗರ, ವಿಷ್ಣುಸ್ಮರಣೆ ಮುಂತಾದವನ್ನು ಮಾಡಿದವರು ನನ್ನ ನಿರಂತರ ಸಾನ್ನಿಧ್ಯದಲ್ಲಿದ್ದು ಭೋಗಭಾಗ್ಯಗಳನ್ನು ಪಡೆಯುವರು.

ಹೀಗೆ ಶ್ರೀ ಕೃಷ್ಣನ ಮುಖದಿಂದ ತಾನು ಜನ್ಮಾಂತರದಲ್ಲಿ ಮಾಡಿದ ವ್ರತ ಸೇವೆಯಿಂದ ಈ ಜನ್ಮದಲ್ಲಿ ಶ್ರೀಕೃಷ್ಣಪರಮಾತ್ಮನ ಕೈ ಹಿಡಿದು ಭೋಗಭಾಗ್ಯಗಳನ್ನು ಪಡೆದುದನ್ನು ಕೇಳಿ ಸಂತುಷ್ಟಳಾಗಿ ಭಕ್ತಿಯಿಂದ ಶ್ರೀಕೃಷ್ಣನನ್ನು ನಮಿಸಿ ಇಂತು ನುಡಿದಳು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಂಬತ್ತೇಳನೇಯ ಅಧ್ಯಾಯ ಮುಗಿದುದು*



## ಶಂಖಾಸುರನ ಉಪಾಖ್ಯಾನ

ಅಧ್ಯಾಯ - ೮೮

**ಸತ್ಯಭಾಮಾ:-** ದೇವೋತ್ತಮನಾದ ಶ್ರೀ ಕೃಷ್ಣ, ಎಲ್ಲ ಮಾಸಗಳು, ವರ್ಷಗಳು, ಪಕ್ಷಗಳು, ದಿನಗಳು ಕಾಲಸ್ವರೂಪಿಯಾದ ನಿನ್ನ ಅವಯವಗಳಷ್ಟೇ ! ನಿನ್ನ ಅವಯವ ರೂಪವಾದ ಕಾಲ ಖಂಡಗಳು ಎಲ್ಲವೂ ಸರಿಸಮಾನ. ಹೀಗಿದ್ದ ಮೇಲೆ ನಿನ್ನ ಕಾಲಸ್ವರೂಪದ ಒಂದು ಅವಯವದಂತಿರುವ ಕಾರ್ತೀಕ ಮಾಸವು ಮಾತ್ರ ಏಕೆ ಪ್ರಧಾನ? ಎಲ್ಲ ತಿಥಿಗಳು ನಿನ್ನ ಒಂದು ಅವಯವ ರೂಪವಾದ ಮೇಲೆ ಏಕಾದಶೀ ತಿಥಿಗೆ ಏಕೆ ಪ್ರಾಧಾನ್ಯ? ಇದಕ್ಕೆ ಕಾರಣವು ಏನು?

**ಶ್ರೀಕೃಷ್ಣ:-** ಸತ್ಯಭಾಮೆ, ನೀನು ಒಳ್ಳೇ ಮಾರ್ಮಿಕ ಪ್ರಶ್ನೆಯನ್ನೇ ಮಾಡಿದೆ. ಅದಕ್ಕೆ ಉತ್ತರವನ್ನು ಹೇಳುತ್ತೇನೆ. ಏಕಾಗ್ರಮನಸ್ಸಿನಿಂದ ಕೇಳು.

ಪೂರ್ವಕಾಲದಲ್ಲಿ ವೇನರಾಜನ ಮಗನಾದ ಪೃಥುರಾಜನಿಗೂ ದೇವರ್ಷಿ ನಾರದರಿಗೂ ಇದೇ ವಿಷಯದಲ್ಲಿ ಸಂಭಾಷಣೆ ನಡೆಯಿತು. ಕಾರ್ತೀಕಮಾಸದ್ದು ಏನು ವೈಶಿಷ್ಟ್ಯ?

ವಿಷ್ಣುಭಕ್ತಿಪರಳಾಗಿ ಜಿತೇಂದ್ರಿಯಳಾಗಿ ಮಡಿಮೈಲಿಗೆಯನ್ನು ಚೆನ್ನಾಗಿ ಅರಿತು ಸದಾಚಾರ ಸಂಪನ್ನಳಾಗಿ ದೇವಬ್ರಾಹ್ಮಣರ ಸೇವೆಯನ್ನು ಮಾಡುತ್ತ ವಾಸಮಾಡಿದಳು ಶಿಷ್ಟ ವಿಶಿಷ್ಟರ ಮನೆಯಲ್ಲಿ ದುಡಿದು, ಸೇವೆಮಾಡಿ ಅವರು ನೀಡಿದ ಸೀದಾಸಾಮಗ್ರಿಗಳಿಂದ ಹೇಗೋ ಉಪಜೀವನ ಸಾಗಿಸಿದಳು. ಅವಳು ಆ ಜನ್ಮದಲ್ಲಿ ಅತ್ಯಂತ ನಿಷ್ಠೆಯಿಂದ ವ್ರತಗಳು ಮಾತ್ರ ಪಾಲಿಸಿಕೊಂಡು ಬಂದಳು. ೧) ಏಕಾದಶೀ ವ್ರತ ೨) ಕಾರ್ತೀಕ ವ್ರತ.

ಪ್ರೇಯಸಿಯಾದ ಸತ್ಯಭಾಮೆ, ಈ ಎರಡೂ ವ್ರತಗಳು ನನಗೆ ಅತ್ಯಂತ ಪ್ರೀತ್ಯಾಸ್ಪದ. ಈ ಎರಡು ವ್ರತಗಳಿಂದ ಮಾನವರಿಗೆ ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿ ಇವೆರಡೂ ನಿಶ್ಚಿತ. ಈ ವ್ರತಗಳ ಅನುಷ್ಠಾನದಿಂದ ಭಕ್ತರಿಗೆ ಸಂತಾನ, ಸಂಪತ್ತು, ಸೌಭಾಗ್ಯ ಸಮೃದ್ಧಿಯುಂಟಾಗುವದು.

ಕಾರ್ತೀಕ ಮಾಸದಲ್ಲಿ ಸೂರ್ಯನು ತುಲಾರಾಶಿಯಲ್ಲಿದ್ದಾಗ ಪ್ರತಿನಿತ್ಯವೂ ನಸುಕಿನಲ್ಲಿಯೇ ಎದ್ದು ಸ್ನಾನಮಾಡಿದವರ ಮಹಾ ಮಹಾ ಪಾಪಗಳೂ ಬಿಟ್ಟು ಹೋಗುವು. ಕಾರ್ತೀಕದಲ್ಲಿ ವಿಷ್ಣುಮಂದಿರದಲ್ಲಿ ಕಸಗುಡಿಸಿ ರಂಗವಲ್ಲಿ ಹಾಕಿದರೆ, ಸಾರಣೆ ಕಾರಣೆ ಮಾಡಿದರೆ, ಅಥವಾ ವಿಷ್ಣುಪೂಜೆ ಮಾಡಿದರೆ ಆ ಮಾನವರು ಜೀವನ್ಮುಕ್ತರಾದಂತೆಯೇ. ಕಾರ್ತೀಕ ಮಾಸದಲ್ಲಿ ದಶಮೀ, ಏಕಾದಶೀ, ದ್ವಾದಶಿ ಈ ಮೂರು ದಿನ ಸ್ನಾನ, ಜಾಗರ, ದೀಪದಾನ, ತುಳಸೀವನಸೇವನಾದಿಗಳನ್ನು ಮಾಡಿದವರು ದೇವತೆಗಳಿಗೂ ಅಭಿನಂದನೀಯರಾಗುವರು.

ಗುಣವತಿಯು ಪ್ರತಿ ವರ್ಷವೂ ಕಾರ್ತೀಕ ವ್ರತವನ್ನೂ, ದೀಪಾರಾಧನೆಯನ್ನೂ ದೇವಮಂದಿರದ ಸಾರಣೆ, ಕಾರಣೆ, ಸಂಮಾರ್ಜನ, ರಂಗವಲ್ಲಿ, ಸ್ವಸ್ತಿಕಾದಿ ಚಿತ್ರಣ ಮುಂತಾದ ಸೇವೆಗಳನ್ನು ತಪ್ಪದೇ ಮಾಡುತ್ತಿದ್ದಳು. ಮತ್ತು ವರ್ಷದ ೧೨ ತಿಂಗಳಲ್ಲಿ ಬರುವ ಇಪ್ಪತ್ತನಾಲ್ಕೂ ಏಕಾದಶೀ ದಿನಗಳಂದು ಉಪವಾಸ, ಜಾಗರ, ಹರಿಭಜನ, ತಪ್ಪದೇ ಮಾಡುತ್ತಿದ್ದಳು. ದ್ವಾದಶೀ ದಿನದಂದು ಪಾರಣೆ, ಯಥಾಶಕ್ತಿ ದಾನ, ಹರಿಪೂಜೆ ಗುರುಗಳ ಆರಾಧನೆಯನ್ನು ಮಾಡುತ್ತಿದ್ದಳು.

ಹೀಗೆ ಅನೇಕ ವರ್ಷಗಳ ಕಾಲ ಕಾರ್ತೀಕ ವ್ರತ, ಏಕಾದಶೀ ವ್ರತ ಮಾಡುತ್ತಲೇ ಅವಳ ದೇಹ ಸವೆಯಿತು. ಮುಪ್ಪು ಅಡರಿತು. ವಾರ್ಧಕ್ಯದಲ್ಲಿ ಅವಳಿಗೆ ಜ್ವರ ಹಿಡಿಯಿತು. ಮುಪ್ಪಿನ ಕಾಲದಲ್ಲಿ ಅವಳು. ಗಂಗಾಸ್ನಾನ ಮಾಡಲು ಮೆಲ್ಲಮೆಲ್ಲನೇ ನಡೆಯುತ್ತ ಗಂಗಾತೀರಕ್ಕೆ ಹೋದಳು. ಗಂಗೆಯ ನೀರಿನಲ್ಲಿ ಇಳಿದಳು. ಶೀತಲವಾದ ಗಂಗೆಯ ತಣ್ಣಗಿನ ನೀರಿನಲ್ಲಿ ಮುಳುಗು ಹಾಕಿದ ಕೂಡಲೇ ಅವಳ ಮೈಯಲ್ಲಿ ಭಯಂಕರವಾದ ನಡುಕ ಹುಟ್ಟಿ ನಡುನೀರಿನಲ್ಲಿಯೇ ಅವಳು ಕುಸಿದು ಪ್ರಾಣಬಿಟ್ಟಳು. ಕೂಡಲೇ ಸ್ವರ್ಗದಿಂದ ವಿಮಾನ ಬಂದಿತು. ಶಂಖಚಕ್ರಗದಾ ಪದ್ಮಾದಿ ವೈಷ್ಣವ ಚಿಹ್ನೆಗಳನ್ನು ಧರಿಸಿದ ವಿಷ್ಣುದೂತರು ಅವಳನ್ನು ವಿಮಾನದಲ್ಲಿ ಕೂಡಿಸಿಕೊಂಡು ಚಾಮರ ಬೀಸುತ್ತ ವೈಕುಂಠಕ್ಕೆ ಕರೆದೊಯ್ದರು. ಆ ಗುಣವತಿಯು ಕಾರ್ತೀಕ ವ್ರತದ ಪುಣ್ಯದಿಂದ ವಿಮಾನಾರೂಢಳಾಗಿ ಅಗ್ನಿಶಿಖೆಯಂತೆ ದೇದೀಪ್ಯಮಾನವಾದ ಕಾಂತಿಯಿಂದ ಕಂಗೊಳಿಸುತ್ತ ನನ್ನ ಸನ್ನಿಧಿಗೆ ಬಂದಳು.

ಅನಂತರ ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಂತೆ ನಾನು ಭೂಲೋಕಕ್ಕೆ ಕೃಷ್ಣಾವತಾರ ಮಾಡಿ ಇಳಿದು ಬಂದೆ. ವೈಕುಂಠಲೋಕದ ನನ್ನ ಅನೇಕ ಪಾರ್ಷದರೂ ನನ್ನೊಡನೆ ಭೂತಳಕ್ಕೆ

ಅವತರಿಸಿ ಬಂದರು. ನಿನ್ನ ಹಿಂದಿನ ಜನ್ಮದ ತಂದೆಯಾದ ದೇವಶರ್ಮನು ಸತ್ರಾಜಿತ ಎಂಬ ಯಾದವನಾಗಿ ಹುಟ್ಟಿದನು. ಕಳೆದ ಜನ್ಮದಲ್ಲಿ ಗುಣವತಿಯೆಂಬ ಅನ್ವರ್ಥಕವಾದ ಹೆಸರನ್ನು ಪಡೆದ ನೀನು ಕಾರ್ತೀಕ ವ್ರತ ಹಾಗೂ ಏಕಾದಶೀ ವ್ರತಗಳನ್ನು ಯಾವಜ್ಜನ್ಮ ಪಾಲಿಸಿದ ಪುಣ್ಯಪ್ರಭಾವದಿಂದ ಈ ಜನ್ಮದಲ್ಲಿ ಸತ್ಯಭಾಮೆಯಾಗಿ ಹುಟ್ಟಿರುವೆ. ಕಳೆದ ಜನ್ಮದಲ್ಲಿ ನೀನು ಗುಣವತಿಯಾಗಿದ್ದಾಗ ಒಂದು ವಿಷ್ಣುಮಂದಿರದ ದ್ವಾರದಲ್ಲಿ ತುಳಸಿಯ ಬನವನ್ನು ಮಾಡಿದ್ದೆ. ಆ ಪುಣ್ಯದಿಂದ ಈ ಜನ್ಮದಲ್ಲಿ ನಿನ್ನ ಮನೆಯ ಅಂಗಳದಲ್ಲಿ ಕಲ್ಪವೃಕ್ಷವು ಸ್ಥಿರಸ್ಥಾಪಿತವಾಗಿದೆ. ಹಿಂದೆ ನೀನು ಕಾರ್ತೀಕವ್ರತ ಮಾಡಿದ್ದರಿಂದ ಸೌಂದರ್ಯ ಶ್ರೀ ಉಕ್ಕುತ್ತಲಿದೆ. ಮನೆಯಲ್ಲಿಯೂ ಐಶ್ವರ್ಯವು ತುಂಬಿತುಳುಕುತ್ತಲಿದೆ. ನೀನು ಅಂದು ಮಾಡಿದ ವ್ರತ, ಉಪವಾಸ, ದಾನ, ಧರ್ಮ, ಪ್ರದಕ್ಷಿಣೆ, ನಮಸ್ಕಾರ ಮುಂತಾದ ಎಲ್ಲ ಕರ್ಮಗಳನ್ನೂ ತತ್ವಂತರ್ಗತನಾದ ನಾರಾಯಣನಿಗೆ ಅರ್ಪಿಸಿದ್ದರಿಂದ ಈ ಜನ್ಮದಲ್ಲಿ ನನ್ನ ಕೈ ಹಿಡಿದು ಪ್ರೀತಿಯ ಮಡದಿಯಾಗಿರುವೆ. ಆಗ ಹುಟ್ಟಿನಿಂದ ಸಾಯುವವರೆಗೆ ಕಾರ್ತೀಕ ವ್ರತವನ್ನು ತಪ್ಪದೇ ಮಾಡಿದ್ದರಿಂದ ನಿನಗೆ ಈ ಜನ್ಮದಲ್ಲಿ ನನ್ನಿಂದ ಎಂದೂ ವಿಯೋಗವು ಉಂಟಾಗುವದಿಲ್ಲ. ಹೀಗೆ ಕಾರ್ತೀಕ ಮಾಸದಲ್ಲಿ ಭಕ್ತಿಯಿಂದ ವ್ರತ, ದೀಪಾರಾಧನೆ, ಉಪವಾಸ, ಜಾಗರ, ವಿಷ್ಣುಸ್ಮರಣೆ ಮುಂತಾದವನ್ನು ಮಾಡಿದವರು ನನ್ನ ನಿರಂತರ ಸಾನ್ನಿಧ್ಯದಲ್ಲಿದ್ದು ಭೋಗಭಾಗ್ಯಗಳನ್ನು ಪಡೆಯುವರು.

ಹೀಗೆ ಶ್ರೀ ಕೃಷ್ಣನ ಮುಖದಿಂದ ತಾನು ಜನ್ಮಾಂತರದಲ್ಲಿ ಮಾಡಿದ ವ್ರತ ಸೇವೆಯಿಂದ ಈ ಜನ್ಮದಲ್ಲಿ ಶ್ರೀಕೃಷ್ಣಪರಮಾತ್ಮನ ಕೈ ಹಿಡಿದು ಭೋಗಭಾಗ್ಯಗಳನ್ನು ಪಡೆದುದನ್ನು ಕೇಳಿ ಸಂತುಷ್ಟಳಾಗಿ ಭಕ್ತಿಯಿಂದ ಶ್ರೀಕೃಷ್ಣನನ್ನು ನಮಿಸಿ ಇಂತು ನುಡಿದಳು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ಎಂಬತ್ತೇಳನೇಯ ಅಧ್ಯಾಯ ಮುಗಿದುದು*



## ಶಂಖಾಸುರನ ಉಪಾಖ್ಯಾನ

ಅಧ್ಯಾಯ - ೮೮

**ಸತ್ಯಭಾಮಾ:-** ದೇವೋತ್ತಮನಾದ ಶ್ರೀ ಕೃಷ್ಣ, ಎಲ್ಲ ಮಾಸಗಳು, ವರ್ಷಗಳು, ಪಕ್ಷಗಳು, ದಿನಗಳು ಕಾಲಸ್ವರೂಪಿಯಾದ ನಿನ್ನ ಅವಯವಗಳಷ್ಟೇ ! ನಿನ್ನ ಅವಯವ ರೂಪವಾದ ಕಾಲ ಖಂಡಗಳು ಎಲ್ಲವೂ ಸರಿಸಮಾನ. ಹೀಗಿದ್ದ ಮೇಲೆ ನಿನ್ನ ಕಾಲಸ್ವರೂಪದ ಒಂದು ಅವಯವದಂತಿರುವ ಕಾರ್ತೀಕ ಮಾಸವು ಮಾತ್ರ ಏಕೆ ಪ್ರಧಾನ? ಎಲ್ಲ ತಿಥಿಗಳು ನಿನ್ನ ಒಂದು ಅವಯವ ರೂಪವಾದ ಮೇಲೆ ಏಕಾದಶೀ ತಿಥಿಗೆ ಏಕೆ ಪ್ರಾಧಾನ್ಯ? ಇದಕ್ಕೆ ಕಾರಣವು ಏನು?

**ಶ್ರೀಕೃಷ್ಣ:-** ಸತ್ಯಭಾಮೆ, ನೀನು ಒಳ್ಳೇ ಮಾರ್ಮಿಕ ಪ್ರಶ್ನೆಯನ್ನೇ ಮಾಡಿದೆ. ಅದಕ್ಕೆ ಉತ್ತರವನ್ನು ಹೇಳುತ್ತೇನೆ. ಏಕಾಗ್ರಮನಸ್ಸಿನಿಂದ ಕೇಳು.

ಪೂರ್ವಕಾಲದಲ್ಲಿ ವೇನರಾಜನ ಮಗನಾದ ಪೃಥುರಾಜನಿಗೂ ದೇವರ್ಷಿ ನಾರದರಿಗೂ ಇದೇ ವಿಷಯದಲ್ಲಿ ಸಂಭಾಷಣೆ ನಡೆಯಿತು. ಕಾರ್ತೀಕಮಾಸದ್ದು ಏನು ವೈಶಿಷ್ಟ್ಯ?

ಮಿಕ್ಕಮಾಸಗಳಿಗಿಂತ ಕಾರ್ತೀಕಕ್ಕೆ ಮಾತ್ರ ಇಷ್ಟೇಕೆ ಮಹತ್ವನ್ನು ಪ್ರಾಚೀನರು ಕೊಟ್ಟಿದ್ದಾರೆ? ಎಂದು ಪೃಥುರಾಜನು ನಾರದರಿಗೆ ಪ್ರಶ್ನೆ ಮಾಡಿದ. ಅದಕ್ಕೆ ನಾರದರು ಉತ್ತರಿಸಿದರು.

**ನಾರದ:-** ಪೂರ್ವದಲ್ಲಿ ಶಂಖ ಎಂಬ ಅಸುರನು ಸಮುದ್ರದ ಮಗನಾಗಿ ಹುಟ್ಟಿದ. ಮೂರು ಲೋಕಗಳನ್ನೇ ಮರ್ದನಮಾಡುವ ಶಕ್ತಿ ಆ ಶಂಖಾಸುರನಿಗೆ. ಅವನು ತಾರುಣ್ಯದ ಹೊಸ್ತಿಲಲ್ಲಿ ಕಾಲಿಟ್ಟಾಗಲೇ ಲಗ್ಗೆ ಇಟ್ಟ ಸ್ವರ್ಗಕ್ಕೆ. ಅವನ ಭೀಷಣವಾದ ದಾಳಿಧೂಳಿಯನ್ನು ತಾಳದೆ ಪರಾಜಿತರೂ ಪರಾಹತರೂ ಆದ ಸುರಪುರದ ನಾಗರಿಕರು ಅಮರಾವತಿಯನ್ನು ಬಿಟ್ಟು. ಎಲ್ಲರೂ ಓಡಿಹೋದರು ಅವರೆಲ್ಲರ ಅಧಿಕಾರವನ್ನು ಕಿತ್ತಿಕೊಂಡ ಆ ಸಗರ ಕುಮಾರ. ಐಶ್ವರ್ಯವನ್ನೆಲ್ಲ ಸೆಳೆದುಕೊಂಡ. ಅವನ ಭೀತಿಯಿಂದ ಸುರಸತ್ತಮರೆಲ್ಲರೂ ಓಡಿಹೋಗಿ ಅವಿತುಕೊಂಡರು ಮೇರುಗಿರಿಗಹ್ವರಗಳಲ್ಲಿ. ಇದರಿಂದ ಆ ಶಂಖ ದೈತ್ಯನಿಗೆ ದೊಡ್ಡ ಚಿಂತೆ. ''ದೇವತೆಗಳ ಅಧಿಕಾರವನ್ನು ನಾನು ಕಸಿದುಕೊಂಡೆ. ಸ್ಥಾನವನ್ನೂ ಕಿತ್ತಿಕೊಂಡೆ. ಐಶ್ವರ್ಯವನ್ನು ಸೆಳೆದುಕೊಂಡೆ. ಆದರೂ ಅವರ ಬಲ ಮಾತ್ರ ಕಡಿಮೆ ಆಗಿಲ್ಲ. ಅವರು ನನ್ನಿಂದ ಸೋಲಿಸಲ್ಪಟ್ಟರೂ ನನಗೆ ಅವರ ಚಿಂತೆ ತಪ್ಪಲಿಲ್ಲ. ಅವರು ಬಲಿಷ್ಠರಾದುದರಿಂದ ನಾನು ತುಸು ಅಜಾಗರೂಕನಾದ ಕೂಡಲೇ ಸಿಡಿದೆದ್ದು ನನ್ನನ್ನು ಹೊಡೆದು ತಮ್ಮ ಸ್ಥಾನ ಅಧಿಕಾರವನ್ನು ಮರಳಿ ಪಡೆಯುವರು. ನನಗೆ ದೇವತೆಗಳನ್ನೆಲ್ಲ ಬಲಹೀನರನ್ನಾಗಿ ಮಾಡಬೇಕು. ದೇವತೆಗಳಿಗೆ ಬಲ ಎಂದರೆ ವೇದಮಂತ್ರಗಳ ಬಲವೇ ಬಲ. ಆ ವೇದಮಂತ್ರಗಳನ್ನೇ ನಾನು ಸೆಳೆದುಕೊಂಡು ಒಯ್ದುಬಿಟ್ಟರೆ ದೇವತೆಗಳ ನಾಡಿಯೇ ಬಿಟ್ಟಂತಾಗುವದು'' ಹೀಗೆ ವಿಚಾರಮಾಡಿ ಆ ದೈತ್ಯನು ಸತ್ಯಲೋಕಕ್ಕೆ ಹೋದ. ಅಲ್ಲಿ ವಿಷ್ಣು ನಿದ್ರಾಮುದ್ರೆಯಲ್ಲಿ ಕಣ್ಣುಮುಚ್ಚಿದ್ದ. ಅಲ್ಲಿಂದ ವೇದಗಳ ರಾಶಿಯನ್ನೆಲ್ಲ ಕದ್ದುಕೊಂಡು ಹೋಗಲು ಪ್ರಯತ್ನಿಸಿದ.

ಆದರೆ ಅವನ ಭಯದಿಂದ ಆ ವೇದಗಳೆಲ್ಲವೂ ಸಮುದ್ರದ ನೀರಿನಲ್ಲಿ ಅಡಗಿಕೊಂಡವು. ಶಂಖಾಸುರನಾದರೂ ಆ ವೇದಗಳನ್ನು ಹುಡುಕಲು ಸಮುದ್ರದ ಸಲಿಲದಲ್ಲೇ ಪ್ರವೇಶಿಸಿದ. ಆ ಜಲಗರ್ಭದಲ್ಲಿ ಎಲ್ಲ ಕಡೆಗೂ ವೇದಗಳನ್ನು ಹುಡುಕಾಡಿದ. ಎಲ್ಲಿಯೂ ಒಂದು ಎಡೆಯಲ್ಲಿ ಆ ವೇದರಾಶಿಯು ಆ ದೈತ್ಯನಿಗೆ ದೊರಕಿತ್ತು. ಆಗ ಬ್ರಹ್ಮದೇವರು ದೇವತೆಗಳಿಂದ ಕೂಡಿ ಗೀತ ವಾದ್ಯಗಳಿಂದ ಭಗವಂತನ ಬಣ್ಣನೆಯನ್ನು ಮಾಡಿ ಗಂಧ, ಪುಷ್ಪ, ಧೂಪದೀಪಾರತಿಗಳಿಂದ ಪ್ರಬೋಧೋತ್ಸವವನ್ನು ನೆರವೇರಿಸಿದರು. ಅವರ ಭಕ್ತಿಯಿಂದ ಎಚ್ಚತ್ತ ಶ್ರೀಹರಿ ಗೋಚರನಾದ ದೇವತೆಗಳ ದೃಷ್ಟಿಗೆ. ದೀರ್ಘದಂಡ ಪ್ರಣಾಮಗೈದರು ಸುರಸತ್ತಮರು. ಭಕ್ತಿಯಿಂದ ಸಲ್ಲಿಸಿದರು ಷೋಡಶೋಪಚಾರ ಪೂಜೆಯನ್ನು. ಅವರ ಭಕ್ತಿಯುಕ್ತವಾದ ಪೂಜೆಯಿಂದ ಸುಪ್ರಸನ್ನನಾಗಿ ನುಡಿದ ಶ್ರೀಹರಿ.

**ಶ್ರೀಹರಿ:-** ದೇವತೆಗಳೆ, ನಿಮ್ಮ ಪೂಜೆಯಿಂದ ನಾನು ಪರಿತುಷ್ಟ. ನಿಮಗೆ ಬೇಕಾದ ವರಗಳನ್ನೆಲ್ಲ ನೀಡಲು ಈಗಲೇ ನಾನು ಸಿದ್ಧ. ನಿಮ್ಮ ಅಪೇಕ್ಷೆಯನ್ನು ನಾನು ಬಲ್ಲೆ. ಅಶ್ವೀನ ಶುಕ್ಲ ಏಕಾದಶಿಯಿಂದ ಕಾರ್ತಿಕಶುಕ್ಲ ಏಕಾದಶಿವರೆಗೆ ಪ್ರತಿದಿನ ಪ್ರಭಾತ ಕಾಲದಲ್ಲಿ ನೀವು ಮಾಡಿದಂತೆ ಉಷಃಕಾಲದಲ್ಲಿ ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನ, ಗಂಧ, ಪುಷ್ಪ, ಧೂಪ, ದೀಪ, ಮಂಗಳಾರತಿ, ನೈವೇದ್ಯ, ಗೀತ, ನೃತ್ಯ ಮುಂತಾದ ಷೋಡಶೋಪಚಾರದಿಂದ ನನ್ನಪೂಜೆಯನ್ನು ವಿಧಿಪೂರ್ವಕ ಯಾರೂ ಮಾಡುವರೋ ಅವರು ನನಗೆ ಪರಮ ಪ್ರೀತ್ಯಾಸ್ಪದರಾಗುವರು. ಅವರನ್ನು ನಾನು ನನ್ನ ಸಮೀಪದಲ್ಲಿಟ್ಟು ಕೊಳ್ಳುತ್ತೇನೆ. ನೀವು

ಇತ್ತ ಬಂದಾಗ ಶಂಖಾಸುರನು ಎಲ್ಲ ವೇದಗಳನ್ನು ಸಾಗರದ ನೀರಿನಲ್ಲಿ ಹುಡುಕಾಡಿ ಸೆಳೆದೊಯ್ದು ಬಿಟ್ಟಿದ್ದಾನೆ. ಸಮುದ್ರ ಪುತ್ರನಾದ ಆ ದೈತ್ಯಾಧಮನನ್ನು ನಾನು ಕೊಂದು ಆ ವೇದರಾಶಿಯನ್ನು ತಿರುಗಿ ತರುತ್ತೇನೆ. ಇಂದಿನಿಂದ ಮುಂದೆ ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ಎಲ್ಲ ವೇದಗಳು, ಮಂತ್ರ, ಬೀಜ, ಯಜ್ಞ ಸಹಿತವಾಗಿ ವಿಶ್ರಾಂತಿಯನ್ನು ಹೊಂದಲಿ. ನಾನೂ ಕೂಡ ಇನ್ನು ಮೇಲೆ ಯಾವಾಗಲೂ ನೀರಿನ ನಟ್ಟ ನಡುವೆ ವಾಸಿಸುತ್ತೇನೆ. ನೀವು ಕೂಡಾ ಎಲ್ಲ ಮುನಿಮಾನ್ಯರೊಡನೆ ನಾನು ಇದ್ದಲ್ಲಿಗೆ ಬನ್ನಿರಿ. ಈ ಕಾರ್ತಿಕ ಮಾಸದಲ್ಲಿ ಯಾರು ಪ್ರಾತಃಕಾಲ ಸ್ನಾನ ಮಾಡುವರೋ ಅವರು ಎಲ್ಲ ಯಜ್ಞಗಳ ಅವಭೃತ ಸ್ನಾನವನ್ನು ಮಾಡಿದಂತೆ. ಯಾರು ಕಾರ್ತಿಕ ಸ್ನಾನಮಾಡಿ ಒಂದು ತಿಂಗಳ ಕಾರ್ತಿಕ ವ್ರತವನ್ನು ಆಚರಿಸುವರೋ ಅವರ ವಿಘ್ನಗಳನ್ನೆಲ್ಲ ದೇವೇಂದ್ರನು ನನ್ನ ಅಪ್ಪಣೆಯಿಂದ ನಿವಾರಿಸಲಿ. ವರುಣನು ನನ್ನ ಆದೇಶದಿಂದ ಕಾರ್ತಿಕ ಸ್ನಾನ ಮಾಡುವವರಿಗೆ ಪುತ್ರಪೌತ್ರಾದಿ ಸಂತಾನವನ್ನು ನೀಡಲಿ. ಕುಬೇರನು ಅವರಿಗೆ ಐಶ್ವರ್ಯವೃದ್ಧಿಯನ್ನು ಉಂಟುಮಾಡಲಿ. ಯಾವಜ್ಜನ್ಮ ಈ ಕಾರ್ತಿಕ ವ್ರತವನ್ನು ಮಾಡಿದವರು ನಿಮ್ಮೆಲ್ಲ ದೇವತೆಗಳಿಗೆ ಮಾನನೀಯರೂ ಶ್ಲಾಘನೀಯರೂ ಆಗಲಿ. ಕಾರ್ತಿಕ ವ್ರತವನ್ನು ಮಾಡಿದವರು ಬದುಕಿ ಸುಖದಿಂದ ಇರಲಿ. ಮರಣಾನಂತರ ಅವರನ್ನು ನನ್ನ ವೈಕುಂಠಲೋಕಕ್ಕೆ ಕರೆದುಕೊಂಡು ಬನ್ನಿರಿ. ಏಕಾದಶಿಯ ದಿನವಾದ ಇಂದು ನೀವು ನನ್ನನ್ನು ನಿಮ್ಮ ಸ್ತೋತ್ರ, ಗೀತ, ಮಂಗಳವಾದ್ಯ ಮುಂತಾದವುಗಳಿಂದ ಎಚ್ಚರಿಸಿ ಪ್ರಬೋಧೋತ್ಸವವನ್ನು ಮಾಡಿಸಿದಿರಿ. ಆದುದರಿಂದ ಈ ಏಕಾದಶೀ ವ್ರತವು ನನಗೆ ಪರಮ ಮಾನ್ಯ. ಏಕಾದಶೀ ವ್ರತ ಹಾಗೂ ಕಾರ್ತಿಕ ವ್ರತ ಈ ಎರಡು ವ್ರತಗಳನ್ನು ಭಕ್ತಿಯಿಂದ ವಿಧಿಪೂರ್ವಕ ಮಾಡಿದವರು ನನ್ನ ಸನ್ನಿಧಾನವನ್ನು ನಿಶ್ಚಿತವಾಗಿಯೂ ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಂಖಾಸುರನ ಉಪಾಖ್ಯಾನ ಎಂಬ ಎಂಬತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುವಿನ ಮತ್ಸ್ಯಾವತಾರದಿಂದ ಶಂಖಾಸುರನ ವಧೆ — ಅಧ್ಯಾಯ - ೮೯

**ನಾರದ:-** ಭಗವಾನ್ ಶ್ರೀಹರಿಯು ಈ ದೇವತೆಗಳನ್ನು ಸಮಾಧಾನಪಡಿಸಿ ತಾನು ಸಣ್ಣ ಮೀನಿನ ಮರಿಯ ರೂಪವನ್ನು ಸ್ವೀಕರಿಸಿದ. ವಿಂಧ್ಯಪರ್ವತದಲ್ಲಿ ವಾಸಮಾಡುತ್ತಲಿದ್ದ. ಕಶ್ಯಪ ಮುನಿಯ ಬೊಗಸೆಯಲ್ಲಿ ನೀರಿನೊಡನೆ ಕಾಣಿಸಿಕೊಂಡ. ಆಗ ಆ ಮಹರ್ಷಿಯು ನೀರಿನೊಡನೆ ತನ್ನ ಬೊಗಸೆಯಲ್ಲಿ ತೂರಿಕೊಂಡು ಬಂದ ಆ ಮರಿಮೀನನ್ನು ತನ್ನ ಕಮಂಡಲುವಿನಲ್ಲಿ ದಯೆದುಂಬಿ ಹಾಕಿ ಇಟ್ಟ. ಬೆಳಗಾಗುವಷ್ಟರಲ್ಲಿ ಆ ಮೀನದ ಮರಿ ಬೆಳೆದು ದೊಡ್ಡದಾಗಿ ಕಮಂಡಲದಲ್ಲಿ ಹಿಡಿಸದಂತಾದಾಗ ಆ ಕಶ್ಯಪಮುನಿಯು ತನ್ನ ಮನೆಯ ಬಾವಿಯಲ್ಲಿ ಬಿಟ್ಟ. ಆ ಮರಿಯು ಮತ್ತೆ ಬೆಳೆದು ಆ ಬಾವಿಯಲ್ಲಿಯೂ ಹಿಡಿಸದಂತಾಗಲು ಅದನ್ನು ಒಯ್ದು ಸರೋವರದಲ್ಲಿ ಈಜಲು ಬಿಟ್ಟ. ಅಲ್ಲಿಯೂ ಅದು ಹಿಡಿಸದಂತಾಗಿ ಕೊನೆಗೆ ಉಪಾಯ ಕಾಣದೇ ಸಮುದ್ರದಲ್ಲಿ ತಂದು ಹಾಕಿದ. ಸಮುದ್ರದ ಸಲಿಲ ರಾಶಿಯಲ್ಲಿ ಸ್ವಚ್ಛಂದವಾಗಿ ಸಂಚಾರಗೈದ ಆ ಮತ್ಸ್ಯಾವತಾರಿಯಾದ ಶ್ರೀಹರಿಯು ಅಲ್ಲಿಯ ಜಲಗರ್ಭದಲ್ಲಿ ಅವಿತುಕೊಂಡಿರುವ ಶಂಖಾಸುರನನ್ನು ಸಂಹರಿಸಿದ. ಮತ್ತು

ಆ ದೈತ್ಯ ಕದ್ದ ವೇದಗಳನ್ನೆಲ್ಲ ತನ್ನ ಕೈಯಲ್ಲಿ ಹಿಡಿದು ಬದರೀಕ್ಷೇತ್ರಕ್ಕೆ ಬಂದ. ಅಲ್ಲಿ ಎಲ್ಲ ಋಷಿಮುನಿಗಳನ್ನೆಲ್ಲ ಕರೆದು ಆಜ್ಞೆ ಮಾಡಿದ.

**ಶ್ರೀಕೃಷ್ಣ:-** ವೇದವಿದ್ವಾಂಸರಾದ ಮುನಿಗಳೆ, ಈ ದೈತ್ಯನ ಕೈಗೆಸಿಕ್ಕು ನೀರಿನಲ್ಲಿ ಜೀರ್ಣಶೀರ್ಣವಾದ ವೇದಗಳನ್ನೆಲ್ಲ ನೀವು ಚೆನ್ನಾಗಿ ತೊಳೆದು ಪ್ರಕ್ಷಾಲನೆ ಮಾಡಿ ತೆಗೆದುಕೊಂಡು ಬನ್ನಿ. ಅಲ್ಲಿಯವರೆಗೆ ನಾನು ದೇವತೆಗಳಿಂದ ಒಡಗೂಡಿ ಪ್ರಯಾಗ ಕ್ಷೇತ್ರದಲ್ಲಿರುತ್ತೇನೆ.

ಶ್ರೀಹರಿಯ ಈ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತುಕೊಂಡು ತಪೋಮೂರ್ತಿಗಳಾದ ಆ ಮುನಿ ಮಾಹಾತ್ಮರೆಲ್ಲರೂ ಆರೂ ಅಂಗಗಳಿಂದ ಸಹಿತವಾದ ಆ ವೇದರಾಶಿಯನ್ನು ನೀರಿನಿಂದ ಮೇಲೆ ತಂದರು. ಯಾರು ಯಾವ ವೇದಗಳನ್ನು ಉದ್ಧರಿಸಿ ಮೇಲೆ ತಂದರೋ ಅವರು ಆ ವೇದಕ್ಕೆ ಋಷಿ ಎನಿಸಿದರು. ಎಲ್ಲ ಋಷಿಗಳು ಪ್ರಯಾಗದಲ್ಲಿ ಮಿಲಿತರಾಗಿ ತಾವು ತೊಳೆದು ತಂದ ವೇದರಾಶಿಯನ್ನೆಲ್ಲ ಶ್ರೀಹರಿಗೆ ಸಮರ್ಪಿಸಿದರು. ಯಜ್ಞ ಹಾಗೂ ಷಡಂಗಗಳಿಂದ ಸಹಿತವಾದ ವೇದಗಳೆಲ್ಲವೂ ಸಕಲಾವಿಕಲ ಸ್ವರೂಪದಲ್ಲಿ ಮರಳಿ ದೊರಕಿದ್ದರಿಂದ ಪರಮಾನಂದವಾಯಿತು ಬ್ರಹ್ಮದೇವರಿಗೆ. ಆಗ ಅವರು ಎಲ್ಲ ದೇವತೆಗಳಿಂದಲೂ ಮಹಾಮಹರ್ಷಿಗಳಿಂದಲೂ ಒಡಗೂಡಿ ಅಶ್ವಮೇಧ ಯಜ್ಞವನ್ನು ನೆರವೇರಿಸಿದರು ಪ್ರಯಾಗಕ್ಷೇತ್ರದಲ್ಲಿ. ಆಗ ಎಲ್ಲ ದೇವಾಧಿದೇವತೆಗಳು ಮಹಾವಿಷ್ಣುವಿಗೆ ದಂಡಪ್ರಣಾಮಗಳನ್ನು ಮಾಡಿ ವಿಜ್ಞಾಪನೆಯನ್ನು ಮಾಡಿದರು.

**ದೇವತೆಗಳು:-** ಪ್ರಭು, ಜಗನ್ನಾಥ, ಇದು ನಮಗೆ ತೃಪ್ತಿಯ ಕಾಲ. ನಿನಗೂ ಸಂತಸದ ಕಾಲ. ಋಷಿಗಳಿಗೆ ಕಳೆದು ಹೋದ ವೇದಗಳೆಲ್ಲ ಮರಳಿ ದೊರೆತವು. ದೇವತೆಗಳಿಗೆ ನಷ್ಟವಾದ ಯಜ್ಞಭಾಗ ಲಭಿಸಿತು. ಬ್ರಹ್ಮ ದೇವರಿಗೆ ನೀನು ಮಾಡಿದ ವೇದೋದ್ಧಾರದಿಂದ ಪರಮ ಸಂತೋಷವಾಗಿದೆ. ಪ್ರಪಂಚದ ಭಾವೀಜನಾಂಗಕ್ಕೆ ನೀನು ದೊಡ್ಡ ಉಪಕಾರವನ್ನು ಮಾಡಿದಂತಾಗಿದೆ. ಈ ಕಾಲದಲ್ಲಿ ನೀನು ನಮಗೆ ಅಪೇಕ್ಷಿತವಾದ ಒಂದು ವರವನ್ನು ಕೊಡು. ಇಷ್ಟೆಲ್ಲ ಪುಣ್ಯ ಕಾರ್ಯಗಳು ಪ್ರಯಾಗದಲ್ಲಿ ನಡೆದಿವೆ. ಆದುದರಿಂದ ಇನ್ನು ಮೇಲೆ ಈ ಪ್ರಯಾಗವು ಭೂಮಂಡಲದಲ್ಲಿ ಸರ್ವಶ್ರೇಷ್ಠವಾದ ಕ್ಷೇತ್ರವಾಗಲಿ ಎಂದು ನೀನು ಅನುಗ್ರಹಿಸು. ಈ ಕ್ಷೇತ್ರಯಾತ್ರೆಯನ್ನು ಮಾಡಿದವರಿಗೆ ಬದುಕಿ ಇರುವವರೆಗೆ ಎಲ್ಲವಿಧಭೋಗಭಾಗ್ಯಗಳೂ, ಮರಣಾನಂತರ ಮೋಕ್ಷವೂ ದೊರಕಲಿ. ಮತ್ತು ಈ ಕಾರ್ತಿಕ ಮಾಸವು ಮಹಾ ಪುಣ್ಯಪ್ರದಾಯಕವಾದ ಸರ್ವಶ್ರೇಷ್ಠವಾದ ಮಾಸವು ಆಗಲಿ. ಈ ಮಾಸದಲ್ಲಿ ಈ ಸ್ಥಾನದಲ್ಲಿ ಮಾಡಿದ ಎಲ್ಲ ಪುಣ್ಯಕರ್ಮಗಳು ಅಕ್ಷಯ್ಯವಾಗಲಿ ಮತ್ತು ಕಾರ್ತಿಕ ವ್ರತದ ಅನುಷ್ಠಾನದಿಂದ ಬ್ರಹ್ಮಹತ್ಯಾದಿ ಪಾಪಗಳು ದೂರವಾಗಲಿ.

**ವಿಷ್ಣು:-** ನೀವು ಕೇಳಿದ ವರಗಳನ್ನೆಲ್ಲ ನೀಡಿದ್ದೇನೆ. ಈ ಪ್ರಯಾಗ ಸ್ಥಳವು ಇನ್ನು ಮುಂದೆ ಬ್ರಹ್ಮ ಕ್ಷೇತ್ರವೆಂದು ಪ್ರಸಿದ್ಧವಾಗಲಿ. ಮುಂದೆ ಸೂರ್ಯವಂಶದಲ್ಲಿ ಭಗೀರಥನೆಂಬ ರಾಜನು ಜನಿಸಿ ದೇವಗಂಗೆಯನ್ನು ಇಲ್ಲಿಗೆ ಕರೆತರುವನು. ಇಲ್ಲಿ ಈ ಹರಿಯುವ ಯಮುನಾನದಿಯೊಡನೆ ಗಂಗೆಯು ಸಂಗಮಿಸಿ ಈ ಪ್ರಯಾಗಕ್ಷೇತ್ರವು ತೀರ್ಥರಾಜ ಎಂದು ಪ್ರಸಿದ್ಧಿಯನ್ನು ಪಡೆಯುವದು. ಇಲ್ಲಿ ಮಾಡಿದ ದಾನ, ಆಚರಿಸಿದ

ತಪಸ್ಸು, ಗೈದ ವ್ರತ, ಜಪಿಸಿದ ಜಪ, ಹೋಮ, ಪೂಜೆ ಮುಂತಾದ ಪುಣ್ಯ ಕಾರ್ಯಗಳಿಗೆಲ್ಲ ಅನಂತ ಪುಣ್ಯಫಲ ಪ್ರಾಪ್ತಿ. ಬ್ರಹ್ಮಹತ್ಯಾದಿ ಪಾಪಗಳೆಲ್ಲವು ಈ ತೀರ್ಥ ದರ್ಶನದಿಂದಲೇ ನಾಶವಾಗುವವು. ಇಲ್ಲಿ ದೇಹತ್ಯಾಗ ಮಾಡಿದವರಿಗೆ ಪುನರ್ಜನ್ಮವಿಲ್ಲ. ಇಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳು ವೈಕುಂಠ ಲೋಕವನ್ನು ಸೇರುತ್ತಾರೆ.

ಅದರಲ್ಲಿಯೂ ವಿಶೇಷವಾಗಿ ಸೂರ್ಯನು ಮಕರ ರಾಶಿಯಲ್ಲಿದ್ದಾಗ ಇಲ್ಲಿ ಪ್ರಾತಃಸ್ನಾನ ಮಾಡಿದವರ ದರ್ಶನ ಮಾತ್ರದಿಂದಲೇ ಸರ್ವಪಾಪ ಲೋಪವಾಗುವದು. ಮಾಘ ಮಾಸದಲ್ಲಿ ಗಂಗಾಯಮುನಾ ಸಂಗಮದಲ್ಲಿ ಮಿಂದು ಬಂದವರಿಗೆ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ ಎಂದು ಮೂರು ಬಗೆಯಾದ ಮೋಕ್ಷಗಳನ್ನು ನಾನು ನೀಡುತ್ತೇನೆ. ನಿಮಗೆ ಈ ಎಲ್ಲ ವರಗಳನ್ನು ನೀಡಿದ ನಾನು ಈ ಬದರೀವನದ ಮಧ್ಯದಲ್ಲಿ ನಿರಂತರವೂ ನೆಲೆಸುತ್ತೇನೆ. ಬೇರೆ ಕಡೆ ಹತ್ತು ವರ್ಷ ಘೋರ ತಪಸ್ಸನ್ನು ಮಾಡಿದರೆ ಬರುವಷ್ಟು ಪುಣ್ಯವು ಈ ಬದರೀ ಕ್ಷೇತ್ರದಲ್ಲಿ ಒಂದು ದಿನ ತಪಸ್ಸು ಮಾಡಿದರೂ ದೊರಕುವದು. ಈ ಬದರೀ ಕ್ಷೇತ್ರದರ್ಶನ ಮಾಡಿಕೊಂಡ ಮನುಷ್ಯರು ಜೀವನ್ಮುಕ್ತರೇ ಸರಿ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ವಿಷ್ಣುವಿನ ಮತ್ಸ್ಯಾವತಾರದಿಂದ ಶಂಖಾಸುರನ ವಧ ಎಂಬ ಎಂಬತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ಕಾರ್ತಿಕ ವ್ರತದ ಕೆಲವು ನಿಯಮಗಳು — ಅಧ್ಯಾಯ - ೯೦

**ಪೃಥುರಾಜ:-** ನಾರದ ಮಹರ್ಷಿಗಳೇ, ಕಾರ್ತಿಕ ಹಾಗೂ ಮಾಘ ಮಾಸಗಳಲ್ಲಿ ಸ್ನಾನ ವಿಧಿ ಮತ್ತು ನಿಯಮ ನಿಬಂಧನ, ಉದ್ಯಾಪನೆಗಳ ವಿಧಿಯನ್ನು ಹೇಳಿರಿ.

**ನಾರದ:-** ಪ್ರಥುರಾಜ, ನೀನು ಸ್ವತಃ ವಿಷ್ಣುವಿನ ಅಂಶಸಂಭೂತನಾಗಿರುವಿ. ನಿನಗೆ ತಿಳಿಯದ ವಿಷಯವು ಯಾವದು ಇದೆ? ಆದರೂ ನೀನು ಬಯಸಿದ್ದರಿಂದ ಸಂಕ್ಷಿಪ್ತವಾಗಿ ಹೇಳುತ್ತೇನೆ ಕೇಳು. ಆಶ್ವೀನ ಕೃಷ್ಣಪಕ್ಷ ಏಕಾದಶೀ ದಿನದಂದು ಕಾರ್ತಿಕ ವ್ರತದ ಸಂಕಲ್ಪವನ್ನು ಮಾಡಬೇಕು. ರಾತ್ರಿಯ ಕೊನೆಯ ಭಾಗದಲ್ಲಿ ಎದ್ದು ಗ್ರಾಮದ ನೈಋತ್ಯ ದಿಕ್ಕಿನಲ್ಲಿ ತಂಬಿಗೆಯನ್ನು ತೆಗೆದುಕೊಂಡು ಶೌಚವಿಧಿಗೆ ಹೋಗಬೇಕು. ಮಲಮೂತ್ರಕ್ಕೆ ಹೋಗುವಾಗ ಕಿವಿಗೆ ಜನಿವಾರವನ್ನು ಸುತ್ತಿ ನೆಲದ ಮೇಲೆ ಹುಲ್ಲನ್ನು ಹರವಿ. ತಲೆಗೆ ಬಟ್ಟೆ ಸುತ್ತಿಕೊಂಡು ಉತ್ತರಾಭಿಮುಖವಾಗಿ ಕುಳಿತು ಮುಖ ತಗ್ಗಿಸಿಕೊಂಡು ಮಲಮೂತ್ರ ವಿಸರ್ಜನೆಯನ್ನು ಮಾಡಬೇಕು. ರಾತ್ರಿಕಾಲದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ಮಲಮೂತ್ರಗಳನ್ನು ವಿಸರ್ಜಿಸಬೇಕು. ಅನಂತರ ಜನನೇಂದ್ರಿಯವನ್ನು ಕೈಯಲ್ಲಿ ಹಿಡಿದುಕೊಂಡು ಎದ್ದು ಶುದ್ಧವಾದ ಮಣ್ಣನ್ನು ಗುದಭಾಗಕ್ಕೆ ಐದುಸಲ ಹಚ್ಚಿಕೊಂಡು ಮರ್ವಾಸನೆ ಹೋಗುವವರೆಗೆ ಪೃಷ್ಠವನ್ನು ತೊಳೆಯಬೇಕು. ಲಿಂಗಕ್ಕೆ ಒಂದು ಸಲ ಮಣ್ಣನ್ನು ಬಳಿದು ತೊಳೆಯಬೇಕು. ಮತ್ತು ಗುದಕ್ಕೆ ಐದು ಸಲ ಮಣ್ಣನ್ನು ಹಚ್ಚಿ ನೀರಿನಿಂದ ಪ್ರಕ್ಷಾಲನ ಮಾಡಬೇಕು. ಎಡಗೈಗೆ ಹತ್ತು ಸಲ ಮಣ್ಣನ್ನು ಹಚ್ಚಿ ತೊಳೆಯಬೇಕು ಅನಂತರ ಮತ್ತೆ ಬಲಗೈ ಎಡಗೈ ಎರಡಕ್ಕೂ ಏಳು ಸಲ ಮಣ್ಣು ಹಚ್ಚಿ ನೀರಿನಿಂದ ಎರಡೂ ಕಾಲುಗಳಿಗೆ

ಮೂರು ಮೂರು ಸಲ ಮಣ್ಣು ಬಳಿದು ನೀರಿನಿಂದ ತೊಳೆಯಬೇಕು. ಇದಕ್ಕೆ ಮೃತ್ತಿಕಾ ಶೌಚವೆನ್ನುವರು. ಇದು ಗೃಹಸ್ಥಾಶ್ರಮಿಗಳಿಗೆ ವಿಹಿತವಾದ ಶೌಚವಿಧಿ, ಬ್ರಹ್ಮಚಾರಿಗಳು ಇದರ ಎರಡುಪಟ್ಟು, ವಾನಪ್ರಸ್ಥಾಶ್ರಮಿಗಳು ಇದರ ಮೂರು ಪಟ್ಟು, ಸನ್ಯಾಸಿಗಳು ಇದರ ನಾಲ್ಕು ಪಟ್ಟು ಮೃತ್ತಿಕಾ ಶೌಚವನ್ನು ಮಾಡಿಕೊಳ್ಳಬೇಕು. ರಾತ್ರಿಕಾಲದಲ್ಲಿ ಇದರ ಅರ್ಧದಷ್ಟು ಮೃತ್ತಿಕಾ ಶೌಚವನ್ನು, ಪ್ರಯಾಣದಲ್ಲಿ ಅದರ ಅರ್ಧವನ್ನು ಸ್ತ್ರೀಶೂದ್ರರು ಅದರ ಅರ್ಧವನ್ನು ಮೃತ್ತಿಕಾ ಶೌಚಮಾಡಿಕೊಳ್ಳಬೇಕು.

ಹೀಗೆ ಶಾಸ್ತ್ರೋಕ್ತವಾದ ಮೃತ್ತಿಕಾಶೌಚವನ್ನು ಮಾಡಿಕೊಳ್ಳದಿದ್ದರೆ ಆ ಮನುಷ್ಯನು ಉಚ್ಚರಿಸಿದ ಮಂತ್ರಗಳೇ ಫಲಪ್ರದವಾಗುವದಿಲ್ಲ. ಆದುದರಿಂದ ದಂತಶುದ್ಧಿಯನ್ನು ಹಲ್ಲು ಉಜ್ಜುವ ಕಡ್ಡಿಯಿಂದ ಹಲ್ಲನ್ನು ತಿಕ್ಕಿ ನೀರಿನಿಂದ ಬಾಯಿಯನ್ನು ಮುಕ್ಕಳಿಸಿಕೊಳ್ಳಬೇಕು.

**ಆಯುರ್ಬಲಂ ಯಶೋವರ್ಚಃ ಪ್ರಜಾಃ ಪಶುವಸೂನಿಚ ।**
**ಬ್ರಹ್ಮಪ್ರಜ್ಞಾಂಚ ಮೇಧಾಂಚತ್ವಂ ನೋದೇಹಿ ವನಸ್ಪತೆ ॥**

ಎಂಬ ಮಂತ್ರವನ್ನು ಉಚ್ಚರಿಸಿ, ಆಲ, ಅರಳೆ ಅಥವಾ ಹಾಲಿರುವ ಯಾವದಾದರೊಂದು ಮರದ ಹನ್ನೆರಡು ಬೆರಳು ಉದ್ದವಾದ ಕಟ್ಟಿಗೆಯನ್ನು ತೆಗೆದು ಹಲ್ಲನ್ನು ಉಜ್ಜಬೇಕು. ಕ್ಷಯತಿಥಿ, ಏಕಾದಶೀ, ಪ್ರತಿಪದೆ ದಶಮಿ, ನವಮಿ, ಷಷ್ಠಿ, ಚಂದ್ರ ಸೂರ್ಯಗ್ರಹಣ ಮತ್ತು ರವಿವಾರದಂದು ಹಲ್ಲು ಉಜ್ಜಬಾರದು. ಹೀಗೆ ದಂತಧಾವನ ಮಾಡಿಕೊಂಡು ವಿಧಿಪೂರ್ವಕವಾಗಿ ಸ್ನಾನಮಾಡಿ ಹೂ ಹಣ್ಣು, ಕಾಯಿ, ಗಂಧ, ತಾಂಬೂಲಾದಿಗಳನ್ನು ತೆಗೆದುಕೊಂಡು, ವಿಷ್ಣುಮಂದಿರ ಅಥವಾ ಶಿವಮಂದಿರಕ್ಕೆ ಹೋಗಿ ಅರ್ಘ್ಯ ಪಾದ್ಯಾದಿಗಳಿಂದ ದೇವರ ಪೂಜೆಯನ್ನು ಮಾಡಬೇಕು. ದೇವರಿಗೆ ಗಂಧ ಪುಷ್ಪಾದಿಗಳನ್ನು ಏರಿಸಿ, ನೈವೇದ್ಯ ತೋರಿಸಿ, ತಾಂಬೂಲವನ್ನು ಅರ್ಪಿಸಿ ಸ್ತೋತ್ರಮಾಡಿ, ಪ್ರದಕ್ಷಿಣೆ ನಮಸ್ಕಾರ ಹಾಕಿ, ಮಂಗಳ ವಾದ್ಯಗಳನ್ನು ಮೊಳಗಿಸಿ, ಕೊಳಲು, ಕೊಂಬು, ತಬಲ, ತಂಬೂರಿ, ತಾಳ ಮುಂತಾದ ಸಲಕರಣೆಗಳಿಂದ ಸಂಗೀತ ಸೇವೆಯನ್ನು ಮಾಡಿ, ದೇವರಿಗೆ ಸಮಸ್ತ ರಾಜೋಪಚಾರವನ್ನು ಸಮರ್ಪಿಸಬೇಕು. ದೇವಾಲಯದಲ್ಲಿ ಗಾಯನ ಮಾಡುವವರು ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದರೇ. ನಾನು (ನಾರದ) ಒಮ್ಮೆ ನಾರಾಯಣನನ್ನು ''ದೇವಾ, ನೀನು ಎಲ್ಲಿ ವಾಸಮಾಡಿರುತ್ತೀ? ಎಂದು ಕೇಳಿದ ಪ್ರಶ್ನೆಗೆ ಉತ್ತರ ರೂಪವಾಗಿ ಆ ಶ್ರೀಹರಿಯು ಹೀಗೆ ಹೇಳಿದ.

**ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನಚ ।**
**ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥**

ನಾರದ, ನಾನು ವೈಕುಂಠದಲ್ಲಿ ವಾಸಮಾಡುವದಿಲ್ಲ. ಯೋಗಿಗಳ ಹೃದಯದಲ್ಲಿಯೂ ಇರುವದಿಲ್ಲ. ಆದರೆ ನನ್ನ ಭಕ್ತರು ಎಲ್ಲಿ ನನ್ನ ಗುಣಗಾಯನ ಮಾಡುತ್ತಿರುವರೋ ಅಲ್ಲಿಯೇ ಇರುತ್ತೇನೆ.

**ಸತ್ಪುರಾಣ ಕಥಾಂ ಶ್ರೋತುಂ ಮದ್ಭಕ್ತಾನಾಂಚ ಗಾಯನಂ ।**
**ನೇಚ್ಛಂತಿಯೇ ನರಾ ಮೂಢಾ ಮದ್ವೇಷ್ಯಾಸ್ತೇ ಭವಂತಿಹಿ ॥**

ಒಳ್ಳೇ ಶ್ರೇಷ್ಠವಾದ ಪುರಾಣ ಕಥೆಯನ್ನು ಕೇಳಲಿಕ್ಕೂ ಮತ್ತು ನನ್ನ ಭಕ್ತರು ಹಾಡಿದ

ಗಾಯನವನ್ನು ಕೇಳಲಿಕ್ಕೆ ಯಾರು ಇಚ್ಛಿಸುವದಿಲ್ಲವೋ ಅಂಥ ಮೂಢ ಮಾನವರು ನನ್ನ ವೈರಿಗಳೇ ಆಗುತ್ತಾರೆ. ನನ್ನ ಗುಣಗಳನ್ನು ಸಂಗೀತ ರೂಪದಿಂದ ಹೇಳುವ ಮತ್ತು ಪುರಾಣ ಪ್ರವಚನ ರೂಪದಿಂದ ಉಪನ್ಯಾಸ ಮಾಡುವ ಗಾಯಕರನ್ನೂ ಪ್ರಾರಾಣಿಕರನ್ನೂ ಯಾರು ಭಕ್ತಿಯಿಂದ ಪೂಜಿಸುವರೋ ಅದರಿಂದ ನನ್ನ ಪೂಜೆ ಮಾಡಿದ್ದಕ್ಕಿಂತ ಹೆಚ್ಚಿನ ಪ್ರೀತಿಯು ಅವರ ಮೇಲೆ ನನಗೆ ಉಂಟಾಗುವದು. ನನ್ನ ಪೂಜೆಗಿಂತ ನನ್ನ ಭಕ್ತರ ಪೂಜೆಯಿಂದ ನನಗೆ ಹೆಚ್ಚಿನ ಸಂತೋಷ ಉಂಟಾಗುತ್ತದೆ.

**ಶಿರೀಷೋನ್ಮತ್ತ ಗಿರಿಜಾ ಮಲ್ಲಿಕಾ ಶಾಲ್ಮಲೀ ಭವೈಃ ।**
**ಅರ್ಕಜೈಃ ಕರ್ಣಿಕಾರೈಶ್ಚ ವಿಷ್ಣುನಾರ್ಚ್ಯಸ್ತಥಾ ಕ್ಷಟೈಃ ॥**

ಶಿರೀರ್ಷ ಹೂ, (ಶಿರಸಂಗಿ ಹೂ), ಧತ್ತೂರಪುಷ್ಪ, ಕಾಡುಮಲ್ಲಿಗೆ, ಬೂರಗದ ಹೂ, ಯಕ್ಕೀ ಹೂ, ಕಣಗಲೀ ಹೂಗಳಿಂದಲೂ ಭತ್ತದ ರೂಪದಲ್ಲಿರುವ ಅಕ್ಕಿಯಿಂದಲೂ ದೇವರನ್ನು ಪೂಜಿಸಬಾರದು. ಇದರಂತೆ ಮಹಾದೇವರನ್ನು ದಾಸವಾಳದ ಹೂ, ಕೋಲುಮಲ್ಲಿಗೆ, ಶಿರೀಷ ಪುಷ್ಪ, ಯೂಥಿಕಾ ಎಂಬ ಮಲ್ಲಿಗೆ ಹೂ, ಜಾಜಿ ಹೂ, ಕೇದಿಗೆ ಮುಂತಾದ ಹೂಗಳನ್ನು ಮಹಾದೇವರಿಗೆ ಏರಿಸಿ ಪೂಜಿಸಬಾರದು.

**ಗಣೇಶಂ ತುಲಸೀಪತ್ರೈಃ ದುರ್ಗಾಂ ನೈವಚ ದೂರ್ವಯಾ ।**
**ಮುನಿ ಪುಷ್ಪೈಃ ತಥಾ ಸೂರ್ಯಂ ಲಕ್ಷ್ಮಿ ಕಾಮೋನಚಾರ್ಚಯೀತ್ ॥**

ಗಣಪತಿಗೆ ತುಳಸೀ ಪತ್ರವನ್ನು ಏರಿಸಬಾರದು. ದುರ್ಗಾದೇವಿಗೆ ಗರಿಕೆಯನ್ನು ಸೂರ್ಯನಿಗೆ ಮುನಿ ಪುಷ್ಪವನ್ನು ಐಶ್ವರ್ಯವನ್ನು ಬಯಸುವವರು ಏರಿಸಿ ಪೂಜಿಸಬಾರದು. ಯಾವಾಗಲೂ ದೇವರ ಪೂಜೆಯನ್ನು ಸುಗಂಧಿ ಹೂಗಳಿಂದಲೇ ಮಾಡಬೇಕು. ನಿರ್ಗಂಧ ಪುಷ್ಪಗಳಿಂದ ದೇವರ ಪೂಜೆಯನ್ನು ಮಾಡಬಾರದು. ಹೀಗೆ ಪರಿಮಳಯುಕ್ತವಾದ ಪುಷ್ಪ, ಗಂಧ, ಫಲ, ನೈವೇದ್ಯ, ತುಳಸೀ, ಧೂಪದೀಪ ಮುಂತಾದವುಗಳಿಂದ ಭಕ್ತಿಯಿಂದ ಕಾರ್ತಿಕದಲ್ಲಿ ಭಗವತ್ಪೂಜೆಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕ ವ್ರತದ ಕೆಲವು ನಿಯಮಗಳು ಎಂಬ ತೊಂಬತ್ತನೇಯ ಅಧ್ಯಾಯ ಮುಗಿದುದು*

—○—

ಮೂರು ಮೂರು ಸಲ ಮಣ್ಣು ಬಳಿದು ನೀರಿನಿಂದ ತೊಳೆಯಬೇಕು. ಇದಕ್ಕೆ ಮೃತ್ತಿಕಾ ಶೌಚವೆನ್ನುವರು. ಇದು ಗೃಹಸ್ಥಾಶ್ರಮಿಗಳಿಗೆ ವಿಹಿತವಾದ ಶೌಚವಿಧಿ, ಬ್ರಹ್ಮಚಾರಿಗಳು ಇದರ ಎರಡುಪಟ್ಟು, ವಾನಪ್ರಸ್ಥಾಶ್ರಮಿಗಳು ಇದರ ಮೂರು ಪಟ್ಟು, ಸನ್ಯಾಸಿಗಳು ಇದರ ನಾಲ್ಕು ಪಟ್ಟು ಮೃತ್ತಿಕಾ ಶೌಚವನ್ನು ಮಾಡಿಕೊಳ್ಳಬೇಕು. ರಾತ್ರಿಕಾಲದಲ್ಲಿ ಇದರ ಅರ್ಧದಷ್ಟು ಮೃತ್ತಿಕಾ ಶೌಚವನ್ನು, ಪ್ರಯಾಣದಲ್ಲಿ ಅದರ ಅರ್ಧವನ್ನು ಸ್ತ್ರೀಶೂದ್ರರು ಅದರ ಅರ್ಧವನ್ನು ಮೃತ್ತಿಕಾ ಶೌಚಮಾಡಿಕೊಳ್ಳಬೇಕು.

ಹೀಗೆ ಶಾಸ್ತ್ರೋಕ್ತವಾದ ಮೃತ್ತಿಕಾಶೌಚವನ್ನು ಮಾಡಿಕೊಳ್ಳದಿದ್ದರೆ ಆ ಮನುಷ್ಯನು ಉಚ್ಚರಿಸಿದ ಮಂತ್ರಗಳೇ ಫಲಪ್ರದವಾಗುವದಿಲ್ಲ. ಆದುದರಿಂದ ದಂತಶುದ್ಧಿಯನ್ನು ಹಲ್ಲು ಉಜ್ಜುವ ಕಡ್ಡಿಯಿಂದ ಹಲ್ಲನ್ನು ತಿಕ್ಕಿ ನೀರಿನಿಂದ ಬಾಯಿಯನ್ನು ಮುಕ್ಕಳಿಸಿಕೊಳ್ಳಬೇಕು.

**ಆಯುರ್ಬಲಂ ಯಶೋವರ್ಚಃ ಪ್ರಜಾಃ ಪಶುವಸೂನಿಚ ।**
**ಬ್ರಹ್ಮಪ್ರಜ್ಞಾಂಚ ಮೇಧಾಂಚತ್ವಂ ನೋದೇಹಿ ವನಸ್ಪತೆ ॥**

ಎಂಬ ಮಂತ್ರವನ್ನು ಉಚ್ಚರಿಸಿ, ಆಲ, ಅರಳೆ ಅಥವಾ ಹಾಲಿರುವ ಯಾವದಾದರೊಂದು ಮರದ ಹನ್ನೆರಡು ಬೆರಳು ಉದ್ದವಾದ ಕಟ್ಟಿಗೆಯನ್ನು ತೆಗೆದು ಹಲ್ಲನ್ನು ಉಜ್ಜಬೇಕು. ಕ್ಷಯತಿಥಿ, ಏಕಾದಶೀ, ಪ್ರತಿಪದೆ ದಶಮಿ, ನವಮಿ, ಷಷ್ಠಿ, ಚಂದ್ರ ಸೂರ್ಯಗ್ರಹಣ ಮತ್ತು ರವಿವಾರದಂದು ಹಲ್ಲು ಉಜ್ಜಬಾರದು. ಹೀಗೆ ದಂತಧಾವನ ಮಾಡಿಕೊಂಡು ವಿಧಿಪೂರ್ವಕವಾಗಿ ಸ್ನಾನಮಾಡಿ ಹೂ ಹಣ್ಣು, ಕಾಯಿ, ಗಂಧ, ತಾಂಬೂಲಾದಿಗಳನ್ನು ತೆಗೆದುಕೊಂಡು, ವಿಷ್ಣುಮಂದಿರ ಅಥವಾ ಶಿವಮಂದಿರಕ್ಕೆ ಹೋಗಿ ಅರ್ಘ್ಯ ಪಾದ್ಯಾದಿಗಳಿಂದ ದೇವರ ಪೂಜೆಯನ್ನು ಮಾಡಬೇಕು. ದೇವರಿಗೆ ಗಂಧ ಪುಷ್ಪಾದಿಗಳನ್ನು ಏರಿಸಿ, ನೈವೇದ್ಯ ತೋರಿಸಿ, ತಾಂಬೂಲವನ್ನು ಅರ್ಪಿಸಿ ಸ್ತೋತ್ರಮಾಡಿ, ಪ್ರದಕ್ಷಿಣೆ ನಮಸ್ಕಾರ ಹಾಕಿ, ಮಂಗಳ ವಾದ್ಯಗಳನ್ನು ಮೊಳಗಿಸಿ, ಕೊಳಲು, ಕೊಂಬು, ತಬಲ, ತಂಬೂರಿ, ತಾಳ ಮುಂತಾದ ಸಲಕರಣೆಗಳಿಂದ ಸಂಗೀತ ಸೇವೆಯನ್ನು ಮಾಡಿ, ದೇವರಿಗೆ ಸಮಸ್ತ ರಾಜೋಪಚಾರವನ್ನು ಸಮರ್ಪಿಸಬೇಕು. ದೇವಾಲಯದಲ್ಲಿ ಗಾಯನ ಮಾಡುವವರು ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದರೇ. ನಾನು (ನಾರದ) ಒಮ್ಮೆ ನಾರಾಯಣನನ್ನು ''ದೇವಾ, ನೀನು ಎಲ್ಲಿ ವಾಸಮಾಡಿರುತ್ತೀ? ಎಂದು ಕೇಳಿದ ಪ್ರಶ್ನೆಗೆ ಉತ್ತರ ರೂಪವಾಗಿ ಆ ಶ್ರೀಹರಿಯು ಹೀಗೆ ಹೇಳಿದ.

**ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನಚ ।**
**ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥**

ನಾರದ, ನಾನು ವೈಕುಂಠದಲ್ಲಿ ವಾಸಮಾಡುವದಿಲ್ಲ. ಯೋಗಿಗಳ ಹೃದಯದಲ್ಲಿಯೂ ಇರುವದಿಲ್ಲ. ಆದರೆ ನನ್ನ ಭಕ್ತರು ಎಲ್ಲಿ ನನ್ನ ಗುಣಗಾಯನ ಮಾಡುತ್ತಿರುವರೋ ಅಲ್ಲಿಯೇ ಇರುತ್ತೇನೆ.

**ಸತ್ಪುರಾಣ ಕಥಾಂ ಶ್ರೋತುಂ ಮದ್ಭಕ್ತಾನಾಂಚ ಗಾಯನಂ ।**
**ನೇಚ್ಛಂತಿಯೇ ನರಾ ಮೂಢಾ ಮದ್ವೇಷ್ಯಾಸ್ತೇ ಭವಂತಿಹಿ ॥**

ಒಳ್ಳೇ ಶ್ರೇಷ್ಠವಾದ ಪುರಾಣ ಕಥೆಯನ್ನು ಕೇಳಲಿಕ್ಕೂ ಮತ್ತು ನನ್ನ ಭಕ್ತರು ಹಾಡಿದ

ಗಾಯನವನ್ನು ಕೇಳಲಿಕ್ಕೆ ಯಾರು ಇಚ್ಛಿಸುವದಿಲ್ಲವೋ ಅಂಥ ಮೂಢ ಮಾನವರು ನನ್ನ ವೈರಿಗಳೇ ಆಗುತ್ತಾರೆ. ನನ್ನ ಗುಣಗಳನ್ನು ಸಂಗೀತ ರೂಪದಿಂದ ಹೇಳುವ ಮತ್ತು ಪುರಾಣ ಪ್ರವಚನ ರೂಪದಿಂದ ಉಪನ್ಯಾಸ ಮಾಡುವ ಗಾಯಕರನ್ನೂ ಪ್ರಾರಾಣಿಕರನ್ನೂ ಯಾರು ಭಕ್ತಿಯಿಂದ ಪೂಜಿಸುವರೋ ಆದರಿಂದ ನನ್ನ ಪೂಜೆ ಮಾಡಿದ್ದಕ್ಕಿಂತ ಹೆಚ್ಚಿನ ಪ್ರೀತಿಯು ಅವರ ಮೇಲೆ ನನಗೆ ಉಂಟಾಗುವದು. ನನ್ನ ಪೂಜೆಗಿಂತ ನನ್ನ ಭಕ್ತರ ಪೂಜೆಯಿಂದ ನನಗೆ ಹೆಚ್ಚಿನ ಸಂತೋಷ ಉಂಟಾಗುತ್ತದೆ.

**ಶಿರೀಷೋನ್ಮತ್ತ ಗಿರಿಜಾ ಮಲ್ಲಿಕಾ ಶಾಲ್ಮಲೀ ಭವೈಃ ।**
**ಅರ್ಕಜೈಃ ಕರ್ಣಿಕಾರೈಶ್ಚ ವಿಷ್ಣುನಾರ್ಚ್ಯಸ್ತಥಾ ಕ್ಷಟೈಃ ॥**

ಶಿರೀರ್ಷ ಹೂ, (ಶಿರಸಂಗಿ ಹೂ), ಧತ್ತೂರಪುಷ್ಪ, ಕಾಡುಮಲ್ಲಿಗೆ, ಬೂರಗದ ಹೂ, ಯಕ್ಕೀ ಹೂ, ಕಣಗಲೀ ಹೂಗಳಿಂದಲೂ ಭತ್ತದ ರೂಪದಲ್ಲಿರುವ ಅಕ್ಕಿಯಿಂದಲೂ ದೇವರನ್ನು ಪೂಜಿಸಬಾರದು. ಇದರಂತೆ ಮಹಾದೇವರನ್ನು ದಾಸವಾಳದ ಹೂ, ಕೋಲುಮಲ್ಲಿಗೆ, ಶಿರೀಷ ಪುಷ್ಪ, ಯೂಥಿಕಾ ಎಂಬ ಮಲ್ಲಿಗೆ ಹೂ, ಜಾಜಿ ಹೂ, ಕೇದಿಗೆ ಮುಂತಾದ ಹೂಗಳನ್ನು ಮಹಾದೇವರಿಗೆ ಏರಿಸಿ ಪೂಜಿಸಬಾರದು.

**ಗಣೇಶಂ ತುಲಸೀಪತ್ರೈಃ ದುರ್ಗಾಂ ನೈವಚ ದೂರ್ವಯಾ ।**
**ಮುನಿ ಪುಷ್ಪೈಃ ತಥಾ ಸೂರ್ಯಂ ಲಕ್ಷ್ಮಿ ಕಾಮೋನಚಾರ್ಚಯೇತ್ ॥**

ಗಣಪತಿಗೆ ತುಳಸೀ ಪತ್ರವನ್ನು ಏರಿಸಬಾರದು. ದುರ್ಗಾದೇವಿಗೆ ಗರಿಕೆಯನ್ನು ಸೂರ್ಯನಿಗೆ ಮುನಿ ಪುಷ್ಪವನ್ನು ಐಶ್ವರ್ಯವನ್ನು ಬಯಸುವವರು ಏರಿಸಿ ಪೂಜಿಸಬಾರದು. ಯಾವಾಗಲೂ ದೇವರ ಪೂಜೆಯನ್ನು ಸುಗಂಧಿ ಹೂಗಳಿಂದಲೇ ಮಾಡಬೇಕು. ನಿರ್ಗಂಧ ಪುಷ್ಪಗಳಿಂದ ದೇವರ ಪೂಜೆಯನ್ನು ಮಾಡಬಾರದು. ಹೀಗೆ ಪರಿಮಳಯುಕ್ತವಾದ ಪುಷ್ಪ, ಗಂಧ, ಫಲ, ನೈವೇದ್ಯ, ತುಳಸೀ, ಧೂಪದೀಪ ಮುಂತಾದವುಗಳಿಂದ ಭಕ್ತಿಯಿಂದ ಕಾರ್ತಿಕದಲ್ಲಿ ಭಗವತ್ಪೂಜೆಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕ ವ್ರತದ ಕೆಲವು ನಿಯಮಗಳು ಎಂಬ ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

# ಕಾರ್ತಿಕ ಸ್ನಾನ ಅರ್ಘ್ಯಪ್ರದಾನಾದಿ ವಿಧಿ



**ನಾರದ:-** ಕಾರ್ತಿಕ ಮಾಸದಲ್ಲಿ ಪ್ರಾತಃಕಾಲ ನಸುಕಿನಲ್ಲಿ ಎದ್ದು ಎಳ್ಳು, ಗಂಧ, ಅಕ್ಷತೆ, ಹೂ, ದೀಪ ಮೊದಲಾದ ಪೂಜಾ ಸಾಮಾನುಗಳನ್ನು ತೆಗೆದುಕೊಂಡು ಜಲಾಶಯಕ್ಕೆ ಹೋಗಬೇಕು. ಸ್ನಾನಕ್ಕೆ ಮನುಷ್ಯರು ನಿರ್ಮಿಸಿದ ಕೆರೆಹೊಂಡಗಳಿಗಿಂತ ನೈಸರ್ಗಿಕವಾದ ಸರೋವರ ಪುಷ್ಕರಣಿಗಳು ಶ್ರೇಷ್ಠ. ಅವುಗಳಿಗಿಂತ ನದೀ, ನದಿಗಿಂತ ಎರಡು ನದಿಗಳ ಸಂಗಮ ತೀರ್ಥಗಳು ಹತ್ತು ಹತ್ತು ಪಟ್ಟು ಪುಣ್ಯದಾಯಕ ಮತ್ತು ಶ್ರೇಷ್ಠ. ಇಂಥ ಜಲಾಶಯದಲ್ಲಿ ವಿಷ್ಣುವನ್ನು ಸ್ಮರಿಸಿ ಸ್ನಾನಸಂಕಲ್ಪ ಮಾಡಿ ನೀರಿನಲ್ಲಿ ಒಂದು ಮುಳುಗು ಹಾಕಿ ಕ್ರಮದಿಂದ ಶ್ರೀಹರಿಗೂ ತೀರ್ಥದೇವತೆಗಳಿಗೂ ಅರ್ಘ್ಯವನ್ನು ನೀಡಬೇಕು.

**ಓಂ ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।**
**ನಮಸ್ತೇಸ್ತು ಹೃಷೀಕೇಶ ಗ್ರಹಾಣಾರ್ಘ್ಯ ನಮೋಸ್ತುತೇ ॥**

ಎಂಬ ಮಂತ್ರದಿಂದ ವಿಷ್ಣುವಿಗೆ ಅರ್ಘ್ಯವನ್ನು ಕೊಡಬೇಕು.

**ಕಾರ್ತಿಕೇಹಂ ಕರಿಷ್ಯಾಮಿ ಪ್ರಾತಃಸ್ನಾನಂ ಸುರೋತ್ತಮ ।**
**ತವ ಪ್ರಸಾದಾತ್ ಪಾಪಂ ಮೇ ದಾಮೋದರ ವಿನಶ್ಯತು ॥**

ಎಂಬ ಮಂತ್ರದಿಂದ ಮಾಸಾಭಿಮಾನಿಯಾದ ದಾಮೋದರನನ್ನು ಪ್ರಾರ್ಥಿಸಬೇಕು. ಅನಂತರ ಭಾಗೀರಥಿಯನ್ನು, ವಿಷ್ಣುವನ್ನು, ಶಿವನನ್ನು, ಸೂರ್ಯನನ್ನು ಸ್ಮರಿಸಿ ಹೊಕ್ಕಳ ಪರ್ಯಂತ ನೀರಿನಲ್ಲಿ ನಿಂತು ಶಾಸ್ತ್ರೋಕ್ತ ವಿಧಿಯಿಂದ ಸ್ನಾನಮಾಡಬೇಕು. ಗೃಹಸ್ಥಾಶ್ರಮಿಗಳು ಎಳ್ಳು, ನೆಲ್ಲಿಕಾಯಿಚಟ್ಟು ಹಾಕಿಕೊಂಡು ಸ್ನಾನಮಾಡಬೇಕು. ಆದರೆ ಸನ್ಯಾಸಿಗಳು ಮಾತ್ರ ತುಳಸಿ ಮತ್ತಿಕೆಯನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಮೊದಲು ಮಲಾಪಕರ್ಷಣ ಸ್ನಾನ ಅನಂತರ ಮಂತ್ರಸ್ನಾನವನ್ನು ಮಾಡಬೇಕು. ಸ್ನಾನಮಾಡುವ ಕಾಲದಲ್ಲಿ ಈ ಕೆಳಗಿನ ಮಂತ್ರಗಳನ್ನು ಹೇಳಬೇಕು.

**ತ್ರಿಧಾಭೂತ್ ದೇವಕಾರ್ಯಾಯ ಯತ್ ಪುರಾಭಕ್ತಭಾವತಃ ।**
**ಸ ವಿಷ್ಣು ಸರ್ವ ಪಾಪಘ್ನಃ ಪುನಾತು ಕೃಪಯಾತ್ರಮಾಂ ॥**
**ವಿಷ್ಣೋರಾಜ್ಞಾ ಮನುಪ್ರಾಪ್ಯ ಕಾರ್ತಿಕ ವ್ರತ ಕಾರಣಾತ್ ।**
**ರಕ್ಷಂತು ದೇವಾಸ್ತೇ ಸರ್ವೇ ಮಾಂ ಪುನಂತು ಸದೈವತೇ ॥**
**ಗಂಗಾದ್ಯಾಃ ಸರಿತಃ ಸರ್ವಾಸ್ತಿರ್ಥಾನಿ ಜಲದಾನದಾಃ ।**
**ಸಸಪ್ತ ಸಾಗರಾಃ ಸರ್ವೇ ಮಾಂ ಪುನಂತು ಜಲಾಶಯಾಃ ॥**

ಇವೇ ಮೊದಲಾದ ಮಂತ್ರಗಳನ್ನು ಹೇಳಿ ಸ್ನಾನಮಾಡಿ ಕೈಯಲ್ಲಿ ಪವಿತ್ರ ಇಟ್ಟುಕೊಂಡು ದೇವತೆಗಳಿಗೂ ಪಿತೃಗಳಿಗೂ ಋಷಿಗಳಿಗೂ ಎಳ್ಳಿನಿಂದ ತರ್ಪಣವನ್ನು ಕೊಡಬೇಕು. ಅನಂತರ ನೀರಿನಿಂದ ಮೇಲೆ ಎದ್ದು ಬಂದು, ಮಡಿ ಬಟ್ಟೆ ಉಟ್ಟುಕೊಂಡು, ಸಂಧ್ಯಾವಂದನಾದಿ ವಿಹಿತ ಕರ್ಮಗಳನ್ನು ಮಾಡಿ ಭಕ್ತಿಯಿಂದ ದೇವರನ್ನು ಪೂಜಿಸಬೇಕು. ಅನಂತರ ಮುಂದಿನ ಮಂತ್ರದಿಂದ ಹರಿಗೆ ಅರ್ಘ್ಯವನ್ನು ಕೊಡಬೇಕು.

**ವ್ರತಿಃ ಕಾರ್ತಿಕೇ ಮಾಸೇ ಸ್ನಾತಸ್ಯ ವಿಧಿವನ್ಮಮ ।**
**ಗ್ರಹಾಣಾರ್ಘ್ಯಂ ಮಯಾದತ್ತಂ ದನುಜೇಂದ್ರ ನಿಷೂದನ ॥**

ಎಂಬ ಮಂತ್ರದಿಂದ ವಿಷ್ಣುವಿಗೆ ಅರ್ಘ್ಯ ನೀಡಿ ವೇದ ಪಂಡಿತರನ್ನು ಭಕ್ತಿಯಿಂದ ಭೋಜನಮಾಡಿಸಿ ತಾಂಬೂಲ ದಕ್ಷಿಣೆ ಕೊಟ್ಟು ನಮಸ್ಕಾರ ಮಾಡಬೇಕು.

**ತೀರ್ಥಾನಿ ದಕ್ಷಿಣೇ ಪಾದೇ ವೇದಾಶ್ಚ ಮುಖಮಾಶ್ರಿತಾಃ ।**
**ಸಂರ್ವಾಂಗೇ ಸಂಸ್ಥಿತಾ ದೇವಾಃ ಪೂಜಿತಾಸ್ಯುರ್ದ್ವಿಜಾರ್ಚನಾತ್ ॥**

ವೇದ ಪಾರಂಗತರಾದ ದ್ವಿಜರ ಬಲಗಾಲದಲ್ಲಿ ಎಲ್ಲ ತೀರ್ಥಗಳು ವೇದಗಳು ಸರ್ವಾಂಗದಲ್ಲಿ ಎಲ್ಲ ದೇವತೆಗಳು ನೆಲೆಸಿರುತ್ತಾರೆ. ಇಂಥ ದ್ವಿಜರ ಪೂಜೆಯಿಂದ ಎಲ್ಲರ ಮುಖದಲ್ಲಿ ಎಲ್ಲ ದೇವತೆಗಳ ಪೂಜೆಯನ್ನು ಮಾಡಿದಂತಾಗುತ್ತದೆ.

ಹೀಗೆ ವಿಷ್ಣುವಿನ ಪೂಜೆ ಮಾಡಿದ ಬಳಿಕ ಕಾರ್ತಿಕ ಮಾಸದಲ್ಲಿ ತುಳಸೀ ಪೂಜೆಯನ್ನು ತಪ್ಪದೇ ಮಾಡಬೇಕು. ಪ್ರಯಾಗದಲ್ಲಿ ಸ್ನಾನ, ಕಾಶಿಯಲ್ಲಿ ಪ್ರಾಣಾರ್ಪಣೆ, ಬ್ರಾಹ್ಮಣ ಜನ್ಮದಲ್ಲಿ ಸಕಲ ವೇದಾಧ್ಯಯನದಿಂದ ಬರುವ ಪುಣ್ಯವು ಕಾರ್ತಿಕ ಮಾಸದಲ್ಲಿ ಕೇವಲ ತುಳಸೀ ಪೂಜೆಯಿಂದಲೇ ಬರುವದು. ರಾಶಿರಾಶಿ ಪಾಪವನ್ನು ಮಾಡಿ ತಿಲ ಮಾತ್ರವೂ ಪುಣ್ಯಮಾಡದಿರುವ ಮನುಷ್ಯನು ತುಳಸೀ ಪೂಜೆಯನ್ನು ಮಾಡಿದರೆ ಮೋಕ್ಷವನ್ನು ಹೊಂದುತ್ತಾನೆ.

**ದೇವೈಸ್ತ್ವಂ ನಿರ್ಮಿತಾ ಪೂರ್ವ ಮರ್ಚಿತಾಸಿ ಮುನೀಶ್ವರೈಃ ।**
**ನಮೋ ನಮಸ್ತೇ ತುಳಸಿ ಪಾಪಂಹರ ಹರಿಪ್ರಿಯೇ ॥**

ಎಂದು ಪ್ರಾರ್ಥನೆಯನ್ನು ಸಲ್ಲಿಸಿ ತುಳಸಿಗೆ ನಮಸ್ಕರಿಸಬೇಕು. ಬಳಿಕ ಪುರಾಣೋಕ್ತವಾದ ವಿಷ್ಣುವಿನ ಕಥೆಯನ್ನು ಭಕ್ತಿಯಿಂದ ಶ್ರವಣ ಮಾಡಬೇಕು. ಅನಂತರ ಆ ಪೌರಾಣಿಕರನ್ನು ಆದರದಿಂದ ಪೂಜಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾರ್ತಿಕ ಸ್ನಾನ ಅರ್ಘ್ಯಪ್ರದಾನಾದಿ ವಿಧಿ ಎಂಬ ತೊಂಬತ್ತೊಂದನೆಯ ಅಧ್ಯಾಯ ಮುಗಿದುದು*

—o—

## ಕಾರ್ತಿಕ ಮಾಸದಲ್ಲಿ ಪಾಲಿಸಬೇಕಾದ ನಿಯಮಗಳು | ಅಧ್ಯಾಯ - ೯೨

**ನಾರದ:-** ಕಾರ್ತಿಕ ಮಾಸದಲ್ಲಿ ನಾಲ್ಕನ್ನು ಮಾಡಬೇಕು. ನಾಲ್ಕನ್ನು ಬಿಡಬೇಕು. ಅನ್ನದಾನ, ಗೋಗ್ರಾಸ, ವಿಷ್ಣುಭಕ್ತರಿಂದ ಹರಿಕಥಾಶ್ರವಣ, ದೀಪದಾನ ಇವು ನಾಲ್ಕು ಕಾರ್ತಿಕ ಮಾಸದಲ್ಲಿ ಎಲ್ಲರೂ ಮಾಡತಕ್ಕ ಮುಖ್ಯ ಧರ್ಮಗಳು, ಪರಾನ್ನ, ಸ್ತ್ರಿಸಂಗ, ಪರನಿಂದೆ, ಪರಾಂಗನಾ ಸಹವಾಸ ಇವು ನಾಲ್ಕನ್ನು ಕಾರ್ತಿಕ ಮಾಸದಲ್ಲಿ ಬಿಡಬೇಕು. ಬೇಳೆಯಾಗುವ ಕಾಳುಗಳನ್ನು, ಮಾಂಸ, ಉದ್ದು, ಜೇನುತುಪ್ಪ, ಪರದ್ರೋಹ, ಪರಿಗ್ರಹ, ಎಳ್ಳಿನಎಣ್ಣೆ ಇವುಗಳನ್ನು ಕಾರ್ತಿಕದಲ್ಲಿ ವರ್ಜಿಸಬೇಕು. ದೇವಬ್ರಾಹ್ಮಣ, ಗುರು, ಯತಿ, ವ್ರತಿ, ಸ್ತ್ರೀ, ರಾಜ, ಮಹಾತ್ಮರು ಇಷ್ಟು ಜನರ ನಿಂದೆಯನ್ನು ಕಾರ್ತಿಕ ವ್ರತ ಹಿಡಿದವರು ಮಾಡಬಾರದು. ಕಾರ್ತಿಕ ಮಾಸದಲ್ಲಿ ಸರ್ವ ವಿಧವಾದ ಮಾಂಸವನ್ನು ತ್ಯಜಿಸಬೇಕು. ಮಾಂಸವು ಅನೇಕ ಬಗೆಯಾಗಿದೆ. ಸಿಂಪಿನಿಂದ ಮಾಡಿದ ಸುಣ್ಣವು ಮಾಂಸ ಇದ್ದಂತೆ. ಹಣ್ಣಿನಲ್ಲಿ ಗಜನಿಂಬೆಹಣ್ಣು ಮಾಂಸ. ಧಾನ್ಯಗಳಲ್ಲಿ ಕಡಲೆ ಮಾಂಸ (ಕಾರ್ತಿಕ ಮಾಸದಲ್ಲಿ ಮಾತ್ರ) ತಂಗಳ ಅನ್ನ, ಆಕಳು ಎಮ್ಮೆಗಳ ಹೊರ್ತು ಬೇರೆ ಪಶುವಿನ ಹಾಲು, ದ್ವಿಜನಿಂದ ಕೊಂಡುಕೊಂಡ ರಸಪದಾರ್ಥ. ಮಣ್ಣಿನಿಂದ ಮಾಡಿದ ಭೂಮಿಯ ಉಪ್ಪು, ತಾಮ್ರದ ಪಾತ್ರೆಯಲ್ಲಿಟ್ಟ ಹಾಲು, ಮೊಸರು, ತೆಗ್ಗಿನಲ್ಲಿ ನಿಂತ ನೀರು, ಕೇವಲ ತನಗಾಗಿ ಮಾತ್ರ ಬೇಯಿಸಿಕೊಂಡ ಅನ್ನ ಇವೆಲ್ಲವೂ ಮಾಂಸಕ್ಕೆ ಸಮಾನವೆಂದು ಹಿರಿಯರು ಹೇಳಿದ್ದಾರೆ. ಕಾರ್ತಿಕ ಮಾಸದಲಿ ಬ್ರಹ್ಮಚರ್ಯ, ನೆಲದಮೇಲೆ ಮಲಗುವದು, ಹಚ್ಚಿದ ಎಲೆಯಲ್ಲಿ ಊಟ ದಿನದ ನಾಲ್ಕನೇ ಪ್ರಹರದಲ್ಲಿ ಒಪ್ಪತ್ತು ಊಟ, ಈ ನಾಲ್ಕು ನಿಯಮಗಳನ್ನು ಕಾರ್ತಿಕ ವ್ರತ ಹಿಡಿದವರು ಮಾಡಬೇಕು. ನರಕ ಚತುರ್ದಶಿ ದಿವಸ ಮಾತ್ರ ತಪ್ಪದೇ ಎಣ್ಣೆಹಚ್ಚಿ ಅಭ್ಯಂಗಸ್ನಾನ ಮಾಡಬೇಕು. ವ್ರತಸ್ಥರು ಆ ದಿನ ಬಿಟ್ಟು ಬೇರೆ ದಿನ ತೈಲಾಭ್ಯಂಗವನ್ನು ಮಾಡಬಾರದು. ಉಳ್ಳಾಗಡ್ಡಿ, ಬೆಳ್ಳೊಳ್ಳಿ, ಮುಗ್ಗಿಕಾಯಿ, ಛತ್ರಾಕ (ನಾಯಿಕೊಡೆ) ದೇಟು, ಮೂಲಂಗಿ, ಇಂಗು, ಸೋರೇಕಾಯಿ, ಬದನೇಕಾಯಿ, ಬೂದಿಗುಂದಳ, ಚಪ್ಪರಬದನೆ, ಬಳವಲಕಾಯಿ ಮುಂತಾದವುಗಳನ್ನು ಕಾರ್ತಿಕದಲ್ಲಿ ವರ್ಜಿಸಬೇಕು. ನಾಯಿ ಕಾಗೆಗಳು ಮುಟ್ಟಿದ ಅನ್ನವನ್ನೂ ಎರಡು ಸಲ ಬೇಯಿಸಿದ ಅನ್ನವನ್ನೂ ಹೊತ್ತಿದ ಅನ್ನವನ್ನೂ ಕಾರ್ತಿಕದಲ್ಲಿ ಬಿಡಬೇಕು. ಇವಲ್ಲದೆ ವಿಷ್ಣು ಪ್ರೀತಿಗಾಗಿ ಭಕ್ಷ್ಯವಾದ ಪದಾರ್ಥಗಳನ್ನೂ ಕೂಡ ಕಾರ್ತಿಕದಲ್ಲಿ ಒಂದು ತಿಂಗಳ ಬಿಟ್ಟು ಅನಂತರ ಅವನ್ನು ಬ್ರಾಹ್ಮಣರಿಗೆ ದಾನಮಾಡಿ ವ್ರತ ಸಮಾಪ್ತಿಯ ನಂತರ ತಾನೂ ತಿನ್ನಬೇಕು.

ಕಾರ್ತಿಕದ ಪ್ರತಿಪದೆಯಿಂದ ಆರಂಭಿಸಿ ಪೌರ್ಣಿಮೆಯವರೆಗೆ ಒಂದೊಂದು ತಿಥಿಯಂದು ಒಂದೊಂದು ಪದಾರ್ಥವನ್ನು ತ್ಯಜಿಸಬೇಕು. ಪ್ರತಿಪದೆಯ ದಿನ ಬೂದಗುಂಬಳವನ್ನು ತಿನ್ನಬಾರದು. ದ್ವಿತೀಯಾ ದಿವಸ ಬದನೆಕಾಯಿಯನ್ನು, ತೃತೀಯಾ ದಿನ ಬೃಹತೀ ಫಲವನ್ನು ಚತುರ್ಥಿದಿನ ಮೂಲಂಗಿ, ಪಂಚಮಿದಿನ ಬಿಲ್ವ ಫಲ. (ಬೆಲಪತ್ರಿಕಾಯಿ) ಷಷ್ಠಿ ದಿವಸ ಕೊಡಸಿಗಿಯ ಹಣ್ಣು. ಸಪ್ತಮಿದಿನ ನೆಲ್ಲಿಕಾಯಿಯನ್ನು, ಅಷ್ಟಮಿದಿನ ಟೆಂಗಿನಕಾಯಿ, ನವಮಿದಿನ ಸೋರೆಕಾಯಿ ದಶಮಿ ದಿನ ಪಡವಲಕಾಯಿ, ದ್ವಾದಶಿದಿನ ಬೋರೆಕಾಯಿಯನ್ನು, ತ್ರಯೋದಶಿದಿವಸ ತರಕಾರಿ, ಚತುರ್ದಶಿದಿನ ದೇಟು,

ಪೌರ್ಣಿಮೆಯದಿವಸ ಶಿವನಿಮರದ ಹಣ್ಣುಕಾಯಿಗಳನ್ನು ಬಿಟ್ಟುಬಿಡಬೇಕು. ನೆಲ್ಲಿಕಾಯಿಯನ್ನು ಹನ್ನೆರಡು ತಿಂಗಳ ರವಿವಾರದಂದು ತಿನ್ನಬಾರದು.

ಇದರಂತೆ ಮಾಘ ಮಾಸದಲ್ಲಿಯೂ ವ್ರತ ನಿಯಮಗಳನ್ನೂ ಏಕಾದಶಿ ವ್ರತ, ಜಾಗರ, ದ್ವಾದಶಿ ಪಾರಣ, ತಿಥಿ ತ್ರಯದಲ್ಲಿಯೂ ವಿಶೇಷ ಹರಿಪೂಜೆಯನ್ನೂ ದಾನ ಧರ್ಮಾದಿಗಳನ್ನೂ ಮಾಡಬೇಕು. ಇದು ವಿಷ್ಣುವ್ರತ ಎನಿಸುತ್ತದೆ. ಈ ಕಾರ್ತಿಕ ವ್ರತವು ನೂರು ಯಜ್ಞಗಳಿಗಿಂತ ಮಿಗಿಲಾಗಿದೆ. ಯಜ್ಞ ಮಾಡಿದವರು ಕೇವಲ ಸ್ವರ್ಗಕ್ಕೆ ಹೋದರೆ ಕಾರ್ತಿಕ ವ್ರತ ಮಾಡಿದವರು ವೈಕುಂಠಕ್ಕೆ ಪ್ರಯಾಣ ಮಾಡುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾರ್ತಿಕ ಮಾಸದಲ್ಲಿ ಪಾಲಿಸಬೇಕಾದ ನಿಯಮಗಳು ಎಂಬ ತೊಂಬತ್ತೆರಡನೇಯ ಅಧ್ಯಾಯ ಮುಗಿದುದು*



## ಕಾರ್ತಿಕ ವ್ರತದ ಉದ್ಯಾಪನ ವಿಧಿ — ಅಧ್ಯಾಯ - ೯೩

**ನಾರದ:-** ಕಾರ್ತಿಕ ವ್ರತದ ಉದ್ಯಾಪನ ವಿಧಿಯನ್ನು ಹೇಳುತ್ತೇನೆ ಕೇಳು. ಕಾರ್ತಿಕ ಶುಕ್ಲ ಚತುರ್ದಶಿದಿನ ಕಾರ್ತಿಕ ವ್ರತದ ಉದ್ಯಾಪನೆಯನ್ನು ಮಾಡಬೇಕು. ತುಳಸೀ ಗಿಡದ ಮೇಲೆ ಒಂದು ಮಂಟಪವನ್ನು ಹಾಕಿ ನಾಲ್ಕೂ ಬಾಗಿಲಗಳ ಮೇಲೆ ಹೂವಿನ ತೋರಣ ಕಟ್ಟಬೇಕು. ನಾಲ್ಕೂ ಬಾಗಿಲಗಳಲ್ಲಿ ಮಣ್ಣಿನ ನಾಲ್ಕು ದ್ವಾರಪಾಲಕರ ಮೂರ್ತಿಗಳನ್ನು ಮಾಡಿ ಕೂಡಿಸಬೇಕು. ಪುಣ್ಯಶೀಲ, ಸುಶೀಲ, ಜಯ, ವಿಜಯ ಎಂಬ ಹೆಸರಿನ ನಾಲ್ಕು ದ್ವಾರಪಾಲಕರನ್ನು ಪ್ರತಿಷ್ಠಾಪಿಸಿದ ಬಳಿಕ ತುಳಸಿ ಗಿಡದ ಬುಡದಲ್ಲಿ ಸರ್ವತೋಭದ್ರ ಮಂಡಲವನ್ನು ನಾಲ್ಕು ಬೇರೆ ಬೇರೆ ಬಣ್ಣಗಳಿಂದ ತುಂಬಿಸಿ ಸುಂದರವಾಗಿ ಬಿಡಿಸಬೇಕು. ಅದರ ಮೇಲೆ ಐದು ರತ್ನಗಳನ್ನು ಒಳಗೆ ಹಾಕಿದ ತೆಂಗಿನ ಫಲ ಸಹಿತ ಒಂದು ಕೊಡವನ್ನು ಸ್ಥಾಪಿಸಬೇಕು. ಅದರಲ್ಲಿ ಲಕ್ಷ್ಮೀ ಸಹಿತನಾದ, ಶಂಖಚಕ್ರಗದಾಧಾರಿಯಾದ ಶ್ರೀಹರಿಯನ್ನು ಪೂಜಿಸಬೇಕು. ಇಂದ್ರಾದಿ ಲೋಕಪಾಲಕರನ್ನೂ ಆ ಮಂಡಲದಲ್ಲಿಯೇ ಪೂಜೆಮಾಡಬೇಕು.

ಹಿಂದೆ ಶ್ರೀಹರಿಯು ದ್ವಾದಶಿಯದಿನ ತನ್ನ ಯೋಗನಿದ್ರೆಯಿಂದ ಎಚ್ಚತ್ತ, ತ್ರಯೋದಶಿಯದಿನ ಅವನನ್ನು ದೇವತೆಗಳು ನೋಡಿದರು. ಚತುರ್ದಶಿದಿನ ಎಲ್ಲದೇವತೆಗಳು ಆ ಭಗವಂತನನ್ನು ಪೂಜಿಸಿದರು. ಆದುದರಿಂದ ಭಗವದ್ಭಕ್ತರಾದವರು ಈ ಮೂರು ದಿನಗಳಲ್ಲಿ ಕಲಶದ ಮೇಲೆ ಸ್ಥಾಪಿಸಿದ ಬಂಗಾರದ ಆ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಗುರುಗಳ ಅಪ್ಪಣೆ ಪಡೆದು ಷೋಡಶೋಪಚಾರ ಪೂಜಾ ಪದ್ಧತಿಯಿಂದ ಅರ್ಚಿಸಬೇಕು. ಬಗೆಬಗೆಯ ಭಕ್ಷ್ಯಭೋಜ್ಯ ಪಕ್ವಾನ್ನಗಳ ನೈವೇದ್ಯವನ್ನು ಸಮರ್ಪಿಸಬೇಕು. ಏಕಾದಶಿ ರಾತ್ರಿ ಹಾಡು ನರ್ತನ, ವಾದ್ಯ, ಪುರಾಣ, ಪ್ರವಚನ ಮುಂತಾದವುಗಳಿಂದ ರಾತ್ರಿ ಜಾಗರಣ ಮಾಡಿ ದ್ವಾದಶಿ ದಿನ ವಿಶೇಷ ಹರಿಪೂಜೆ ಬ್ರಾಹ್ಮಣ ಭೋಜನಾದಿಗಳನ್ನು ಮಾಡಿಸಬೇಕು. ಜಾಗರಕಾಲದಲ್ಲಿ

**ಗೀತಂ ಕುರ್ವಂತಿ ಯೇ ಭಕ್ತ್ಯಾ ಜಾಗರೇ ಚಕ್ರಪಾಣಿನಃ ।**
**ಜನ್ಮಾಂತರ ಶತೋದ್ಭೂತೈಸ್ತೇ ಮುಕ್ತಾಃ ಪಾಪಸಂಚಯೈಃ ॥**

ಏಕಾದಶಿಯ ದಿನ ಜಾಗರ ಕಾಲದಲ್ಲಿ ಭಕ್ತಿಯಿಂದ ಹಾಡನ್ನು ಹಾಡಿದವರು ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪರಾಶಿಗಳಿಂದ ಮುಕ್ತರಾಗುತ್ತಾರೆ.

**ಜಾಗರೇ ವಾಸವೇ ವಿಷ್ಣೋ ರ್ಗೀತಂ ನೃತ್ಯಂಚ ಕುರ್ವತಾಂ ।**
**ಗೋ ಸಹಸ್ರಂಚ ದದತಾಂ ಸಮಂ ಫಲಮುದಾಹೃತಮ್ ॥**

ವಿಷ್ಣುವಿನ ದಿನವಾದ ಏಕಾದಶಿ ರಾತ್ರಿ ಜಾಗರ ಕಾಲದಲ್ಲಿ ಹಾಡು ಹಾಡಿ ಕುಣಿದು ಸಂಗೀತ ಸೇವೆ, ನೃತ್ಯ ಸೇವೆಯನ್ನು ಸಲ್ಲಿಸಿದವರಿಗೂ ಸಾವಿರ ಹಸುಗಳನ್ನು ದಾನ ಮಾಡಿದ ಸಹಸ್ರ ಗೋದಾನಿಗಳಿಗೂ ಸಮಾನವಾದ ಪುಣ್ಯಫಲವು ಬರುತ್ತದೆ. ಹುಣ್ಣಿಮೆಯ ದಿನ ಮೂವತ್ತಕ್ಕೆ ಕಡಮೆಯಾಗದಂತೆ ಪಂಡಿತ ದಂಪತಿಗಳನ್ನು ಆಮಂತ್ರಿಸಬೇಕು. ದೇವರ ಪ್ರೀತಿಗಾಗಿ "ಅತೋದೇವಾ" ಎಂಬ ಎರಡು ಋಕ್‌ಗಳಿಂದ ಎಳ್ಳು ಪಾಯಸ ಹಾಕಿ ಹೋಮ ಮಾಡಬೇಕು. ಅನಂತರ ಕನಿಷ್ಠ ಮೂವತ್ತು ದಂಪತಿಗಳ ಭೋಜನ ಮಾಡಿಸಿ ಯಥಾಶಕ್ತಿ ದಕ್ಷಿಣೆಕೊಟ್ಟು ನಮಸ್ಕಾರ ಮಾಡಬೇಕು. ಭೋಜನಕ್ಕಿಂತ ಮೊದಲು ತುಳಸಿ, ಕಪಿಲ ಗೋಗಳನ್ನೂ ಈ ವ್ರತವನ್ನು ಮಾಡಿಸುವ ಸಪತ್ನೀಕರಾದ ಗುರುಗಳನ್ನು ಪೂಜೆಮಾಡಿ ಅವರಿಗೆ ಪೂಜೆ ಮಾಡಿದ ಹಸುವನ್ನು ದಾನಕೊಡಬೇಕು. ಕೊನೆಗೆ

**ವ್ರತಾದಸ್ಮಾಚ್ಚಯತ್ಪಾಪಂ ಸಪ್ತಜನ್ಮ ಕೃತಂ ಮಯಾ ।**
**ತತ್ಸರ್ವಂ ನಾಶಮಾಯಾತು ಸ್ಥಿರಾಮೇಚಾಶು ಸಂತತಿಃ ॥**

ಈ ವ್ರತದಿಂದ ಹಿಂದಿನ ಏಳು ಜನ್ಮಗಳಲ್ಲಿ ನಾನು ಮಾಡಿದ ಪಾಪಗಳೆಲ್ಲವೂ ನಾಶವಾಗಲಿ. ಈ ಭೂಲೋಕದಲ್ಲಿ ನಮ್ಮ ಸಂತಾನವೂ ಶಾಶ್ವತವಾಗಿ ಉಳಿಯಲಿ.

**ಮನೋರಥಾಶ್ಚ ಸಫಲಾಃ ಸಂತು ನಿತ್ಯಂ ಮಮಾರ್ಚನಾತ್ ।**
**ದೇಹಾಂತೇ ವೈಷ್ಣವಂ ಸ್ಥಾನಂ ಪ್ರಾಪ್ನುಯಾ ಮತಿದುರ್ಲಭಂ ॥**

ಶ್ರೀಹರಿಯ ಈ ಸುವರ್ಣ ಪ್ರತಿಮೆಯ ಪೂಜೆಯಿಂದ ನನ್ನ ಮನೋರಥಗಳೆಲ್ಲವೂ ಪೂರ್ಣವಾಗಲಿ. ಈ ದೇಹದ ಅವಸಾನವಾದ ನಂತರ ಮುಂದೆ ವಿಷ್ಣುವಿನ ಅತಿ ದುರ್ಲಭವಾದ ಸ್ಥಾನ ನನಗೆ ದೊರಯಲಿ. ಎಂದು ಹೀಗೆ ಪ್ರಾರ್ಥನೆ ಮಾಡಿ ಆ ಬಂಗಾರದ ವಿಷ್ಣುಮೂರ್ತಿಯನ್ನು ಪೂಜೆಮಾಡಿಸಿದ ಪುರೋಹಿತರಿಗೆ ರತ್ನಸಹಿತವಾಗಿ ದಾನಕೊಡಬೇಕು. ಅನಂತರ ಗುರುಗಳ ಅಪ್ಪಣೆಪಡೆದು ಇಷ್ಟಮಿತ್ರರಿಂದ ಒಡಗೂಡಿ ತಾನು ಭೋಜನ ಮಾಡಬೇಕು. ಹೀಗೆ ಕಾರ್ತಿಕ ವ್ರತವನ್ನು ಮಾಡಿದವನು ವಿಷ್ಣುವಿನ ಸಾನ್ನಿಧ್ಯವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕ ವ್ರತದ ಉದ್ಯಾಪನ ವಿಧಿ ಎಂಬ ತೊಂಬತ್ತಮೂರನೇಯ ಅಧ್ಯಾಯ ಮುಗಿದುದು*

—o—

**ಪೃಥು:-** ಪೂಜ್ಯರೇ, ಕಾರ್ತಿಕ ಮಾಸದಲ್ಲಿ ತುಳಸಿಯ ಗಿಡದ ಅಡಿಯಲ್ಲಿ ಶ್ರೀವಿಷ್ಣುವಿನ ಪೂಜೆಯನ್ನು ಮಾಡಬೇಕೆಂದು ತಾವು ಹೇಳಿದಿರಿ. ಈ ತುಳಸಿಯು ಶ್ರೀಹರಿಗೆ ಇಷ್ಟು ಪ್ರಿಯಳು ಹೇಗೆ ಆದಳು? ತುಳಸಿಯು ಎಲ್ಲಿ ಹುಟ್ಟಿದಳು? ಹೇಗೆ ಹುಟ್ಟಿದಳು? ಮಹಿಮೆ ಏನು? ಇದೆಲ್ಲವನ್ನೂ ಸವಿಸ್ತಾರವಾಗಿ ನನಗೆ ಹೇಳಬೇಕು.

**ನಾರದ:-** ಪೂರ್ವಕಾಲದಲ್ಲಿ ದೇವೇಂದ್ರನು ಮಹಾದೇವರನ್ನು ಕಾಣಲು ಕೈಲಾಸ ಪರ್ವತಕ್ಕೆ ಹೋಗಿದ್ದ. ಉಳಿದ ದೇವತೆಗಳು ಹಾಗೂ ಅಪ್ಸರೆಯರಿಂದ ಕೂಡಿ ಶಿವನ ಮಂದಿರಕ್ಕೆ ಬಂದ ಆ ಶಚೀಪತಿ. ಆ ಶಿವಗೃಹದಲ್ಲಿ ಮಹಾದೇವರು ಕಾಣಲಿಲ್ಲ. ಅವನ ಸ್ಥಾನದಲ್ಲಿ ಭೀಕರ ಆಕಾರದ ಕೆಂಗಣ್ಣಿನ ಕ್ರೂರ ಪುರುಷನೊಬ್ಬನು ಅಲ್ಲಿ ನಿಂತುಕೊಂಡಿದ್ದ. ಅವನನ್ನು ಇಂದ್ರ ಮತ್ತೆ ಮತ್ತೆ ಕೇಳಿದ. ''ಶಿವ ಎಲ್ಲಿ? ಶಂಕರ ಎಲ್ಲಿರುತ್ತಾನೆ?'' ಎಂದು. ಅದಕ್ಕೆ ಆ ಉಗ್ರ ಪುರುಷನು ಯಾವ ಉತ್ತರವನ್ನೂ ಕೊಡಲಿಲ್ಲ. ಅದರಿಂದ ಬ್ರಹ್ಮಾಂಡ ಕೋಪ ಬಂದಿತು ಆ ಸ್ವರ್ಗಾಧಿಪತಿಗೆ. ಉತ್ತರ ಕೊಡದೇ ಮೂಕಮಂಥರನಾಗಿ ನಿಂತುಕೊಂಡ ಆ ಘೋರ ಪುರುಷನನ್ನು ಧಿಕ್ಕರಿಸಿ ನುಡಿದ ದೇವತಾ ಸಾರ್ವಭೌಮ.

**ಇಂದ್ರ:-** ದುರ್ಬುದ್ಧಿಯೆ, ನಾನು ಪ್ರಶ್ನೆ ಕೇಳಿದರೂ ನೀನು ಏಕೆ ಉತ್ತರವನ್ನು ಕೊಡುವದಿಲ್ಲ? ನಿನ್ನನ್ನು ಈಗಲೇ ಈ ವಜ್ರಾಯುಧದಿಂದ ಕೊಂದು ಬಿಡುತ್ತೇನೆ.

ಹೀಗೆ ನುಡಿದು ದೇವೇಂದ್ರನು ತನ್ನ ವಜ್ರದಿಂದ ಆ ಕಾಳಪುರುಷನನ್ನು ಬಲವಾಗಿ ಪ್ರಹರಿಸಿದ ಕುತ್ತಿಗೆಯ ಮೇಲೆ. ಅದರಿಂದ ಆ ಮನುಷ್ಯನ ಕಂಠವು ಕಪ್ಪು ಆಯಿತು. ಇಂದ್ರನ ವಜ್ರ ಸುಟ್ಟು ಬೂದಿಯಾಯಿತು. ರುದ್ರದೇವರು ತಮ್ಮ ತೇಜಸ್ಸಿನಿಂದ ಮತ್ತಿಷ್ಟು ಜಾಜ್ವಲ್ಯಮಾನರಾಗಿ ಹೊಳೆಯುತ್ತ ನಿಂತುಕೊಂಡರು. ಅದನ್ನು ಕಂಡು ಸುರಗುರು ಬೃಹಸ್ಪತ್ಯಾಚಾರ್ಯರು ಕೈ ಮುಗಿದು ಮಹಾರುದ್ರ ದೇವರನ್ನು ಪ್ರಾರ್ಥಿಸತೊಡಗಿದರು.

**ನಮೋ ದೇವಾಧಿದೇವಾಯ ತ್ರ್ಯಂಬಕಾಯ ಕಪರ್ದಿನೇ**
**ತ್ರಿಪುರಘ್ನಾಯ ಶರ್ವಾಯ ನಮೋಂಧಕ ನಿಷವಾದಿನೇ ॥**

**ಕಾಲಾಂತಕಾಯ ಕಾಲಾಯ ಕಾಲಭೋಗ ಧರಾಯಚ ।**
**ನಮೋ ಬ್ರಹ್ಮ ಶಿರೋಹಂತ್ರೇ ಬ್ರಾಹ್ಮಣಾಯ ನಮೋನಮಃ ॥**

ಹೀಗೆ ಬೃಹಸ್ಪತಿಯು ಮಾಡಿದ ಸ್ತೋತ್ರದಿಂದ ಮಹಾದೇವರು ಸಂತುಷ್ಟರಾದರು. ''ಬೇಕಾದ ವರ ಬೇಡು'' ಎಂದು ಹೇಳಿದರು. ಆಗ ದೇವೇಂದ್ರನು ಭಯದಿಂದ ನಡುಗುತ್ತ ದಂಡಪ್ರಣಾಮ ಹಾಕಿದ ಮಹಾದೇವನಿಗೆ.

**ಬೃಹಸ್ಪತಿ:-** ಮಹಾದೇವ, ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ನಿನಗೆ ಶರಣು ಬಂದ ಈ ದೇವೇಂದ್ರನನ್ನು ರಕ್ಷಿಸು. ನಿನ್ನ ಹಣೆಯ ಮೇಲಿನ ಮೂರನೇ ಕಣ್ಣಿನಿಂದ ಹೊರಬಿದ್ದ ಕ್ರೋಧಾಗ್ನಿಯ ಕೆಂಗಕಿಡಿಗಳನ್ನು ನಿನ್ನ ಮೂರನೆಯ ಕಣ್ಣಿನಲ್ಲಿಯೇ ಇಟ್ಟುಕೋ.

**ಮಹಾದೇವ:-** ನಿನ್ನ ಅಪೇಕ್ಷೆಯಂತೆ ಆಗಲಿ. ಇಂದು ನನ್ನ ಕೋಪಾಗ್ನಿಗೆ ಆಹುತಿ ಆಗಲಿರುವ ದೇವೇಂದ್ರನನ್ನು ಉಳಿಸಿ ಅವನಿಗೆ ಜೀವದಾನ ಮಾಡಿದ್ದರಿಂದ ನೀನು ಇನ್ನು ಮೇಲೆ ಜೀವ ಎಂಬ ಹೆಸರಿನಿಂದಲೇ ಜಗತ್ತಿನಲ್ಲಿ ಪ್ರಸಿದ್ಧನಾಗುವೆ. ಆದರೆ ಈಗ ನನ್ನ ಹಣೆಯ ನಡುವಿನ ಮೂರನೇ ಕಣ್ಣಿನಿಂದ ಚಿಮ್ಮಿ ಹೊರಗೆ ಬಂದ ಆ ಕೋಪಾಗ್ನಿಯ ಕಣಕಿಡಿಗಳನ್ನು ತಿರುಗಿ ಆ ಕಣ್ಣಿನಲ್ಲಿ ಮತ್ತೆ ಸೇರಿಸುವುದು ಹೇಗೆ? ಅದನ್ನು ಈಗ ಇಂದ್ರನನ್ನು ಬಾಧಿಸದಂತೆ ದೂರ ಎಲ್ಲಿಯಾದರೂ ಚೆಲ್ಲಿ ಬಿಡುತ್ತೇನೆ.

ಹೀಗೆ ನುಡಿದ ಶಂಕರನು ತನ್ನ ಕೋಪಾಗ್ನಿಯ ಕಿಡಿಗಳನ್ನು ಉಪ್ಪು ನೀರಿನಲ್ಲಿ ಎಸೆದುಬಿಟ್ಟ. ಅದು ಗಂಗಾಸಾಗರದ ಸಂಗಮದಲ್ಲಿ ಹೋಗಿ ಬಿದ್ದುಬಿಟ್ಟಿತು. ಅದರಿಂದ ಒಂದು ಚಿಕ್ಕಮಗು ಮೈದಾಳಿ ರೋದನ ಮಾಡತೊಡಗಿತು ಆ ಎಳೆ ಕೂಸಿನ ಅಳುವ ರೋದನ ಧ್ವನಿಯಿಂದ ಭೂಮಿ ನಡುಗಿತು. ಸ್ವರ್ಗ ಗಡಚಿಕ್ಕಿತು. ಸತ್ಯಲೋಕ ಸಂತ್ರಸ್ತವಾಯಿತು. ಇದು ಏನು ಇರಬಹುದೆಂದು ಕೌತುಕಾಕ್ರಾಂತನಾಗಿ ಬ್ರಹ್ಮದೇವ ಆಗಮಿಸಿದ ಗಂಗಾಸಾಗರ ಸಂಗಮದ ರಂಗಸ್ಥಳಕ್ಕೆ. ಸಮುದ್ರರಾಜನ ತೊಡೆಯ ಮೇಲೆ ಒಂದು ಮಗು ಆಡುತ್ತ ಇತ್ತು. ಅದನ್ನು ಕಂಡು ಬ್ರಹ್ಮದೇವರು ಸಮುದ್ರನಾಥನನ್ನು ಕೇಳಿದರು.

**ಬ್ರಹ್ಮ:-** ಸಮುದ್ರ, ಈ ಅತ್ಯದ್ಭುತವಾದ ಈ ಶಿಶು ಯಾರ ಮಗ? ಇಲ್ಲಿಗೆ ಹೇಗೆ ಬಂದಿತು? ಇದರ ರೋದನ ಧ್ವನಿಯಿಂದ ಮೂರು ಲೋಕಗಳೇ ಭಯಕಂಪಿತವಾಗಿವೆ.

**ಸಮುದ್ರ:-** ಇವನು ಗಂಗಾ ಸಿಂಧು ಸಂಗಮದಿಂದ ಜನಿಸಿದ್ದಾನೆ. ಇವನು ನನ್ನ ಮಗ. ಇವನಿಗೆ ಜಗದ್ಗುರುವಾದ ನೀನು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡು.

ಹೀಗೆ ಹೇಳಿ ಸಮುದ್ರರಾಜನು ತನ್ನ ಮಗುವನ್ನು ಬ್ರಹ್ಮದೇವರ ತೊಡೆಯ ಮೇಲೆ ಕೂಡಿಸಿದ. ಆಗ ಅದೇ ಹುಟ್ಟಿದ ಆ ಮಗು ಬ್ರಹ್ಮದೇವರ ತೊಡೆಯಮೇಲೆ ಮಲಗಿಸಿದ ಕೂಡಲೇ ಬ್ರಹ್ಮದೇವರ ನಿಡಿದಾದ ಗಡ್ಡವನ್ನು ಹಿಡಿದು ಜಗ್ಗತೊಡಗಿತು. ಬಲವಾಗಿ ಗಡ್ಡವನ್ನು ಹಿಡಿದು ಮತ್ತೆ ಜಗ್ಗಿ ಜಗ್ಗಿ ಎಳೆದಾಡಿದ್ದರಿಂದ ಬ್ರಹ್ಮದೇವರಿಗೆ ಬಹಳ ನೋವು ಉಂಟಾಗಿ ಕಣ್ಣಿನಲ್ಲಿ ನೀರು ಬಂದವು. ಆ ದೈತ್ಯ ಬಾಲಕನ ಕಪಿ ಮುಷ್ಟಿಯಿಂದ ತಮ್ಮ ಗಡ್ಡವನ್ನು ಬಿಡಿಸಿಕೊಳ್ಳಲಿಕ್ಕೆ ಸಾಕು ಬೇಕಾಗಿಹೋಯಿತು. ಆ ಪಿತಾಮಹನಿಗೆ ಕೊನೆಗೊಮ್ಮೆ ಹೇಗೋ ಕೊಸರಾಡಿ ತಮ್ಮ ಉದ್ದಗಡ್ಡವನ್ನು ಆ ಮಗುವಿನ ವಜ್ರಮುಷ್ಟಿಯಿಂದ ಬಿಡಿಸಿಕೊಂಡು ಬ್ರಹ್ಮದೇವರು ನುಡಿದರು ಸಮುದ್ರನಾಥನನ್ನು ಕುರಿತು.

**ಬ್ರಹ್ಮ:-** ಈ ಬಾಲಕನು ನನ್ನ ಎರಡೂ ಕಣ್ಣುಗಳಿಂದ (ಜಲ) ನೀರು ಬರುವಂತೆ ಮಾಡಿದ್ದರಿಂದ ಜಲಂಧರ ಎಂದು ಪ್ರಸಿದ್ಧನಾಗಲಿ. ಇವನು ಈಗಲೇ ತರುಣನಾಗಿ ಎಲ್ಲ ವಿಧವಾದ ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ಪಾರಂಗತನಾಗಲಿ. ರುದ್ರನ ಹೊರತು ಎಲ್ಲ ಪ್ರಾಣಿಗಳಿಗೂ ಇವನು ಅವಧ್ಯನಾಗಲಿ.

**ನಾರದ:-** ಬ್ರಹ್ಮದೇವರು ಹೀಗೆ ವರಕೊಟ್ಟು ಶುಕ್ರಾಚಾರ್ಯರನ್ನು ಕರೆದು, ಜಲಂಧರನಿಗೆ ದೈತ್ಯ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿಸಿ ತಾವು ಅಂತರ್ಧಾನ ಹೊಂದಿದರು. ಮಗನ ಈ ವೈಭವವನ್ನು ಕಂಡು ಸಮುದ್ರನಾಥನಿಗೆ ಪರಮ ಸಂತೋಷವಾಯಿತು. ವನು ಕಾಲನೇಮಿಯ ಮಗಳಾದ ವೃಂದಾ ಎಂಬ ಮಗಳನ್ನು ಕೇಳಿ ಕರೆತಂದು ಜಲಂಧರನ ಮದುವೆಯನ್ನು ಮಾಡಿದ. ಇಂಥ ವೀರವರೇಣ್ಯನಾದ ಅಳಿಯನಿಗೆ

ಕಾಲನೇಮಿಯು ಆನಂದದಿಂದ ಸುಂದರಿಯಾದ ವೃಂದಾ ಎಂಬ ಮಗಳನ್ನು ಕೊಟ್ಟು ಅದ್ದೂರಿಯಿಂದ ಮದುವೆ ಮಾಡಿಕೊಟ್ಟ. ಕಾಲನೇಮಿಯ ಮಿತ್ರ ಪರಿವಾರದ ದೈತ್ಯಧುರೀಣರೆಲ್ಲರೂ ಕಾಲನೇಮಿಯೊಂದಿಗೆ ಜಲಂಧರನ ಬೆಂಬಲಿಗರಾಗಿ ನಿಂತುಕೊಂಡರು. ಶುಕ್ರಾಚಾರ್ಯರ ನೇತೃತ್ವದಲ್ಲಿ ಕಾಲನೇಮಿಯ ಪರಿವಾರ ವರ್ಗದ ಸಹಾಯ ಸಹಕಾರದಿಂದ ಜಲಂಧರನು ಅಖಂಡ ಭೂಮಂಡಲವನ್ನೆಲ್ಲ ಏಕಛತ್ರಾಧಿಪತಿಯಾಗಿ ಆಳತೊಡಗಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ತುಳಸಿ ಮಹಾತ್ಮೆ ಜಾಲಂಧರನ ಉತ್ಪತ್ತಿ ಎಂಬ ತೊಂಬತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಜಾಲಂಧರನ ದಿಗ್ವಿಜಯ, ದೇವತೆಗಳ ಪರಾಜಯ | ಅಧ್ಯಾಯ - ೯೫

**ನಾರದ:-** ಪೂರ್ವಕಾಲದಲ್ಲಿ ದೇವತೆಗಳ ಜೊತೆಗೆ ಹೋರಾಡಿ ಸೋಲು, ಸಾವು, ನೋವುಗಳನ್ನು ಅನುಭವಿಸಿದ ದೈತ್ಯ ದಾನವರು ಪಲಾಯನಗೈದು ಪಾತಾಳ ಸೇರಿದರು. ಈಗ ಭೂಮಂಡಲದಲ್ಲಿ ಸಮುದ್ರ ಪುತ್ರನಾದ ಜಾಲಂಧರನ ದೈತ್ಯ ಶಾಸನ ಪ್ರಾರಂಭವಾಗಿದೆ ಎಂಬ ಸಮಾಚಾರವನ್ನು ಕೇಳಿ ಪಾತಾಳ ಮೂಲದಿಂದ ಎದ್ದು ಬಂದರು ಎಲ್ಲ ದೈತ್ಯದಾನವರು. ಎಲ್ಲ ರಾಕ್ಷಸರಿಗೂ ಆಶ್ರಯ ನೀಡಿದ ಆ ಸಿಂಧುಸುತ. ಒಂದು ದಿನ ಜಾಲಂಧರನ ಕಣ್ಣಿಗೆ ತಲೆ ಕತ್ತರಿಸಿದ ರಾಹುವಿನ ರುಂಡ ಕಂಡಿತು. ಅದನ್ನು ನೋಡಿ ಗುರುಗಳಾದ ಶುಕ್ರಾಚಾರ್ಯರಿಗೆ ಕೇಳಿದ.

**ಜಾಲಂಧರ:-** ಗುರುಗಳೆ, ಈ ರಾಹುವಿನ ತಲೆ ಕಡಿದವರು ಯಾರು?

**ಶುಕ್ರಾಚಾರ್ಯ:-** ಹಿಂದೆ ದೇವದಾನವರು ಕೂಡಿ ಹಾಲಿನ ಹೆಗ್ಗಡಲನ್ನು ಕಡೆದರು ಅಮೃತವನ್ನು ಪಡೆಯಲಿಕ್ಕಾಗಿ. ಆ ಕ್ಷೀರ ಸಾಗರದಿಂದ ಉದಯಿಸಿ ಬಂದ ರತ್ನಗಳು ಅಮೌಲ್ಯ, ಅತುಲ್ಯ ಮತ್ತು ಅನೇಕ. ಅವೆಲ್ಲವುಗಳನ್ನು ಇಂದ್ರಾದಿ ದೇವತೆಗಳು ತಾವೇ ಸೆಳೆದೊಯ್ದರು. ದೈತ್ಯರಿಗೆ ಕೌಸ್ತುಭ, ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ, ಚಂದ್ರ, ಅಪ್ಸರೆಯರು, ಐರಾವತ, ಉಚ್ಚೈಶ್ರವ, ಲಕ್ಷ್ಮೀ, ಪಾರಿಜಾತ ಮುಂತಾದ ಅನರ್ಘ್ಯ ರತ್ನಗಳಲ್ಲಿ ಒಂದನ್ನೂ ಕೊಡಲಿಲ್ಲ. ಎಲ್ಲವನ್ನೂ ಬಲಾತ್ಕಾರದಿಂದ ವಿಷ್ಣುವಿನ ಬೆಂಬಲ ಪಡೆದು ಅಮರಾವತಿಯಲ್ಲಿರುವ ಅಮರಗಣಾಧೀಶರೇ ತೆಗೆದುಕೊಂಡು ಹೋದರು. ಸಮುದ್ರ ಮಂಥನದ ಮಹಾಫಲವಾದ ಅಮೃತವು ದೈತ್ಯರ ಕೈಯಲ್ಲಿ ಸಿಕ್ಕಿದ್ದರೂ ಅದನ್ನು ವಿಷ್ಣುದೈತ್ಯರಿಗೆ ದಕ್ಕಗೊಡಲಿಲ್ಲ.

ಇದನ್ನು ಕೇಳಿ ಬ್ರಹ್ಮಾಂಡ ಕೋಪ ಬಂದಿತು ಆ ಸಮುದ್ರ ಕುಮಾರನಿಗೆ. ಕೂಡಲೇ ಅವನು ಅಮರಾವತಿಗೆ ಅಟ್ಟಿದ ಒಬ್ಬ ದೂತನನ್ನು. ದೈತ್ಯರಾಜನ ಆ ದೂತನು ಒಂದು ಗರ್ವದ ಪರ್ವತವೇ ಆಗಿದ್ದ. ಅವನು ದೇವೇಂದ್ರನ ಸುಧರ್ಮ ಸಭೆಗೆ ಹೋಗಿ ಗರ್ವದಿಂದ ಬೀಗಿ ಬಿಗುಮಾನದಿಂದಲೇ ನುಡಿದ.

**ದೂತ:-** ದೇವೇಂದ್ರ, ನಾನು ಸಮುದ್ರ ಪುತ್ರನಾದ ಜಲಂಧರನ ದೂತ. ಅವನು ನನ್ನನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ಅವನ ಸಂದೇಶವನ್ನು ಕೇಳು ''ಇಂದ್ರ, ನೀನು ನನ್ನ ತಂದೆಯಾದ ಸಮುದ್ರನನ್ನು ಮಂದರ ಪರ್ವತವನ್ನು ಇಟ್ಟು ಕಡೆದು ಅದರಿಂದ ಹುಟ್ಟಿದ

ಅಮೃತ, ಮತ್ತು ರತ್ನಗಳನ್ನು ನೀವು ಮಾತ್ರ ಏಕೆ ಪಡೆದಿರಿ? ಸಮುದ್ರ ನನಗೆ ತಂದೆಯಾಗಬೇಕು. ಸಮುದ್ರ ಮಧ್ಯದಿಂದ ಹೊರಹೊಮ್ಮಿ ಬಂದ ರತ್ನಗಳೆಲ್ಲವೂ ಸಮುದ್ರನ ಮಗನಾದ ನನಗೆ ಸೇರಬೇಕು. ಅವುಗಳನ್ನು ಮುಟ್ಟಲಿಕ್ಕೂ ನಿಮಗೆ ಅಧಿಕಾರವಿಲ್ಲ. ನನ್ನ ತಂದೆಯ ಕಡಲಿನ ಒಡಲಿನಿಂದ ಹುಟ್ಟಿಬಂದ ರತ್ನಗಳನ್ನೆಲ್ಲ ನನಗೆ ತಂದು ಒಪ್ಪಿಸು. ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧನಾಗು'' ಜಾಲಂಧರನ ದೂತನ ಈ ಗರ್ವಾಂಧ ಉಕ್ತಿಗಳನ್ನು ಕೇಳಿ ದೇವೇಂದ್ರನಿಗೆ ಆಶ್ಚರ್ಯವೂ ಆಯಿತು ಸಿಟ್ಟು ಬಂದಿತು. ಆಗ ಅವನು ಕುಪಿತನಾಗಿದ್ದರೂ ಸಂಯಮವನ್ನು ತಾಳಿ ಮೆಲ್ಲನೆ ನುಡಿದ.

**ಇಂದ್ರ:-** ದೂತನೆ, ಪೂರ್ವಕಾಲದಲ್ಲಿ ನಾನು ಕಡಲನ್ನು ಕಡೆದೆ. ಅದಕ್ಕೆ ಕಾರಣವನ್ನು ಹೇಳುತ್ತೇನೆ. ಹಿಂದೆ ಈ ಭೂಲೋಕದ ಗುಡ್ಡಗಳೆಲ್ಲವೂ ತಮ್ಮ ರೆಕ್ಕೆ ಬಿಚ್ಚಿ ಎಲ್ಲ ಕಡೆಗೂ ಹಾರಾಡತೊಡಗಿದವು. ಆದರಿಂದ ಲೋಕಸಂಹಾರವಾಗುವದೆಂದು ತಿಳಿದು ನಾನು ಅವುಗಳ ರೆಕ್ಕೆಗಳನ್ನು ನನ್ನ ವಜ್ರಾಯುಧದಿಂದ ಹೊಡೆದು ಕತ್ತರಿಸಿ ಹಾಕಿದೆ. ಆಗ ಭಯಭ್ರಾಂತವಾದ ಪರ್ವತಗಳಿಗೆಲ್ಲ ಆ ಸಮುದ್ರರಾಜನು ಆಶ್ರಯ ಕೊಟ್ಟು ತನ್ನ ಜಲೋದರದಲ್ಲಿ ಅಡಗಿಸಿ ಇಟ್ಟುಕೊಂಡ. ಆ ಪರ್ವತಗಳು ನನ್ನ ವೈರಿಗಳು. ಅವುಗಳನ್ನು ರಕ್ಷಿಸತೊಡಗಿದ ನಿನ್ನ ತಂದೆಯಾದ ಸಮುದ್ರರಾಜ. ಆದುದರಿಂದಲೇ ನಾನು ಆ ಸಮುದ್ರ ಗರ್ಭದಲ್ಲಿರುವ ಆ ರತ್ನಗಳನ್ನೆಲ್ಲ ಅಪಹರಿಸಿದ್ದೇನೆ. ಇದರಂತೆ ಸಮುದ್ರದ ಹಿರಿಯ ಮಗನಾದ ಶಂಖಾಸುರನು ದೇವತೆಗಳ ದ್ವೇಷ ಮಾಡಿದ. ಆದುದರಿಂದ ತನ್ನ ತಮ್ಮನಾದ ಉಪೇಂದ್ರನು ಅಗಾಧವಾದ ಸಾಗರದ ಆಳದಲ್ಲಿ ಇಳಿದು ಶಂಖಾಸುರನನ್ನು ಸಂಹರಿಸಿದ. ಈ ಎಲ್ಲ ಕಾರಣಗಳಿಗಾಗಿ ನಾವು ಸಮುದ್ರರಾಜನನ್ನು ಮಂದರ ಬೆಟ್ಟ ಇಟ್ಟು ಕಡೆದೆವು. ನನ್ನ ವೈರಿಗಳಿಗೆ ಆಶ್ರಯ ಕೊಟ್ಟ ಆ ನದೀ ನಾಥನನ್ನು ನಾನು ಕಡೆದದ್ದರಲ್ಲಿ ತಪ್ಪೇನು?

ಜಲಂಧರನ ದೂತನು ದೇವೇಂದ್ರನ ಈ ನಿರೂಪವನ್ನು ತಂದು ತನ್ನ ಒಡೆಯನಿಗೆ ಮುಟ್ಟಿಸಿದನು. ಅದನ್ನು ಕೇಳಿದಾಕ್ಷಣ ಆ ದೈತ್ಯರಾಜನು ಸಿಡಿಲಿನಂತೆ ಸಿಡಿದೆದ್ದ. ಸಿಂಹದಂತೆ ಗುಡುಗಿದ. ಸಿಟ್ಟಿನಿಂದ ಅವನ ತುಟಿಗಳು ಅದರತೊಡಗಿದವು. ಕೂಡಲೇ ಅವನು ದೇವತೆಗಳ ಮೇಲೆ ದಿಗ್ವಿಜಯ ಮಾಡಬೇಕೆಂದು ನಿರ್ಧರಿಸಿದ. ದಿಕ್‌ದಿಗಂತಗಳಿಂದಲೂ, ಪಾತಾಳ ಕುಹರದಿಂದಲೂ, ದಿಗ್ಗನೇ ಎದ್ದು ಬಂದರು ದೈತ್ಯದಾನವರು. ಶುಂಭ ನಿಶುಂಭ ಮೊದಲಾದ ದೈತ್ಯರು ಮುಂಚೂಣಿಯಲ್ಲಿ ನಿಂತು ದೇವಸೇನೆಯ ಮೇಲೆ ಎರಗಿದರು. ಅದನ್ನು ಕಂಡು ದೇವತೆಗಳೂ ಕೂಡ ಯುದ್ಧಕ್ಕೆ ಸನ್ನದ್ಧರಾಗಿ ಅಮರಾವತಿಯಿಂದ ಹೊರಬಿದ್ದರು.

ದೇವದಾನವರ ನಡುವೆ ಘನಘೋರವಾದ ಸಂಗ್ರಾಮ ನಡೆಯಿತು ಆ ರಣರಂಗದಲ್ಲಿ ದೇವತೆಗಳ ಘೋರಾಯುಧಗಳಿಂದ ಅಸಂಖ್ಯ ದಾನವರು ಮಡಿದು ಮೂರ್ಛಿತರಾಗಿ ನೆಲದ ಮೇಲೆ ಉರುಳಿಬಿದ್ದರು. ಅವರನ್ನೆಲ್ಲ ದೈತ್ಯರ ಆಚಾರ್ಯರಾದ ಗುರು ಶುಕ್ರರು ತಮ್ಮ ಸಂಜೀವಿನೀ ವಿದ್ಯೆಯಿಂದ ಬದುಕಿಸಿ ಎದ್ದು ನಿಲ್ಲಿಸುತ್ತಿದ್ದರು. ಇದರಂತೆ ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ರಣಭೂಮಿಯಲ್ಲಿ ಮೃತಪ್ರಾಯರಾಗಿ ಬಿದ್ದ ದೇವತೆಗಳನ್ನು ತಮ್ಮ ಮಂತ್ರಶಕ್ತಿಯಿಂದ ಹಾಗೂ ದಿವ್ಯೌಷಧಿಗಳಿಂದ ಪುನಃ ಬದುಕಿಸಿ ಯುದ್ಧಕ್ಕೆ ಅಣಿಗೊಳಿಸುತ್ತಿದ್ದರು. ಅದನ್ನು ಕಂಡು ಸಂತಪ್ತನಾಗಿ ಹೋದ ಜಲಂಧರ, ಕಣ್ಣುಗಳಿಂದ ಕೆಂಗಿಡಿಗಳನ್ನು ಉದುರಿಸುತ್ತ ಕಟುವಾಗಿ ನುಡಿದ ಶುಕ್ರಾಚಾರ್ಯರಿಗೆ.

**ಜಲಂಧರ:-** ಗುರುಗಳೆ, ನಾನು ಕಷ್ಟಪಟ್ಟು ನಿಕರದಿಂದ ಕಾದಿ, ಹಣಾಹಣಿ ಹೋರಾಡಿ , ಕೊಚ್ಚಿ ಕೊಂದು ಒಗೆದ ದೇವತೆಗಳೆಲ್ಲರೂ ಮತ್ತೆ ಪುಟಿಚಂಡಿನಂತೆ

ಪುಟಿದೆದ್ದು ನಿಲ್ಲುತ್ತಿದ್ದಾರೆ. ಇದು ಹೇಗೆ? ಸತ್ತವರನ್ನು ಬದುಕಿಸುವ ಸಂಜೀವಿನಿ ವಿದ್ಯೆಯು ನಿಮ್ಮೊಬ್ಬರಲ್ಲಿ ಮಾತ್ರ ಇರುತ್ತದೆ. ಅಂದ ಬಳಿಕ ಈ ದೇವ ಸೇನೆಯ ಪುನರುಜ್ಜೀವನದ ರಹಸ್ಯ ಏನು?

**ಶುಕ್ರಾಚಾರ್ಯ:-** ದೈತ್ಯರಾಜ, ದೇವತೆಗಳ ಆಚಾರ್ಯನಾದ ಬೃಹಸ್ಪತಿ ನನ್ನಷ್ಟೇ ಚತುರ. ಒಳ್ಳೇ ಕಾರ್ಯ ಸಾಧಕ. ಈಗ ಅವನು ದ್ರೋಣ ಪರ್ವತದಲ್ಲಿರುವ ದಿವ್ಯೌಷಧಿಗಳನ್ನು ತಂದು ತೇದು ಅರೆದು ಹಾಕಿ ಅವುಗಳಿಂದ ಮೃತಪತಿತರಾದ ಸುರಸೈನಿಕರನ್ನು ಮರಳಿ ಬದುಕಿಸಿ ಯುದ್ಧಕ್ಕೆ ಎದ್ದುನಿಲ್ಲಿಸುತ್ತಿದ್ದಾನೆ. ಈಗ ನೀನು ಒಂದು ಉಪಾಯ ಮಾಡು. ಮೃತ ಸಂಜೀವಿನಿ ಔಷಧಿಗಳು ತುಂಬಿರುವ ಆ ದ್ರೋಣಚಾಲವನ್ನು ಎತ್ತಿತಂದು ಸಮುದ್ರದಲ್ಲಿ ಚೆಲ್ಲಿಬಿಡು.

ಗುರು ಶುಕ್ರರ ಈ ಸಲಹೆ ಸಮಯೋಚಿತ ಹಾಗೂ ಸೂಕ್ತವೆನಿಸಿತು ಆ ದೈತ್ಯ ದೊರೆಗೆ. ಕೂಡಲೇ ಅವನು ಓಡಿದ ದ್ರೋಣಗಿರಿಗೆ. ತನ್ನ ದೈತ್ಯಪರಾಕ್ರಮದಿಂದ ಆ ಬಾನುದ್ದ ಬೆಟ್ಟವನ್ನು ಕಿತ್ತಿದ. ಪ್ರಚಂಡ ಬಾಹುಗಳಿಂದ ಎತ್ತಿದ. ಸಮುದ್ರದ ಆಗಾಧ ನೀರಿನಲ್ಲಿ ತೂರಿ ಒಗೆದ. ಮರುಚಣದಲ್ಲಿ ಸಂಗ್ರಾಮ ರಂಗಭೂಮಿಗೆ ಧಾವಿಸಿ ಓಡಿ ಬಂದ. ಕೆಚ್ಚೆದೆಯಿಂದ ಕಾದಿ ಕೊಚ್ಚಿ ಹಾಕಿದ ಸುರಸೈನಿಕರನ್ನು. ಅವನ ಶಸ್ತ್ರಾಘಾತದಿಂದ ಕ್ಷತವಿಕ್ಷತರಾಗಿ ಅಸಂಖ್ಯ ದೇವತೆಗಳು ಧಾರಾತೀರ್ಥದಲ್ಲಿ ದೇಹ ಬಿಟ್ಟುದುದನ್ನು ಕಂಡು ದ್ರೋಣಗಿರಿಗೆ ದಿವ್ಯೌಷಧಿಗಳನ್ನು ತರಲು ಓಡಿದರು ಬೃಹಸ್ಪತ್ಯಾಚಾರ್ಯರು. ಆದರೆ ಅಲ್ಲಿ ಆ ಬೆಟ್ಟವೇ ಇರಲಿಲ್ಲ. ಅದನ್ನು ಈ ಮೊದಲೇ ಜಲಂಧರ ಕಡಲಿನ ಒಡಲಿನಲ್ಲಿ ಅಡಗಿಸಿಬಿಟ್ಟಿದ್ದ. ಅದನ್ನು ಕಂಡು ತೀರ ನಿರಾಶೆಯಾಯಿತು ಆ ಸುರಗುರುವಿಗೆ. ಆಗ ಅವರು ನಿರಾಶೆಯ ನಿಟ್ಟುಸಿರು ಬಿಡುತ್ತ ರಣಭೂಮಿಗೆ ಬಂದು ದೇವತೆಗಳಿಗೆ ಕೂಗಿ ಹೇಳಿದರು.

**ಬೃಹಸ್ಪತಿ:-** ದೇವತೆಗಳೇ, ಓಡಿರಿ. ಈ ಜಲಂಧರನನ್ನು ಯಾರಿಗೂ ಗೆಲ್ಲಲಿಕ್ಕೂ ಆಗುವದಿಲ್ಲ. ಕೊಲ್ಲಲಿಕ್ಕೂ ಆಗುವದಿಲ್ಲ. ಇವನು ರುದ್ರಾಂಶಸಂಭೂತ. ಮಹಾದೇವರನ್ನು ಎದುರಿಸಿ ಹಿಂದೆ ದೇವೇಂದ್ರ ಎಷ್ಟು ಭವಣೆಪಟ್ಟ ಎನ್ನುವದನ್ನು ನೀವು ನೆನೆದುಕೊಳ್ಳಿರಿ.

ದೇವಗುರುವಿನ ಈ ಮಾತನ್ನು ಕೇಳಿ ಭಯವಿಹ್ವಲರಾದರು ಎಲ್ಲ ಸುರಸಮೂಹದ ಜನರು. ಗಾಬರಿಯಾಗಿ ದಿಕ್ಕುದಿಕ್ಕಿಗೆ ಓಡಿ ಹೋದರು. ಯುದ್ಧ ಭೂಮಿಯಲ್ಲಿ ಒಬ್ಬ ದೇವತೆಯೂ ದೈತ್ಯರನ್ನು ಎದುರಿಸಿ ನಿಲ್ಲಲಿಲ್ಲ. ಒಮ್ಮೆಲೇ ದೇವತೆಗಳ ಸೇನಾಬಲವೆಲ್ಲವೂ ರಣಭೂಮಿಯಿಂದ ಅದೃಶ್ಯವಾಗಿ ಹೋಯಿತು. ಆಗ ಜಲಂಧರನು ಜಲಭೇರಿಯನ್ನು ಬಾರಿಸುತ್ತ ನಿರ್ಜರರ ರಾಜಧಾನಿಯಾದ ಅಮರಾವತಿಯನ್ನು ವೈಭವದಿಂದ ಪ್ರವೇಶಮಾಡಿದ ದೈತ್ಯರಾಜನು ತನ್ನ ರಾಜಧಾನಿಯಲ್ಲಿ ಪ್ರವೇಶ ಮಾಡಿದ ಕೂಡಲೇ ಇಂದ್ರಾದಿ ದೇವತೆಗಳೆಲ್ಲರೂ ದೈತ್ಯರಿಂದ ವಿದ್ರುತೋಪದ್ರುತರಾಗಿ ಸುರಸಾಮ್ರಾಜ್ಯದ ಸೀಮೆಯನ್ನು ತೊರೆದು ಸುವರ್ಣಗಿರಿಯೆನಿಸಿದ ಮೇರುಪರ್ವತದ ಗಹನ ಗೂಢ ಗವಿಗಳಲ್ಲಿ ಅವಿತುಕೊಂಡರು. ಅತ್ತ ಜಾಲಂಧರನು ದೇವತೆಗಳ ಅಧಿಕಾರವನ್ನೂ ಐಶ್ವರ್ಯವನ್ನೂ ಸ್ಥಾನಗಳನ್ನೂ ಕಸಿದುಕೊಂಡು ಅವುಗಳ ಮೇಲೆ ತನ್ನ ಶುಂಭ ಮೊದಲಾದ ದೈತ್ಯರನ್ನು ಕೂಡಿಸಿ ಅವರಿಗೆ ಅಧಿಕಾರ ವಹಿಸಿಕೊಟ್ಟು ತಾನು ಆ ಮೇರು ಪರ್ವತವನ್ನು ಪ್ರವೇಶಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಜಾಲಂಧರನ ದಿಗ್ವಿಜಯ,*
*ದೇವತೆಗಳ ಪರಾಜಯ ಎಂಬ ತೊಂಬತ್ತೈದನೇಯ ಅಧ್ಯಾಯ ಮುಗಿದುದು*

**ನಾರದ:-** ದಾನವೇಂದ್ರನಾದ ಜಾಲಂಧರನು ತಮ್ಮನ್ನು ಬೆನ್ನಟ್ಟಿ ಮೇರುಪರ್ವತಕ್ಕೆ ಬರುವ ಎಂದು ತಿಳಿದು ಭೀತಿಗ್ರಸ್ತರಾದ ದೇವತೆಗಳು ಗದಗುಟ್ಟಿ ನಡುಗಿದರು. ಭಯ ಭ್ರಾಂತರಾದ ಅವರೆಲ್ಲರೂ ಭಗವಾನ್ ಶ್ರೀಹರಿಗೆ ಶರಣುಹೋದರು ಮತ್ತು ಭಕ್ತಿಯುಕ್ತವಾದ ಉಕ್ತಿಗಳಿಂದ ಸ್ತೋತ್ರ ಮಾಡತೊಡಗಿದರು.

**ದೇವತೆಗಳು:-**

ನಮೋ ಮಚ್ಛ್ಯಕೂರ್ಮಾದಿ ನಾನಾ ಸ್ವರೂಪೈಃ
ಸದಾ ಭಕ್ತಕಾರ್ಯೋದ್ಯತಾಯಾರ್ತ್ತಿ ಹಂತ್ರೇ ।
ವಿಧಾತ್ರಾದಿ ಸರ್ಗಸ್ಥಿತಿ ಧ್ವಂಸ ಕರ್ತ್ರೇ ಗದಾಶಂಖ
ಪದ್ಮಾದಿ ಹಸ್ತಾಯತೇಽಸ್ತು ॥೧॥

ರಮಾವಲ್ಲಭಾ ಯಾಸುರಾಣಾಂ ನಿಹಂತ್ರೇ
ಭುಜಂಗಾರಿ ಯಾನಾಯ ಪೀತಾಂಬರಾಯ ।
ಮಖಾದಿ ಕ್ರಿಯಾಪಾಕ ಕರ್ತ್ರೇ ವಿಕರ್ತ್ರೇ
ಶರಣ್ಯಾಯ ತಸ್ಮೈನತಾಃಸ್ಮೋ ನತಾಃ ಸ್ಮಃ ॥೨॥

ನಮೋ ದೈತ್ಯ ಸಂತಾಪಿತಾ ಮರ್ತ್ಯ ದುಃಖಾಚಲ ಧ್ವಂಸ
ರಂಭೋಲಯೇ ವಿಷ್ಣವೇ ತೇ
ಭುಜಂಗೇಶ ತಲ್ಪೇಶಯಾಯಾರ್ಕ ಚಂದ್ರದ್ವಿನೇತ್ರಾಯ
ತಸ್ಮೈನತಾಃಸ್ಮೋ ನತಾ ಸ್ಮಃ ॥೩॥

ಮಚ್ಛ್ಯಕೂರ್ಮಾದಿ ಅನೇಕ ಅವತಾರಗಳಿಂದ ಭಕ್ತರ ಕಾರ್ಯ ಮಾಡಲು ಹೊರಟ ಶ್ರೀಹರಿಗೆ ನಮಸ್ಕಾರ. ಎಲ್ಲರ ದುಃಖಗಳನ್ನು ಕಳೆಯುವ ನೀನು ಬ್ರಹ್ಮನೇ ಮೊದಲಾದ ಎಲ್ಲ ಜೀವರ ಹುಟ್ಟು ಉಳಿವು ಅಳಿವುಗಳನ್ನು ಸ್ವಯಂ ಕರ್ತಾ ಆಗಿ ನೀನೇ ಮಾಡುತ್ತಲಿರುವೆ. ನಾಲ್ಕು ಕೈಗಳಲ್ಲಿ ಶಂಖಚಕ್ರಗದಾಪದ್ಮಗಳನ್ನು ಧರಿಸಿದ ನಿನಗೆ ನಮ್ಮ ನಮಸ್ಕಾರಗಳು. ರಮಾದೇವಿಯ ಹೃದಯ ವಲ್ಲಭನಾದ ನೀನು ಎಲ್ಲ ದೈತ್ಯರನ್ನೂ ಸಂಹರಿಸುವೆ. ಗರುಡವಾಹನನಾದ ಪೀತಾಂಬರವನ್ನು ಧರಿಸಿದ ಶ್ರೀಹರೇ. ಯಜ್ಞಯಾಗಾದಿ ವೈದಿಕ ಕ್ರಿಯಾಕಲಾಪಗಳಿಗೆಲ್ಲಾ ಫಲವನ್ನು ಕೊಡುವವ ನೀನೇ. ನೀನು ಸ್ವಯಂಭೂ, ಜಗದುತ್ಪಾದಕ. ನಿನಗೆ ಉತ್ಪಾದಕ ಬೇರೆ ಇಲ್ಲ. ನಿನಗೆ ನಮೋ ನಮಃ ನಮೋ ನಮಃ.

ದೈತ್ಯರಿಂದ ಸಂತಾಪಗೊಂಡ ದೇವತೆಗಳ ದುಃಖದ ಬೆಟ್ಟವನ್ನು ವಜ್ರಾಯುಧದಂತೆ ಕಡಿದೊಟ್ಟುವ ಮಹಾವಿಷ್ಣುವೇ, ಹಾವಿನ ಹಾಸಿಗೆಯ ಮೇಲೆ ಪವಡಿಸಿರುವ, ಸೂರ್ಯ ಚಂದ್ರರೇ ಎರಡು ಕಣ್ಣಾಗಿ ಉಳ್ಳ ನಿನಗೆ ನಾವು ನಮಿಸುವೆವು. ವಂದಿಸುವೆವು.

**ನಾರದ:-** ದೇವತೆಗಳು ಭಕ್ತಿಯಿಂದ ಪಠಿಸಿದ ಈ ಮಹಾವಿಷ್ಣುವಿನ ಸಂಕಷ್ಟವಿನಾಶನ ಸ್ತೋತ್ರವನ್ನು ಪ್ರತಿನಿತ್ಯವೂ ಭಕ್ತಿಯಿಂದ ಪಾರಾಯಣ ಮಾಡಿದರೆ ಮನುಷ್ಯನು ಎಂದೂ ದುಃಖ ಸಂಕಟಗಳಿಗೆ ಈಡಾಗುವದಿಲ್ಲ.

ದೇವತೆಗಳ ಈ ಭಕ್ತಿಯುಕ್ತವಾದ ಈ ಸ್ತೋತ್ರವನ್ನು ಕೇಳಿ ಶ್ರೀಹರಿಯ ಮನಸ್ಸು ಕರಗಿತು. ಕೂಡಲೇ ಹಾವಿನ ಹಾಸಿಗೆಯಿಂದ ಒಡಮುರಿದು ಮೇಲೆದ್ದ. ಗರುಡನನ್ನು ಆರೋಹಣ ಮಾಡಿದ. ಲಕ್ಷ್ಮಿಯನ್ನು ಕುರಿತು ಹೇಳಿದ.

**ವಿಷ್ಣು:-** ಲಕ್ಷ್ಮೀ, ನಿನ್ನ ತಮ್ಮನಾದ ಜಲಂಧರ ದೇವತೆಗಳನ್ನೆಲ್ಲ ಹೊಡೆದು ಓಡಿಸಿದ್ದಾನೆ. ಸ್ವರ್ಗದಿಂದ ನಿರ್ವಾಸಿತರಾದ ಆ ದೇವತೆಗಳು ಸಹಾಯಕ್ಕಾಗಿ ನನ್ನನ್ನು ಕೂಗಿ ಕರೆದಿದ್ದಾರೆ. ಆದುದರಿಂದ ಈಗ ನಾನು ಜಾಲಂಧರನ ಕೂಡ ಯುದ್ಧಕ್ಕೆ ಹೊರಟಿದ್ದೇನೆ.

**ಲಕ್ಷ್ಮೀ:-** ನಾಥ, ನಾನು ನಿನ್ನ ಮೆಚ್ಚಿನ ಮನದನ್ನೆ ಅಲ್ಲವೇ? ಮೇಲೆ ನಾನು ನಿನ್ನ ಮಹಾ ಭಕ್ತೆ. ನಿನ್ನಲ್ಲಿಯೇ ಅನುರಕ್ತೆ. ಅಂದ ಮೇಲೆ ನಿನ್ನ ಪ್ರೇಯಸಿಯ ಸೋದರನಾದ ಜಲಂಧರನನ್ನು ನೀನು ಹೇಗೆ ಕೊಲ್ಲುವಿ?

**ವಿಷ್ಣು:-** ರುದ್ರನ ಅಂಶದಿಂದ ಹುಟ್ಟಿದ್ದಾನೆ. ಈ ನಿನ್ನ ತಮ್ಮ. ಮಹಾದೇವನ ಹೊರತು ಬೇರೆ ಯಾರೂ ಕೊಲ್ಲಬಾರದೆಂದು ಬ್ರಹ್ಮನ ವರವೂ ಉಂಟು. ಆ ದೈತ್ಯರಾಜನಿಗೆ. ಇದರ ಮೇಲೆ ನಿನ್ನ ತಮ್ಮ. ನೀನು ನನಗೆ ಪ್ರೀತಿಯ ಪ್ರಾಣಕಾಂತೆ. ನಿನ್ನ ಪ್ರೀತಿಯ ತಮ್ಮ ನನ್ನು ನಾನು ಹೇಗೆ ಕೊಲ್ಲುತ್ತೇನೆ? ನಾನು ಖಂಡಿತವಾಗಿ ಅವನನ್ನು ಕೊಲ್ಲುವದಿಲ್ಲ. ನೀನು ಗಾಬರಿಯಾಗಬೇಡ.

ಹೀಗೆ ಹೇಳಿ ತನ್ನ ವಾಹನವಾದ ಹಕ್ಕಿಯನ್ನು ಹತ್ತಿ ಹಾರುತ್ತ ಹರಿಯು ರಣಭೂಮಿಗೆ ಬಂದ. ಅಲ್ಲಿ ಜಾಲಂಧರನಿಗೂ ಶ್ರೀಹರಿಗೂ ಘನಘೋರವಾದ ಯುದ್ಧವಾಯಿತು. ಜಾಲಂಧರನು ಯುದ್ಧದಲ್ಲಿ ತೋರಿಸಿದ ಸಮರ ಕಲಾಕೌಶಲ್ಯದಿಂದ ಶ್ರೀಹರಿಯು ಸಂತುಷ್ಟನಾಗಿ ಜಾಲಂಧರನಿಗೆ ಹೇಳಿದ.

**ವಿಷ್ಣು:-** ದೈತ್ಯೇಂದ್ರ, ನಿನ್ನ ಪರಾಕ್ರಮವನ್ನು ಕಂಡು ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು. ನೀನು ಬಯಸಿದ್ದನ್ನು ನೀಡುತ್ತೇನೆ.

**ಜಲಂಧರ:-** ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನ್ನ ಸೋದರಿಯಾದ ನಿನ್ನ ಮಡದಿ ಲಕ್ಷ್ಮಿಯೊಂದಿಗೆ ನೀನು ನನ್ನ ಮನೆಯಲ್ಲಿ ನೆಲಿಸು ನಿನ್ನ ಪರಿವಾರ ಸಹಿತವಾಗಿ.

ಜಲಂಧರನ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಹರಿಯು ಆ ದೈತ್ಯರಾಜನ ಜಲಂಧರ ಎಂಬ ಪಟ್ಟಣಕ್ಕೆ ರಮಾದೇವಿಯೊಡನೆ ಹೋಗಿ ವಾಸಿಸಿದ.

ಇತ್ತ ಜಲಂಧರನು ಇಂದ್ರಾದಿ ಎಲ್ಲ ದೇವತೆಗಳ ಸ್ಥಾನದಲ್ಲಿ ದೈತ್ಯದಾನವರನ್ನು ನೇಮಿಸಿ ತಾನು ಮತ್ತೆ ಭೂಲೋಕಕ್ಕೆ ಬಂದ. ಮೂರು ಲೋಕಗಳಲ್ಲಿರುವ ಒಳ್ಳೊಳ್ಳೇ ರತ್ನಗಳನ್ನೆಲ್ಲ ಕೊಳ್ಳೆ ಹೊಡೆದು ತಂದು ತನ್ನ ಮನೆಯಲ್ಲಿ ಒಟ್ಟಿದ. ಪಾತಾಳದಲ್ಲಿ ನಿಶುಂಭನನ್ನು ಅಧಿರಾಜನನ್ನಾಗಿ ನೇಮಿಸಿದ. ಅಲ್ಲಿ ಮೊದಲು ಇದ್ದ ಶೇಷ ಮೊದಲಾದ ಹಾವಿನ ಜಾತಿಯ ಹಿರಿಯರನ್ನು ಭೂಲೋಕದಲ್ಲಿ ಹರಿದಾಡಲು ಬಿಟ್ಟ. ಸುಪ್ರಸಿದ್ಧರಾದ ದೇವತೆಗಳನ್ನು ಗಂಧರ್ವರನ್ನು ಸಿದ್ಧರನ್ನು ಯಕ್ಷ ರಾಕ್ಷಸರನ್ನು ಮಾನವರನ್ನು ತನ್ನ ರಾಜಧಾನಿಯ ನಾಗರಿಕರನ್ನಾಗಿ ಮಾಡಿ ಮೂರು ಲೋಕಗಳನ್ನು ಆಳಿದ. ಅವನ ರಾಜ್ಯದಲ್ಲಿ ಒಬ್ಬನೂ ದುಃಖಿತನಾಗಲಿ ಬೇನೆ ಬಡಿದವನಾಗಲಿ ಸೊರಗಿ ಕೊರಗಿದವನಾಗಲಿ, ದರಿದ್ರನಾಗಲಿ, ಇರಲಿಲ್ಲ. ಪ್ರಜೆಗಳೆಲ್ಲರೂ ತುಷ್ಟರೂ ಪುಷ್ಟರೂ ಸಮಾಧಾನದಿಂದ ವಿಶಿಷ್ಟರೂ ಶೌಚಾಚಾರದಿಂದ ಶಿಷ್ಟರೂ ಆಗಿದ್ದರು.

ಹೀಗೆ ಪ್ರಜಾಜನರನ್ನೆಲ್ಲ ಹೊಟ್ಟೆಯ ಮಕ್ಕಳಂತೆ ಪಾಲಿಸುತ್ತ ಜಾಲಂಧರನು ಧರ್ಮಶಾಸನವನ್ನು ನಡೆಯಿಸಿದಾಗ ನಾನು ಅವನ ವೈಭವವನ್ನು ನೋಡಬೇಕು. ಮತ್ತು ಅವನ ಸೋದರಿಯ ಗಂಡನಾದ ಲಕ್ಷ್ಮಿನಾರಾಯಣರನ್ನು ಕಂಡು ಸೇವೆ ಮಾಡಬೇಕೆಂದು ಜಲಂಧರನ ಮನೆಗೆ ಹೋದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಭಯಗ್ರಸ್ಥರಾದ ದೇವತೆಗಳಿಂದ ವಿಷ್ಣುವಿನ ಸ್ತೋತ್ರ, ಎಂಬ ತೊಂಬತ್ತಾರನೇಯ ಅಧ್ಯಾಯ ಮುಗಿದುದು*



## ಪಾರ್ವತಿಯ ಸೌಂದರ್ಯವನ್ನು ಕೇಳಿ ಜಾಲಂಧರನ ಮನೋವಿಕಾರ

**ಅಧ್ಯಾಯ - ೯೭**

**ನಾರದ:-** ನಾನು ಜಾಲಂಧರನ ಮನೆಗೆ ಹೋದಾಗ ಆ ದೈತ್ಯರಾಜನು ನನ್ನನ್ನು ಆದರಿಸಿ ಪೂಜಿಸಿ ಮಾತನಾಡಿದ.

**ಜಾಲಂಧರ:-** ಬ್ರಹ್ಮನ್, ತಾವು ಎಲ್ಲಿಂದ ಬರುತ್ತಲಿದ್ದೀರಿ? ನೀವು ಹೋದಲ್ಲಿ ಎಲ್ಲಿಯಾದರೂ ವಿಶಿಷ್ಠ ಶ್ರೇಷ್ಠವಾದುದನ್ನು ಕಂಡಿದ್ದರೆ, ಕೇಳಿದ್ದರೆ, ತಿಳಿಸಿರಿ.

**ನಾರದ:-** ದೈತ್ಯರಾಜ, ನಾನು ಕೈಲಾಸ ಪರ್ವತಕ್ಕೆ ಹೋಗಿದ್ದೆ ಸಹಜವಾಗಿ. ಆ ಕೈಲಾಸ ಪರ್ವತದಲ್ಲಿ ಕಲ್ಪವೃಕ್ಷಗಳದೇ ಒಂದು ತೋಪುವನ ಇದೆ. ಹತ್ತುಸಾವಿರ ಯೋಜನ ವಿಸ್ತಾರ ಅದರ ಹರವು. ಅಲ್ಲಿ ನೂರಾರು ಕಾಮಧೇನುಗಳು ಹಸಿರು ಮೇಯುತ್ತಲಿವೆ. ಚಿಂತಾಮಣಿಯ ರತ್ನಪ್ರಭೆಯಿಂದ ದೇದಿಪ್ಯಮಾನವಾಗಿದೆ. ಆ ಕಲ್ಪವೃಕ್ಷಕಾನನದ ಕಾವಣ. ಅಲ್ಲಿಯ ಚಿಗುರೆಲೆಯ ಛಾವಣಿಯ ಕೆಳಗೆ ಮಂಡಿಸಿದ್ದ ಚಂದ್ರಚೂಡ. ಅವನ ಪಕ್ಕದಲ್ಲಿಯೇ ಸೌಂದರ್ಯ ಸಾಮ್ರಾಜ್ಯದ ಸಮ್ರಾಜ್ಞಿಯಂತೆ ಇರುವ ಚಲ್ವಿಕೆಯ ಪುತ್ಥಳಿ ಒಂದು ಮಿಂಚುತ್ತಿತ್ತು. ರೂಪದ ಖಣಿಯಾದ ಆ ರಮಣೀಮಣಿಯೇ ಪಾರ್ವತಿ. ಪರಶಿವನ ಆ ಸೌಭಾಗ್ಯಸಿರಿಯನ್ನು ಕಣ್ಣಾರೆ ಕಂಡು ಅಲ್ಲಿಂದ ಇಲ್ಲಿಗೆ ನೇರವಾಗಿ ಬಂದಿದ್ದೇನೆ. ನಿನ್ನ ಸೌಭಾಗ್ಯ ಸಮೃದ್ಧಿಯನ್ನು ನೋಡಬೇಕೆಂಬ ದಟ್ಟ ಕುತೂಹಲ ನನಗೆ. ಅವನು ಜಾನ್ಹವೀಧರ. ನೀನು ಜಲಂಧರ. ನಿನ್ನಲ್ಲಿಯೂ ಯಾವ ವೈಭವ ಐಶ್ವರ್ಯಕ್ಕೆ ಕೊರತೆ ಇಲ್ಲ. ಎಲ್ಲವೂ ಶಿವಪುರಿಯಲ್ಲಿದ್ದಂತೆಯೇ ನಿನ್ನ ರಾಜಧಾನಿಯಲ್ಲಿಯೂ ಅಧಿಕಾರ ಐಶ್ವರ್ಯ ಸುಖ ಸಮಾಧಾನ ಸಿದ್ಧಿ ಸಮೃದ್ಧಿ ಗೌರವ ವೈಭವ ಎಲ್ಲವೂ ತುಂಬಿ ತುಳುಕುತ್ತಲಿವೆ. ಆದರೆ ನಿನ್ನ ರಾಜಧಾನಿಯಲ್ಲಿ ಎದ್ದು ಕಾಣುವ ಒಂದೇ ಒಂದು ಕೊರತೆಯೆಂದರೆ ಪಾರ್ವತಿಯಂಥ ರೂಪಶ್ರೀಯನ್ನು ಹೊತ್ತಿರುವ ಹೆಣ್ಣಿನ ಅಭಾವ. ನಿನ್ನ ವಶದಲ್ಲಿ ಇದ್ದಾರೆ ಅನೇಕ ಅಪ್ಸರೆಯರು, ಅಸಂಖ್ಯ ನಾಗಕನ್ನಿಕೆಯರು, ಅಪರಿಮಿತ ನಾರಿಯರು. ಆದರೆ ನಿನ್ನ ಅಂತಃಪುರದಲ್ಲಿರುವ ಯಾವ ಹೆಣ್ಣು ಆ ಪಾರ್ವತಿಯ ಪಾಸಂಗಕ್ಕೂ ಸರಿದೂಗುವದಿಲ್ಲ.

ಹಿಂದೆ ಒಮ್ಮೆ ಬ್ರಹ್ಮನು ಆ ಗೌರಿಯ ಸೌಂದರ್ಯದ ಸಮುದ್ರವನ್ನು ಕಂಡು ತನ್ನ ಮನಸ್ಸಿನ ಸ್ಥೈರ್ಯವನ್ನೇ ಕಳೆದುಕೊಂಡಿದ್ದ. ಇಂಥ ಅಪರೂಪ ಲಾವಣ್ಯದ

ಲಲಿತಲತಾದೃಷ್ಟಿಯಂತೆ ಇರುವ ಆ ಶಿವನ ಲಲನಾಮಣಿಗೆ ಸರಿಸಾಟಿಯೆಲ್ಲಿ? ಆದುದರಿಂದಲೇ ಕಾಮನನ್ನು ಸುಟ್ಟುಹಾಕಿ ವಿರಕ್ತನಾದ ಮಹಾದೇವನೂ ಕೂಡ ಅವಳ ತಪಸ್ಸಿಗೆ ಮೆಚ್ಚಿ ಅವಳ ವಶವರ್ತಿಯಾಗಿದ್ದಾನೆ. ಕಾಮವೈರಿಯೂ ಆ ಕಾಮಿನಿಯ ಕಮನೀಯ ಕಾಂತಿಯಿಂದ ಮುಗ್ಧನಾಗಿ ಅವಳೊಡನೆ ಕಾಮಕೇಲೀಲೋಲನಾಗಿದ್ದಾನೆ. ಬ್ರಹ್ಮನು ಆ ಗೌರಿಯ ರೂಪವನ್ನು ನೋಡಿ ನೋಡಿ ಅಂಥ ಒಂದು ಹೆಣ್ಣನ್ನಾದರೂ ಹುಟ್ಟಿಸಬೇಕೆಂದು ಅನೇಕ ಅಪ್ಸರೆಯರನ್ನು ನಿರ್ಮಿಸಿದ. ಒಬ್ಬ ಅಪ್ಸರಾಂಗನೆಯೂ ಪಾರ್ವತೀ ಸೌಂದರ್ಯಕ್ಕೆ ಸಮಾನರೂಪವುಳ್ಳವಳು ಆಗಲಿಲ್ಲ. ದೈತ್ಯೇಂದ್ರ, ನೀನು ಎಲ್ಲ ರತ್ನಗಳ ಒಡೆಯನೇನೋ ಆಗಿರುವೆ. ಆದರೆ ಅಂಥ ಒಂದು ಸ್ತ್ರೀ ರತ್ನದ ಉಪಭೋಗವೂ ಇಲ್ಲದ್ದರಿಂದ ನಿನ್ನ ಸಮೃದ್ಧಿ ವೈಭವ ಎಲ್ಲವೂ ಕೊರತೆಯಿಂದ ಒಡಗೂಡಿದೆ ಎಂದು ನನ್ನ ಅಭಿಪ್ರಾಯ. ಹೀಗೆ ಹೇಳಿದ ನಾರದರು ಅಲ್ಲಿಂದ ಹೊರಟು ಹೋದರು.

ನಾರದರು ಹೋದಬಳಿಕ ಪಾರ್ವತಿಯ ರೂಪಾತಿಶಯ ಬಣ್ಣನೆಯನ್ನು ಕೇಳಿ ಹುಚ್ಚನಾಗಿ ಹೋದ ಜಲಂಧರ. ಕಾಮಜ್ವರ ಹಿಡಿದುಕೊಂಡಿತು ಆ ಲಲನಾ ಲಂಪಟನಿಗೆ. ಅನಂತರ ಅವನು ಸಿಂಹಿಕೆಯ ಮಗನಾದ ರಾಹುನನ್ನು ಕರೆದು ಕಾಮದೂತನನ್ನಾಗಿ ಕಳಿಸಿಕೊಟ್ಟ ಕೈಲಾಸಪತಿಯ ಕಡೆಗೆ. ಕಾಮಾಂಧನಾದ ಆ ದೈತ್ಯ ವಿಷ್ಣುವಿನ ಮಾಯೆಯಿಂದ ಮೋಹಿತನಾಗಿ ತನ್ನ ವಿಚಾರಶಕ್ತಿಯನ್ನೇ ಕಳೆದುಕೊಂಡ. ರಾಹು ಹುಣ್ಣಿಮೆಯ ಚಂದ್ರನಂತೆ ಶುಭ್ರವಾಗಿ ಹೊಳೆಯುವ ಕೈಲಾಸಪರ್ವತಕ್ಕೆ ಪ್ರಯಾಣಬೆಳೆಸಿದ. ನಂದಿ ಅವನನ್ನು ಒಳಗೆ ಬಿಟ್ಟ. ಮಹಾದೇವರು ಹುಬ್ಬಿನ ಸನ್ನೆಯಿಂದಲೇ ಬಂದದ್ದು ಏಕೆ? ಎಂದು ಕೇಳಿದರು. ರಾಹು ಹೇಳಿದ.

**ರಾಹು:-** ಎತ್ತನ್ನು ಹತ್ತಿ ಓಡಾಡುವ ಶಿವನೇ, ಮೂರು ಲೋಕಗಳಿಗೂ ಅಧಿಪತಿಯಾದ ಜಾಲಂಧರನ ಮಹಾಪ್ರಭುವಿನ ಆಜ್ಞೆಯನ್ನು ಕೇಳು. "ಈ ಜಗತ್ತಿನಲ್ಲಿಯ ಒಳ್ಳೊಳ್ಳೇ ರತ್ನಗಳಿಗೆ ಎಲ್ಲರ ಒಡೆಯನಾದ ನಾನೇ ಅಧಿಪತಿ. ನಾನೇ ಸರ್ವರತ್ನೇಶ್ವರ. ನೀನು ದಿಗಂಬರ ಮೇಲೆ ಸ್ಮಶಾನವಾಸಿ. ನಿನ್ನ ಕೊರಳಲ್ಲಿ ರುಂಡಮುಂಡಗಳ ಮಾಲೆ. ಇಂಥ ನಿನಗೆ ಪಾರ್ವತಿಯು ಹೆಂಡತಿಯಾಗಿ ಹೇಗೆ ಒಪ್ಪುವಳು? ಅವಳೊಂದು ಸ್ತ್ರೀರತ್ನ. ನಾನು ರತ್ನೇಶ್ವರ. ಅವಳು ನನಗೆ ಯೋಗ್ಯ. ಭಿಕ್ಷುಕನಾದ ನಿನಗೆ ಅವಳು ಸರ್ವಥಾ ಯೋಗ್ಯಳಲ್ಲ."

ರಾಹುವಿನ ಈ ಮಾತನ್ನು ಕೇಳಿದ ಕೂಡಲೇ ಮಹಾದೇವರ ಮುಖದಲ್ಲಿ ಹುಬ್ಬುಗಂಟು ಹಾಕಿತು. ಮಹಾದೇವರ ಆ ಎರಡು ಹುಬ್ಬುಗಳ ನಡುವಿನ ಭಾಗದಿಂದ ಓರ್ವ ಭೀಕಾರಾಕರದ ರೌದ್ರ ಪುರುಷ ಉದಿಸಿಬಂದ. ಗುಡುಗಿನಂತೆ ಧ್ವನಿ, ಸಿಂಹದ ಮುಖ, ಜೋಲುನಾಲಿಗೆ, ಉರಿಯುವ ಕಣ್ಣು, ನಿಮಿರಿದ ಕೂದಲು. ಅವನನ್ನು ನೋಡಿದರೆ ಮೈಯಲ್ಲಿ ನಡುಕ ಹುಟ್ಟುತ್ತಿತ್ತು. ಆ ರೌದ್ರ ಪುರುಷನು ಶಿವನ ಎದುರು ನಿಂತ ರಾಹುವನ್ನೇ ನುಂಗಬೇಕೆಂದು ಓಡಿದುಕೊಂಡ. ಆಗ ರಾಹುವು ಕೂಗಿಕೊಂಡ ಮಹಾದೇವರಿಗೆ ಶರಣು ಹೊಕ್ಕು.

**ರಾಹು:-** ಶರಣಾಗತವತ್ಸಲನಾದ ಮಹಾದೇವ, ನನ್ನನ್ನು ರಕ್ಷಿಸು. ನನ್ನನ್ನು ತಿನ್ನಲು ಈ ರೌದ್ರಪುರುಷನು ಉದ್ಯುಕ್ತನಾಗಿದ್ದಾನೆ. ನನ್ನನ್ನು ರಕ್ಷಿಸು.

**ಮಹಾದೇವ:-** ಈ ರಾಹುನನ್ನು ಬಿಟ್ಟುಬಿಡು. ಇವನು ದೂತ. ದೂತರನ್ನು ಕೊಲ್ಲಬಾರದು.

ಮಹಾದೇವರ ಈ ಮಾತನ್ನು ಕೇಳಿ ಆ ರೌದ್ರಪುರುಷನು ರಾಹುವನ್ನು ಬಿಟ್ಟು ಮಹಾದೇವರನ್ನು ಪ್ರಾರ್ಥಿಸಿಕೊಂಡ.

**ರೌದ್ರ:-** ಸ್ವಾಮಿ, ನಾನು ಹಸಿದು ಕಂಗಾಲ ಆಗಿದ್ದೇನೆ. ಈ ಹಸಿವು ನನ್ನನ್ನು ಹಿಂಡುತ್ತಲಿದೆ. ನಾನು ಏನು ಮಾಡಲಿ?

**ಮಹಾದೇವ:-** ನೀನು ನಿನ್ನ ಕೈಕಾಲುಗಳಲ್ಲಿಯ ಮಾಂಸವನ್ನೇ ತಿಂದು ಬದುಕು.

ಹೀಗೆ ಮಹಾದೇವರ ಅಪ್ಪಣೆಯಾದ ಕೂಡಲೇ ರೌದ್ರಪುರುಷನು ತನ್ನದೇ ಆದ ಮೈ ಕೈಕಾಲುಗಳ ಮಾಂಸಗಳನ್ನು ಕಿತ್ತಿ ತಿನ್ನಹತ್ತಿದ. ಭೀಕರವಾದ ಕ್ಷುಧೆಯಿಂದ ಅವನು ಎಚ್ಚರವಿಲ್ಲದೆ ತನ್ನ ದೇಹವನ್ನೆಲ್ಲ ತಿಂದುಬಿಟ್ಟ. ರುಂಡ ಮಾತ್ರ ಉಳಿಯಿತು. ಅದನ್ನು ಕಂಡು ಮಹಾದೇವ ಸುಪ್ರಸನ್ನನಾಗಿ ನುಡಿದ.

**ಮಹಾದೇವ:-** ನೀನು ಕೀರ್ತಿಮುಖ ಎಂಬ ಹೆಸರಿನಿಂದ ನನ್ನ ದ್ವಾರಪಾಲಕನಾಗಿ ಬಾಗಿಲಲ್ಲಿ ಕೂಡು. ನನ್ನ ಭಕ್ತರೆಲ್ಲರು ನಿನ್ನ ಪೂಜೆಯನ್ನು ಮಾಡಲಿ. ಅಂದಿನಿಂದ ಕೀರ್ತಿಮುಖನು ಮಹಾದೇವರ ಮನೆಯ ಬಾಗಿಲದಲ್ಲಿ ಕುಳಿತಿರುತ್ತಾನೆ. ಮೊದಲು ಅವನ ಪೂಜೆಯನ್ನು ಮಾಡದಿದ್ದರೆ ಮುಂದೆ ಮಾಡುವ ಶಿವಪೂಜೆಯೇ ವ್ಯರ್ಥವಾಗುವದು. ರೌದ್ರ ಪುರುಷನು ರಾಹುವನ್ನು ಹಿಡಿದಾಗ ಮಹಾದೇವರ ಆಜ್ಞೆಯಂತೆ ಅವನನ್ನು ಬಿಟ್ಟುಬಿಟ್ಟ. ಅವನ ಕೈಯಿಂದ ಕೆಳಗೆ ಬಿದ್ದಕೂಡಲೇ ರಾಹುವು ಅತ್ಯಂತ ನೀಚರಾದ ಬರ್ಬರ ಜಾತಿಯ ಜನರ ನಾಡಿನಲ್ಲಿ ಬಂದು ಬಿದ್ದ. ಆದರಿಂದ ರಾಹುವಿಗೆ ಬರ್ಬರೋದ್ಭೂತ ಎಂಬ ಹೆಸರು ಬಂದಿತು. ಆ ರೌದ್ರ ಪುರುಷನ ಕೈಯಿಂದ ಪಾರಾಗಿ ಬಂದ ಆ ರಾಹುವಿಗೆ ತಾನು ಮತ್ತೊಮ್ಮೆ ಹುಟ್ಟಿಬಂದಂತೆ ಎನಿಸಿತು. ಅವನು ಜಲಂಧರನ ಬಳಿಗೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಪಾರ್ವತಿಯ ಸೌಂದರ್ಯವನ್ನು ಕೇಳಿ ಜಾಲಂಧರನ ಮನೋವಿಕಾರ ಎಂಬ ತೊಂಬತ್ತೇಳನೇಯ ಅಧ್ಯಾಯ ಮುಗಿದುದು*

—o—

## ಎಲ್ಲ ದೇವದೇವತೆಗಳ ತೇಜಸ್ಸಿನಿಂದ ಸುದರ್ಶನ ನಿರ್ಮಾಣ

ಅಧ್ಯಾಯ - ೯೮

**ನಾರದ:-** ರಾಹುವಿನ ಬಾಯಿಂದ ಎಲ್ಲ ಸಮಾಚಾರವನ್ನು ಕೇಳಿ ಕೋಪದಿಂದ ಕಿಡಿಕಿಡಿಯಾದ ಜಲಂಧರ. ಕೋಟಿಕೋಟಿ ದೈತ್ಯಸೇನೆಯನ್ನು ಕೂಡಿಸಿದ. ಶಿವನ ಮೇಲೆ ಯುದ್ಧಕ್ಕಾಗಿ ದಂಡಯಾತ್ರೆ ಹೊರಟ. ಅವನ ಚಂಡೋದ್ದಂಡವಾದ ದೈತ್ಯಸೇನೆಯ ಮುಂಭಾಗದಲ್ಲಿ ಆಚಾರ್ಯ ಶುಕ್ರರು. ಅವರ ಹಿಂದೆ ಹಸುವಿನ ಮೇಲೆ ಹತ್ತಿಕೊಂಡು ರಾಹು ನಡೆದ. ಅವರ ಹಿಂದೆ ಅಪರಂಪಾರ ದೈತ್ಯಸೇನೆ. ಅವರ ಮಧ್ಯದಲ್ಲಿ ಜಲಂಧರ. ಸಂಭ್ರಮದಿಂದ ಅವನು ಆಜ್ಞೆನೀಡುತ್ತ ಮುಂದೆ ನಡೆದಾಗ ಅವನ ರತ್ನಖಚಿತವಾದ ಕಿರೀಟವು ನೆಲದ ಮೇಲೆ ಉರುಳಿಬಿತ್ತು. ಅಪಶಕುನವನ್ನು ತೋರಿತು. ಜಲಂಧರನ ಈ ಸಮರಸನ್ನಾಹವನ್ನು ಕಂಡು ಸಂಭ್ರಾಂತರಾದ ಸುರೇಶ್ವರರೆಲ್ಲರೂ ಮಹಾದೇವರ ಕಡೆಗೆ ಹೋಗಿ ವಿಜ್ಞಾಪಿಸಿಕೊಂಡರು.

**ದೇವತೆಗಳು:-** ಸ್ವಾಮಿ, ನಿಮಗೆ ಈ ಜಾಲಂಧರನ ಜಾಲ ತಿಳಿದಿಲ್ಲವೇ ! ದೇವತೆಗಳ ರಕ್ಷಣೆಗಾಗಿ ಈ ಜಲಂಧರನನ್ನು ನೀನು ಸಂಹರಿಸು.

ದೇವತೆಗಳ ಮಾತುಗಳನ್ನು ಕೇಳಿ ಮಹಾದೇವನು ನಕ್ಕು ವಿಷ್ಣುವನ್ನು ಕರೆದು ಕೇಳಿದ.

**ಮಹಾದೇವ:-** ವಿಷ್ಣುವೇ, ನೀನು ಹಿಂದೆ ಜಲಂಧರನ ಸಂಗಡ ಯುದ್ಧ ಮಾಡಿದೆ. ಅವನನ್ನು ಕೊಲ್ಲದೇ ಏಕೆ ಬಿಟ್ಟೆ?

**ವಿಷ್ಣು:-** ಅವನು ನಿನ್ನ ಅಂಶ ಸಂಭವ. ಮೇಲೆ ನನ್ನ ನೆಚ್ಚಿನ ಮಡದಿಯಾದ ಲಕ್ಷ್ಮೀಯ ಸಹೋದರ. ಅದರಿಂದ ಅವನನ್ನು ನಾನು ಕೊಲ್ಲಲಿಲ್ಲ. ನೀನೇ ಆ ದೈತ್ಯನನ್ನು ಸಂಹರಿಸು.

**ಮಹಾದೇವ:-** ಈಗ ಇದ್ದ ಶಸ್ತ್ರಾಸ್ತ್ರಗಳಿಂದ ಜಾಲಂಧರನನ್ನು ಕೊಲ್ಲವದು ಶಕ್ಯವಿಲ್ಲ. ಆದುದರಿಂದ ಎಲ್ಲ ದೇವತೆಗಳು ತಮ್ಮ ತಮ್ಮ ತೇಜಸ್ಸಿನ ಒಂದು ಅಂಶ ಕೊಡಲಿ.

ಮಹಾದೇವರ ಅಪೇಕ್ಷೆಯಂತೆ ವಿಷ್ಣುವೇ ಮೊದಲಾದ ಎಲ್ಲ ದೇವತೆಗಳು ತಮ್ಮ ತಮ್ಮ ತೇಜಸ್ಸುಗಳನ್ನು ಕೊಟ್ಟರು. ಅವೆಲ್ಲವೂ ಕೂಡಿ ಒಂದು ಮಹಾತೇಜಸ್ಸು ನಿರ್ಮಾಣವಾಯಿತು. ಅದರಿಂದ ಮಹಾದೇವರು ಸುದರ್ಶನವೆಂಬ ಒಂದು ಚಕ್ರವನ್ನು ನಿರ್ಮಾಣ ಮಾಡಿದರು. ಅದನ್ನು ಮಾಡಿ ಉಳಿದ ತೇಜಃಶೇಷದಿಂದ ವಜ್ರಾಯುಧವನ್ನು ತಯಾರಿಸಿದರು ಪರಮೇಶ್ವರ. ಅಷ್ಟರಲ್ಲಿ ಜಲಂಧರನು ತನ್ನ ಚತುರಂಗ ಪರಿವಾರ ಉಳ್ಳ ಕೋಟಿ ಕೋಟಿ ಸೇನಾಸಾಗರದೊಂದಿಗೆ ಕೈಲಾಸ ಪರ್ವತದಲ್ಲಿ ಕಾಲಿರಿಸಿದ. ಅವನನ್ನು ಕಂಡಕೂಡಲೇ ದೇವತೆಗಳೆಲ್ಲರೂ ಸಂತೋಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಮಹಾದೇವರ ಅನುಚರರಾದ ನಂದಿ, ಗಣಪತಿ, ಸ್ಕಂದ ಮುಂತಾದ, ಗಣಾಧೀಶರು ತಮ್ಮ ಶಿವಗಣ ಪ್ರಮಥಗಣದಿಂದ ಸಿದ್ಧರಾಗಿ ಯುದ್ಧಕ್ಕೆ ಅಣಿಯಾಗಿ ನಿಂತುಕೊಂಡರು. ಶಿವಸೇನೆ ಹಾಗು ದೈತ್ಯಸೇನೆಗಳಲ್ಲಿ ಹಿಂದೆ ಎಂದೂ ನಡೆಯದಂಥ ಘೋರಾತ್ ಘೋರತರವಾದ ಸಂಗ್ರಾಮವು ಮಸಗಿತು. ಮಹಾದೇವರ ಮಹದಾಜ್ಞೆಯನ್ನು ತಲೆಯಲ್ಲಿ

ಹೊತ್ತು ಹುರುಪಿನಿಂದ ಕಾದಿದ ಪ್ರಮಥಗಣಾಧೀಶರು ತಮ್ಮ ಭೀಕರವಾದ ಶಸ್ತ್ರಾಸ್ತ್ರಗಳಿಂದ ದಾನವರ ದಂಡನ್ನೆಲ್ಲ ಖಂಡತುಂಡ ಮಾಡಿ ಕತ್ತರಿಸಿ ಹಾಕಿದರು. ಆದರೆ ಶಿವಗಣದ ಈ ಶೌರ್ಯಪರಾಕ್ರಮಗಳೆಲ್ಲವೂ ವ್ಯರ್ಥವಾದವು. ಯುದ್ಧ ಭೂಮಿಯಲ್ಲಿ ಶಿವಸೈನಿಕರು ಕಡಿದುಹಾಕಿ ಮಡಿದು ಬಿದ್ದ ವೀರರೆಲ್ಲರನ್ನು ಶುಕ್ರಾಚಾರ್ಯರು ತಮ್ಮ ಸಂಜೀವಿನೀ ವಿದ್ಯಾಬಲದಿಂದ ಕೂಡಲೇ ಬದುಕಿಸಿ ಬಿಡುತ್ತಿದ್ದರು. ಇದರಿಂದ ಸತ್ತವರೆಲ್ಲರೂ ನಿದ್ದೆ ತಿಳಿದು ಎದ್ದು ಕೂತಂತೆ ಮತ್ತಿಷ್ಟು ಉತ್ಸಾಹದಿಂದ ಯುದ್ಧಕ್ಕೆ ಬರುತ್ತಿದ್ದರು. ಅದನ್ನು ಕಂಡು ಪ್ರಮಥಗಣದ ಶಿವಸೈನಿಕರೆಲ್ಲರೂ ಭಯಾಕ್ರಾಂತರಾಗಿ ಮಹಾದೇವರ ಬಳಿಗೆ ಬಂದು ಈ ಶುಕ್ರಾಚಾರ್ಯರ ಸಾಹಸ ಕೃತ್ಯವನ್ನು ನಿವೇದಿಸಿದರು. ಅದನ್ನು ಕೇಳಿ ಚಿಂತಾಕ್ರಾಂತರಾದ ಮಹರುದ್ರದೇವರ ಮುಖದಿಂದ ಕೃತ್ಯಾರೂಪದ ಬೆಂಕಿಯ ಗೊಂಬೆ ಹುಟ್ಟಬಂದಿತು. ಒಂದು ದರೀಕೊಳ್ಳದಂತೆ ಇರುವ ತನ್ನ ಮುಖವನ್ನು ಭೀಕರವಾಗಿ ತೆರೆದು ಆ ಕೃತ್ಯೆಯು ಯುದ್ಧ ಭೂಮಿಗೆ ಬಂದು ದೈತ್ಯರ ಸೇನೆಯನ್ನೆಲ್ಲ ನುಂಗತೊಡಗಿತು. ಅದು ನೇರವಾಗಿ ಶುಕ್ರಾಚಾರ್ಯರ ಕಡೆಗೆ ಬಂದು ಅವರನ್ನು ಹಿಡಿದು ತನ್ನ ಕೆಳಹೊಟ್ಟೆಯ ಕೆಳಗೆ ಇಟ್ಟುಕೊಂಡು ಅಂತರ್ಧಾನ ಹೊಂದಿತು.

ಹೀಗೆ ಒಮ್ಮೆಲೇ ತಮ್ಮ ಗುರುವಾದ ಶುಕ್ರಾಚಾರ್ಯರು ಆ ಕೃತ್ಯೆಯಯೋನಿಯಲ್ಲಿ ಲೀನವಾದದ್ದನ್ನು ಕಂಡು ದೈತ್ಯರೆಲ್ಲರೂ ನಿರಾಶರಾಗಿ ಸೋಲು ಸಾವು ನೋವುಗಳನ್ನು ಅಪ್ಪಿದರು. ಆಗ ಶುಂಭ ನಿಶುಂಭ ಕಾಲನೇಮಿ ಮೂವರೂ ಬಂದು ದೈತ್ಯ ಸೈನಿಕರನ್ನು ಹುರಿದುಂಬಿಸಿ ಯುದ್ಧಕ್ಕೆ ಸಿದ್ಧರನ್ನಾಗಿ ಮಾಡಿ ನಿಲ್ಲಿಸಿದರು. ತಾವೂ ಕೂಡ ಸೇನೆಯ ಮುಂಭಾಗದಲ್ಲಿ ನಿಂತು ರುದ್ರಗಣವನ್ನು ಘೋರಾಸ್ತ್ರಗಳಿಂದ ಇರಿದು ತಂದು ಹಾಕತೊಡಗಿದರು. ಅದರಿಂದ ಛಿನ್ನ ಭಿನ್ನರಾದ ಶಿವಗಣಂಗಳು ಭಯಭ್ರಾಂತರಾಗಿ ರಣಭೂಮಿಯಿಂದ ಓಡಿಹೋದರು. ಹೀಗೆ ತಮ್ಮ ಪ್ರಚಂಡವಾದ ಸೈನಿಕರ ದಂಡು ಎಲ್ಲವೂ ತಂಡತಂಡವಾಗಿ ಪಲಾಯನ ಮಾಡಿದ್ದನ್ನು ಕಂಡು ಖಿನ್ನ ವಿಷಣ್ಣರಾದ ಗಣಪತಿ, ನಂದೀಶ್ವರ, ಸ್ಕಂದ ಮೂವರೂ ಕೂಡಿ ತಾವೇ ಆ ದೈತ್ಯವೀರರನ್ನು ಎದುರಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಎಲ್ಲ ದೇವದೇವತೆಗಳ ತೇಜಸ್ಸಿನಿಂದ ಸುದರ್ಶನ ನಿರ್ಮಾಣ ಎಂಬ ತೊಂಬತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ಕಾಲನೇಮಿ ಮುಂತಾದವರೊಡನೆ ನಂದಿ ಮುಂತಾದವರ ಯುದ್ಧ

**ಅಧ್ಯಾಯ - ೯೯**

**ನಾರದ :-** ನಂದಿ, ಸ್ಕಂದ, ಗಣಪತಿ ಮೂವರೂ ಕಲಿತನದಿಂದ ಕಾದಾಡಿ ಕದನಕುತೂಹಲದಿಂದ ದೈತ್ಯ ಧಾನವರ ದಂಡನ್ನೆಲ್ಲ ತುಂಡರಿಸುತ್ತಿರುವದನ್ನು ಕಂಡು ದೈತ್ಯಧುರೀಣರಾದ ಶುಂಭ, ನಿಶುಂಭ, ಕಾಲನೇಮಿ ಈ ಮೂವರು ಆ ಗಣಾಧೀಶರೊಡನೆ ದ್ವಂದ್ವಯುದ್ಧಕ್ಕೆ ಇಳಿದರು. ಕಾಲನೇಮಿಯು ನಂದಿಯನ್ನು ತಡೆದ. ಶುಂಭನು ಗಣಪತಿಯೊಡನೆ ಯುದ್ಧಕ್ಕೆ ನಿಂತ. ನಿಶುಂಭನು ಸ್ಕಂದನ ಮೇಲೆ ಎರಗಿದ ಅವರೆಲ್ಲರ ನಡುವೆ ಅತ್ಯಂತ ಭೀಕರವಾದ ಯುದ್ಧವು ನಡೆಯಿತು. ಕಾಲನೇಮಿಯು ಕ್ರುದ್ಧನಾಗಿ ನಂದಿಯ ಬಿಲ್ಲನ್ನು ಕತ್ತರಿಸಿ ಹಾಕಿದ. ಆಗ ನಂದೀಶ್ವರನು ಆ ಬಿಲ್ಲನ್ನು ಒಗೆದು ಶೂಲಾಯುಧದಿಂದ ಕುದುರೆ ಸಾರಥಿಗಳಿಗೂ, ಕಾಲನೇಮಿಯ ವಕ್ಷಸ್ಥಳಕ್ಕೂ ಪ್ರಹಾರಮಾಡಿದ. ಅದರಿಂದ ಸಾರಥಿ ಕುದುರೆಗಳು ಸತ್ತುಹೋಗಿ ಕಾಲನೇಮಿಯು ಮೂರ್ಛಿತನಾಗಿ ಬಿದ್ದ. ಶುಂಭನು ಗಣಪತಿಯ ಎದೆಗೆ ಹೊಡೆದು ಅವನ ವಾಹನವಾದ ಇಲಿಯನ್ನು ಗಾಯಗೊಳಿಸಿದ. ಆಗ ಗಣಪತಿಯು ವಾಹನವನ್ನು ಬಿಟ್ಟು ಇಳಿದು ಶುಂಭನನ್ನು ತನ್ನ ಕೊಡಲಿಯಿಂದ ಹೊಡೆದು ಕೆಳಗೆ ಕೆಡವಿ ತನ್ನ ಮೂಷಕವನ್ನು ಏರಿದ. ಆಗ ಕಾಲನೇಮಿ ನಿಶುಂಭ ಇಬ್ಬರೂ ಗಣಪತಿಯ ಮೇಲೆ ಏರಿಹೋಗಿ ಅಂಕುಶದಿಂದ ಆನೆಯನ್ನು ಹಣಿಯುವಂತೆ ಬಾಣಗಳಿಂದ ಕೊಣೆಯತೊಡಗಿದರು.

ಆಗ ವೀರಭದ್ರನು ತನ್ನ ಕೂಷ್ಮಾಂಡ, ಬೈರವ, ಬೇತಾಳ, ಪಿಶಾಚ, ಯೋಗಿನೀ ಗಣಗಳಿಂದ ಕೂಡಿಕೊಂಡು ಗಣಪತಿಯ ಸಹಾಯಕ್ಕಾಗಿ ಧಾವಿಸಿದ. ನಂದಿ ಕಾರ್ತಿಕೇಯರು ತಮ್ಮ ವೈರಿಗಳನ್ನು ಪರಾಭವಗೊಳಿಸಿ ಅಲ್ಲಿ ಬಂದು ಸೇರಿದರು. ಮೂವರೂ ಕೂಡಿ ದೈತ್ಯಸೇನೆಯಲ್ಲಿ ಮೃತ್ಯು ತಾಂಡವವನ್ನೇ ನಡೆಸಿದರು. ಅದನ್ನು ಕಂಡು ಕೆರಳಿ ಕೆಂಡದಂತಾದ ಜಲಂಧರನು ಕೋಪಾಟೋಪದಿಂದ ಅಲ್ಲಿಗೆ ಬಂದು ಸ್ಕಂದನ ಮೇಲೆ ತನ್ನ ಅತ್ಯುಗ್ರವಾದ ಗದೆಯನ್ನು ಬೀಸಿ ಒಗೆದ. ಆ ಗದಾಘಾತದಿಂದ ತಾಡಿತ ಪೀಡಿತನಾಗಿ ಸ್ಕಂದ ನೆಲಕ್ಕೆ ಕುಸಿದ. ಮತ್ತು ನಂದೀಶ್ವರನ ಮೇಲೆ ಮತ್ತೊಮ್ಮೆ ಅದೇ ಗದೆಯನ್ನು ಬೀಸಿ ಅವನನ್ನೂ ಕೆಳಗೆ ಬೀಳಿಸಿದ. ಆಗ ಗಣಪತಿಗೆ ಸಿಟ್ಟು ಬಂದು ತನ್ನ ಕೈಕೊಡಲಿಯಿಂದ ಆ ಗದೆಯನ್ನು ಸೀಳಿದ. ಆಗ ವೀರಭದ್ರನು ಮೂರು ಬಾಣಗಳನ್ನು ಬಿಟ್ಟು ಜಾಲಂಧರನ ಹೃದಯಕ್ಕೆ ನೋವನ್ನು ಉಂಟುಮಾಡಿದ. ಆಗ ಕ್ರುದ್ಧನಾದ ಜಾಲಂಧರನು ತನ್ನ ಶಕ್ತಿ ಎಂಬ ಆಯುಧದಿಂದ ಗಣಪತಿಯನ್ನು ಕೆಳಗೆ ಬೀಳಿಸಿದ. ಮತ್ತು ಪರಿಘ ಎಂಬ ಉಕ್ಕಿನ ಆಯುಧದಿಂದ ವೀರಭದ್ರನ ನಡುನೆತ್ತಿಯ ಮೇಲೆ ಕುಟ್ಟಿದ. ಅದರಿಂದ ವೀರಭದ್ರನು ತಲೆ ಸೀಳಿ ರಕ್ತವನ್ನು ಕಕ್ಕಿ ನೆಲದ ಮೇಲೆ ಬಿದ್ದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕಾಲನೇಮಿ ಮುಂತಾದವರೊಡನೆ ನಂದಿ ಮುಂತಾದವರ ಯುದ್ಧ ಎಂಬ ತೊಂಬತ್ತೊಂಬತ್ತನೇಯ ಅಧ್ಯಾಯ ಮುಗಿದುದು*

## ಮಹಾದೇವರಿಂದ ದೈತ್ಯರ ಪರಾಜಯ

ಅಧ್ಯಾಯ - ೧೦೦

**ನಾರದ:-** ರಣಭೂಮಿಯಲ್ಲಿ ವೀರಭದ್ರನು ರಕ್ತಮಯನಾಗಿ ಬಿದ್ದುದನ್ನು ನೋಡಿ ರುದ್ರಗಣಗಳೆಲ್ಲವೂ ಭಯ ಭೀತಿಯಿಂದ ರಣಭೂಮಿಯಲ್ಲಿ ನಿಲ್ಲಲಾಗದೇ ಓಟಕಿತ್ತಿದವು. ಅಳುತ್ತ ಮಹಾದೇವರ ಮುಂದೆ ಎಲ್ಲ ಸಮಾಚಾರ ತಿಳಿಸಿದವು. ಈ ಶಿವಗಣಗಳ ಕೋಲಾಹಲವನ್ನು ಕಂಡು ಮಹಾದೇವನು ನಗುತ್ತ ತಾನೇ ವೃಷಭಾರೂಢನಾಗಿ ಯುದ್ಧಭೂಮಿಗೆ ಬಂದ. ಸ್ವಯಂ ಶಂಕರನೇ ದೈತ್ಯ ಭಯಂಕರನಾಗಿ ಕದನ ಕುರುಕ್ಷೇತ್ರಕ್ಕೆ ಬಂದು ನಿಂತದ್ದನ್ನು ಕಂಡು ಶಿವಸೈನಿಕರು ಹುರುಪುಗೊಂಡು ಮತ್ತೆ ಕಲಿತನದಿಂದ ಕಾದತೊಡಗಿದರು. ಬಾಣಗಳ ಮಳೆಗರೆದು ದೈತ್ಯರ ಚರ್ಮವನ್ನೇ ಸುಲಿದರು. ರುದ್ರದೇವರು ಸ್ವಯಂ ತಾನೇ ನಿಂತು ಮತ್ತಿಷ್ಟು ರುದ್ರಭೀಷಣವಾಗಿ ಸಮರವನ್ನು ನಡೆಸಿದರು. ಭೀಷಣಭೂಷಣನಾದ ಆ ಶಂಕರನ ರೌದ್ರಾವತಾರವನ್ನು ಕಂಡು ದೈತ್ಯರೆಲ್ಲರೂ ಕಾರ್ತಿಕ ವ್ರತಮಾಡುವವನನ್ನು ಕಂಡು ಪಾಪಗಳು ದೂರದೂರ ಓಡಿಹೋಗುವಂತೆ ದೂರದೂರ ದಿಕ್ಕಾಪಾಲಾಗಿ ಓಡತೊಡಗಿದರು.

ಹೀಗೆ ಪಲಾಯನಪರಾಯಣರಾದ ತನ್ನ ದಾನವರನ್ನು ಕಂಡು ಕೋಪಗೊಂಡ ಜಾಲಂಧರನು ಆ ಚಂಡೀಪತಿಯ ಮೇಲೆ ಏಕಕಾಲದಲ್ಲಿ ಸಾವಿರ ಬಾಣಗಳನ್ನು ಬಿಟ್ಟ. ಶುಂಭ, ನಿಶುಂಭ, ಅಶ್ವಮುಖ, ಕಾಲನೇಮಿ, ಬಲಾಹಕ, ಖಡ್ಗರೋಮ, ಪ್ರಚಂಡ, ಘಸ್ಮರ ಮುಂತಾದ ದೈತ್ಯಗಣದ ಮುಂದಾಳುಗಳೆಲ್ಲರೂ ಮಹಾದೇವರ ಮೇಲೆ ಮುಗಿಬಿದ್ದರು. ಶಿವಗಣದ ಮೇಲೆ ಬಾಣಗಳ ಮುಗಿಲೇ ಮುರಿದು ಬೀಳುವಂತೆ ಮಾಡಿದರು.

ಅದನ್ನು ಕಂಡು ಕೋಪಾವಿಷ್ಟನಾದ ರುದ್ರದೇವರು ತಮ್ಮ ಕೊಡಲೆಯಿಂದ ಖಡ್ಗರೋಮನ ತಲೆಯನ್ನು ಕತ್ತರಿಸಿ ಹಾಕಿದರು ತಮ್ಮ ಕೈಯಲ್ಲಿಯ ಹೊರಸಿನ ಕಾಲಿನಿಂದ ಬಲಾಹಕನ ಶಿರಸ್ಸನ್ನು ಎರಡು ಹೊಳು ಮಾಡಿದರು. ಘಸ್ಮರ ಎಂಬ ದೈತ್ಯನನ್ನು ತನ್ನ ಪಾಶದಿಂದ ಬಿಗಿದು ಒಗೆದರು. ಉಳಿದ ದೈತ್ಯರು ಯಾರೂ ಪರಮೇಶ್ವರನ ಮುಂದೆ ನಿಲ್ಲಲಾರದೆ ತಲ್ಲಣಿಸಿ ಅಲ್ಲಿಂದ ಚದರಿ ಹೋದರು. ಅದನ್ನು ಕಂಡು ಕ್ರೋಧೋದ್ದೀಪಿತನಾಗಿ ಜಲಂಧರನು ಅಲ್ಲಿಗೆ ಬಂದು ಗರ್ಜಿಸಿದ ''ಜಟಾಧಾರಿಯಾದ ಧೂರ್ಜಟಿಯೇ ! ಈ ಕೆಲವು ರಕ್ಕಸರನ್ನು ಕೊಂದ ಮಾತ್ರಕ್ಕೆ ಏನಾಯಿತು ! ನನ್ನ ಎದುರಿಗೆ ತೋರಿಸು ನಿನ್ನ ಬಲವನ್ನು. ನಿನ್ನಶೌರ್ಯ ಎಷ್ಟು ಇದೆ ಎನ್ನುವದನ್ನು ನೋಡಿಯೇ ಬಿಡುತ್ತೇನೆ'' ಎಂದು ನುಡಿದು ಶಿವನ ಮೇಲೆ ಒಮ್ಮೆಲೇ ಎಪ್ಪತ್ತು ಬಾಣಗಳನ್ನು ಬಿಟ್ಟ.

ಅವುಗಳನ್ನೆಲ್ಲ ಅರ್ಧದಾರಿಯಲ್ಲಿಯೇ ಮುರಿದು ಮಣ್ಣುಗೂಡಿಸಿ ಮಹಾದೇವನು ಮಂದಹಾಸಮಾಡುತ್ತ ಜಲಂಧರನ ರಥದ ಮೇಲಿನ ಛತ್ರವನ್ನು ಧ್ವಜವನ್ನು ಕುದುರೆಗಳನ್ನು ಅವನ ಕೈಯಲ್ಲಿಯ ಬಿಲ್ಲನ್ನೂ ಕತ್ತರಿಸಿ ಹಾಕಿದ. ರಥವನ್ನು ಪುಡಿ ಪುಡಿ ಮಾಡಿದ ಆಗ ಆ ದೈತ್ಯನು ಪಾದಚಾರಿಯಾಗಿ ಗದೆಯನ್ನು ಎತ್ತಿಕೊಂಡು ಪರಮೇಶ್ವರನನ್ನು ಪ್ರಹರಿಸಲು ಬಂದ. ಶಂಕರನು ಆ ಗದೆಯನ್ನು ಎರಡು ಹೋಳು ಮಾಡಿ ನೆಲದ ಮೇಲೆ ಬೀಳಿಸಿದ. ಆಗ ನಿಃಶಸ್ತ್ರನಾದ ಆ ಜಲಂಧರನು ಮುಷ್ಟಿಯನ್ನು ಬಿಗಿದು ಹರನನ್ನು ಹೊಡೆಯಬೇಕೆಂದು ಧಾವಿಸಿದ. ಆಗ ಆ ಉಮಾಪತಿಯು ಬಾಣ ಬಿಟ್ಟು ಆ ದೈತ್ಯನನ್ನು ಮೂರು ಮೈಲು ಹಿಂದಕ್ಕೆ ಅಟ್ಟಿದ. ಆಗ ಆ ದಾನವರ ಧೊರೆಗೆ ''ಈ ಪರಮೇಶ್ವರನನ್ನು

ಸೋಲಿಸುವದು ಅಶಕ್ಯ'' ಎಂಬ ನಿಶ್ಚಯಾತ್ಮಕ ಜ್ಞಾನಹುಟ್ಟಿತು. ಇವನೊಡನೆ ರುಜುಮಾರ್ಗ ಉಪಯೋಗವಿಲ್ಲ ಎಂದು ತಿಳಿದು ಮಾಯಾ ಯುದ್ಧವನ್ನು ಪ್ರಾರಂಭಿಸಿದ.

ಆ ದೈತ್ಯನು ಕೂಡಲೇ ಗಾಂಧರ್ವೀ ಮಾಯೆಯನ್ನು ನಿರ್ಮಿಸಿದ. ಒಮ್ಮೆಲೇ ಅನೇಕ ಗಂಧರ್ವರು ಹಾಡತೊಡಗಿದರು. ಅನೇಕ ಅಪ್ಸರೆಯರು ಕುಣಿಯಹತ್ತಿದರು. ಎಷ್ಟೋ ಗಂಧರ್ವರು ಕೊಳಲು ಊದಿದರು. ಹಲವುರ ತಾಳ ತಟ್ಟಿದರು. ಕೆಲವರು ತಬಲ ನುಡಿಸಿದರು. ಅದರ ಈ ಮಧುರ ಕಂಠದ ಸುಸ್ವರ ಗಾಯನ ಹಾಗೂ ವೀಣಾ ವೇಣು ಮೃದಂಗಗಳ ಮಧುರವಾದ ತರಂಗದಿಂದ ನಾದಮುಗ್ಧವಾಗಿ ಹೋದ ಆ ಮಹಾದೇವ. ಅವನ ಕೈಯಿಂದ ಶಸ್ತ್ರಗಳು ಕೆಳಗೆ ಬಿದ್ದರೂ ಅವನಿಗೆ ಗೊತ್ತಾಗಲಿಲ್ಲ. ಹೀಗೆ ಏಕಾಗ್ರ ಚಿತ್ತದಿಂದ ರಾಗತಾಳಗಳ ಮಧುರ ನಾದವನ್ನು ಕೇಳುತ್ತ ಮಹಾದೇವರು ಮೈಮರೆತು ನಿಂತುಕೊಂಡಾಗ ಜಲಂಧರನು ಕಾಮಾರ್ತನಾಗಿ ಗೌರಿ ಇದ್ದಲಿಗೆ ಹೋದ. ಇಲ್ಲಿಯ ಯುದ್ಧದ ಭಾರವನ್ನೆಲ್ಲ ಶುಂಭ ನಿಶುಂಭ ಸೇನಾಪತಿಗಳಿಗೆ ಒಪ್ಪಿಸಿದ. ತಾನು ಮಹಾದೇವರ ರೂಪವನ್ನು ಧರಿಸಿ ಗೌರಿಯು ತಂಗಿದ ಗಿರಿಶೃಂಗಕ್ಕೆ ತೆರಳಿದ.

ಐದು ಮುಖ, ಮೂರು ಕಣ್ಣು, ಹತ್ತು ತೋಳುಗಳನ್ನು ಧರಿಸಿ ಮಾಯಾ ಶಂಕರನ ವೇಷವನ್ನು ತಾಳಿದ ಆ ಜಲಂಧರನು ಒಂದು ಮುದಿ ಎತ್ತನ್ನು ಹತ್ತಿಕೊಂಡು ಪಾರ್ವತಿ ಇದ್ದಲ್ಲಿಗೆ ಆಗಮಿಸಿದ. ಸ್ವಯಂ ತನ್ನ ಪತಿದೇವನಾದ ಮಹಾದೇವನೇ ಬರುವದನ್ನು ಕಂಡು ಪಾರ್ವತಿಯು ಸಖಿಯರ ಗುಂಪಿನಿಂದ ಎದ್ದು ಜಾಲಂಧರನ ಎದುರು ಬಂದು ನಿಂತಳು. ಸರ್ವಾಂಗಸುಂದರಿಯಾದ ಆ ಸರ್ವಮಂಗಲೆಯನ್ನು ಕಂಡುಕೂಡಲೇ ಕಾಮುಕನಾದ ಆ ಜಲಂಧರನಿಗೆ ವೀರ್ಯಪಾತವಾಯಿತು. ಅವನು ನಿರ್ವಿಣ್ಣನಾಗಿ ನಿಂತುಕೊಂಡ. ಆಗ ಪಾರ್ವತಿಗೆ ಇವನೊಬ್ಬ ದುಷ್ಟದಾನವನೆಂದು ನಿಶ್ಚಯವಾಯಿತು. ಭಯಭ್ರಾಂತಳಾದ ಆ ಗೌರಿಯು ಕೂಡಲೇ ಅಲ್ಲಿಂದ ಅದೃಶ್ಯಳಾಗಿ ಮಾನಸೋತ್ತರ ಪರ್ವತಕ್ಕೆ ತೆರಳಿದಳು. ಭವಾನಿಯು ಒಮ್ಮೆಲೇ ಮಿಂಚಿನಂತೆ ಅದೃಶ್ಯಳಾಗಿ ಮಾಯಾವಾದುದನ್ನು ಕಂಡು ಆ ಜಲಂಧರನು ಮತ್ತೆ ರಣಭೂಮಿಗೆ ಮರಳಿ ಬಂದ.

ಇತ್ತ ಪಾರ್ವತಿಯು ಮಹಾವಿಷ್ಣುವನ್ನು ನೆನೆದಳು. ಕೂಡಲೇ ಪ್ರತ್ಯಕ್ಷನಾದ ಶ್ರೀಹರಿ.

**ಪಾರ್ವತಿ:-** ವಿಷ್ಣೋ, ಜಲಂಧರ ದೈತ್ಯನು ನನ್ನ ವಿಷಯದಲ್ಲಿ ಎಷ್ಟು ಅಸಹ್ಯಕರ ರೀತಿಯಲ್ಲಿ ನಡೆದುಕೊಂಡಿದ್ದಾನೆ ಅನ್ನುವದು ನಿನಗೆ ತಿಳಿಯದೇ? ಆ ದುರ್ಬುದ್ಧಿಯ ದುಶ್ಚೇಷ್ಟೆಗಳನ್ನು ನಾನು ಎಂತು ಸಹಿಸಲಿ?

**ಮಹಾವಿಷ್ಣು:-** ಆ ದೈತ್ಯಾಧಮನು ತೋರಿಸಿದ ಮಾರ್ಗದಿಂದಲೇ ಅವನಿಗೆ ಬುದ್ಧಿಗಲಿಸಬೇಕು. ಇಲ್ಲದಿದ್ದರೆ ಅವನ ಪತ್ನಿಯಾದ ವೃಂದೆಯ ಪಾತಿವ್ರತ್ಯದ ಪ್ರಭಾವದಿಂದ ಸುರಕ್ಷಿತನಾದ ಅವನನ್ನು ಯಾರಿಗೂ ಕೊಲ್ಲಲಿಕ್ಕೆ ಶಕ್ಯವಿಲ್ಲ.

ಹೀಗೆ ಹೇಳಿ ವಿಷ್ಣುವು ಜಾಲಂಧರಪುರಕ್ಕೆ ಪ್ರಯಾಣಿಸಿದ. ಇತ್ತ ಕೈಲಾಸ ಪತಿಯು ಯುದ್ಧ ಸಮಯದಲ್ಲಿ ನಡೆದ ಸುಸ್ವರ ಸಂಗೀತದಿಂದ ಮುಗ್ಧನಾಗಿ ಎಷ್ಟೋ ಸಮಯ ಮೈಮರೆತು ನಿಂತುಕೊಂಡು ಕೆಲಕಾಲದ ಮೇಲೆ ಎಚ್ಚತ್ತು ನಿಂತ. ಆ ಸಂಗೀತದ ಗುಂಗು ಬಿಟ್ಟುಹೋದ ಬಳಿಕ ಅವನಿಗೆ ಇದೊಂದು ದೈತ್ಯ ಮಾಯೆ ಎಂದು ತಿಳಿದುಬಂದಿತು. ಆಗ ಮತ್ತಿಷ್ಟು ಕೋಪಗೊಂಡು ಜಾಲಂಧರನ ಮೇಲೆ ಯುದ್ಧಕ್ಕೆ ನುಗ್ಗಿದ. ಆ ದೈತ್ಯನೂ ಬಾಣಗಳ ಮಳೆಗರೆದು ಪಾರ್ವತೀಪತಿಗೆ ಸರಿಯಾಗಿ ಉತ್ತರಕೊಟ್ಟ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*

*ಮಹಾದೇವರಿಂದ ದೈತ್ಯರ ಪರಾಜಯ ಎಂಬ ನೂರನೇಯ ಅಧ್ಯಾಯ ಮುಗಿದುದು*

## ದುಃಸ್ವಪ್ನವನ್ನು ಕಂಡು ಉದ್ವಿಗ್ನಳಾದ ವೃಂದೆಯ ವನಾಂತರದಲ್ಲಿ ಅಲೆದಾಟ

ಅಧ್ಯಾಯ - ೧೦೧

**ನಾರದ:-** ಶ್ರೀಹರಿಯು ಜಲಂಧರ ನಗರಕ್ಕೆ ಹೋಗಿ ಅವನ ಧರ್ಮಪತ್ನಿಯಾದ ವೃಂದೆಯ ಪಾತಿವ್ರತ್ಯ ಭಂಗವನ್ನು ಮಾಡಬೇಕೆಂದು ಸಂಕಲ್ಪಮಾಡಿದ. ಜಲಂಧರನ ಮಡದಿಯಾದ ವೃಂದಾರಕಾದೇವಿಗೆ ಒಂದು ಕನಸು. ಕನಸಿನಲ್ಲಿ ಅವಳ ಪತಿಯಾದ ಜಲಂಧರನು ದಿಗಂಬರನಾಗಿ ಮೈ ತುಂಬ ಎಣ್ಣೆ ಹಚ್ಚಿಕೊಂಡು, ಕೋಣವನ್ನು ಹತ್ತಿಕೊಂಡು, ಕರಿಹೂವಿನ ಮಾಲೆಯನ್ನು ಧರಿಸಿ ದಕ್ಷಿಣ ದಿಕ್ಕಿಗೆ ಹೊರಟಂತೆ ಕಂಡಿತು. ತಮ್ಮ ನಗರವೆಲ್ಲವೂ ಸಮುದ್ರದಲ್ಲಿ ಮುಳುಗಿದಂತೆ ತೋರಿತು. ಈ ಕನಸಿನಿಂದ ಎಚ್ಚರಾದ ಬಳಿಕ ಅವಳು ತನ್ನ ಸ್ವಪ್ನದ ಬಗ್ಗೆ ವಿಚಾರಿಸತೊಡಗಿದಳು. ನಿದ್ದೆಯಿಂದ ಎಚ್ಚರಾದ ಬಳಿಕ ಬೆಳಗಾದ ನಂತರ ಅವಳ ಕಣ್ಣಿಗೆ ಉದಯೋನ್ಮುಖನಾದ ಸೂರ್ಯನ ಮಂಡಲದಲ್ಲಿ ಛಿದ್ರವು ತೋರಿಬಂದಿತು. ಇದೆಲ್ಲವೂ ಅನಿಷ್ಟ, ಅಪಶಕುನ ಎಂದು ತಿಳಿದು ವೃಂದಾರಿಕೆಯು ಭಯವಿಹ್ವಲಳಾಗಿ ಅಳತೊಡಗಿದಳು. ಅರಮನೆ, ಅಂತಃಪುರ, ಗೋಪುರ, ಅಟ್ಟ, ಚಂದ್ರಶಾಲೆ, ಉಪವನ ಎಲ್ಲಿ ಹೋದರೂ ಅವಳ ಮನಸ್ಸು ಸಮಾಧಾನವಾಗಲಿಲ್ಲ. ಅನಂತರ ಅವಳು ತನ್ನ ಇಬ್ಬರು ಗೆಳತಿಯರೊಂದಿಗೆ ರಾಜಧಾನಿಯ ಹೊರಗೆ ಇರುವ ನಗರೋದ್ಯಾನಕ್ಕೆ ಬಂದಳು. ಅಲ್ಲಿಯೂ ಅವಳ ಮನಸ್ಸಿಗೆ ಸಮಾಧಾನವೆನಿಸಲಿಲ್ಲ. ಮುಂದೆ ಅವಳು ಆ ವನದಿಂದ ಮತ್ತೊಂದು ವನಕ್ಕೆ, ಅಲ್ಲಿಂದ ಮಗದೊಂದು ವನಾಂತರಕ್ಕೆ ತೆರಳಿದಳು. ಹೀಗೆ ವನವನಾಂತರದಲ್ಲಿ ಅಲೆಯುತ್ತ ವಿಪಿನಗರ್ಭದಲ್ಲಿ ಅಂಡಲೆಯುತ್ತ ನಡೆದಾಗ ಅವಳ ಕಣ್ಣಿಗೆ ಅತ್ಯಂತ ಭೀಷಣ ಆಕಾರದ ಸಿಂಹದ ಮುಖದ ಇಬ್ಬರು ರಕ್ಕಸರು ಗೋಚರರಾದರು.

ಅವರ ಅತ್ಯುಗ್ರವಾದ ಸ್ವರೂಪವನ್ನು ನೋಡಿ ಗಾಬರಿಯಾದ ವೃಂದಾರಿಕೆಯು ಹೆದರಿ ಓಡತೊಡಗಿದಳು. ತುಸು ಮುಂದೆ ಹೋಗುವಷ್ಟರಲ್ಲಿ ಅಲ್ಲಿ ಒಬ್ಬ ಪ್ರಶಾಂತ ಮುಖದ ತಪಸ್ವಿಯಾದ ಮುನಿಯು ಶಿಷ್ಯರೊಂದಿಗೆ ಮೌನದಿಂದ ಕುಳಿತುಕೊಂಡಿದ್ದ. ಅವನನ್ನು ನೋಡಿದಕೂಡಲೇ ವೃಂದೆಗೆ ಸಮಾಧಾನ ಅನಿಸಿತು. ರಾಕ್ಷಸರಿಂದ ಭಯಭೀತಳಾದ ಆ ವೃಂದೆಯು ಓಡಿ ಬಂದು ತನ್ನ ಬಳ್ಳಿ ತೋಳುಗಳಿಂದ ಆ ತಪಸ್ವಿಯ ಕೊರಳನ್ನು ಆಲಿಂಗಿಸಿಕೊಂಡು ''ಮುನಿವರ್ಯ, ನನ್ನನ್ನು ರಕ್ಷಿಸು'' ಎಂದು ಬೇಡಿಕೊಂಡಳು. ರಾಕ್ಷಸರಿಂದ ಬೆನ್ನಟ್ಟಲ್ಪಟ್ಟು ಭಯವಿಹ್ವಲಳಾದ ಆ ವೃಂದೆಯನ್ನು ಸಂತೈಸಿ ಆ ಮುನಿಪುಂಗವನು ಅವಳನ್ನು ಬೆಂಬತ್ತಿ ಬಂದ ಇಬ್ಬರೂ ರಕ್ಕಸರನ್ನು ಧಿಕ್ಕರಿಸಿ, ಹುಂಕಾರ ಧ್ವನಿಯನ್ನು ಮಾಡಿದ. ಆ ತಪಸ್ವಿಯ ಹುಂಕಾರ ನಾದದಿಂದ ಭಯಭೀತರಾಗಿ ಆ ಇಬ್ಬರು ರಾಕ್ಷಸರು ತಪಸ್ವಿಗೆ ದಂಡ ಪ್ರಣಾಮವನ್ನು ಮಾಡಿ ನೆಲದ ಮೇಲೆ ಅಡ್ಡಬಿದ್ದು ವಂದಿಸಿ ಆಕಾಶಕ್ಕೆ ಹಾರಿಹೋದರು ಅವರು ಹೋದ ಬಳಿಕ ವೃಂದೆಯು ಆ ತಪಸ್ವಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ಹೇಳಿದಳು.

**ವೃಂದಾ:-** ಕೃಪಾನಿಧಿಯಾದ ತಪೋನಿಧಿಯೆ, ನೀನು ನನಗೆ ಬಂದ ಘೋರ ಸಂಕಟದಿಂದ ನನ್ನನ್ನು ಪಾರುಮಾಡಿದೆ. ಈ ರಾಕ್ಷಸರಿಂದ ನನ್ನನ್ನು ರಕ್ಷಿಸಿದೆ. ಈಗ ನಾನು

ತಮ್ಮಲ್ಲಿ ಇನ್ನೊಂದು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ದಯವಿಟ್ಟು ಕೇಳಿ ಕೊಳ್ಳಿರಿ. ನನ್ನ ಪತಿಯಾದ ಜಲಂಧರನು ಈಗ ರುದ್ರದೇವರ ಸಂಗಡ ಯುದ್ಧ ಮಾಡಲಿಕ್ಕೆ ಹೋಗಿದ್ದಾನೆ. ಆ ಯುದ್ಧಲ್ಲಿ ಅವನ ಗತಿ ಏನಾಗಿದೆ? ಅವನು ಹೇಗೆ ಇರುತ್ತಾನೆ? ಎಂದು ತಿಳಿದು ಹೇಳಿರಿ.

ಆರ್ತಳಾದ ವೃಂದಾರಕೆಯ ಈ ಪ್ರಶ್ನೆಯನ್ನು ಕೇಳಿ ಒಂದು ಕ್ಷಣ ಆ ತಪಸ್ವಿ ಮುನಿಯು ಮೇಲಕ್ಕೆ ಮುಖಮಾಡಿ ಮುಗಿಲ ಕಡೆ ಒಮ್ಮೆ ನೋಡಿದ. ಕೂಡಲೇ ಎರಡು ಕೋತಿಗಳು ಅಲ್ಲಿಗೆ ಬಂದವು. ಆ ಮಹರ್ಷಿಗೆ ನಮಸ್ಕಾರ ಮಾಡಿ ಅವನ ಮುಂದೆ ನಿಂತವು. ಆಗ ಆ ಮುನಿಯು ಆ ಎರಡೂ ಮಂಗಗಳಿಗೆ ತನ್ನ ಕಣ್ಣು ಸನ್ನೆಯಿಂದ ಏನನ್ನೋ ಆಜ್ಞೆ ಮಾಡಿದ. ಅವನ ಭ್ರೂಭಂಗದ ಸಂಕೇತವನ್ನು ತಿಳಿದು ಅವು ಎರಡೂ ಕಪಿಗಳು ಮುಗಿಲಿಗೆ ನೆಗೆದವು. ಮುಂದೆ ಅರೆನಿಮಿಷದಲ್ಲಿ ಮತ್ತೆ ಮರಳಿ ಬಂದು ಮುನಿಯ ಮುಂದೆ ನಿಂತುಕೊಂಡವು. ಆ ಎರಡೂ ಕೋತಿಗಳ ಕೈಗಳಲ್ಲಿ ಜಲಂಧರನ ರುಂಡ ಧಂಡ ಇದ್ದವು. ಅದನ್ನು ನೋಡಿದ ಕೂಡಲೇ ದುಃಖ ದಗ್ಧಳಾಗಿ ವೃಂದಾರಿಕೆಯು ನೆಲದ ಮೇಲೆ ಮೂರ್ಛಿತಳಾಗಿ ಬಿದ್ದಳು. ಆಗ ತಪಸ್ವಿಯಾದ ಮುನೀಶ್ವರನು ತನ್ನ ಕೈಯಲ್ಲಿರುವ ಕಮಂಡಲುವಿನಲ್ಲಿಯ ನೀರಿನಿಂದ ವೃಂದಾರಿಕೆಗೆ ಶೈತ್ಯೋಪಚಾರ ಮಾಡಿದ. ಅವಳನ್ನು ಸಂತೈಸಿದ ಆಗ ಆ ವೃಂದೆಯು ಎದ್ದು ಕುಳಿತು ತನ್ನ ಪತಿಯಾದ ಜಲಂಧರನ ಹೆಣದ ಹಣೆಗೆ ತನ್ನ ಹಣೆಯನ್ನು ಘಟ್ಟಿಸಿ ಖಿನ್ನಳಾಗಿ ವಿಷಣ್ಣಳಾಗಿ ರೋದಿಸತೊಡಗಿದಳು.

**ವೃಂದಾ:-** ಪ್ರಭು, ಹಿಂದೆ ಬಗೆಬಗೆಯ ಸರಸಾಲಾಪಗಳಿಂದ ನನಗೆ ಆನಂದವನ್ನು ಉಂಟುಮಾಡಿದ ನೀನು ಈಗ ನನ್ನೊಡನೆ ಏಕೆ ಮಾತನಾಡುವದಿಲ್ಲ? ನಿನಗೆ ನನ್ನ ಮೇಲೆ ಪ್ರೀತಿ ಇಲ್ಲವೇ? ನಾನು ಏನಾದರೂ ತಪ್ಪು ಮಾಡಿರುವೆನೇ? ನಿರಪರಾಧಿನಿಯಾದ ನನ್ನ ಮೇಲೆ ಏಕೆ ನಿನ್ನ ಕೋಪ? ಹಿಂದೆ ನೀನು ದೇವತೆಗಳನ್ನು ಸೋಲಿಸಿದೆ. ಗಂಧರ್ವರನ್ನು ಗೆದ್ದೆ. ಹರಿಯನ್ನು ಹಿಮ್ಮೆಟ್ಟಿಸಿದೆ. ಇಂಥ ವೀರವರೇಣ್ಯನೂ ಶೂರ ಶ್ರೇಷ್ಠನೂ ಆದ ನೀನು ಹಿಂದೆ ತ್ರಿಲೋಕ ವಿಜಯೀ ಆಗಿ ಇಂದು ಒಬ್ಬ ತಾಪಸನಿಂದ ಹೇಗೆ ಕೊಲ್ಲಲ್ಪಟ್ಟೆ?

ಹೀಗೆ ಅತ್ತು ಗೋಗರೆದು ಆ ವೃಂದೆಯು ತನ್ನ ಎದುರು ಕುಳಿತು ಮುನಿಯನ್ನು ಕುರಿತು ಮಾತನಾಡಿದಳು.

**ವೃಂದಾ:-** ಮುನಿಶ್ರೇಷ್ಠರೇ, ನೀವು ಕರುಣಾನಿಧಿಗಳು ಮತ್ತು ತಪೋನಿಧಿಗಳು. ಈ ಜಲಂಧರ ನನ್ನ ಪ್ರಾಣಪ್ರಿಯನಾದ ಪತಿ. ಇವನನ್ನು ಮತ್ತೆ ಬದುಕಿಸುವ ಶಕ್ತಿ ನಿಮ್ಮೊಬ್ಬರಿಗೆ ಮಾತ್ರ ಉಂಟು. ಹೇಗಾದರೂ ಮಾಡಿ ನನ್ನ ಗಂಡನನ್ನು ಬದುಕಿಸಿರಿ.

ವೃಂದಾದೇವಿಯ ಈ ದೀನ ಪ್ರಾರ್ಥನೆಯನ್ನು ಕೇಳಿ ಆ ತಪಸ್ವಿ ಮುನಿಯು ನಸುನಕ್ಕು ನುಡಿದ.

**ಮುನಿ :-** ಸುಂದರಿ, ನಿನ್ನ ಪತಿಯಾದ ಜಲಂಧರನು ಯುದ್ಧದಲ್ಲಿ ಮಹಾದೇವರಿಂದ ಕೊಲ್ಲಲ್ಪಟ್ಟಿದ್ದಾನೆ. ಅವನನ್ನು ಬದುಕಿಸುವದು ಸಾಧ್ಯವೇ ಇಲ್ಲ. ಆದರೂ ನೀನು ನನ್ನನ್ನು ಬಗೆಬಗೆಯಾಗಿ ಬೇಡಿಕೊಂಡದ್ದರಿಂದ ನಿನ್ನ ಮೇಲಿನ ಕರುಣೆಯಿಂದ ನಾನು ಇವನನ್ನು ಬದುಕಿಸುತ್ತೇನೆ.

ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದ ಆ ತಪಸ್ವಿ ಮುನಿ. ಆ ಮುನಿಯು ಅಂತರ್ಧಾನ ಹೊಂದಿದ ಕೂಡಲೇ ಇತ್ತ ಹೆಣವಾಗಿ ಬಿದ್ದ ಜಲಂಧರನು ಎದ್ದು ಕುಳಿತ. ತನ್ನ

ಸುಂದರಿಯಾದ ವೃಂದಾದೇವಿಯನ್ನು ಭರದಿಂದ ಬಿಗಿದಪ್ಪಿದ. ಪ್ರೀತಿಯಿಂದ ಅವಳ ಮುಖವನ್ನು ಮುದ್ದಿಸಿದ.

ಮರಳಿ ಬದುಕಿ ಬಂದ ತನ್ನ ನಲ್ಲನನ್ನು ಕಂಡು ವೃಂದಾದೇವಿಯು ಆನಂದ ತುಂದಿಲಳಾದಳು. ಹರ್ಷೋದ್ರೇಕದಿಂದ ಅವಳು ತನ್ನ ಮೆಚ್ಚಿನ ಮನದನ್ನನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡಳು. ಆ ವಿಜನ ವನಾಂತರದ ಏಕಾಂತದಲ್ಲಿ ತನ್ನ ನೆಚ್ಚಿನ ಪ್ರಾಣಕಾಂತನೊಂದಿಗೆ ವಿವಿಧ ಕಾಮಕೇಲೀ ವಿಲಾಸಗಳನ್ನು ಮಾಡಿದಳು. ಪ್ರೇಮ ಸಾಮ್ರಾಜ್ಯದಲ್ಲಿ ಪತಿಯೊಡನೆ ಸಮರಸಳಾಗಿ ಪತಿಸುಖವನ್ನು ಅನುಭವಿಸಿದಳು.

ಹೀಗೆ ರಾಗಾನುರಾಗಗಳಿಂದ ಭೋಗಾನುಭೋಗಗಳನ್ನು ಅನುಭವಿಸುತ್ತಾ ರತಿ ವಿಹಾರವನ್ನು ತನ್ನ ಪತಿಯೊಡನೆ ವೃಂದಾದೇವಿಯು ಮಾಡುತ್ತಲಿರುವಾಗ ಅವಳಿಗೆ ದಿನಗಳು ಉರುಳಿದ್ದೇ ತಿಳಿಯಲಿಲ್ಲ. ಕಾಲವು ಸರಿದದ್ದೇ ಗೊತ್ತಾಗಲಿಲ್ಲ. ಹೀಗೆ ಸುಖೋದ್ರೇಕದ ವಿಹಾರದಲ್ಲಿ ಬಹುದಿನಗಳು ಕಳೆದ ಬಳಿಕ, ರತಿಕ್ರೀಡೆಯ ಅನಂತರ ಅವಳಿಗೆ ತನ್ನೊಡನೆ ವಿಹರಿಸುವ ಮನುಷ್ಯನು ಜಲಂಧರನು ಅಲ್ಲ. ಸಾಕ್ಷಾತ್ ವಿಷ್ಣುವೇ' ಎಂದು ತಿಳಿಯಿತು. ಕೂಡಲೇ ಅವಳು ಕೋಪಾವಿಷ್ಟಳಾಗಿ ಅವನನ್ನು ಧಿಕ್ಕರಿಸಿ ನುಡಿದಳು.

**ವೃಂದಾ:-** ಕಾಮುಕನಾದ ಹರಿಯೇ, ನಿನಗೆ ಧಿಕ್ಕಾರ. ಪರಸ್ತ್ರೀ ಸಹವಾಸವನ್ನು ಮಾಡುವ ನಿನ್ನ ನಡತೆಗೆ ಧಿಕ್ಕಾರ. ನೀನು ನನ್ನ ಪತಿ ಜಲಂಧರನು ಅಲ್ಲ. ಮಾಯಾ ತಪಸ್ವಿಯಾದ ನೀನೇ ನನ್ನ ಪತಿಯಾದ ಜಾಲಂಧರನ ರೂಪದಿಂದ ನನ್ನ ಶೀಲವನ್ನು ಹರಣಮಾಡಿದೆ. ನನ್ನ ಪಾತಿವ್ರತ್ಯವನ್ನು ಹರಣಮಾಡಿದೆ. ನಿನ್ನ ಇಬ್ಬರು ದ್ವಾರಪಾಲಕರು ಕಪಿರೂಪದಿಂದ ಬಂದು ನನ್ನ ಪತಿಯ ಶವವನ್ನು ತಂದು ತೋರಿಸಿದರಷ್ಟೇ? ಅದೇ ಆ ಇಬ್ಬರು ದ್ವಾರಪಾಲಕರು ಮುಂದೆ ರಾಕ್ಷಸರಾಗಿ ಹುಟ್ಟಿ ನಿನ್ನ ಪತ್ನಿಯನ್ನು ಅಪಹರಿಸಲಿ. ನೀನು ಕೂಡ ನನ್ನಂತೆ ಹೆಂಡತಿಯನ್ನು ಕಳಕೊಂಡು ದುಃಖಾರ್ತನಾಗಿ ವನವನ ತಿರುಗಾಡು. ಕಪಿಗಳು ನಿನಗೆ ಸಹಾಯ ಮಾಡಲಿ. ಈಗ ನಿನ್ನ ಶಿಷ್ಯನಾಗಿ ಕುಳಿತ ಈ ಆದಿಶೇಷನು ನಿನ್ನ ತಮ್ಮನಾಗಿ ಹುಟ್ಟಲಿ. ನೀವಿಬ್ಬರೂ ಕೂಡಿ ಕಳೆದುಹೋದ ನಿನ್ನ ಹೆಂಡತಿಯನ್ನು ಹುಡುಕಾಡುತ್ತ ವನವನಗಳಲ್ಲಿ ದುಃಖಾರ್ತರಾಗಿ ಅಲೆದಾಡಿರಿ.

ಹೀಗೆ ಶಾಪಕೊಟ್ಟು ಆ ವೃಂದಾದೇವಿಯು ಎಷ್ಟು ತಡೆದು ನಿಲ್ಲಿಸಿದರೂ ಕೇಳದೆ ಮೃತನಾದ ತನ್ನ ಪತಿಯನ್ನೂ ಪತ್ಯಂತರ್ಗತನಾದ ಶ್ರೀಹರಿಯನ್ನೂ ನೆನೆಯುತ್ತ ಭಕ್ತಿಯಿಂದ ತನ್ನ ಎದುರಿಗೇ ನಿಂತುಕೊಂಡ ಮಹಾಮಾಯಾವಿಯಾದ ವಿಷ್ಣುವನ್ನು ಸ್ಮರಿಸುತ್ತ ಅಗ್ನಿಪ್ರವೇಶ ಮಾಡಿದಳು. ಅದನ್ನು ನೋಡಿ ಶ್ರೀ ಹರಿಯು ಆ ವೃಂದಾದೇವಿಯನ್ನು ಮತ್ತೆ ಮತ್ತೆ ನೆನೆಸಿದ. ಅವಳ ಚಿತೆಯ ಬೂದಿಯನ್ನು ಮೈತುಂಬ ಬಳಿದುಕೊಂಡ. ಅಲ್ಲಿಯ ಸಿದ್ಧಮುನಿಗಳು ಎಷ್ಟು ಹೇಳಿದರೂ ಅವನ ಮನಸ್ಸು ಶಾಂತವಾಗಲಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ದುಃಸ್ವಪ್ನವನ್ನು ಕಂಡು ಉದ್ವಿಗ್ನಳಾದ ವೃಂದೆಯ ವನಾಂತರದಲ್ಲಿ ಅಲೆದಾಟ ಎಂಬ ನೂರ ಒಂದನೇಯ ಅಧ್ಯಾಯ ಮುಗಿದುದು*

—o—

## ಯುದ್ಧದಲ್ಲಿ ಜಾಲಂಧರ ಸಂಹಾರ ಶಂಕರನಿಂದ | ಅಧ್ಯಾಯ - ೧೦೨

**ನಾರದ:-** ಗೌರಿಯನ್ನು ವಂಚಿಸಬೇಕೆಂದು ಮಾಯಾ ಶಂಕರ ವೇಷ ತಾಳಿ ಜಾಲಂಧರನು ಪಾರ್ವತಿಯ ಬಳಿಗೆ ಹೋಗಿ ಅವಳನ್ನು ನೋಡಿದ ಕೂಡಲೇ ಗತವೀರ್ಯನಾಗಿ ಮರಳಿ ಯುದ್ಧ ಭೂಮಿಗೆ ಬಂದಿದ್ದನಷ್ಟೇ? ಇಲ್ಲಿಗೆ ಬಂದ ಬಳಿಕ ಅವನು ಆ ಹರನೊಡನೆ ಹಣಾಹಣಿ ಹೋರಾಡಿದ. ಆ ರುದ್ರದೇವರ ಎದುರು ಕದನದಲ್ಲಿ ತನ್ನ ಕೈಸಾಗದು ಎಂದು ಮಾಯಾವಿಯಾದ ದುಷ್ಟದಾನವ ವಾಮಮಾರ್ಗ ಹಿಡಿದ. ತನ್ನ ಮಾಯೆಯಿಂದ ಮಹಾದೇವರನ್ನು ಮೋಸಗೊಳಿಸಬೇಕೆಂದು ಬಗೆದು ಒಂದು ಮಾಯಾಗೌರಿಯನ್ನು ನಿರ್ಮಿಸಿದ. ಆ ಮಾಯಾಗೌರಿಯು ಜಾಲಂಧರನ ರಥದ ಮೇಲೆ ಕುಳಿತು ದುಃಖೋದ್ರೇಕದಿಂದ ದುಃಖಿಸಿ ದುಃಖಿಸಿ ಅಳುತ್ತಿದ್ದಳು. ಶುಂಭ, ನಿಶುಂಭ ಎಂಬ ದೈತ್ಯರು ಅವಳ ದೇಹವನ್ನು ಖಡ್ಗದಿಂದ ಕಡಿಯತೊಡಗಿದರು ಅದನ್ನು ನೋಡಿ ಮಹಾದೇವನು ದುಃಖದೀನನಾಗಿ ಯುದ್ಧವನ್ನು ಬಿಟ್ಟು ಕೆಳಗೆ ಮುಖಮಾಡಿಕೊಂಡು ಚಿಂತೊದ್ಭ್ರಾಂತನಾಗಿ ನಿಂತಕೊಂಡ. ಅವನಿಗೆ ತನ್ನ ಶಕ್ತಿಯ ಅರಿವು ಕೂಡ ಇಲ್ಲದಂತಾಯಿತು.

ಹೀಗೆ ಯುದ್ಧ ವಿಮುಖನಾಗಿಸ್ತಬ್ಧ ಮುಗ್ಧನಾಗಿನಿಂತಕೊಂಡ ಆ ಕೈಲಾಸಪತಿಯ ಮೇಲೆ ವೇಗದಿಂದ ಎರಗಿ ಜಲಂಧರನು ಮೂರು ಬಾಣಗಳನ್ನು ಬಿಟ್ಟ. ಒಂದು ಬಾಣವನ್ನು ರುದ್ರದೇವರ ತಲೆಯಲ್ಲಿ ಆಳವಾಗಿ ನೆಟ್ಟ. ಮತ್ತೊಂದು ಬಾಣವನ್ನು ಮಹಾದೇವರ ಎದೆಯ ಆಳದಲ್ಲಿ ನೆಟ್ಟ. ಮೂರನೇ ಬಾಣವನ್ನು ಅವನ ಹೊಟ್ಟೆಯಲ್ಲಿ ನೆಡಿಸಿ. ಹೀಗೆ ಮೂರು ಬಾಣಗಳು ಮಹಾದೇವರ ದೇಹದಲ್ಲಿ ಆಳವಾಗಿ ಆ ಮೂಲಾಗ್ರ ಒಳಹೊಕ್ಕ ಬಳಿಕ ವಿಷ್ಣು ಬಂದು ಅವನನ್ನು ಎಚ್ಚರಿಸಿದ. ಅನಂತರ ವಿಷ್ಣುವಿನಿಂದ ಪ್ರಬೋಧಿತನಾಗಿ ದೈತ್ಯರ ಮಾಯೆಯನ್ನು ತಿಳಿದು ರುದ್ರನು ಕ್ರೋಧತಪ್ತನಾಗಿ ಕೆಂಗಡಿಗಳನ್ನು ಕಾರುತ್ತ ರೌದ್ರರೂಪವನ್ನು ಧರಿಸಿನಿಂತ. ಮಹಾದೇವನ ಈ ಉಗ್ರರೂಪವನ್ನು ಕಂಡು ಎಲ್ಲ ದಾನವ ಧುರೀಣರು ಭಯ ಸಂತ್ರಸ್ತರಾಗಿ ಧಿಕ್ಕಾಪಾಲಾಗಿ ಓಡಿ ಹೋದರು. ಓಡಿಹೋಗುತ್ತಿರುವ ಶುಂಭ, ನಿಶುಂಭರಿಗೆ ಶಿವನು ಶಾಪಕೊಟ್ಟ? ರಣಭೂಮಿಯಿಂದ ನನ್ನ ಎದುರು ನಿಲ್ಲಲಾರದೇ ಓಡಿ ಹೋಗುವ ನೀವು ನನ್ನ ಪತ್ನಿಯಾದ ಗೌರಿಯಿಂದ ಸಾಯಿಸಲ್ಪಡುವಿರಿ.

ಅನಂತರ ಜಲಂಧರನು ಭೂಮ್ಯಾಕಾಶಗಳೆಲ್ಲ ಮುಚ್ಚಿಹಾಕುವಂತೆ ಶರವೃಷ್ಟಿಯನ್ನೇ ಶಿವನ ಮೇಲೆ ಸುರಿಸಿದ. ಆ ದೈತ್ಯನ ಎಲ್ಲ ಬಾಣ ಪೂಗವನ್ನು ಕೂಡಲೇ ಶಂಕರನು ಬಾಣ ಬಿಟ್ಟು ದಾರಿಯಲ್ಲಿಯೇ ಮುರಿದು ಮುಟಗಿ ಮಾಡಿಬಿಟ್ಟ. ಅದನ್ನು ಕಂಡು ಕೋಪತಪ್ತನಾದ ಜಾಲಂಧರನು ಉಕ್ಕಿನ ಹಾರಿಯಿಂದ ಶಿವನ ವಾಹನವಾದ ಎತ್ತನ್ನು ಮರ್ಮಾಂತಕವಾಗುವಂತೆ ಹೊಡೆದ. ಅದರಿಂದ ಆ ಶಂಕರನ ವಾಹನವಾದ ವೃಷಭವು ಯುದ್ಧ ಭೂಮಿಯಿಂದ ಕಾಲಕಿತ್ತಿತು. ಮಹಾದೇವರು ಎಳೆದು ತಂದು ಅದನ್ನು ನಿಲ್ಲಿಸಿದರೂ ಅದು ಹೆದರಿ ಮತ್ತೆ ಓಡಿಹೋಯಿತು.

ಇದು ಕಪರ್ದಿಯ ಕೋಪೋದ್ರೇಕಕ್ಕೆ ಕಾರಣವಾಯಿತು. ಕೂಡಲೇ ಕ್ರೋಧಾತನಾದ ಆ ಕೈಲಾಸಪತಿ ತನ್ನ ಕೈಯಲ್ಲಿ ಸೂರ್ಯನಂತೆ ದೇದೀಪ್ಯಮಾನವಾಗಿ ಹೊಳೆಯುವ ಸುದರ್ಶನ ಚಕ್ರವನ್ನು ಗಿರಿಗಿರಿ ತಿರುಗಿಸಿ ಜಾಲಂಧರನ ಮೇಲೆ ಎಸೆದ. ಅತ್ಯುಗ್ರವಾದ ಆ ಚಕ್ರಾಯುಧವು ಭೂಮ್ಯಾಕಾಶಗಳನ್ನು ಸುಡುತ್ತ ಜಲಂಧರನ ಬಳಿಗೆ ಬಂದು ಅವನ

ತಲೆಯನ್ನು ಕತ್ತರಿಸಿತು. ಆಗ ತಲೆಕಡಿದ ಜಾಲಂಧರನ ದೇಹವು ರಥದಿಂದ ನೆಲಕ್ಕೆ ಉರುಳಿತು. ಆಗ ಅವನ ದೇಹದಿಂದ ಒಂದು ವಿಲಕ್ಷಣವಾದ ತೇಜಸ್ಸು ಹೊರಹೊಮ್ಮಿ ಅದು ಮಹಾದೇವರ ದೇಹಲ್ಲಿ ವಿಲೀನವಾಯಿತು. ಅದನ್ನು ನೋಡಿ ಇಂದ್ರಚಂದ್ರಾದಿ ದೇವತೆಗಳು ಆನಂದದಿಂದ ತಮ್ಮ ಕಣ್ಣುಗಳನ್ನು ಆಗಲಿಸಿ ಮಹಾದೇವನನ್ನು ವಂದಿಸಿ ವಿಷ್ಣುವಿನ ವಿಲಕ್ಷಣವಾದ ವ್ಯಾಪಾರವನ್ನು ಪ್ರಶಂಸೆ ಮಾಡಿದರು.

**ದೇವತೆಗಳು:-** ಮಹಾದೇವ, ನೀನು ಈಗ ನಮ್ಮೆಲ್ಲ ದೇವತೆಗಳನ್ನು ಶತ್ರುಗಳ ಭಯದಿಂದ ರಕ್ಷಣೆ ಮಾಡಿದೆ. ಈಗ ನಮ್ಮ ಮುಂದೆ ಹೊಸದೊಂದು ಸಮಸ್ಯೆ ಬಂದು ನಿಂತಿದೆ. ಜಾಲಂಧರನ ಪತ್ನಿಯಾದ ವೃಂದಾರಿಕೆಯ ಸೌಂದರ್ಯದಿಂದ ಮುಗ್ಧನಾಗಿದ್ದಾನೆ ಆ ಮಧುಸೂದನ. ಶ್ರೀಹರಿಯ ಈ ವೃಂದಾಮೋಹಕ್ಕೆ ಏನು ಉಪಾಯ?

**ಮಹಾದೇವ:-** ನೀವೆಲ್ಲರೂ ವಿಷ್ಣುಮಾಯಾರೂಪಿಣಿಯಾದ ಮೋಹಿನಿಗೆ ಶರಣು ಹೋಗಿರಿ. ವಿಷ್ಣುವಿನ ವೃಂದಾ ಮೋಹವನ್ನು ಹೊಗಲಾಡಿಸಲು ಅವಳೇ ಸಮರ್ಥಳು. ಅವಳಿಂದ ನಿಮ್ಮ ಕಾರ್ಯವಾಗುವದು.

ಹೀಗೆ ಹೇಳಿ ಅಂತರ್ಧಾನ ಹೊಂದಿದ ಆ ಪರಮೇಶ್ವರ. ಅನಂತರ ಎಲ್ಲ ದೇವತೆಗಳು ಭಕ್ತವತ್ಸಲೆಯಾದ ಮೂಲ ಪ್ರಕೃತಿ ತತ್ವಕ್ಕೆ ಅಭಿಮಾನಿಯಾದ ಆ ವೈಷ್ಣವೀಮಾಯೆಗೆ ಶರಣುಹೋದರು. ಅವಳನ್ನು ಪರಿಪರಿಯಿಂದ ಸ್ತೋತ್ರಮಾಡಿದರು. ''ಸದೈವ ವಿಷ್ಣೋಃ ಪ್ರಕೃತಿಂ ನತಾಸ್ಮಃ'' ಎಂದು ಅವಳನ್ನು ವಂದಿಸಿದರು. ಆಗ ಆ ವಿಷ್ಣುಮಾಯೆಯು ತನ್ನ ದೇಹದ ಜ್ವಾಲಾಮಾಲೆಗಳಿಂದ ದಿಗಂತರಾಳವನ್ನೆಲ್ಲ ವ್ಯಾಪಿಸಿ ಉಚ್ಚ ಕಂಠದಿಂದ ದೇವತೆಗಳನ್ನು ಸಂಬೋಧಿಸಿ ಮಾತನಾಡಿಸಿದಳು.

**ವಿಷ್ಣುಮಾಯಾ:-** ನಾನು ನನ್ನ ಮೂರು ವಿಧವಾದ ಗುಣಗಳಿಂದ ಮೂರು ರೂಪ ಉಳ್ಳವಳಾಗಿ ನಿಂತುಕೊಳ್ಳುತ್ತೇನೆ. ಸತ್ವ, ರಜಸ್ಸು, ತಮಸ್ಸು ಮೊದಲಾದ ಗುಣತ್ರಯ ಸಂಬಂಧದಿಂದ ನನಗೆ ಗೌರೀ, ಲಕ್ಷ್ಮೀ, ಸ್ವರಾ ಎಂದು ಮೂರು ಹೆಸರುಗಳು ಬಂದಿರುತ್ತವೆ. ನೀವು ಈಗ ಈ ಮೂವರು ಇರುವಲ್ಲಿಗೆ ಹೋಗಿರಿ. ಇವರಿಂದ ನಿಮ್ಮ ಕಾರ್ಯ ಸಿದ್ಧಿಯಾಗುವದು.

ಹೀಗೆ ಹೇಳಿ ತೇಜೋರೂಪಿಣಿಯಾದ ವಿಷ್ಣುವಿನ ಮಾಯೆಯು ಅಂತರ್ಧಾನ ಹೊಂದಿದಳು. ಅವಳ ಮಾತನ್ನು ಕೇಳಿ ಆಶ್ಚರ್ಯಚಕಿತರಾದ ಎಲ್ಲ ದೇವತೆಗಳು ವಿಷ್ಣುಮಾಯೆಯ ಬೇರೆ ಬೇರೆ ರೂಪಗಳಾದ ಗೌರೀ, ಲಕ್ಷ್ಮೀ, ಸ್ವರಾ ದೇವಿಯರನ್ನು ನಮಸ್ಕರಿಸಿದರು. ಭಕ್ತವತ್ಸಲೆಯಾದ ಆ ಮೂವರೂ ದೇವಿಯರು ತಮ್ಮ ಪಾದಪ್ರಣತರಾದ ಸುರಾಧೀಶ್ವರರಿಗೆ ಬೀಜಗಳನ್ನು ಕೊಟ್ಟು ಈ ಮಾತುಗಳನ್ನು ಹೇಳಿದರು.

**ದೇವಿಯರು:-** ವಿಷ್ಣು ನಿಂತುಕೊಂಡಲ್ಲಿ ಈ ಕ್ಷೇತ್ರ ಬೀಜಗಳನ್ನು ಬಿತ್ತಿರಿ. ಇದರಿಂದ ನಿಮ್ಮ ಕಾರ್ಯಸಿದ್ಧಿಯಾಗುವದು.

ಆಗ ಎಲ್ಲ ಸುರಸಿದ್ಧರು ಈ ದೇವಿಯರ ಮಾತುಗಳನ್ನು ಕೇಳಿ ಸಂತುಷ್ಟರಾಗಿ ಅವರು ಕೊಟ್ಟ ಬೀಜಗಳನ್ನು ತೆಗೆದುಕೊಂಡು ವಿಷ್ಣುವು ವೃಂದೆಯಿಂದ ಒಡಗೂಡಿಕೊಂಡು ನಿಂತುಕೊಂಡ ಭೂತಲದಲ್ಲಿ ಚೆಲ್ಲಿದರು ಆ ಬೀಜಗಳನ್ನು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಯುದ್ಧದಲ್ಲಿ ಜಾಲಂಧರ ಸಂಹಾರ ಶಂಕರನಿಂದ ಎಂಬ ನೂರ ಎರಡನೇಯ ಅಧ್ಯಾಯ ಮುಗಿದುದು*

## ಮೂರು ಬೀಜಗಳಿಂದ ಹುಟ್ಟಿದ ಧಾತ್ರೀ ಮಾಲತೀ ತುಳಸಿ ಗಿಡಗಳ ದರ್ಶನದಿಂದ ವಿಷ್ಣುವಿನ ಭ್ರಾಂತಿ ನಿವಾರಣೆ

ಅಧ್ಯಾಯ - ೧೦೩

**ನಾರದ:-** ದೇವತೆಗಳು ಚೆಲ್ಲಿದ ಮೂರು ವಿಧ ಬೀಜಗಳಿಂದ ಧಾತ್ರೀ, ಮಾಲತೀ, ತುಳಸೀ ಎಂಬ ಮೂರು ಗಿಡಗಳು ಹುಟ್ಟಿದವು. ಅವುಗಳಲ್ಲಿ ಭೂದೇವಿಯಿಂದ ಹುಟ್ಟಿದ್ದು ಧಾತ್ರೀ, ಲಕ್ಷ್ಮೀದೇವಿಯಿಂದ ಹುಟ್ಟಿದ್ದು ಮಾಲತೀ, ಗೌರಿಯಿಂದ ಹುಟ್ಟಿದ್ದು ತುಳಸೀ ಎಂದು ಪ್ರಸಿದ್ಧವಾದವು. ಸ್ತ್ರೀರೂಪಿಣಿಯರಾದ ಈ ವನಸ್ಪತಿಗಳನ್ನು ನೋಡಿ ವೃಂದಾರೂಪದಿಂದ ಮೋಹಿತನಾದ ವಿಷ್ಣು ಸಂಭ್ರಮದಿಂದ ಎದ್ದು ನಿಂತುಕೊಂಡ. ವೃಕ್ಷರೂಪಿಣಿಯಾದ ಸ್ವರಾ, ಗೌರೀ, ಲಕ್ಷ್ಮಿಯರನ್ನು ನೋಡಿದ. ಅವರಲ್ಲಿ ತುಳಸೀ ಧಾತ್ರೀ ಇವರಿಬ್ಬರು ಆ ವಿಷ್ಣುವನ್ನು ವಿಶೇಷವಾಗಿ ಪ್ರೇಮಾನುರಾಗದಿಂದ ನೋಡಿದರು. ಅವರಲ್ಲಿ ಲಕ್ಷ್ಮಿಯು ಕೊಟ್ಟ ಬೀಜದಿಂದ ಹುಟ್ಟಿದ ಮಾಲತಿಯು ಮಾತ್ರ ಈರ್ಷೆಯಿಂದ ಒಡಗೂಡಿದ ಕಾರಣಕ್ಕಾಗಿ ವಿಷ್ಣುವಿನಿಂದ ಪರಿತ್ಯಕ್ತಳಾದಳು. ಮತ್ತು ಬರ್ಬರಿ ಎಂಬ ಹೆಸರನ್ನು ಹೊಂದಿದಳು.

ಆದರೆ ಧಾತ್ರೀ ತುಳಸಿಯರು ವಿಷ್ಣುವಿನ ಮೇಲೆ ಅತಿಶಯ ಪ್ರೇಮ ಮಾಡಿದ್ದರಿಂದ ಅವನ ನಿಜವಾದ ಪ್ರೀತಿ ಪ್ರಸಾರಕ್ಕೆ ಪಾತ್ರರಾದರು ಅನಂತರ ವಿಷ್ಣುವು ಲೋಕದೃಷ್ಟಿಯಿಂದ ತನಗೆ ಆದ ಎಲ್ಲ ದುಃಖವನ್ನು ಮರೆತು ತುಳಸೀ ಧಾತ್ರೀಯರಿಂದ ಕೂಡಿಕೊಂಡು ವೈಕುಂಠಲೋಕಕ್ಕೆ ತೆರಳಿದ.

ಈ ಕಾರಣಕ್ಕಾಗಿಯೇ ಕಾರ್ತಿಕ ವ್ರತದ ಉದ್ಯಾಪನೆಯ ಸಮಯದಲ್ಲಿ ತುಳಸೀ ಗಿಡದ ಬುಡದಲ್ಲಿ ವಿಷ್ಣುವಿನ ಪೂಜೆಯು ವಿಹಿತ ಮತ್ತು ವಿಷ್ಣುಪ್ರೀತಿಕರ ಎಂದು ಹೇಳಲ್ಪಟ್ಟಿದೆ. ತುಳಸಿಯ ಬನವು ಯಾರ ಮನೆಯ ಅಂಗಳದಲ್ಲಿ ಇರುವದೋ ಅಲ್ಲಿ ಎಂದೂ ಯಮಕಿಂಕರರು ಬರುವದಿಲ್ಲ. ನರ್ಮದೆಯ ದರ್ಶನ, ಗಂಗೆಯ ಸ್ನಾನ, ತುಳಸೀ ವನದ ಸಂಪರ್ಕ ಈ ಮೂರೂ ಸಮಾನವಾದವುಗಳೆಂದು ಶಾಸ್ತ್ರಗಳಲ್ಲಿ ಹೇಳಿದೆ.

**ರೋಪಣಾತ್ ಪಾಲನಾತ್ ಸೇಕಾತ್ ದರ್ಶನಾತ್ ಸ್ಪರ್ಶನಾನ್ನೃಣಾಮ್ ।**
**ತುಳಸೀ ದಹತೇ ಪಾಪಂ ವಾಙ್ಮನಃಕಾಯ ಸಂಚಿತಂ ॥**

ತುಳಸೀಗಿಡವನ್ನು ಬೀಜ ಬಿತ್ತಿ ಬೆಳೆಸುವದರಿಂದಲೂ ಗಿಡವನ್ನು ಪಾಲಿಸುವದರಿಂದಲೂ ನೀರು ಹಾಕುವದರಿಂದಲೂ ಆದರ ದರ್ಶನ ಸ್ಪರ್ಶನದಿಂದಲೂ ಮನುಷ್ಯರು ಮನಸ್ಸಿನಿಂದ ಮಾಡಿದ, ಮಾತಿನಿಂದ ಮಾಡಿದ, ದೇಹದಿಂದ ಮಾಡಿದ ಪಾಪಗಳೆಲ್ಲವೂ ಸುಟ್ಟುಹೋಗುತ್ತವೆ. ಪುಷ್ಕರ ಮೊದಲಾದ ತೀರ್ಥಗಳೂ ಗಂಗೆಯೇ ಮೊದಲಾದ ನದಿಗಳೂ ವಾಸುದೇವನೇ ಮೊದಲಾದವ ದೇವತೆಗಳೂ ತುಳಸೀ ದಳದಲ್ಲಿರುತ್ತಾರೆ. ಮರಣ ಹೊಂದುವ ಮನುಷ್ಯನ ದೇಹದ ಮೇಲೆ ತುಳಸೀದಳವನ್ನಿಟ್ಟರೆ ಅವನು ವಿಷ್ಣುಸಾಯುಜ್ಯವನ್ನು ಹೊಂದುತ್ತಾನೆ. ತುಳಸೀ ಕಾಷ್ಠವನ್ನು ತೈದು ಗಂಧವನ್ನು ಹಚ್ಚಿಕೊಂಡರೆ ಎಷ್ಟು ಪಾಪ ಮಾಡಿದ್ದರೂ ಅವು ಲೇಪ ಆಗುವದಿಲ್ಲ. ತುಳಸೀ ಗಿಡದ ನೆರಳಿನಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಅಕ್ಷಯ್ಯ ತೃಪ್ತಿ.

ಇದೇ ರೀತಿಯಾಗಿ ನೆಲ್ಲೀ ಗಿಡದ ನೆರಳಿನಲ್ಲಿ ಪಿತೃಗಳನ್ನು ಉದ್ದೇಶಿಸಿ ಪಿಂಡದಾನವನ್ನು ಮಾಡಿದರೆ ನರಕಸ್ಥ ಪಿತೃಗಳೂ ಕೂಡ ತೃಪ್ತರಾಗುವರು. ಮತ್ತು ಉದ್ಧಾರವಾಗುವರು.

**ಧಾತ್ರೀ ಫಲಂಚ ತುಳಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಯಸ್ಯದೇಹೇ ಸ್ಥಿತಾ ನಿತ್ಯ ಸ ಜೀವನ್ಮುಕ್ತ ಉಚ್ಯತೆ ॥**

ನೆಲ್ಲಿಯ ಕಾಯಿ, ತುಳಸೀ, ದ್ವಾರಕೆಯ ಮಣ್ಣು (ಗೋಪಿಚಂದನ) ಇವು ಮೂರು ಯಾರ ದೇಹದಲ್ಲಿ ಇರುತ್ತವೆಯೋ ಅವನು ಜೀವನ್ಮುಕ್ತ ಎಂದು ಅನಿಸಿಕೊಳ್ಳುತ್ತಾನೆ. ನೆಲ್ಲೀಕಾಯಿ ಹಾಗೂ ತುಳಸೀದಳಗಳಿಂದ ಮಿಶ್ರಿತವಾದ ನೀರಿನಿಂದ ಸ್ನಾನ ಮಾಡಿದರೆ ಗಂಗಾಸ್ನಾನದ ಫಲ ಬರುವದು. ನೆಲ್ಲಿಯ ಕಾಯಿ, ಎಲೆ, ಹಣ್ಣುಗಳನ್ನು ದೇವರಿಗೆ ಏರಿಸಿ ನೈವೇದ್ಯ ತೋರಿಸಿ ಹರಿಯ ಪೂಜೆ ಮಾಡಿದರೆ ಬಂಗಾರದ ಹೂಗಳಿಂದ ಭಗವಂತನನ್ನು ಪೂಜೆ ಮಾಡಿದಷ್ಟು ಪುಣ್ಯ ಬರುವದು. ಕಾರ್ತಿಕದಲ್ಲಿ ಎಲ್ಲ ತೀರ್ಥಗಳು, ಮುನಿಗಳು, ದೇವತೆಗಳು, ಯಜ್ಞಗಳು ಧಾತ್ರೀ ವೃಕ್ಷವನ್ನು ಆಶ್ರಯಿಸಿ ನಿಂತಿರುತ್ತವೆ. ಕಾರ್ತಿಕದಲ್ಲಿ ದ್ವಾದಶಿಯ ದಿನ ತುಳಸಿಯನ್ನು ಧಾತ್ರೀ ಪತ್ರವನ್ನು ಹರಿಯಬಾರದು. ಕಾರ್ತಿಕದಲ್ಲಿ ನೆಲ್ಲಿಯ ಗಿಡದ ಬುಡದಲ್ಲಿ ಕುಳಿತು ಅನ್ನವನ್ನು ಊಟಮಾಡಿದರೆ ಒಂದು ವರ್ಷದವರೆಗೆ ಅನ್ನ ಸಂಸರ್ಗದಿಂದ ಬಂದ ಪಾಪ ಎಲ್ಲವೂ ನಾಶವಾಗುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮೂರು ಬೀಜಗಳಿಂದ ಹುಟ್ಟಿದ ಧಾತ್ರೀ ಮಾಲತೀ ತುಳಸಿ ಗಿಡಗಳ ದರ್ಶನದಿಂದ*
*ವಿಷ್ಣುವಿನ ಭ್ರಾಂತಿ ನಿವಾರಣೆ ಎಂಬ ನೂರಮೂರನೇಯ ಅಧ್ಯಾಯ ಮುಗಿದುದು*



## ಕಲಹೆಯ ಉಪಾಖ್ಯಾನ — ಅಧ್ಯಾಯ - ೧೦೪

**ಪೃಥುರಾಜ:-** ಪೂಜ್ಯರೇ, ತಾವು ಆಶ್ಚರ್ಯಕರವಾದ ತುಳಸಿಯ ಮಹಿಮೆಯನ್ನು ಹೇಳಿದಿರಿ. ಹಾಗೂ ಆಶ್ಚರ್ಯಕರವಾದ ಧಾತ್ರೀಯ ಮಹಿಮೆಯನ್ನು ನಿರೂಪಿಸಿದಿರಿ. ಈಗ ಕಾರ್ತಿಕ ವ್ರತವನ್ನು ಆಚರಿಸಿದವರಿಗೆ ಎಂಥ ಮಹಾ ಫಲ? ಇದನ್ನು ಹಿಂದೆ ಯಾರು ಆಚರಿಸಿದರು? ಹೇಳಿರಿ.

**ನಾರದ:-** ಪೂರ್ವಕಾಲದಲ್ಲಿ ಸಹ್ಯಾದ್ರಿಯ ಘಟ್ಟದಲ್ಲಿ ಕರವೀರ ಪಟ್ಟಣದಲ್ಲಿ ಧರ್ಮದತ್ತನೆಂಬ ಬ್ರಾಹ್ಮಣ ಇರುತ್ತಿದ್ದ. ಅವನು ಪರಮ ವಿಷ್ಣುಭಕ್ತ, ವಿಷ್ಣುವಿನ **''ಓಂ ನಮೋ ಭಗವತೇ ವಾಸುದೇವಾಯ''** ಎಂಬ ದ್ವಾದಶಾಕ್ಷರ ಮಂತ್ರವನ್ನು ಪ್ರತಿ ದಿವಸವೂ ಜಪಿಸುತ್ತಿದ್ದ. ಒಂದು ದಿನ ಅವನು ಕಾರ್ತಿಕ ಮಾಸದಲ್ಲಿ ಪೂಜೆಯ ಸಾಮಗ್ರಿಗಳನ್ನೆಲ್ಲ ತೆಗೆದುಕೊಂಡು ಹರಿಮಂದಿರಕ್ಕೆ ಹೊರಟಿದ್ದ. ಆಗ ಬ್ರಾಹ್ಮಮೂಹೂರ್ತ. ಬೆಳಗಿನಹೊತ್ತು. ದಾರಿಯಲ್ಲಿ ಉಗ್ರಸ್ವರೂಪದ ಘೋರ ಧ್ವನಿಯುಳ್ಳ ಒಂದು ರಾಕ್ಷಸಿಯು ಅವನಿಗೆ ಎದುರು ಆಯಿತು. ಆ ರಕ್ಕಸಿಯು ತನ್ನ ಕೆಂಪು ಕಣ್ಣು, ಜೋತಾಡುವ ನಾಲಿಗೆ, ವಕ್ರಹಲ್ಲು, ದಪ್ಪತುಟಿ, ಗೊಗ್ಗರ ಧ್ವನಿ, ದಿಗಂಬರ ವೇಷದಿಂದ ವಿಕರಾಳ ಆಕಾರದಲ್ಲಿ ಎದುರು ಬಂದು ನಿಂತಕೂಡಲೇ ಧರ್ಮದತ್ತ ಹೆದರಿ

ನಡುಗತೊಡಗಿದ. ಆದರೂ ಅವನು ಧೈರ್ಯ ತಂದುಕೊಂಡು ತನ್ನ ಕೈಯಲ್ಲಿರುವ ತುಳಸೀ ಮಿಶ್ರಿತವಾದ ನೀರಿನಿಂದ ಶ್ರೀಹರಿಯ ನಾಮವನ್ನು ಉಚ್ಚರಿಸುತ್ತ ಗರ್ಜನೆ ಮಾಡುತ್ತ ಅದಕ್ಕೆ ಪ್ರೋಕ್ಷಣ ಮಾಡಿದ. ಹರಿನಾಮಸ್ಮರಣ ಪೂರ್ವಕ ಧರ್ಮದತ್ತನು ತುಳಸೀ ಜಲವನ್ನು ಎರಚ್ಚಿದ ಕೂಡಲೇ ಆ ರಾಕ್ಷಸಿಯ ಪಾಪವೆಲ್ಲವೂ ತತ್‌ಕ್ಷಣದಲ್ಲಿಯೇ ನಷ್ಟವಾಗಿ ಹೋದವು. ಆ ರಕ್ಕಸಿಗೆ ತನ್ನ ಜನ್ಮಾಂತರದ ಸ್ಮರಣೆ ಬಂದಿತು. ಆಗ ಅದು ಆ ಧರ್ಮದತ್ತನ ಎದುರು ಅಡ್ಡಬಿದ್ದು ದೀರ್ಘ ದಂಡವತ್ ಪ್ರಣಾಮ ಮಾಡಿತು. ಮತ್ತು ನುಡಿಯಿತು.

**ರಾಕ್ಷಸಿ:-** ಪೂಜ್ಯರೇ, ನಾನು ನನ್ನ ಪೂರ್ವಜನ್ಮದ ದುಷ್ಕರ್ಮದಿಂದೆ ಇಂಥ ದುಷ್ಟಯೋನಿಯನ್ನು ಹೊಂದಿದ್ದೆ. ನನಗೆ ಸದ್ಗತಿಯಾಗಲು ದಾರಿ ಯಾವದು ಹೇಳಿರಿ.

**ಧರ್ಮದತ್ತ:-** ನೀನು ಯಾರು? ನಿನಗೆ ಇಂಥ ಕೆಟ್ಟ ಜನ್ಮ ಬರಲು ಕಾರಣ ಏನು? ಹಿಂದಿನ ಜನ್ಮದಲ್ಲಿ ನೀನು ಯಾರು ಆಗಿದ್ದೆ? ನಿನ್ನ ನಡೆನುಡಿಗಳು ಹೇಗೆ ಇದ್ದವು? ಈ ರಾಕ್ಷಸಿಯ ಜನ್ಮ ಬರಲು ಕಾರಣವೇನು?

**ಕಲಹಾ:-** ವಿಪ್ರೋತ್ತಮ, ಹಿಂದೆ ಸೌರಾಷ್ಟ್ರ ನಗರದಲ್ಲಿ ಭಿಕ್ಷು ಎಂಬ ಒಬ್ಬ ಬ್ರಾಹ್ಮಣನಿರುತ್ತಿದ್ದ. ನಾನು ಅವನ ಹೆಂಡತಿ. ಕಲಹಾ ಎಂದು ನನ್ನ ಹೆಸರು. ಹೆಸರಿಗೆ ತಕ್ಕಂತೆ ನಾನು ಅತಿ ನಿಷ್ಠುರಳಾಗಿದ್ದೆ. ಏನಾದರೂ ನೆಪ ತೆಗೆದು ನಾನು ಪತಿಯೊಡನೆ ಕಲಹ ಮಾಡುತ್ತಿದ್ದೆ. ಒಂದು ದಿನವೂ ನಾನು ಅವನ ಮಾತನ್ನು ಕೇಳಲಿಲ್ಲ. ಪುಣ್ಯ ಕಾರ್ಯವನ್ನು ಮಾಡಲಿಲ್ಲ ಪಕ್ವಾನ್ನ ಮೃಷ್ಟಾನ್ನ ಅಡಿಗೆಮಾಡಿ ಪತಿಗೆ ಬಡಿಸಲಿಲ್ಲ. ಪ್ರತಿನಿತ್ಯವೂ ಅವನೊಡನೆ ಕಲಹ ಮಾಡುತ್ತಲೇ ಇದ್ದೆ. ಇದರಿಂದ ಆ ಬ್ರಾಹ್ಮಣ ನನ್ನ ಚಂಡಿತನ ಹಾಗು ಮೊಂಡತನ ಬಡಿದಾಟ ಹೊಡೆದಾಟಗಳಿಂದ ಬೇಸತ್ತು ಹೋದ. ಬೇರೆ ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ. ಆಗ ನನಗೆ ಕೋಪ ಬಂದಿತು. ಪತಿಯ ಮೇಲಿನ ಸಿಟ್ಟಿನಿಂದ ನಾನು ವಿಷವನ್ನು ನುಂಗಿದೆ. ಪ್ರಾಣಬಿಟ್ಟೆ, ಆ ಜನ್ಮ ನೀಗಿದೆ. ಯಮದೂತರು ಬಂದು ನನ್ನನ್ನು ಎಳೆದುಕೊಂಡು ತಮ್ಮ ರಾಜಧಾನಿಯಾದ ಸಂಯಮನೀಪುರಕ್ಕೆ ಕರೆದುಕೊಂಡು ಹೋದರು. ಯಮನು ನನ್ನನ್ನು ನೋಡಿ ಚಿತ್ರಗುಪ್ತರನ್ನು ಕೇಳಿದ.

**ಯಮ:-** ಚಿತ್ರಗುಪ್ತರೇ, ಇವಳು ಎಷ್ಟು ಪುಣ್ಯ ಕರ್ಮಗಳನ್ನು ಮಾಡಿದ್ದಾಳೆ? ಯಾವ ಯಾವ ಪಾಪ ಕರ್ಮಗಳನ್ನು ಮಾಡಿದ್ದಾಳೆ? ಇವೆಲ್ಲವನ್ನು ನೋಡಿ ಹೇಳಿರಿ.

**ಚಿತ್ರಗುಪ್ತ:-** ಪ್ರಭು, ಇವಳು ಬಹಳ ದುಷ್ಟ ಹೆಣ್ಣು. ಇವಳು ಈ ಜನ್ಮದಲ್ಲಿ ಒಂದೂ ಶುಭಕರ್ಮ ಮಾಡಿಲ್ಲ. ಆದುದರಿಂದ ಇವಳ ಪಾಲಿಗೆ ಪುಣ್ಯವು ಇಲ್ಲವೇ ಇಲ್ಲ. ಗಂಡನಿಗೆ ಕೊಡದೇ ತಾನೇ ತನಗೆ ಬೇಕುಬೇಕಾದ ಮೃಷ್ಟಾನ್ನ ಮಾಡಿಕೊಂಡು ತಿನ್ನುತ್ತಿದ್ದಳು. ಗಂಡನೊಡನೆ ಸರ್ವದಾ ದ್ವೇಷ. ನಿತ್ಯವೂ ಕಲಹ. ಆದುದರಿಂದ ಇವಳು ಅತ್ಯಂತ ನೀಚವಾದ ಹಂದಿಯ ಜನ್ಮವನ್ನು ಹೊಂದಿ ತನ್ನ ಮಲವನ್ನು ತಾನೇ ತಿನ್ನಲಿ. ಪೂಜೆಮಾಡುವ ಪಾತ್ರೆಯಲ್ಲಿಯೇ ಊಟ ಮಾಡುತ್ತಿದ್ದಳು. ಆದುದರಿಂದ ಇವಳು ತನ್ನ ಮಕ್ಕಳನ್ನೆ ತಿನ್ನುವ ಬೆಕ್ಕು ಆಗಿ ಜನಿಸಲಿ. ಗಂಡನ ಮೇಲಿನ ದ್ವೇಷದಿಂದ ವಿಷತಿಂದು ಸತ್ತದ್ದರಿಂದ ಇವಳು ಪಿಶಾಚ ಜನ್ಮವನ್ನು ಹೊಂದಿ ನೀರು ಇಲ್ಲದ ಮರುಭೂಮಿಯಲ್ಲಿ ದುಃಖದಿಂದ ಅಂಡಲೆಯಲಿ.

ಚಿತ್ರಗುಪ್ತನ ಆದೇಶದಂತೆ ನಾನು ದುಃಖವನ್ನು ಅನುಭವಿಸಿ ಈಗ ಮರುದೇಶದಲ್ಲಿ ಅಂತರ್ಪಿಶಾಚಿಯಾಗಿ ಐದುನೂರು ವರ್ಷಗಳಿಂದ ಈ ಪ್ರೇತ ದೇಹದಲ್ಲಿ

ದುಃಖಪಡುತ್ತಲಿದ್ದೇನೆ. ಈ ರಾಕ್ಷಸಿ ಜನ್ಮದಲ್ಲಿ ನನಗೆ ಎಂದೂ ಆಗದ ಬಾಯಾರಿಕೆ. ತೀರದ ಹಸಿವೆ ಒಂದು ದಿನ ಆ ಮರು ದೇಶಕ್ಕೆ ದುರ್ದೈವದಿಂದ ಓರ್ವ ವ್ಯಾಪಾರಿಯು ಆಗಮಿಸಿದ.

ಅವನ ದೇಹದಲ್ಲಿ ಪ್ರವೇಶಿಸಿ ಈ ದಕ್ಷಿಣ ದೇಶಕ್ಕೆ ಬಂದೆ. ಕೃಷ್ಣಾ ಮತ್ತು ವೇಣೀ ನದಿಗಳ ಸಂಗಮದಲ್ಲಿ ಆ ವ್ಯಾಪಾರಿಯು ಬಂದ. ಸ್ನಾನ ಮಾಡಿದ. ಆಗ ವಿಷ್ಣುದೂತರು ಬಂದು ಕೃಷ್ಣಾ ವೇಣೀ ಸಂಗಮದಲ್ಲಿ ಸ್ನಾನ ಮಾಡಿದ ಆ ವ್ಯಾಪಾರಿಯ ದೇಹದಿಂದ ಹೊರದೂಡಿದರು ನನ್ನನ್ನು. ಹಸಿವೆ ನೀರಡಿಕೆಯಿಂದ ಕಸಿವಿಸಿ ಬಡುತ್ತ ನೆಲೆ ತಪ್ಪಿದ ಹಕ್ಕಿಯಂತೆ ಉದ್ಭ್ರಾಂತಳಾಗಿ ನಾನು ಆಚೆ ಈಚೆ ಅಲೆಯುತ್ತಿರುವಾಗ ನಿನ್ನ ದರುಶನವಾಯಿತು. ನೀನು ನನ್ನ ಮೇಲೆ ತುಳಸಿಯನ್ನು ಬೇರೆಸಿದ ನೀರನ್ನು ಪ್ರೋಕ್ಷಿಸಿದೆ. ಅದರಿಂದ ನನಗೆ ಪೂರ್ವಜನ್ಮದ ಸ್ಮರಣೆ ಬಂದಿದೆ. ಈಗ ದಯೆಮಾಡಿ ನೀನು ನನ್ನ ಉದ್ಧಾರದ ಮಾರ್ಗವನ್ನು ತೋರಿಸು. ಈ ಪ್ರೇತಯೋನಿಯಿಂದ ಬಿಡುಗಡೆಯಾಗುವ ಮಾರ್ಗ ಯಾವದು? ಹಂದಿ ಹಾಗು ಬೆಕ್ಕಿನ ಯೋನಿಯಿಂದ ಪಾರಾಗುವದು ಎಂತು? ಹೇಳು.

ಕಲಹೆ ಎಂಬ ರಕ್ಕಸಿಯ ಈ ಮಾತನ್ನು ಕೇಳಿ ಆ ಧರ್ಮದತ್ತನಿಗೆ ಆಶ್ಚರ್ಯವೂ ಆಯಿತು ದುಃಖವೂ ಆಯಿತು. ಅವಳ ಜನ್ಮಾಂತರದ ದಾರುಣ ಕಥೆಯನ್ನು ಕೇಳಿ ಅವಳ ಕರುಳು ಹಿಂಡಿತು. ಅವಳ ಮೇಲೆ ಕರುಣೆ ಉಕ್ಕಿತು. ಆಗ ಧರ್ಮದತ್ತನು ತುಸುಹೊತ್ತು ಯೋಚಿಸಿ ವಿಚಾರ ಮಾಡಿ ಅವಳಿಗೆ ಹೇಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಲಹೆಯ ಉಪಾಖ್ಯಾನ ಎಂಬ ನೂರನಾಲ್ಕನೇಯ ಅಧ್ಯಾಯ ಮುಗಿದುದು*

—o—

## ತುಳಸಿಯನ್ನು ಬೆರಿಸಿದ ನೀರಿನ ಪ್ರೋಕ್ಷಣೆಯಿಂದ ಕಲಹೆಗೆ ದಿವ್ಯ ದೇಹ ಪ್ರಾಪ್ತಿ

## ಅಧ್ಯಾಯ - ೧೦೫

**ಧರ್ಮದತ್ತ:-** ಮಾನವರು ಮಾಡಿದ ಪಾಪಗಳೆಲ್ಲವೂ ತೀರ್ಥಯಾತ್ರೆ ದಾನಗಳಿಂದಲೂ ವ್ರತೋಪವಾಸಗಳಿಂದಲೂ ಪ್ರಕ್ಷಯವನ್ನು ಹೊಂದುತ್ತವೆ. ಆದರೆ ನೀನು ಈಗ ಪ್ರೇತ ದೇಹದಲ್ಲಿ ಇದ್ದುದರಿಂದ ಅದಾವುದನ್ನೂ ಮಾಡಲಿಕ್ಕೆ ನಿನಗೆ ಅಧಿಕಾರವಿರುವದಿಲ್ಲ. ಆದರೆ ನೀನು ಪಡುವ ಕಷ್ಟ, ಅನುಭವಿಸುವ ಯಾತನೆಗಳನ್ನು ಕಂಡು ನನ್ನ ಮನಸ್ಸು ಅತ್ಯಂತ ಖಿನ್ನವಾಗಿದೆ. ಮತ್ತು ವಿಷಣ್ಣವೂ ಆಗಿದೆ. ಈ ದುಃಖದ ದಳ್ಳುರಿಯಿಂದ ನಿನ್ನನ್ನು ಪಾರುಗಾಣಿಸುವವರೆಗೆ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ. ನಿನ್ನ ಪಾಪವು ಅತ್ಯುಗ್ರ. ಅತ್ಯಂತ ಗರ್ಹಿತವಾದ ಈ ಪ್ರೇತತ್ವವು ಬೇರೆ ಯಾವ ಪುಣ್ಯದಿಂದಲೂ ದೂರವಾಗುವದಿಲ್ಲ. ಆದುದರಿಂದ ನಾನು ನನ್ನ ಯಾವಜ್ಜನ್ಮ ಮಾಡಿದ ಕಾರ್ತಿಕ ವ್ರತದ ಪುಣ್ಯದಲ್ಲಿ ಅರ್ಧ ಭಾಗವನ್ನು ನಿನಗೆ ಕೊಡುತ್ತೇನೆ. ಆ ಪುಣ್ಯ ಪ್ರಭಾವದಿಂದ ನೀನು ಸದ್ಗತಿಯನ್ನು ಹೊಂದು. ಜಗತ್ತಿನಲ್ಲಿ ಯಾವ ಯಜ್ಞದಾನ ತೀರ್ಥ ವ್ರತಗಳೂ ಕೂಡ ಕಾರ್ತಿಕ ವ್ರತಕ್ಕೆ ಸರಿ ಸಮಾನವಾಗಲಾರವು.

ಹೀಗೆ ನುಡಿದು ಧರ್ಮದತ್ತನು ಕೈಯಲ್ಲಿ ತುಳಸಿಯನ್ನು ಬೆರೆಸಿದ ನೀರನ್ನು ತೆಗೆದುಕೊಂಡ. ಬಾಯಿಯಿಂದ **''ಓಂ ನಮೋ ಭಗವತೆ ವಾಸುದೇವಾಯ''** ಎಂದು

ಉಚ್ಚರಿಸುತ್ತ ಆ ನೀರನ್ನು ಆ ಪಿಶಾಚಿಯ ಮೇಲೆ ಸುರುವಿದ. ಉಚ್ಚ ಸ್ವರದಿಂದ ಶ್ರೀಹರಿಯ ನಾಮಗಳನ್ನು ಉಚ್ಚರಿಸುತ್ತ ತುಳಸೀ ಮಿಶ್ರಿತ ಜಲದಿಂದ ಆ ಪ್ರೇತವನ್ನು ಎರೆದುಬಿಟ್ಟ. ತನ್ನ ಕಾರ್ತಿಕ ವ್ರತದ ಪುಣ್ಯವನ್ನೂ ಸಂಕಲ್ಪ ಪೂರ್ವಕವಾಗಿ ಆ ಕಲಹೆಯ ಪ್ರೇತತ್ವ ನಿವೃತ್ತಿಯಾಗಲು ಧಾರೆಯೆರದ. ಅದರಿಂದ ತತ್‌ಕ್ಷಣದಲ್ಲಿಯೇ ಕಲಹೆಯು ತನ್ನ ಪ್ರೇತತ್ವವನ್ನು ನೀಗಿದಳು. ಒಮ್ಮೆಲೇ ಅವಳಿಗೆ ಸುಂದರವಾದ ದೇಹ ಬಂದಿತು. ಬೆಳಗುವ ದೀಪದ ಕುಡಿಯಂತೆ ಅವಳ ಲಲಿತಾಂಗ ಯಷ್ಟಿಯ ಲೋಭನೀಯ ಲಾವಣ್ಯದಿಂದ ದಿಕ್ಕುಗಳೆಲ್ಲವೂ ಉದ್ಭಾಸಿತವಾದವು. ಕೂಡಲೇ ಅವಳು ಮಂಡೆ ಊರಿ ದಂಡಪ್ರಣಾಮ ಮಾಡಿದಳು ಆ ಧರ್ಮದತ್ತನಿಗೆ. ಹರ್ಷಭರಿತಳಾಗಿ ನುಡಿದಳು.

**ಕಲಹಾ:-** ಬ್ರಾಹ್ಮಣೋತ್ತಮ, ನಿಮ್ಮ ದಯೆಯಿಂದ ನಾನು ದುಃಖದ ನರಕದಿಂದ ಮೇಲೆ ಎದ್ದು ಬಂದೆ. ಪಾಪದ ಶರಧಿಯ ಆಳದಲ್ಲಿಯೇ ನಾನು ಮುಳುಗಿಹೋಗಿದ್ದೆ. ನೀವು ನನ್ನ ಪಾಲಿನ ಉದ್ಧಾರದ ನೌಕೆಯಾಗಿ ಬಂದಿರಿ. ನನ್ನನ್ನು ಮೇಲಕ್ಕೆ ತಂದಿರಿ. ಇದಕ್ಕೆ ನಾನು ನಿಮ್ಮನ್ನು ಎಷ್ಟು ರೀತಿಯಿಂದ ವಂದಿಸಿ ಅಭಿನಂದಿಸಿದರೂ ಋಣಮುಕ್ತಳಾಗಲಾರೆ.

ದಿವ್ಯ ದೇಹಧಾರಿಣಿಯಾದ ಕಲಹೆಯು ಹೀಗೆ ಮಾತನಾಡುತ್ತಿರುವಾಗಲೇ ದಿವ್ಯಲೋಕದಿಂದ ವಿಮಾನ ಬಂದಿತು ಅವಳನ್ನು ಕರೆಯಲಿಕ್ಕೆ ಅದರಲ್ಲಿರುವ ವಿಷ್ಣುದೂತರು ಕಲಹೆಯನ್ನು ಅಪ್ಸರೆಯರಿಂದ ಅಧಿಷ್ಠಿತವಾದ ದಿವ್ಯ ವಿಮಾನದಲ್ಲಿ ಹತ್ತಿಸಿದರು. ಪುಣ್ಯಶೀಲ ಸುಶೀಲ ಎಂಬ ವಿಷ್ಣುಪಾರ್ಷದರು ಕಲಹೆಯನ್ನು ಆ ವಿಮಾನದಲ್ಲಿ ಕೂಡಿಸಿಕೊಂಡು ಮೇಲೆ ಹೊರಟರು. ಅಷ್ಟರಲ್ಲಿ ಧರ್ಮದತ್ತನು ಪುಣ್ಯ ಸ್ವರೂಪಿಯಾದ ಪುಣ್ಯಶೀಲ ಸುಶೀಲ ಎಂಬ ವಿಷ್ಣು ಪಾರ್ಷದರ ಮುಂದೆ ಬಂದು ದೀರ್ಘದಂಡ ನಮಸ್ಕಾರ ಹಾಕಿದ. ಆಗ ಅವರಿಬ್ಬರೂ ಹರಿಮಂದಿರದ ದ್ವಾರಪಾಲಕರು ಆ ಧರ್ಮದತ್ತನನ್ನು ಅಭಿನಂದಿಸಿ ಮಾತನಾಡಿದರು.

**ವಿಷ್ಣುಪಾರ್ಷದರು:-** ಬ್ರಾಹ್ಮಣೋತ್ತಮ, ನೀನು ಬಹಳ ಒಳ್ಳೇ ಕೆಲಸ ಮಾಡಿದೆ. ವಿಷ್ಣುಭಕ್ತನಾದ ನೀನು ದೀನದಯಾಳುವೂ ಆಗಿರುವೆ. ನೀನು ಕೊಟ್ಟ ಕಾರ್ತಿಕ ವ್ರತಾನುಷ್ಠಾನದ ಅರ್ಧ ಪುಣ್ಯದಿಂದ ಕಲಹೆಯ ಹಿಂದಿನ ನೂರು ಜನ್ಮಗಳಲ್ಲಿ ಸಂಚಿತವಾದ ಪಾಪರಾಶಿಗಳೆಲ್ಲವೂ ಕಳಚಿ ಹೋಗಿವೆ. ನೀನು ನಿನಗೆ ತಿಳುವಳಿಕೆ ಬಂದ ದಿನದಿಂದ ಆರಂಭಿಸಿ ಪ್ರತಿ ಏಕಾದಶೀ ಉಪವಾಸ, ರಾತ್ರಿ ಜಾಗರ, ದೀಪ, ದಾನ, ತುಳಸೀ ಪೂಜೆ, ಕಾರ್ತಿಕ ವ್ರತ ಮುಂತಾದ ಅಸಂಖ್ಯ ಪುಣ್ಯ ಕರ್ಮಗಳನ್ನು ಮಾಡಿದೆ. ಆ ಪುಣ್ಯ ಫಲದಲ್ಲಿ ಅರ್ಧ ಭಾಗವನ್ನು ಸಂಕಲ್ಪ ಪೂರ್ವಕವಾಗಿ ಈ ಕಲಹೆಗೆ ಕೊಟ್ಟದ್ದರಿಂದ ಅವಳು ಈಗ ದಿವ್ಯ ದೇಹಧಾರಿಣಿಯಾಗಿ ವೈಕುಂಠ ವಿಮಾನವನ್ನು ಏರಿದ್ದಾಳೆ. ಶ್ರೀಶ ಸನ್ನಿಧಿಗೆ ಹೊರಟಿದ್ದಾಳೆ. ನೀನೂ ಕೂಡ ನೀನು ಮಾಡಿದ ಕಾರ್ತಿಕ ವ್ರತದ ಪುಣ್ಯಪ್ರಭಾವ ಮತ್ತು ಕಲಹೆಯನ್ನು ಉದ್ಧರಿಸಿದ ಪುಣ್ಯ ವಿಶೇಷದಿಂದ ಮುಂದೆ ನಿನ್ನ ಇಬ್ಬರ ಹೆಂಡಂದಿರಿಂದ ಕೂಡಿಕೊಂಡು ದಿವ್ಯಲೋಕಕ್ಕೆ ತೆರಳುವೆ.

ವಿಷ್ಣುವನ್ನು ಭಕ್ತಿಯಿಂದ ಆರಾಧಿಸಿದವರು ನಿಜವಾಗಿಯೂ ಧನ್ಯರು. ಧನ್ಯರು. ಅವನ ನಾಮಸ್ಮರಣ ಮಾತ್ರದಿಂದಲೇ ಧ್ರುವ, ಕರಿರಾಜ ಮುಂತಾದ ಭಕ್ತಾಗ್ರೇಸರರು ದಿವ್ಯ ಸ್ಥಾನಗಳನ್ನು ಪಡೆದಿದ್ದಾರೆ ಅದರಂತೆ ನೀನಾದರೂ ಈ ಜನ್ಮವನ್ನು ಕಳೆದ ನಂತರ ದಿವ್ಯ

ವಿಮಾನದಲ್ಲಿ ಕುಳಿತು ಮೇಲಿನ ಪುಣ್ಯಲೋಕಗಳಿಗೆ ಹೋಗಿ ಹಲವು ಕಾಲ ಅಲ್ಲಿ ಸುಖೋಪಭೋಗಗಳನ್ನು ಅನುಭವಿಸುವೆ. ಅನಂತರ ಪುಣ್ಯ ಕ್ಷಯವಾದ ನಂತರ ಭೂಲೋಕಕ್ಕೆ ಬಂದು ಸೂರ್ಯವಂಶದಲ್ಲಿ ಹುಟ್ಟಿ ದಶರಥ ರಾಜ ಎಂಬ ಹೆಸರಿನಿಂದ ಪ್ರಖ್ಯಾತನಾಗುವೆ. ಈಗಿನ ನಿನ್ನ ಪುಣ್ಯದ ಅರ್ಧಭಾಗವನ್ನು ಪಡೆದು ದಿವ್ಯಲೋಕಕ್ಕೆ ತೆರಳಿದ ಕಲಹೆಯು ಆಗ ನಿನ್ನ ಪಟ್ಟದ ರಾಣಿಯಾಗಿ ಬರಲಿರುವಳು. ಆಗ ಶ್ರೀಹರಿಯು ನಿನಗೆ ಹಾಗೂ ಕಲಹೆಗೆ ಮಗನಾಗಿ ಜನಿಸಿ ದೇವತಾ ಕಾರ್ಯವನ್ನು ಸಾಧಿಸುವನು. ನೀನು ಈ ಜನ್ಮಾರಭ್ಯ ಕಾರ್ತಿಕ ವ್ರತವನ್ನು ಮಾಡಿದ್ದರಿಂದ ಜನ್ಮರಹಿತನಾದ ಶ್ರೀಹರಿಯು ಭೂಲೋಕದಲ್ಲಿ ನಿನ್ನನ್ನು ನಿಮಿತ್ತ ಮಾಡಿ ಜನಿಸಿ ಬರಲಿರುವನು. ಇದೇ ಕಾರ್ತಿಕ ವ್ರತದ ಪುಣ್ಯ ಪ್ರಭಾವದಿಂದ ನಿಮ್ಮಿಬ್ಬರನ್ನು ಶ್ರೀರಾಮನ ಆದೇಶದಿಂದ ರಾಮಾವತಾರದ ಅನಂತರ ದಶರಥ ಕೌಸಲ್ಯಾ ರೂಪ ಜನ್ಮಾಂತರದ ಕೊನೆಯಲ್ಲಿ ವಿಷ್ಣುಲೋಕವನ್ನು ಕುರಿತು ಕರೆದು ಒಯ್ಯುತ್ತೇವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ತುಳಸಿಯನ್ನು ಬೆರಿಸಿದ ನೀರಿನ ಪ್ರೋಕ್ಷಣೆಯಿಂದ ಕಲಹೆಗೆ ದಿವ್ಯ ದೇಹ ಪ್ರಾಪ್ತಿ ಎಂಬ ನೂರಐದನೇಯ ಅಧ್ಯಾಯ ಮುಗಿದುದು*



## ವಿಷ್ಣು ವ್ರತದ ಮಹಿಮೆ

ಅಧ್ಯಾಯ - ೧೦೬

**ನಾರದ:-** ವಿಷ್ಣು ಪಾರ್ಷದರಾದ ಪುಣ್ಯಶೀಲ ಸುಶೀಲ ಎಂಬುವರ ಮಾತುಗಳನ್ನು ಕೇಳಿ ಧರ್ಮದತ್ತನು ಆಶ್ಚರ್ಯಚಕಿತನಾದ. ಕಟ್ಟಿಗೆಯಂತೆ ಅವರ ಕಾಲಬುಡದಲ್ಲಿ ಬಿದ್ದ. ಕೈಜೊಡಿಸಿದ. ವಿನೀತನಾಗಿ ಮಾತನಾಡಿದ.

**ಧರ್ಮದತ್ತ:-** ಎಲ್ಲ ಧಾರ್ಮಿಕರೂ ಯಜ್ಞ, ದಾನ, ವ್ರತ, ತೀರ್ಥಯಾತ್ರೆ, ತಪಸ್ಸು ಮುಂತಾದ ಪುಣ್ಯಕಾರ್ಯಗಳನ್ನು ಮಾಡುತ್ತಾರೆ. ಆದರೆ ಈ ಪುಣ್ಯಕರ್ಮಗಳೆಲ್ಲವೂ ವಿಷ್ಣು ಪ್ರೀತಿಕರವಾಗಿ ವಿಷ್ಣುಸಾನ್ನಿಧ್ಯಪ್ರಾಪಕ ಆಗಬೇಕಾದರೆ ಏನು ಮಾಡಬೇಕು?

**ವಿಷ್ಣುಪಾರ್ಷಕರು:-** ನೀನು ಚೆನ್ನಾಗಿ ಪ್ರಶ್ನೆಮಾಡಿದೆ. ಈ ವಿಷಯದಲ್ಲಿ ನಿನಗೆ ಸ್ಪಷ್ಟಜ್ಞಾನ ಆಗಲಿಕ್ಕಾಗಿ ನಿನಗೆ ಒಂದು ಐತಿಹಾಸಿಕ ಕಥೆಯನ್ನು ಹೇಳುವೆ ಕೇಳು. ಪೂರ್ವಕಾಲದಲ್ಲಿ ಕಾಂತಿಪುರಿ ಎಂಬ ಪಟ್ಟಣದಲ್ಲಿ ಚೋಳ ಎಂಬ ಒಬ್ಬ ಚಕ್ರವರ್ತಿ ರಾಜನಿದ್ದ. ಅವನ ಹೆಸರಿನಿಂದಲೇ ಆ ದೇಶಕ್ಕೆ ಚೋಳದೇಶವೆಂದು ಪ್ರಖ್ಯಾತಿ ಬಂದಿತು. ಆ ಮಹಾರಾಜನ ಧರ್ಮಶಾಸನದಲ್ಲಿ ಅವನ ರಾಜ್ಯದಲ್ಲಿ ದರಿದ್ರ, ದುಃಖಿತ, ಪಾಪಬುದ್ಧಿ, ರೋಗಿಷ್ಠ ಈ ನಾಲ್ಕು ಬಗೆಯ ಜನರು ಒಬ್ಬರೂ ಇರಲಿಲ್ಲ. ಆ ಮಹಾರಾಜನು ಯಜ್ಞಗಳಲ್ಲಿ ನೆಟ್ಟ ಬಂಗಾರದ ಯೂಪಗಳಿಂದ ತಾಮ್ರ ಪರ್ಣೀ ನದಿಯ ಎರಡೂ ತಟಾಕಗಳು ಶೋಭಯಮಾನವಾಗಿದ್ದವು.

ಒಂದು ದಿನ ಆ ಚೋಳರಾಜ ಅನಂತಶಯನಕ್ಕೆ ಹೋಗಿದ್ದ. ಯೋಗ ನಿದ್ರೆಯಲ್ಲಿ ಶಯನ ಮಾಡಿದ ಆ ಅನಂತಶಯನನನ್ನು ಮುತ್ತು ರತ್ನಗಳಿಂದಲೂ ಮತ್ತು ಬಂಗಾರದ ಹೂಗಳಿಂದಲೂ ಪೂಜೆ ಮಾಡಿದ. ಪೂಜೆಯ ಅನಂತರ ದಂಡವತ್ ಪ್ರಣಾಮಮಾಡಿ

ಅಲ್ಲಿಯೇ ಕುಳಿತುಕೊಂಡ. ಅಷ್ಟರಲ್ಲಿ ಅದೇ ಊರಿನ ವಿಷ್ಣುದಾಸನೆಂಬ ಬ್ರಾಹ್ಮಣ ದೇವರ ಪೂಜೆಯನ್ನು ಮಾಡಬೇಕೆಂದು ತುಳಸೀ ನೀರು ಹಿಡಿದುಕೊಂಡು ಬಂದ. ವಿಷ್ಣುಸೂಕ್ತದಿಂದ ಅನಂತಶಯನನಿಗೆ ಸ್ನಾನ ಮಾಡಿಸಿದ. ತುಳಸೀ ಮಂಜರಿಯ ದಳಗಳನ್ನು ಏರಿಸುತ್ತ ಸಹಸ್ರನಾಮಾರ್ಚನೆಯನ್ನು ಮಾಡಿದ. ಹೀಗೆ ವಿಷ್ಣುದಾಸನು ಮಾಡಿದ ತುಳಸೀ ಪೂಜೆಯಿಂದ ಆ ಅನಂತಶಯನನ ಮೂರ್ತಿಗೆ ಚೋಳರಾಜನು ಮಾಡಿದ ರತ್ನಪೂಜೆಯೆಲ್ಲವೂ ಆಚ್ಛಾದಿತವಾಯಿತು. ಅದನ್ನು ನೋಡಿ ಕೋಪ ಬಂದಿತು ಚೋಳರಾಜನಿಗೆ. ಸಿಡುಕಿನಿಂದ ಮೋಡಿದ. ದರ್ಪದಿಂದ ಗದರಿಸಿ ನುಡಿದ.

**ಚೋಳರಾಜ:-** ವಿಷ್ಣುದಾಸ, ನಾನು ಅನಂತಶಯನನಿಗೆ ಮುತ್ತು, ಮಣಿ, ಮಾಣಿಕ್ಯಗಳಿಂದ ಪೂಜೆ ಮಾಡಿದ್ದೆ. ಬಂಗಾರದ ಹೂಗಳನ್ನು ಏರಿಸಿದ್ದೆ. ಅದರಿಂದ ಒಳ್ಳೇ ಕಳೆಕಟ್ಟಿತ್ತು ಆ ಭಗವನ್ಮೂತಿಗೆ. ಆದರೆ ಈಗ ನೀನು ಇದನ್ನು ಏನು ಮಾಡಿದೆ? ಬರೇ ತುಳಸೀ ದಳಗಳನ್ನು ಮೂರ್ತಿಯ ಮೈತುಂಬ ಏರಿಸಿ ತೂರಿಸಿ ನಾನು ಏರಿಸಿದ ಮಣಿ ಮುತ್ತು ಮಾಣಿಕ್ಯ ಒಂದೂ ಕಾಣಿಸದಂತೆ ಮಾಡಿದೆ. ನೀನು ಅರ್ಪಿಸಿದ ತುಳಸೀ ದಳಗಳ ರಾಶಿಯಲ್ಲಿ ನಾನು ಏರಿಸಿದ ಅನೇಕ ಮುತ್ತು ರತ್ನ ಸುವರ್ಣ ಪುಷ್ಪಗಳಲ್ಲಿ ಒಂದೂ ಕಾಣಿಸುವದಿಲ್ಲ. ಈ ನಿನ್ನ ತುಳಸೀ ಪೂಜೆಯಿಂದ ನನ್ನ ಶೋಭಾಢ್ಯವಾದ ರತ್ನ ಪೂಜೆಯನ್ನು ಮುಚ್ಚಿಹಾಕಿಬಿಟ್ಟಿರುವೆ. ನಾನು ಏರಿಸಿದ ಮುತ್ತು ರತ್ನ ಸುವರ್ಣ ಪುಷ್ಪಗಳಲ್ಲಿ ಒಂದೂ ಮೂರ್ತಿಯ ಮೈಮೇಲೆ ಕಾಣದಂತಾಗಿವೆ. ನಿಜವಾಗಿ ವಿಷ್ಣುಭಕ್ತಿ ಎಂದರೇನು ಅನ್ನುವದು ನಿನಗೆ ತಿಳಿಯದಾಗಿದೆ.

**ವಿಷ್ಣುದಾಸ:-** ರಾಜನೆ, ಭಕ್ತಿಯೆಂದರೆ ಏನು ಎಂಬುವದೇ ನಿನಗೆ ತಿಳಿಯದು. ನಿನಗೆ ದೊರೆತ ರಾಜ್ಯೈಶ್ವರ್ಯದಿಂದ ನೀನು ಗರ್ವಾಂಧನಾಗಿರುವೆ. ನೀನು ಈ ಮೊದಲು ಏನಾದರೂ ವಿಷ್ಣುವ್ರತ ಮಾಡಿರುವೆಯಾ? ಹೇಳು.

**ರಾಜ:-** ಬ್ರಾಹ್ಮಣ, ವಿಷ್ಣುಭಕ್ತಿಯಿಂದ ಅತಿ ಗರ್ವ ಬಂದಿದೆ ನಿನಗೆ. ದರಿದ್ರನಾದ ನಿನಗೆಲ್ಲಿ ವಿಷ್ಣುಭಕ್ತಿ? ನೀನು ದರಿದ್ರನಾದುದರಿಂದ ವಿಷ್ಣುಪ್ರೀತಿ ಕರವಾದ ಯಜ್ಞ, ದಾನಧರ್ಮ ಮುಂತಾದ ಯಾವ ಪುಣ್ಯಕರ್ಮಗಳನ್ನು ಮಾಡಿಲ್ಲ. ಯಾವ ವಿಷ್ಣುಮಂದಿರವನ್ನೂ ಈ ಮೊದಲು ನೀನು ಕಟ್ಟಿಸಿಲ್ಲ. ಇಷ್ಟಾದರೂ ನಾನೇ ಮಹಾವಿಷ್ಣುಭಕ್ತ ಎಂಬ ಗರ್ವ ಪರ್ವತಾಕಾರವಾಗಿ ಬೆಳೆದು ನಿಂತಿದೆ ನಿನ್ನಲ್ಲಿ. ಆದುದರಿಂದ ಇಲ್ಲಿ ನೆರೆದ ಬ್ರಾಹ್ಮಣರೆಲ್ಲರೂ ನನ್ನ ಮಾತನ್ನು ಕೇಳಿರಿ. ವಿಷ್ಣುವಿನ ಸಾಕ್ಷಾತ್ಕಾರವನ್ನು ಮೊದಲು ನಾನು ಪಡೆಯುತ್ತೇನೊ ಅಥವಾ ಈ ವಿಷ್ಣುದಾಸ ಪಡೆಯುತ್ತಾನೋ. ಇದನ್ನು ಪರೀಕ್ಷಿಸಿ ನೋಡಿರಿ ಮತ್ತು ಯಾರ ಭಕ್ತಿ ಶ್ರೇಷ್ಠ ನಮ್ಮಿಬ್ಬರಲ್ಲಿ ಇದನ್ನು ನಿರ್ಣಯಿಸಿರಿ.

ಹೀಗೆ ಹೇಳಿ ಚೋಳರಾಜ ತೆರಳಿದ ತನ್ನ ಅರಮನೆಗೆ. ತನ್ನ ಕುಲಗುರುಗಳಾದ ಮುದ್ಗಲರನ್ನು ಆಚಾರ್ಯ ಪೀಠದಲ್ಲಿ ಕುಳ್ಳಿರಿಸಿ ಪ್ರಾರಂಭಿಸಿದ ಒಂದು ವೈಷ್ಣವಸತ್ರವನ್ನು ಅಲ್ಲಿ ನಡೆದ ಆ ಸಮ್ರಾಟನ ಯಜ್ಞದಲ್ಲಿ ಋಷಿಗಳ ಒಂದು ದೊಡ್ಡ ಸಮೂಹವೇ ಸೇರಿತ್ತು. ವಿಪುಲವಾದ ದಕ್ಷಿಣೆ ನೀಡಲಾಯಿತು. ಹಿಂದೆ ಗಯಾಕ್ಷೇತ್ರದಲ್ಲಿ ಬ್ರಹ್ಮದೇವರು ಮಾಡಿದ ಯಜ್ಞದಂತೆ ಚೋಳರಾಜನ ಯಜ್ಞವೂ ಕೂಡ ಅನ್ನದಾನ ದಕ್ಷಿಣದಾನ

ಸುವರ್ಣದಾನಗಳಿಂದ ಅತ್ಯದ್ಭುತವೆನಿಸಿತು. ಇತ್ತ ವಿಷ್ಣುದಾಸನೂ ಕೂಡ ಭಕ್ತಿಯಿಂದ ಹರಿಪ್ರೀತಿಕರವಾದ ಐದು ನಿಯಮಗಳನ್ನು ಪಾಲಿಸಿದ. ಮಾಘ ಕಾರ್ತಿಕಗಳಲ್ಲಿ ಮಾಸೋಕ್ತ ವ್ರತಾನುಷ್ಠಾನ, ತುಳಸೀ ವನರಕ್ಷಣೆ ಏಕಾದಶಿವ್ರತ **"ಓಂ ನಮೋ ಭಗವತೇ ವಾಸುದೇವಾಯ"** ಎಂಬ ದ್ವಾದಶಾಕ್ಷರ ಮಂತ್ರದ ಜಪ, ಷೋಡಶೋಪಚಾರಗಳಿಂದ ವಿಷ್ಣುಪೂಜೆ ಮತ್ತು ಕೊನೆಗೆ ಗೀತನೃತ್ಯ ಮಂಗಳಾರತಿ ಮುಖಾಂತರ ಭಗವತ್ಸೇವೆ. ಈ ಐದು ವ್ರತಗಳನ್ನು ಸರಿಯಾಗಿ ಆಚರಿಸಿದ. ಮತ್ತು ಪ್ರತಿದಿನವೂ ಹಗಲು ಹನ್ನೆರಡು ಗಂಟೆ, ರಾತ್ರಿ ಹನ್ನೆರಡು ಘಂಟೆ ವಿಷ್ಣುವಿನ ನಾಮಸ್ಮರಣೆ ಮಾಡುತ್ತಿದ್ದ. ನಡೆದಾಡುವಾಗಲೂ ಹರಿಸ್ಮರಣೆ, ಊಟ ಮಾಡುವಾಗ ಗೋವಿಂದನ ಸ್ಮರಣೆ, ಮಲಗುವಾಗ ನಾರಾಯಣ ಸ್ಮರಣೆ. ಹೀಗೆ ಮಾಘ ಕಾರ್ತಿಕ ಮಾಸಗಳಲ್ಲಿ ವಿಶೇಷ ನಿಯಮಗಳನ್ನು ಪಾಲನೆ ಮಾಡುತ್ತ ಭಗವಂತನ ಆರಾಧನೆಯನ್ನು ಮಾಡುತ್ತಲೇ ಇದ್ದ ಆ ವಿಷ್ಣುದಾಸ. ಹೀಗೆ ಚೋಳರಾಜ ಹಾಗೂ ವಿಷ್ಣುದಾಸರು ಶ್ರೀಮನ್ನಾರಾಯಣನನ್ನು ಆರಾಧಿಸುತ್ತ ವ್ರತಸ್ಥರಾಗಿ ಭಗವತ್ ಕೈಂಕರ್ಯವನ್ನು ಬಹುಕಾಲದವರೆಗೆ ನಡೆಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣು ವ್ರತದ ಮಹಿಮೆ ಎಂಬ ನೂರ ಆರನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುದಾಸ ಚೋಳರಾಜರಿಗೆ ವೈಕುಂಠಲೋಕ ಪ್ರಾಪ್ತಿ | ಅಧ್ಯಾಯ - ೧೦೭

**ವಿಷ್ಣುಪಾರ್ಷದರು:-** ಒಂದುದಿನ ವಿಷ್ಣುದಾಸನು ತನ್ನ ನಿತ್ಯ ಪೂಜಾವಿಧಿಯನ್ನೆಲ್ಲ ಮುಗಿಸಿಕೊಂಡು, ಅಡಿಗೆ ಮಾಡಿ ಇಟ್ಟು, ಅನಂತಶಯನನ ದರ್ಶನ ತೆಗೆದುಕೊಂಡು ಬರಬೇಕೆಂದು ದೇವಸ್ಥಾನಕ್ಕೆ ಹೋದ. ತಿರುಗಿ ಬರುವಷ್ಟರಲ್ಲಿ ಅವನು ಮಾಡಿ ಇಟ್ಟ ಅಡಿಗೆಯನ್ನು ಯಾರೋ ಕದ್ದುಕೊಂಡು ಹೋಗಿಬಿಟ್ಟಿದ್ದರು. ಆಗಲೇ ಸೂರ್ಯ ಇಳಿಮುಖನಾಗಿದ್ದ. ಈಗ ಮತ್ತೆ ಅಡಿಗೆ ಊಟ ಮಾಡುತ್ತ ಕೂಡದೆ ತನಗೆ ಸಂಜೆಯ ದೇವರ ದರ್ಶನ ತಪ್ಪುವದು ಎಂದು ತಿಳಿದು ಅಂದು ಅವನು ಊಟವನ್ನೇ ಮಾಡಲಿಲ್ಲ. ಮರುದಿನವೂ ಅವನು ಅಡಿಗೆ ಮಾಡಿಟ್ಟು, ದೇವರಿಗೆ ಹಣ್ಣು ಕಾಯಿ ನೈವೇದ್ಯ ತೋರಿಸಿ, ಪೂಜಾ ಮಾಡಿಕೊಂಡು ಬರಬೇಕೆಂದು ದೇವಸ್ಥಾನಕ್ಕೆ ಹೋದ. ಅಂದು ಕೂಡಾ ಯಾವನೋ ಒಬ್ಬ ಕಳ್ಳನು ಹಿಂದಿನ ದಿನದಂತೆ ಮಾಡಿಟ್ಟ ಅಡಿಗೆಯನ್ನು ಕದ್ದುಕೊಂಡು ಹೋಗಿಬಿಟ್ಟ.

ಹೀಗೆ ಏಳು ದಿನಗಳವರೆಗೆ ನಡೆಯಿತು. ಏಳು ದಿನವೂ ವಿಷ್ಣುದಾಸನಿಗೆ ಉಪವಾಸ. ದೇವರ ದರ್ಶನ ತೆಗೆದುಕೊಳ್ಳದೇ ಅವನು ಊಟ ಮಾಡುವಂತಿಲ್ಲ. ಸಂಜೆಯ ಪೂಜೆಯನ್ನು ತಪ್ಪಿಸುವಂತಿಲ್ಲ ಹೀಗಾಗಿ ಅವನು ಏಳು ದಿನ ಉಪವಾಸ ಬಿದ್ದು ಎಂಟನೇಯ ದಿನ ಕಳ್ಳನನ್ನು ಕಂಡುಹಿಡಿಯಬೇಕೆಂದು ನಿರ್ಧರಿಸಿದ. ಪ್ರತಿದಿನದಂತೆ ತಾನು ತನ್ನ ಸ್ನಾನ ದೇವತಾರ್ಚನ ಮುಗಿಸಿ ಅಡಿಗೆ ಮಾಡಿಟ್ಟು ತಾನು ಮಾತ್ರ ಯಾರ ಕಣ್ಣಿಗೆ ಕಾಣದಂತೆ ಅಲ್ಲಿಯೇ ಮರೆಯಾಗಿ ನಿಂತುಕೊಂಡ. ಅಷ್ಟರಲ್ಲಿ ಒಬ್ಬ ಚಾಂಡಲನು ಇವನ ಮನೆಯೊಳಗೆ ಬಂದು ವಿಷ್ಣುದಾಸನು ಮಾಡಿ ಇಟ್ಟ ಅಡಿಗೆಯನ್ನು ಕದ್ದು ತೆಗೆದುಕೊಂಡು ಹೊರಟ. ಅವನ

ಹಸಿವೆಯಿಂದ ಕಂಗೆಟ್ಟ ಮುಖವನ್ನೂ ಎಲುವು ಚರ್ಮಮಾತ್ರ ಉಳಿದ ಸೊರಗಿದ ದೇಹವನ್ನೂ ನೋಡಿ ವಿಷ್ಣುದಾಸನಿಗೆ ಕರುಣೆ ಬಂದಿತು ವಿಷ್ಣುದಾಸನು ಬಂದ ಸುಳಿವನ್ನು ತಿಳಿದು ಆ ಚೋರ ಚಂಡಾಲ ಹೆದರಿ ಓಡತೊಡಗಿದ.

ಆಗ ವಿಷ್ಣುದಾಸನು ಕೈಯಲ್ಲಿ ತುಪ್ಪದ ಪಾತ್ರೆಯನ್ನು ಹಿಡಿದು ಅವನ ಬೆನ್ನುಹತ್ತಿದ. ''ನೀನು ಒಣ ಚಪಾತಿಯನ್ನು ಹೇಗೆ ತಿನ್ನುವೆ? ಅದಕ್ಕೆ ತುಪ್ಪ ಹಾಕುತ್ತೇನೆ ತುಸುನಿಲ್ಲು. ತುಪ್ಪದ ಪಾತ್ರೆಯನ್ನು ಹಿಡಿದುಕೊಂಡು ಬಂದಿರುವೆ. ಹಸಿದ ಹೊಟ್ಟೆಗೆ ಒಣ ಅನ್ನ ಹಿತವಲ್ಲ. ತುಪ್ಪ ಬಳಿಯದ ಆಹಾರ ನಿನ್ನ ಮೈಗೆ ಹಿಡಿಯಲಿಕ್ಕಿಲ್ಲ. ರುಚಿ ಹತ್ತುವದಿಲ್ಲ. ಆದುದರಿಂದ ತುಸು ನಿಲ್ಲು. ನಾನು ತುಪ್ಪ ಹಾಕುತ್ತೇನೆ. ಇಲ್ಲಿಯೇ ಕೂಡು. ಮಾಡಿದ ಅಡಿಗೆಯನ್ನು ಬಡಿಸುತ್ತೇನೆ ಓಡಬೇಡ. ನಾನು ನಿನಗೆ ಏನೂ ಮಾಡುವದಿಲ್ಲ'' ಎಂದು ಕೂಗುತ್ತ ವಿಷ್ಣುದಾಸ ಆ ಕಳ್ಳನ ಬೆನ್ನುಹತ್ತಿದ. ಇವನು ತನ್ನ ಬೆನ್ನುಹತ್ತಿ ಬರುವದನ್ನು ನೋಡಿ ಆ ಚಂಡಾಲ ಚೋರ ಮತ್ತಿಷ್ಟು ಗಾಬರಿಯಾಗಿ ಮತ್ತಿಷ್ಟು ಓಡಲಿಕ್ಕೆ ಹತ್ತಿದ. ಹೆದರಿಕೆಯಿಂದ ದಾರಿಯಲ್ಲೇ ಬಿದ್ದುಬಿಟ್ಟ. ಬಿದ್ದ ಪೆಟ್ಟಿನಿಂದ ಅವನಿಗೆ ಎಚ್ಚರತಪ್ಪಿತು. ಅದನ್ನು ನೋಡಿ ವಿಷ್ಣುದಾಸನು ಧಾವಿಸಿ ಬಂದು ಅವನಿಗೆ ಶೈತ್ಯೋಪಚಾರ ಮಾಡಿದ. ನೆತ್ತಿಗೆ ನೀರು ತಟ್ಟಿದ. ತನ್ನ ಮೈಮೇಲಿನ ಬಟ್ಟೆಯಿಂದ ಬೀಸಿ ಗಾಳಿಹಾಕಿದ. ವಿಷ್ಣುದಾಸನು ಮಾಡಿದ ಈ ಶೈತ್ಯೋಪಚಾರದಿಂದ ಎದ್ದು ಕುಳಿತ ಆ ಕಳ್ಳ ಹೊಲೆಯ.

ವಿಷ್ಣುದಾಸ ಎದ್ದು ಕುಳಿತ ಹೊಲೆಯನನ್ನು ನೋಡಿದ. ಆದರೆ ಇದೇನು ಆಶ್ಚರ್ಯ! ಆ ಹೊಲೆಯ ಹೊಲೆಯನಾಗದೆ ಹರಿಯೇ ಆಗಿದ್ದ. ಕಳ್ಳ ಹೋಗಿ ಕೃಷ್ಣನಾಗಿದ್ದ. ಶಂಖಚಕ್ರಗದಾಧಾರಿಯಾದ ಸಾಕ್ಷಾತ್ ನಾರಾಯಣನು ಪೀತಾಂಬರವನ್ನು ಉಟ್ಟುಕೊಂಡು, ಚತುರ್ಬಾಹುವಾಗಿ, ಕಿರೀಟ ಕುಂಡಲಗಳನ್ನು ಧರಿಸಿ, ಶ್ರೀವತ್ಸಲಾಂಛನದಿಂದ ಶೋಭಿಸುತ್ತ ನಿಂತುಕೊಂಡಿದ್ದ. ಅಗಸಿಯ ಹೂವಿನಂತೆ ಕಪ್ಪು ಬಣ್ಣದಿಂದ ಒಪ್ಪುವ ಆ ಶ್ರೀಹರಿಯ ವಕ್ಷಸ್ಥಳದಲ್ಲಿ ಕೌಸ್ತುಭ ರತ್ನವು ಕಂಗೊಳಿಸುತ್ತಿತ್ತು. ಹೀಗೆ ತನ್ನ ಎದುರು ಪ್ರತ್ಯಕ್ಷನಾಗಿ ಬಂದು ನಿಂತ ಶ್ರೀಹರಿಯನ್ನು ನೋಡಿ ಆನಂದತುಂದಿಲನಾದ ವಿಷ್ಣುದಾಸನಿಗೆ ಬಾಯಿಯಿಂದ ಮಾತೇ ಹೊರಡಲಿಲ್ಲ. ನಮಸ್ಕರಿಸಲಿಕ್ಕೂ ಆಗಲಿಲ್ಲ. ಭಕ್ತಿಭಾವಭರಿತನಾಗಿ ಅವನು ಭಗವಂತನನ್ನೆ ಎವೆ ಪಿಳುಕಿಸದೆ ನೋಡುತ್ತ ಗದ್ಗದಿತ ಕಂಠನಾಗಿ ಕುಳಿತುಕೊಂಡ. ಇಂದ್ರಾದಿ ದೇವತೆಗಳು ಆಗ ಅಲ್ಲಿ ಬಂದರು. ಗಂಧರ್ವರು ಗಾಯನ ಮಾಡಿದರು. ಅಪ್ಸರೆಯರು ಕುಣಿದರು. ಮಂಗಳ ವಾದ್ಯಗಳು ದೇವದುಂದುಭಿಗಳು ಮೊಳಗಿದವು.

ಆಗ ನಾರಾಯಣನು ತನ್ನ ಭಕ್ತನಾದ ವಿಷ್ಣುದಾಸನನ್ನು ಅಪ್ಪಿಕೊಂಡು ವಿಮಾನದಲ್ಲಿ ಕೂಡಿಸಿಕೊಂಡು ವೈಕುಂಠಲೋಕಕ್ಕೆ ಕರೆದುಕೊಂಡು ಹೋದ. ಇತ್ತ ಯಜ್ಞದೀಕ್ಷಿತನಾದ ಚೋಳರಾಜನು ವಿಮಾನದಲ್ಲಿ ವಿಷ್ಣುವಿನೊಂದಿಗೆ ಕುಳಿತ ವಿಷ್ಣುದಾಸನನ್ನು ನೋಡಿ ಕೂಡಲೇ ತನ್ನ ಗುರುವಾದ ಮುದ್ಗಲರನ್ನು ಕರೆದು ಸಂಭ್ರಮದಿಂದ ನುಡಿದ.

**ಚೋಳರಾಜ:-** ಪುರೋಹಿತರೇ, ನಾನು ಯಾವ ವಿಷ್ಣುದಾಸನ ಜೊತೆಗೆ ಸ್ಪರ್ಧೆ ಹೂಡಿ ಈ ಯಜ್ಞ ಯಾಗಾದಿಗಳನ್ನು ಮಾಡುತ್ತ ಇರುವೆನೋ. ಆ ವಿಷ್ಣುದಾಸ ಈಗ ನನ್ನ ಕಣ್ಣು ಎದುರೇ ವಿಷ್ಣುವಿನೊಂದಿಗೆ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಪ್ರಯಾಣ ಬೆಳೆಸಿದ. ಆದರೆ ನಾನು ಮಾತ್ರ ನಿಮ್ಮ ನೇತೃತ್ವದಲ್ಲಿ ಯಜ್ಞದೀಕ್ಷೆಯನ್ನು ಕೈಕೊಂಡು ಬೆಂಕಿಯಲ್ಲಿ

ತುಪ್ಪ ಸುರುವುತ್ತ ಇಲ್ಲಿಯೇ ಕೂತುಕೊಂಡೆ. ನಾನು ಬೇಕಾದಷ್ಟು ಅಗ್ನಿಯಲ್ಲಿ ಹೋಮ ಮಾಡಿದೆ. ಬ್ರಾಹ್ಮಣರಿಗೆ ವಿಪುಲವಾದ ದಕ್ಷಿಣೆ ನೀಡಿದೆ. ಶ್ರೋತ್ರಿಯರನ್ನೆಲ್ಲ ದಾನ ದಕ್ಷಿಣೆಗಳಿಂದ ತೃಪ್ತಿಪಡಿಸಿದೆ. ಇಷ್ಟಾದರೂ ಶ್ರೀಹರಿಯು ನನಗೆ ಒಲಿಯಲಿಲ್ಲ. ನನಗೆ ಸದ್ಗತಿಯನೀಯಲಿಲ್ಲ. ನಾರಾಯಣನ ಸಾಕ್ಷಾತ್ಕಾರವು ನನಗೆ ಆಗಲಿಲ್ಲ? ಕೇವಲ ಯಜ್ಞದಾನಗಳಿಂದ ಶ್ರೀಹರಿಯು ಪ್ರಸನ್ನನಾಗುವದಿಲ್ಲ. ಪ್ರತ್ಯಕ್ಷನೂ ಆಗುವದಿಲ್ಲ. ಭಗವದ್ದರ್ಶನಕ್ಕೆ ಭಕ್ತಿ ಒಂದೇ ಮುಖ್ಯ ಕಾರಣ ಎಂದು ಹೇಳಿ, ಆ ಚೋಳರಾಜನು ತನಗೆ ಮಕ್ಕಳು ಇಲ್ಲದ್ದರಿಂದ ತನ್ನ ತಂಗಿಯ ಮಗನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿ, ಸಿಂಹಾಸನದ ಮೇಲೆ ಕೂಡಿಸಿ, ಪಟ್ಟಾಭಿಷೇಕ ಗೈದು, ತಾನು ಯಜ್ಞಮಂಟಪಕ್ಕೆ ಬಂದ. ಅಗ್ನಿಕುಂಡದ ಎದುರು ನಿಂತುಕೊಂಡ. ಕೈಜೋಡಿಸಿದ. ಉಚ್ಚಕಂಠದಿಂದ ಭಕ್ತಿ ಉದ್ರೇಕದಿಂದ ಭಗವಂತನನ್ನು ಪ್ರಾರ್ಥಿಸಿದ. ಭಗವನ್ನಾಮವನ್ನು ಶ್ರದ್ಧಾತಿಶಯದಿಂದ ಮತ್ತೆ ಮತ್ತೆ ಉಚ್ಚರಿಸಿ ಎರಡೂ ಕೈಗಳನ್ನು ಮೇಲೆತ್ತಿ ಶ್ರೀಹರಿಯನ್ನು ಕುರಿತು ಹೇಳಿದ.

**ಚೋಲರಾಜ:-** ಮಹಾವಿಷ್ಣುವೇ, ನಿನಗೆ ಅನಂತ ವಂದನೆಗಳು ನನಗೆ ನಿನ್ನಲ್ಲಿ ಸ್ಥಿರವಾದ ಭಕ್ತಿಯನ್ನು ನೀಡು. ನನ್ನ ಮನಸ್ಸು ವಾಣೀ, ದೇಹ ಮೂರೂ ನಿನ್ನನ್ನೇ ಭಕ್ತಿಯಿಂದ ಸೇವಿಸಲಿ. ಸರ್ವದಾ ನಿನ್ನ ಸೇವೆಯಲ್ಲಿಯೇ ಸವೆಯಲಿ. ನನ್ನ ಬದುಕು ನನ್ನ ಪಂಚಪ್ರಾಣಗಳು ನಿನಗೆ ಅರ್ಪಿತ.

ಹೀಗೆ ನುಡಿದು ಆ ಚೋಳರಾಜನು ಋತ್ವಿಜ, ಪುರೋಹಿತ, ಪ್ರಜಾ, ಪ್ರಧಾನಿ, ಪರಿವಾರ ಜನ ಎಲ್ಲರೂ ನೋಡುತ್ತಿರುವಾಗಲೇ ಅಗ್ನಿಕುಂಡದಲ್ಲಿ ಹಾರಿಕೊಂಡ. ಅವನ ಗುರುವಾದ ಮುದ್ಗಲ ಮುನಿಯು ಸಿಟ್ಟಿನಿಂದ ತನ್ನ ಚಂಡಿಕೆಯನ್ನೇ ಕಿತ್ತಿ ಅಪ್ಪಳಿಸಿದ. ಅಂದಿನಿಂದ ಆ ಮುದ್ಗಲಗೋತ್ರದವರು ಇಂದಿಗೂ ಶಿಖಾರೆ ಹಿತರಾಗಿಯೇ ಉಳಿದುಕೊಂಡಿದ್ದಾರೆ.

ಆ ಕ್ಷಣದಲ್ಲಿಯೇ ಭಕ್ತವತ್ಸಲನಾದ ಅಚ್ಯುತ ಆ ಚೋಳರಾಜನ ಯಜ್ಞವಾಟದ ಅಗ್ನಿಕುಂಡದಿಂದ ದಿಗ್ಗನೇ ಎದ್ದುನಿಂತ. ಚೋಲರಾಜನನ್ನು ಆಲಿಂಗಿಸಿಕೊಂಡ. ತನ್ನ ದಿವ್ಯವಾದ ವಿಮಾನದಲ್ಲಿ ಕೂಡಿಸಿಕೊಂಡು ಅವನಿಗೆ ತನ್ನ ಸಾರೂಪ್ಯ ಮೋಕ್ಷವನ್ನು ಕೊಟ್ಟು ವೈಕುಂಠಮಂದಿರಕ್ಕೆ ಕರೆದುಕೊಂಡು ಹೋದ.

ವಿಷ್ಣುದಾಸ ಹಾಗೂ ಚೋಳರಾಜ ಇವರಿಬ್ಬರ ಅತ್ಯಂತ ಭಕ್ತಿಯಿಂದ ಪರಮಪ್ರೀತನಾದ ಪರಬ್ರಹ್ಮನಾದ ನಾರಾಯಣ ಅವರಿಬ್ಬರನ್ನೂ ಅವರ ಭಕ್ತಿಭಾವದ ನೈರ್ಭಮನದಿಂದ ಪ್ರಸನ್ನನಾಗಿ ತನ್ನ ಪಾರ್ಷದರನ್ನಾಗಿ ನಿಯಮಿಸಿಕೊಂಡ. ಆ ವಿಷ್ಣುದಾಸನೇ ಶ್ರೀಹರಿಯ ಪುಣ್ಯಶೀಲನೆಂಬ ಪಾರ್ಷದನು ಆದ. ಚೋಳರಾಜನು ಸುಶೀಲನೆಂಬ ಹರಿಯ ಪಾರ್ಷದ ಆದ. ಈ ಇಬ್ಬರು ಭೂಲೋಕದ ಭಗವದ್ಭಕ್ತರು ಭಕ್ತ್ಯುದ್ರೇಕದಿಂದ ಭಗವಂತನನ್ನು ಅರ್ಚಿಸಿ, ಮೆಚ್ಚಿಸಿ, ಸಂತೋಷಪಡಿಸಿ, ಉಪಾಸಿಸಿ ಆರಾಧಿಸಿ ಅವನ ವಿಶೇಷ ಪ್ರಸಾದಾತಿಶಯದಿಂದ ವೈಕುಂಠ ಲೋಕದಲ್ಲಿ ಪುಣ್ಯಶೀಲ ಸುಶೀಲ ಎಂಬ ಹೆಸರಿನಿಂದ ಮುಕುಂದ ಮಂದಿರದ ದ್ವಾರಪಾಲಕರಾಗಿ ಶ್ರೀಶನ ಸೇವೆಗೈಯ್ಯುವ ಸೌಭಾಗ್ಯವನ್ನು ಪಡೆದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ವಿಷ್ಣುದಾಸ ಚೋಲರಾಜರಿಗೆ ವೈಕುಂಠಲೋಕ ಪ್ರಾಪ್ತಿ ಎಂಬ ನೂರವಳನೇಯ ಅಧ್ಯಾಯ ಮುಗಿದುದು*

## ಜಯ ವಿಜಯ ದ್ವಾರಪಾಲಕರ ವೃತ್ತಾಂತ | ಅಧ್ಯಾಯ - ೧೦೮

**ಧರ್ಮದತ್ತ:-** ಮಹಾವಿಷ್ಣುವಿನ ದ್ವಾರಪಾಲಕರಾದ ಪುಣ್ಯಶೀಲ ಹಾಗು ಸುಶೀಲ ವೃತ್ತಾಂತವನ್ನು ನಾನು ಕೇಳಿದೆ ತಮ್ಮ ಮುಖದಿಂದ, ಜಯ ವಿಜಯರೆಂಬ ಇನ್ನಿಬ್ಬರು ವೈಕುಂಠ ಲೋಕದ ವಿಷ್ಣುಮಂದಿರದ ದ್ವಾರಪಾಲಕರು ಇರುತ್ತಾರೆಂದು ನಾನು ಕೇಳಿದ್ದೇನೆ. ಅವರಿಗೆ ಇಂಥ ಪುಣ್ಯ ಸ್ಥಾನವು ದೊರೆಯಬೇಕಾದರೆ ಅವರು ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತ ವಿಶೇಷ ಏನು? ಪುಣ್ಯಕರ್ಮ ಯಾವದು? ಇದನ್ನು ಹೇಳಿರಿ.

**ವಿಷ್ಣು ಪಾರ್ಷದರು:-** ಪೂರ್ವಕಾಲದಲ್ಲಿ ತೃಣಬಿಂದು ಮಹಾರಾಜನ ಮಗಳಾದ ದೇವಹೂತಿ, ಕರ್ದಮ ಪ್ರಜಾಪತಿಗಳಿಗೆ ಇಬ್ಬರು ಮಕ್ಕಳಿದ್ದರು. ಹಿರಿಯ ಮಗನ ಹೆಸರು ಜಯ, ವಿಜಯ ಎಂಬುವವ ಕಿರಿಯ ಮಗ. ಅನಂತರ ಆ ಕರ್ದಮ ಮಹರ್ಷಿಗಳಿಂದ ದೇವಹೂತಿಯಲ್ಲಿ ಕಪಿಲ ಎಂಬ ಯೋಗಾಚಾರ್ಯನು ಜನಿಸಿದ. ಸಾಕ್ಷಾತ್ ನಾರಾಯಣನ ಅವತಾರಭೂತನೇ ಆ ಕಪಿಲದೇವ. ಜಯ ವಿಜಯ ಎಂಬವರಿಬ್ಬರೂ ಅವನ ಅಣ್ಣಂದಿರು. ಧರ್ಮಶೀಲರು. ವಿಷ್ಣುವಿನ ಏಕನಿಷ್ಠ ಭಕ್ತರು. ನಾರಾಯಣ ಅಷ್ಟಾಕ್ಷರ ಮಂತ್ರವನ್ನು ಪ್ರತಿದಿನವೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜಪಿಸುತ್ತಿದ್ದ ಅವರ ಈ ಜಪ ತಪೋನುಷ್ಠಾನದಿಂದ ಸುಪ್ರಸನ್ನನಾಗಿ ಅವರ ತೊಗಲ ಗಣ್ಣಿನ ಎದುರು ಪ್ರತ್ಯಕ್ಷವಾಗಿ ಕಾಣಿಸಿಕೊಂಡ ಆ ಮಹಾವಿಷ್ಣು. ಹೀಗೆ ನಿರತಿಶಯವಾದ ಭಕ್ತಿಶ್ರದ್ಧೋಪೇತವಾದ ಜಪ, ಪೂಜೆ ಹಾಗು ಪರ್ಯುಪಾಸನೆಗಳಿಂದ ಪ್ರೀತ ಪ್ರಸನ್ನನಾದ ಪ್ರಭು ಪರಮೇಶ್ವರ ನಾರಾಯಣನು ಪ್ರತಿದಿನವೂ ನೀಡುತ್ತಿದ್ದ ಅವರಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು.

ಒಂದು ದಿನ ಮಹಾರಾಜ ಮರುತ್ತನು ತನ್ನ ಯಜ್ಞಕಾರ್ಯಕ್ಕಾಗಿ ನಿಮಂತ್ರಿಸಿದ ಈ ಜಯ ವಿಜಯ ಸಹೋದರರನ್ನು. ಆ ಇಬ್ಬರೂ ಕರ್ದಮಕುಮಾರರು ಶ್ರೌತಭಾಗದಲ್ಲಿ ಪರನಿಷ್ಠಿತರು. ಯಜ್ಞಭಾಗದಲ್ಲಿ ಒಳ್ಳೇ ಅಭಿಜ್ಞರು. ಶ್ರೌತ ಕರ್ಮದಲ್ಲಿ ವಿಶ್ರುತರಾದ ಈ ಸೋದರರನ್ನು ದೇವತೆಗಳೂ ಗೌರವಿಸುತ್ತಿದ್ದರು. ಋಷಿಗಳು ಸೇವಿಸುತ್ತಿದ್ದರು. ಸಮ್ರಾಟ್ ಮರುತ್ತನಿಂದ ಅತ್ಯಾದರ ಪೂರ್ವಕವಾಗಿ ಉಪನಿಮಂತ್ರಿತರಾದ ಈ ವಿದ್ವದ್ಬಂಧುಗಳು ಆ ಮಹಾರಾಜನ ಯಜ್ಞವಾಟಕ್ಕೆ ತೆರಳಿದರು. ಅಲ್ಲಿ ಜಯನಿಗೆ ಬ್ರಹ್ಮಪಟ್ಟ. ವಿಜಯ ಯಾಜಕ. ಈ ಇಬ್ಬರೂ ಸೋದರರ ಸಮರ್ಥ ನೇತೃತ್ವದಲ್ಲಿ ವೈಭವದಿಂದಲೇ ನಡೆಯಿತು ಮರುತ್ತನ ಮಹಾಯಜ್ಞ. ಸಾಂಗವಾಗಿ ಪೂರ್ಣವಾಯಿತು. ಅವಭೃಥ ಸ್ನಾನಾನಂತರದಲ್ಲಿ ವಿಪುಲವಾಗಿ ದಕ್ಷಿಣೆ ನೀಡಿದ ಆ ಮರುತ್ತ ಸಾರ್ವಭೌಮ. ಅವನು ಕೊಟ್ಟ ಸಮೃದ್ಧವಾದ ಪ್ರಭೂತ ದಾನ ದಕ್ಷಿಣೆಯ ದ್ರವ್ಯದ ಮೊತ್ತವನ್ನು ಹೊತ್ತು ತಂದರು ಜಯ ವಿಜಯರು. ನೇರವಾಗಿ ಅವರಿಬ್ಬರು ರಾಜಧಾನಿಯಿಂದ ತಮ್ಮ ಅರಣ್ಯಕ ಪುಣ್ಯಾಶ್ರಮದ ಮನೆಗೆ ಬಂದು ಬಳಿಕ ಇಬ್ಬರೂ ಹಣವನ್ನು ಹಂಚಿಕೊಳ್ಳಲು ಮುಂದಾದರು. ಆ ಹಣದ ಹಂಚಿಕೆಯಲ್ಲಿ ಆ ಇಬ್ಬರು ಅಣ್ಣ ತಮ್ಮಂದಿರಲ್ಲಿ ವಿರಸವಾಯಿತು. ಮುಂದೆ ಅದೇ ವಿರಸ ವಿಕೋಪಕ್ಕೆ ಹೋಗಿ ವಿರೋಧದಲ್ಲಿ ಪರ್ಯವಸಾನವಾಗಿ ವಿದ್ವೇಷಕ್ಕೆ ನಾಂದೀಯಾಯಿತು. ''ನಾವಿಬ್ಬರೂ ತಂದ ಹಣವನ್ನು ನಮ್ಮಿಬ್ಬರಲ್ಲಿ ಸಮಾನವಾಗಿ ಹಂಚು'' ಇದು ಜಯನ ವಾದ 'ಯಾರು ಎಷ್ಟು ಎತ್ತಿ ಹೊತ್ತು ತಂದಿರುವವೊ ಅವರೇ ಆ ಹಣಕ್ಕೆ ಭಾಗೀದಾರರು. ಯಜ್ಞದಲ್ಲಿ ಯಾರ ಕೈಯಲ್ಲಿ ಎಷ್ಟು ಬಂದಿದೆಯೊ ಅದೆಲ್ಲವೂ ಅವರದೇ

ಸೊತ್ತು'' ಇದು ವಿಜಯಯನ ವಾದ. ಈ ವಾದ ವಿರೋಧ ಇಬ್ಬರೂ ಶಾಂತಿ ಸಂಯಮನದ ಸೀಮೆಯನ್ನು ಮೀರಿ ಹಾರಿಬರುವಂತೆ ಮಾಡಿತು. ಕೋಪದಿಂದ ಕುದಿಯುತ್ತಿರುವ ಜಯ ಸೋದರನಾದ ವಿಜಯನಿಗೆ ಶಾಪಹಾಕುತ್ತ ನುಡಿದ.

**ಜಯ:-** ನಾವಿಬ್ಬರೂ ರಾಜನಿಂದ ಆಹೂತರು. ದೀಕ್ಷಾದಾಕ್ಷ್ಯದಿಂದ ಯಶಸ್ವಿಯಾಗಿ ನಿರ್ವಹಿಸಿದ್ದೇವೆ ಈ ಯಜ್ಞ ಸಮಾರಂಭವನ್ನು. ಇದಕ್ಕಾಗಿ ನಮಗೆ ರಾಜನು ನೀಡಿದ ದಕ್ಷಿಣಾದ್ರವ್ಯ ಎಲ್ಲವೂ ಇಬ್ಬರಿಗೂ ಸಮಾನವಾಗಿ ಸಲ್ಲಬೇಕು. ನೀನು ಅದನ್ನು ಸ್ವಾರ್ಥಿಯಾಗಿ ನೀನೊಬ್ಬನೇ ಇಟ್ಟುಕೊಂಡು ನನಗೆ ಕೊಡುವದಿಲ್ಲ ಎಂದು ಅನ್ನುತ್ತಿರುವೆ. ಆದುದರಿಂದ ನೀನು ಭೂಲೋಕದಲ್ಲಿ ಮೊಸಳೆಯಾಗಿ ಹುಟ್ಟು.

ಜಯನ ಈ ಶಾಪಾಕ್ಷರವನ್ನು ಕೇಳಿದ ವಿಜಯನು ತಾನೂ ಪರಿಕುಪಿತನಾಗಿ ಜಯನಿಗೆ ಶಾಪವನ್ನು ಚಲ್ಲಿದ ಅವನ ಶಾಪಕ್ಕೆ ಪ್ರತಿಯಾಗಿ.

**ವಿಜಯ:-** ನೀನು ಮದಾಂಧನಾಗಿ ನನಗೆ ಶಾಪವನ್ನು ಕೊಟ್ಟೆ. ಆದರೂ ನೀನೂ ಕೂಡ ಆನೆಯಾಗಿ ಭೂಲೋಕದಲ್ಲಿ ಹುಟ್ಟು.

ಹೀಗೆ ಪರಸ್ಪರ ಘೋರ ಶಾಪವನ್ನು ಈಡಾಡಿ ಇಬ್ಬರೂ ಧಾವಿಸಿದರು ಭಗವಂತನ ಕಡೆಗೆ. ತಮ್ಮಿಬ್ಬರ ಕಲಹ ಕಥೆಯನ್ನೂ ಶಾಪದ ವಿನಿಮಯ ವೃತ್ತಾಂತವನ್ನೂ ತಿಳಿಸಿದರು. ಹೇಗಾದರೂ ಮಾಡಿ ಆ ಮೊಸಳೆ ಮತ್ತು ಮದ್ದಾನೆ ಜನ್ಮದಿಂದ ಪಾರುಮಾಡಲು ಕೇಳಿಕೊಂಡರು.

**ನಾರಾಯಣ:-** ನೀವಿಬ್ಬರೂ ನನ್ನ ಭಕ್ತರು. ಎಂದಿಗೂ ಸುಳ್ಳಾಗುವದಿಲ್ಲ ಹರಿಭಕ್ತರ ಮಾತು. ನಾನು ಭಕ್ತರ ವಚನವನ್ನು ಸುಳ್ಳು ಮಾಡಿಕೊಡುವದೂ ಇಲ್ಲ. ಹಿಂದೆ ಪ್ರಲ್ಹಾದನ ಮಾತಿನಿಂದ ಸ್ತಂಭದಿಂದ ಸಂಭವಿಸಿದೆ. ಅದರಂತೆ ನೀವು ನನ್ನ ಭಕ್ತರಾದುದರಿಂದ ಸುಳ್ಳಾಗಲಾರದು ಶಾಪ. ಶಾಪವನ್ನು ಅನುಭವಿಸಿ ಮತ್ತೆ ನನ್ನ ಶಾಶ್ವತವಾದ ಹರಿಪದವನ್ನು ಹೊಂದುವಿರಿ.

ಈ ಭಗವದ್ವಾಕ್ಯದಂತೆ ಆ ಜಯ ವಿಜಯರಿಬ್ಬರೂ ಗಂಡಕೀನದಿಯ ನೀರಿನಲ್ಲಿ ಮತ್ತು ತೀರದಲ್ಲಿ ಮೊಸಳೆ ಆನೆಯಾಗಿ ಜನಿಸಿದರು. ಇಬ್ಬರಿಗೂ ಜನ್ಮಾಂತರದ ನೆನಪು ಅಚ್ಚಳಿಯದೆ ಉಳಿದಿತ್ತು. ಒಂದು ದಿನ ಆನೆಯು ಸ್ನಾನಮಾಡಲಿಕ್ಕೆಂದು ಗಂಡಕೀ ನದಿಗೆ ಹೋಗಿದ್ದಿತು. ಅದೇ ನದಿಯಲ್ಲಿ ಇರುವ ಮೊಸಳೆಯು ಆನೆಯು ನೀರಿಗೆ ಇಳಿದಿದ್ದನ್ನು ನೋಡಿತು. ಒಮ್ಮೆಲೇ ಜನ್ಮಾಂತರದ ವೈರದ ಭಾವನೆ ನುಗ್ಗಿ ಬಂದಿತು ಅದರ ಮನಸ್ಸಿನಲ್ಲಿ. ಹೀಗೆ ದ್ವೇಷಾಗ್ನಿಯ ಕಿಚ್ಚು ಪೂರ್ವಸ್ಮರಣೆಯಿಂದ ದಿಗ್ಗನೇ ಎದ್ದು ಉರಿಯತೊಡಗಿದಾಗ ಆ ಮೊಸಳೆಯ ರೋಷದಿಂದ ಓಡಿ ಬಂದು ರೊಚ್ಚಿನಿಂದ ಕಚ್ಚ ಹಿಡಿಯಿತು ಆ ಆನೆಯ ಕಾಲನ್ನು.

ಮೊಸಳೆಯ ಹಿಡಿತವನ್ನು ಬಿಡಿಸಿಕೊಳ್ಳಲಿಕ್ಕಾಗಿ ತನ್ನ ಬಲವನ್ನೆಲ್ಲಉಪಯೋಗಿಸಿ ಕೊಸರಾಡಿತು ಆ ಮದ್ದಾನೆ. ಆದರೆ ಸ್ಥಾನಬಲದಿಂದ ಕಸುವುಗೊಂಡ ಆ ಮೊಸಳೆಯು ತನ್ನ ಹಿಡಿತವನ್ನು ಕೊಂಚವೂ ಸಡಿಲಿಸದೆ ಆ ಮದ್ದಾನೆಯನ್ನು ಬಲಾತ್ಕಾರದಿಂದ ಹಣ್ಣುಗಾಯಿ ನೀರುಗಾಯಿ ಮಾಡಿ ದಣಿಸಿ ದುಃಖದೀರ್ಣವನ್ನಾಗಿ ಮಾಡಿತು. ಆಗ ಮೊಸಳೆಯ ವಜ್ರ ದಂಷ್ಟ್ರಾಘಾತದಿಂದ ಕ್ಷೀಣಪ್ರಾಣವಾದ ಆ ಆನೆಯು ಶ್ರೀಹರಿಯನ್ನು ನೆನೆಯಿತು. ಭಕ್ತಿಯಿಂದ ಸ್ಮರಣೆಮಾಡಿದ ಕೂಡಲೇ ಸಾಕ್ಷಾತ್ ಶ್ರೀಹರಿಯು ಅಲ್ಲಿ

ಪ್ರಾದುರ್ಭೂತನಾದ. ತನ್ನ ಸುದರ್ಶನಚಕ್ರವನ್ನು ಬಿಟ್ಟು ಆ ಆನೆ-ಮೊಸಳೆ ಎರಡನ್ನೂ ಉದ್ಧರಿಸಿದ. ವೈಕುಂಠಲೋಕಕ್ಕೆ ತನ್ನ ಸಾರೂಪ್ಯವನ್ನು ಕೊಟ್ಟು ಕರೆದೊಯ್ದ.

ಅಂದಿನಿಂದ ಆ ಗಂಡಕೀನದಿಯ ತೀರದಲ್ಲಿದ್ದ ಆ ಸ್ಥಾನವು ಹರಿಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಆ ಹರಿಕ್ಷೇತ್ರದಲ್ಲಿಯ ಕಲ್ಲುಗಳೂ ಕೂಡ ಇಂದಿಗೂ ಸುದರ್ಶನ ಚಕ್ರದ ಸಂಪರ್ಕದಿಂದ ಚಕ್ರವುಳ್ಳ ಸಾಲಿಗ್ರಾಮ ಶಿಲೆಗಳಾಗಿ ಮಾರ್ಪಟ್ಟಿವೆ. ಆ ಇಬ್ಬರೂ ಸೊದರರಾದ ಜಯ ವಿಜಯರು ಶ್ರೀಹರಿಯ ಪರಮಾನುಗ್ರಹದಿಂದ ತಮ್ಮ ಮೊದಲಿನ ಮೊಸಳೆ ಹಾಗೂ ಮದ್ದಾನೆಯ ಜನ್ಮವನ್ನು ನೀಗಿ ವೈಕುಂಠ ಲೋಕಕ್ಕೆ ಹೋಗಿ ಜಯ ವಿಜಯರೆಂಬ ಹೆಸರಿನ ದ್ವಾರಪಾಲಕರಾಗಿ ನಿಯಮಿಸಲ್ಪಟ್ಟರು.

ಆದುದರಿಂದ ಧರ್ಮದತ್ತ, ನೀನೂ ಕೂಡ ನಿತ್ಯವೂ ವಿಷ್ಣುವಿನ ವ್ರತವನ್ನು ಮಾಡುತ್ತ ಮಾತ್ಸರ್ಯ, ದಂಭ, ಮದ, ಕೋಪ ಮುಂತಾದ ದುರ್ಗುಣಗಳನ್ನು ಬಿಟ್ಟು ಎಲ್ಲರನ್ನೂ ಸಮದೃಷ್ಟಿಯಿಂದ ಕಾಣುತ್ತ ಕಾರ್ತಿಕ ಮಾಸದಲ್ಲಿ ಪ್ರಾತಃಸ್ನಾನವನ್ನೂ ಏಕಾದಶಿ ವ್ರತವನ್ನೂ ಆಚರಿಸು. ತುಳಸೀ ಗಿಡದ ಬುಡದಲ್ಲಿ ಮಾಸಾಭಿಮಾನಿಯಾದ ವಿಷ್ಣುವನ್ನು ಪೂಜಿಸು. ಬ್ರಾಹ್ಮಣರಿಗೆ ಗೋದಾನ ನೀಡು. ನಿಷಿದ್ಧವಾದ ಪದಾರ್ಥವನ್ನು ತಿನ್ನಬೇಡ.

**ನಾರದ:-** ಧರ್ಮದತ್ತನಿಗೆ ಹೀಗೆ ಎಲ್ಲ ಕಾರ್ತಿಕ ಮಾಸದ ಮಹಿಮೆಯನ್ನು ಉಪದೇಶಿಸಿ ಕಲಹೆಯೊಂದಿಗೆ ವಿಮಾನಾರೂಢನಾಗಿ ವೈಕುಂಠಲೋಕಕ್ಕೆ ತೆರಳಿದರು. ಆ ವಿಷ್ಣುಪಾರ್ಷದರು. ಅದನ್ನು ನೋಡಿ ಧರ್ಮದತ್ತನಿಗೆ ಕಾರ್ತಿಕ ವ್ರತದಲ್ಲಿ ವಿಶೇಷ ಶ್ರದ್ಧೆ ಉತ್ಪನ್ನವಾಯಿತು. ತಾನು ಬದುಕಿ ಇರುವವರೆಗೂ ತಪ್ಪದೇ ಕಾರ್ತಿಕ ವ್ರತವನ್ನು ಆಚರಿಸದ. ಆ ಪುಣ್ಯದಿಂದ ಆ ಮರ್ತ್ಯದೇಹವು ಬಿದ್ದು ಹೋದ ನಂತರ ತನ್ನ ಇಬ್ಬರೂ ಮಡದಿಯರೊಂದಿಗೆ ವೈಕುಂಠ ಲೋಕಕ್ಕೆ ಪ್ರಯಾಣ ಬೆಳೆಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಹೇಶ ನಾರದ ಸಂವಾದ ಎಂಬ ನೂರ ಎಂಟನೇಯ ಅಧ್ಯಾಯ ಮುಗಿದುದು*

—o—

## ಕೃಷ್ಣಾ ವೇಣೀ ಮುಂತಾದ ನದಿಗಳ ಮಹಿಮೆ | ಅಧ್ಯಾಯ - ೧೦೯

**ಪೃಥುರಾಜ:-** ಪೂಜ್ಯರೇ, ಕೃಷ್ಣಾ ವೇಣೀ ಸಂಗಮದಲ್ಲಿ ವ್ಯಾಪಾರಿಯು ಸ್ನಾನ ಮಾಡಿದ ಕೂಡಲೇ ವಿಷ್ಣುದೂತರು ಬಂದು ಆ ವ್ಯಾಪಾರಿಯ ದೇಹದಲ್ಲಿ ಪ್ರವೇಶಿಸಿದ ಕಲಹಾ ಎಂಬ ಪಿಶಾಚಿಯನ್ನು ಹೊರಗೆ ಹಾಕಿದರು ಎಂದು ತಾವು ಹಿಂದೆ ಹೇಳಿದಿರಿ. ಈ ಅಸಾಧಾರಣವಾದ ಪುಣ್ಯಪ್ರಭಾವ ಆ ಕ್ಷೇತ್ರದ್ದೋ ಆ ನದಿಗಳದ್ದೋ? ಇದನ್ನು ನನಗೆ ಹೇಳಿರಿ.

**ನಾರದ:-**

**ಕೃಷ್ಣಾ ಕೃಷ್ಣತನುಃ ಸಾಕ್ಷಾತ್ ವೇಣ್ಯಾ ದೇವೋ ಮಹೇಶ್ವರಃ ।**
**ತತ್ಸಂಗಮ ಪ್ರಭಾವಂತು ನಾಲಂ ವಕ್ತುಂ ಚತುರ್ಮುಖಃ ॥**

ಕೃಷ್ಣಾನದಿಯು ಕೃಷ್ಣನ ದೇಹದಿಂದಲೇ ಹುಟ್ಟಿದೆ. ವೇಣೀ ನದಿಯು ಮಹಾದೇವರ ದೇಹದಿಂದ ಜನಿಸಿದೆ. ಇವೆರಡರ ಸಂಗಮದ ಪ್ರಭಾವವನ್ನು ನಾಲ್ಕು ಮುಖದ

ಬ್ರಹ್ಮದೇವರಿಂದಲೂ ಹೇಳಲು ಸಾಧ್ಯವಿಲ್ಲ. ಆದರೂ ನಾನು ಯಥಾಶಕ್ತಿ ನನ್ನ ಬುದ್ಧಿಶಕ್ತಿಗೆ ಅನುಸರಿಸಿ ಆ ಕೃಷ್ಣಾ ವೇಣೀ ನದಿಗಳ ಉತ್ಪತ್ತಿಯ ವಿಷಯವನ್ನು ಹೇಳುತ್ತೇನೆ ಕೇಳು.

ಹಿಂದೆ ಚಾಕ್ಷುಷ ಮನ್ವಂತರದಲ್ಲಿ ಬ್ರಹ್ಮದೇವರು ಒಂದು ಯಜ್ಞವನ್ನು ಸಹ್ಯಾದ್ರಿ ಶಿಖರದಲ್ಲಿ ಪ್ರಾರಂಭಿಸಬೇಕೆಂದು ನಿರ್ಧರಿಸಿದರು. ಅನಂತರ ಅದಕ್ಕಾಗಿ ಬೇಕಾದ ಸಾಹಿತ್ಯ ಸಂಭಾರ ಸಲಕರಣೆಗಳನ್ನು ಒದಗಿಸಿಕೊಂಡು ಹರಿಹರರಿಂದ ಒಡಗೂಡಿ ಸಹ್ಯಾದ್ರಿಶೈಲದ ಶಿಖರದ ಸೀಮೆಯಲ್ಲಿ ಕೈಕೊಂಡರು ಮಹಾಯಜ್ಞವನ್ನು ಭೃಗು ಮೊದಲಾದ ಮಹಾಮುನಿಗಳು ಸುಮುಹೂರ್ತದಲ್ಲಿ ದೀಕ್ಷಾವಿಧಾನಕ್ಕಾಗಿ ಎಲ್ಲ ಋಷಿಮುನಿಗಳ ಸಮೂಹವನ್ನು ಆಹ್ವಾನಕೊಟ್ಟು ಕರಿಸಿ ಋತ್ವಿಕ್ ವರಣೆಯನ್ನು ಕೊಟ್ಟರು. ವೈಭವದಿಂದ ಯಜ್ಞವು ನಡೆಯಿತು. ಬ್ರಹ್ಮದೇವರ ಹಿರಿಯ ಹೆಂಡತಿಯಾದ ಸ್ವರಾ (ಸರಸ್ವತಿ) ದೇವಿಯನ್ನು ವಿಷ್ಣುವು ದೀಕ್ಷಾ ಗ್ರಹಣಕ್ಕಾಗಿ ಬೇಗ ಬರಲಿಕ್ಕೆ ಹೇಳಿದ. ಆದರೆ ಸ್ವರಾದೇವಿಯ ವಿಷ್ಣುವಿನ ಅವಸರವನ್ನು ಗಣಿಸದೆ ನಿದಾನವಾಗಿ ಬರುತ್ತಲಿದ್ದಳು. ಅವಳು ಸರಿಯಾದ ಮುಹೂರ್ತದಲ್ಲಿ ಯಜ್ಞಮಂಟಪಕ್ಕೆ ಬರಲಿಲ್ಲ. ಆಗ ಅಲ್ಲಿಯೇ ಯಜ್ಞಕುಂಡದ ಬಳಿಯಲ್ಲಿ ವೇದಿಕೆಯ ಮೇಲೆ ಕುಳಿತಿರುವ ಭೃಗು ಋಷಿಯು ವಿಷ್ಣುವನ್ನು ಕೇಳಿದ.

**ಭೃಗು :-** ಮಹಾವಿಷ್ಣೋ, ಬ್ರಹ್ಮದೇವರ ಹಿರಿಯ ಹೆಂಡತಿಯಾದ ಸ್ವರಾದೇವಿಯನ್ನು ನೀನೇ ಸ್ವಂತ ಹೋಗಿ ಕರೆದು ಬಂದಿರುವೆ. ಆದರೂ ಅವಳು ಈಗ ಇಲ್ಲಿಗೆ ಬೇಗ ಬರಲಿಲ್ಲ. ಈಗ ದೀಕ್ಷಾಗ್ರಹಣದ ಮುಹೂರ್ತವು ಮೀರಿ ಹೋಗುತ್ತದೆ. ಆ ಮುಹೂರ್ತವು ಮೀರಿದ ಬಳಿಕ ದೀಕ್ಷಾವಿಧಿಯನ್ನು ಹೇಗೆ ಪೂರೈಸುವದು?

**ವಿಷ್ಣು:-** ಸ್ವರಾದೇವಿಯು ಬೇಗ ಬಾರದ್ದಿದರೆ ಮುಹೂರ್ತವನ್ನು ಮೀರಿಸುವದು ಬೇಡ. ಬ್ರಹ್ಮನ ಮತ್ತೊಬ್ಬ ಮಡದಿಯಾದ ಗಾಯತ್ರಿಯನ್ನು ಬ್ರಹ್ಮನ ಬದಿಯಲ್ಲಿ ಕೂಡಿಸಿ ದೀಕ್ಷಾವಿಧಿಯನ್ನು ಪೂರೈಸಿರಿ. ಗಾಯಿತ್ರಿಯು ಕೂಡ ಬ್ರಹ್ಮಭಾರ್ಯೆಯೇ ಅಲ್ಲವೇ?

ಹೀಗೆ ವಿಷ್ಣು ನುಡಿದ ಕೂಡಲೇ ರುದ್ರದೇವರು ಸಂತೋಷಪೂರ್ವಕವಾಗಿ ಅನುಮೋದಿಸಿದರು ಈ ವಿಷ್ಣುವಿನ ವಾಕ್ಯವನ್ನು. ಆಗ ಕೂಡಲೇ ಭೃಗುಋಷಿಯು ಗಾಯತ್ರಿಯನ್ನು ಬ್ರಹ್ಮದೇವರ ಬಲಬದಿಯಲ್ಲಿ ಕೂಡಿಸಿ ಯಜ್ಞ ದೀಕ್ಷಾವಿಧಿಯನ್ನು ಸಾಂಗವಾಗಿ ನೇರವೇರಿಸಿದ. ದೀಕ್ಷಾವಿಧಿಯನ್ನು ಮಾಡಿ ಮುಗಿಸುವಷ್ಟರಲ್ಲಿ ಸ್ವರಾದೇವಿಯು ಆ ಯಜ್ಞಮಂಟಪಕ್ಕೆ ಬಂದಳು. ಅವಳು ಬರುವಷ್ಟರಲ್ಲಿ ಬ್ರಹ್ಮದೇವರು ಗಾಯತ್ರಿಯೊಡನೆ ಆ ಯಜ್ಞದ ದೀಕ್ಷೆಯನ್ನು ಕೈಕೊಂಡುಬಿಟ್ಟದ್ದರು. ಅದನ್ನು ನೋಡಿ ಸ್ವರಾದೇವಿಯು ಕಡುಕೋಪಗೊಂಡು ನುಡಿಕಿಡಿಗಳನ್ನು ಉದುರಿಸಿದಳು.

**ಸ್ವರಾ:-** ದೇವತೆಗಳೇ, ನನ್ನ ಸ್ಥಾನದಲ್ಲಿ ನನಗಿಂತ ಕಿರಿಯಳಾದ ಗಾಯತ್ರಿಯನ್ನು ನೀವೆಲ್ಲರೂ ತಂದು ಕೂಡಿಸಿದ್ದೀರಿ. ಆದುದರಿಂದ ನೀವೆಲ್ಲರೂ ಜಲರಾಗಿರಿ ಮತ್ತು ಬ್ರಹ್ಮದೇವರ ದಕ್ಷಿಣಭಾಗದಲ್ಲಿ ನನ್ನ ಆಸನದ ಮೇಲೆ ಕುಳಿತ ಈ ಗಾಯತ್ರೀ ದೇವಿಯು ಯಾರಿಗೂ ಕಾಣದಂತೆ ಅದೃಷ್ಯ ರೂಪಳಾಗಿ ನದಿಯಾಗಿ ಹರಿಯಲಿ. ದೇವೋತ್ತಮರಾದ ವಿಷ್ಣು, ಶಿವ, ಬ್ರಹ್ಮರೂ ಜಲರೂಪರಾಗಿ ನದಿಯಾಗಿ ಹರಿಯಲಿ.

ಅವಳ ಈ ಶಾಪವನ್ನು ಕೇಳಿ ಗಾಯತ್ರಿಯು ಕುಪಿತಳಾಗಿ ಪ್ರತಿಶಾಪ ಕೊಡಲು ಎದ್ದು ನಿಂತಳು. ದೇವತೆಗಳು ತಡೆದರೂ ಕೇಳದೇ ಸ್ವರಾದೇವಿಗೆ ಪ್ರತಿಶಾಪವನ್ನು ಇತ್ತಳು.

**ಗಾಯತ್ರೀ:-** ಬ್ರಹ್ಮದೇವರು ನಿನಗೆ ಒಬ್ಬಳಿಗೇ ಪತಿಯಲ್ಲ. ನನಗೂ ಅವರು ಕೈಹಿಡಿದ ಗಂಡ. ಅವರ ಪಕ್ಕದಲ್ಲಿ ಕುಳಿತು ಯಜ್ಞದೀಕ್ಷೆಯನ್ನು ಕೈಕೊಳ್ಳಲು ನಿನಗೆ ಇದ್ದಷ್ಟು ಅಧಿಕಾರ ನನಗೂ ಕೂಡ ಇದೆ. ನಾನು ಕೂಡ ಆ ಬ್ರಹ್ಮದೇವರ ಧರ್ಮಪತ್ನಿ. ಅವರು ಆಜ್ಞೆ ಮಾಡಿದರೂ ನೀನು ಸಮಯಕ್ಕೆ ಸರಿಯಾಗಿ ಬರಲಿಲ್ಲ. ಸಡಗರ ಶೃಂಗಾರ ಮಾಡುತ್ತ ತಡಮಾಡಿದೆ. ಮುಹೂರ್ತ ಮೀರಿ ಹೋಗುತ್ತಲಿತ್ತು. ಅದಕ್ಕಾಗಿ ಮಹಾವಿಷ್ಣು ನನಗೆ ನನ್ನ ಪ್ರೀತಿಯ ಪತಿಯ ಪಕ್ಕದಲ್ಲಿ ಕುಳಿತು ದೀಕ್ಷಾವಿಧಿಯನ್ನು ಸಾಂಗಗೊಳಿಸಲು ಆದೇಶವಿತ್ತ. ವಿಷ್ಣುವಿನ ಆಜ್ಞೆ ಎಲ್ಲರಿಗೂ ಶಿರೋಮಾನ್ಯ. ನಿನ್ನ ವಿಲಂಬದಿಂದ ಮುಹೂರ್ತ ತಪ್ಪಿ ಯಜ್ಞವೇ ನಿಂತುಹೊಗುತ್ತಿತ್ತು. ನಾನು ಸಕಾಲದಲ್ಲಿ ಬಂದು ನಮ್ಮ ಪತಿದೇವರ ಪುಣ್ಯಕಾರ್ಯವನ್ನು ಯಥಾಸಾಂಗ ನೆರವೇರಿಸಿದೆ. ವಿಷ್ಣು ಬಂದು ಕರೆದರೂ ಹೊತ್ತಿಗೆ ಸರಿಯಾಗಿ ಬಾರದಿದ್ದುದು ನಿನ್ನದೇ ತಪ್ಪು. ನಿನ್ನಲ್ಲಿ ತಪ್ಪು ಇಟ್ಟುಕೊಂಡು ನನಗೆ ನೀನು ವ್ಯರ್ಥವಾಗಿ ಶಾಪಕೊಟ್ಟೆ. ಆದುದರಿಂದ ನೀನು ಕೂಡ ನನ್ನಂತೆ ಗುಪ್ತನದಿಯಾಗಿ ಹರಿ.

ಗಾಯತ್ರಿಯ ಈ ಶಾಪವನ್ನು ಕೇಳಿ ಎಲ್ಲ ದೇವತೆಗಳು ಹೆದರಿ ಸ್ವರಾದೇವಿಗೆ (ಸರಸ್ವತಿಗೆ) ಪ್ರಾರ್ಥಿಸಿದರು.

**ದೇವತೆಗಳು:-** ದೇವಿ, ನಿಮ್ಮಿಬ್ಬರು ಅಕ್ಕತಂಗಿಯರ ಕಲಹದಲ್ಲಿ ಬ್ರಹ್ಮಾದಿ ದೇವತೆಗಳು ಎಲ್ಲರೂ ಕರಗಿ ನೀರಾಗಿ ಹೋಗುವ ಪ್ರಸಂಗಬಂದಿದೆ. ಎಲ್ಲ ದೇವತೆಗಳು ನದಿಯಾಗಿ ಬಿಟ್ಟರೆ ಮುಂದೇನು ಗತಿ? ನೀವಿಬ್ಬರು ಅಕ್ಕತಂಗಿಯರು ಎಂಥ ಅವಿವೇಕದ ಹೆಜ್ಜೆ ಇಟ್ಟಿರಿ? ನೀವಿಬ್ಬರೂ ಈಗಲೇ ನಿಮ್ಮ ನಿಮ್ಮ ಶಾಪಗಳನ್ನು ಮರಳಿ ತೆಗೆದುಕೊಳ್ಳಿರಿ.

**ಸ್ವರಾ:-** ದೇವೋತ್ತಮರೇ, ನೀವು ಯಜ್ಞವನ್ನು ಪ್ರಾರಂಭಿಸುವಾಗ ಗಣಪತಿಯ ಪೂಜೆಯನ್ನೇ ಮಾಡಲಿಲ್ಲ. ಆದುದರಿಂದಲೇ ನಿಮ್ಮ ಯಜ್ಞಕಾರ್ಯಕ್ಕೆ ದೊಡ್ಡವಿಘ್ನ ಉಪಸ್ಥಿತವಾಗಿದೆ. ಒಮ್ಮೆ ಶಾಪಕೊಟ್ಟ ಬಳಿಕ ಅದನ್ನು ಮರಳಿ ತೆಗೆದುಕೊಳ್ಳಲು ಬರುವದಿಲ್ಲ. ಪತಿವ್ರತೆಯರಾದ ನಮ್ಮಿಬ್ಬರು ಬ್ರಹ್ಮಸತಿಯರ ಮಾತು ಎಂದೂ ಹುಸಿಯಾಗಲಾರದು. ಆದುದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಅಂಶದಿಂದ ಜಡರಾಗಿ ನೀರಾಗಿ ಹರಿಯಿರಿ. ನಾವಿಬ್ಬರೂ ಅಕ್ಕತಂಗಿಯರು ನದಿಯಾಗಿ ನೆಲದಲ್ಲಿ ಒಂದು ಅಂಶದಲ್ಲಿ ಹರಿಯುತ್ತೇವೆ.

ಸರಸ್ವತಿಯು (ಸ್ವರಾದೇವಿಯ) ಶಾಪದಿಂದ ಎಲ್ಲ ದೇವತೆಗಳು ಜಡರಾಗಿ ಜಲರೂಪದಿಂದ ನದಿಯಾಗಿ ಹರಿದರು. ವಿಷ್ಣು ತನ್ನ ಅಂಶದಿಂದ ಕೃಷ್ಣಾನದಿ ಆಗಿ ಹರಿದ. ಶಂಕರ ವೇಣೀ ನದಿಯಾಗಿ ಪ್ರವಹಿಸಿದ. ಬ್ರಹ್ಮದೇವರು ಕಕುದ್ಮತಿ ನದಿಯಾಗಿ ಹರಿದ. ಉಳಿದ ಎಲ್ಲ ದೇವತೆಗಳು ತಮ್ಮ ತಮ್ಮ ಅಂಶದಿಂದ ಪೂರ್ವವಾಹಿನೀ ನದಿಯಾಗಿ ಹರಿದರು. ಗಾಯತ್ರೀ ಸರಸ್ವತಿಯರು. ಪಶ್ಚಿಮಾಭಿಮುಖರಾಗಿ ಹರಿದರು. ಅವೆರಡು ನದಿಗಳು ಮುಂದೆ ಸಂಗಮಿಸಿ ಸಾವಿತ್ರೀ ನದಿ ಎಂದು ಒಂದೇ ಹೆಸರನ್ನು ಹೊಂದಿ ಪ್ರವಹಿಸಿತು. ಆಗ ಬ್ರಹ್ಮದೇವರು ಹರಿಹರ ಇಬ್ಬರನ್ನು ಆ ಯಜ್ಞದಲ್ಲಿ ಸ್ಥಾಪಿಸಿದರು. ಅವರಿಗೆ ಮಹಾಬಲ ಅತಿಬಲ ಎಂಬ ಹೆಸರು ಬಂದಿತು. ಮಹಾಬಲೇಶ್ವರ ಹಾಗು ಅತಿಬಲ ಎಂಬ ಹರಿಹರರು ಸಹ್ಯಾದ್ರಿ ಘಟ್ಟದಲ್ಲಿ ಬಂದು ನಿಂತ ಬಳಿಕ ಅವರ ಪಾದಮೂಲದಿಂದಲೇ ಕೃಷ್ಣಾ ವೇಣೀ ಎಂಬ ನದಿಗಳು ಹರಿದು ಮುಂದೆ ಒಂದೆಡೆ

ಸಂಗಮಿಸಿ ಕೃಷ್ಣವೇಣೀ ಎಂದು ಪ್ರಸಿದ್ಧಿ ಆಯಿತು. ಈ ಎರಡೂ ನದಿಗಳ ಮಹಿಮೆಯನ್ನು ವರ್ಣಿಸಲು ಮಾನವರಿಗೆ ಶಕ್ಯವಿಲ್ಲ. ಕೃಷ್ಣಾನದಿಯ ಹುಟ್ಟು ಹಾಗೂ ಹರಿಯುವಿಕೆಯ ಕಥೆಯನ್ನು ಹೇಳಿದವರು ಮತ್ತು ಕೇಳಿದವರು ಕೃಷ್ಣವೇಣಿಯ ದರ್ಶನ, ಸ್ನಾನಪಾನಾದಿ ಜನ್ಯವಾದ ಅಗಣ್ಯ ಪುಣ್ಯವನ್ನು ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಕೃಷ್ಣಾ ವೇಣೀ ಮುಂತಾದ ನದಿಗಳ ಮಹಿಮೆ ಎಂಬ ನೂರಐಂಬತ್ತನೇಯ ಅಧ್ಯಾಯ ಮುಗಿದುದು*

—o—

## ಏಕಾದಶೀ ಮಾಘಮಾಸ ಕಾರ್ತಿಕಮಾಸ ತುಳಸೀ ದ್ವಾರಕಾ ಮುಂತಾದವುಗಳು ಶ್ರೀಹರಿಗೆ ಪ್ರಿಯವಾಗಲು ಕಾರಣ

ಅಧ್ಯಾಯ - ೧೧೦

**ಶ್ರೀಕೃಷ್ಣ:-** ಸತ್ಯಭಾಮೆ, ಪೃಥುರಾಜನು ನಾರದ ಮುಖದಿಂದ ಅನೇಕ ವಿಷಯಗಳನ್ನು ತಿಳಿದುಕೊಂಡು ಅವರನ್ನು ಪೂಜಿಸಿ ಸತ್ಕರಿಸಿ ಅತ್ಯಾದರದಿಂದ ಕಳಿಸಿಕೊಟ್ಟ. ಪ್ರಿಯೆ, ಮಾಘ ವ್ರತ, ಕಾರ್ತಿಕ ವ್ರತ, ಏಕಾದಶೀ ವ್ರತ. ಈ ಮೂರು ವ್ರತಗಳು ನನಗೆ ಅತ್ಯಂತ ಪ್ರೀತ್ಯಾಸ್ಪದ.

**ವನಸ್ಪತೀನಾಂ ತುಳಸೀ ಮಾಸಾನಾಂ ಕಾರ್ತಿಕಃ ಪ್ರಿಯಃ ।**
**ಏಕಾದಶೀ ತಿಥೀನಾಂಚ ಕ್ಷೇತ್ರಾಣಾಂ ದ್ವಾರಕಾ ಮಮ ॥**

ಗಿಡಗಳಲ್ಲಿ ತುಳಸಿಯು ನನಗೆ ಅತ್ಯಂತ ಪ್ರೀತಿಯ ಗಿಡ. ಮಾಸದಲ್ಲಿ ಕಾರ್ತಿಕ ಮಾಸ. ತಿಥಿಗಳಲ್ಲಿ ಏಕಾದಶೀ, ಕ್ಷೇತ್ರಗಳಲ್ಲಿ ದ್ವಾರಕಾ ನನಗೆ ಅತ್ಯಂತ ಪ್ರೀತ್ಯಾಸ್ಪದ ಆಗಿರುತ್ತವೆ. ಇವುಗಳನ್ನು ಜಿತೇಂದ್ರಿಯನಾಗಿ ಸೇವಿಸುವವನು ನನಗೆ ಪರಮ ಪ್ರಿಯತಮ. ಇದರಿಂದ ಆಗುವಷ್ಟು ಸಂತೋಷ ಯಾವ ಯಜ್ಞಯಾಗಾದಿಗಳಿಂದಲೂ ಆಗುವದಿಲ್ಲ. ಆದುದರಿಂದ ನನ್ನ ಅನುಗ್ರಹವನ್ನು ಬಯಸುವವರು ತುಳಸೀ ಗಿಡವನ್ನು ನೆಟ್ಟು, ಬೆಳಿಸಿ, ಆ ತುಳಸಿಯಿಂದ ದೇವರ ಪೂಜೆಯನ್ನು ಮಾಡಬೇಕು. ಸ್ನಾನ, ದಾನಧರ್ಮಾದಿಗಳಿಂದ ಕಾರ್ತಿಕ ವ್ರತವನ್ನು ಆಚರಿಸಬೇಕು. ಉಪವಾಸ, ಜಾಗರ, ಹರಿಪೂಜೆ, ಮುಂತಾದ ವ್ರತಗಳನ್ನು ತಪ್ಪದೇ ಆಚರಿಸಬೇಕು. ವಿಧಿಪೂರ್ವಕವಾಗಿ ದ್ವಾರಕಾ ಕ್ಷೇತ್ರಯಾತ್ರೆಯನ್ನು ಮಾಡಬೇಕು.

**ಸತ್ಯಭಾಮಾ:-** ಪ್ರಭು, ನೀನು ಹೇಳಿದ ಕಲಹೆಯ ಕಥೆಯನ್ನು ಕೇಳಿ ನನಗೆ ಹೆಚ್ಚಿನ ಕುತೂಹಲ ಉಂಟಾಗಿದೆ. ಧರ್ಮದತ್ತನು ಕೊಟ್ಟ ಕಾರ್ತಿಕ ವ್ರತದ ಪುಣ್ಯದಿಂದ ಅವಳು ದಿವ್ಯಗತಿಯನ್ನು ಐದಿದಳಷ್ಟೇ? ಕಾರ್ತಿಕದ ಮಹಿಮೆ ನಿಜವಾಗಿಯೂ ಆಶ್ಚರ್ಯಕರ. ಮತ್ತೊಬ್ಬರು ಕಾರ್ತಿಕ ವ್ರತದ ಪುಣ್ಯವನ್ನು ಕೊಟ್ಟರೂ ಅದರಿಂದ ವ್ರತಮಾಡದವರೂ ಉದ್ಧಾರಹೊಂದುವದು ನಿಜವಾಗಿಯೂ ವಿಸ್ಮಯಕರ. ಇದರ ಮೇಲಿಂದ ಮತ್ತೊಬ್ಬರು ಮಾಡಿದ ಸ್ನಾನದಾನಾದಿ ಪುಣ್ಯಗಳಿಂದ ಮಗದೊಬ್ಬರು ಉದ್ಧಾರ ಹೊಂದುವರು ಎಂದು ನಿಶ್ಚಿತವಾಯಿತು. ತಾವು ಮಾಡದ ಪುಣ್ಯದಿಂದ ಉದ್ಧಾರ ಹೊಂದುವದಾದರೆ ಅದೇ ನ್ಯಾಯದಿಂದ ತಾವು ಮಾಡದ ಪಾಪದಿಂದ ಅಧೋಗತಿಯನ್ನೂ ಕೂಡ ಮಾನವನು ಹೊಂದಬಹುದಷ್ಟೇ?

**ಶ್ರೀಕೃಷ್ಣ:-** ನೀನು ಕೇಳಿದ್ದು ಸರಿಯೇ. ತಾನು ಮಾಡದಿರುವ ಪಾಪ ಪುಣ್ಯಗಳ ಫಲ ಪರಿಣಾಮಗಳಿಗೆ ಒಂದೊಂದು ಸಂದರ್ಭದಲ್ಲಿ ಮಾನವನು ಒಳಗಾಗಬೇಕಾಗುತ್ತದೆ ಅದನ್ನು ವಿಶದವಾಗಿ ನಿರೂಪಿಸುತ್ತೇನೆ ಕೇಳು. ಕೃತ ತ್ರೇತಾಯುಗಗಳಲ್ಲಿ ಒಬ್ಬರು ಮಾಡಿದ ಪಾಪಪುಣ್ಯಕ್ಕೆ ಆ ಇಡೀದೇಶ ಅಥವಾ ಗ್ರಾಮ. ಕುಲ, ಕುಟುಂಬಗಳು ಭಾಗಿ ಆಗುತ್ತಿದ್ದವು. ಆದರೆ ಕಲಿಯುಗದಲ್ಲಿ ಪುಣ್ಯ ಪಾಪಗಳ ಕರ್ತೃವು ಮಾತ್ರ ಅವುಗಳ ಫಲಕ್ಕೆ ಭಾಗೀದಾರನಾಗುತ್ತಾನೆ. ಸಂಸರ್ಗದಿಂದ ಒಬ್ಬರ ಪುಣ್ಯಪಾಪಗಳು ತಗಲುತ್ತವೆ. ಒಂದೇ ಸ್ಥಳದಲ್ಲಿ ಮೈಥುನ. ಒಂದು ಪಾತ್ರದಲ್ಲಿ ಭೋಜನ ಮಾಡುವದರಿಂದ ಒಬ್ಬರ ಪಾಪವು ಇನ್ನೊಬ್ಬರಿಗೆ ಅಂಟಿಕೊಳ್ಳುತ್ತವೆ. ಎಂದರೆ. ಗಂಡಹೆಂಡಿರಲ್ಲಿ ಒಬ್ಬರು ಮಾಡಿದ ಪಾಪಪುಣ್ಯವು ಪರಸ್ಪರ ಸಂಗದಿಂದ ಇನ್ನೊಬ್ಬರಿಗೆ ಹಂಚಿಹೋಗುತ್ತದೆ. ಅಧ್ಯಾಪನ, ಯಾಜನ, ಏಕಪಂಕ್ತಿ ಭೋಜನ ಇವುಗಳಿಂದ ಕಾಲುಭಾಗ ಪುಣ್ಯಪಾಪಗಳು ಪಾಪಿಗಳಾದ ಜನರಿಗೆ, ಪುಣ್ಯವಂತನಾದ ಪಂಡಿತನು ಪಾಠ ಹೇಳಿದರೆ ಪಾಪಿಗಳಿಂದ ಯಜ್ಞಯಾಗ ಮಾಡಿಸಿದರೆ, ಪಾಪಿಗಳ ಪಂಕ್ತಿಯಲ್ಲಿ ಕುಳಿತು ಊಟಮಾಡಿದರೆ ಈ ಪಾಪಿಗಳಿಗೆ ಆ ಪುಣ್ಯಪುರುಷನ ಕಾಲುಭಾಗ ಪುಣ್ಯ ಬರುವದು. ಇಂಥವರ ಪಂಕ್ತಿಭೋಜನ, ಅಧ್ಯಾಪನ, ಯಾಜನ ಮಾಡಿಸಿದ್ದಕ್ಕಾಗಿ ಇವರ ಪಾಪದ ಕಾಲುಭಾಗವು ಆ ಪುಣ್ಯಪುರುಷನಿಗೆ ಸೇರುವದು. ಇದರಂತೆ, ಏಕಾಸನ, ಏಕಯಾನ. (ಒಂದೇ ವಾಹನದಲ್ಲಿ ಹೋಗೋಣ). ಮತ್ತು ದೇಹ ಸಂಗದಿಂದ ಆರನೇ ಭಾಗ ಪುಣ್ಯಪಾಪ ಪ್ರಾಪ್ತಿ. ಸಂಭಾಷಣ, ಸ್ತೋತ್ರ ಮತ್ತು ಸ್ಪರ್ಶಗಳಿಂದ ಹತ್ತನೆಯ ಒಂದು ಭಾಗ ಪ್ರಾಪ್ತಿ. ದರ್ಶನ ಶ್ರವಣ, ಮನಸಾ ಧ್ಯಾನಗಳಿಂದ ನೂರನೇ ಒಂದು ಅಂಶ ಪುಣ್ಯಪಾಪ ಪ್ರಾಪ್ತಿ.

**ಪರಸ್ಯನಿಂದಾಂ ಪೈಶುನ್ಯಂ ಧಿಕ್ಕಾರಂಚ ಕರೋತಿಯಃ**
**ತತ್‌ಕೃತಂ ಪಾತಕಂ ಪ್ರಾಪ್ಯ ಸ್ವಪುಣ್ಯಂ ಪ್ರದರಾತಿಸಃ ॥**

ಹೆರವರ ನಿಂದೆಯನ್ನು ಮಾಡುವವನು, ಇನ್ನೊಬ್ಬರಿಗೆ ಚಾಡಿ ಹೇಳುವವನು, ಅವರ ಪಾಪವನ್ನೆಲ್ಲ ಹೊಂದುತ್ತಾನೆ ಮತ್ತು ಈ ನಿಂದಕನ ಪುಣ್ಯವಲ್ಲವೂ ನಿಂದೆ, ಧಿಕ್ಕಾರಮಾಡಿಸಿಕೊಂಡವನಿಗೆ ಹೋಗುತ್ತದೆ. ಪುಣ್ಯಕರ್ಮಗಳನ್ನು ಮಾಡುವ ಮನುಷ್ಯನು ಅವನಿಂದ ಹಣವನ್ನು ಇಸಿದುಕೊಳ್ಳದೆ ಮಾಡಿದರೆ (ಅವನು ಹೆಂಡತಿ ಮಗ ಶಿಷ್ಯ ಆಗಿರದಿದ್ದರೆ) ತನ್ನ ಸೇವೆಗೆ ತಕ್ಕಷ್ಟು ಪುಣ್ಯವನ್ನು ಅವನಿಂದ ಹೊಂದುತ್ತಾನೆ. ಒಂದೇ ಪಂಕ್ತಿಯಲ್ಲಿ ಊಟ ಮಾಡುವವರಲ್ಲಿ ಒಬ್ಬನನ್ನು ಬಿಟ್ಟು ಬೇರೆಯವನಿಗೆ ಬಡಿಸಿದರೆ ಹಾಗೆ ಪಕ್ಷಪಾತಮಾಡಿ ಬಡಿಸುವವನು ಅವನ ಪಾಪದ ಆರನೇ ಭಾಗವನ್ನು ಹೊಂದಬೇಕಾಗುತ್ತದೆ ಇನ್ನೊಬ್ಬರ ದ್ರವ್ಯವನ್ನು ಕದ್ದು ಪುಣ್ಯ ಮಾಡಿದವನು ಪಾಪಕ್ಕೆ ಮಾತ್ರ ಭಾಗೀದಾರನಾಗುತ್ತಾನೆ ಆ ಪುಣ್ಯಕರ್ಮದ ಫಲವು ಹಣವನ್ನು ಕಳೆದುಕೊಂಡವನಿಗೆ ಹೋಗುತ್ತದೆ. ಧರ್ಮದ ಉದ್ದೇಶದಿಂದ ದ್ರವ್ಯವನ್ನು ಯಾಚನೆ ಮಾಡಿದ ಮನುಷ್ಯನು ಮಾಡಿದ ಪುಣ್ಯದ ಕರ್ಮದ ಫಲವೂ ಹಣಕೊಟ್ಟವನಿಗೆ ಹೋಗುತ್ತದೆ. ಸಾಲಮಾಡಿ ಅದನ್ನು ಮುಟ್ಟಿಸದೇ ಸತ್ತರೆ ಆ ಧನಿಯು ತಾನು ಕೊಟ್ಟ ಹಣಕ್ಕೆ ತಕ್ಕಷ್ಟು ಸಾಲಗಾರನ ಪುಣ್ಯವನ್ನು ಪಡೆಯುತ್ತಾನೆ.

**ಪ್ರಜಾಭ್ಯಃ ಪುಣ್ಯಪಾಪಾನಾಂ ರಾಜಾ ಷಷ್ಠಾಂಶ ಮುದ್ಧರೇತ್ ।**
**ಶಿಷ್ಯಾದ್ಗುರುಃ ಸ್ತ್ರಿಯೋ ಭರ್ತಾ ಪಿತಾಪುತ್ರಾತ್ತಥೈವಚ ॥**

ರಾಜನಿಗೆ ಪ್ರಜೆಗಳ ಪುಣ್ಯ ಪಾಪಗಳಲ್ಲಿ ಆರನೇ ಒಂದು ಬಾಗ ಬರುತ್ತದೆ. ಶಿಷ್ಯನ ಪುಣ್ಯ ಪಾಪ ಗುರುವಿಗೂ, ಹೆಂಡತಿಯ ಪುಣ್ಯಪಾಪ ಗಂಡನಿಗೂ, ಮಗನ ಪುಣ್ಯಪಾಪ ತಂದೆಗೂ ಬರುತ್ತದೆ. ಇದೇ ಪ್ರಮಾಣದಲ್ಲಿ ಇದರಂತೆ ಹೆಂಡತಿಯು ಗಂಡನ ಇಚ್ಛಾನುವರ್ತಿನಿಯಾಗಿ ಯಾವಾಗಲೂ ಅವನನ್ನು ಸಂತೋಷಪಡಿಸುತ್ತಿದ್ದರೆ ಪತಿಯ ಪುಣ್ಯದಲ್ಲಿ ಅರ್ಧ ಪುಣ್ಯ ಪಡೆಯುತ್ತಾಳೆ. ಹೊಲಮನೆ, ಉದ್ಯೋಗ ಮುಂತಾದವುಗಳಿಗೆ ಒಬ್ಬನ ಕುಟುಂಬಕ್ಕೆ ಉಪಜೀವನ ಕಲ್ಪಿಸಿಕೊಟ್ಟವನು ಅವನ ಪುಣ್ಯದಲ್ಲಿ ಎಂಟನೇಭಾಗವನ್ನು ಪಡೆಯುತ್ತಾನೆ. ಆದರೆ ಹೀಗೆ ವೃತ್ತಿಯನ್ನು ಕಲ್ಪಿಸಿಕೊಟ್ಟವರಿಂದ ತನ್ನ ಸೇವೆಯನ್ನು ಮಾಡಿಸಿಕೊಂಡರೆ ಅಥವಾ ಇನ್ನೊಬ್ಬರ ಸೇವೆಗೆ ನೇಮಿಸಿದರೆ ಈ ಪುಣ್ಯ ಬರುವದಿಲ್ಲ. ಇನ್ನೊಬ್ಬರ ಕೈಯಿಂದ ದಾನದಕ್ಷಿಣೆಗಳನ್ನು ಕೊಡಿಸಿದರೆ ಅಥವಾ ಬೇರೆ ಬೇರೆ ಪುಣ್ಯಕರ್ಮಗಳನ್ನು ಮಾಡಿಸಿದರೆ ಆ ಪುಣ್ಯದಲ್ಲಿ ಆರನೇ ಭಾಗಕ್ಕೆ ಮಾತ್ರ ಕರ್ತೃವು ಭಾಗೀದಾರನಾಗುತ್ತಾನೆ.

ಹೀಗೆ ತಾನು ಕೊಡದಿದ್ದರೂ, ಮಾಡದಿದ್ದರೂ ಇನ್ನೊಬ್ಬರು ಮಾಡಿದ ಪುಣ್ಯ ಪಾಪಗಳ ಪರಿಣಾಮಗಳು ಮನುಷ್ಯನಿಗೆ ಸಂಭವಿಸುವದು ಉಂಟು. ಆದರೆ ಕಲಿಯುಗದಲ್ಲಿ ಮಾತ್ರ ಈ ನಿಯಮ ಇಲ್ಲ.

**ಕಲೌ ತ್ವಯಂ ವೈ ನಿಯಮೋ ನಕಾರ್ಯಃ ।**
**ಕರ್ತೈವ ಭೋಕ್ತಾ ಖಲು ಪುಣ್ಯಪಾಪಯೋಃ ॥**

ಕಲಿಯುಗದಲ್ಲಿ ಒಬ್ಬರ ಪುಣ್ಯಪಾಪ ಇನ್ನೊಬ್ಬರಿಗೆ ತಗಲುವದಿಲ್ಲ. ಪಾಪಪುಣ್ಯಗಳ ಕರ್ತಾ ಮಾತ್ರ ಆ ಪುಣ್ಯಪಾಪ ಫಲಕ್ಕೆ ಭಾಗಿ ಆಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಏಕಾದಶೀ ಮಾಘಮಾಸ ಕಾರ್ತಿಕಮಾಸ ತುಳಸೀ ದ್ವಾರಕಾ ಮುಂತಾದವುಗಳು ಶ್ರೀಹರಿಗೆ*
*ಪ್ರಿಯವಾಗಲು ಕಾರಣ ಎಂಬ ನೂರ ಹತ್ತನೇಯ ಅಧ್ಯಾಯ ಮುಗಿದುದು*

—o—

## ಧನೇಶ್ವರ ವೃತ್ತಾಂತ

ಅಧ್ಯಾಯ - ೧೧೧

**ಶ್ರೀ ಕೃಷ್ಣ:-** ಪೂರ್ವ ಕಾಲದಲ್ಲಿ ಅವಂತೀನಗರದಲ್ಲಿ ಧನೇಶ್ವರನೆಂಬ ಒಬ್ಬ ಬ್ರಾಹ್ಮಣನಿರುತ್ತಿದ್ದ. ಅವನು ಮಹಾಪಾಪಿ, ಧರ್ಮಭ್ರಷ್ಟ, ಅನಾಚಾರಿ, ದುರ್ವಿಚಾರಿ, ಅವನು ಮಾರಾಟ ಮಾಡಬ್ಬಾರದ ಪದಾರ್ಥಗಳಾದ ರಸ, ಕಂಬಳಿ, ತೊಗಲು ಮುಂತಾದವುಗಳನ್ನು ಮಾರಾಟ ಮಾಡುತ್ತಿದ್ದ. ಸುಳ್ಳು ಆಡುತ್ತಿದ್ದ. ತುಡುಗು ಮಾಡುತ್ತಿದ್ದ. ವೈಶ್ಯೆಯರ ಸಹವಾಸವೂ ಸಾಕಷ್ಟು ಇದ್ದಿತು. ಇದಲ್ಲದೇ ಸುರಾಪಾನ ವ್ಯಸನವು ಅವನಿಗೆ ಅಂಟಿಕೊಂಡಿತ್ತು. ಮೇಲಾಗಿ ಅವನು ಮಹಾಜೂಜುಖೋರ. ಅವನು ಮೇಲಿಂದ ಮೇಲೆ ತನ್ನ ಕೊಂಡುಕೊಳ್ಳುವ ವ್ಯವಹಾರಕ್ಕಾಗಿ ದೇಶದೇಶಾಂತರವನ್ನೆಲ್ಲ ಸುತ್ತುತ್ತಿದ್ದ. ಒಂದು ಸಲ ಆ ಧನೇಶ್ವರನು ವ್ಯಾಪಾರಕ್ಕಾಗಿ ನರ್ಮದಾ ನದಿಯ ದಂಡೆಯ ಮೇಲೆ ಇರುವ ಮಾಹಿಷ್ಮತೀ ನಗರಕ್ಕೆ ಹೋದ. ಕಾರ್ತಿಕ ಸ್ನಾನಕ್ಕಾಗಿ ಅಲ್ಲಿ ಅಸಂಖ್ಯ ಜನರು ನೆರೆದಿದ್ದರು. ಅಲ್ಲಿ ತನ್ನ ವ್ಯಾಪಾರ ಚೆನ್ನಾಗಿ ಕುದುರಬಹುದು ಎಂದು ತಿಳಿದು ಈ ಧನೇಶ್ವರ ಒಂದು ತಿಂಗಳು ಅಲ್ಲಿಯೇ ವಾಸ್ತವ್ಯ ಹೂಡಿದ. ಬೆಳಗಿನ ಹೊತ್ತು ಸ್ನಾನಮಾಡಿ ದಂಡೆಯಮೇಲೆ ಗೋಪಿಚಂದನ ನಾಮ ಮುದ್ರಾಧಾರಣ ಮಾಡಿಕೊಂಡು, ತುಳಸೀಮಾಲೆ ಧರಿಸಿ, ದೇವರಪೂಜೆ ಜಪ, ಪುರಾಣ ಪಠಣ, ಪುರಾಣಶ್ರವಣ, ನೃತ್ಯ, ಗಾಯನ, ವಿಷ್ಣುಸ್ತೋತ್ರಾದಿಗಳನ್ನು ಮಾಡುತ್ತ ಕುಳಿತಿರುವ ಅನೇಕ ಬ್ರಾಹ್ಮಣರನ್ನು ಅವನು ಕೌತುಕದಿಂದ ನೋಡಿದ, ಅವರೊಂದಿಗೆ ಮಾತನಾಡಿದ. ನಿತ್ಯವೂ ಅಲ್ಲಿ ವ್ಯಾಪಾರಕ್ಕಾಗಿ ಆಚೆ ಈಚೆ ಅಲೆದಾಡುವಾಗ ಎಷ್ಟೋ ವಿಷ್ಣುಭಕ್ತರ ದೇಹಸ್ಪರ್ಶವೂ ಆಯಿತು. ಅಲ್ಲಿಯ ಅನೇಕ ಭಗವದ್ಭಕ್ತರು, ಪಂಡಿತರು, ಪುರಾಣಿಕರು, ಗಾಯಕರು, ಭಜಕರು ಉಚ್ಚ ಕಂಠದಿಂದ ಉದ್ಘೋಷಿಸುವ ಶ್ರೀಹರಿಯ ಪುಣ್ಯನಾಮಗಳು ಅವನ ಕಿವಿಯಲ್ಲಿ ಬಿದ್ದವು. ಒಂದು ತಿಂಗಳವರೆಗೆ ಅವನು ಅಲ್ಲಿ ಇದ್ದಾಗ ಅನೇಕ ಜನರು ಕಾರ್ತಿಕ ಉದ್ಯಾಪನೆಯನ್ನು ಮಾಡಿದರು. ರಾತ್ರಿ ಆ ಭಗವದ್ಭಕ್ತರು ಮಾಡಿದ ಜಾಗರೋತ್ಸವವನ್ನು ಕಣ್ಣುತುಂಬ ನೋಡಿದ. ಹರಿಕಥಾ ಗಾಯನವನ್ನು ಕಿವಿತುಂಬ ಕೇಳಿದ. ಕಾರ್ತಿಕದಲ್ಲಿ ದೀಪದಾನದ ವ್ರತವನ್ನು ಹಿಡಿದವರು ವಿಜೃಂಭಣೆಯಿಂದ ಸಾಯಂಕಾಲ ಮಾಡಿದ ದೀಪೋತ್ಸವವನ್ನು ಅವನು ನೋಡಿದ. ಹಾಗೂ ಶಿವಭಕ್ತರು ಮಾಡಿದ ತ್ರಿಪುರದಹನ ಉತ್ಸವವನ್ನು ಕಣ್ಣಾರೆಕಂಡ ಹಾಗೂ ಹುಣ್ಣಿಮೆಯ ದಿನ ಭಗವದ್ಭಕ್ತರು ಮಾಡಿದ ಭೋಜನ ದಕ್ಷಿಣಾದಾನಾದಿಗಳನ್ನು ನೋಡಿದ. ಅಲ್ಲಿ ಭಕ್ತಿ ಪರವಶತೆಯಿಂದ ಹಾಡಿಪಾಡಿ ಕುಣಿಯುವವರನ್ನೂ ನೋಡುತ್ತ ಅವನು ಎಲ್ಲೆಡೆಗೆ ತಿರುಗುತ್ತಿದ್ದ.

ಹೀಗೆ ಅತ್ತಿಂದ ಇತ್ತ ಇತ್ತಿಂದ ಅತ್ತ ಎಲ್ಲೆಡೆಗೆ ಸಂಚರಿಸುತ್ತಿರುವಾಗ ಒಂದು ದಿನ ಒಂದು ಕರಿನಾಗರ ಹಾವು ಅವನನ್ನು ಕಚ್ಚಿತು. ಕೂಡಲೇ ಕುಸಿದುಬಿದ್ದ ಧನೇಶ್ವರ. ಅದನ್ನು ಕಂಡು ಕರುಣೆ ತುಂಬಿದ ಅನೇಕ ಹರಿಭಕ್ತರು ಅಲ್ಲಿ ನೆರೆದರು. ತುಳಸಿಯನ್ನು ಬೆರೆಸಿದ ನೀರಿನಿಂದ ಅವನ ಮುಖವನ್ನು ತೊಳೆದರು. ಮೈತುಂಬ ತುಳಸೀ ಮಿಶ್ರಿತ ಜಲವನ್ನು ಪ್ರೋಕ್ಷಿಸಿದರು. ಆದರೆ ಆ ಹಾವಿನ ನಂಜು ಏರಿ ಆ ಧನೇಶ್ವರನು ಅಲ್ಲಿಯೇ

ಮರಣಹೊಂದಿದ. ಕೂಡಲೇ ಯಮದೂತರು ಬಂದರು. ಯಮಪಾಶ ಬಿಗಿದರು. ಚಾವಟಿಯಿಂದ ಹೊಡೆಯುತ್ತ ಅವನನ್ನು ಯಮಪಟ್ಟಣಕ್ಕೆ ಎಳೆದೊಯ್ದರು. ಆಗ ಚಿತ್ರಗುಪ್ತ ''ಪ್ರಭು ಇವನುಹುಟ್ಟಿದಂದಿನಿಂದ ಒಂದೂ ಪುಣ್ಯವನ್ನು ಮಾಡಿಲ್ಲ. ಆದರೆ ಅವನು ಮಾಡಿದ ಪಾಪಕೃತ್ಯಗಳು ಮಾತ್ರ ಅಸಂಖ್ಯ. ಅಪಾರ, ನೂರುವರ್ಷ ಹೇಳಿದರೂ ತೀರವು. ಹೊರೆಹೊರೆಯಾಗಿದೆ ಇವನ ಪಾಪರಾಶಿ'' ಎಂದು ಧನೇಶ್ವರನ ಪಾಪಪುಣ್ಯದ ವರದಿಯನ್ನು ಒಪ್ಪಿಸಿದ. ಅದನ್ನು ಕೇಳಿ ಯಮಧರ್ಮ ಸಿಟ್ಟಿನಿಂದ ''ಇವನನ್ನು ಕಾದ ಕಬ್ಬಿಣದ ಸಳಿ ಹಾರಿಗಳಿಂದ ಹೊಡೆಯುತ್ತ, ಬಡೆಯುತ್ತ, ಉಕ್ಕಿನ ಸುತ್ತಿಗೆಗಳಿಂದ ಜಜ್ಜುತ್ತ, ಕರೆದುಕೊಂಡು ಹೋಗಿರಿ. ಕುಂಭೀಪಾಕದಲ್ಲಿ ಒಗೆಯಿರಿ'' ಎಂದು ಅಪ್ಪಣೆಮಾಡಿದ. ಯಮಧರ್ಮನ ಅಪ್ಪಣೆಯಂತೆ ಯಮಕಿಂಕರು ಆ ಪಾಪಿಯನ್ನು ಜ್ವಾಲಾಮುಖಿಯ ಲಾವಾರಸದಂತೆ ಕುದಿಯುವ ಎಣ್ಣೆಯ ಕಡಾವಿಗೆಗಳಲ್ಲಿ ಒಯ್ದು ಒಗೆದರು.

ಆದರೆ ಇದೇನು ಆಶ್ಚರ್ಯ ! ಧನೇಶ್ವರನು ಕುಂಭೀಪಾಕದ ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ಬಿದ್ದಕೂಡಲೇ ಅದು ತಣ್ಣಗಾಗಿಹೋಯಿತು. ಹಿಂದೆ ಹಿರಣ್ಯಕಶಪು ಪ್ರಲ್ಹಾದನನ್ನು ಉರಿಯುವ ಕಿಚ್ಚಿನಲ್ಲಿ ಹಾಕಿದಾಗ ಅದು ಒಮ್ಮೆಲೇ ಶಾಂತವಾದಂತೆ ಈಗಲೂ ಕುದಿಯುವ ದೊಡ್ಡ ತೈಲಪಾತ್ರೆಯು ಚಂದನರಸದಂತೆ ಶಾಂತಶೀತಲವಾಯಿತು. ಅಲ್ಲಿಯ ಪ್ರೇತಪತಿಗಳು ಓಡಿಹೋಗಿ ಯಮಧರ್ಮನಿಗೆ ಈ ಸಮಾಚಾರ ತಿಳಿಸಿದರು. ಅದನ್ನು ಕೇಳಿ ಕೌತುಕಾಕ್ರಾಂತನಾದ ಯಮಧರ್ಮ ತಾನಾಗಿ ಅಲ್ಲಿಗೇ ಬಂದ. ಇದೇನು ಆಶ್ಚರ್ಯ ಎಂದು ಕೇಳಿದ. ಅಷ್ಟರಲ್ಲಿ ನಾರದ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು. ಅವರಿಗೆ ಸ್ವಾಗತ ಸತ್ಕಾರ ನೀಡಿ ಆದರೋಪಚಾರ ಮಾಡಿ ''ಇದೇನು ಆಶ್ಚರ್ಯ?'' ಎಂದು ಪ್ರಶ್ನಿಸಿದ ಯಮಧರ್ಮ.

**ನಾರದ:-** ಯಮದೇವ, ಇವನನ್ನು ಬಿಟ್ಟುಬಿಡು. ಯಮಯಾತನೆಯನ್ನು ಅನುಭವಿಸುವಂಥ ಪಾಪಿ ಇವನಲ್ಲ.

**ಯಃ ಪುಣ್ಯ ಕರ್ಮಣಾಂ ಕುರ್ಯಾತ್ ದರ್ಶನ ಸ್ಪರ್ಶ ಭಾಷಣಮ್ ।**
**ತತ್ ಷಡಂಶಮವಾಪ್ನೋತಿ ಪುಣ್ಯಸ್ಯ ನಿಯತಂ ನರಃ ॥**

ಪುಣ್ಯಕರ್ಮಿಗಳನ್ನು ಮಾಡುವ ಹರಿಭಕ್ತರ ದರ್ಶನ ಸ್ಪರ್ಶನ ಸಂಭಾಷಣಾದಿಗಳನ್ನು ಮಾಡಿದವನು ಅವರ ಪುಣ್ಯದ ಆರನೇ ಒಂದು ಭಾಗಕ್ಕೆ ಭಾಗಿಯಾಗುತ್ತಾನೆ ಎಂದು ಶಾಸ್ತ್ರಗಳ ವಚನವಿರುತ್ತದೆ. ಈ ಧನೇಶ್ವರ ಬ್ರಾಹ್ಮಣನು ಮಾಹಿಷ್ಮತೀ ನಗರದಲ್ಲಿ ಕಾರ್ತಿಕಮಾಸ ಒಂದು ತಿಂಗಳ ಕಾಲ ನರ್ಮದಾ ನದೀ ತೀರದಲ್ಲಿ ಶ್ರೀಹರಿಯ ಪೂಜೆ ಪಾರಾಯಣ, ಜಪ, ಭಜನೆ, ಗಾಯನ, ಸ್ತೋತ್ರ ಮುಂತಾದವುಗಳನ್ನು ಮಾಡುತ್ತ ಕುಳಿತ ಅನೇಕ ಭಗವದ್ಭಕ್ತರ ಸಂದರ್ಶನ ಸಂಭಾಷಣ ಸಹವಾಸ ಸಂಪರ್ಕಾದಿಗಳನ್ನು ಮಾಡಿದ್ದಾನೆ. ಅದರಿಂದ ಅವರೆಲ್ಲರ ಪುಣ್ಯದಲ್ಲಿ ಆರನೇ ಒಂದು ಭಾಗವು ಇವನಿಗೆ ಲಭಿಸಿದೆ. ಅಲ್ಲಿರುವ ಎಷ್ಟೋ ಸಾಧುಸಂತರ ಸೇವೆಯನ್ನು ಮಾಡಿದ್ದಾನೆ. ಮತ್ತು ಮರಣ ಸಮಯದಲ್ಲಿ ತುಳಸಿಯನ್ನು ಬೆರಿಸಿದ ನರ್ಮದಾನದಿಯ ಪವಿತ್ರವಾದ ನೀರನ್ನು ಪ್ರೋಕ್ಷಿಸಿ ಇವನಿಗೆ ಸ್ನಾನ ಮಾಡಿಸಿದ್ದಾರೆ ಅನೇಕ ಹರಿಭಕ್ತರು. ಮತ್ತು ಇವನಿಗೆ ಕಾರ್ತಿಕ ಮಾಸದ ಒಂದು ತಿಂಗಳ ಕಾಲ ಪ್ರತಿನಿತ್ಯವೂ ಹಗಲು ರಾತ್ರಿ ಶ್ರೀಹರಿಯ ನಾಮಸ್ಮರಣೆಯ

ನಾದಘೋಷವು ಕಿವಿಗೆ ಬೀಳುತ್ತಲೇ ಇತ್ತು. ಮರಣಕಾಲದಲ್ಲಿಯೂ ಭಕ್ತರು ಉಚ್ಚರಿಸುವ ಶ್ರೀಹರಿಯ ನಾಮಘೋಷ ಇವನಿಗೆ ಕೇಳುತ್ತಲೇ ಇತ್ತು. ಆದುದರಿಂದ ಇವನ ಪಾಪಗಳೆಲ್ಲವೂ ತೊಳೆದುಹೋಗಿವೆ. ವಿಷ್ಣುವಿನ ನಾಮ ಜಪವನ್ನು ಶ್ರವಣ ಮಾಡಿದವನು ಎಂದೂ ನರಕದಲ್ಲಿ ಬೀಳಲಾರ. ಆದುದರಿಂದ ಈ ಧನೇಶ್ವರನು ತಾನು ಸ್ವಯಂ ಪುಣ್ಯ ಮಾಡದಿದ್ದರೂ ಪುಣ್ಯ ಪುರುಷರ ಸಂಪರ್ಕವನ್ನು ಕಾರ್ತಿಕ ಮಾಸದಲ್ಲಿ ಸರ್ವರೀತಿಯಿಂದಲೂ ಸಾಧಿಸಿದ್ದರಿಂದ ಪುಣ್ಯಕ್ಕೆ ಅಧಿಕಾರಿಯಾಗಿದ್ದಾನೆ. ಇವನು ಹಿಂದೆ ಮಾಡಿದ ರಾಶಿ ರಾಶಿ ಪಾಪ ಕೃತ್ಯಗಳೆಲ್ಲ ಈಗ ನಷ್ಟವಾಗಿವೆ. ಈಗ ಅವನಿಗೆ ಆದ ಮತ್ತು ಆಗಲಿರುವ ನರಕ ದರ್ಶನದಿಂದ ಪ್ರಾಯಶ್ಚಿತ್ತವೂ ಆದಂತಾಗುವದು. ಆದುದರಿಂದ ಈಗ ಅವನು ನರಕದರ್ಶನವನ್ನು ಮಾಡಿಕೊಂಡು ತನ ಪುಣ್ಯ ಪ್ರಭಾವದಿಂದ ಯಕ್ಷ ಜನ್ಮಹೊಂದಿ ಸುಖೋಪಭೋಗಗಳನ್ನು ಅನುಭವಿಸಲಿ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಧನೇಶ್ವರ ವೃತ್ತಾಂತ ಎಂಬ ನೂರಹನ್ನೊಂದನೆಯ ಅಧ್ಯಾಯ ಮುಗಿದುದು*

—o—

## ಧನೇಶ್ವರನು ಧನಯಕ್ಷ ಎಂಬ ಕುಬೇರನ ಸೇವಕನಾದದ್ದು

ಅಧ್ಯಾಯ - ೧೧೨

**ಶ್ರೀಕೃಷ್ಣ:-** ನರಕಲೋಕದಲ್ಲಿ ನಾರದರ ಸೂಚನೆಯಂತೆ ಯಮದೇವರು ಧನೇಶ್ವರನಿಗೆ ಎಲ್ಲ ನರಕಗಳನ್ನು ತೋರಿಸಲು ಒಬ್ಬ ಪ್ರೇತಪತಿಗೆ ಆಜ್ಞೆ ಮಾಡಿದರು. ಅದರಂತೆ ಪ್ರೇತಪತಿ ಎಂಬ ಒಬ್ಬ ಯಮಕಿಂಕರನು ಆ ಧನೇಶ್ವರನನ್ನು ಕರೆದುಕೊಂಡು ಹೋಗಿ ನುಡಿದ.

**ಪ್ರೇತಪತಿ:-** ಧನೇಶ್ವರ, ಈ ಘೋರವಾದ ನರಕಗಳನ್ನು ನೋಡು. ಪಾಪ ಮಾಡಿದವರನ್ನು ಯಮಕಿಂಕರರು ಈ ದಾರುಣವಾದ ನರಕಗಳಲ್ಲಿ ಹಾಕಿ ಬೇಯಿಸುತ್ತಾರೆ. ಇತ್ತನೋಡು. ತಪ್ತವಾಲುಕ ಎಂಬ ಭೀಕರ ನರಕ ಇರುತ್ತೆ. ಮನೆಗೆ ಹಸಿದು ಬಂದ ಅತಿಥಿಗಳನ್ನು ಪೂಜಿಸದೆ ಯಾರು ಊಟಕ್ಕೆ ಹಾಕದೆ ತಿರುಗಿ ಕಳಿಸುವರೋ ಮತ್ತು ಅಗ್ನಿ, ಬ್ರಾಹ್ಮಣ, ದೇವರು, ರಾಜ ಇವರನನು ಕಾಲಿನಿಂದ ಯಾರು ಹೊಡೆಯುವರೋ ಅಂತವರು ಕೈಕಾಲು ಕಡಿದುಕೊಂಡು ಈ ನರಕದ ಸುಡುವ ಉಸುಕಿನಲ್ಲಿ ಅಳುತ್ತ ಒದರುತ್ತ ಉರುಳಾಡುವರು. ಹೀಗೆ ಇಲ್ಲಿ ಆರು ಮುಖ್ಯ ನರಕಗಳು ಇರುತ್ತವೆ. ಘೋರ ಪಾಪ ಮಾಡಿದವರು ಈ ಆರೂ ವಿಧವಾದ ನರಕಗಳಲ್ಲಿ ಬಿದ್ದು ಒದ್ದಾಡುತ್ತಾರೆ. ಎರಡನೇಯ ನರಕ ಅಂಧತಾ ಮಿಸ್ರ. ಇದರಲ್ಲಿ ಕಾಗೆ, ನಾಯಿ, ಮೃಗಪಕ್ಷಿ, ಕ್ರಿಮಿಕೀಟ ಮುಂತಾದ ಪ್ರಾಣಿಗಳ ಸೂಜಿಯಂತಿರುವ ಕೊಕ್ಕೆ, ಹಲ್ಲು, ಉಗುರುಗಳಿಂದ ಪಾಪಿಯು ಹೊಡೆಯಲ್ಪಡುತ್ತಾನೆ. ನಿಷಿದ್ಧ ಸ್ತ್ರೀಪುರುಷರ ಸಹವಾಸಗೈದವರೂ ಹಾಗೂ ಬಿರುನುಡಿಗಳಿಂದ ಹೆರವರ ಮರ್ಮಕ್ಕೆ ಗಾಯ ಮಾಡಿದವರೂ ಈ ನರಕದಲ್ಲಿ ಸೂಜಿಯಂಥ ಪಶುಪಕ್ಷಿಗಳ ಮುಖದಿಂದ ಕಚ್ಚಿ ಕೊಚ್ಚಲ್ಪಡುತ್ತಾರೆ. ಮೂರನೆಯ ಕ್ರಕಚ

ಎಂಬ ನರಕದಲ್ಲಿ ಪಾಪಿಗಳು ಗರಗಸದಿಂದ ಸೀಳಲ್ಪಡುತ್ತಾರೆ. ಮಡದಿಮಕ್ಕಳನ್ನು ಆಗಲಿಸಿದವರು ಅಸಿಪತ್ರವನ ಎಂಬ ನರಕದಲ್ಲಿ ಖಡ್ಗದಿಂದ ಇರಿಯಲ್ಪಟ್ಟು ಒದರುತ್ತ ಓಡಾಡುತ್ತಾರೆ. ಸಜ್ಜನರಿಗೂ ಬ್ರಾಹ್ಮಣರಿಗೂ ದ್ರೋಹ ಮಾಡಿದವರು ಅರ್ಗಲ ಎಂಬ ನಾಲ್ಕನೇ ನರಕದಲ್ಲಿ ಯಮಕಿಂಕರರಿಂದ ಪಾಶ ಬಿಗಿದು ಮುದ್ಗಲ ಎಂಬ ಆಯುಧದಿಂದ ಥಳಿಸಲ್ಪಡುತ್ತಾರೆ. ಪರಸ್ತ್ರೀಲೋಲುಪರೂ ಪರದ್ರವ್ಯ ಕದ್ದವರೂ ಪರರಿಗೆ ದ್ರೋಹ ಬಗೆದವರೂ ಕೂಟ ಶಾಲ್ಮಲೀ ಎಂಬ ಐದನೇ ನರಕದಲ್ಲಿ ಯಮಯಾತನೆಯನ್ನು ಅನುಭವಿಸುತ್ತಾರೆ. ನಿಷಿದ್ಧಭಕ್ಷಣ ಮಾಡುವವರೂ ಪರರನ್ನು ನಿಂದಿಸುವವರೂ ಇನ್ನೊಬ್ಬರ ಮೇಲೆ ಚಾಡಿ ಹೇಳುವವರೂ ರಕ್ತಪೂಯ ಎಂಬ ಘೋರ ನಕರಕದಲ್ಲಿ ನಾನಾವಿಧವಾದ ದುಃಖಗಳನ್ನು ಅನುಭವಿಸುತ್ತಾರೆ. ಇವಲ್ಲದೇ ಕುಂಭೀಪಾಕವೆಂಬುದು ಏಳನೇ ನರಕ. ಇದರಲ್ಲಿ ಪಾಪಿಗಳನ್ನು ಕುದಿಯುವ ಎಣ್ಣೆಯಲ್ಲಿ ಯಮಕಿಂಕರರು ಕುದಿಸಿ ತೆಗೆಯುತ್ತಾರೆ. ಈ ಕುಂಭೀಪಾಕವು ಹದಿನಾರು ಬಗೆಯಾಗಿದೆ. ಇದರಂತೆ ರೌರವ ನರಕವು ನಲವತ್ತೆರಡು ವಿಧವಾಗಿದೆ.

ಈ ಪಾಪಗಳು ಆರ್ದ್ರ, ಶುಷ್ಕ ಎಂಬ ಎರಡು ವಿಧವಾಗಿದೆ. ಇಚ್ಛೆಯಿಲ್ಲದೆ ಮಾಡಿದ ಪಾಪವು ಶುಷ್ಕ ಎನಿಸಿಕೊಳ್ಳುತ್ತದೆ. ಬುದ್ಧಿಪೂರ್ವಕವಾಗಿ ಮಾಡಿದ ಪಾಪವು ಆರ್ದ್ರ ಎಂದು ಅನ್ನಿಸಿಕೊಳ್ಳುತ್ತದೆ. ಈ ಎರಡೂ ವಿಧವಾದ ಪಾಪಗಳು ಎಂಬತ್ತನಾಲ್ಕು ಬಗೆಯಾಗಿವೆ. ಈ ಎಲ್ಲ ಪಾಪಗಳನ್ನು ಪ್ರಕೀರ್ಣ, ಅಪಾಂಕ್ತೇಯ, ಮಲಿನೀಕರಣ, ಜಾತಿಭ್ರಂಶಕರ, ಉಪಪಾತಕ, ಅತಿಪಾಪ, ಮಹಾಪಾಪ ಎಂದು ಏಳುಬಗೆಯಾಗಿ ವಿಂಗಡಿಸಿದ್ದಾರೆ. ಈ ಏಳು ಬಗೆಯ ಪಾಪಗಳನ್ನು ಮಾಡಿದವರು ಇವುಗಳಿಗಾಗಿ ನಿರ್ಮಿಸಿದ ಮೇಲೆ ಹೇಳಿದ ಏಳು ನರಕಗಳಲ್ಲಿ ತಪ್ತವಾಲುಕೆಯಿಂದ ಆರಂಭಿಸಿ ಕುಂಭೀಪಾಕದವರೆಗಿನ ಏಳು ನರಕಗಳಲ್ಲಿ ಯಮಯಾತನೆಯನ್ನು ಅನುಭವಿಸಿ ದಾರುಣವಾದ ದುಃಖಾಗ್ನಿಯಲ್ಲಿ ಬೀಳುತ್ತಾರೆ.

ಧನೇಶ್ವರ, ನೀನು ಮಾತ್ರ ಸುದೈವದಿಂದ ನರ್ಮದಾ ತೀರದಲ್ಲಿ ಕಾರ್ತಿಕ ವ್ರತ ಮಾಡುವ ಪುಣ್ಯ ಪುರುಷರ ಸಂದರ್ಶನ, ಸಹವಾಸ, ಸಂಭಾಷಣ ಮುಂತಾದವುಗಳಿಂದ ಸಂಪರ್ಕವನ್ನು ಸಾಧಿಸಿದ್ದರಿಂದ ಇವೆಲ್ಲ ನರಕಗಳ ಭೀತಿಯು ನಿನಗೆ ತಪ್ಪಿದೆ.

ಹೀಗೆ ಆ ಪ್ರೇತಪತಿಯು ದನೇಶ್ವರನಿಗೆ ಎಲ್ಲ ನರಕಗಳನ್ನು ತೋರಿಸಿ ಯಕ್ಷಲೋಕಕ್ಕೆ ಕರೆತಂದುಬಿಟ್ಟ. ಅಲ್ಲಿ ಧನಯಕ್ಷ ಎಂಬ ಹೆಸರಿನಿಂದ ಆ ಧನೇಶ್ವರನೆಂಬ ಬ್ರಾಹ್ಮಣನು ಕುಬೇರನ ಕಿಂಕರನಾಗಿ ಬಹುಕಾಲ ಸುಖದಿಂದ ವಾಸಮಾಡಿದ. ವಿಶ್ವಾಮಿತ್ರ ಮಹರ್ಷಿಗಳು ಈ ಧರ್ಮಯಕ್ಷನ ಹೆಸರಿನಿಂದ ಅಯೋಧ್ಯಾ ಕ್ಷೇತ್ರದಲ್ಲಿ ಒಂದು ತೀರ್ಥವನ್ನು ನಿರ್ಮಿಸಿದ್ದಾರೆ.

ಕಾರ್ತಿಕ ವ್ರತದ ಮಹಿಮೆ ಈ ರೀತಿಯಾಗಿ ಅತ್ಯಾಶ್ಚರ್ಯಕರವಾಗಿರುತ್ತದೆ. ಈ ಕಾರ್ತಿಕ ವ್ರತವನ್ನು ಮಾಡಿದವರ ದರ್ಶನದಿಂದಲೂ ಚಿರಸಂಚಿತವಾದ ಪಾಪಸಂಚಯವೆಲ್ಲವೂ ಕರಗಿಹೋಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಧನೇಶ್ವರನು ಧನಯಕ್ಷ ಎಂಬ ಕುಬೇರನ ಸೇವಕನಾದದ್ದು ಎಂಬ ಒಂದು ನೂರ ಹನ್ನೆರಡನೇಯ ಅಧ್ಯಾಯ ಮುಗಿದುದು*

—o—

## ಆಲದಮರ ಹಾಗೂ ಅರಳೆಯ ಮರದ ವರ್ಣನೆ | ಅಧ್ಯಾಯ - ೧೧೩

**ಸೂತ:-** ಶ್ರೀಕೃಷ್ಣನು ತನ್ನ ಪರಮ ಪ್ರೀತ್ಯಾಸ್ಪದಳಾದ ಸತ್ಯಾಭಾಮಾದೇವಿಗೆ ಇಂತು ಕಾರ್ತಿಕ ಮಾಸದ ಮಹಾತ್ಮೆಯನ್ನು ಬಣ್ಣಿಸಿ ಹೇಳಿ ತಾನು ಸಾಯಂಕಾಲದ ಸಂಧ್ಯಾವಂದನೆ ಮೊದಲಾದ ನಿತ್ಯಕಾರ್ಯಗಳನ್ನು ಮಾಡಲು ತನ್ನ ತಾಯಿಯ ಮನೆಗೆ ಹೋದನು. ಶ್ರೀ ಕೃಷ್ಣನ ಮಾತಿನಂತೆ ಈ ಕಾರ್ತಿಕ ಮಾಸವು ವಿಷ್ಣು ಪ್ರೀತಿಕರವೂ ಭಕ್ತಿ ಮುಕ್ತಿ ಪ್ರದಾಯಕವೂ ಆಗಿರುತ್ತದೆ. ಈ ಕಾರ್ತಿಕ ಮಾಸದಲ್ಲಿ ಏಕಾದಶೀ ಉಪವಾಸ ಮತ್ತು ಜಾಗರ, ಪ್ರಾತಃಸ್ನಾನ, ತುಳಸೀಸೇವೆ, ಉದ್ಯಾಪನೆ, ದೀಪದಾನ ಈ ಐದು ವ್ರತಗಳಿಂದ ಕಾರ್ತಿಕ ವ್ರತವು ಪೂರ್ಣವಾಗುತ್ತದೆ.

**ಶೌನಕಾದಿ ಋಷಿಗಳು:-** ಸೂತಾಚಾರ್ಯ, ಯಾವದಾದರೂ ಅಡ್ಡಿ ಆತಂಕ ಅಥವಾ ಆಪತ್ತು ಬಂದಾಗ ಅಥವಾ ಯಾವುದಾದರೂ ದುರ್ಗ, ಅರಣ್ಯದಲ್ಲಿ ಇರುವ ಸಂದರ್ಭ ಬಂದರೆ ಬೇನೆಬೇಸರಿಕೆಗಳಿಂದ ಮನುಷ್ಯನು ಬಳಲುತ್ತಿದ್ದರೆ, ಕಾರ್ತಿಕ ವ್ರತವನ್ನು ಮಾಡುವದು ಹೇಗೆ?

**ಸೂತ:-** ಕಾರ್ತಿಕ ಮಾಸದಲ್ಲಿ ಮನೆಯಲ್ಲಿ ಅನಾನುಕೂಲವಿದ್ದರೆ ದೇವಾಲಯದಲ್ಲಿ, ದೇವಾಲಯದಲ್ಲಿ ಅನಾನುಕೂಲವಿದ್ದರೆ ಮನೆಯಲ್ಲಿ ಎಲ್ಲಿಯಾದರೂ ಕಾರ್ತಿಕ ಏಕಾದಶೀ ರಾತ್ರಿ ಜಾಗರವನ್ನು ಸಾಧಿಸಬೇಕು. ಯಾವದಾದರೂ ಅಡವಿ ಅಥವಾ ಮಾರ್ಗ ಮಧ್ಯದಲ್ಲಿದ್ದರೆ ಅರಳೆಯ ಗಿಡದ ಬುಡದಲ್ಲಿಯೇ ಆಗಲಿ, ತುಳಸೀ ಗಿಡದ ಬುಡದಲ್ಲಿಯಾಗಲಿ ಜಾಗರವನ್ನು ಮಾಡಬೇಕು. ಜಾಗರವು ಮುಖ್ಯವಾಗಿ ವಿಷ್ಣುವಿನ ಮುಖ್ಯ ಮಹಿಮೆಯನ್ನು ಹೊಗುಳವ, ಗಾಯನ, ವಾದ್ಯವಾದನ ಹಾಗೂ ನರ್ತನ ಪ್ರಧಾನವಾಗಿರಬೇಕು. ಕಾರ್ತಿಕ ವ್ರತ ಉದ್ಯಾಪನೆ ಮಾಡುವ ಶಕ್ತಿ ಇಲ್ಲದ್ದಿದರೆ ಯಥಾಶಕ್ತಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಆದರಿಂದ ವ್ರತ ಸಂಪೂರ್ತಿಯಾಗುತ್ತದೆ. ದೀಪದಾನ ಮಾಡುವ ಶಕ್ತಿ ಇಲ್ಲದವರು ಇನ್ನೊಬ್ಬರು ಹಚ್ಚಿ ಇಟ್ಟ ದೀಪವು ಆರದಂತೆ ಗಾಳಿಯಿಂದ ರಕ್ಷಿಸಿ ಮಕ್ಕುತೆಗೆದು ಬೆಳಗುವಂತೆ ಮಾಡಬೇಕು. ತುಳಸೀ ಇಲ್ಲದಿದ್ದರೆ ಪರಿಭಕ್ತರನ್ನು ಪೂಜಿಸಬೇಕು. ಯಾವದೂ ಇಲ್ಲದಿದ್ದರೆ ಬ್ರಾಹ್ಮಣ, ಗೋ, ಅರಳೆ, ಆಲದ ವೃಕ್ಷಗಳನ್ನು ಸೇವಿಸಬೇಕು.

**ಋಷಿಗಳು:-** ಜಡವಾದ ಈ ಅಶ್ವತ್ಥ (ಅರಳೆ) ವಟ (ಆಳ) ಮರಗಳು ಗೋ ಬ್ರಾಹ್ಮಣರಿಗೆ ಸಮಾನ ಎಂದು ನೀವು ಹೇಳಿದಿರಿ. ಎಲ್ಲ ಮರಗಳಿಗಿಂತ ಈ ಎರಡು ಮರಗಳು ಏಕೆ ಪೂಜ್ಯ?

**ಸೂತ:-** ಅಶ್ವತ್ಥ ಮರವು ಸಾಕ್ಷಾತ್ ವಿಷ್ಣುರೂಪ. ರುದ್ರರೂಪಿಯಾಗಿದೆ. ವಟವೃಕ್ಷ. ಬ್ರಹ್ಮರೂಪಿ ಆಗಿದೆ. ಪಾಲಾಶ (ಮುತುಗ) ವೃಕ್ಷ. ಇವುಗಳ ದರ್ಶನ ಪೂಜೆ ಸೇವೆಗಳು. ದುಃಖ ವ್ಯಾಧಿ ಆಪತ್ತುಗಳ ಪರಿಹಾರಕ್ಕೆ ಕಾರಣವಾಗುವವು.

**ಋಷಿಗಳು:-** ಸರ್ವಜ್ಞನಾದ ಸೂತ, ಬ್ರಹ್ಮ, ವಿಷ್ಣು, ಮಹೇಶ್ವರರು ಮರವಾಗಿ ಏಕೆ ಮಾರ್ಪಟ್ಟರು? ನಮಗೆ ಹೇಳಿರಿ.

**ಸೂತ:-** ಹಿಂದೆ ಶಿವಪಾರ್ವತಿಯರು ಬಹುಕಾಲ ಸುರತ ಸುಖವನ್ನು ಅನುಭವಿಸುವದಕ್ಕಾಗಿ ಕಾಮಕೇಳೀಲೋಲರಾಗಿದ್ದರು. ಅದಕ್ಕೆ ವಿಘ್ನವನ್ನು ಮಾಡಬೇಕೆಂದು ದೇವತೆಗಳು ಬ್ರಾಹ್ಮಣ ರೂಪದಿಂದ ಅಗ್ನಿಯನ್ನು ಆ ಶಿವದಂಪತಿಗಳ ರತಿಕ್ರೀಡಾ ಸ್ಥಾನಕ್ಕೆ ಕಳಿಸಿಕೊಟ್ಟರು. ಆದರಿಂದ ಪಾರ್ವತಿಗೆ ಸಿಟ್ಟು ಬಂದು ಎಲ್ಲ ದೇವತೆಗಳು ವೃಕ್ಷ ರೂಪವನ್ನು ತಳೆದು ನೆಲದ ಮೇಲೆ ಹುಟ್ಟಿದರು. ವಿಷ್ಣು ಅಶ್ವತ್ಥ ಮರವಾಗಿ ಜನಿಸಿದ. ಮಹೇಶ್ವರನು ವಟವೃಕ್ಷವಾಗಿ ಮೈದಾಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಆಲದಮರ ಹಾಗೂ ಅರಳೆಯ ಮರದ ವರ್ಣನೆ ಎಂಬ ನೂರಹದಿಮೂರನೇಯ ಅಧ್ಯಾಯ ಮುಗಿದುದು*

—o—

## ಅಲಕ್ಷ್ಮೀವೃತ್ತಾಂತ ವರ್ಣನೆ

ಅಧ್ಯಾಯ - ೧೧೪

**ಋಷಿಗಳು:-** ಸೂತರೇ, 'ಬೋಧಿ ತರು' ಎಂದು ಹೆಸರಾದ ಈ ಅಶ್ವತ್ಥ ಮರವು ರವಿವಾರ ದಿನ ಅಸ್ಪೃಶ್ಯವು ಏಕೆ ಆಗಿದೆ? ಶನಿವಾರ ದಿನ ಅದೇ ಮರ ಸ್ಪಶ್ಯ ಆದುದು ಎಂತು?

**ಸೂತ:-** ಪೂರ್ವಕಾಲದಲ್ಲಿ ಸಮುದ್ರ ಮಂಥನದಿಂದ ಹುಟ್ಟಿದ ರತ್ನಗಳು ಹದಿನಾಲ್ಕು. ಅವುಗಳಲ್ಲಿ ಪರಮ ಶ್ರೇಷ್ಠವಾದ ಲಕ್ಷ್ಮೀ ಮತ್ತು ಕೌಸ್ತುಭ ಈ ಎರಡು ರತ್ನಗಳನ್ನು ದೇವತೆಗಳು ವಿಷ್ಣುವಿಗೆ ಅರ್ಪಿಸಿದರು. ಶ್ರೀಮನ್ನಾರಾಯಣನು ಲಕ್ಷ್ಮೀದೇವಿಯ ಪಾಣಿಗ್ರಹಣ ಮಾಡುವದಕ್ಕಿಂತಲೂ ಮೊದಲು ಆ ಲಕ್ಷ್ಮೀದೇವಿಯು ಶ್ರೀಹರಿಗೆ ನುಡಿದಳು.

**ಲಕ್ಷ್ಮೀ :-**ಮಧುಸೂದನ, ನಾನು ಲಕ್ಷ್ಮೀ. ನನ್ನ ಅಕ್ಕ ಅಲಕ್ಷ್ಮೀ. ಅವಳು ಹಿರಿಯಳು ನಾನು ಕಿರಿಯಳು. ಜೇಷ್ಠ ಸೋದರಿಯ ಮದುವೆ ಆಗದೆ ಚಿಕ್ಕವಳಾದ ನಾನು ಹೇಗೆ ಮದುವೆ ಮಾಡಿಕೊಳ್ಳಲಿ? ಆದುದರಿಂದ ಈ ನನ್ನ ಅಕ್ಕ ಅಲಕ್ಷ್ಮೀಯನ್ನು ಯಾರಿಗಾದರೂ ಮದುವೆ ಮಾಡಿಕೊಡು. ಅನಂತರವೇ ನನ್ನ ನಿನ್ನ ವಿವಾಹವು ನೇರವೇರಲಿ.

ಲಕ್ಷ್ಮೀಯ ಸೂಚನೆಯಂತೆ ನಾರಾಯಣನು ಮಹಾತಪಸ್ವಿಯಾದ ಉದ್ದಾಲಕ ಮಹರ್ಷಿಯನ್ನು ಕರೆದು ಅವನಿಗೆ ಇವಳನ್ನು ಮದುವೆಯಾಗು ಎಂದು ಆಜ್ಞೆಮಾಡಿದ. ಶ್ರೀಹರಿಯ ಆಜ್ಞೆಯನ್ನು ಅಂಗೀಕರಿಸಿ ಉದ್ದಾಲಕ ಮುನಿಯು ತೆರೆದ ಬಾಯಿ, ಕೆಂಪು ಕಣ್ಣು, ಪಿಂಗಟ ಬಣ್ಣದ ಕೂದಲು, ಬಿಳಿ ಬಣ್ಣಗಳಿಂದ ಒಡಗೂಡಿದ ಅಲಕ್ಷ್ಮೀಯನ್ನು ಮದುವೆ ಮಾಡಿಕೊಂಡು ತನ್ನ ಆಶ್ರಮಕ್ಕೆ ಕರೆದುಕೊಂಡು ಬಂದ. ಅವನ ಆಶ್ರಮದಲ್ಲಿ ವೇದಮಂತ್ರಗಳ ಧ್ವನಿ ಕೇಳಿಬರುತ್ತಿತ್ತು. ಹೋಮದ ಹೊಗೆಯ ಸುಗಂಧ ಗಾಳಿಯು ಅಲೆಅಲೆಯಾಗಿ ತೇಲಿಬರುತ್ತಿತ್ತು. ಅದನ್ನು ನೋಡಿದ ಕೂಡಲೇ ಲಕ್ಷ್ಮೀಯ ಜ್ಯೇಷ್ಠ ಸಹೋದರಿಯಾದುದರಿಂದ ಜ್ಯೇಷ್ಠಾ ಎಂದೇ ಹೆಸರಾದ ಅಲಕ್ಷ್ಮೀಯು ಬೇಜಾರುಪಟ್ಟುಕೊಂಡು ಕೋಪೋದ್ದೀಪಿತಳಾಗಿ ನುಡಿದಳು.

**ಜ್ಯೇಷ್ಠಾದೇವಿ:-** ಎಲೋ ಬ್ರಾಹ್ಮಣ, ಇದೇನು ! ನಿನ್ನ ಮನೆ ತುಂಬ ವೇದಮಂತ್ರಗಳದೇ ಸದ್ದುಗದ್ದಲ ತುಂಬಿಹೋಗಿದೆ. ನನಗೆ ಇರಲಿಕ್ಕೆ ಯೋಗ್ಯವಾಗಿಲ್ಲ ಈ ನಿನ್ನ ಮನೆ. ನನ್ನನ್ನು ಬೇರೆ ಕಡೆಗೆ ಕರೆದುಕೊಂಡು ಹೋಗು.

**ಉದ್ದಾಲಕ:-** ನೀನು ಇಲ್ಲಿ ಏಕೆ ಇರುವದಿಲ್ಲ? ಈ ಮನೆಯಲ್ಲಿ ನಿನಗೆ ಅಸಂಮತವಾದುದು ಯಾವದು ಇದೆ? ನಿನಗೆ ಇರಲು ಯೋಗ್ಯವಾದ ವಸತಿ ಸ್ಥಾನವು ಯಾವದು ಆಗಬಹುದು?

**ಜ್ಯೇಷ್ಠಾದೇವಿ:-** ಯಾವ ಮನೆಯಲ್ಲಿ ವೇದಮಂತ್ರಗಳು ಕೇಳಿಬರುವವೋ ಮತ್ತು ದೇವರ ಪೂಜೆ ಅತಿಥಿಗಳ ಪೂಜೆ ಮತ್ತು ಯಜ್ಞಯಾಗಾದಿ ಪುಣ್ಯಕರ್ಮಗಳು ಎಲ್ಲಿ ಮಾಡಲ್ಪಡುವವೋ ಮತ್ತು ಎಲ್ಲಿ ಪಿತೃದೇವತಾ ಆರಾಧನೆ ಪೂಜೆಯು ನಡೆಯುವದೋ, ಎಲ್ಲಿ ದಂಪತಿಗಳು ಅನ್ಯೋನ್ಯ ಅನುರಾಗದಿಂದ ಇರುವರೋ ಆ ಮನೆಗೆ ನಾನು ಬರುವದಿಲ್ಲ. ಅಂಥ ಮನೆಯಲ್ಲಿ ನಾನು ಒಂದು ಕ್ಷಣವೂ ನಿಲ್ಲುವದಿಲ್ಲ. ಯಾವ ಮನೆಯಲ್ಲಿ ಜೂಜಾಟ, ಕಳವು, ವ್ಯಭಿಚಾರ, ಪರಸ್ತ್ರೀಯರೊಡನೆ ವಿಲಾಸ, ಗೋಹತ್ಯಾ, ಮದ್ಯಪಾನ, ಬ್ರಹ್ಮಹತ್ಯಾದಿ ಪಾಪಗಳು ಸಂಭವಿಸುವವೋ ಮತ್ತು ಯಾವ ಮನೆಯಲ್ಲಿ ವೃದ್ಧರು ಸಜ್ಜನರು ಹಾಗೂ ಬ್ರಾಹ್ಮಣರ ಅಪಮಾನವು ಪದೇ ಪದೇ ನಡೆಯುವದೋ ಯಾವಾಗಲೂ ಅಂಥವರ ಮನೆಯಲ್ಲಿ ನಾನು ಶಾಶ್ವತವಾಗಿ ವಾಸಮಾಡುತ್ತೇನೆ.

ಹೆಂಡತಿಯ ಈ ಘೋರ ವಚನವನ್ನು ಕೇಳಿ ಬಹಳ ವಿಷಾದವಾಯಿತು ಆ ಉದ್ದಾಲಕ ಮಹರ್ಷಿಗೆ. ಆದರೂ ಕೂಡ ಸಾಕ್ಷಾತ್ ವಿಷ್ಣುವೇ ಮದುವೆ ಮಾಡಿಕೊಟ್ಟದ್ದರಿಂದ ಅವನು ಯಾವ ಮಾತನ್ನು ಆಡದೆ ಮೌನಿಯಾಗಿ ಕುಳಿತ. ಮತ್ತು ಅವಳು ತನ್ನ ಮನೆಗೆ ಬರುವದಿಲ್ಲ ಎಂದು ಚಂಡಿಹಿಡಿದದ್ದರಿಂದ ಹೊರಹೊರಟ ಅವಳನ್ನು ಕರೆದುಕೊಂಡು, ದಾರಿಯಲ್ಲಿ ಮಾರ್ಗಾಯಾಸದಿಂದ ತಂಗಿದಲ್ಲೆಲ್ಲ ಉದ್ದಾಲಕ ಮಹರ್ಷಿಯು ತನ್ನ ದೇವರ ಪೂಜೆ, ಜಪ, ಹರಿನಾಮ ಸ್ಮರಣೆ, ಪಾರಾಯಣ ಮುಂತಾದವುಗಳನ್ನೆಲ್ಲ ಅಭ್ಯಾಸಬಲದಿಂದಲೇ ಮಾಡುತ್ತಲಿದ್ದ. ಅದನ್ನು ನೋಡಿ ಜ್ಯೇಷ್ಠಾದೇವಿಯು ''ಹೆಜ್ಜೆ ಹೆಜ್ಜೆಗೆ ಹರಿನಾಮ ಸ್ಮರಣೆ ಹರಿಪೂಜೆ ಮಾಡುವ ನಿನ್ನೊಡನೆ ನಾನು ಇನ್ನು ಮುಂದೆ ಒಂದು ಹೆಜ್ಜೆ ಇಡಲಾರೆ'' ಎಂದು ಗುಡುಗಿದಳು.

ಇದನ್ನು ಕೇಳಿ ಗಾಬರಿಯಾದ ಉದ್ದಾಲಕ ಮುನಿ ಹೇಳಿದ -

**ಉದ್ದಾಲಕ:-** ಅಲಕ್ಷ್ಮೀ, ಹಾಗಾದರೆ ನೀನು ಈ ಅರಳೀಮರದ ಅಡಿಯಲ್ಲಿ ತುಸುಹೊತ್ತು ನಿಲ್ಲು. ನಾನು ನಿನಗೊಂದು ಮನೆಯನ್ನು ನೋಡಿಕೊಂಡು ಬರುತ್ತೇನೆ.

ಹೀಗೆ ಹೇಳಿ ಉದ್ದಾಲಕ ಮುನಿಯು ಆ ಜ್ಯೇಷ್ಠಾದೇವಿಯನ್ನು ಅರಳೀಗಿಡದ ಬುಡದಲ್ಲಿ ಕೂಡಿಸಿ ತಾನು ಹೊರಟು ಹೋದ. ಜ್ಯೇಷ್ಠೆಯು ಬಹುಕಾಲದವರೆಗೆ ತನ್ನ ಪತಿಯ ದಾರಿಯನ್ನು ನೋಡಿದಳು. ಎಷ್ಟು ಹೊತ್ತಾದರೂ ತನ್ನ ಪತಿಯು ಬಾರದ್ದರಿಂದ ಆ ಜ್ಯೇಷ್ಠಾದೇವಿಯು ದೊಡ್ಡ ಧ್ವನಿ ತೆಗೆದು ಅಳತೊಡಗಿದಳು. ಅವಳ ರೋದನ ಧ್ವನಿಯು ವೈಕುಂಠ ಲೋಕದಲ್ಲಿರುವ ಲಕ್ಷ್ಮೀದೇವಿಯ ಕಿವಿಗೆ ಕೇಳಿಸಿತು. ಆಗ ಅವಳು ನಾರಾಯಣನಿಗೆ ಬೇಡಿಕೊಂಡಳು.

**ಲಕ್ಷ್ಮೀ:-** ಸ್ವಾಮಿ, ನನ್ನ ಹಿರಿಯ ಅಕ್ಕನಾದ ಜ್ಯೇಷ್ಠಾದೇವಿಯನ್ನು ಅವಳ ಗಂಡ ಬಿಟ್ಟು ಎಲ್ಲಿಗೋ ಹೋಗಿದ್ದಾನೆ. ಅವಳು ಈಗ ರೋಧಿಸುತ್ತಿದ್ದಾಳೆ. ನಿಮಗೆ ನನ್ನ ಮೇಲೆ ನಿಜವಾದ ಪ್ರೀತಿ ಇದ್ದರೆ ಅಲ್ಲಿಗೆ ಹೋಗಿ ಅವಳನ್ನು ಸಂತೈಸಿರಿ.

ಲಕ್ಷ್ಮೀದೇವಿಯು ಈ ಬಿನ್ನಹವನ್ನು ಮನ್ನಿಸಿ ಶ್ರೀಹರಿಯು ಆ ರಮಾದೇವಿಯೊಂದಿಗೆ ಆ ಅರಳಿಯ ಮರದ ಬಳಿಗೆ ಬಂದ. ಅಳುತ್ತಿರುವ ಆ ಜ್ಯೇಷ್ಠಾದೇವಿಯನ್ನು ಸಂತೈಸಿದ.

**ವಿಷ್ಣು:-** ಅಲಕ್ಷ್ಮಿ, ನೀನು ಇಲ್ಲಿಯೇ ಅರಳೀಮರದಲ್ಲಿ ಸ್ಥಿರವಾಗಿ ಇದ್ದು ಬಿಡು. ಈ ಅಶ್ವತ್ಥ ವೃಕ್ಷವು ನನ್ನ ಅಂಶಸಂಭೂತವೇ ಆಗಿದೆ. ಶನಿವಾರವನ್ನು ಹೊರ್ತುಪಡಿಸಿ ನೀನು ಇಲ್ಲಿಯೇ ವಾಸಮಾಡು. ಶನಿವಾರ ದಿನ ನಿನ್ನ ತಂಗಿಯಾದ ಲಕ್ಷ್ಮಿಯು ಇಲ್ಲಿ ಬರುವಳು ಹಾಗೂ ಇಲ್ಲಿಯೇ ನನ್ನ ಜೊತೆಗೆ ಇರುವಳು. ಅದುದರಿಂದ ಈ ಅಶ್ವತ್ಥಮರವು ವಿಶೇಷವಾಗಿ ಶನಿವಾರ ದಿನ ಪೂಜ್ಯವಾಗಿರುತ್ತದೆ. ಪ್ರತಿದಿನವೂ ಲಕ್ಷ್ಮಿ ಹಿರಿಯ ಅಕ್ಕಳಾದ ನಿನ್ನನ್ನು ಯಾವ ಗೃಹಸ್ಥಾಶ್ರಮಿಗಳು ಪೂಜಿಸುವರೋ ಅವರ ಮನೆಯಲ್ಲಿ ನಿನ್ನ ತಂಗಿಯಾದ ಶ್ರೀದೇವಿಯು ಸ್ಥಿರವಾಗಿ ನಿಲ್ಲಲಿ.

**ಸೂತ:-** ವಿಷ್ಣುವಿಗೆ ಪರಮ ಪ್ರಿಯವೂ ಸರ್ವ ಪಾಪಪರಿಹಾರಕವೂ ಆದ ಈ ಕಾರ್ತಿಕಮಾಸ ಮಹಾತ್ಮ್ಯವನ್ನು ಯಾರು ಭಕ್ತಿಯಿಂದ ಶ್ರವಣ ಮಾಡುವರೋ ಮತ್ತು ಪಠಣಮಾಡುವರೋ ಅವರು ಈ ಲೋಕದಲ್ಲಿ ಒಳ್ಳೇ ಸಂತಾನವನ್ನು, ಸಂಪದವನ್ನು ಸೌಭಾಗ್ಯವನ್ನು ಪಡೆದು ಮರಣಾನಂತರ ವಿಷ್ಣುವಿನ ನಗರವಾದ ವೈಕುಂಠದಲ್ಲಿ ನಿರಂತರವಾಗಿ ವಾಸಮಾಡುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಅಲಕ್ಷ್ಮೀವೃತ್ತಾಂತ ವರ್ಣನೆ ಎಂಬ ನೂರ ಹದಿನಾಲ್ಕನೇಯ ಅಧ್ಯಾಯ ಮುಗಿದುದು*



## ಶಂಕರ ಷಣ್ಮುಖ ಸಂವಾದ ಕಾರ್ತೀಕ ಸ್ನಾನದ ಮಹಿಮೆ

**ಅಧ್ಯಾಯ - ೧೧೫**

**ಸೂತ:-** ಶ್ರೀಹರಿಯು ಹೇಳಿದ ಕಾರ್ತಿಕದ ಮಹಿಮೆಯನ್ನು ಕೇಳಿ ಸತ್ಯಭಾಮೆಯು ಸಂತುಷ್ಟಳಾಗಿ ನುಡಿದಳು -

**ಸತ್ಯಭಾಮಾ:-** ಪ್ರಭು, ನಾನು ನಿನ್ನ ಮುಖದಿಂದ ಕಾರ್ತಿಕ ಮಾಸದ ಮಹಿಮೆಯನ್ನು ವಿಸ್ತಾರವಾಗಿ ಕೇಳಿದೆ. ಆದರೆ ಎಲ್ಲ ಮಾಸಗಳಿಗಿಂತ ಈ ಕಾರ್ತಿಕ ಮಾಸವೇ ಏಕೆ ಶ್ರೇಷ್ಠ. ಅದಕ್ಕೆ ಕಾರಣವೇನು?

**ಶ್ರೀಕೃಷ್ಣ:-** ಪ್ರಿಯೆ, ನೀನು ಒಳ್ಳೆಯ ಪ್ರಶ್ನೆ ಮಾಡಿದೆ. ಈ ವಿಷಯದಲ್ಲಿ ಶಿವ ಹಾಗು ಅವನ ಮಗನಾದ ಸ್ಕಂದಸ್ವಾಮಿ ಇವರಿಬ್ಬರಲ್ಲಿ ನಡೆದ ಸಂವಾದವನ್ನು ಸೂತರು ಶೌನಕಾದಿಗಳಿಗೆ ನಿರೂಪಿಸಿದ್ದಾರೆ. ಅದನ್ನೇ ನಿನ್ನ ಪ್ರಶ್ನೆಗೆ ಉತ್ತರರೂಪವಾಗಿ ಹೇಳುತ್ತೇನೆ ಕೇಳು.

**ಸ್ಕಂದ:-** ತಂದೆಯೆ, ಪರಮ ವೈಷ್ಣವರಾದ ನೀವು ಶ್ರೀಹರಿಯ ಅನೇಕ ರಹಸ್ಯವಾದ ಮಹಿಮೆಗಳನ್ನು ತಿಳಿಸಿ ಹೇಳಿದಿರಿ. ಈಗ ಕಾರ್ತಿಕ ಸ್ನಾನದ ವಿಧಿಯನ್ನು ದೀಪದಾನದ ಮಹಿಮೆ, ಗೋಪೀಚಂದನ ಮಹಿಮೆ, ತುಳಸೀ ಮಹಿಮೆ, ಧಾತ್ರಿಫಲಗಳ ಮಹಿಮೆಯನ್ನೂ

ಹೇಳಿರಿ ಮತ್ತು ಮಾಲತೀ, ಕೇದಿಗೆ, ಕಮಲ, ದವನ, ಮರಗು ಮುಂತಾದ ಹೂಗಳಿಂದ ಮಾಡಿದ ಭಗವತ್‌ಪೂಜೆ ಮಾಘ ಸ್ನಾನ, ಬ್ರಹ್ಮಪತ್ರದಲ್ಲಿ ಭೋಜನ, ಶ್ರೀಹರಿಯ ಮಂಗಳಾರತಿ, ನಂದಾದೀಪ, ಸಾಲಿಗ್ರಾಮ ಮಹಿಮೆ, ಪರಾನ್ನವರ್ಜ, ಮಾಸೋಪವಾಸದ ಫಲ, ದೀಪಾವಳಿ, ಪರಬೋಧಿನಿ ಏಕಾದಶೀ ದ್ವಾದಶೀ ವ್ರತ, ಭೀಷ್ಮಪಂಚಕ ವ್ರತ ಮೊದಲಾದವುಗಳ ಮಾಹಾತ್ಮ್ಯವನ್ನು ವಿಸ್ತಾರವಾಗಿಪೂರ್ವಕವಾಗಿ ಹೇಳಿರಿ.

**ಮಹಾದೇವ:-** ವತ್ಸ, ಕಲಿಯುಗದಲ್ಲಿ ಮನುಷ್ಯರಿಗೆ ಸ್ನಾನ ಕಾರ್ಯದಲ್ಲಿ ಆದರವೇ ಇರುವದಿಲ್ಲ. ಆದರೂ ಕಾರ್ತಿಕ ಮಾಘ ಮಾಸಗಳ ಸ್ನಾನ ಮಾಹಾತ್ಮ್ಯವನ್ನು ಹೇಳುತ್ತೇನೆ ಕೇಳು. ಪ್ರಾತಃಕಾಲದಲ್ಲಿ ಪ್ರತಿದಿನವೂ ವಿಶೇಷವಾಗಿ ಕಾರ್ತಿಕ ಮಾಘ ಮಾಸಗಳಲ್ಲಿ ತೀರ್ಥಸ್ನಾನವನ್ನು ಮಾಡುವದರಿಂದ ಸರ್ವಪಾಪಗಳಿಂದ ಮುಕ್ತನಾಗಿ ಮಾನವನು ಪರಬ್ರಹ್ಮನ ಸಾನ್ನಿಧ್ಯವನ್ನು ಹೊಂದುತ್ತಾನೆ. ಸ್ನಾನವು ನಾಲ್ಕು ವಿಧವಾಗಿದೆ. ವಾಯವ್ಯ, ವಾರುಣ, ದಿವ್ಯ, ಬ್ರಾಹ್ಮ ಎಂದು. ಗೋಧೂಳಿಯಿಂದ ಸ್ನಾನ ಮಾಡುವದು ವಾಯುವ್ಯ ಸ್ನಾನವೆನಿಸುತ್ತದೆ. ನದೀ, ಸಮುದ್ರ, ಭಾವಿ, ಸರೋವರಗಳಲ್ಲಿ ನೀರಿನಿಂದ ಮಾಡುವ ಸ್ನಾನವು ವಾರುಣಸ್ನಾನ. ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಮಂತ್ರವಿಧಿಪೂರ್ವಕವಾಗಿ ಮಾಡಿದ ಸ್ನಾನ ಬ್ರಾಹ್ಮಸ್ನಾನ. ಮಳೆಯ ನೀರಿನಲ್ಲಿ ಮಾಡಿದ ಸ್ನಾನವೂ ಬಿಸಿಲು ಮಳೆ ಎರಡೂ ಇದ್ದಾಗ ಬಯಲಲ್ಲಿ ನಿಂತು ಮಾಡಿದ ಸ್ನಾನವೂ ದಿವ್ಯಸ್ನಾನ ಎನಿಸುತ್ತದೆ ಎಲ್ಲ ಸ್ನಾನಗಳಲ್ಲಿ ನದೀ, ಕೆರೆ, ಭಾವಿಗಳು ಮುಂತಾದವುಗಳ ನೀರಿನಿಂದ ಮಾಡಿದ ವಾರುಣ ಸ್ನಾನವು ದಿವ್ಯ ಎಂದೂ ಶ್ರೇಷ್ಠ ಎಂದೂ ಕರೆಯಲ್ಪಡುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ವೇದ ಮಂತ್ರಗಳನ್ನು ಪಠಿಸಿ ಶಾಸ್ತ್ರೋಕ್ತವಾಗಿ ಸ್ನಾನ ಮಾಡಬೇಕು. ಸ್ತ್ರೀಯರು, ಶೂದ್ರರು ಭಗವನ್ನಾಮಸ್ಮರಣೆಯನ್ನು ಮಾಡುತ್ತ ಗಂಗಾದಿ ದಿವ್ಯ ತೀರ್ಥಗಳ ಹೆಸರು ಹೇಳಿ ನಮಸ್ಕಾರಮಾಡಿ ಸ್ನಾನ ಮಾಡಬೇಕು. ಈ ಕಾರ್ತಿಕ ಮಾಘ ಮಾಸಗಳಲ್ಲಿ ಸ್ನಾನ ಮಾಡುವದರಿಂದ ಬಾಲಿಕೆಯರು, ತರುಣಿಯರು, ವೃದ್ಧಸ್ತ್ರೀಯರು, ಪುರುಷರು ನಪುಂಸಕರು ಕೂಡ ಸರ್ವ ಪಾಪಗಳಿಂದ ಮುಕ್ತರಾಗಿ ದಿವ್ಯಗತಿಯನ್ನು ಹೊಂದುವರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶಂಕರ ಷಣ್ಮುಖ ಸಂವಾದ ಕಾರ್ತೀಕ ಸ್ನಾನದ ಮಹಿಮೆಎಂಬ ನೂರ ಹದಿನೈದನೇಯ ಅಧ್ಯಾಯ ಮುಗಿದುದು*

—o—

# ಕಾರ್ತಿಕದಲ್ಲಿ ದಾನದ ಮಹಿಮೆ

## ಅಧ್ಯಾಯ - ೧೧೬

**ಮಹಾದೇವ:-** ಎಲ್ಲ ಮಾಸಗಳಲ್ಲಿ ಕಾರ್ತಿಕ ಮಾಸವು ವೈಷ್ಣವ ಮಾಸ ಎನಿಸಿದೆ. ಈ ಮಾಸದಲ್ಲಿ ಮಾಡಿದ ದಾನ ಧರ್ಮ ಎಲ್ಲವೂ ಹರಿ ಪ್ರೀತಿಕರ. ಕಾರ್ತಿಕದಲ್ಲಿ ಎಳ್ಳಿನ ಹಸು, ಬಂಗಾರ, ಬೆಳ್ಳಿ, ಭೂಮಿ, ವಸ್ತ್ರ, ಮೃಷ್ಟಾನ್ನ ಭೋಜನ, ಆಕಳು ಮುಂತಾದವುಗಳನ್ನು ದ್ವಿಜ ಶ್ರೇಷ್ಠರನ್ನು ಕರೆದು ದಾನಕೊಡಬೇಕು. ಎಲ್ಲ ದಾನಗಳಲ್ಲಿ ಕನ್ಯಾದಾನವು ಶ್ರೇಷ್ಠವಾಗಿದೆ. ಯೋಗ್ಯನಾದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ಕನ್ಯಾದಾನವನ್ನು ಮಾಡಿಕೊಟ್ಟ ಜನರು ಹದಿನಾಲ್ಕು ಇಂದ್ರರು ಇರುವವರೆಗೆ ವೈಕುಂಠದಲ್ಲಿ ವಾಸಮಾಡಿಕೊಂಡು ಇರುವರು. ಕನ್ಯೆಯ ದೇಹದಲ್ಲಿ ಕೂದಲು ಅಂಕುರಿಸಿದ ಕೂಡಲೇ ಅವಳನ್ನು ಚಂದ್ರನು ಭೋಗಿಸುತ್ತಾನೆ. ಋತುಕಾಲದಲ್ಲಿ ಗಂಧರ್ವರು ಭೋಗಿಸುತ್ತಾರೆ. ಎದೆಮೂಡಿದಾಗ ಅಗ್ನಿಯು ಅವಳನ್ನು ಉಪಭೋಗಿಸುತ್ತಾನೆ. ಕನ್ಯೆಯು ಮೈ ನೆರೆಯುವ ಮುನ್ನವೇ ಮದುವೆಮಾಡಬೇಕು. ಎಂಟುವರ್ಷದ ವಯಸ್ಸಿನಲ್ಲಿಯೇ ಕನ್ಯೆಯ ವಿವಾಹ ಮಾಡುವದು ಪ್ರಶಸ್ತ, ಶ್ರೋತ್ರೀಯನಾದ, ತಪಸ್ವಿಯಾದ, ಎಲ್ಲ ವೇದ ವಿದ್ಯೆಯನ್ನು ಓದಿ ಮುಗಿಸಿದ ಬ್ರಹ್ಮಚಾರಿಗೆ ವಿಧಿಪೂರ್ವಕವಾಗಿ ದಾನಮಾಡಿಕೊಟ್ಟರೆ ಆ ಮಗಳ ಮೈಯಲ್ಲಿ ಎಷ್ಟು ಕೂದಲುಗಳು ಇರುತ್ತವೆಯೋ ಅಷ್ಟು ಸಾವಿರ ವರ್ಷರುದ್ರಲೋಕದಲ್ಲಿ ಸುಖದಿಂದ ಇರುತ್ತಾನೆ ಕನ್ಯೆದಾತಾ. ಸಾವಿರ ಆಕಳಗಳನ್ನು ದಾನಮಾಡಿದ ಪುಣ್ಯವು ನೂರು ಎತ್ತುಗಳನ್ನು ದಾನಮಾಡುವದರಿಂದ ಬರುವದು. ಹತ್ತು ಎತ್ತುಗಳ ದಾನಕ್ಕೆ ಸಮವಾಗಿದೆ ಒಂದು ಬಂಡಿಯ ದಾನ. ಹತ್ತು ಬಂಡಿಗಳ ದಾನಕ್ಕೆ ಸಮವಾಗಿದೆ ಒಂದು ಕುದುರೆ ದಾನ. ಸಾವಿರ ಕುದುರೆ ದಾನ ಮಾಡಿದ್ದಕ್ಕಿಂತ ಹೆಚ್ಚಿನ ಪುಣ್ಯ ಒಂದು ಆನೆಯ ದಾನದಿಂದ ಸಾವಿರ ಆನೆಗಳ ದಾನಕ್ಕೆ ಸಮಾನವಾಗಿದೆ ಸುವರ್ಣದಾನ. ಸಾವಿರ ತೊಲೆಬಂಗಾರ ದಾನ ಹಾಗೂ ವಿದ್ಯಾದಾನ ಎರಡೂ ಸಮವಾಗಿವೆ. ವಿದ್ಯಾದಾನಕ್ಕಿಂತ ಕೋಟಿಪಟ್ಟು ಮಿಗಿಲಾಗಿದೆ ಭೂಮಿದಾನ. ಸಾವಿರ ಭೂದಾನಗಳಿಗಿಂತ ಒಂದು ಗೋದಾನ ಶ್ರೇಷ್ಠ. ಸಾವಿರ ಗೋದಾನಕ್ಕಿಂತ ಅನ್ನದಾನವು ಹೆಚ್ಚಿನದು. ಈ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತಿಗೆಲ್ಲ ಅನ್ನವೇ ಮೂಲಾಧಾರ. ಆದುದರಿಂದ ಕಾರ್ತಿಕ ಮಾಸದಲ್ಲಿ ಹೆಚ್ಚಾಗಿ ಅನ್ನದಾನವನ್ನು ಮಾಡಬೇಕು. ಕಾರ್ತಿಕದಲ್ಲಿ ಗೋಮಾತೆ, ಭೂಮಾತೆ, ವೇದ ಮಾತೆಗಳ ದಾನವು ಮುಖ್ಯವಾಗಿ ಭಗವತ್ ಪ್ರೀತಿಕರ ಮತ್ತು ನಿರತಿಶಯ ಪುಣ್ಯಕರ.

**ಸ್ಕಂದ:-** ಮಹಾದೇವ, ಮತ್ತೆ ಬೇರೆ ಬೇರೆ ಧರ್ಮಗಳನ್ನು ಹೇಳು.

**ಮಹಾದೇವ:-** ಕಾರ್ತಿಕದಲ್ಲಿ ಪರಾನ್ನವನ್ನು ಬಿಟ್ಟರೆ ಚಾಂದ್ರಾಯಣ ವ್ರತ ಮಾಡಿದ ಫಲ. ಕಾರ್ತಿಕದಲ್ಲಿ ಎಣ್ಣೆ, ಜೇನುತುಪ್ಪ, ಕಂಚಿನ ಪಾತ್ರೆಯಲ್ಲಿ ಊಟ, ಸಂಘ ಸಮೂಹಗಳ ಗಣಾನ್ನ ಈ ನಾಲ್ಕು ವರ್ಜಿಸಬೇಕು. ಕಾರ್ತಿಕದಲ್ಲಿ ಒಮ್ಮೆ ಮಾಂಸತಿಂದರೆ ಮನುಷ್ಯನು ಅರವತ್ತು ಸಾವಿರ ವರ್ಷ ಹೇಸಿಗೆಯಲ್ಲಿ ಹುಳವಾಗಿ ಹೊರಳಾಡಿ ರಾಕ್ಷಸಜನ್ಮವನ್ನು ಹೊಂದುತ್ತಾರೆ. ಅರವತ್ತು ಸಾವಿರ ವರ್ಷಗಳಾದ ಮೇಲೆ ಹಂದಿಯಾಗಿ ಬಹುಕಾಲ ಮಲವನ್ನು ತಿನ್ನುತ್ತಾ ತಿರುಗುತ್ತಾನೆ. ಕಾರ್ತಿಕದಲ್ಲಿ ಭಕ್ಷ್ಯವಾದ ಪದಾರ್ಥಗಳನ್ನು ಕೂ

ಒಂದು ನಿಯಮ ಹಿಡಿದು ವರ್ಜಿಸಿದರೆ ಕೊನೆಗೆ ಉದ್ಯಾಪನೆಯನ್ನು ಮಾಡಿದರೆ ಕೊನೆಗೆ ಅವನು ಮೋಕ್ಷವನ್ನು ಹೊಂದುತ್ತಾನೆ.

**ನ ಕಾರ್ತಿಕ ಸಮೋ ಮಾಸೋ ನ ದೈವಂ ಕೇಶವಾತ್ ಪರಂ ।**
**ನ ವೇದ ಸದೃಶಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಮ್ ॥**

ಕಾರ್ತಿಕಕ್ಕೆ ಸಮಾನವಾದ ಮಾಸವಿಲ್ಲ. ಕೇಶವನಿಗಿಂತ ಮಿಗಿಲಾದ ದೇವನಿಲ್ಲ. ವೇದಕ್ಕೆ ಸಮಾನವಾದ ಶಾಸ್ತ್ರವಿಲ್ಲ. ಗಂಗೆಗೆ ಸಮಾನವಾದ ತೀರ್ಥವಿಲ್ಲ.

**ನ ತೃಪ್ತೀ ರಸನಾತುಲ್ಯಾ ನ ದಾನಸದೃಶಂ ಸುಖಮ್ ।**
**ನಧರ್ಮ ಸದೃಶಂ ಮಿತ್ರಂ ನಜ್ಯೋತಿಃ ಚಕ್ಷುಷಾಸಮಮ್ ॥**

ನಾಲಿಗೆಯಿಂದ ಆಗುವಷ್ಟು ತೃಪ್ತಿಯು ಯಾವುದರಿಂದಲೂ ಆಗುವದಿಲ್ಲ. ದಾನದಿಂದ ಆಗುವಷ್ಟು ಸುಖ ಬೇರೆ ಯಾವದರಿಂದಲೂ ಆಗುವದಿಲ್ಲ. ಧರ್ಮಕ್ಕೆ ಸಮಾನವಾದ ಮಿತ್ರನಿಲ್ಲ. ಕಣ್ಣಿನ ಸಮಾನವಾದ ಜ್ಯೋತಿ ಇಲ್ಲ. ಕಾರ್ತಿಕ ಮಾಸದಲ್ಲಿ ಕಂಬಳಿ, ರತ್ನ, ಬಟ್ಟೆ, ಪಾದರಕ್ಷೆ, ಕೊಡೆ ಮುಂತಾದವುಗಳನ್ನು ದಾನಮಾಡಬೇಕು. ತಿಲದಾನ (ಎಳ್ಳಿನದಾನ) ನದೀಸ್ನಾನ, ಮುತ್ತಲ ಎಲೆಯಲ್ಲಿ ಊಟ ಇವು ಮೂರು ಕಾರ್ತಿಕದಲ್ಲಿ ಅಧಿಕ ಪುಣ್ಯಕರ. ಕಾರ್ತಿಕ ಮಾಸದಲ್ಲಿ ದೇವರ ಎದುರು ಅರುಣೋದಯ ಕಾಲದಲ್ಲಿ ಜಾಗರೋತ್ಸವ ಹಾಗೂ ಗಾನಸೇವೆ ಸಲ್ಲಿಸಿದವರು ಸಾವಿರ ಹಸುಗಳನ್ನು ದಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾರೆ. ಪ್ರಯಾಗದಲ್ಲಿ ಮಾಘಸ್ನಾನ, ಪುಷ್ಕರದಲ್ಲಿ ಕಾರ್ತಿಕಸ್ನಾನ ಉಜ್ಜಯನಿಯಲ್ಲಿ ವೈಶಾಖಸ್ನಾನ ಮಾಡಿದವರು ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತರಾಗುತ್ತಾರೆ. ಕಾರ್ತಿಕದಲ್ಲಿ ಕಮಲ ಪುಷ್ಪದಿಂದ ಕಮಲಾಪತಿಯನ್ನು ಪೂಜಿಸಿದರೆ ಸಾವಿರ ವರ್ಷದ ಪಾಪಗಳು ಕ್ಷೀಣವಾಗುತ್ತವೆ.

**ದಷ್ಟಾ ಮುಷ್ಟಾ ವಿನಷ್ಟಾಸ್ತೇ ಪತಿತಾಃ ಕಲಿ ಕಂದರೇ ।**
**ಯೈರ್ನಾರ್ಚಿತೋ ಹರಿರ್ಭಕ್ತ್ಯಾಕಮಲೈರಸಿತೈಃ ಸಿತೈಃ ॥**

ಯಾರು ಕರಿಬಿಳಿ ಕಮಲಗಳಿಂದ ಭಕ್ತಿಪೂರ್ವಕವಾಗಿ ಶ್ರೀಹರಿಯನ್ನು ಪೂಜಿಸಿಲ್ಲವೊ ಅವರು ಮೃತ್ಯುವಿನಿಂದ ಕಚ್ಚಲ್ಪಟ್ಟು ಕಲಿ ಎಂಬ ಹಾಳುಭಾವಿಯಲ್ಲಿ ಬಿದ್ದು ನಷ್ಟರಾಗಿ ಹೋದಂತೆಯೇ. ಕಾರ್ತಿಕ ಮಾಸದಲ್ಲಿ ಲಕ್ಷ ತುಳಸೀ ದಳಗಳನ್ನು ಏರಿಸಿ, ಹರಿಯ ಪೂಜೆಯನ್ನು ಮಾಡಿದವರು ಮುಕ್ತಿಯನ್ನು ಹೊಂದುತ್ತಾರೆ. ತಲೆ, ಬಾಯಿ, ದೇಹಗಳಲ್ಲಿ ಶ್ರೀಹರಿಯ ನಿರ್ಮಾಲ್ಯ ತುಳಸಿಯನ್ನು ಧರಿಸಿದ ಮನುಷ್ಯನನ್ನು ಕಲಿಯು ಮುಟ್ಟುವದಿಲ್ಲ. ವಿಷ್ಣುವಿನ ಅಂಗಾರವನ್ನು ಹಚ್ಚಿಕೊಂಡವರ ಪಾಪಗಳೂ ರೋಗಗಳೂ ನಾಶಹೊಂದುತ್ತವೆ. ಹರಿಗೆ ಅಪಾದಮಸ್ತಕ ಶಂಖ ಭ್ರಮಣಮಾಡಿ ಇರಿಸಿದ ಶಂಖೋದಕ, ಹರಿಯ ನಿರ್ಮಾಲ್ಯ, ಹರಿಯ ಪಾದೋದಕ, ಶ್ರೀಹರಿಗೆ ಏರಿಸಿದ ಗಂಧ ಮತ್ತು ಅಂಗಾರ ಇವು ಎಲ್ಲವೂ ಬ್ರಹ್ಮಹತ್ಯಾ ಪಾಪವನ್ನು ಪರಿಹರಿಸಲಿಕ್ಕೆ ಸಮರ್ಥವಾಗಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕದಲ್ಲಿ ದಾನದ ಮಹಿಮೆ ಎಂಬ ನೂರ ಹದಿನಾರನೇಯ ಅಧ್ಯಾಯ ಮುಗಿದುದು*

## ಕಾರ್ತಿಕದಲ್ಲಿ ದಾನದ ಮಹಿಮೆ

**ಅಧ್ಯಾಯ - ೧೧೬**

**ಮಹಾದೇವ:-** ಎಲ್ಲ ಮಾಸಗಳಲ್ಲಿ ಕಾರ್ತಿಕ ಮಾಸವು ವೈಷ್ಣವ ಮಾಸ ಎನಿಸಿದೆ. ಈ ಮಾಸದಲ್ಲಿ ಮಾಡಿದ ದಾನ ಧರ್ಮ ಎಲ್ಲವೂ ಹರಿ ಪ್ರೀತಿಕರ. ಕಾರ್ತಿಕದಲ್ಲಿ ಎಳ್ಳಿನ ಹಸು, ಬಂಗಾರ, ಬೆಳ್ಳಿ, ಭೂಮಿ, ವಸ್ತ್ರ, ಮೃಷ್ಟಾನ್ನ ಭೋಜನ, ಆಕಳು ಮುಂತಾದವುಗಳನ್ನು ದ್ವಿಜ ಶ್ರೇಷ್ಠರನ್ನು ಕರೆದು ದಾನಕೊಡಬೇಕು. ಎಲ್ಲ ದಾನಗಳಲ್ಲಿ ಕನ್ಯಾದಾನವು ಶ್ರೇಷ್ಠವಾಗಿದೆ. ಯೋಗ್ಯನಾದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ಕನ್ಯಾದಾನವನ್ನು ಮಾಡಿಕೊಟ್ಟ ಜನರು ಹದಿನಾಲ್ಕು ಇಂದ್ರರು ಇರುವವರೆಗೆ ವೈಕುಂಠದಲ್ಲಿ ವಾಸಮಾಡಿಕೊಂಡು ಇರುವರು. ಕನ್ಯೆಯ ದೇಹದಲ್ಲಿ ಕೂದಲು ಅಂಕುರಿಸಿದ ಕೂಡಲೇ ಅವಳನ್ನು ಚಂದ್ರನು ಭೋಗಿಸುತ್ತಾನೆ. ಋತುಕಾಲದಲ್ಲಿ ಗಂಧರ್ವರು ಭೋಗಿಸುತ್ತಾರೆ. ಎದೆಮೂಡಿದಾಗ ಅಗ್ನಿಯು ಅವಳನ್ನು ಉಪಭೋಗಿಸುತ್ತಾನೆ. ಕನ್ಯೆಯು ಮೈ ನೆರೆಯುವ ಮುನ್ನವೇ ಮದುವೆಮಾಡಬೇಕು. ಎಂಟುವರ್ಷದ ವಯಸ್ಸಿನಲ್ಲಿಯೇ ಕನ್ಯೆಯ ವಿವಾಹ ಮಾಡುವದು ಪ್ರಶಸ್ತ, ಶ್ರೋತ್ರೀಯನಾದ, ತಪಸ್ವಿಯಾದ, ಎಲ್ಲ ವೇದ ವಿದ್ಯೆಯನ್ನು ಓದಿ ಮುಗಿಸಿದ ಬ್ರಹ್ಮಚಾರಿಗೆ ವಿಧಿಪೂರ್ವಕವಾಗಿ ದಾನಮಾಡಿಕೊಟ್ಟರೆ ಆ ಮಗಳ ಮೈಯಲ್ಲಿ ಎಷ್ಟು ಕೂದಲುಗಳು ಇರುತ್ತವೆಯೋ ಅಷ್ಟು ಸಾವಿರ ವರ್ಷರುದ್ರಲೋಕದಲ್ಲಿ ಸುಖದಿಂದ ಇರುತ್ತಾನೆ ಕನ್ಯೆದಾತಾ. ಸಾವಿರ ಆಕಳಗಳನ್ನು ದಾನಮಾಡಿದ ಪುಣ್ಯವು ನೂರು ಎತ್ತುಗಳನ್ನು ದಾನಮಾಡುವದರಿಂದ ಬರುವದು. ಹತ್ತು ಎತ್ತುಗಳ ದಾನಕ್ಕೆ ಸಮವಾಗಿದೆ ಒಂದು ಬಂಡಿಯ ದಾನ. ಹತ್ತು ಬಂಡಿಗಳ ದಾನಕ್ಕೆ ಸಮವಾಗಿದೆ ಒಂದು ಕುದುರೆ ದಾನ. ಸಾವಿರ ಕುದುರೆ ದಾನ ಮಾಡಿದ್ದಕ್ಕಿಂತ ಹೆಚ್ಚಿನ ಪುಣ್ಯ ಒಂದು ಆನೆಯ ದಾನದಿಂದ ಸಾವಿರ ಆನೆಗಳ ದಾನಕ್ಕೆ ಸಮಾನವಾಗಿದೆ ಸುವರ್ಣದಾನ. ಸಾವಿರ ತೊಲೆಬಂಗಾರ ದಾನ ಹಾಗೂ ವಿದ್ಯಾದಾನ ಎರಡೂ ಸಮವಾಗಿವೆ. ವಿದ್ಯಾದಾನಕ್ಕಿಂತ ಕೋಟಿಪಟ್ಟು ಮಿಗಿಲಾಗಿದೆ ಭೂಮಿದಾನ. ಸಾವಿರ ಭೂದಾನಗಳಿಗಿಂತ ಒಂದು ಗೋದಾನ ಶ್ರೇಷ್ಠ. ಸಾವಿರ ಗೋದಾನಕ್ಕಿಂತ ಅನ್ನದಾನವು ಹೆಚ್ಚಿನದು. ಈ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತಿಗೆಲ್ಲ ಅನ್ನವೇ ಮೂಲಾಧಾರ. ಆದುದರಿಂದ ಕಾರ್ತಿಕ ಮಾಸದಲ್ಲಿ ಹೆಚ್ಚಾಗಿ ಅನ್ನದಾನವನ್ನು ಮಾಡಬೇಕು. ಕಾರ್ತಿಕದಲ್ಲಿ ಗೋಮಾತೆ, ಭೂಮಾತೆ, ವೇದ ಮಾತೆಗಳ ದಾನವು ಮುಖ್ಯವಾಗಿ ಭಗವತ್ ಪ್ರೀತಿಕರ ಮತ್ತು ನಿರತಿಶಯ ಪುಣ್ಯಕರ.

**ಸ್ಕಂದ:-** ಮಹಾದೇವ, ಮತ್ತೆ ಬೇರೆ ಬೇರೆ ಧರ್ಮಗಳನ್ನು ಹೇಳು.

**ಮಹಾದೇವ:-** ಕಾರ್ತಿಕದಲ್ಲಿ ಪರಾನ್ನವನ್ನು ಬಿಟ್ಟರೆ ಚಾಂದ್ರಾಯಣ ವ್ರತ ಮಾಡಿದ ಫಲ. ಕಾರ್ತಿಕದಲ್ಲಿ ಎಣ್ಣೆ, ಜೇನುತುಪ್ಪ, ಕಂಚಿನ ಪಾತ್ರೆಯಲ್ಲಿ ಊಟ, ಸಂಘ ಸಮೂಹಗಳ ಗಣಾನ್ನ ಈ ನಾಲ್ಕು ವರ್ಜಿಸಬೇಕು. ಕಾರ್ತಿಕದಲ್ಲಿ ಒಮ್ಮೆ ಮಾಂಸತಿಂದರೆ ಮನುಷ್ಯನು ಅರವತ್ತು ಸಾವಿರ ವರ್ಷ ಹೇಸಿಗೆಯಲ್ಲಿ ಹುಳವಾಗಿ ಹೊರಳಾಡಿ ರಾಕ್ಷಸಜನ್ಮವನ್ನು ಹೊಂದುತ್ತಾರೆ. ಅರವತ್ತು ಸಾವಿರ ವರ್ಷಗಳಾದ ಮೇಲೆ ಹಂದಿಯಾಗಿ ಬಹುಕಾಲ ಮಲವನ್ನು ತಿನ್ನುತ್ತಾ ತಿರುಗುತ್ತಾನೆ. ಕಾರ್ತಿಕದಲ್ಲಿ ಭಕ್ಷ್ಯವಾದ ಪದಾರ್ಥಗಳನ್ನು ಕೂಡ

ಒಂದು ನಿಯಮ ಹಿಡಿದು ವರ್ಜಿಸಿದರೆ ಕೊನೆಗೆ ಉದ್ಯಾಪನೆಯನ್ನು ಮಾಡಿದರೆ ಕೊನೆಗೆ ಅವನು ಮೋಕ್ಷವನ್ನು ಹೊಂದುತ್ತಾನೆ.

**ನ ಕಾರ್ತಿಕ ಸಮೋ ಮಾಸೋ ನ ದೈವಂ ಕೇಶವಾತ್ ಪರಂ ।**
**ನ ವೇದ ಸದೃಶಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಮ್ ॥**

ಕಾರ್ತಿಕಕ್ಕೆ ಸಮಾನವಾದ ಮಾಸವಿಲ್ಲ. ಕೇಶವನಿಗಿಂತ ಮಿಗಿಲಾದ ದೇವನಿಲ್ಲ. ವೇದಕ್ಕೆ ಸಮಾನವಾದ ಶಾಸ್ತ್ರವಿಲ್ಲ. ಗಂಗೆಗೆ ಸಮಾನವಾದ ತೀರ್ಥವಿಲ್ಲ.

**ನ ತೃಪ್ತೀ ರಸನಾತುಲ್ಯಾ ನ ದಾನಸದೃಶಂ ಸುಖಮ್ ।**
**ನಧರ್ಮ ಸದೃಶಂ ಮಿತ್ರಂ ನಜ್ಯೋತಿಃ ಚಕ್ಷುಷಾಸಮಮ್ ॥**

ನಾಲಿಗೆಯಿಂದ ಆಗುವಷ್ಟು ತೃಪ್ತಿಯು ಯಾವುದರಿಂದಲೂ ಆಗುವದಿಲ್ಲ. ದಾನದಿಂದ ಆಗುವಷ್ಟು ಸುಖ ಬೇರೆ ಯಾವದರಿಂದಲೂ ಆಗುವದಿಲ್ಲ. ಧರ್ಮಕ್ಕೆ ಸಮಾನವಾದ ಮಿತ್ರನಿಲ್ಲ. ಕಣ್ಣಿನ ಸಮಾನವಾದ ಜ್ಯೋತಿ ಇಲ್ಲ. ಕಾರ್ತಿಕ ಮಾಸದಲ್ಲಿ ಕಂಬಳಿ, ರತ್ನ, ಬಟ್ಟೆ, ಪಾದರಕ್ಷೆ, ಕೊಡೆ ಮುಂತಾದವುಗಳನ್ನು ದಾನಮಾಡಬೇಕು. ತಿಲದಾನ (ಎಳ್ಳಿನದಾನ) ನದೀಸ್ನಾನ, ಮುತ್ತಲ ಎಲೆಯಲ್ಲಿ ಊಟ ಇವು ಮೂರು ಕಾರ್ತಿಕದಲ್ಲಿ ಅಧಿಕ ಪುಣ್ಯಕರ. ಕಾರ್ತಿಕ ಮಾಸದಲ್ಲಿ ದೇವರ ಎದುರು ಅರುಣೋದಯ ಕಾಲದಲ್ಲಿ ಜಾಗರೋತ್ಸವ ಹಾಗೂ ಗಾನಸೇವೆ ಸಲ್ಲಿಸಿದವರು ಸಾವಿರ ಹಸುಗಳನ್ನು ದಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾರೆ. ಪ್ರಯಾಗದಲ್ಲಿ ಮಾಘಸ್ನಾನ, ಪುಷ್ಕರದಲ್ಲಿ ಕಾರ್ತಿಕಸ್ನಾನ ಉಜ್ಜಯನಿಯಲ್ಲಿ ವೈಶಾಖಸ್ನಾನ ಮಾಡಿದವರು ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತರಾಗುತ್ತಾರೆ. ಕಾರ್ತಿಕದಲ್ಲಿ ಕಮಲ ಪುಷ್ಪದಿಂದ ಕಮಲಾಪತಿಯನ್ನು ಪೂಜಿಸಿದರೆ ಸಾವಿರ ವರ್ಷದ ಪಾಪಗಳು ಕ್ಷೀಣವಾಗುತ್ತವೆ.

**ದಷ್ಟಾ ಮುಷ್ಟಾ ವಿನಷ್ಟಾಸ್ತೇ ಪತಿತಾಃ ಕಲಿ ಕಂದರೇ ।**
**ಯೈರ್ನಾರ್ಚಿತೋ ಹರಿರ್ಭಕ್ತ್ಯಾಕಮಲೈರಸಿತೈಃ ಸಿತೈಃ ॥**

ಯಾರು ಕರಿಬಿಳಿ ಕಮಲಗಳಿಂದ ಭಕ್ತಿಪೂರ್ವಕವಾಗಿ ಶ್ರೀಹರಿಯನ್ನು ಪೂಜಿಸಿಲ್ಲವೊ ಅವರು ಮೃತ್ಯುವಿನಿಂದ ಕಚ್ಚಲ್ಪಟ್ಟು ಕಲಿ ಎಂಬ ಹಾಳುಭಾವಿಯಲ್ಲಿ ಬಿದ್ದು ನಷ್ಟರಾಗಿ ಹೋದಂತೆಯೇ. ಕಾರ್ತಿಕ ಮಾಸದಲ್ಲಿ ಲಕ್ಷ ತುಳಸೀ ದಳಗಳನ್ನು ಏರಿಸಿ, ಹರಿಯ ಪೂಜೆಯನ್ನು ಮಾಡಿದವರು ಮುಕ್ತಿಯನ್ನು ಹೊಂದುತ್ತಾರೆ. ತಲೆ, ಬಾಯಿ, ದೇಹಗಳಲ್ಲಿ ಶ್ರೀಹರಿಯ ನಿರ್ಮಾಲ್ಯ ತುಳಸಿಯನ್ನು ಧರಿಸಿದ ಮನುಷ್ಯನನ್ನು ಕಲಿಯು ಮುಟ್ಟುವದಿಲ್ಲ. ವಿಷ್ಣುವಿನ ಅಂಗಾರವನ್ನು ಹಚ್ಚಿಕೊಂಡವರ ಪಾಪಗಳೂ ರೋಗಗಳೂ ನಾಶಹೊಂದುತ್ತವೆ. ಹರಿಗೆ ಅಪಾದಮಸ್ತಕ ಶಂಖ ಭ್ರಮಣಮಾಡಿ ಇರಿಸಿದ ಶಂಖೋದಕ, ಹರಿಯ ನಿರ್ಮಾಲ್ಯ, ಹರಿಯ ಪಾದೋದಕ, ಶ್ರೀಹರಿಗೆ ಏರಿಸಿದ ಗಂಧ ಮತ್ತು ಅಂಗಾರ ಇವು ಎಲ್ಲವೂ ಬ್ರಹ್ಮಹತ್ಯಾ ಪಾಪವನ್ನು ಪರಿಹರಿಸಲಿಕ್ಕೆ ಸಮರ್ಥವಾಗಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತಿಕದಲ್ಲಿ ದಾನದ ಮಹಿಮೆ ಎಂಬ ನೂರ ಹದಿನಾರನೇಯ ಅಧ್ಯಾಯ ಮುಗಿದುದು*

## ಮಾಸೋಪವಾಸ ಮತ್ತು ಸೂಕರ ಕ್ಷೇತ್ರ ಮಹಿಮಾ ವರ್ಣನೆ

**ಅಧ್ಯಾಯ - ೧೧೭**

**ಶ್ರೀಕೃಷ್ಣ:-** ಐದು ಯೋಜನ ವಿಸ್ತಾರವಾದ ಸೂಕರ ಕ್ಷೇತ್ರದಲ್ಲಿ ಸ್ನಾನ ದಾನ ಹಾಗೂ ವರಾಹದೇವರ ಪೂಜೆಯಿಂದ ಮನುಷ್ಯನ ಬ್ರಹ್ಮಹತ್ಯಾದಿ ಪಾಪಗಳು ಬಿಟ್ಟು ಹೋಗುತ್ತವೆ. ಈ ಸೂಕರ ಕ್ಷೇತ್ರದ ಮಹಾತ್ಮೆಯನ್ನು ಕೇಳಿ ಅಲರ್ಕ ಮಹಾರಾಜನು ಪ್ರಾಚೀನಕಾಲದಲ್ಲಿ ಸಪ್ತದ್ವೀಪವತಿಯಾದ ಪೃಥ್ವಿಗೆ ಸಮ್ರಾಟನು ಆದ.

**ಸ್ಕಂದ:-** ಪೂಜ್ಯನಾದ ಪರಮೇಶ್ವರ, ಮಾಸೋಪವಾಸದ ವಿಧಿಯನ್ನೂ ಫಲವನ್ನೂ ನನಗೆ ತಿಳಿಸಿಹೇಳು. ಒಂದು ಮಾಸದವರೆಗೆ ಉಪವಾಸ ಮಾಡಬೇಕಾದ ಈ ವ್ರತದ ವಿಧಿವಿಧಾನಗಳು ಏನು? ಅದನ್ನು ಹೇಗೆ ಶುರು ಮಾಡಬೇಕು? ಅದನ್ನು ಮುಗಿಸುವ ಕ್ರಮ ಯಾವದು? ಇದನ್ನೆಲ್ಲ ನನಗೆ ನಿರೂಪಿಸು.

**ಮಹಾದೇವ:-** ದೇವತೆಗಳಿಗೆಲ್ಲ ವಿಷ್ಣು, ಜ್ಯೋತಿಗಳಿಗೆಲ್ಲ ಸೂರ್ಯ, ಪರ್ವತಗಳಿಗೆಲ್ಲ ಮೇರು, ಪಕ್ಷಿಗಳಿಗೆಲ್ಲ ಗರುಡ, ತೀರ್ಥಗಳಲ್ಲಿ ಗಂಗೆ, ಪ್ರಜೆಗಳಿಗೆಲ್ಲ ವೈಶ್ಯ ಶ್ರೇಷ್ಠನಿದ್ದಂತೆ ಎಲ್ಲ ವ್ರತಗಳಲ್ಲಿ ಒಂದು ತಿಂಗಳಕಾಲ ಉಪವಾಸ ಮಾಡಬೇಕಾದ ಮಾಸೋಪವಾಸ ವ್ರತವು ಶ್ರೇಷ್ಠವಾಗಿರುತ್ತದೆ. ವಿಧಿಪೂರ್ವಕವಾಗಿ ಒಂದು ತಿಂಗಳ ಉಪವಾಸ ವ್ರತವನ್ನು ಮಾಡಿದರೆ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿದ ಪುಣ್ಯ ಬರುವದು. ಈ ವ್ರತವನ್ನು ಮಾಡುವವರು ಗುರುಗಳ ಅಪ್ಪಣೆ ಪಡೆದು ಆಶ್ವೀನ ಶುಕ್ಲ ಏಕಾದಶಿಯಂದು ಉಪವಾಸ ಮಾಡಿ ಈ ವ್ರತವನ್ನು ಹಿಡಿಯಬೇಕು. ಕಾರ್ತಿಕ ಮಾಸದಲ್ಲಿ ಮೂವತ್ತು ದಿನ ಉಪವಾಸ ಇದ್ದು ವಾಸುದೇವನನ್ನು ಕಮಲ, ಕನ್ನೈದಿಲೆ, ಕಲ್ಹಾರ, ಮಾಲತೀ ಮುಂತಾದ ಸುಗಂಧ ಪುಷ್ಪಗಳಿಂದ ತ್ರಿಕಾಲದಲ್ಲಿ ನಿತ್ಯವೂ ಸಹಸ್ರನಾಮ ಉಚ್ಚಾರಣ ಪೂರ್ವಕವಾಗಿ ಅರ್ಚಿಸಬೇಕು. ಅಪೂಪ ಮುಂತಾದ ಬಗೆಬಗೆಯ ಮೃಷ್ಟಾನ್ನ ನೈವೇದ್ಯ ತೋರಿಸಿ, ಹರಿಯ ಸ್ಮರಣ ಮಾಡುತ್ತ ನರ, ನಾರಿ, ವಿಧವೆ ಯಾರಾದರೂ ಭಕ್ತಿಪೂರ್ವಕವಾಗಿ ಹರಿ ಪೂಜೆಯನ್ನು ಮಾಡಬೇಕು. ಈ ವ್ರತವು ಮುಗಿಯುವವರೆಗೆ ಅಭ್ಯಂಗ ಸ್ನಾನ, ತಾಂಬೂಲ, ಸುಗಂಧಲೇಪನ, ಅನ್ನ ಮುಂತಾದವುಗಳನ್ನು ವರ್ಜಿಸಬೇಕು. ಈ ವ್ರತವನ್ನು ಮನೆಯಲ್ಲಿದ್ದು ಮಾಡಬಾರದು. ದೇವರ ಗುಡಿಯಲ್ಲಿಯೇ ಆಚರಿಸಬೇಕು. ಆಶ್ವೀನ ಶುಕ್ಲ ಏಕಾದಶೀಯಿಂದ ಕಾರ್ತಿಕ ಶುಕ್ಲ ಏಕಾದಶೀವರೆಗೆ ಜಿತೇಂದ್ರಿಯನಾಗಿದ್ದು ಕಾರ್ತಿಕ ಶುಕ್ಲ ದ್ವಾದಶೀದಿನ ಪ್ರಾತಃಕಾಲದಲ್ಲಿಯೇ ಸ್ನಾನಮಾಡಿ ನಿತ್ಯಾಹ್ನಿಕ ಮುಗಿಸಿ ಶ್ರೀಹರಿಗೆ ಅಭಿಷೇಕ ಮಾಡಿ ಸುಗಂಧ ಪುಷ್ಪಗಳಿಂದ ಹಾಗೂ ವಸ್ತ್ರಾಭರಣಗಳಿಂದ ಭಗವನ್ಮೂರ್ತಿಯನ್ನು ಅಲಂಕರಿಸಬೇಕು. ಧೂಪದೀಪ, ನೈವೇದ್ಯ, ಮಂತ್ರಪುಷ್ಪಾದಿಗಳಿಂದ ಪೂಜಿಸಿ ಹದಿಮೂರು ಜನ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಬೇಕು. ಅವರಿಗೆ ವಸ್ತ್ರದಾನ ಹಾಗು ವಿಪುಲವಾಗಿ ದಕ್ಷಿಣದಾನ ನೀಡಿ ನಮಸ್ಕರಿಸಿ ಏನಾದರೂ ಲೋಪವಾಗಿದ್ದರೆ ಕ್ಷಮಿಸಬೇಕು ಎಂದು ಕೇಳಿಕೊಳ್ಳಬೇಕು. ಕಾರ್ತಿಕ ಶುಕ್ಲ ಏಕಾದಶೀ ದಿನ ಉಪವಾಸ ಮಾಡಿ ವಿಷ್ಣುವಿನನ್ನು ಉದ್ದೇಶಿಸಿ ಯಜ್ಞವನ್ನು ಮಾಡಬೇಕು. ಗುರುಗಳ ಅಪ್ಪಣೆಯಿಂದ ಹರಿಯ ಪೂಜೆಯನ್ನು ಯಥಾಶಕ್ತಿಮಾಡಿ ದ್ವಾದಶೀದಿನ ಯಜ್ಞದ

ಸಾಂಗತಾ ಸಿದ್ಧ್ಯರ್ಥವಾಗಿ ಬೇರೆ ಹದಿಮೂರು ಜನ ಬ್ರಾಹ್ಮಣರನ್ನು ಕರಿಸಿ ಭೋಜನ ಮಾಡಿಸಿ ಅವರಿಗೂ ತಾಂಬೂಲ, ಜೋಡಿವಸ್ತ್ರ, ಯೋಗಪಟ್ಟ, ಬ್ರಹ್ಮಸೂತ್ರ ಮುಂತಾದವುಗಳನ್ನು ದಾನಮಾಡಬೇಕು. ಅನಂತರ ಯಥಾಶಕ್ತಿ ಶಯ್ಯಾದಾನವನ್ನು ಮಾಡಬೇಕು. ಹದಿಮೂರು ಬೇರೆ ಬೇರೆ ಹಾಸಿಗೆಲನ್ನು, ದಿಂಬು, ಮೇಲ್ವಾಸು ಮುಂತಾದವುಗಳಿಂದ ಸಿದ್ಧಪಿಡಿಸಿ ಅದರಲ್ಲಿ ಬಂಗಾರದ ಕೃಷ್ಣನ ಮೂರ್ತಿಯನ್ನು ಇರಿಸಿ ಆ ಮೂರ್ತಿಯ ಮುಂದೆ ಆಸನ, ಪಾದುಕೆ, ಕೊಡೆ, ಎರಡು ವಸ್ತ್ರ, ಪಾದರಕ್ಷೆ ಮತ್ತು ಹೂ ಇವುಗಳನ್ನೆಲ್ಲ ಇಟ್ಟು ಶಯ್ಯಾದಾನ ಸಂಕಲ್ಪವನ್ನು ಮಾಡಿ ಆ ಬ್ರಾಹ್ಮಣರಿಗೆ ಕೊಡಬೇಕು. ಈ ಮಾಸೋಪವಾಸ ವಿಧಿಯಲ್ಲಿ ಏನಾದರೂ ಲೋಪದೋಷವಾಗಿದ್ದರೆ ಕ್ಷಮಿಸಿರಿ ಎಂದು ಬೇಡಿಕೊಳ್ಳಬೇಕು. ಅನಂತರ ಅವರನ್ನೆಲ್ಲ ಬೀಳ್ಕೊಟ್ಟು ತಾನು ಇಷ್ಟಮಿತ್ರ ಪರಿವಾರದೊಂದಿಗೆ ಪಾರಣೆಯನ್ನು ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಮಾಸೋಪವಾಸ ಮತ್ತು ಸೂಕರ ಕ್ಷೇತ್ರ ಮಹಿಮಾ ವರ್ಣನೆ ಎಂಬ ನೂರ ಹದಿನೇಳನೇಯ ಅಧ್ಯಾಯ ಮುಗಿದುದು*

—o—

## ಶಾಲಿಗ್ರಾಮ ಪೂಜೆಯ ಮಹಿಮೆ

ಅಧ್ಯಾಯ - ೧೧೮

**ಸ್ಕಂದ :-** ಯೋಗಿಶ್ರೇಷ್ಠನಾದ ಶಂಕರ, ನಾನು ಎಲ್ಲ ಧರ್ಮಗಳನ್ನು ನಿಮ್ಮ ಮುಖದಿಂದ ಕೇಳಿದೆ. ಈಗ ಶಾಲಿಗ್ರಾಮದ ಪೂಜೆಯ ವಿಷಯವನ್ನು ವಿಸ್ತಾರವಾಗಿ ನನಗೆ ಹೇಳಿರಿ.

**ಪರಮೇಶ್ವರ:-** ಸ್ಕಂದ, ನೀನು ನಿಜವಾಗಿಯೂ ಬುದ್ಧಿವಂತ. ನೀನು ಕೇಳಿದ ಶಾಲಿಗ್ರಾಮದ ವಿಚಾರವನ್ನು ಈಗ ತಿಳಿಸುತ್ತೇನೆ ಕೇಳು. ಶಾಲಿಗ್ರಾಮವನ್ನು ನೋಡಿದರೂ ನೆನೆದರೂ ಅಭಿಷೇಕ ಮಾಡಿದರೂ ಪೂಜಿಸಿದರೂ ಕೋಟಿ ಗೋದಾನದ ಪುಣ್ಯ ಬರುವದು. ಶಾಲಿಗ್ರಾಮವನ್ನು ತೊಳೆದು ತೀರ್ಥ ತೆಗೆದು ಕೊಂಡರೆ ಅಲ್ಲಿಗೆ ಮಾನವನ ಗರ್ಭವಾಸ ದುಃಖಕ್ಕೆ ಮುಕ್ತಾಯ.

**ಕಾಮಾಸಕ್ತೋಽಪಿ ಯೋ ನಿತ್ಯಂ ಭಕ್ತಿಭಾವ ವಿವರ್ಜಿತಃ ।**
**ಶಾಲಿಗ್ರಾಮ ಶಿಲಾಂ ಪುತ್ರ ಪೂಜಯಿತ್ವಾಽಚ್ಯುತೋ ಭವೇತ್ ॥**

ಕಾಮಾಸಕ್ತನಾಗಿದ್ದರೂ ಭಕ್ತಿಯಿಂದ ರಹಿತನಾಗಿದ್ದರೂ ಶಾಲಿಗ್ರಾಮ ಪೂಜೆಯನ್ನು ಮಾಡುವ ಮನುಷ್ಯನು ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರನಾಗುತ್ತಾನೆ. ಶಾಲಿಗ್ರಾಮ ಶಿಲೆಯನ್ನು ಮನುಷ್ಯನು ಕಂಡಕೂಡಲೇ ಅವನ ಪಾಪಗಳೆಲ್ಲವೂ ಸಿಂಹವನ್ನು ನೋಡಿದ ಮೃಗಗಳಂತೆ ಬಿಟ್ಟು ಓಡಿಹೋಗುತ್ತವೆ. ಭಕ್ತಿಯಿಂದಾಗಲೀ ಭಕ್ತಿಇಲ್ಲದೇ ಆಗಲೀ ಶಾಲಿಗ್ರಾಮ ಪೂಜೆ ಮಾಡಿದರೆ ಮನುಷ್ಯನು ಮುಕ್ತಿ ಹೊಂದುತ್ತಾನೆ.

**ಮದ್ಭಕ್ತಾಸ್ತೀವ್ರ ಪಾಪಿಷ್ಠಾ ಮತ್ಪ್ರಭುಂನ ಮಂತಿ ಯೇ ।**
**ವಾಸುದೇವಂ ನತೇ ಜ್ಞೇಯಾ ಮದ್ಭಕ್ತಾಃ ಪಾಪಮೋಹಿತಾಃ ॥**

ನನ್ನ ಅರ್ಥಾತ್ ಶಿವನ ಭಕ್ತರಾಗಿ ನನಗೂ ಪ್ರಭುಸ್ವಾಮಿಯಾದ ವಾಸುದೇವನನ್ನು ಪಾಪಮೋಹಿತರಾಗಿ ಯಾರು ನಮಸ್ಕರಿಸುವದಿಲ್ಲವೊ ಅವರು ನನ್ನ ಭಕ್ತರೇ ಅಲ್ಲ. ಹರಿಗೆ ನಮಿಸದವರು ಮಹಾ ಪಾಪಿಷ್ಠರು.

**ಕೃತಂ ಮರ್ತ್ಯ ಲೋಕೇ ಯೈಃ ಶಾಲಿಗ್ರಾಮ ಶಿಲಾರ್ಚನಮ್ ।**
**ಕಿಮರ್ಚಿತ್ತೈ ರ್ಲಿಂಗಶತ್ತೈರ್ವಿಷ್ಣು ಭಕ್ತಿ ವಿವರ್ಜಿತ್ತೈಃ ॥**

ಈ ಭೂಲೋಕದಲ್ಲಿ ಯಾರು ಶಾಲಿಗ್ರಾಮ ಪೂಜೆಯನ್ನು ಮಾಡಿರುವದಿಲ್ಲವೊ ಅಂಥ ವಿಷ್ಣುಭಕ್ತಿ ರಹಿತರು ನೂರು ಲಿಂಗಪೂಜೆ ಮಾಡಿದರೂ ಏನು ಫಲ?

**ಶಾಲಿಗ್ರಾಮ ಶಿಲಾ ಬಿಂಬಂ ನಾರ್ಚಿತಂ ಯದಿ ಪುತ್ರಕ ।**
**ಅನರ್ಹಂ ಮಮನ್ನೈವೇದ್ಯಂ ಪತ್ರಂ ಪುಷ್ಪಂ ಫಲಂ ಜಲಂ ।**
**ಶಾಲಿಗ್ರಾಮ ಶಿಲಾಗ್ರೇ ತು ಸರ್ವಂ ಯಾತಿ ಪವಿತ್ರತಾಂ ॥**

ಶಾಲಿಗ್ರಾಮ ಪೂಜೆಮಾಡದೆ ನನ್ನ (ಶಿವನ) ಪೂಜೆಮಾಡಿ ನೈವೇದ್ಯವನ್ನು ತೋರಿಸಿದರೆ ಹೂಗಳನ್ನು ಏರಿಸಿದೆ, ಅಭಿಷೇಕ ಮಾಡಿದರೆ ಅವೆಲ್ಲವೂ ಶಿವ ನಿರ್ಮಾಲ್ಯ ಶಿವನನ್ನೈವೇದ್ಯ, ಶಿವತೀರ್ಥ, ಮುಂತಾದವುಗಳು ಸ್ವೀಕಾರಕ್ಕೆ ಅನರ್ಹವಾಗಿರುತ್ತವೆ. ಶಾಲಿಗ್ರಾಮ ಶಿಲೆಯ ಎದುರು ಇದೆಲ್ಲವೂ ಪವಿತ್ರವಾಗುತ್ತವೆ.

**ಭುಕ್ತ್ವಾಽನ್ಯದೇವ ನೈವೇದ್ಯಂ ದ್ವಿಜಶ್ಚಾಂದ್ರಾಯಣಂ ಚರೇತ್ ।**
**ಭುಕ್ತ್ವಾ ಕೇಶವ ನೈವೇದ್ಯಂ ಯಜ್ಞಕೋಟಿ ಫಲಂ ಲಭೇತ್ ॥**

ವಿಷ್ಣುವಿನ ಹೊರ್ತು ಬೇರೆ ದೇವರ ನೈವೇದ್ಯವನ್ನು ಉಂಡರೆ ದ್ವಿಜನು ಚಾಂದ್ರಾಯಣ ವ್ರತ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಆದರೆ ಕೇಶವನ ದೇವರ ನೈವೇದ್ಯವನ್ನು ಊಟ ಮಾಡಿದರೆ ಕೋಟಿ ಯಜ್ಞ ಮಾಡಿದ ಪುಣ್ಯವನ್ನು ಪಡೆಯುತ್ತಾರೆ.

**ಯೋಹಿ ಮಾಹೇಶ್ವರೋ ಭೂತ್ವಾ ವೈಷ್ಣವಂಚ ನ ಪೂಜಯೇತ್ ।**
**ದ್ವೇಷ್ಪಾಚಯಾತಿ ನರಕಂ ಯಾವದಿಂದ್ರಾಃಚ ತುರ್ದಶ ॥**

ಶೈವನಾಗಿ ವೈಷ್ಣವನನ್ನು ದ್ವೇಷ ಮಾಡಿದರೆ ಹದಿನಾಲ್ಕು ಇಂದ್ರರ ಶಾಸನ ಕಾಲದವರೆಗೆ ಮನುಷ್ಯನು ನರಕದಲ್ಲಿ ನವೆಯುತ್ತಾನೆ.

**ಮಲ್ಲಿಂಗ ಕೋಟಿ ಬಿರ್ದೃಷ್ಟೈರ್ಯತ್ ಫಲಂ ಪೂಜಿತ್ತೈಃ ಸ್ತುತ್ತೈಃ ।**
**ಶಾಲಿಗ್ರಾಮ ಶಿಲಾಯಾಂತು ಏಕಸ್ಯಾಮಿಹ ತದ್ಭವೇತ್ ॥**

ಕೋಟಿ ಶಿವಲಿಂಗಗಳನ್ನು ಸ್ತೋತ್ರಮಾಡಿ ಪೂಜೆಯನ್ನು ಮಾಡಿದರೆ ಬರುವಷ್ಟು ಫಲವು ಒಂದೇ ಶಾಲಿಗ್ರಾಮ ಪೂಜೆಯಿಂದ ಬರುವದು. ಹನ್ನೆರಡು ಶಾಲಿಗ್ರಾಮಗಳನ್ನು ಪೂಜೆಮಾಡಿದರೆ ಕಾಶಿಯಲ್ಲಿ ಎಂಟು ಯುಗಗಳ ಕಾಲ ನಿಂತು ಗಂಗಾತೀರದಲ್ಲಿ ಕೋಟಿ ಲಿಂಗ ಪೂಜೆಯನ್ನು ಮಾಡಿದಷ್ಟು ಪುಣ್ಯವು ಒಂದೇ ದಿನದಲ್ಲಿ ಬರುವದು. ನನ್ನ ಪ್ರೀತಿ ಅರ್ಥಾತ್ ಹರಿ ಪ್ರೀತಿ ಆಗಬೇಕು ಎಂದು ಬಯಸುವ ಮನುಷ್ಯರು ಮುಖ್ಯವಾಗಿ ಶಾಲಿಗ್ರಾಮ ಪೂಜೆಯನ್ನು (ತಪ್ಪದೆ ಪ್ರತಿನಿತ್ಯ) ಮಾಡಬೇಕು.

## ಶಾಲಿಗ್ರಾಮದ ಲಕ್ಷಣ

ಅಚ್ಚ ಕರಿಬಣ್ಣದ ಶಾಲಿಗ್ರಾಮದ ಶಿಲೆಯ ಒಂದು ವದನ (ಛಿದ್ರ-ತೂತು)ದಲ್ಲಿ ಎರಡು ಚಕ್ರಗಳು ಇದ್ದರೆ ಅದಕ್ಕೆ ವಾಸುದೇವ ಶಾಲಿಗ್ರಾಮ ಎನ್ನಬೇಕು. ಒಳಗೆ ಹೊರಗೆ ಕೂಡಿ ಒಟ್ಟು ಮೂರು ಚಕ್ರಗಳಿದ್ದು ಆಕಾರ ಉದ್ದವಾಗಿದ್ದರೆ ಅದಕ್ಕೆ ಮತ್ಸ್ಯ ಶಾಲಿಗ್ರಾಮ ಎನ್ನಬೇಕು. ವದನ ಅಥವಾ, ಬಾಯಿ ಅಗಲವಾಗಿದ್ದು ಒಳಗೆ ಒಂದಕ್ಕೊಂದು

ಹೊಂದಿಕೊಂಡು ಎರಡು ಚಕ್ರಗಳಿದ್ದರೆ ಅದು ನರಸಿಂಹ ಶಾಲಿಗ್ರಾಮ. ಇದು ಉಗ್ರ ಶಾಲಿಗ್ರಾಮ. ಬ್ರಹ್ಮಚಾರಿಗಳಾಗಲೀ ಗೃಹಸ್ಥಾಶ್ರಮಿಯಾದರೂ ನಿಷಿದ್ಧ ದಿನಗಳಲ್ಲಿ ಇಂದ್ರಿಯ ನಿಗ್ರಹ ಮಾಡಿ ಬ್ರಹ್ಮಚರ್ಯ ಪಾಲಿಸುತ್ತಿದ್ದ ಸಂಯಮಿಗಳೂ ಸದಾಚಾರಸಂಪನ್ನರೂ ಮಾತ್ರ ಈ ನರಸಿಂಹ ಹಾಗೂ ಕಪಿಲ ಶಾಲಿಗ್ರಾಮಗಳನ್ನು ಪೂಜಿಸಬೇಕು. ಇಲ್ಲದಿದ್ದರೆ ಅನಿಷ್ಟವನ್ನು ತಂದು ಒಡ್ಡುವವು. ಶಾಲಿಗ್ರಾಮವು ಉದ್ದವಾದ ಆಕಾರದಿದ್ದು ಅನೇಕ ಛಿದ್ರ ಎಂದರೆ ಬಾಯಿಗಳಿದ್ದು ಆ ಛಿದ್ರಗಳಲ್ಲೆಲ್ಲ ಚಕ್ರಗಳಿದ್ದರೆ ಅದಕ್ಕೆ ಪ್ರದ್ಯುಮ್ನ ಎನ್ನಬೇಕು. ಅನೇಕ ವದನಗಳಿದ್ದು ಶಾಲಿಗ್ರಾಮ ದುಂಡಾಗಿ ಎಲ್ಲ ವದನಗಳಲ್ಲಿಯೂ ಚಕ್ರಗಳಿದ್ದು ಮೇಲೆ ಮೂರು ರೇಖೆಗಳಿದ್ದರೂ ಅದು ಅನಿರುದ್ಧ. ಇಂದ್ರನೀಲಮಣಿಯಂತೆ ಶ್ಯಾಮವರ್ಣ, ಸ್ಥೂಲ ಆಕಾರ ವದನದಿಂದ ಮೇಲುಗಡೆ ಮೂರು ಗೆರೆಗಳು ಮೂರು ಐದು ಏಳು ಮುಂತಾಗಿ ವಿಷಮ ಸಂಖ್ಯೆಯ ಚಕ್ರಗಳು ಇದ್ದರೆ ಅದಕ್ಕೆ ವರಹಾ ಶಾಲಿಗ್ರಾಮ ಎನ್ನಬೇಕು. ಅನೇಕ ಚಕ್ರ, ಎತ್ತರ ಹಿಂಭಾಗ, ಹರಿದ್ವರ್ಣ, ಕೌಸ್ತುಭ ಚಿನ್ಹಗಳಿದ್ದರೆ ಕೂರ್ಮ, ಕುದುರೆಯಂತೆ ಉದ್ದ ಮುಖ, ನೀಲವರ್ಣ, ಐದು ರೇಖೆಗಳು ಅನೇಕ ಚಕ್ರಗಳು ಇದ್ದರೆ ಹಯಗ್ರೀವ. ಒಂದೇ ಚಕ್ರವಿದ್ದು ವದನದ ಮೇಲೆ ಗುಲಗಂಜಿಯಂತೆ ಸುಂದರವಾದ ರೇಖೆ ಇದ್ದು ಧ್ವಜವು ಇದ್ದರೆ ವೈಕುಂಠ ಶಾಲಿಗ್ರಾಮ ಎನ್ನುವರು. ಕದಂಬ ಹೂವಿನಂತೆ ಆಕಾರ. ಐದು ರೇಖೆಗಳು ಮಧ್ಯ ಅಥವಾ ಮೇಲೆ ವನಮಾಲಾ ಚಿನ್ಹವಿದ್ದರೆ ಶ್ರೀಧರ. ದೊಡ್ಡ ಶಾಲಿಗ್ರಾಮದ ನಟ್ಟನಡುವೆ ಚಕ್ರವು ಪ್ರತಿಷ್ಠಿತವಾಗಿ ಸುತ್ತಲೂ ಅನೇಕ ವದನಗಳೂ ಚಕ್ರಗಳೂ ಶೋಭಿಸುತ್ತಿದ್ದರೆ ದಾಮೋದರ ಎನ್ನಬೇಕು. ಸುತ್ತುಕಡೆಗೂ ಎತ್ತರವಾದ ಮುಖ, ಮುಖಗಳಲ್ಲಿ ಚಕ್ರ ಇದ್ದರೆ ಪುರುಷೋತ್ತಮ. ಶಾಲಿಗ್ರಾಮದ ತುದಿಯಲ್ಲಿ ಒಂದು ಸ್ವಾಭಾವಿಕವಾದ ಚಿಕ್ಕ ಲಿಂಗವಿದ್ದರೆ ಅದು ಯೋಗೇಶ್ವರ ಶಾಲಿಗ್ರಾಮ.

**ಅತಿಸ್ನಿಗ್ಧಾ ಸಿದ್ಧಿಕರೀ ಕೃಷ್ಣಾ ಕೀರ್ತಿಂ ದದಾತಿ ಚ ।**
**ಪಾಂಡುರಾ ಪಾಪದಹಿನೀ ಪೀತಾ ಪುತ್ರಫಲಪ್ರದಾ ॥**

ಶಾಲಿಗ್ರಾಮವು ಎಣ್ಣೆಗಪ್ಪು ಬಣ್ಣದಿಂದ ಮಸೃಣವಾಗಿ ಮಿಂಚುವಂತಿದ್ದರೆ ಸಿದ್ಧಿಪ್ರದ, ಅಚ್ಚಗಪ್ಪಾಗಿದ್ದರೆ ಕೀರ್ತಿದಾಯಕ, ತುಸು ಬಿಳಿಛಾಯೆ ಇದ್ದರೆ ಪಾಪನಾಶಕ, ಹಳದಿ ಬಣ್ಣದಿದ್ದರೆ ಸಂತಾನಪ್ರದ.

**ನೀಲಾ ಪ್ರಯಚ್ಛತೀ ಲಕ್ಷ್ಮೀಂ ರಕ್ತಾ ರೋಗ ಪ್ರದಾಯಿನೀ ।**
**ರುಕ್ಷಾ ಉದ್ವೇಗಜನನೀ ವಕ್ರಾ ದಾರಿದ್ರ್ಯಭಾಗಿನೀ ॥**

ನೀಲವರ್ಣದ ಶಾಲಿಗ್ರಾಮ ಸಂಪತ್ಕರ ಕೆಂಪು ಬಣ್ಣದಿದ್ದರೆ ರೋಗರುಜಿನಗಳನ್ನು ತರುವದು. ರುಕ್ಷವಾಗಿದ್ದರೆ ಚಿಂತೆದುಗುಡಗಳನ್ನು ಉಂಟುಮಾಡುವದು. ಶಾಲಿಗ್ರಾಮ ಅಂಕುಡೊಂಕಾಗಿದ್ದರೆ ದಾರಿದ್ರ್ಯವನ್ನು ತರುವದು.

## ಶಾಲಿಗ್ರಾಮದ ಸಾಮಾನ್ಯ ಲಕ್ಷಣ

**ಏಕಂ ಸುದರ್ಶನಂ ಜ್ಞೇಯಂ ಲಕ್ಷ್ಮೀನಾರಾಯಣಂ ದ್ವಯಂ ।**
**ತೃತೀಯಂ ಚಾಚ್ಯುತಂ ವಿದ್ಯಾ ಚ್ಚತುರ್ಥಂತು ಜನಾರ್ದನಂ ॥**

**ಪಂಚಮಂ ವಾಸುದೇವಂ ಹಿ ಷಷ್ಠಂ ಪ್ರದ್ಯುಮ್ನಮೇವ ಚ ।**
**ಸಂಕರ್ಷಣಂ ಸಪ್ತಮಂ ಚ ಅಷ್ಟಮಂ ಪುರುಷೋತ್ತಮಮ್ ॥**

**ನವಮಂಚ ನವವ್ಯೂಹಂ ದಶಮಂಚ ತದಾತ್ಮಕಂ ।**
**ಏಕಾದಶಂಚಾನಿರುದ್ಧ ದ್ವಾದಶಾ ದ್ವಾದಶಾತ್ಮಕಮ್ ।**
**ಅಥ ಊರ್ಧ್ವಂತು ಚಕ್ರಾಣಿ ದೃಶ್ಯಂ ತೇಽನಂತ ಸಂಜ್ಞಕೇ ॥**

ಒಂದು ಚಕ್ರವಿದ್ದ ಶಾಲಿಗ್ರಾಮಕ್ಕೆ ಸುದರ್ಶನ ಎನ್ನುವರು. ಎರಡೆರಡು ಚಕ್ರಗಳು ಎರಡು ವದನಗಳು ಅಥವಾ ಒಂದೇ ವದನದಲ್ಲಿ ಅಥವಾ ಒಂದು ವದನ ಒಳಗೆ ಮತ್ತೊಂದು ವದನವಿದ್ದರೆ ಒಂದೊಂದರಲ್ಲಿ ಎರಡೆರಡು ಚಕ್ರಗಳಿದ್ದರೆ ಲಕ್ಷ್ಮೀ ನಾರಾಯಣ ಶಾಲಿಗ್ರಾಮ ಎನ್ನುವರು. ಮೂರು ಚಕ್ರಗಳಿದ್ದರೆ ಅಚ್ಯುತ. ನಾಲ್ಕು ಚಕ್ರಗಳಿದ್ದರೆ ಜನಾರ್ದನ, ಐದು ಚಕ್ರಗಳಿದ್ದರೆ ವಾಸುದೇವ, ಆರು ಚಕ್ರಗಳಿದ್ದರೆ ಪ್ರದ್ಯುಮ್ನ. ಏಳು ಚಕ್ರಗಳಿದ್ದರೆ ಸಂಕರ್ಷಣ, ಎಂಟು ಚಕ್ರಗಳಿದ್ದರೆ ಪುರುಷೋತ್ತಮ, ಒಂಬತ್ತು ಚಕ್ರಗಳಿದ್ದರೆ ನವವ್ಯೂಹ, ಹತ್ತು ಚಕ್ರಗಳಿದ್ದರೆ ದಶಚಕ್ರಿ, ಹನ್ನೊಂದು ಚಕ್ರಗಳಿದ್ದರೆ ಅನಿರುದ್ಧ, ಹನ್ನೆರಡು ಚಕ್ರಗಳಿದ್ದರೆ ದ್ವಾದಶಾತ್ಮ, ಹನ್ನೆರಡಕ್ಕಿಂತ ಹೆಚ್ಚು ಎಷ್ಟೇ ಚಕ್ರಗಳಿದ್ದರೂ ಅದಕ್ಕೆ ಅನಂತ ಶಾಲಿಗ್ರಾಮ ಎನ್ನಬೇಕು.

**ಖಂಡಿತೇ ತ್ರುಟಿತೇ ಭಗ್ನೇ ಶಾಲಿಗ್ರಾಮೇ ನ ದೋಷಭಾಕ್ ॥**

ಶಾಲಿಗ್ರಾಮವು ಭಿನ್ನವಾಗಿದ್ದರೂ, ಒಡೆದು ತುಂಡಾಗಿದ್ದರೂ ಅದರ ಪೂಜೆ ಮಾಡಬಹುದು. ಒಡೆದು ಭಿನ್ನವಾದ ಶಾಲಿಗ್ರಾಮದ ಪೂಜೆ ಮಾಡಿದರೂ ಏನೂ ದೋಷ ಇಲ್ಲ. ಪಾಪ ಬರುವದಿಲ್ಲ.

**ಶಾಲಿಗ್ರಾಮ ಶಿಲಾಯತ್ರ ತತ್ರ ಸನ್ನಿಹಿತೋ ಹರಿಃ ।**
**ತತ್ರ ದಾನಂ ಜಪ ಸ್ನಾನಂ ವಾರಾಣಸ್ಯಾಃ ಶತಾಧಿಕಮ್ ॥**

ಶಾಲಿಗ್ರಾಮದ ಕಲ್ಲು ಇದ್ದಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನವು ಇರುತ್ತದೆ. ಶಾಲಿಗ್ರಾಮ ಶಿಲೆಯು ಇದ್ದಲ್ಲಿ ಸ್ನಾನಮಾಡುವದೂ ದಾನ ನೀಡುವದೂ ಜಪತಪಗಳನ್ನು ಆಚರಿಸುವದೂ ಕಾಶಿಯಲ್ಲಿ ಪುಣ್ಯ ಕರ್ಮಗಳನ್ನು ಆಚರಿಸುವದಕ್ಕಿಂತ ನೂರುಪಟ್ಟು ಹೆಚ್ಚಿನ ಪುಣ್ಯವನ್ನು ಕೊಡುತ್ತದೆ.

**ಬ್ರಹ್ಮಹತ್ಯಾದಿಕಂ ಪಾಪಂ ಯತ್ ಕಿಂಚಿತ್ ಕುರುತೇ ನರಃ ।**
**ತತ್ಸರ್ವಂ ನಿರ್ದಹತ್ಯಾಶು ಶಾಲಿಗ್ರಾಮ ಶಿಲಾರ್ಚನಮ್ ॥**

ಮನುಷ್ಯನು ಶಾಲಿಗ್ರಾಮ ಶಿಲೆಯನ್ನು ಪೂಜಿಸಿದರೆ ಅವನು ಮಾಡಿದ ಬ್ರಹ್ಮಹತ್ಯೆಯೇ ಮೊದಲಾದ ಪಾಪಗಳೆಲ್ಲವೂ ಸುಟ್ಟು ಹೋಗುತ್ತವೆ.

**ಶಾಲಿಗ್ರಾಮೋದ್ಭವೋ ದೇವೋ ಯತ್ರ ದ್ವಾರಾವತೀ ಭವಃ ।**
**ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥**

ಎಲ್ಲಿ ಶಾಲಿಗ್ರಾಮದಲ್ಲಿ ಕೊರೆದ ದೇವರ ಮೂರ್ತಿ ಅಥವಾ ಶಾಲಿಗ್ರಾಮವೂ, ದ್ವಾರಕೆಯಲ್ಲಿ ಹುಟ್ಟಿದ ಚಕ್ರಾಂಕಿತವೂ ಕೂಡಿ ಇರುವವೋ ಅಲ್ಲಿ ಅರ್ಥಾತ್ ಶಾಲಿಗ್ರಾಮ

ಚಕ್ರಾಂಕಿತ ಶ್ರೀಹರಿಯ ಸನ್ನಿಧಾನವುಳ್ಳ ಎರಡು ಪದಾರ್ಥಗಳ ಪೂಜೆಯಿಂದ ಮಾನವನಿಗೆ ಮುಕ್ತಿ ಆಗುವದು. ಇದರಲ್ಲಿ ಸಂದೇಹವಿಲ್ಲ.

**ಬ್ರಹ್ಮಚಾರಿ ಗ್ರಹಸ್ಥೈಶ್ಚ ವಾನಪ್ರಸ್ಥೈೃಶ್ಚ ಭಿಕ್ಷುಭಿಃ ॥**
**ಭೋಕ್ತವ್ಯಂ ವಿಷ್ಣು ನೈವೇದ್ಯಂ ನಾತ್ರ ಕಾರ್ಯಾ ವಿಚಾರಣಾ ॥**

ಶ್ರೀ ವಿಷ್ಣುವಿನ ನೈವೇದ್ಯವನ್ನು ಎಂದರೆ ಶ್ರೀಹರಿಗೆ ಸಮರ್ಪಣೆ ಮಾಡಿದ ಹಣ್ಣು ಕಾಯಿ ಅನ್ನ ಅಡಿಗೆ ಮುಂತಾದ ಭಕ್ಷ್ಯಭೋಜ್ಯಗಳನ್ನು ಬ್ರಹ್ಮಚಾರಿಗಳೂ ಗೃಹಸ್ಥರೂ ವಾನಪ್ರಸ್ಥಾಶ್ರಮಿಗಳೂ ಸನ್ಯಾಸಿಗಳೂ ಅವಶ್ಯವಾಗಿ ಪ್ರಸಾದವೆಂದು ಭಕ್ಷಣ ಮಾಡಬೇಕು.

**ತತ್ಪೂಜನೇನ ಮಂತ್ರಾಶ್ಚ ನ ಜಪೋ ನಚ ಭಾವನಾ ।**
**ನ ಸ್ತುತಿರ್ನಾಪಿಚಾಚಾರಃ ಶಾಲಿಗ್ರಾಮ ಶಿಲಾರ್ಚನೇ ॥**

ಶಾಲಿಗ್ರಾಮ ಶಿಲೆಯನ್ನು ಪೂಜೆಮಾಡಬೇಕಾದರೆ ಮಂತ್ರ ಹೇಳದಿದ್ದರೂ ನಡೆಯುವದು. ಜಪ ಮಾಡಿದಿದ್ದರೂ ಆದೀತು ಸ್ತೋತ್ರ ಪಾಠಗಳನ್ನು ಪಠಿಸದಿದ್ದರೂ ಕೇವಲ ಭಕ್ತಿಯಿಂದ ಶಾಲಿಗ್ರಾಮ ಪೂಜೆಯನ್ನು ಮೌನದಿಂದ ಮಾಡಿದರೂ ತಪ್ಪು ಇಲ್ಲ. ಪಾಪ ಬರುವದಿಲ್ಲ.

ಅದರಲ್ಲಿಯೂ ಕಾರ್ತಿಕ ಮಾಸದಲ್ಲಿ ಶಾಲಿಗ್ರಾಮ ಪೂಜೆಮಾಡಿದವನ ಹಿಂದಿನ ಏಳು ತಲೆಮಾರಿನ ಪಿತೃಗಳು ಉದ್ಧಾರ ಹೊಂದುವರು. ಶ್ರೀಹರಿಯ ಮುಂದೆ ಕಾರ್ತಿಕದಲ್ಲಿ ಮಣ್ಣು ಅಥವಾ ರಂಗವಲ್ಲಿ ಇಲ್ಲವೆ ಬಗೆಬಗೆಯ ಬಣ್ಣಗಳಿಂದ ಸ್ವಸ್ತಿಕ ಮಂಡಲ ಪದ್ಮ ಮುಂತಾದವುಗಳನ್ನು ಬಿಡಿಸಿ ಬರೆದರೆ ಮತ್ತು ವಿಷ್ಣುವಿನ ಮಂದಿರವನ್ನು ಗುಡಿಸಿ ಸಾರಿಸಿ ಸಾರಣೆ ಕಾರಣೆಗಳಿಂದ ಶೃಂಗಾರಿತಗೊಳಿಸಿದರೆ ವ್ಯಭಿಚಾರ, ಹಿಂಸಾಚಾರ, ಪಾಪಾಚಾರಗಳಿಂದ ಬಂದ ಪಾಪಗಳೆಲ್ಲವೂ ಪರಿಹೃತವಾಗಿ ವೈಕುಂಠ ಲೋಕದಲ್ಲಿ ಶಾಶ್ವತ ವಾಸಿಸುವ ಸೌಭಾಗ್ಯವು ಪ್ರಾಪ್ತವಾಗುವದು.

ಶ್ರೀಹರಿಯ ಮುಂದೆ ಪ್ರತಿದಿನವೂ ಮಂಡಲವನ್ನು ರಂಗವಲ್ಯಾದಿಗಳಿಂದ ಬರೆಯುವ ಅತವಾ ಬಣ್ಣದಿಂದ ಬಿಡಿಸುವ ಸ್ತ್ರೀಯರಿಗೆ ಎಂದಿಗೂ ವೈಧವ್ಯ ದುಃಖವು ಒದಗುವದಿಲ್ಲ. ನಿತ್ಯ ಸುವಾಸಿನಿಯರಾಗಿಯೇ ಉಳಿಯಬೇಕು ಎಂದು ಬಯಸುವ ನಾರಿಯರು ನಾರಾಯಣನ ಮುಂದೆ ಸಾರಿಸಿ ರಂಗವಲ್ಲಿಯನ್ನು ಹಾಕಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಾಲಿಗ್ರಾಮ ಪೂಜೆಯ ಮಹಿಮೆ ಎಂಬ ನೂರ ಹದಿನೆಂಟನೇಯ ಅಧ್ಯಾಯ ಮುಗಿದುದು*

—o—

## ಪ್ರಬೋಧಿನೀ ಏಕಾದಶಿಯ ಮಾಹಾತ್ಮ್ಯ ವರ್ಣನೆ ಅಧ್ಯಾಯ - ೧೧೯

**ಈಶ್ವರ:-** ಪ್ರಬೋಧಿನಿ ಏಕಾದಶಿಯ ಮಾಹಾತ್ಮ್ಯವು ಮಾನವರ ಪಾಪವನ್ನೆಲ್ಲ ಕಳೆಯುತ್ತದೆ. ಮತ್ತು ಪುಣ್ಯವನ್ನು ವರ್ಧಿಸುತ್ತದೆ. ಇದರ ಮಹಿಮೆಯನ್ನು ತಿಳಿದವರು ಮೋಕ್ಷಕ್ಕೆ ಪ್ರಯಾಣ ಮಾಡುವರು. ಇಂತಹ ಶ್ರೇಷ್ಠವಾದ ಪ್ರಬೋಧಿನೀ ಏಕಾದಶಿಯ ಮಹಿಮೆಯನ್ನು ಚಿರಂಜೀವಿಯಾದ ಸ್ಕಂದ, ನಾನು ನಿನಗೆ ಹೇಳುತ್ತೇನೆ ಕೇಳು. ಸ್ಕಂದ, ಭಾಗೀರಥಿಯ ಮಹಿಮೆಯು ಕಲಿಯುಗದಲ್ಲಿ ಭೂಲೋಕದಲ್ಲಿ ಪ್ರಬೋಧಿನಿ ಏಕಾದಶಿಯ ಮಹಿಮೆ ಪ್ರಸಾರ ಆಗುವವರೆಗೆ ಮಾತ್ರ ಇರುತ್ತದೆ. ಎಲ್ಲ ತೀರ್ಥ ಸಮುದ್ರ ಕ್ಷೇತ್ರಗಳೂ ಪ್ರಬೋಧಿನೀ ಏಕಾದಶಿಯ ಸಾಮ್ಯವನ್ನು ಹೊಂದಲಾರವು. ಸಾವಿರ ಅಶ್ವಮೇಧ ಯಜ್ಞಗಳನ್ನು ನೂರು ರಾಜಸೂಯಯಾಗಗಳನ್ನು ಮಾಡುವದರಿಂದ ಬರುವಷ್ಟು ಪುಣ್ಯವು ಪ್ರಬೋಧಿನಿ ಏಕಾದಶಿಯ ದಿನ ಕೇವಲ ಉಪವಾಸ ಮಾಡುವದರಿಂದ ಲಭ್ಯವಾಗುವದು. ಈ ಪ್ರಬೋಧಿನೀ ಏಕಾದಶಿ ವ್ರತದ ಆಚರಣೆಯಿಂದ ಮಾನವರಿಗೆ ಅತ್ಯಂತ ದುರ್ಲಭವಾದ ಪುಣ್ಯಪ್ರಾಪ್ತಿ. ಮೂರು ಲೋಕಗಳಲ್ಲಿಯೂ ಇತರ ಯಾವ ಸಾಧನಗಳಿಂದಲೂ ದುರ್ಮಿಳವಾದ ಅಪಾರ ಐಶ್ವರ್ಯ, ದಿವ್ಯಜ್ಞಾನ, ಐಹಿಕವಾದ ಇತರ ಎಲ್ಲ ಸುಖ ಸೌಭಾಗ್ಯ ಸಂತಾನ ಸಂಪತ್ತುಗಳೂ ಒಂದು ಏಕಾದಶಿ ವ್ರತದಿಂದ ಪ್ರಾಪ್ತವಾಗುತ್ತವೆ. ಮಾನವರು ಮಾಡಿದ ಪಾಪಗಳು ಬೆಟ್ಟದಷ್ಟಿದ್ದರೂ ಆ ಎಲ್ಲ ಮೇರು ಪರ್ವತದಷ್ಟು ಮಹತ್ತರವಾದ ಪಾಪಗಳು ಪ್ರಬೋಧಿನಿ ಏಕಾದಶಿಯಿಂದ ಬಂದ ಪುಣ್ಯವು ಸುಟ್ಟು ಹಾಕುತ್ತದೆ. ಹಿಂದಿನ ಸಾವಿರ ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಬೆಂಕಿಯಿಂದ ಅರಳೆರಾಶಿಯು ಕ್ಷಣಾರ್ಧದಲ್ಲಿ ದಗ್ಧವಾಗಿ ಹೋಗುವಂತೆ ಪ್ರಬೋಧಿನಿ ಏಕಾದಶಿಯ ದಿನ ರಾತ್ರಿ ಕಾಲದಲ್ಲಿ ಮಾಡಿದ ಜಾಗರದಿಂದ ಸುಟ್ಟು ಭಸ್ಮಿಭೂತವಾಗಿ ಹೋಗುತ್ತದೆ.

ಷಣ್ಮುಖ, ಆದುದರಿಂದ ಪ್ರಬೋಧಿನೀ ಏಕಾದಶಿಯ ದಿನ ಅವಶ್ಯವಾಗಿ ಮಾಡಲೇಬೇಕಾದ ಜಾಗರದ ವಿಧಿ ವಿಧಾನ ಲಕ್ಷಣ ಸ್ವರೂಪವನ್ನು ಹೇಳುತ್ತೇನೆ ಕೇಳು. ಪ್ರಬೋಧಿನೀ ಏಕಾದಶಿಯ ದಿನ ರಾತ್ರಿ ಮಾಡಬೇಕಾದ ಜಾಗರದಲ್ಲಿ ಮೊದಲು ಭಾಗವತಾದಿ ಗ್ರಂಥಗಳಿಂದ ಭಗವಂತನ ಮಹಿಮೆಯನ್ನು ಪ್ರತಿಪಾದಿಸುವ ಭಾಗವನ್ನು ಪುರಾಣ ರೂಪವಾಗಿ ಹೇಳಬೇಕು. ಹೇಳುವವರು ಇಲ್ಲದಿದ್ದರೆ ಇದ್ದವರು ಭಾಗವತದ ಶ್ರೀಹರಿಯ ಒಂದು ಕಥೆಯನ್ನು ಪಾರಾಯಣ ಮಾಡಬೇಕು. ಗೀತಾದಿ ಗ್ರಂಥಗಳ ಯಾವದಾದರೂ ಒಂದೆರಡು ಅಧ್ಯಾಯಗಳ ಪಠಣವನ್ನು ಮಾಡಬೇಕು.

ಅನಂತರ ಶ್ರೀಮನ್ನಾರಾಯಣನ ಅನೇಕ ಅವತಾರಗಳ ಚರಿತ್ರೆಗಳನ್ನು ಸಂಗೀತದ ಮುಖಾಂತರ ಹಾಡಿ ಪಾಡಿ ಕೊಂಡಾಡಬೇಕು. ಸಾಧ್ಯವಿದ್ದ ತಬಲ, ತಂಬೂರಿ, ಕೊಳಲು ಮುಂತಾದ ವಾದ್ಯಗಳನ್ನು ಕೂಡ ನುಡಿಸಬೇಕು. ಜಾಗರ ಕಾಲದಲ್ಲಿ ಭಗವಂತನಿಗೆ ನರ್ತನ ಸೇವೆಯನ್ನು ಸಮರ್ಪಿಸಬೇಕು. ಮತ್ತು ಮಧ್ಯ ಮಧ್ಯದಲ್ಲಿ ಮಂಗಳಾರತಿಯನ್ನು ಮಾಡಬೇಕು. ಧೂಪ, ದೀಪ, ನೈವೇದ್ಯ, ಪುಷ್ಪಾರ್ಚನೆ, ಗಂಧಲೇಪನ, ಫಲಸಮರ್ಪಣೆ, ಅರ್ಘ್ಯಪ್ರದಾನ ಮುಂತಾದವುಗಳಿಂದ ಜಾಗರದಲ್ಲಿ ಶ್ರೀಹರಿಯ ಸೇವೆಯನ್ನು

ಮಾಡಬೇಕು. ಪ್ರದಕ್ಷಿಣ ನಮಸ್ಕಾರ ಪ್ರಾರ್ಥನೆ ಮುಂತಾದವುಗಳನ್ನು ಆಲಸ್ಯಬಿಟ್ಟು ಉತ್ಸಾಹದಿಂದ ಜಾಗರದಲ್ಲಿ ಆಚರಿಸಬೇಕು. ರಾತ್ರಿ ಜಾಗರ ಕಾಲದಲ್ಲಿ ಮೂರು ಮೂರು ಗಂಟೆಗಳಿಗೆ ಒಮ್ಮೆ ದೇವರಿಗೆ ಮಂಗಳಾರತಿಯನ್ನು ಬಗೆಬಗೆಯ ವಾದ್ಯವಾದನ ಪುರಸ್ಸರವಾಗಿ ಬೆಳಗಬೇಕು. ಹೀಗೆ ತನ್ನ ಯೋಗ್ಯತಾನುಸಾರವಾಗಿ ಭಗವಂತನಿಗೆ ಜಾಗರ ಸೇವೆಯನ್ನು ಸಲ್ಲಿಸಿದವರು ಮತ್ತೆ ಈ ಮಣ್ಣಿನಲ್ಲಿ ಹುಟ್ಟುವದಿಲ್ಲ. ಜಾಗರೋತ್ಸವದಿಂದ ಶ್ರೀಹರಿಯು ಪ್ರೀತನಾಗಿ ಅವನನ್ನು ತನ್ನ ಮಂದಿರಕ್ಕೆ ಕರೆದುಕೊಂಡು ಹೋಗುತ್ತಾನೆ.

ಕಾರ್ತೀಕ ಮಾಸದಲ್ಲಿ ‹ಶ್ರೀಹರಿಯನ್ನು ಪುರುಷಸೂಕ್ತದಿಂದ ಅಭಿಷೇಕಮಾಡಿ ಪುರುಷಸೂಕ್ತದಿಂದಲೇ ಷೋಡಶೋಪಚಾರ ಪೂಜೆಯನ್ನು ಶ್ರೀಹರಿಗೆ ಸಲ್ಲಿಸಬೇಕು. ಪಂಚರಾತ್ರದಲ್ಲಿ ಹೇಳಿದ ವಿಧಿ ವಿಧಾನಗಳನ್ನು ಅನುಸರಿಸಿ ಮಹಾವಿಷ್ಣುವಿನ ಪೂಜೆ ಮಾಡಿದ ಮನುಷ್ಯನು ಖಂಡಿತವಾಗಿಯೂ ಮೋಕ್ಷವನ್ನು ಹೊಂದುತ್ತಾನೆ. ಕಾರ್ತೀಕ ಮಾಸದಲ್ಲಿ **''ಓಂ ನಮೋ ನಾರಾಯಣಾಯ''** ಮೂಲ ಮಂತ್ರದಿಂದ ಶ್ರೀಹರಿಯ ಪೂಜೆಯನ್ನು ಮಾಡಿದವನು ನರಕದ ಮುಖವನ್ನು ಎಂದೂ ನೋಡುವದಿಲ್ಲ. ಮತ್ತು ಕಾರ್ತೀಕ ಮಾಸದಲ್ಲಿ ವಿಷ್ಣು ಸಹಸ್ರನಾಮವನ್ನು ಆವರ್ತನವನ್ನು ಮಾಡಿ ಪಾರಾಯಣ ಗೈಯುತ್ತಿರಬೇಕು. ಅದರಂತೆ ಗಜೇಂದ್ರಮೋಕ್ಷವೆಂಬ ಭಾಗವತದಲ್ಲಿ ಹೇಳಿದ ಸನ್ನಿವೇಶ ಭಕ್ತಿಯಿಂದ ಪಠಿಸಬೇಕು. ಆದ್ದರಿಂದ ಮನುಷ್ಯನಿಗೆ ಶ್ರೀಹರಿಯ ಅತ್ಯರ್ಥ ಪ್ರಸಾದವು ಲಭಿಸುವದು. ಕಾರ್ತೀಕ ಮಾಸದ ರಾತ್ರಿಯ ಕೊನೆಯ ಯಾಮದಲ್ಲಿ ಶ್ರೀಹರಿಯ ಸ್ತೋತ್ರ ಮಾಡಿ ಭಗವನ್ಮಹಿಮೆಯನ್ನು ಹಾಡಿ ಪಾಡಿ ಧ್ಯಾನ ಗಾನ ಮಾಡಿದವನು ತನ್ನ ಪಿತೃಗಳಿಂದ ಕೂಡಿಕೊಂಡು ಶ್ವೇತದ್ವೀಪದಲ್ಲಿ ವಾಸಮಾಡುತ್ತಾನೆ.

ಕಾರ್ತೀಕ ಮಾಸದಲ್ಲಿ ಶ್ರೀಹರಿಗೆ ಮಾಲತಿ, ಕಮಲ ಮುಂತಾದ ಪುಷ್ಪಗಳಿಂದ ಪೂಜೆಯನ್ನು ಸಲ್ಲಿಸಿ ವಿವಿಧ ಭಕ್ಷ್ಯ ಭೋಜ್ಯ ನೈವೇದ್ಯ ನೀಡಿ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಭೋಜನ ಮಾಡಿಸಿದವನು ಅಕ್ಷಯ ಫಲವನ್ನು ಹೊಂದುತ್ತಾನೆ.

ಕಾರ್ತೀಕ ಶುಕ್ಲಪಕ್ಷ ಏಕಾದಶಿಯ ದಿನ ಉಪವಾಸ ಮಾಡಿ ನೀರು ತುಂಬಿದ ಕುಂಭವನ್ನು ದಾನ ಕೊಟ್ಟವರು ಹರಿಮಂದಿರಕ್ಕೆ ಅನಾಯಾಸವಾಗಿ ಪ್ರಯಾಣ ಮಾಡುವರು.

**ಸ್ಕಂದ:-** ಪೂಜ್ಯನಾದ ತಂದೆಯೆ, ಕಾರ್ತೀಕ ಮಾಸದಲ್ಲಿ ಎಲ್ಲ ವ್ರತಗಳಲ್ಲಿಯೂ ಸರ್ವ ಶ್ರೇಷ್ಠವಾದ ಭೀಷ್ಮಪಂಚಕವನ್ನು ಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಅದರ ಮಹಿಮೆ ಹಾಗೂ ವಿಧಾನವನ್ನು ತಿಳಿಸಿರಿ.

**ಮಹಾದೇವ:-** ವ್ರತಗಳಲ್ಲೆಲ್ಲ ಅತ್ಯಂತ ಶ್ರೇಷ್ಠವಾದ ಭೀಷ್ಮಪಂಚಕ ವ್ರತದ ವಿಧಾನವನ್ನು ಹೇಳುತ್ತೇನೆ ಕೇಳು. ಪಂಚ ದಿನಾತ್ಮಕವಾದ ಈ ವ್ರತದ ವಿಧಾನವನ್ನು ಸಾಕ್ಷಾತ್ ಶ್ರೀಕೃಷ್ಣನಿಂದ ಬಾಣಗಳ ಮಂಚದ ಮೇಲೆ ಮಲಗಿದ ಭೀಷ್ಮರು ಕೇಳಿ ಅನುಷ್ಠಾನ ಮಾಡಿದ್ದರಿಂದ ಇದಕ್ಕೆ ಭೀಷ್ಮಪಂಚಕ ಎಂದು ಹೆಸರು ಬಂದಿತು. ಚಂಚಲ ಮನಸ್ಸಿನ ದೃಢನಿರ್ಧಾರವಿಲ್ಲದ ಸಾಮಾನ್ಯ ಜನರಿಂದ ಆಚರಿಸಲು ಅಶಕ್ಯವಾದುದರಿಂದಲೂ ಈ ಕಠಿಣತಮವಾದ ಉಗ್ರ ವ್ರತಕ್ಕೆ ಭೀಷ್ಮಪಂಚಕ ಎಂದು ಹೆಸರು ರೂಢವಾಗಿದೆ. ಕೃತಯುಗದಲ್ಲಿ ವಶಿಷ್ಠ, ಭೃಗು, ಗರ್ಗ ಮುಂತಾದ ಋಷಿಗಳು ಇದನ್ನು ಆಚರಿಸಿದರು. ತ್ರೇತಾಯುಗದಲ್ಲಿ ಅಂಬರೀಷ ಮೊದಲಾದ ರಾಜರ್ಷಿಗಳೂ ಈ ಕಠಿಣ ವ್ರತವನ್ನು

ಆಚರಿಸಿದರು. ದ್ವಾಪರ ಯುಗದಲ್ಲಿ ಅನೇಕ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಈ ಭೀಷ್ಮಪಂಚಕ ವ್ರತವನ್ನು ವಿಧಿಪೂರ್ವಕವಾಗಿ ಅನುಷ್ಠಾನ ಮಾಡಿ ಅಗಣ್ಯ ಪುಣ್ಯಫಲಭಾಗಿಗಳಾದರು.

ಕಾರ್ತೀಕ ಶುಕ್ಲಪಕ್ಷ ಏಕಾದಶಿ ದಿನ ಈ ವ್ರತವನ್ನು ಪ್ರಾರಂಭಿಸಬೇಕು. ನದೀ ಸರೋವರ ಮುಂತಾದ ಜಲಾಶಯಗಳಲ್ಲಿ ಸ್ನಾನ ಮಾಡಿ ಭೀಷ್ಮರಿಗೆ ಅರ್ಘ್ಯ ಕೊಟ್ಟು ಒಣಬಟ್ಟೆ ಉಟ್ಟು ದೇವರ ಪೂಜೆಗೈದು ಭೀಷ್ಮರನ್ನೂ ಪೂಜೆಮಾಡಬೇಕು. ಐದು ಜನ ಸದಾಚಾರ ಸಂಪನ್ನರಾದ ಪಂಡಿತರನ್ನು ಕರೆದು ಐದು ರತ್ನಗಳನ್ನು ದಾನಕೊಡಬೇಕು. ಐದು ವಿಧ ಹೂಗಳನ್ನು ಏರಿಸಿ ಪಂಚಾಮೃತ ಸ್ನಾನ ಮಾಡಿಸಿ ಪಂಚಾರತಿಗಳನ್ನು ಬೆಳಗಿಸಿ ಅನಿರುದ್ಧ, ಸಂಕರ್ಷಣ ವಾಸುದೇವ ಪ್ರದ್ಯುಮ್ನ ನಾರಾಯಣಾದಿ ಪಂಚವ್ಯಾಹಾತ್ಮಕನಾದ ವಾಸುದೇವನನ್ನು ಪೂಜಿಸಿ ಪಂಚವಿಧವಾದ ಹಣ್ಣುಗಳ ನೈವೇದ್ಯ ತೋರಿಸಬೇಕು. ಪ್ರತಿದಿನವೂ ಹೀಗೆ ಐದೈದು ಬಗೆಯ ಪೂಜೆ, ದಾನ, ದೇವ ಬ್ರಾಹ್ಮಣರ ಆರಾಧನೆಗಳನ್ನು ಹುಣ್ಣಿಮೆಯವರೆಗೆ ಮಾಡಬೇಕು. ಪ್ರತಿದಿನವೂ ಭೀಷ್ಮರಿಗೆ ಅರ್ಘ್ಯವನ್ನು

**ವೈಯಾಘ್ರಪಾದ ಗೋತ್ರಾಯ ಸಾಂಕೃತ್ಯ ಪ್ರವರಾಯ ಚ ।**
**ಅಪುತ್ರಾಯ ದದಾಮ್ಯೇತದುದಕಂ ಭೀಷ್ಮವರ್ಮಣೇ ॥**
**ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।**
**ಅರ್ಘ್ಯಂ ದದಾಮಿ ಭೀಷ್ಮಾಯ ಹ್ಯಾಜನ್ಮ ಬ್ರಹ್ಮಚಾರಿಣೇ ॥**

ಎಂಬ ಈ ಮಂತ್ರ ಹೇಳಿ ನೀಡಬೇಕು.

ಪ್ರತಿದಿನವು ಶ್ರೀಹರಿಯನ್ನು ಹಸುವಿನ ಹಾಲು, ಮೊಸರು, ಜೇನುತುಪ್ಪ, ತುಪ್ಪ, ಸುಗಂಧ ನೀರು ಮುಂತಾದವುಗಳಿಂದ ಅಭಿಷೇಕ ಮಾಡಿ ದೇವರಿಗೆ ಪಚ್ಚ ಕರ್ಪೂರ, ಬಾಳದ ಬೇರು ಮಿಶ್ರ ಮಾಡಿದ ಚಂದನ, ಗಂಧ, ಕುಂಕುಮಗಳನ್ನು ಲೇಪನ ಮಾಡಬೇಕು. ಮತ್ತು ಬಗೆಬಗೆಯ ಹೂಗಳನ್ನು ಏರಿಸಿ ದಶಾಂಗದಿಂದ ಸುವಾಸಿತವಾದ ಧೂಪಾರತಿಯನ್ನು ಬೆಳಗಬೇಕು. ಐದೂ ದಿನಗಳಲ್ಲಿಯೂ ದೇವರಿಗೆ ಪರಮಾನ್ನ ನೈವೇದ್ಯವನ್ನು ಸಮರ್ಪಿಸಬೇಕು. ದೇವರ ಎದುರು ಹಗಲು ರಾತ್ರಿ ನಂದಾದೀಪವನ್ನು ಹಚ್ಚಬೇಕು. **''ಓಂ ನಮೋ ವಾಸುದೇವಾಯ''** ಎಂಬ ಮಂತ್ರವನ್ನು ಒಂದು ಸಾವಿರದಾ ಒಂದುನೂರಾ ಎಂಟು ಸಲ ಐದು ಹೊತ್ತು ಜಪಿಸಬೇಕು. **''ಓಂ ಕೃಷ್ಣಾಯ ನಮಃ''** ಎಂಬ ಕೃಷ್ಣ ಷಡಕ್ಷರ ಮಂತ್ರದಿಂದ ಸ್ವಾಹಾಕಾರ ಸಹಿತವಾಗಿ ತುಪ್ಪದಲ್ಲಿ ಎದ್ದಿದ ಎಳ್ಳು, ಅಕ್ಕಿ, ಸಮಿಧ, ಅರಳು ಮುಂತಾದವುಗಳಿಂದ ಹೋಮವನ್ನು ಮಾಡಬೇಕು. ಈ ವ್ರತದ ಮೊದಲನೆಯ ದಿನ ಶ್ರೀಹರಿಯ ಪಾದಗಳನ್ನು ಕಮಲಪುಷ್ಪಗಳಿಂದ ಪೂಜಿಸಬೇಕು. ಎರಡನೆಯ ದಿನ ಬಿಲ್ವಪತ್ರದಿಂದ ಮಂಡೆಯನ್ನು ಪೂಜಿಸಬೇಕು. ಅನಂತರ ಮೂರು ದಿನಗಳಲ್ಲಿ ದೇವರ ವಕ್ಷಸ್ಥಳ, ಕಂಠ ಹಾಗೂ ತಲೆಯನ್ನು ಮಾಲತಿ, ಮಲ್ಲಿಗೆ, ಕಮಲ, ಕಲ್ಹಾರ, ಬಕುಲ, ಜಾಜ, ಪಾರಿಜಾತ, ಸಂಪಿಗೆ, ಕೇದಿಗೆ ಮುಂತಾದ ಬಗೆಬಗೆಯ ಸುಗಂಧಿ ಹೂಗಳನ್ನು ಏರಿಸಿ ಪೂಜಿಸಬೇಕು.

ಏಕಾದಶಿ ದಿನ ಕೇವಲ ತೀರ್ಥವನ್ನು ಮಾತ್ರ ಒಂದು ಸಲ ತೆಗೆದುಕೊಂಡು ಪೂರ್ಣ ಉಪವಾಸವನ್ನು ಮಾಡಬೇಕು. ದ್ವಾದಶಿಯ ದಿನ ದೇವರ ಪೂಜೆಯ ನಂತರ ಮೂರು ಸಲ

ತೀರ್ಥವನ್ನು ಸ್ವೀಕರಿಸಿ ಕಿಂಚಿತ್ ಗೋಮೂತ್ರ ಪ್ರಾಶನ ಮಾಡಿ ಪಾರಣೆ ಮಾಡಬೇಕು. ತ್ರಯೋದಶಿ ದಿನ ದೇವರಿಗೆ ಅಭಿಷೇಕ ಮಾಡಿದ ಹಾಲನ್ನೂ ಚತುರ್ದಶಿ ದಿನ ಮೊಸರನ್ನೂ ದೇಹಶುದ್ಧಿಗಾಗಿ ಮಾತ್ರ ಸೇವಿಸಬೇಕು. ಉಳಿದ ಯಾವ ಆಹಾರವನ್ನೂ ವ್ರತ ಹಿಡಿದ ಬಳಿಕ ಐದು ದಿನ ಸ್ವೀಕರಿಸಬಾರದು. ಐದನೇಯ ದಿನ ಸ್ನಾನಮಾಡಿ ವಿಧಿಪೂರ್ವಕವಾಗಿ ದೇವರ ಪೂಜೆಗೈದು ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಿ ವಿಪುಲವಾಗಿ ದಾನ ದಕ್ಷಿಣೆಗಳನ್ನು ನೀಡಬೇಕು. ಸಾಯಂಕಾಲದಲ್ಲಿ ಮತ್ತೆ ಸ್ನಾನಮಾಡಿ ಪಂಚರೂಪಾತ್ಮಕನಾದ ಶ್ರೀಹರಿಯನ್ನು ಪಂಚೋಪಚಾರಗಳಿಂದ ಪೂಜಿಸಿ ಶ್ರೀಹರಿಗೆ ನೈವೇದ್ಯ ತೋರಿಸಿ ನಂತರ ತಾನು ಪಂಚಗವ್ಯ ಪ್ರಾಶನ ಪುರಸ್ಸರವಾಗಿ ಪಾರಣೆಯನ್ನು ಶುದ್ಧವಾದ ಮುನಿಗಳ ಆಹಾರದಿಂದ ಮಾಡಬೇಕು. ಮದ್ಯಪಾನಾದಿ ಮಹಾಪಾಪ ಕೃತ್ಯಗಳನ್ನು ಮಾಡಿದ ಮನುಷ್ಯರೂ ಕೂಡ ಈ ಭೀಷ್ಮಪಂಚಕ ವ್ರತದ ಅನುಷ್ಠಾನದಿಂದ ಪಾಪಮುಕ್ತರಾಗುತ್ತಾರೆ. ಈ ವ್ರತವನ್ನು ಗಂಡಸರೂ, ಹೆಂಗಸರೂ, ವಿಧವೆಯರೂ, ಬ್ರಹ್ಮಚಾರಿಗಳೂ, ಗೃಹಸ್ಥರೂ, ಸನ್ಯಾಸಿಗಳೂ, ಯಾರಾದರೂ ಮೋಕ್ಷಾಕಾಂಕ್ಷೆಯಿಂದ ಮಾಡಬಹುದು. ದ್ವಾದಶೀ ದಿನ ಉಪವಾಸ ಮಾಡಬಾರದು. ಊಟವನ್ನು ಮಾಡಲೇಬೇಕು ಎಂದು ವಿಧಿನಿಷೇಧ ವಚನಗಳಿದ್ದರೂ ಅವೆಲ್ಲವುಗಳಿಗೂ ಈ ಭೀಷ್ಮಪಂಚಕ ವ್ರತ ಒಂದು ಅಪವಾದ. ಇದು ವಿಶೇಷ ವಿಧಾಯಕ ವಾಕ್ಯವಾದುದರಿಂದ ಇದರ ಆಚರಣೆಯಿಂದ ಉಳಿದ ವಚನಗಳಿಗೆ ಸಂಕೋಚ ಸಾವಕಾಶ ಮಾಡಿ ಇದನ್ನು ಪಾಲಿಸುವದರಿಂದ ಮಹಾಪುಣ್ಯಪ್ರಾಪ್ತಿ ಇದೆ.

**ವಿಷ್ಣು:-** ಮಹಾದೇವರು ಲೋಕಕಲ್ಯಾಣಕ್ಕಾಗಿ ಹೇಳಿದ ಕಾರ್ತಿಕ ವ್ರತದ ಮಹಾಮಹಿಮೆಯನ್ನು ಕೇಳಿ ಪರಮಾನಂದವಾಯಿತು ಅವರ ಮಗನಾದ ಸ್ಕಂದನಿಗೆ. ಅವನು ತನ್ನ ತಂದೆಯಾದ ಮಹಾದೇವರಿಗೆ ಸಾಷ್ಟಾಂಗ ವಂದನೆಗೈದ.

**ಸೂತ:-** ಶೌನಕಾದಿ ಮಹರ್ಷಿಗಳೇ ಅತ್ಯಂತ ಗೋಪನೀಯವೂ ಸರ್ವ ಶಾಸ್ತ್ರಗಳ ಸಾರಭೂತವೂ ಆದ ಈ ಕಾರ್ತಿಕ ವ್ರತದ ಮಾಹಾತ್ಮ್ಯವನ್ನು ನಾನು ನಿಮಗೆ ಹೇಳಿದೆ. ಇದನ್ನು ಹೇಳಿದವರೂ ಕೇಳಿದವರೂ ಶ್ರೀಹರಿಯ ಪರಮಾನುಗ್ರಹಕ್ಕೆ ಭಾಜನರಾಗುತ್ತಾರೆ. ಈ ಪುರಾಣ ಹೇಳಿದ ವಾಚಕನಿಗೆ ಹಸು, ಭೂಮಿ, ಬಟ್ಟೆ, ಬಂಗಾರ ಮುಂತಾದವುಗಳನ್ನು ನೀಡಿ ಪೂಜೆ ಮಾಡಬೇಕು. ಅದರಿಂದ ಪುರಾಣ ಶ್ರವಣದ ಪೂರ್ಣಫಲ ಲಭಿಸುವದು. ಈ ಕಾರ್ತಿಕ ಮಾಸ ಮಾಹಾತ್ಮ್ಯದ ಶ್ರವಣ ಪಠಣದಿಂದ ಇಹಲೋಕದಲ್ಲಿ ಧನ ಧಾನ್ಯ, ಯಶ, ಸಂತಾನ, ಆರೋಗ್ಯ, ಆಯುಷ್ಯ ಮುಂತಾದವುಗಳನ್ನು ಹೊಂದಿ ಮುಂದೆ ಶ್ರಾವಕನು ಸರ್ವ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಕುರಿತು ಪ್ರಯಾಣಿಸುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಪ್ರಬೋಧಿನೀ ಏಕಾದಶಿಯ ಮಾಹಾತ್ಮ್ಯ ವರ್ಣನೆ ಎಂಬ ನೂರ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೧೨೦

**ಶೌನಕಾದಿ ಋಷಿಗಳು:-** ಮಹಾನುಭಾವರಾದ ಸೂತಾಚಾರ್ಯರೆ, ಲೋಕಕ್ಕೆಲ್ಲ ಹಿತವನ್ನು ಬಯಸುವ ತಾವು ಭುಕ್ತಿ ಮುಕ್ತಿ ಪ್ರದಾಯಕವಾದ ಕಾರ್ತಿಕ ಮಾಸದ ಮಹಿಮೆಯನ್ನು ನಮಗೆ ಇಷ್ಟು ಹೊತ್ತಿನವರೆಗೆ ಬಿತ್ತರಿಸಿದಿರಿ. ಈಗ ಮಾಘ ಮಾಸದ ಮಾಹಾತ್ಮ್ಯವನ್ನು ನಮಗೆ ನೀವು ಹೇಳಿರಿ. ಈ ಮಾಘ ಮಾಸದ ಮಹಿಮೆಯನ್ನು ಹಿಂದೆ ಯಾರು ಪ್ರಕಾಶ ಪಡಿಸಿದರು? ಯಾರಿಗೆ ಹೇಳಿದರು? ಇದೆಲ್ಲ ಇತಿಹಾಸವನ್ನು ನಮಗೆ ತಾವು ನಿರೂಪಿಸಬೇಕು.

**ಸೂತ:-** ಹಿಂದೆ ಒಮ್ಮೆ ಪಾರ್ವತಿದೇವಿಯು ಈ ವಿಷಯದಲ್ಲಿ ಮಹಾದೇವರಿಗೆ ಪ್ರಶ್ನೆ ಮಾಡಿದಳು.

**ಪಾರ್ವತಿ:-** ಭಕ್ತವತ್ಸಲನಾದ ಪರಮೇಶ್ವರ, ನೀನು ನನಗೆ ನಾನಾವಿಧವಾದ ಧರ್ಮಗಳನ್ನೂ ಪುಣ್ಯ ಕಥೆಗಳನ್ನೂ ನಿರೂಪಿಸಿದೆ. ಈಗ ನಾನು ತಮ್ಮ ಮುಖದಿಂದ ಮಾಘ ಮಾಸದ ಮಹಾತ್ಮೆಯನ್ನು ಕೇಳಬೇಕು ಎಂದು ಇಚ್ಛಿಸುತ್ತೇನೆ. ಮಾಘ ಸ್ನಾನವನ್ನು ಹಿಂದೆ ಯಾರು ಮಾಡಿದರು? ಅದರ ವಿಧಿ ಏನು? ಆ ಮಾಸಾಭಿಮಾನಿ ದೇವತೆ ಯಾರು? ಇದೆಲ್ಲವನ್ನು ಭಕ್ತವತ್ಸಲನಾದ ನೀನು ನನಗೆ ವಿಸ್ತಾರವಾಗಿ ನಿರೂಪಿಸು.

**ಮಹೇಶ್ವರ:-** ಸುಂದರಿ, ಪೂರ್ವಕಾಲದಲ್ಲಿ ಸೂರ್ಯವಂಶದಲ್ಲಿ ದಿಲೀಪ ಎಂಬ ರಾಜಶ್ರೇಷ್ಠನಿದ್ದ. ಒಂದು ದಿನ ಅವನು ಒಂದು ಮಹಾಯಜ್ಞವನ್ನು ಮಾಡಿ ಋಷಿಮುನಿಗಳೊಂದಿಗೆ ಅವಭೃತ ಸ್ನಾನಮಾಡಿ, ಎಲ್ಲ ನಾಗರಿಕರಿಂದ ಪೂಜಿಸಲ್ಪಟ್ಟ. ಅನಂತರ ಮೃಗಯಾ ಕ್ರೀಡೆಯಲ್ಲಿ ಆಸಕ್ತಿಯುಳ್ಳ ಆ ರಾಜರ್ಷಿಯು ದೀರ್ಘಕಾಲೀನ ಯಜ್ಞ ದೀಕ್ಷೆಯಿಂದ ಉಂಟಾದ ಮನೋಜಾಡ್ಯವನ್ನು ಹೋಗಲಾಡಿಸುವದಕ್ಕಾಗಿ ಕೂತೂಹಲದಿಂದ ಬೇಟೆಯ ಆಟಕ್ಕೆ ಹೊರಟ.

ಗಾಂಧಾರ ದೇಶದ ಗಿಡಗಂಟಿಗಳಿಂದ ನಿಬಿಡಾದಿ ನಿಬಿಡವಾದ ದಟ್ಟ ಬೆಟ್ಟ ಕಾಡುಗಳಲ್ಲಿ ಅಂಡಲೆಯುತ್ತ ಸಾನು-ಕಾನು, ಹಳ್ಳ-ಕೊಳ್ಳ, ದರಿ-ಝರೀ, ನದೀ-ನಾಲೆ, ಕಾಡು-ಮೇಡು ಮುಂತಾದವುಗಳನ್ನೆಲ್ಲ ದಾಟಿ ಘನತರ ಗೊಂಡಾರಣ್ಯದ ಮಧ್ಯ ಭಾಗದಲ್ಲಿ ಹೊಕ್ಕ ಗವಿಗಳಲ್ಲಿ ಅವಿತುಕೊಂಡ ಹೆಬ್ಬುಲಿಗಳನ್ನು ಹೊಡೆದು ಹಾಕಿದ. ಕೆರಳಿದ ಕೇಸರಿಗಳನ್ನು ಭಲ್ಲೇ ಖಡ್ಗಗಳಿಂದ ಕೊಚ್ಚಿ ಸೀಳಿದ. ಕುಪಿತವಾದ ಕಾಡುಕೋಣಗಳನ್ನು ಕಡಿದು ಒಟ್ಟಿದ. ಹುಚ್ಚೆದ್ದು ಓಡುವ ಹಂದಿಗಳನ್ನೂ ಘೀಳಿಡುವ ಮದ್ದಾನೆಗಳನ್ನೂ, ಸಿಂಹನಾದ ಮಾಡುವ ಶರಭಗಳನ್ನೂ ತನ್ನ ಘೋರಾಯುಧಗಳಿಂದ ಸವರಿ ಸೀಳಿಹಾಕಿದ. ಹೀಗೆ ಬೇಟೆಯಾಡುತ್ತಾ ಅವನು ನಿಬಿಡವನಾಂತರದಲ್ಲಿ ಮುಂದುವರೆದಾಗ ಒಂದು ಚಪಲಚರಣದ ಚಿಗರೆಯು ಇವನು ಗುರಿಯಿಟ್ಟು ಬಾಣವನ್ನು ತಪ್ಪಿಸಿಕೊಂಡು ಮುಂದೆ ಹೋಯಿತು. ಹಕ್ಕಿಯಂತೆ ನಾಗಾಲೋಟದಿಂದ ಓಟಕಿತ್ತಿದ ಆ ಜಿಂಕೆಯನ್ನು ಹೇಗಾದರೂ ಮಾಡಿ ಹಿಡಿಯಬೇಕೆಂದು ದಿಲೀಪ ಮಹಾರಾಜನು ಅದನ್ನು ಬೆನ್ನಟ್ಟಿದ. ಆ ದೊರೆ ಕಾಡು-ಕಂಟಿ, ಹೆಮ್ಮರ, ಬಳ್ಳಿವಾಡ, ಮೇಡೂಗೂಡುಗಳಲ್ಲಿ ಮರೆಯಾಗಿ, ಹಿಂದೆ

ನೋಡುತ್ತ ಮುಂದೆ ಓಡುತ್ತಿರುವ ಆ ಹರಿಣಶಿಶುವನ್ನು ಬೆಂಬತ್ತಿ ಆ ಕಗ್ಗಾಡಿನಲ್ಲಿ ನುಗ್ಗಿ ಧಾವಿಸಿದ. ಸೂರ್ಯ ಮುಗಿಲುಮಂದಿರದ ಮಧ್ಯಭಾಗದಲ್ಲಿ ಬಂದಾಗ ಮಹಾರಾಜ ನೀರಡಿಸಿ, ನಿತ್ರಾಣನಾಗಿ ಅತ್ತಿತ್ತ ಹುಡುಕುಗಣ್ಣಿನಿಂದ ಜಲಾಶಯವನ್ನು ಅರಸತೊಡಗಿದ. ಬೇಟೆಯ ಆಯಾಸ ಹಾಗೂ ಬಾಯಾರಿಕೆಗಳಿಂದ ಬಳಲಿ ಬೆಂಡಾಗಿ ಬಸವಳಿದು ಹೋದ ಆ ಭೂಮೀಪತಿಯ ಕಣ್ಣಿಗೆ ಒಂದು ತಣ್ಣೀರಿನ ಶೀತಲ ಸರೋವರವು ಗೋಚರಿಸಿತು.

ಕೂಡಲೇ ಜಾತಕದಂತೆ ಮಹಾರಾಜನು ಆ ಸರೋವರದಲ್ಲಿ ಇಳಿದು ಸ್ನಾನ ಮಾಡಿದ. ತನ್ನ ಸಂಧ್ಯ ದೇವತಾರ್ಚನಾದಿ ನಿತ್ಯಾನ್ಹಿಕವನ್ನು ಪೂರೈಸಿದ. ಅನಂತರ ಯಥೇಚ್ಛವಾಗಿ ನೀರು ಕುಡಿದು, ಕಂದ-ಮೂಲ ಫಲಗಳನ್ನು ತಿಂದು, ಅದೇ ಸರೋವರದ ಸ್ಫಟಿಕ ಶುಭ್ರವಾದ ಅಮೃತದಂತೆ ರುಚಿಕರವಾದ ನೀರನ್ನು ಯಥೇಚ್ಛವಾಗಿ ಪಾನಮಾಡಿದ. ಅಲ್ಲಿಯೇ ದಂಡೆಯ ಮೇಲೆ ಇರುವ ಒಂದು ಹೆಮ್ಮರದ ಅಡಿಯಲ್ಲಿ ಹುಲ್ಲಿನ ಪರ್ಯಂಕದಲ್ಲಿ ಒರಗಿ ವಿಶ್ರಮಿಸಿದ.

ಅಷ್ಟರಲ್ಲಿ ಅವನ ಅನುಚರರಾದ ಕಿರಾತರು ಆ ಗೂಢ ಗೊಂಡಾರಣ್ಯದಲ್ಲಿ ಆ ರಾಜನು ಗುರಿಯಿಟ್ಟು ಕೆಡವಿದ ಕಾಡುಮೃಗಗಳನ್ನೆಲ್ಲಾ ಹೊತ್ತು ರಾಜಧಾನಿಗೆ ನಡೆದರು.

ಇತ್ತ ಮಹಾರಾಜನು ವಿಶ್ರಾಂತಿಸುಖವನ್ನು ಅನುಭವಿಸಿ ತನ್ನ ರಾಜಧಾನಿಗೆ ಹೊರಟು ನಿಂತ. ದಾರಿಯಲ್ಲಿ ಹಾರೀತ ಎಂಬ ಮಹಾಮುನಿಯು ಅವನ ಕಣ್ಣಿಗೆ ಬಿದ್ದ. ದೇಹದಲ್ಲಿ ಎದ್ದು ಕಾಣುವ ಮುದ್ದು ನಾಮಗಳು. ಶಂಖ, ಚಕ್ರ, ಲಾಂಛನ. ತಪಸ್ಸಿನಿಂದ ಕೊರಗಿ ಸೊರಗಿದ ಶರೀರ, ಸುಕ್ಕುಗಟ್ಟಿದ ಚರ್ಮ. ಅಸ್ಥಿ ಮಾತ್ರಾವಶಿಷ್ಟವಾದ ದೇಹಯಷ್ಟಿ. ಮೈಮೇಲೆ ಹೊದ್ದುಕೊಂಡ ಚಿಗರೆಯ ಚರ್ಮ. ಕೆಂಬಣ್ಣದ ಜಟಾಮಂಡಲ. ಮುಖದಲ್ಲಿ ನಿರಂತರ ಮಂತ್ರ ಜಪ, ಸಾಕ್ಷಾತ್ ಸನಾತನ ಧರ್ಮವೇ ಮೈದಾಳಿ ಬಂದಂತಿರುವ ಆ ವೃದ್ಧ ಹಾರೀತ ಮುನಿಗಳನ್ನು ಕಂಡು ದಿಲೀಪ ಮಹಾರಾಜನು ಸಾಷ್ಟಾಂಗ ಪ್ರಣಾಮವನ್ನು ಮಾಡಿ ಅವರ ಎದುರು ಕೈಜೋಡಿಸಿ ನಿಂತುಕೊಂಡ. ಇವನ ಮೈಮೇಲಿನ ವಸ್ತು ಒಡವೆ ಅಲಂಕಾರಗಳನ್ನೂ ಮತ್ತು ಮುಖದ ಮೇಲೆ ಉಕ್ಕುವ ರಾಜತೇಜವನ್ನೂ ಕಂಡು ಇವನೊಬ್ಬ ಮಹಾರಾಜನೇ ಇರಬೇಕೆಂದು ತರ್ಕಿಸಿ ಆ ಹಾರೀತ ಮುನಿಗಳು ನುಡಿದರು.

**ಹಾರೀತ:-** ಮಹಾರಾಜನೇ, ಈಗ ಮಾಘಮಾಸ. ಇದು ಒಳ್ಳೇ ಪುಣ್ಯಕಾಲ. ಈಗ ಈ ಸರೋವರದಲ್ಲಿ ಪ್ರಾತಃಸ್ನಾನವನ್ನು ಮಾಡುವದು ಬಿಟ್ಟು ನೀನು ಎಲ್ಲಿಗೆ ಹೊರಟೆ?

**ದಿಲೀಪ:-** ಪೂಜ್ಯರೇ, ನಾನು ಮಾಘಸ್ನಾನದ ಮಹಿಮೆಯನ್ನು ಅರಿಯೆ. ಅದರಿಂದ ಬರುವ ಫಲವು ಏನೆಂಬುದನ್ನೂ ತಿಳಿಯೆ. ಅದೆಲ್ಲವನ್ನು ತಾವು ವಿಸ್ತಾರ ಪೂರ್ವಕವಾಗಿ ಹೇಳಿರಿ. ಆ ಮಾಘಸ್ನಾನದ ಮಹಿಮೆಯನ್ನು ನಮಗೆ ತಿಳಿಸಿರಿ.

**ವೃದ್ಧಹಾರೀತ:-** ಮಹಾರಾಜನೆ, ಈಗ ಸೂರ್ಯೋದಯವು ಆಗುವ ಸಮಯ. ಅರುಣನ ಅರುಣಾರುಣವಾದ ಕಿರಣಗಳಿಂದ ದಿಗಂತರಾಳವೆಲ್ಲವೂ ಉದ್ಭಾಸಿತವಾಗಿದೆ. ಸೂರ್ಯೋದಯವಾಗುವಷ್ಟರಲ್ಲಿ ನನಗೆ ಮಾಘಸ್ನಾನವು ಆಗಲೇಬೇಕು. ಈಗ ನಿನಗೆ ಮಾಘ ಮಹಾತ್ಮೆಯನ್ನು ಹೇಳಲು ನನಗೆ ಅವಕಾಶವಿಲ್ಲ. ಆದುದರಿಂದ ನೀನು ನಿನ್ನ ಕುಲಗುರುಗಳಾದ ವಶಿಷ್ಠರ ಬಳಿಗೆ ಹೋಗು. ಅವರು ನಿನಗೆ ಮಾಘಸ್ನಾನದ ಮಹಿಮೆಯನ್ನು ವಿಸ್ತಾರಪೂರ್ವಕವಾಗಿ ಹೇಳುವರು- ಹಾರಿತ ಮುನಿಗಳ ಈ ಮಾತನ್ನು

ಕೇಳಿ ದಿಲೀಪ ರಾಜನು ತಾನೂ ಕೂಡ ಅಲ್ಲಿಯ ಸರೋವರದಲ್ಲಿ ಪ್ರಾತಃಸ್ನಾನ ಮಾಡಿ ರಾಜಧಾನಿಗೆ ಮರಳಿದ. ಮರುದಿನ ವಶಿಷ್ಠರ ಆಶ್ರಮಕ್ಕೆ ಹೋಗಿ ಅವರಿಗೆ ಸ್ಟಾಂಗ ಪ್ರಣಾಮ ಮಾಡಿ ಮಾಘಸ್ನಾನದ ಪುಣ್ಯಫಲ ಪ್ರಭಾವ ಹೇಳಬೇಕು ಎಂದು ಬಿನ್ನವಿಸಿದ.

**ವಶಿಷ್ಠ:-** ಮಹಾರಾಜ, ನಿನ್ನ ಈ ಪ್ರಶ್ನೆ ಮೂರು ಲೋಕಗಳಿಗೂ ಹಿತಕಾರಕ. ಯಜ್ಞ ಯಾಗಗಳನ್ನು ಮಾಡದೆ, ಜಪತಪಗಳನ್ನು ಆಚರಿಸದೆ, ಕೆರೆ, ಕಾಲುವೆಗಳನ್ನು ತೋಡಿಸದೆ, ಸ್ವರ್ಗಾದಿ ಸದ್ಗತಿಗಳನ್ನು ಪಡೆಯಬಯಸುವವರು ಮಾಘ ಮಾಸದಲ್ಲಿ ನದೀ-ಸೋರವರ, ಹೊಕ್ಕರಣಿ, ವಾಪೀ-ಕೂಪ, ತಡಾಗಗಳಲ್ಲಿ ಸ್ನಾನ ಮಾಡಲು ಬಯಸುವರು. ಗೋದಾನ, ಭೂದಾನ, ಸುವರ್ಣದಾನ, ರತ್ನದಾನ, ಮುಂತಾದವುಗಳನ್ನು ಮಾಡದೆ ಅವೆಲ್ಲವೂ ತಮಗೆ ಮುಂದೆ ಸಮೃದ್ಧವಾಗಿ ದೊರಕಬೇಕು ಎಂದು ಬಯಸುವವರೂ ಕೃಚ್ಛ ಚಾಂದ್ರಾಯಣ ಮುಂತಾದ ವ್ರತ ಉಪವಾಸಗಳಿಂದ ದೇಹವನ್ನು ಒಣಗಿಸದೆ ಸೊರಗಿಸದೆ ಸ್ವರ್ಗ ಸುಖವನ್ನು ಸೂರೆಗೊಳ್ಳಲು ಬಯಸುವವರೂ ಪ್ರಾತಃಕಾಲದಲ್ಲಿ ಮಾಘ ಸ್ನಾನ ಮಾಡಿದರೆ ಅನಾಯಾಸದಿಂದ ತಮ್ಮ ಮನೋರಥಗಳನ್ನೆಲ್ಲ ಶ್ರೀಹರಿಯ ಪರಮಾನುಗ್ರಹದಿಂದ ಈಡೇರಿಸಿಕೊಳ್ಳುವರು.

**ಹರೇಃ ಪೂಜಾ ಚ ವೈಶಾಖೇ ತಪಃ ಪೂಜಾ ಚ ಕಾರ್ತಿಕೇ ।**
**ತಪೋ ಹೋಮಸ್ತಥಾ ದಾನಂ ತ್ರಯಂ ಮಾಘೇ ವಿಶಿಷ್ಯತೇ ॥**

ವೈಶಾಖದಲ್ಲಿ ಶ್ರೀಹರಿಯ ಪೂಜೆ ಅಧಿಕ ಪುಣ್ಯಪ್ರದ ಕಾರ್ತೀಕದಲ್ಲಿ ಶ್ರೀಹರಿಯನ್ನು ಕುರಿತು ಮಾಡಿದ ತಪಸ್ಸು ಮತ್ತು ಪೂಜೆಯು ಅತ್ಯಧಿಕ ಪುಣ್ಯದಾಯಕ. ಮಾಘ ಮಾಸದಲ್ಲಿ ಮಾಡುವ ತಪಸ್ಸು, ನೀಡುವ ದಾನ, ಆಚರಿಸಿದ ಹೋಮ, ಇವು ಮೂರೂ ಅತ್ಯಧಿಕ ಪುಣ್ಯಪ್ರದಾಯಕವಾಗಿರುತ್ತವೆ.

ಹಿಂದೆ ಮಾಘ ಮಾಸದಲ್ಲಿ ಅದಿತಿ ದೇವಿಯು ಅನ್ನವನ್ನು ಬಿಟ್ಟು ಹನ್ನೆರಡು ವರ್ಷ ಪ್ರಾತಃಸ್ನಾನವನ್ನು ಮಾಡಿದಳು. ಅದರಿಂದ ಅವಳಿಗೆ ಮೂರು ಲೋಕಗಳನ್ನು ಬೆಳಗುವ ಇಂದ್ರ ಸೂರ್ಯ ಮುಂತಾದ ಹನ್ನೆರಡು ದೇವತೆಗಳು ಪುತ್ರರಾಗಿ ಜನಿಸಿದರು. ತ್ರೈಲೋಕ್ಯ ದೀಪಕರಾದ ಈ ಹನ್ನೆರಡು ಜನ ಅದಿತಿಯ ಪುತ್ರರು ಜಗತ್ತಿನಲ್ಲಿ ದ್ವಾದಶ ಆದಿತ್ಯರೆಂದು ಪ್ರಸಿದ್ಧರಾಗಿದ್ದಾರೆ. ರೋಹಿಣೀ ದೇವಿಯು ಈ ಮಾಘಸ್ನಾನದಿಂದ ಸೌಭಾಗ್ಯವನ್ನು ಹೊಂದಿದಳು. ಮಾಘ ಮಾಸದಲ್ಲಿ ಸ್ನಾನದಾನಗಳನ್ನು ಮಾಡಿದ ಅರುಂಧತಿಯು ಸತೀಕುಲಮಂಡನಮಣಿಯಾಗಿ ಮೆರೆದಳು. ಶಚೀದೇವಿಯು ದಿವ್ಯವಾದ ಸೌಂದರ್ಯ ಸಂಪನ್ನಳಾಗಿ ಈ ಮಾಘಸ್ನಾನದ ಮಹಿಮೆಯಿಂದ ಮಹೇಂದ್ರನ ಮಹಿಷಿಯಾಗಿ ಸ್ವರ್ಗ ಸಾಮ್ರಾಜ್ಯದ ಸಾಮ್ರಾಜ್ಞಿಯಾಗಿ ಮೆರೆಯುತ್ತಿದ್ದಾಳೆ.

ಸೂರ್ಯನು ಮಕರ ರಾಶಿಗೆ ಬಂದಾಗ್ಗೆ, ಮಾಘ ಮಾಸದಲ್ಲಿ ಅರುಣೋದಯ ಸಮಯದಲ್ಲಿ ನದೀ ಪುಷ್ಕರಣೀ ಮುಂತಾದ ಜಲಾಶಯದಲ್ಲಿ ಸ್ನಾನಮಾಡಿದ ಹೆಣ್ಣು ಮಕ್ಕಳು ರೂಪಸಂಪನ್ನರಾಗಿ ಸಿರಿವಂತರ ಮನೆಯಲ್ಲಿ ವೇದಧ್ವನಿಯಿಂದ ಪವಿತ್ರವಾದ, ವಿದ್ವಾಂಸರಿಂದ ಅಲಂಕೃತವಾದ, ರಮ್ಯವಾದ ಏಳು ಅಂತಸ್ತಿನ ಪ್ರಾಸಾದದ ಒಡತಿಯರಾಗಿ ಅತಿಥಿಗಳ ಸೇವೆ ಮಾಡುತ್ತಾ ಇಹಲೋಕದ ಭೋಗಭಾಗ್ಯಗಳನ್ನೆಲ್ಲಾ ಹೊಂದುತ್ತಾರೆ. ಇದರಂತೆ ಮಾಘ ಮಾಸದಲ್ಲಿ ಯಾರು ವಿಪುಲವಾಗಿ ದಾನದಕ್ಷಿಣೆಗಳನ್ನು ನೀಡುತ್ತಾರೋ

ಶ್ರೀಹರಿಯನ್ನು ಪೂಜಿಸಿ ಸ್ತೋತ್ರಗೈಯುವವರೋ ಮತ್ತು ತಮಗೆ ಇಷ್ಟವಾದ ವಸ್ತುವನ್ನು ಒಂದುತಿಂಗಳಕಾಲ ತ್ಯಜಿಸಿ ಸ್ನಾನ, ದಾನ, ದೇವತಾರ್ಚನಾದಿ ನಿಯಮಗಳನ್ನು ಪಾಲನೆ ಮಾಡುವರೋ ಅವರು ಇಹಲೋಕದಲ್ಲಿ ಸಕಲ ವಿಧದ ಭೋಗ ಭಾಗ್ಯಗಳನ್ನು ಪಡೆದು ಮುಂದೆ ಹರಿಮಂದಿರಕ್ಕೆ ಪ್ರಯಾಣ ಬೆಳೆಸುವರು. ಮಹಾಮಹಾ ಜ್ಞಾನಿಗಳಿಗೂ, ವನಾಂತ ಏಕಾಂತದಲ್ಲಿದ್ದು ತಪಸ್ಸನ್ನು ಮಾಡುವ ಯೋಗಿಗಳಿಗೂ ವಿಷ್ಣುವಿನ ಅತ್ಯರ್ಥ ಪ್ರಸಾದವನ್ನು ಪಡೆದ ಅತ್ಯಂತಿಕ ಭಗವದ್ಭಕ್ತರಿಗೂ ಬರುವ ಪುಣ್ಯ ಫಲವು ಮಾಘ ಸ್ನಾನ ಮಾಡುವವರಿಗೆ ದೊರಕುವದು, ಮಾಘ ಮಾಸದಲ್ಲಿ ಒಂದು ತಿಂಗಳ ಪ್ರಾತಃಸ್ನಾನವನ್ನು ಮಾಡಿ ಗೋದಾನ ಮಾಡಿದವರು ಆ ಹಸುವಿನ ಮೈಯಲ್ಲಿಯ ರೋಮಗಳಷ್ಟು ಸಾವಿರವರ್ಷ ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸುತ್ತಾರೆ.

**ಸರ್ವೇಷಾಂ ಧಾನ್ಯ ರಾಶೀನಾಂ ತಿಲಾಃ ಪಾಪ ಪ್ರಣಾಶನಾಃ ।**

ಎಲ್ಲ ಧಾನ್ಯ ರಾಶಿಗಳಲ್ಲಿ ಎಳ್ಳು ಪಾಪನಾಶಕವಾಗಿರುತ್ತದೆ. ಆದ್ದರಿಂದ ಮಾಘ ಮಾಸದಲ್ಲಿ ಎಳ್ಳು ಬೆಲ್ಲದಾನ ಕೊಡಬೇಕು. ಮಾಘ ಮಾಸದಲ್ಲಿ ಬ್ರಾಹ್ಮಣ ಭೋಜನ, ಪಿತೃತರ್ಪಣ, ಯಥಾಶಕ್ತಿ ದಕ್ಷಿಣಾ ದಾನ ಈ ಮೂರರಿಂದ ನಿಜವಾದ ಭಗವತ್ಪ್ರೀತಿ ಉಂಟಾಗುತ್ತದೆ. ಆದುದರಿಂದ

**ಅದಾನಂ ನ ಕ್ಷಿಪೇತ್ ಮಾಘಂ ಸರ್ವದಾ ನೃಪಸತ್ತಮ ।**
**ವಿತ್ತಾನುಸಾರಂ ಜ್ಞಾತ್ವಾ ವೈ ಮಾಘೇ ದಾನಂ ನರೋ ದದೇತ್ ॥**

ನೃಪಸತ್ತಮ, ಮಾಘ ಮಾಸವನ್ನು ಏನೂ ದಾನ ಕೊಡದೇ ಕಳೆಯಬಾರದು. ತನ್ನ ದ್ರವ್ಯಾನುಕೂಲತೆಗೆ ಅನುಸರಿಸಿ ಏನಾದರೂ ದಾನವನ್ನು ನೀಡಬೇಕು.

**ದಾನೇನ ಪ್ರಾಪ್ಯತೇ ಸ್ವರ್ಗೋ ದಾನೇನ ಪ್ರಾಪ್ಯತೇ ಸುಖಂ ।**
**ದಾನೇನ ಹೀಯತೇ ಪಾಪಂ ಮಹಾ ಪಾತಕಜಂ ನೃಪ ॥**

ಸ್ವರ್ಗ ಸಿಗುವದು ದಾನದಿಂದ. ಸುಖ ಲಭಿಸುವದು ದಾನದಿಂದ. ಮಹಾ ಮಹಾ ಪಾತಕಗಳೂ ಕೂಡ ದಾನದಿಂದ ಕಳೆದುಹೋಗುತ್ತವೆ.

**ಅದಾನಂ ನ ತಪೋ ಭಾತಿ ಹ್ಯಸೂರ್ಯಂ ಗಗನಂ ಯಥಾ ।**
**ಅಸಂತತಿ ಕುಲಂ ಯದ್ವದಾಚಾರೇಣ ವಿನಾ ಗೃಹಂ ॥**

ಸದಾಚಾರವಿಲ್ಲದ ಮನೆ ಶೋಭಿಸುವದಿಲ್ಲ. ಸಂತಾನವಿಲ್ಲದ ಕುಲವು ಶೋಭಿಸುವದಿಲ್ಲ. ಸೂರ್ಯನಿಲ್ಲದ ಗಗನವು ಶೋಭಿಸುವದಿಲ್ಲ. ಅದರಂತೆ ದಾನವನ್ನು ನೀಡದೆ ತಪಸ್ಸು ಶೋಭಿಸುವದಿಲ್ಲ. ಹಿಂದೆ ಪೂರ್ವಕಾಲದಲ್ಲಿ ಮಣಿಪರ್ವತದ ಮೇಲೆ ಭೃಗುಮಹರ್ಷಿಯು ವಿದ್ಯಾಧರನಿಗೆ ಮಾಘಸ್ನಾನಕ್ಕೆ ಮಿಗಿಲಾದ ಪಾಪನಾಶನ ಮಾಡುವ ಯಾವ ಸಾಧನವೂ ಇರುವದಿಲ್ಲ ಎಂದು ನಿರೂಪಿಸಿದ್ದಾನೆ.

**ದಿಲೀಪ:-** ಮಹರ್ಷಿಗಳೆ, ಭೃಗು ಮುನಿಯು ಮಣಿಪರ್ವತದ ಮೇಲೆ ಯಾವ ವಿದ್ಯಾಧರನಿಗೆ ಏನೆಂದು ಧರ್ಮೋಪದೇಶ ಮಾಡಿದನು? ಅದನ್ನು ತಿಳಿಯುವ ಕುತೂಹಲ ನನಗೆ. ದಯವಿಟ್ಟು ಅದನ್ನು ನನಗೆ ತಾವು ತಿಳಿಸಿರಿ.

**ವಶಿಷ್ಠ:-** ಒಮ್ಮೆ ಹನ್ನೆರಡು ವರ್ಷ ಮಳೆಯನ್ನೇ ಸುರಿಸಲಿಲ್ಲ ಮೇಘಾಧಿಪತಿ ಆದ ಇಂದ್ರ. ಅದರಿಂದ ಉದ್ವಿಗ್ನರಾದ ಪ್ರಜಾಜನರು ದಶದಿಕ್ಕಿಗೂ ಹೋದರೂ

ಕ್ಷಾಮಕ್ಷೀಣರಾಗಿ. ವಿಂಧ್ಯ ಹಿಮಾಚಲಗಳ ಮಧ್ಯ ದೇಶದಲ್ಲಿ ವೇದಾಧ್ಯಯನಕಾರ, ಸ್ವಾಹಾ, ಸ್ವಧಾವಷಟ್ಕಾರ ಎಲ್ಲವೂ ಲುಪ್ತವಾದವು. ಕಂದ, ಮೂಲ, ಫಲ, ಜಲಗಳಿಂದ ಶೂನ್ಯವಾಯಿತು ಧರಣೀ ಮಂಡಲವು. ಆಗ ವಿಂಧ್ಯಗಿರಿಯ ಪ್ರತ್ಯಂತ ಪ್ರದೇಶದ ತರುನಿಬಿಡವಾದ ತಮ್ಮ ರೇವಾತೀರದ ರಮಣೀಯವಾದ ಆಶ್ರಮವನ್ನು ಬಿಟ್ಟು ಭೃಗುಋಷಿಗಳು ಶಿಷ್ಯರೊಂದಿಗೆ ಹಿಮಾಚಲಕ್ಕೆ ತೆರಳಿದರು. ಅಲ್ಲಿ ಕೈಲಾಸಗಿರಿಯ ಪಶ್ಚಿಮದಿಕ್ಕಿನಲ್ಲಿ ಮಣಿಕೂಟ ಎಂಬ ಹೆಸರಿನ ಉತ್ತುಂಗವಾದ ಶೈಲಶೃಂಗ ಮುತ್ತು ರತ್ನಗಳ ಆಕರವಾದ ಆ ಶ್ರೀಶೈಲದ ಕೆಳಭಾಗವೆಲ್ಲವೂ ಶುದ್ಧ ಸ್ಫಟಿಕ ಧಾತುಗಳಿಂದ ಶುಭ್ರಾಭ್ರ ಮಧ್ಯಭಾಗವು ಇಂದ್ರನೀಲ ಮಣಿಗಳ ನೀಲ ಶಿಲೆಗಳಿಂದ ಶ್ಯಾಮಸುಂದರ. ಅದರಿಂದ ಭಸ್ಮ ಚರ್ಚಿತನಾಗಿ ಧವಳ ದೀಧಿತಿಯಿಂದ ಒಪ್ಪುವ ನೀಲಕಂಠನಾದ ಮಹಾದೇವನಂತೆ ಶೋಭಿಸುತ್ತಿತ್ತು ಆ ಮಣಿಪರ್ವತ.

ರಮಣೀಯವಾದ ಆ ದಿವ್ಯ ಪರ್ವತವನ್ನು ನೋಡಿ ಪರಮ ಪ್ರಹರ್ಷವಾಯಿತು ಆ ಭೃಗುಮುನಿಗೆ. ದುರ್ಭಿಕ್ಷದಿಂದ ಪರಿಪೀಡಿತವಾದ ಆ ಮುನಿಪರಿವಾರವು ಅಲ್ಲಿಯೇ ವಾಸ್ತವ್ಯವನ್ನು ಹೂಡಿತು. ಮನೋಹರವಾದ ಆ ಶೈಲ ಶಿಖರದ ರಮಣೀಯವಾದ ದರಿ ಕಂದರಗಳಲ್ಲಿ ವಿಜನ ವನಾಂತರ ಏಕಾಂತದ ಆಶ್ರಮಗಳಲ್ಲಿಯೂ ಬಹುಕಾಲ ನಿಂತು ತಪಸ್ಸನ್ನು ಆಚರಿಸಿದ ಆ ಮುನಿಪುಂಗವ.

ಹೀಗೆ ಆ ಭೃಗುಮುನಿಯು ತನ್ನ ಆಶ್ರಮದಲ್ಲಿ ನಿಂತು ತಪಸ್ಸನ್ನು ಆಚರಿಸುತ್ತಲಿರುವಾಗ ವಿದ್ಯಾಧರ ದಂಪತಿಗಳು ಅಲ್ಲಿಗೆ ಬಂದರು. ಪರಮದುಃಖಿತರಾದ ಅವರು ಮುನಿಯ ಬಳಿಗೆ ಬಂದು ದೈನ್ಯದಿಂದ ನಮಸ್ಕರಿಸಿದರು. ನಿಸ್ತೇಜವಾದ ಆ ದೀನ ದೂನ ದಂಪತಿಗಳ ದುಃಖದಿಂದ ತಪ್ತವಾದ ಮುಖಚರ್ಯೆಯನ್ನು ನೋಡಿ ಕರುಣೆ ತುಂಬಿದರು ಭೃಗುಮುನಿಗಳು. ಅವರ ಈ ದಯನೀಯ ದುರವಸ್ಥೆಯ ಕಾರಣವನ್ನು ವಿಚಾರಿಸಿದರು. ಆಗ ಆ ಕಳೆಗೆಟ್ಟ ವಿದ್ಯಾಧರ ಯುವಕ ಸೋತದನಿಯಲ್ಲಿ ನುಡಿದ.

**ವಿದ್ಯಾಧರ:-** ಪೂಜ್ಯರೇ, ಈ ಚೆಲುವೆ ನನ್ನ ಪ್ರೇಯಸಿ, ಪತ್ನಿ. ನೃತ್ಯದಲ್ಲಿ ನಿಪುಣೆ, ಸಂಗೀತದಲ್ಲಿ ಶಾರದೆ. ಸಕಲ ಕಲಾ ಕಲಾಪಗಳಲ್ಲಿ ಕುಶಲೆ. ಈ ಎಲ್ಲ ಅವಳಲ್ಲಿ ಇರುವ ವಿದ್ಯೆಗೆ ಒಪ್ಪ ಇಟ್ಟಿದೆ ಅವಳ ಶೀಲ ಸೌಜನ್ಯ. ಇವಳು ಹಿಂದೆ ಉತ್ಸಂಗದಲ್ಲಿ ತಂಬೂರಿಯನ್ನು ಒರಗಿಸಿಕೊಂಡು ಅದರ ತಂತಿಗಳನ್ನು ಮೀಟಿ ನಾದ ತರಂಗಳನ್ನು ಝುಂಕಾರದೊಂದಿಗೆ ಹೊರಡಿಸಿದಾಗ ನಾರದರು ಕೂಡ ರೋಮಾಂಚಿತ. ಇವಳ ಕೋಕಿಲಕಂಠದ ಸಂಗೀತವನ್ನು ಕೇಳಿದಾಗ ಸಾವಿರ ಕಣ್ಣಿನ ದೇವೇಂದ್ರನಿಗೆ ಸಾವಿರ ಕಿವಿಗಳು ತನಗೇಕೆ ಇಲ್ಲ ಎಂಬ ಆತಂಕ. ಈ ನನ್ನ ಮನದನ್ನೆ ಎಳೆ ಮಗುವಿನಂತೆ ತಂಬೂರಿಯನ್ನು ತೊಡೆಯಲ್ಲಿಟ್ಟು ಮೈದಡವಿ ಕಿವಿ ಹಿಂಡಿ ನುಡಿಸತೊಡಗಿದಾಗ ಮಹಾದೇವನು ಕೂಡ ತಲೆಯ ಮೇಲಿನ ಚಂದ್ರ ಒಸರುವಂತೆ ತಲೆದೂಗಿದ.

ಇಂಥ ಸದ್ಗುಣಿಯಾದ ರೂಪ ಸಂಪನ್ನ ರಮಣಿಮಣಿಗೆ ನಾನು ತಕ್ಕ ಪತಿ ಅಲ್ಲ. ನನ್ನ ದೇಹ ಮಾನವ ದೇಹ ಆದರೂ ಮುಖ ಮಾತ್ರ ಹುಲಿಯದು ಇರುತ್ತದೆ. ಇಂಥ ಸುರಸುಂದರಿಗೆ ವ್ಯಾಘ್ರ ಮುಖದ ನಾನು ಪತಿಯಾಗಿದ್ದದ್ದು ಎಂಥ ವಿಧಿವಿಡಂಬನೆ ! ಪೂಜ್ಯರೇ, ಆದುದರಿಂದ ನನ್ನ ಈ ವಿಕಾರ ಮುಖ ಕಳೆದು ಸುಂದರ ವದನವು ಬರುವಂತೆ ಯಾವುದಾದರೂ ಉಪಾಯವನ್ನು ಹೇಳಿರಿ.

ಆ ವಿದ್ಯಾಧರ ತರುಣನ ಈ ಕರುಣ ಕತೆಯನ್ನು ಕೇಳಿ ಹಾಗೂ ಅವನ ವಿಕಾರ ಮುಖವನ್ನು ನೋಡಿ ಆ ಮಹಾಮುನಿಗಳ ತುಟಿಯ ಮೇಲೆ ಕಿರುನಗೆ ಸೂಸಿತು. ಕರುಣೆಯಿಂದ ಹೇಳಿದರು.

**ಭೃಗು:-** ವಿದ್ಯಾಧರ, ಮಾನವರು ನಗುತ್ತ ಪಾಪವನ್ನು ಮಾಡುತ್ತಾರೆ. ಮುಂದೆ ಅಳುತ್ತ ಅದರ ದುಷ್ಪರಿಣಾಮವನ್ನು ಉಣ್ಣುತ್ತಾರೆ. ನೀನು ಕಳೆದ ಜನ್ಮದಲ್ಲಿ ಮಾಘ ಶುದ್ಧ ಏಕಾದಶಿಯ ದಿನ ಉಪವಾಸ ಮಾಡಿ ಎಣ್ಣೆ ಹಚ್ಚಿ ಅಭ್ಯಂಗ ಸ್ನಾನ ಮಾಡಿದೆ. ಆದುದರಿಂದ ನಿನಗೆ ಇಂಥ ಕುರೂಪಿ ದೇಹವು ಬಂದಿದೆ.

ಪೂರ್ವಕಾಲದಲ್ಲಿ ಪುರೂರವ ರಾಜನು ಈ ಮಣಿಕೂಟ ಪರ್ವತಕ್ಕೆ ಬಂದು ಇಲ್ಲಿಯ ದಿವ್ಯ ತೀರ್ಥದಲ್ಲಿ ಸ್ನಾನಮಾಡಿ ಮೂರು ತಿಂಗಳ ಅನ್ನ ಪಾನಗಳನ್ನು ಬಿಟ್ಟು ತಪಸ್ಸು ಮಾಡಿದ. ದೇವದೇವೋತ್ತಮನಾದ ಶ್ರೀಹರಿಯನ್ನು ಆರಾಧಿಸಿದ. ಮಾಘ ಶುಕ್ಲಪಕ್ಷ ದ್ವಾದಶಿಯ ದಿನ ಶ್ರೀ ಮನ್ನಾರಾಯಣನು ಅವನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ತನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಿದ ಮತ್ತು ವಾರ್ವೀ ತಳದ ಸಾರ್ವಭೌಮ ಪಟ್ಟದಲ್ಲಿ ಕೂಡಿಸಿ ತನ್ನ ಕೈಯಿಂದಲೇ ಶಂಖೋದಕದಿಂದ ಪ್ರೀತಿಯ ಪಟ್ಟಾಭಿಷೇಕವನ್ನು ನೆರವೇರಿಸಿದ. ಅದರಿಂದ ಪುರೂರವನಿಗೆ ಅಮರಲೋಕದ ತರುಣರೂ ಅಸೂಯೆ ಪಡುವಂಥ ದಿವ್ಯರೂಪವು ಪ್ರಾಪ್ತವಾಯಿತು. ಅವನ ಆ ಲೋಹನೀಯವಾದ ಲಾವಣ್ಯವನ್ನು ಕಂಡು ಮುಗ್ಧಳಾಗಿ ಲಲನಾಕುಲಲಲಾಮಳಾದ ಊರ್ವಶಿಯು ಅವನನ್ನು ಅರಸಿಕೊಂಡು ಭೂಮಿಗೆ ಬಂದಳು. ವರಿಸಿ ವಿವಾಹವಾಗಿ ಮಾನವನ ಮಡದಿಯಾಗಿ ಭೂಲೋಕದಲ್ಲಿ ಸಂಸಾರ ಮಾಡಿದಳು.

ವಿದ್ಯಾಧರ, ನೀನು ಈ ನಿನ್ನ ವಿಕಾರ ಮುಖದ ವೈರೂಪ್ಯದ ಪ್ರಕಾರವನ್ನು ಕಳೆದುಕೊಳ್ಳಲು ಬಯಸುತ್ತಿದ್ದರೆ ಈ ಮಣಿಕೂಟ ಪರ್ವತದಲ್ಲಿರುವ ನದಿಯಲ್ಲಿ ಸ್ನಾನಮಾಡು ನಿನ್ನ ಸುದೈವದಿಂದ ಇನ್ನು ಐದು ದಿನಗಳ ನಂತರ ಹೇಗೂ ಮಾಘಮಾಸ ಬರಲಿದೆ. ಪುಷ್ಯ ಶುದ್ಧ ಏಕಾದಶಿಯಂದು ಉಪವಾಸ ಮಾಡಿ ಒಂದು ತಿಂಗಳ ಉಪವಾಸ ವ್ರತವನ್ನು ಹಿಡಿದು ಶ್ರೀಹರಿಯನ್ನು ಕುರಿತು ತಪಸ್ಸುಮಾಡು. ನೆಲದಮೇಲೆ ಶಯನ ತ್ರಿಕಾಲಸ್ನಾನ, ಸರ್ವ ಭೋಗ ಪರಿತ್ಯಾಗ, ಸಂತತ ಶ್ರೀಹರಿಯ ಆರಾಧೆಯನ್ನು ಭಕ್ತಿಪೂರ್ವಕವಾಗಿ ಮಾಘ ಶುಕ್ಲ ಏಕಾದಶಿಯ ಸಂಪೂರ್ಣ ಉಪವಾಸಮಾಡಿ ಈ ತೀರ್ಥದಲ್ಲಿ ಮಿಂದು ವಿಷ್ಣುವಿನ ಅರ್ಚನವನ್ನು ಮಾಡು. ಅದರಿಂದ ನಿನ್ನ ಪಾಪವೆಲ್ಲವೂ ದಗ್ಧವಾಗಿ ಹೋಗುವವು. ದ್ವಾದಶಿಯ ದಿನ ನಾನು ವೇದ ವೈದಿಕಸೂಕ್ತಗಳಿಂದ ಅಭಿಮಂತ್ರಿತವಾದ ನೀರಿನಿಂದ ನಿನಗೆ ಸ್ನಾನಮಾಡಿಸುತ್ತೇನೆ ಮತ್ತು ಮಂತ್ರಶಕ್ತಿಯಿಂದ ನಿನಗೆ ದಿವ್ಯರೂಪವು ಬಂದು ಸುಂದರವಾದ ವದನವು ಅಭಿವ್ಯಕ್ತವಾಗಿ ನೀನು ಸಾಕ್ಷಾತ್ ಮದನನಂತೆ ಮನೋಹರನಾಗಿ ಕಂಗೊಳಿಸುವಂತೆ ಮಾಡುತ್ತೇನೆ.

ಹೀಗೆ ದಿವ್ಯ ಸುಂದರವಾದ ಮುಖ ಸೌಂದರ್ಯದಿಂದ ಕೂಡಿದ ನೀನು ತ್ರಿಭುವನ ಸುಂದರಿಯಾದ ನಿನ್ನ ಮಡದಿಯೊಂದಿಗೆ ವಿವಿಧ ಕ್ರೀಡಾ ವಿನೋದಗಳನ್ನು ಆಚರಿಸು. ಮಾಘ ಸ್ನಾನವು ಮಾನವರಿಗೆ ಆಯುಷ್ಯ, ದ್ರವ್ಯ, ಮಡದಿ, ಮಕ್ಕಳು, ಅಧಿಕಾರ, ಐಶ್ವರ್ಯ ಎಲ್ಲವನ್ನು ತಂದು ಕೊಡುತ್ತದೆ.

**ಕೃತೇ ತಪಃ ಕೃತಂ ಜ್ಞಾನಂ ತ್ರೇತಾಯಾಂ ಯಜನಂ ತಥಾ**
**ದ್ವಾಪರೇತು ಕಲೌ ಜ್ಞಾನಂ**

ಮೋಕ್ಷ ಜನಕವಾದ ಪರಬ್ರಹ್ಮನ ದಿವ್ಯ ಜ್ಞಾನವು ಕೃತ ಯುಗದಲ್ಲಿ ತಪಸ್ಸಿನಿಂದಲೂ ತ್ರೇತಾ ಮತ್ತು ದ್ವಾಪರ ಯುಗಗಳಲ್ಲಿ ಯಜ್ಞ ಯಾಗಾದಿಗಳಿಂದಲೂ ಕಲಿಯುಗದಲ್ಲಿ ಮಾಘ ಸ್ನಾನದಿಂದಲೂ ಪ್ರಾಪ್ತವಾಗುವದು.

ಮಾಘ ಸ್ನಾನವು ಎಲ್ಲ ಜಾತಿ ಜನಾಂಗ ವರ್ಣ ಆಶ್ರಮದವರಿಗೂ ನೀರಿನಲ್ಲಿ ಬೆಳಗಿನ ಜಾವ ಮೈಯನ್ನು ಅದ್ದುವ ಮಾತ್ರದಿಂದಲೇ ಭುಕ್ತಿ ಮುಕ್ತಿ ಪ್ರದಾಯಕವಾಗಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಾಘ ಮಾಸದ ಮಹಿಮೆ ಎಂಬ ನೂರ ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ದೀಪ, ಗಂಧ ಹಾಗೂ ನೆಲ್ಲೀಗಿಡಗಳ ಮಹಿಮೆ | ಅಧ್ಯಾಯ - ೧೨೧

**ಈಶ್ವರಃ-** ನೆಲ್ಲೀಗಿಡದ ನೆರಳಿನಲ್ಲಿ ಕುಳಿತು ಪಿತೃಗಳನ್ನು ಉದ್ದೇಶಿಸಿ ಪಿಂಡದಾನ ಮಾಡಿದವರು ಮಾಧವನ ಪ್ರಸಾದದಿಂದ ಮೋಕ್ಷವನ್ನು ಹೊಂದುತ್ತಾರೆ. ತಲೆಯ ಮೇಲೆ, ಮುಖದಲ್ಲಿ, ಕೈಯಲ್ಲಿ ಅಥವಾ ದೇಹದ ಯಾವುದೇ ಭಾಗದಲ್ಲಿ ಧಾತ್ರೀಫಲವನ್ನು ಧರಿಸಿದವನು, ಧಾತ್ರೀಫಲವನ್ನು ಕ್ರಮಪ್ರಕಾರ ಸ್ವೀಕರಿಸಿದವನು, ನಾರಾಯಣನ ಪರಮಾನುಗ್ರಹವನ್ನು ಹೊಂದುತ್ತಾನೆ. ತುಳಸೀಮಾಲೆಯನ್ನೂ ಧಾತ್ರೀಮಾಲೆಯನ್ನು ಯಾವ ಕಾಲಕ್ಕೂ ಹಾಕದೇ ಇರಬಾರದು.

**ನ ಜುಹ್ಯಾತ್ತುಲಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ ।**
**ಯಾವತ್ತಿಷ್ಠತಿ ಕಂಠಸ್ಥಾ ಧಾತ್ರೀಮಾಲಾ ನರಸ್ಯ ಹಿ ॥**
**ತಾವತ್ತಸ್ಯ ಶರೀರೇ ತು ಪ್ರತಿಷ್ಠತಿ ಚ ಕೇಶವಃ ॥**

ತುಳಸೀಮಾಲೆಯನ್ನೂ, ಧಾತ್ರೀಮಾಲೆಯನ್ನೂ ಇವೆರಡನ್ನೂ ವಿಶೇಷತಃ ಧಾತ್ರೀ ಮಾಲೆಯನ್ನು ಸಾರ್ವಕಾಲಿಕವಾಗಿ ಧರಿಸಬೇಕು. ಮನುಷ್ಯನು ಎಂದೂ ಕಂಠದಿಂದ ಈ ಮಾಲೆಗಳನ್ನು ಹೊರತೆಗೆದಿಡಬಾರದು. ಧಾತ್ರೀಮಾಲೆಯು (ನೆಲ್ಲೀಗಿಡದ ಬೀಜಗಳ ಮಾಲೆಯು) ಎಲ್ಲಿಯವರೆಗೆ ಮಾನವನ ಕಂಠದಲ್ಲಿರುವದೋ ಅಲ್ಲಿಯವರೆಗೂ ಕೇಶವನು ಆ ಮನುಷ್ಯನಲ್ಲಿ ಸನ್ನಿಹಿತನಾಗಿರುತ್ತಾನೆ.

**ಧಾತ್ರೀ ಫಲಂ ತು ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಸಫಲಂ ಜೀವಿತಂ ಸತ್ಯ ತ್ರಿತಯಂ ಯಸ್ಯ ವೇಶ್ಮನಿ ॥**

ಯಾರ ಮನೆಯಲ್ಲಿ ನೆಲ್ಲೀಫಲ, ಬೀಜ, ತುಳಸೀ ಮೃತ್ತಿಕಾ, ದ್ವಾರಕೆಯ ಗೋಪೀಮೃತ್ತಿಕಾ, ಇವು ಇರುತ್ತವೆಯೋ, ಅಂಥವನ ಜನ್ಮ ಸಫಲ. ಕಲಿಕಾಲದಲ್ಲಿ ಮನುಷ್ಯನು ಎಷ್ಟು ದಿನಗಳವರೆಗೆ ಕೊರಳಲ್ಲಿ ಧಾತ್ರೀ ಬೀಜಗಳ ಮಾಲೆಯನ್ನು ಧರಿಸುತ್ತಾನೋ ಅಷ್ಟೂ ಉತ್ತಮ ಫಲವನ್ನನುಭವಿಸುವನು. ಸಹಸ್ರ ಯುಗಗಳವರೆಗೆ ವೈಕುಂಠವಾಸ ಮಾಡುತ್ತಾನೆ.

**ಮಾಲಾಯುಗ್ಮಂ ವಹೇದ್ಯಸ್ತು ಧಾತ್ರೀ ತುಲಸೀ ಸಂಭವಮ್ ।**
**ಹೃದಯೇ ಕಂಠದೇಶೇ ಚ ಕಲ್ಪಕೋಟಿಂ ವಸೇದ್ದಿವಿ ॥**

ನೆಲ್ಲೀ ಹಾಗೂ ತುಳಸೀ ಈ ಎರಡೂ ಮಾಲೆಗಳನ್ನು ಯಾವನು ಕಂಠ ಪ್ರದೇಶದಲ್ಲಿ ಧರಿಸುವನೋ ಅಂಥವನು ಕೋಟಿಕಲ್ಪಗಳವರೆಗೆ ದೇವಲೋಕದಲ್ಲಿ ವಾಸಮಾಡುವನು.

ಇಂದ್ರಿಯಗಳನ್ನು ಸಂಯಮನಕ್ಕೊಳಪಡಿಸಿ, ಭಕ್ತಿಯಿಂದ ಹೂಗಳನ್ನು ಏರಿಸಿ ಯಾವನು ಭಗವಂತನ ಪೂಜೆಯನ್ನು ಮಾಡುತ್ತಾನೋ, ಅಂಥವನು ಒಂದೊಂದು ಹೂವಿಗೂ ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ. ದೇವತೆಗಳಲ್ಲಿ ಶ್ರೀವಿಷ್ಣುವು ಹೇಗೋ (ಹೇಗೆ ಶ್ರೇಷ್ಠನೋ) ಹಾಗೆಯೇ ಪುಷ್ಪಗಳಲ್ಲಿ ತುಳಸಿಯೂ ಕೂಡ ಶ್ರೇಷ್ಠವಾದದ್ದಾಗಿರುತ್ತದೆ. ಇಂಥ ತುಳಸಿಯಿಂದ ಪ್ರತಿದಿನ ಯಾವನು ಗರುಡ ಧ್ವಜನನ್ನು ಆರಾಧಿಸುತ್ತಾನೋ ಅವನು ಜನ್ಮ, ಮುಪ್ಪು, ರೋಗರುಜಿನಗಳು, ಹಾಗೂ ದುಃಖಗಳಿಂದ ಬಿಡುಗಡೆ ಹೊಂದಿ ಮೋಕ್ಷ ಪಡೆಯುವನು. ಪ್ರತಿದಿನವೂ ವಿಷ್ಣುನಾಮವನ್ನು ಹೇಳುತ್ತ ಭಗವಂತನಿಗೆ ಭಕ್ತಿಯಿಂದ ಪುಷ್ಪಾರ್ಚನೆ ಮಾಡಿದವನು ಮೇಲೆ ಹೇಳಿದ ಫಲವನ್ನು ಪಡೆಯುವನು.

ತುಳಸಿಯ ಮಂಜರಿಗಳ ಮಾಲೆಯನ್ನು ಮಾಡಿ ಭಗವಂತನಿಗೆ (ಸಾಲಿಗ್ರಾಮಕ್ಕೆ) ಸಮರ್ಪಿಸಿದರೆ ಮಹತ್ಫಲ ದೊರೆಯುವುದು. ಆದಾವುದೆಂದರೆ ಯಮದೇವರು ಹಣೆಯ ಮೇಲೆ ಬರೆದ ದುಃಖದ ಮಾಲೆಯನ್ನು ಅಳಿಸಿ ಶ್ರೀಕೃಷ್ಣನು ಮೋಕ್ಷಪದವಿಯನ್ನೀಯುವನು.

**ಕೇತಕೀ ದೀಪದಾನಂ ಚ ಸರ್ವದಾ ಕೇಶವ ಪ್ರಿಯಮ್ ।**
**ಕಾರ್ತಿಕೇ ಕೇತಕೀ ಪುಷ್ಪಂ ದತ್ತಂ ಯೇನ ಕಲೌ ಯುಗೇ ॥**

ಕೇದಿಗೆ ಮತ್ತು ದೀಪದಾನವು ಕೇಶವನಿಗೆ ಅತ್ಯಂತ ಪ್ರಿಯವಾದುದು. ಆದುದರಿಂದ ಕಲಿಯುಗದಲ್ಲಿ ಕಾರ್ತೀಕ ಮಾಸದಲ್ಲಿ ಕೇತಕೀ ಪುಷ್ಪಾರ್ಚನೆ ಮತ್ತು ದೀಪಾರಾಧನೆಗಳು ಯಾವನಿಂದ ಮಾಡಲ್ಪಡುತ್ತವೆಯೋ, ಅಂಥವನು ಪರಮಾತ್ಮನನ್ನು ಅತ್ಯಂತವಾಗಿ ಸಂತೋಷಪಡಿಸಿದಂತಾಗುತ್ತದೆ. ಭಕ್ತಿಯಿಂದ ಪುಷ್ಪಾರ್ಚನೆ ದೀಪದಾನ ಮಾಡಿದವನು ಸ್ವಯಂ ತಾನು ಉದ್ಧಾರವಾಗುವದಲ್ಲದೇ ತನ್ನ ನೂರು ಕುಲಗಳನ್ನೂ ಉದ್ಧರಿಸುತ್ತಾನೆ. ಕಾರ್ತೀಕ ಮಾಸದಲ್ಲಿ ಶ್ರೀಹರಿಗೆ ಮುಖ್ಯವಾಗಿ ಐದು ಅತ್ಯಂತ ಪ್ರಿಯವಾದ ವಸ್ತುಗಳು. ಕಮಲಪುಷ್ಪ, ಕೇದಿಗೆ, ತುಳಸಿ, ಚೊಗಚೀಹೂವು, ಹಾಗೂ ದೀಪದಾನ, ಇವು ಶ್ರೀಹರಿಗೆ ಪ್ರಿಯವಾದುದರಿಂದ ಇವುಗಳನ್ನು ದಾನಮಾಡಿದವನು ಶ್ರೀಹರಿಯ ಕೃಪೆಯಿಂದ ನಿಶ್ಚಿತವಾಗಿ ಮೋಕ್ಷ ಹೊಂದುತ್ತಾನೆ. ಇದರಂತೆ ಕಾರ್ತೀಕ ಮಾಸದಲ್ಲಿ ಸುಗಂಧಿಯಾದ ದವನಪುಷ್ಪ, ಚೊಗಚೀಹೂವು ಇವೇ ಮುಂತಾದ ಪತ್ರ, ಪುಷ್ಪಗಳಿಂದ ಭಗವಂತನನ್ನು ಪೂಜಿಸಬಹುದು. ಅಗಸೀ ಹೂವುಗಳಿಂದ ಸಹ ಭಗವಂತನನ್ನು ಅರ್ಚಿಸಬಹುದು.

ಮುನಿಪುಷ್ಪ ಎಂದು ಹೆಸರುವಾಸಿಯಾದ ಚೊಗಚೀಹೂವಿನಿಂದ ಭಗವಂತನನ್ನು ಆರಾಧಿಸುವದರಿಂದ ಆತ ಸುಪ್ರೀತನಾಗುತ್ತಾನೆ. ಈ ಪುಷ್ಪವು ಭಗವಂತನಿಗೆ ಅತ್ಯಂತ ಪ್ರಿಯವಾದುದರಿಂದ ಇದೊಂದರಿಂದಲೇ ಭಗವಂತನನ್ನು ಆರಾಧಿಸಲೂ ಬಹುದು. ಮುನಿಪುಷ್ಪದಿಂದ ಮಾಡಿದ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿ ಪೂಜಿಸಿದವನು ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ.

**ಮುನಿಪುಷ್ಪಕೃತಾಂ ಮಾಲಾಂ ಯೋ ದದಾತಿ ಜನಾರ್ದನೇ ।**
**ದೇವೇಂದ್ರೋಽಪಿ ಮುನಿಶ್ರೇಷ್ಠ ಕುರುತೇ ತಸ್ಯ ಸತ್ಕಥಾಮ್ ॥**

ಈ ಚೊಗಚೇಹೂಗಳಿಂದ ಮಾಲೆಯನ್ನು ಮಾಡಿ ಜನಾರ್ದನನಿಗೆ ಸಮರ್ಪಿಸಿದವನನ್ನು ದೇವೇಂದ್ರನೂ ಸ್ತೋತ್ರಮಾಡುತ್ತಾನೆ. ಕೌಸ್ತುಭಮಣಿಯ ಹಾರದಿಂದ ಭಗವಂತನಿಗೆ ಎಷ್ಟು ಸಂತೋಷವಾಗುವದೋ ಅಷ್ಟೇ ಸಂತೋಷ ಈ ಚೊಗಚೇ ಹೂವಿನ ಮಾಲೆಯಿಂದ ಅಥವಾ ತುಳಸೀ ಹಾರ, ಕಾಷ್ಠ, ಕೊನೆಗೆ ಪತ್ರಿ ಇವುಗಳಿಂದಲೂ ಆಗುವದು.

**ಶೃಣು ದೀಪಸ್ಯ ಮಾಹಾತ್ಮ್ಯಂ ಕಾರ್ತಿಕೇ ಶಿಖಿವಾಹನ ।**
**ಪಿತರಶ್ಚೈವ ವಾಂಛಂತಿ ಸದಾಪಿತೃ ಗಣೈರ್ವೃತಃ ॥**

**ಭವಿಷ್ಯತಿ ಕುಲೇಽಸ್ಮಾಕಂ ಪಿತೃಭಕ್ತಃ ಸುಪುತ್ರಕಃ ।**
**ಕಾರ್ತೀಕೇ ದೀಪದಾನೇನ ಯಸ್ತೋಷಯತಿ ಕೇಶವಮ್ ॥**

ಪಿತೃಗಳೂ ಸಹ ತಮ್ಮ ಮಗ, ಮೊಮ್ಮಗ, ಯಾರಾದರೂ ಕಾರ್ತೀಕದಲ್ಲಿ ದೀಪದಾನವನ್ನು ಮಾಡುವುದರ ಮೂಲಕ ಕುಲೋದ್ಧಾರವನ್ನು ಮಾಡುವರೋ ಎಂದು ಇಚ್ಛಿಸುತ್ತಿರುತ್ತಾರೆ. ಕಾರ್ತೀಕದಲ್ಲಿ ದೀಪದಾನದಿಂದ ಕೇಶವನನ್ನು ಸಂತೋಷಪಡಿಸುವ ಪಿತೃಭಕ್ತಮಗನನ್ನು ಅವರು ಬಯಸುತ್ತಾರೆ. ತುಪ್ಪದದೀಪ ಅಥವಾ ಎಣ್ಣೆಯದೀಪ, ಅಥವಾ ಆಕಾಶದೀಪ, ಇವನ್ನು ಕೇಶವನ ಸಮ್ಮುಖದಲ್ಲಿ ದಾನಮಾಡಿದವನು, ಬೆಳಗಿಸಿದವನು ಸ್ವರ್ಗಲೋಕದಲ್ಲಿ ತನ್ನ ಕುಲವೆಲ್ಲವನ್ನೂ ಬೆಳಗಿಸುತ್ತಾನೆ.

ಕಾರ್ತೀಕ ಮಾಸದಲ್ಲಿ ಮೂವತ್ತು ದಿನವೂ ದೀಪದಾನದಿಂದ ಪುಣ್ಯ ವಿಶೇಷ ಪ್ರಾಪ್ತವಾಗುವದೆಂದು ಹೇಳಿದ್ದಾರೆ. ಕೃಷ್ಣ ಪಕ್ಷದ ಕೊನೆಯ ಐದು ದಿನಗಳಲ್ಲಿ ದೀಪದಾನ ಮಾಡಿದವನೂ ಅಕ್ಷಯ ಫಲವನ್ನು ಹೊಂದುತ್ತಾನೆ. ಪೂರ್ವಕಾಲದಲ್ಲಿ ಒಂದು ಏಕಾದಶೀ ದಿನ ಒಂದು ಇಲಿಯು ಆಕಸ್ಮಿಕವಾಗಿ ಕಾಲು ತಾಗಿ ದೀಪ ಚೆನ್ನಾಗಿ ಬೆಳಗಲು ಕಾರಣವಾಯಿತು. ತನಗೆ ತಿಳಿಯದೇ ಮಾಡಿದ ಪುಣ್ಯಕಾರ್ಯಕ್ಕಾಗಿ ಅದು ಜನ್ಮಾಂತರದಲ್ಲಿ ಮಾನವಜನ್ಮ ಹೊಂದಿ, ಸಾಧನೆಗೈದು ಸದ್ಗತಿ ಸಾಧಿಸಿತು. ಒಬ್ಬ ಬೇಡನು ಕಾರ್ತೀಕ ಚತುರ್ದಶಿ ದಿನ ಉಪವಾಸ ವ್ರತಮಾಡಿ ಭಗವಂತನನ್ನು ಭಕ್ತಿಯಿಂದ ಅರ್ಚಿಸಿ ವಿಷ್ಣುಲೋಕವನ್ನು ಹೊಂದಿದನು.

ವೇಶ್ಯೆಯೊಬ್ಬಳು ಇನ್ನೊಬ್ಬರ ಮುಖಾಂತರ ಕಾರ್ತೀಕ ದೀಪವನ್ನು ಬೆಳಗಿಸಿ, ಮುಂದಿನ ಜನ್ಮದಲ್ಲಿ ಲೀಲಾವತಿಯೆಂಬ ಹೆಸರಿನಿಂದ ಸತ್ಕುಲದಲ್ಲಿ ಜನಿಸಿ ಅಂತ್ಯದಲ್ಲಿ ಉತ್ತಮಗತಿಯನ್ನು ಹೊಂದಿದಳು.

ಒಬ್ಬ ದನಗಾಹಿಯು ಕಾರ್ತೀಕ ಪೂಜೆ, ದೀಪಾರಾಧನೆ ಇವುಗಳನ್ನು ಭಕ್ತಿಯಿಂದ ವೀಕ್ಷಿಸಿ, ''ಜಯ ಜಯ ಜನಾರ್ದನ'' ಎಂದು ಉದ್ಗರಿಸಿ, ಭಗವಂತನ ಅನುಗ್ರಹದಿಂದ ಸಾಮ್ರಾಜ್ಯವನ್ನೇ ಆಳುವಂಥ ಸುಯೋಗ ಹೊಂದಿ, ಕೊನೆಗೆ ಪುಣ್ಯಲೋಕ ಸೇರಿದನು. ಆದುದರಿಂದ ಕಾರ್ತೀಕ ಮಾಸದಲ್ಲಿ ಸೂರ್ಯಾಸ್ತವಾದ ಮೇಲೆ ಮನೆಯಲ್ಲಿ ಪ್ರತಿಯೊಂದು ಕೋಣೆಗಳಲ್ಲಿ, ಮನೆಯ ಮೇಲೆ, ಅಂಗಳದಲ್ಲಿ ಹಾಗೂ

ದೇವಾಲಯಗಳಲ್ಲಿ ಐದು ಸ್ಮಶಾನಗಳಲ್ಲೂ ಸಹ ದೀಪವನ್ನು ಬೆಳಗಿಸಿ, ಕಾರ್ತೀಕ ಮಾಸದ ಕೊನೆಯ ದಿನಗಳನ್ನು ದೀಪೋತ್ಸವವೆಂಬಂತೆ ಆಚರಿಸಬೇಕು. ಇದರಿಂದ ಕರ್ತೃಗಳ ಪಿತೃಗಳು ಪಾಪಿಗಳಾಗಿದ್ದರೂ, ಮತ್ತು ಮಕ್ಕಳಿಲ್ಲದೇ 'ಲುಪ್ತಪಿಂಡೋದಕ' ರಾಗಿದ್ದರೂ ಈ ದೀಪದಾನದ ಪುಣ್ಯದಿಂದ ಮುಕ್ತಿಯನ್ನು ಹೊಂದುತ್ತಾರೆ. ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ದೀಪ, ಗಂಧ ಹಾಗೂ ನೆಲ್ಲೀಗಿಡಗಳ ಮಹಿಮೆ ಎಂಬ ನೂರ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*

—o—

## ದೀಪಾವಳೀ ಮಾಹಾತ್ಮ್ಯ

ಅಧ್ಯಾಯ - ೧೨೨

**ಸ್ಕಂದ:-** ಪ್ರಭು, ದೀಪಾವಳೀ ಮಹಿಮೆಯನ್ನು ನನಗೆ ಹೇಳಿರಿ. ಈ ದೀಪಾವಳಿಯನ್ನು ಏತಕ್ಕಾಗಿ ಮಾಡುತ್ತಾರೆ? ದೀಪಾವಲಿಯ ಅಧಿದೇವತೆಯು ಯಾರು? ದೀಪಾವಳಿ ಕಾಲದಲ್ಲಿ ಯಾವ ಯಾವ ದಾನ ವಿಹಿತವಾಗಿವೆ? ಎಂಥೆಂಥ ಆಟಗಳನ್ನು ಆಡಬೇಕು? ಇದರಿಂದ ಯಾವ ಫಲ ಬರುವದು? ಇದನ್ನೆಲ್ಲ ಹೇಳಿರಿ.

**ಮಹಾದೇವ:-** ಕಾರ್ತೀಕ ಮಾಸದ ಕೃಷ್ಣಪಕ್ಷದ ತ್ರಯೋದಶಿಯ ದಿನ ಮನೆಯ ಹೊರಗೆ ಯಮದೀಪವನ್ನು ಬೆಳಗಿಸಬೇಕು. ಇದರಿಂದ ಅಪಮೃತ್ಯುವು ದೂರವಾಗುವದು. ಮತ್ತು ತ್ರಯೋದಶಿಯ ದಿನ "ಸೂರ್ಯನೂ ಸೂರ್ಯನ ಪುತ್ರನಾದ ಯಮನೂ ಪ್ರೀತನಾಗಲಿ" ಎಂದು ಪ್ರಾರ್ಥಿಸಿ, ಇವರಿಬ್ಬರನ್ನೂ ನಮಸ್ಕರಿಸಿ, ದೀಪವನ್ನು ಹಚ್ಚಿ ಇಡಬೇಕು.

**ಮೃತ್ಯುನಾ ಪಾಶಹಸ್ತೇನ ಕಾಲೇನ ಭಾರ್ಯಯಾ ಸಹ ।**
**ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಂ ಇತಿ ॥**

ಈ ಮಂತ್ರವನ್ನುಹೇಳಿ ಮೇಲೆ ಹೇಳಿದ ಪ್ರಕಾರ ದೀಪಹಚ್ಚಬೇಕು. ಕಾರ್ತೀಕ ಕೃಷ್ಣಪಕ್ಷದ ತ್ರಯೋದಶೀ ದಿನ ಚಂದ್ರೋದಯದ ಕಾಲದಲ್ಲಿಯೇ ಎಲ್ಲರೂ ಸ್ನಾನ ಮುಗಿಸತಕ್ಕದ್ದು. ಕಾರ್ತೀಕ ಕೃಷ್ಣಪಕ್ಷ ಚತುರ್ದಶಿ ದಿನ ಪ್ರತ್ಯೂಷ ಸಮಯದ ಪಂಚ ಉಷಃಕಾಲದಲ್ಲಿಯೇ ಎದ್ದು ಸ್ನಾನ ಮಾಡಿ ದೀಪ ಹಚ್ಚಿ ಭಗವಂತನಲ್ಲಿ ಪ್ರಾರ್ಥನೆ ಮಾಡಬೇಕು. ವಿರಕ್ತರೂ, ಸಂನ್ಯಾಸಿಗಳೂ ಸಹ ನರಕ ಚತುರ್ದಶಿ ದಿನ ಪ್ರಾತಃಕಾಲದಲ್ಲಿ ಅಭ್ಯಂಜನ ಸ್ನಾನ ಮಾಡಬೇಕು.

**ತೈಲೇ ಲಕ್ಷ್ಮೀಃ ಜಲೇ ಗಂಗಾ ದೀಪಾವಲ್ಯಾಂ ಚತುರ್ದಶೀಮ್ ।**
**ಪ್ರಾತಃಸ್ನಾನಂ ಹಿ ಯಃ ಕುರ್ಯಾತ್ ಯಮಲೋಕಂ ನ ಪಶ್ಯತಿ ॥**

ದೀಪಾವಳೀ ದಿನ (ಚತುದರ್ಶಿಯಂದು) ತೈಲದಲ್ಲಿ ಲಕ್ಷ್ಮೀದೇವಿಯು, ಜಲದಲ್ಲಿ ಗಂಗೆಯೂ ಸನ್ನಿಹಿತರಾಗಿರುತ್ತಾರೆ. ಈ ಸಂದರ್ಭದಲ್ಲಿ ಪ್ರಾತಃಸ್ನಾನವನ್ನು ಮಾಡಿದವರು ಯಮಲೋಕದರ್ಶನವನ್ನೇ ಮಾಡುವದಿಲ್ಲ.

ಉದ್ಧಾದ ಸೋರೆಕಾಯಿ (ಅಪಾಮಾರ್ಗ) ತುಂಬಿಹೂವು, ಚೊಗಚೀಹೂವು ಇವುಗಳನ್ನು ಸ್ನಾನಮಧ್ಯದಲ್ಲಿ ನೀರಿನಲ್ಲಿ ಭ್ರಮಣ ಮಾಡಿಸಬೇಕು. ಸ್ನಾನಾನಂತರ ಈ ಕೆಳಗಿನ ಮಂತ್ರವನ್ನುಚ್ಚರಿಸುತ್ತ ಯಮನಿಗೆ ತರ್ಪಣ ನೀಡಬೇಕು.

**ಓದುಂಬರಾಯ ಧಧ್ನಾಯ ನೀಲಾಯ ಪರಮೇಷ್ಠಿನೇ ।**
**ವೈಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ॥**

ಪ್ರದೋಷ ಸಮಯದಲ್ಲಿ ಮನೋಹರವಾದ ದೀಪಗಳನ್ನು ಬೆಳಗಿಸಬೇಕು. ಬ್ರಹ್ಮ, ವಿಷ್ಣು, ಶಿವ ಇವರೆಲ್ಲರ ದೇವಾಲಯಗಳಲ್ಲೂ ನದಿ, ಗೋಶಾಲೆ, ಪ್ರಾಕಾರಗಳಲ್ಲೂ, ಸಭೆ, ಉದ್ಯಾನವನ, ಗೋಪುರ, ಇತ್ಯಾದಿ ಎಲ್ಲ ಸ್ಥಳಗಳಲ್ಲೂ ಅಂದವಾಗಿ ದೀಪ ಬೆಳಗಿಸಿ ಸಂಭ್ರಮದಿಂದ ದೀಪೋತ್ಸವವನ್ನು ಆಚರಿಸಬೇಕು.

ಮರುದಿನ ಅಮಾವಾಸ್ಯದಂದು ಪ್ರಾತಃಕಾಲದಲ್ಲಿಯೇ ಎದ್ದು ಸ್ನಾನ ಮಾಡಿ ದೇವರನ್ನು ಪೂಜಿಸಿ, ಪಿತೃಗಳನ್ನು ತರ್ಪಿಸಿ, ಹಿರಿಯರನ್ನು ನಮಸ್ಕರಿಸಿ ಹಾಲು, ಮೊಸರು, ತುಪ್ಪಗಳಿಂದ ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಬಗೆಬಗೆಯ ಪಕ್ವಾನ್ನಗಳನ್ನು ಮಾಡಿ ಸದಾಚಾರ ಸಂಪನ್ನರಾದ ವಿದ್ವಾಂಸರಿಗೆ ಉಣಬಡಿಸಬೇಕು.

ಅಪರಾನ್ಹ ಕಾಲದಲ್ಲಿ ನಾಗರಿಕರ ಸ್ನೇಹಗೋಷ್ಠಿಯನ್ನು ಏರ್ಪಡಿಸಿ ಪರಸ್ಪರ ಪ್ರೀತಿ ವಿಶ್ವಾಸ ಕುದುರುವಂತೆ ವಾರ್ತಾಲಾಪಗಳನ್ನು ನಡೆಸಬೇಕು. ಶ್ರೀಹರಿಯು ಮುಂದೆ ಶಯನೀ ಏಕಾದಶಿಯಂದು ಎಚ್ಚರಾಗಲಿರುವನು. ಅದಕ್ಕಿಂತ ಮೊದಲೇ ಅಮಾವಾಸ್ಯೆಯ ದಿನ ಮುತ್ತೈದೆಯರಿಂದ ವಿಷ್ಣುಪತ್ನಿಯಾದ ಮಹಾಲಕ್ಷ್ಮೀ ದೇವಿಯ ಪ್ರಬೋಧೋತ್ಸವ ಮಾಡಿ ಭಕ್ತಿಯಿಂದ ಪ್ರದೋಷ ಕಾಲದಲ್ಲಿ ಲಕ್ಷ್ಮೀ ಪೂಜೆಯನ್ನು ಮಾಡಿಬೇಕು. ಅಮಾವಾಸ್ಯೆಯ ದಿನ ಲಕ್ಷ್ಮೀಪೂಜೆ ಮಾಡಿದರೆ ಲಕ್ಷ್ಮೀದೇವಿಯು ಅವರನ್ನು ಎಂದೂ ಬಿಟ್ಟು ಹೋಗುವದೇ ಇಲ್ಲ. ಹಸುಗಳ ಕೊಟ್ಟಿಗೆ ಕಾರ್ತಿಕದಲ್ಲಿ ಲಕ್ಷ್ಮೀದೇವಿಯ ನಿಶ್ಚಿತವಾದ ನೆಲೆ.

**ಯಾ ಲಕ್ಷ್ಮೀರ್ದಿವಸೇ ಪುಣ್ಯೇ ದೀಪಾವಲ್ಯಾಂಚ ಭೂತಲೇ ।**
**ಗವಾಂ ಗೋಷ್ಠಾಂಚ ಕಾರ್ತಿಕ್ಯಾಂ ಸಾ ಲಕ್ಷ್ಮೀರ್ವರದಾ ಮಮ ॥**

ಎಂಬ ಮಂತ್ರ ಹೇಳಿ ಲಕ್ಷ್ಮೀ ಪೂಜೆಯನ್ನು ಮಾಡಬೇಕು.

ಹಿಂದೆ ಶಿವಪಾರ್ವತಿಯರು ವಿನೋದಕ್ಕಾಗಿ ಲೆತ್ತದಾಟ ಆಡುತ್ತಿದ್ದರು. ಆಗ ಪಾರ್ವತಿಯು ದನ ಕಟ್ಟುವ ಕೊಟ್ಟಿಗೆಗೆ ಬಂದು ಅಲ್ಲಿ ಹಸುವಿನ ರೂಪದಲ್ಲಿದ್ದ ಮಹಾಲಕ್ಷ್ಮಿಯನ್ನು ಪೂಜಿಸಿ ಲೆತ್ತದಾಟಕ್ಕೆ ಕುಳಿತಳು. ಆದರಿಂದ ಆಟದಲ್ಲಿ ಅವಳು ಶಂಕರನನ್ನು ಗೆದ್ದು ಭಾಗ್ಯ ಸೌಭಾಗ್ಯ ಸಿರಿಸಂಪದಗಳನ್ನು ಪಡೆದು ಯಾವಜ್ಜನ್ಮ ಸುಖ ಸಮಾಧಾನಗಳನ್ನು ಹೊಂದಿದಳು. ಆದರೆ ಲಕ್ಷ್ಮಿಯ ಪೂಜೆ ಮಾಡದ ಶಿವನು ಮಾತ್ರ ಸೋತು ದರಿದ್ರನಾಗಿ ಮೈಮೇಲೆ ತುಂಡು ಬಟ್ಟೆ ಇಲ್ಲದೆ ಭಿಕ್ಷೆ ಬೇಡುತ್ತ ಅಂಡಲೆಯುತ್ತಾನೆ.

ಅಂದು ದೀಪಾವಳಿಯ ಸಮಯದಲ್ಲಿ ಪಾರ್ವತೀ ಪರಮೇಶ್ವರರು ಆಟ ಆಡಿ ವಿನೋದ ಗೋಷ್ಠಿಯನ್ನು ಜರಗಿಸಿದ್ದರಿಂದ ಇಂದಿಗೂ ಕಾರ್ತಿಕದಲ್ಲಿ ದಾಳ ಲೆತ್ತ ಮುಂತಾದ ಆಟ ಆಡುವ ಸಂಪ್ರದಾಯ ಬೆಳೆದುಬಂದಿದೆ. ಈ ಆಟಗಳಲ್ಲಿ ಮೊದಲು ಯಾರು ಗೆಲ್ಲುವರೋ ಅವರು ಆ ಇಡೀ ವರ್ಷ ಜೀವನದಲ್ಲಿ ಗೆಲವಿನ ಗೋಪುರದಲ್ಲಿ

ಸುಖದಿಂದ ನಲಿದಾಡುವರು. ಈ ಆಟಗಳಲ್ಲಿ ಗೆದ್ದ ಸ್ತ್ರೀಪುರುಷರು ವಿಜಯೋತ್ಸವವನ್ನು ವಿವಿಧ ವಾದ್ಯ ಜಯಘೋಷಗಳಿಂದ ಆಚರಿಸಿ ಅಲಕ್ಷ್ಮೀ ಅರ್ಥಾತ್ ದಾರಿದ್ರ್ಯವನ್ನು ಮನೆ ಮತ್ತು ಊರಿಂದಲೇ ಹೊರಗೆ ಹೊಡೆದೋಡಿಸಬೇಕು.

ದೀಪಾವಳಿಯಲ್ಲಿ ಹಗಲು ಗೋವರ್ಧನ ಪೂಜೆಯನ್ನು ರಾತ್ರಿ ದ್ಯೂತ, ಲೆತ್ತ, ಪಗಡಿ ಮುಂತಾದ ಆಟಗಳನ್ನು ಆಡಬೇಕು. ಹಗಲು ಹೊತ್ತಿನಲ್ಲಿ ಹಸುಗಳನ್ನೂ, ಕರುಗಳನ್ನೂ ಸ್ನಾನ ಮಾಡಿಸಿ ಅಲಂಕಾರ ಮಾಡಬೇಕು. ಅಂದು ಎತ್ತುಗಳನ್ನು ಹೂಡಬಾರದು. ಹಸುಗಳನ್ನು ಕರೆಯಬಾರದು. ಎಲ್ಲ ತುರುಕರುಗಳನ್ನು ಕೊರಳು ಗಂಟೆ, ಬೆಳ್ಳಿ, ಬಂಗಾರದ ಕೊಂಬು, ಖುರ ಮುಂತಾದವುಗಳನ್ನು ಅಲಂಕರಿಸಿ ಅರಿಷಿಣ ಕುಂಕುಮ ಹಚ್ಚಿ ದವಸ ಧಾನ್ಯಗಳನ್ನು ತಿನಿಸಿ ಪೂಜೆ ಮಾಡಿ ಶ್ರೀಹರಿಯನ್ನು ಪ್ರಾರ್ಥಿಸಬೇಕು.

**ಗೋವರ್ಧನ ಧರಾಧಾರಾ ಗೋಕುಲತ್ರಾಣ ಕಾರಕ ।**
**ವಿಷ್ಣು ಬಾಹು ಕೃತೋಚ್ಛ್ರಾಯ ಗವಾಂ ಕೋಟಿ ಪ್ರದೋ ಭವ ॥**

ಎಂಬ ಮಂತ್ರವನ್ನು ಹೇಳಿ ಗೋವರ್ಧನ ರೂಪಿಹರಿಯನ್ನು ಪೂಜಿಸಬೇಕು. ದ್ವಾಪರಯುಗದಲ್ಲಿ ಶ್ರೀಕೃಷ್ಣನು ತಾನೇ ಗೋವರ್ಧನ ಪರ್ವತದ ರೂಪವನ್ನು ಧರಿಸಿ ಗೋಪಾಲಕರ ಪೂಜೆಯನ್ನು ಸ್ವೀಕರಿಸಿದ್ದರಿಂದ ಗೋವರ್ಧನ ಪೂಜೆ ಎಂದರೆ ಗೋವಿಂದನ ಪೂಜೆಯೇ ಸರಿ.

**ಅಗ್ರತಸ್ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ ।**
**ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥**

ಎಂಬ ಮಂತ್ರದಿಂದ ಗೋವುಗಳನ್ನು ಪೂಜಿಸಬೇಕು.

ಕಾರ್ತೀಕ ಮಾಸದಲ್ಲಿ ದೀಪಾವಳಿಯ ಸಂದರ್ಭದಲ್ಲಿ ದೇವತೆಗಳನ್ನು ಪೂಜೆಯಿಂದಲೂ, ಗುರುಹಿರಿಯರನ್ನು ಸೇವೆಯಿಂದಲೂ, ಮಧುರ ವಾಕ್ಯದಿಂದ ಪಂಡಿತರನ್ನೂ, ಅನ್ನಪಾನಗಳಿಂದ ಮಿತ್ರಪರಿವಾರವನ್ನೂ, ವಸ್ತ್ರ, ತಾಂಬೂಲ, ಹೂವು, ಹಾರ ಕರ್ಪೂರ, ಕುಂಕುಮ, ಭಕ್ಷ್ಯ ಭೋಜ್ಯಗಳಿಂದ ಸ್ತ್ರೀಯರನ್ನೂ, ತುರುಕರುಗಳನ್ನು ಹುಲ್ಲು ಗೋಗ್ರಾಸಗಳಿಂದಲೂ ಸಂತೋಷಪಡಿಸಬೇಕು. ಮತ್ತು ಅಪರಾಹ್ನ ಕಾಲದಲ್ಲಿ ಜಟ್ಟಿಗಳನ್ನೂ ಹೋರಿಗಳನ್ನೂ ಜನರಂಜನೆಗಾಗಿ ಕಾದಾಡಿಸಿ ಸ್ಪರ್ಧೆ ಏರ್ಪಡಿಸಿ ವಿನೋದ ವಿಹಾರಗಳಿಂದ ಮನರಂಜನೆಯನ್ನು ಮಾಡಬೇಕು. ಒಳ್ಳೆಯ ಗಾಯಕ ನರ್ತಕರು ಇದ್ದರೆ ಅವರ ನರ್ತನ, ಗಾಯನ, ವಾದನದ ಕಾರ್ಯಕ್ರಮಗಳನ್ನೂ, ಸ್ಪರ್ಧೆಗಳನ್ನೂ ಏರ್ಪಡಿಸಬೇಕು.

ದೀಪಾವಳಿಯ ಕಾರ್ತೀಕ ಶುದ್ಧ ಪ್ರತಿಪದೆಯ ದಿನ ಹಗಲು ಪ್ರಾತಃಸ್ನಾನ, ದೇವಪೂಜೆ, ವಿದ್ವದ್ ಭೋಜನ, ದಾನ ದಕ್ಷಿಣಾದಿ ಪ್ರದಾನ, ಮಧ್ಯಾಹ್ನ ವಿನೋದ ಗೋಷ್ಠಿ, ಆಟ, ಸ್ಪರ್ಧಾಕೌತುಕ ವಾದವಿವಾದ, ವಿವಿಧ ಕ್ರೀಡೆ ಮುಂತಾದವುಗಳನ್ನು ಮಾಡಿ ರಾತ್ರಿ ಕಾಲದಲ್ಲಿ ಬಲಿಚಕ್ರವರ್ತಿಯ ಪೂಜೆಯನ್ನು ಮಾಡಬೇಕು.

ನೆಲದ ಮೇಲೆ ಒಂದು ಮಂಡಲವನ್ನು ಬರೆದು ಅದರಲ್ಲಿ ದೈತ್ಯರಾಜನಾದ ಬಲಿಯ ಮೂರ್ತಿಯನ್ನು ಐದು ಬಣ್ಣದ ಪುಡಿ ಹುಡಿ, ದ್ರವ, ಅರಗು, ಕುಂಕುಮ, ರಂಗವಲ್ಲಿ ಮುಂತಾದವುಗಳಿಂದ ಬರೆಯಬೇಕು. ಆ ಬಲಿರಾಜನ ಪಕ್ಕದಲ್ಲಿಯೇ ಸರ್ವಾಭರಣ

ಭೂಷಿತಳಾದ ಅವನ ಪತ್ನಿ ವಿಂಧ್ಯಾವಲಿಯನ್ನೂ ಚಿತ್ರಿಸಬೇಕು. ಎರಡು ತೋಳು, ಕರ್ಣ ಕಿರೀಟಗಳಿಂದ ಉಜ್ವಲವಾದ ಸಂತುಷ್ಟ ಮುಖದ ಬಲಿರಾಜನ ಚಿತ್ರವನ್ನು ಮನೆಯ ಅಂಗಳದಲ್ಲಿ ಬರೆದು ಕಮಲ, ಕುಮುದ, ಕಲ್ಹಾರ, ಮುಂತಾದ ಹೂಗಳಿಂದ ಅಲಂಕರಿಸಿ ಗಂಧ ಪುಷ್ಪಾಕ್ಷತೆಗಳಿಂದ ಅರ್ಚಿಸಿ ಪಾಯಸ, ಮದ್ಯ ಮಾಂಸ ಹಾಗೂ ಬಗೆಬಗೆಯ ಭಕ್ಷ ಭೋಜ್ಯ ನೈವೇದ್ಯಗಳನ್ನು ತೋರಿಸಿ ಕೆಳಗಿನ ಮಂತ್ರ ಹೇಳಿ ಪೂಜೆ ಮಾಡಬೇಕು.

**ಬಲಿರಾಜ ನಮಸ್ತುಭ್ಯಂ ವಿರೋಚನ ಸುತ ಪ್ರಭೋ ।**
**ಭವಿಷ್ಯೇಂದ್ರ ಸುರಾರಾತೇ ಪೂಜೇಯಂ ಪ್ರತಿಗ್ರಹ್ಯತಾಂ ॥**

ಹೀಗೆ ಬಲಿರಾಜನ ಪೂಜೆ ಮಾಡಿ ಅಂದು ರಾತ್ರಿ ನಟ, ನರ್ತಕ, ಗಾಯಕರಿಂದ ಕೂಡಿ ಕೊಂಡು ಸಂಗೀತ, ವಾದ್ಯ, ನರ್ತನ ಮುಂತಾದ ಕಾರ್ಯಕ್ರಮಗಳಿಂದ ಜಾಗರ ಮಾಡಬೇಕು.

ಬಲಿಪ್ರತಿಪದೆಯ ದಿನ ಬಲಿಪೂಜೆಯನ್ನು ಮಾಡದಿದ್ದವರ ಪುಣ್ಯವೆಲ್ಲವೂ "ಅಶ್ರೋತ್ರಿಯವಾದ ಧರ್ಮವೆಲ್ಲವೂ ನಿನಗೆ ಬರಲಿ" ಎಂದು ವಿಷ್ಣುವಿನ ಆಜ್ಞೆ ಇದ್ದುದರಿಂದ ಬಲಿರಾಜನಿಗೆ ಹೋಗಿ ಸೇರುತ್ತದೆ. ಆದ್ದರಿಂದ ಎಲ್ಲ ಜನರೂ ಕಾರ್ತೀಕ ಶುದ್ಧ ಪ್ರತಿಪದೆಯ ದಿನ ಆ ದೈತ್ಯರಾಜನ ಪೂಜೆಯನ್ನು ಮಾಡಬೇಕು.

**ಕೌಮೋದಂತೇ ಜನಾ ಯಸ್ಮಾನಾ ನಾಭಾವೈಃ ಪರಸ್ಪರಂ ।**
**ಹೃಷ್ಟ ತುಷ್ಟಾಃ ಸುಖಾಪನ್ನಾಃ ತೇನೈಷಾ ಕೌಮುದೀಸ್ಮೃತಾಃ ॥**

ಕೌ ಎಂದರೆ ಭೂಲೋಕದಲ್ಲಿ ಜನರು ನಾನಾ ಭಾವಗಳಿಂದ ಪರಸ್ಪರ ಸಂತೋಷ ಗೊಳಿಸಿ ತಾವೂ ಸುಖ ಪಡೆಯುವದರಿಂದ ಆ ದಿನಕ್ಕೆ ಕೌಮುದೀ ಎಂದು ಕರೆಯುತ್ತಾರೆ.

ಬಲಿಪ್ರತಿಪದೆ, ಅನಂತರ ದ್ವಿತೀಯಾ, ತೃತೀಯಾ, ದಶಮೀ, ಏಕಾದಶಿ, ದ್ವಾದಶೀ ಹುಣ್ಣಿಮೆ ಮುಂತಾದ ದಿನಗಳಲ್ಲಿ ಯಾವ ಜನರು ಉತ್ಸವ ಹಬ್ಬ ಹಾಗೂ ಹರಿಪೂಜೆಗಳನ್ನು ಮಾಡಿ ವಿವಿಧ ವಿನೋದ, ವಿಲಾಸ, ಕೇಲೀಲೋಲತೆಯಿಂದ ಸಂತೋಷಪಡುವರೋ ಅವರು ಇಡೀ ವರ್ಷ ಹೀಗೆಯೇ ಶಾಂತಿ ಸಂತಸ ಸಮಾಧಾನಗಳನ್ನು ಪಡೆದು ವರ್ಷಾವಧಿ ಸಂತೃಪ್ತ ಜೀವನವನ್ನು ನಡೆಸುವರು.

ಚಾತುರ್ಮಾಸ್ಯ ಕಾಲದಲ್ಲಿ ಶ್ರಾವಣ, ಭಾದ್ರಪದ, ಅಶ್ವಿಜ, ಕಾರ್ತಿಕ ಈ ನಾಲ್ಕು ಮಾಸಗಳೂ ಮತ್ತು ಪ್ರತಿಪದೆ, ದ್ವಿತೀಯಾ, ತೃತೀಯಾ, ಚತುರ್ಥೀ ಈ ನಾಕು ತಿಥಿಗಳು ಸುಪ್ರಸಿದ್ಧವಾಗಿವೆ. ಶ್ರಾವಣ ಮಾಸದ ಪ್ರತಿಪದೆಗೆ ಕಲುಷಾ ಎಂದು ಕರೆಯುವರು. ಭಾದ್ರಪದ ಶುದ್ಧ ದ್ವಿತಿಯಾ ತಿಥಿಗೆ ಅಮಲಾ ಎಂದು ಕರೆಯುವರು. ಅಶ್ವೀನ ಶುದ್ಧ ತೃತೀಯಾ ತಿಥಿಗೆ ಪ್ರೇತಸಂಚಾರಾ ಎನ್ನುವರು. ಕಾರ್ತೀಕ ಶುಕ್ಲ ಚತುರ್ಥೀ ದಿನಕ್ಕೆ ಯಾಮ್ಯಾ ಎಂದು ಕರೆಯುವರು.

**ಸ್ಕಂದ:-** ಅದು ಕಲುಷಾ ಏಕೆ? ಇದು ನಿರ್ಮಲಾ ಏಕೆ? ಮೂರನೆಯದು ಪ್ರೇತಸಂಚಾರಾ ಏಕೆ? ನಾಲ್ಕನೆಯದು ಯಾಮ್ಯಾ ಏಕೆ?

**ಮಹಾದೇವ:-** ಪೂರ್ವ ಕಾಲದಲ್ಲಿ ದೇವೇಂದ್ರನು ವೃತ್ರಾಸುರನನ್ನು ಕೊಂದ ಬಳಿಕ ಅವನಿಗೆ ಬ್ರಹ್ಮಹತ್ಯೆಯ ಪಾಪವು ತಗಲಿತು. ಅದನ್ನು ತೊಳೆದುಕೊಳ್ಳಲಿಕ್ಕಾಗಿ ಅಶ್ವಮೇಧ ಯಜ್ಞವನ್ನು ನೆರವೇರಿಸಿದ ಆ ಶಚೀಪತಿ. ಇಂದ್ರನು ತನ್ನ ವಜ್ರಾಯುಧದಿಂದ ಆ

ಬ್ರಹ್ಮಹತ್ಯೆಯನ್ನು ಹೊಡೆದು ಆರು ಬಗೆಯಾಗಿ ಭೂಲೋಕದಲ್ಲಿ ಹಂಚಿ ಹಾಕಿದ. ಮರ, ನೀರು, ನೆಲ, ಸ್ತ್ರೀ, ಬೆಂಕಿ, ಶಿಶುಘಾತಕ ಇವರಲ್ಲಿ ಆ ಬ್ರಹ್ಮಹತ್ಯೆಯನ್ನು ತುಂಡು ಮಾಡಿ ಇರಿಸಿದ. ಈ ಪಾಪಗಳನ್ನು ಶ್ರಾವಣ ಪ್ರತಿಪದೆಯ ದಿನವೇ ಎಲ್ಲರೂ ಶ್ರವಣ (ಕೇಳಿ) ಮಾಡಿದ್ದರಿಂದ ಆ ತಿಥಿಯು ಕಲುಷಿತವಾಗಿ ಕಲುಷಾ ಎಂಬ ಹೆಸರನ್ನು ಹೊಂದಿತು. ಪ್ರತಿಪದೆ ಅನಧ್ಯಾಯ ತಿಥಿ. ಅಂದು ನಾಸ್ತಿಕರಾದ ಚಾರ್ವಾಕರೂ, ತಾರ್ಕಿಕರೂ, ದೇವನಿಂದಕರೂ, ವೇದದ್ವೇಷಿಗಳೂ ಅಧ್ಯಯನ ಮಾಡಿ ಪಾಪದಿಂದ ಕಲುಷಿತವಾಗಿ ತಿರುಗವರು. ಅವರ ವಾಙ್ಮಲದಿಂದ ಆ ತಿಥಿ ಕಲುಷಿತ. ಹಿಂದೆ ಮಧುಕೈಟಭರ ರಕ್ತದಲ್ಲಿ ಮುಳುಗಿದ ಭೂಮಿಯು ಮೇದಿನೀ ಎಂದು ಹೆಸರಾಯಿತು. ಆದರೂ ಎಂಟು ಅಂಗುಲದವರೆಗೆ ಭೂಮಿ ಪವಿತ್ರ. ಅದರ ಮುಂದೆ ಮೇದಿನಿಯಲ್ಲಿ ಬ್ರಹ್ಮಹತ್ಯೆ ಮಲವಾಗಿ ಅಂಟಿಕೊಂಡಿದೆ. ಸ್ತ್ರೀಯರಲ್ಲಿ ಮಾಸಿಕ ರಜೋರೂಪವಾಗಿ ಬ್ರಹ್ಮಹತ್ಯೆಯ ಮಲ ಕಾಣಿಸಿಕೊಳ್ಳುತ್ತದೆ.

ನದಿಗಳಲ್ಲಿ ವರ್ಷಾಕಾಲದ ಮೇಲಿನ ಪ್ರವಾಹ ರೂಪವಾಗಿ ಇಂದ್ರನ ಪಾಪ ಪ್ರವಹಿಸಿ ಹೋಗುತ್ತದೆ. ಮರಗಳಲ್ಲಿ ಅಂಟಿನ ರೂಪದಿಂದ ಅದು ಹೊರಬೀಳುತ್ತದೆ. ಶಿಶುಘಾತಕರ ಸಂಗದಿಂದ ಆ ಬ್ರಹ್ಮಹತ್ಯೆಯ ಮಲ ಹಂಚಿ ಹೋಗುತ್ತದೆ. ವಹ್ನಿಯಲ್ಲಿ ಹೊಗೆಯ ರೂಪದಿಂದ ಆ ಮಲವು ಹೊರಹೊಮ್ಮುತ್ತದೆ. ಈ ಎಲ್ಲ ಮಲಗಳಿಂದ ಶ್ರಾವಣ ಶುಕ್ಲ ಪ್ರತಿಪದೆಯ ದಿನ ಕಲುಷಿತವಾಗಿದ್ದರಿಂದ ಆ ಪ್ರತಿಪದಾ ತಿಥಿಯು 'ಕಲುಷಾ' ತಿಥಿ ಆಯಿತು. ಆದರೆ ಅದೇ ಶ್ರಾವಣ ಮಾಸದಲ್ಲಿ ಕೃಷ್ಣನು ಹುಟ್ಟಿದ್ದರಿಂದ ಆ ಶ್ರಾವಣ ಮಾಸವು ಪರಮ ಪವಿತ್ರ ಮಾಸವು ಎಂದು ಹೆಸರಾಗಿದೆ. ದ್ವಿತಿಯಾ ತಿಥಿಯು ಅಧ್ಯಯನದ ದಿವಸ. ಅಂದು ವೈದಿಕರು. ಶಾಸ್ತ್ರಪಂಡಿತರು ಭಕ್ತಿಯಿಂದ ವೇದಶಾಸ್ತ್ರಗಳ ಅಧ್ಯಯನವನ್ನು ಪ್ರಾರಂಭ ಮಾಡಿದರು. ಅಂದು ಭಾದ್ರಪದ ಶುದ್ಧ ದ್ವಿತೀಯಾ ತಿಥಿಯು ಇದ್ದಿತು. ಆದುದರಿಂದ ಆ ದಿನವು ಅಮಲಾ ದ್ವಿತಿಯಾ ಎಂದು ಪ್ರಸಿದ್ಧಿಯಾಯಿತು. ಈ ಭಾದ್ರಪದ ಮಾಸದಲ್ಲಿ ಅಗ್ನಿಷ್ವಾತ್ತ, ಬರ್ಹಿಷದ, ಅಜ್ಯಪ ಸೋಮಪ ಎಂಬ ಹೆಸರಿನ ಪಿತೃಗಳು ಮತ್ತು ಪಿತಾಮಹರು ತಮ್ಮ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಮೊದಲಾದವರು ಮಾಡಿದ ಶ್ರಾದ್ಧ, ಪಿಂಡದಾನ, ಸ್ವಧಾಮಂತ್ರ ಮುಂತಾದವುಗಳಿಂದ ಪೂಜಿತರಾಗಿ ತೃಪ್ತಿಹೊಂದಿ ಸಂತುಷ್ಟರಾಗುವರು. ಮಹಾಲಯ ಮುಗಿದ ಬಳಿಕ ತಮ್ಮ ಸಂತತಿಯವರಿಗೆ ಆಶೀರ್ವಾದ ನೀಡಲ್ಕಿಕಾಗಿ ಪಿತೃಗಳು ಅಶ್ವೀಜ ಶುಕ್ಲ ತೃತೀಯಾದವರೆಗೆ ಭೂಲೋಕದಲ್ಲಿ ಸಂಚರಿಸುತ್ತಾರೆ. ಆದುದರಿಂದ ಈ ಅಶ್ವೀಜ ಶುದ್ಧ ತೃತೀಯಾ ತಿಥಿಗೆ ಪ್ರೇತಸಂಚಾರಾ ಎಂದು ಹೆಸರು ಬಂದಿರುತ್ತದೆ. ಕಾರ್ತಿಕ ಶುಕ್ಲ ದ್ವಿತೀಯಾ ಚತುರ್ಥೀ ದಿನಗಳು ಯಾಮ್ಯಾ ಎಂದು ಕರೆಯಲ್ಪಡುತ್ತವೆ. ಅಂದು ಎಲ್ಲ ನರರೂ ಯಮಧರ್ಮನನ್ನು ಭಕ್ತಿಯಿಂದ ಪೂಜೆ ಮಾಡಬೇಕು.

ಅಂದು ಯಮಧರ್ಮನು ತನ್ನ ತಂಗಿಯಾದ ಯಮುನಾ ನದಿಯ ಮನೆಗೆ ಬಂದು ತಂಗಿಯ ಕೈಯಿಂದ ಊಟಮಾಡಿದ. ಅದಕ್ಕಾಗಿ ಅದು ಯಮ ದ್ವಿತಿಯಾ ಎಂದು ಹೆಸರಾಯಿತು. ಅಂದು ಮಾನವರು ಯಮುನಾ ನದಿಯಲ್ಲಿ ಸ್ನಾನಮಾಡಿದರೆ ಅವರಿಗೆ ಯಮಲೋಕವನ್ನು ಕಾಣುವ ಪ್ರಸಂಗವೇ ಬರುವದಿಲ್ಲ. ಕಾರ್ತಿಕ ಶುಕ್ಲದ ಯಮದ್ವಿತಿಯಾದಂದು ಅಕ್ಕ ತಂಗಿಯರಿದ್ದ ಪುರುಷರು ತಮ್ಮ ಮನೆಯಲ್ಲಿ ಊಟ ಮಾಡದೇ ಸೋದರಿಯರ ಮನೆಗೆ ಹೋಗಿ ಭಗಿನಿಯ ಹಸ್ತದಿಂದಲೇ ಅಂದು

ಭೋಜನವನ್ನು ಮಾಡಬೇಕು. ಮತ್ತು ತನ್ನ ಯೋಗ್ಯತೆಗೆ ಅನುಸಾರವಾಗಿ ಬಂಗಾರ ಬಟ್ಟೆ ಅಲಂಕಾರ ಆಭರಣ ಮುಂತಾದವುಗಳನ್ನು ಕೊಟ್ಟು ಸೋದರಿಯನ್ನು ಸಂತೋಷಪಡಿಸಬೇಕು. ಯಾಮ್ಯಾ ಚತುರ್ಥಿಯ ದಿನ ಯಮದೇವರನ್ನು ಕುರಿತು ತರ್ಪಣಕೊಟ್ಟು ಪೂಜೆಗೈದು ಅನಂತರ.

**ಮಹಿಷಾಸನ ಸಮಾರೂಢೋ ದಂಡ ಮುದ್ಗರ ಭೃತ್ಪ್ರಭುಃ ।**
**ವೇಷ್ಟಿತಃ ಕಿಂಕರೈರ್ಹೃಷ್ಟೈಸ್ತಸ್ಮೈ ಯಾಮ್ಯಾತ್ಮನೇ ನಮಃ ॥**
ಎಂದು ಪ್ರಾರ್ಥನೆಗೈದು ನಮಸ್ಕಾರ ಮಾಡಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ದೀಪಾವಲೀ ಮಾಹಾತ್ಮ್ಯ ಎಂಬ ನೂರಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಕಾರ್ತವೀರ್ಯಾರ್ಜುನ ಮತ್ತು ದತ್ತಾತ್ರೇಯ ಸಂವಾದ. ಮಾಘ ಸ್ನಾನದ ಮಹಿಮೆ

ಅಧ್ಯಾಯ - ೧೨೩

**ವಶಿಷ್ಠ:-** ಒಂದು ದಿನ ಸಹ್ಯಾದ್ರಿಯಲ್ಲಿ ನೆಲಿಸಿದ ದತ್ತಾತ್ರೇಯ ರೂಪಿಯಾದ ಶ್ರೀಹರಿಯನ್ನು ಮಾಹಿಷ್ಮತಿಯ ದೊರೆಯಾದ ಕಾರ್ತವೀರ್ಯಾರ್ಜುನ ಕೇಳಿದ.

**ಕಾರ್ತವೀರ್ಯಾರ್ಜುನ:-** ಪೂಜ್ಯ ದತ್ತಾತ್ರೇಯ, ನಾನು ತಮ್ಮ ಮುಖದಿಂದ ಕೇಳಿದ ಎಲ್ಲ ಧರ್ಮಗಳನ್ನು. ಮಹಾನುಭಾವ, ಈಗ ನೀನು ನನ್ನ ಮೇಲೆ ದಯೆದೋರಿ ಮಾಘ ಸ್ನಾನದ ಫಲವು ಏನು? ಅದರ ಮಾಹಾತ್ಮ್ಯವು ಏನು? ಎಂಬುದನ್ನು ದಯವಿಟ್ಟು ಬಿತ್ತರಿಸಿರಿ.

**ದತ್ತಾತ್ರೇಯ:-** ರಾಜಶ್ರೇಷ್ಠ ! ಪೂರ್ವಕಾಲದಲ್ಲಿ ಬ್ರಹ್ಮದೇವರು ನಾರದರಿಗೆ ಹೇಳಿದ ಮಾತನ್ನೇ ನಾನು ಈಗ ನಿನ್ನ ಪ್ರಶ್ನೆಗೆ ಉತ್ತರೂಪವಾಗಿ ಹೇಳುತ್ತೇನೆ ಕೇಳು. ಮಾಘ ಮಾಸದಲ್ಲಿ ಪ್ರಾತಃಕಾಲದಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡದೇ ಇರುವ ಮನುಷ್ಯರ ಜನ್ಮವು ವ್ಯರ್ಥವೇ ಸರಿ. ವಾಸುದೇವನ ಪ್ರೀತಿ ಹಾಗೂ ಸರ್ವಪಾಪಗಳ ಪರಿಹಾರ ಆಗಬೇಕು ಎಂದು ಬಯಸುವವರು ಅವಶ್ಯವಾಗಿ ಮಾಘ ಸ್ನಾನವನ್ನು ಮಾಡಬೇಕು.

**ಅ ವೈಷ್ಣವೋ ಹತೋ ವಿಪ್ರೋ ಹತಂ ಶ್ರಾದ್ಧಮಯೋಗಿ ಚ ।**
**ಅಬ್ರಹ್ಮಣ್ಯಂ ಹತಂ ಕ್ಷೇತ್ರ ಮನಾಚಾರಂ ಹತಂ ಕುಲಮ್ ॥**
ಯಾವನಾದರೂ ಒಬ್ಬ ವಿಷ್ಣು ಭಕ್ತನು ಇಲ್ಲದಿದ್ದರೆ ಶ್ರಾದ್ಧವು ಹಾಳಾದಂತೆ. ವೇದಶಾಸ್ತ್ರ ಅಧ್ಯಯನ ಮಾಡಿದ ಬ್ರಾಹ್ಮಣನು ಇಲ್ಲದಿದ್ದರೆ ಆ ಕ್ಷೇತ್ರವು ಹಾಳು. ಸದಾಚಾರ ಸಂಪತ್ತಿಯು ಇಲ್ಲದ ವಂಶವು ನಷ್ಟವಾದಂತೆ.

**ಸದಂಭಶ್ಚ ಹತೋ ಧರ್ಮಃ ಕ್ರೋಧೇನೈವ ಹತಂ ತಪಃ ।**
**ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಂ ॥**
ದಂಭದರ್ಪಗಳು ಇದ್ದರೆ ಧರ್ಮವೆಲ್ಲವೂ ನಷ್ಟವಾಗುವದು. ಸಿಟ್ಟಿನಿಂದ ತಪಸ್ಸು ಹಾಳಾಗುವದು. ದೃಢನಿಶ್ಚಯ ಇಲ್ಲದಿದ್ದರೆ ಜ್ಞಾನವು ನಷ್ಟವಾಗುವದು. ವೇದೋಕ್ತ ಕರ್ಮಾನುಷ್ಠಾನದಲ್ಲಿ ಪ್ರಮಾದವಾದರೆ ಎಲ್ಲವೂ ಅನರ್ಥಕ್ಕೆ ಕಾರಣವಾಗುವದು.

**ಗುರ್ವಭಕ್ತಾ ಹತಾ ನಾರೀ ಬಹ್ಮಚಾರೀ ತಯಾ ಹತಃ ।**
**ಅದೀಪ್ತೇऽಗ್ನೌ ಹತೋ ಹೋಮಃ ಹತಾ ಭುಕುತ್ರಸಾಕ್ಷಿಕಾ ॥**

ಗುರುಹಿರಿಯರ ಸೇವೆ ಮಾಡದ ಹೆಣ್ಣಿನ ಜನ್ಮ ವ್ಯರ್ಥ. ಹೆಣ್ಣಿನ ಸಹವಾಸ ಮಾಡಿದ ಬ್ರಹ್ಮಚರಯು ನಷ್ಟ, ಚೆನ್ನಾಗಿ ಉರಿಯದೇ ಇರುವ ಬೆಂಕಿಯಲ್ಲಿ ಹಾಕಿದ ಹವಿಸ್ಸು ವ್ಯರ್ಥ. ಸಾಕ್ಷಿ ಇಲ್ಲದೇ ಮಾಡಿದ ಭೋಜನ ಎಂದರೆ ಯಾವ ಅತಿಥಿ ಅಭ್ಯಾಗತರೂ ಇಲ್ಲದೇ ಒಬ್ಬನೇ ಊಟ ಮಾಡಿದರೆ ಆ ಭೋಜನವು ವ್ಯರ್ಥ.

**ಉಪಜೀವ್ಯಾ ಹತಾ ಕನ್ಯಾ ಸ್ವಾರ್ಥೇ ಪಾಕಕ್ರಿಯಾ ಹತಾ ।**
**ಶೂದ್ರ ಭಿಕ್ಷೋ ಹತೋ ಯಾಗಃ ಕೃಪಣಸ್ಯ ಹತಂ ಧನಂ ॥**

ಹೆರವರನ್ನು ಉಪಜೀವಿಸಿ ಬದುಕುವ ಕನ್ಯೆಯ ಬಾಳು ನಷ್ಟ. ಕೇವಲ ತನ್ನ ಒಬ್ಬನ ಉದರಂಭರಣಕ್ಕಾಗಿ ಮಾಡಿಕೊಂಡ ಅಡುಗೆ ವ್ಯರ್ಥ, ಶೂದ್ರದಿಂದ ಭಿಕ್ಷೆ ಬೇಡಿಕೊಂಡು ತಂದು ಮಾಡಿದ ಯಜ್ಞ ವ್ಯರ್ಥ, ಜಿಪುಣನಲ್ಲಿದ್ದ ಐಶ್ವರ್ಯವು ವ್ಯರ್ಥ.

**ಅನಭ್ಯಾಸಾ ಹತಾ ವಿದ್ಯಾ ಹತೋ ರಾಜಾ ವಿರೋಧ ಕೃತ್ ।**
**ಜೀವನಾರ್ಥಂ ಹತಂ ತೀರ್ಥಂ ಜೀವನಾರ್ಥಂ ಹತಂ ವ್ರತಮ್ ॥**

ಕಲಿತ ವಿದ್ಯೆಯನ್ನು ಮೇಲಿಂದ ಮೇಲೆ ಅವೃತ್ತಿ ಅಥವಾ ಅಭ್ಯಾಸ ಮಾಡದಿದ್ದರೆ ಆ ವಿದ್ಯೆಯೆಲ್ಲವೂ ನಷ್ಟವಾಗಿ ಹೋಗುವದು. ವಿರೋಧವನ್ನು ಮಾಡುವ ರಾಜನು ಇದ್ದರೂ ಇಲ್ಲದಿದ್ದಂತೆಯೇ. ಉಪಜೀವನಕ್ಕಾಗಿ ತೀರ್ಥವನ್ನು ಮಾರಾಟ ಮಾಡಿದರೆ ಅರ್ಥಾತ್ ಹಣ ತೆಗೆದುಕೊಂಡು ತೀರ್ಥವನ್ನು ಕೊಟ್ಟರೆ ಅದು ವ್ಯರ್ಥ. ಉಪಜೀವನಕ್ಕಾಗಿ ಮಾಡಿದ ವ್ರತವೂ ಕೂಡ ವ್ಯರ್ಥವೇ.

**ಅಸತ್ಯಾ ಚ ಹತಾ ವಾಣೀ ತಥಾ ಪೈಶುನ್ಯವಾದಿನೀ ।**
**ಸಂದಿಗ್ಧಶ್ಚ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥**

ಸುಳ್ಳನ್ನು ನುಡಿಯುವ ವಾಣಿಯು ನಷ್ಟವಾದಂತೆ. ಚಾಡಿಯ ಮಾತು ವಿನಾಶಕ, ಮಂತ್ರದಲ್ಲಿ ಸಂದೇಹವಿದ್ದರೆ ಅದರ ಉಚ್ಚಾರ ವ್ಯರ್ಥ. ವ್ಯಗ್ರವಾದ ಮನಸ್ಸಿನಿಂದ ಮಾಡಿದ ಜಪದ ಅನುಷ್ಠಾನವು ವ್ಯರ್ಥ.

**ಹತಮಶ್ರೋತ್ರಿಯೇ ದಾನಂ ಹತೋ ಲೋಕಶ್ಚ ನಾಸ್ತಿಕಃ ।**
**ಅಶ್ರದ್ಧಯಾ ಹತಂ ಸರ್ವಂ ಕೃತಂ ಯತ್ಪಾರಲೌಕಿಕಂ ॥**

ವೇದಾಧ್ಯಯನವನ್ನು ಮಾಡದಿರುವ ಮನುಷ್ಯನಿಗೆ ನೀಡಿದ ದಾನ ವ್ಯರ್ಥ. ದೇವರು ಧರ್ಮ ವೇದಗಳನ್ನು ನಂಬದ ನರನ ಬದುಕು ವ್ಯರ್ಥ. ಶ್ರದ್ಧೆ ಇಲ್ಲದೇ ಮಾಡಿದ ಪರಲೋಕೋಪಯುಕ್ತವಾದ ಧರ್ಮಕಾರ್ಯಗಳೆಲ್ಲವೂ ವ್ಯರ್ಥ.

**ಇಹಲೋಕೋ ಹತೋ ನೃಣಾಂ ದರಿದ್ರಾಣಾಂ ಯಥಾ ನೃಪ ।**
**ಮನುಷ್ಯಾಣಾಂ ತಥಾ ಜನ್ಮ ಮಾಘಸ್ನಾನಂ ವಿನಾ ಹತಂ ॥**

ದರಿದ್ರರ ಪಾಲಿಗೆ ಇಹಲೋಕವೆಲ್ಲವೂ ಇದ್ದೂ ಇಲ್ಲದಿದ್ದಂತೆ. ಅದರಂತೆ ಮಾಘಸ್ನಾನ ಮಾಡದ ಮನುಷ್ಯನು ಬದುಕಿದ್ದರೂ ಸತ್ತಂತೆ. ಸೂರ್ಯನು ಮಕರ ರಾಶಿಗೆ ಬಂದಾಗ ಮಾಘ ಮಾಸದಲ್ಲಿ ಸೂರ್ಯೋದಯವಾಗುವದಕ್ಕಿಂತ ಮೊದಲು ಸ್ನಾನ

ಮಾಡದಿರುವ ಮನುಷ್ಯನ ಪಾಪಗಳು ಪರಿಹಾರವಾಗುವ ಬಗೆಯೆಂತು? ಮಾಘ ಸ್ನಾನ ಮಾಡದಿರುವ ಮನುಷ್ಯನು ಸ್ವರ್ಗಕ್ಕೆ ಹೋಗುವ ದಾರಿ ಯಾವುದು?

ಬ್ರಹ್ಮಹತ್ಯೆ, ಬಂಗಾರದ ಕಳವು, ಮದ್ಯಪಾನ, ಗುರುಪತ್ನಿಯ ಗಮನ ಈ ನಾಲ್ಕು ಮಹಾಪಾಪವೆನಿಸುತ್ತವೆ. ನಾಲ್ಕು ಮಹಾಪಾಪ ಮಾಡಿದವರ ಸಹವಾಸ ಮಾಡುವದು ಐದನೇ ಮಹಾಪಾಪ. ಈ ಐದು ಮಹಾಪಾಪಗಳಿಗೆ ಪಂಚ ಮಹಾಪಾತಕಗಳೆಂದು ಹೆಸರು. ಮಾಘಸ್ನಾನ ಮಾಡುವದರಿಂದ ಪಂಚ ಮಹಾಪಾತಕಗಳೆಲ್ಲವೂ ತೊಳೆದುಹೋಗುವವು. ಉಪಪಾಪಗಳೆಲ್ಲವೂ ಕಳೆದುಹೋಗುವವು. ಮಾಘಮಾಸದಲ್ಲಿ ಜಲಾಭಿಮಾನಿ ದೇವತೆಗಳು, ''ಯಾವ ಬ್ರಹ್ಮಹತ್ಯಾಪಾತಕಿಯನ್ನು ಉದ್ಧರಿಸೋಣ? ಯಾವ ಮದ್ಯಪಾನಿ ವ್ಯಸನಿಯನ್ನು ಶುದ್ಧಿಗೊಳಿಸೋಣ? ಯಾವ ಪತಿತನನ್ನು ಪಾವನ ಮಾಡೋಣ?'' ಎಂದು ಸೂರ್ಯೋದಯ ಕಾಲದಲ್ಲಿ ಕೂಗಿಕೊಳ್ಳುತ್ತ ಇರುತ್ತಾರೆ.

ಮಹಾರಾಜ, ನಾನು ನಿನಗೆ ಒಂದು ಅತ್ಯಾಶ್ಚರ್ಯಕರವಾದ ಮಾಘಸ್ನಾನದ ಪ್ರಭಾವವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಕುಬ್ಜಿಕಾ ಎಂಬ ಬ್ರಾಹ್ಮಣ ವಿಧವೆಯು ಇದ್ದಳು. ಭೃಗು ವಂಶದಲ್ಲಿ ಹುಟ್ಟಿದ ಆ ಕುಬ್ಜಿಕೆಯು ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ವೈಧವ್ಯದ ದುಃಖವನ್ನು ಅನುಭವಿಸಿದಳು. ಲೌಕಿಕವಾದ ವಿಷಯ ಭೋಗಗಳ ಆಶೆಯನ್ನು ಸಂಪೂರ್ಣವಾಗಿ ತ್ಯಜಿಸಿ ಅವಳು ಘೋರ ತಪಸ್ಸನ್ನು ಮಾಡಿದಳು. ವಿಂಧ್ಯ ಪರ್ವತದ ಮಹಾ ಕ್ಷೇತ್ರದಲ್ಲಿ ನಿಂತು ರೇವಾ ಕಪಿಲಾ ಸಂಗಮ ತೀರ್ಥದಲ್ಲಿ ಪ್ರತಿದಿನ ಸ್ನಾನಮಾಡಿ ವ್ರತಸ್ಥಳಾಗಿ ಅವಳು ನಾರಾಯಣನ ಧ್ಯಾನ ಮಾಡುತ್ತಿದ್ದಳು. ಸದಾಚಾರ ನಿಷ್ಠಳಾದ ಆ ವಿಧವೆಯು ಇಂದ್ರಿಯಗಳನ್ನೆಲ್ಲ ಗೆದ್ದಳು. ಕಾಮಕ್ರೋಧಗಳನ್ನು ಮೆಟ್ಟಿ ನಿಂತಳು. ಸತ್ಯವನ್ನೇ ನುಡಿಯಬೇಕೆಂಬ ಪಣತೊಟ್ಟ ಅವಳು ಮಾತನ್ನೇ ಮಿತವಾಗಿ ಬಳಸುತ್ತಿದ್ದಳು. ಶೀಲ, ಸದಾಚಾರ, ಪರೋಪಕಾರ, ದೇವತಾರಾಧನೆ, ಬ್ರಾಹ್ಮಣ ಸಂತರ್ಪಣೆ, ಪಿತೃಪೂಜೆ, ಹೋಮಹವನ, ಶ್ರೀಹರಿಯ ಧ್ಯಾನೋಪಾಸನೆಗಳನ್ನೇ ತನ್ನ ಜೀವನದ ಒಂದು ಪರಮೋಚ್ಚ ಧ್ಯೇಯವನ್ನಾಗಿ ಇಟ್ಟುಕೊಂಡು ಇದೆಲ್ಲವನ್ನು ಜೀವನದ ಮಹಾವ್ರತವೆಂದು ಆಚರಿಸುತ್ತಲಿರುವ ಕುಬ್ಜಿಕೆಯು ಉಂಛ ವೃತ್ತಿಯಿಂದ ಉಪಜೀವನವನ್ನು ಸಾಗಿಸುತ್ತಾ ಅಪರಾಹ್ನ ಕಾಲದಲ್ಲಿ ಮಾತ್ರ ಕಿಂಚಿತ್ ಆಹಾರವನ್ನು ಮಾತ್ರ ಸೇವಿಸುತ್ತಿದ್ದಳು. ಕೃಚ್ಛ್ರ, ಅತಿಕೃಚ್ಛ್ರ, ಅಪಾರಾಕ, ತಪ್ತ ಕೃಚ್ಛ್ರ ಮೊದಲಾದ ಕಠಿಣಾತಿ ಕಠಿಣತರವಾದ ವ್ರತಗಳನ್ನು ಅವಳು ಆಚರಿಸಿದಳು. ಮಹಾ ತಪಸ್ವಿಯಾದ ಆ ಕುಬ್ಜಿಕೆಯು ನಾರುಬಟ್ಟೆ ಉಟ್ಟುಕೊಂಡು ಸುಶೀಲಳೂ ದಾನಶೀಲಳೂ ಆಗಿ ಯದೃಚ್ಛಾಲಾಭ ಸಂತೋಷದಿಂದ ನರ್ಮದಾ ತೀರದಲ್ಲಿಯೇ ಕಾರ್ತಿಕ, ಮಾಘ, ವೈಶಾಖ ಮುಂತಾದ ಪುಣ್ಯ ಮಾಸಗಳನ್ನೆಲ್ಲಾ ಕಳೆಯುತ್ತಿದ್ದಳು. ಹೀಗೆ ಅನೇಕ ವರ್ಷಗಳವರೆಗೆ ನರ್ಮದಾ ತೀರದಲ್ಲಿಯೇ ಸ್ನಾನ ತಪಸ್ಸು ದೇವ ಬ್ರಾಹ್ಮಣರ ಆರಾಧನೆಗಳಲ್ಲಿಯೇ ದೇಹವನ್ನು ಸವೆಯಿಸಿದ ಆ ಕುಬ್ಜಿಕೆಯು ನರ್ಮದಾ ನದಿಯಲ್ಲಿ ಅರವತ್ತು ಮಾಘ ಸ್ನಾನಗಳನ್ನು ಮಾಡಿದಳು. ಕೊನೆಗೆ ಅವಳ ದೇಹಕ್ಕೆ ಮುಪ್ಪು ಅಡರಿತು. ಮರಣ ಒದಗಿತು. ನರ್ಮದಾ ಕಪಿಲಾ ಸಂಗಮ ತೀರ್ಥದಲ್ಲಿ ಅವಳ ದೇಹಪಾತವಾಯಿತು.

ಮಾಘಸ್ನಾನದ ಪ್ರಬಲ ಪುಣ್ಯದ ಪ್ರಭಾವದಿಂದ ಅವಳು ಮರಣಾನಂತರ ನಾಲ್ಕು ಸಾವಿರ ವರ್ಷಗಳವರೆಗೆ ವೈಷ್ಣವಪುರದಲ್ಲಿ ಆನಂದದಿಂದ ಇದ್ದು ಮುಂದೆ ಬ್ರಹ್ಮದೇವರ ಮಗಳಾಗಿ ಹುಟ್ಟಿದಳು. ಸುಂದೋಪಸುಂದರೆಂಬ ದೈತ್ಯ ಬಂಧುಗಳ ವಿನಾಶಕ್ಕಾಗಿ ಚತುರ್ಮುಖನು ಸೌಂದರ್ಯದ ಸಾರಭೂತ ಪದಾರ್ಥಗಳನ್ನೆಲ್ಲ ಒಂದೆಡೆ ಮಿಲನ ಮಾಡಿ ತಿಲೋತ್ತಮೆಯೆಂಬ ಅಪ್ಸರೆಯನ್ನು ನಿರ್ಮಾಣ ಮಾಡಿದ. ಹಿಂದಿನ ಜನ್ಮದಲ್ಲಿ ವಿಧವೆಯಾದ ಕುಬ್ಜಿಕೆಯೇ ಈಗ ಬ್ರಹ್ಮದೇವರ ಸಂಕಲ್ಪದಿಂದ ಸೌಂದರ್ಯದ ಅಧಿದೇವತೆಯಾಗಿ ತಿಲೋತ್ತಮಾ ಎಂಬ ಹೆಸರಿನಿಂದ ಮೂಡಿ ಬಂದಿದ್ದಳು. ಯೋನಿಯಿಂದ ಹುಟ್ಟದಿರುವ ಈ ಮೋಹಿನಿಯು ದೇವಲೋಕದಲ್ಲಿ ತನ್ನ ಲೋಭನೀಯವಾದ ಲಾವಣ್ಯದ ಲಾಲಿತ್ಯದಿಂದ ಲಲನಾಕುಲದ ರತ್ನ, ಸುರಲೋಕದ ಅನರ್ಘ್ಯ ಮಣಿಯೆಂದು ಸಿದ್ಧಿ ಪ್ರಸಿದ್ಧಿ ಪಡೆದಿದ್ದು. ಇಂಥ ಸೌಂದರ್ಯದ ಒಂದು ಸರೋವರದಂತೆ ಇರುವ ತಿಲೋತ್ತಮೆಯ ಯೌವನ ಕಾಂತಿ ಕಮನೀಯತೆಗಳನ್ನು ಕಂಡು ಸ್ವಯಂ ಬ್ರಹ್ಮದೇವರೇ ಆಶ್ಚರ್ಯಚಕಿತನಾದ ಮತ್ತು ಅವಳಿಗೆ ಅಪ್ಪಣೆ ನೀಡಿದ.

**ಬ್ರಹ್ಮ:-** ಚಿಗರೆಕಂಗಳ ಚೆಲುವೆಯೇ, ನೀನು ಕೂಡಲೇ ಕೈಯಲ್ಲಿ ಒಂದು ತಂಬೂರಿಯನ್ನು ತೆಗೆದುಕೊಂಡು ಈ ಬ್ರಹ್ಮಲೋಕದಿಂದ ಸುಂದೋಪಸುಂದರೆಂಬ ದೈತ್ಯರ ವಿನಾಶಕ್ಕಾಗಿ ಭೂಲೋಕಕ್ಕೆ ಹೋಗು.

ಶಾರದಾಪತಿಯ ಈ ನಿರ್ದೇಶವನ್ನು ತಲೆಯ ಮೇಲೆ ಹೊತ್ತು ನಡೆದಳು. ಆ ಸುರಸುಂದರಿ. ಅವಳು ಪುಷ್ಕರ ಮಾರ್ಗದಿಂದ ಸುಂದೋಪಸುಂದರು ಇರುವ ರೇವಾ (ನರ್ಮದಾ) ನದಿಯ ತೀರಕ್ಕೆ ಬಂದಳು.

ಹೊಂಬಣ್ಣದ ಪೀತಾಂಬರ, ಝಣತ್ಕರಿಸುವ ಕನಕ ಕಂಕಣ ಕೈಯಲ್ಲಿ, ಸಿಂಜಾನ ಮಂಜುಳಘೋಷದ ಪೈಜಣ ಕಾಲಲ್ಲಿ, ಲೀಲಾಲೋಲವಾಗಿ ಆಚೀಚೆ ತೂಗಾಡುವ ಮುತ್ತಿನ ಮಾಲೆ ಕೊರಳಲ್ಲಿ, ಚಲಾಚಲವಾದ ಕುಂಡಲ ಕಿವಿಗಳಲ್ಲಿ, ಮಾಧವೀ ಕುಸುಮ ಮಾಲೆ ಸಿರಮುಡಿಯಲ್ಲಿ, ಇಂಥ ರೂಪಸಿರಿಯನ್ನು ಹೊತ್ತು ರಮಣೀಮಣಿ ತಿಲೋತ್ತಮೆ ತಂಬೂರಿಯ ತಂತಿಯನ್ನು ತನ್ನ ತರಳ ಬೆರಳಿನಿಂದ ಮೀಟುತ್ತ ಮಧುರ ಸ್ವರದಿಂದ ಮಾದಕ ಮೋದಕವಾಗುವಂತೆ ಹಾಡತೊಡಗಿದಳು. ತಾನ ವಿತಾನಗಳನ್ನು ತೆಗೆದುಕೊಂಡು ಸುಸ್ವರ ಸಂಗೀತದ ಗಂಗಾ ಪ್ರವಾಹವನ್ನೇ ಒಮ್ಮೆಲೇ ಹೊಮ್ಮಿಸುತ್ತಲಿರುವ ಆ ತರಳೆಯ ಸೌಂದರ್ಯ, ಗಾನ ಮಾಧುರ್ಯದ ಸಮಾಚಾರವನ್ನು ಸುಂದೋಪಸುಂದರಿಗೆ ಹೇಳಿದರು ಅವರ ಸೈನಿಕರು. ಬೆಳ್ಳಿ ಬಟ್ಟಲಲ್ಲಿ ಸೆರೆಯನ್ನು ಹೀರುತ್ತ ಕುಳಿತುಕೊಂಡ ಆ ಇಬ್ಬರೂ ಸೋದರರು ಈ ಅಮರಾಂಗನೆಯ ಚಲುವಿಕೆಯ ಬಣ್ಣನೆಯನ್ನು ಕೇಳಿ ತಿಲೋತ್ತಮೆ ಇದ್ದಲ್ಲಿಗೆ ಧಾವಿಸಿ ಬಂದರು. ಅವಳ ರೂಪರಾಶಿಯನ್ನು ಕಂಡು ಇಬ್ಬರೂ ದೈತ್ಯ ಬಂಧುಗಳ ಮನ ಮರುಳಾಯಿತು. ಕಾಮ ಕೆರಳಿತು. ಕಣ್ಣಿನ ಎವೆ ಪಿಳುಕಿಸುವದನ್ನು ಕೂಡ ಮರೆತು ನಿಬ್ಬೆರಗಿನಿಂದ ಅವಳನ್ನು ನೋಡತೊಡಗಿದರು. ಅವಳ ನೋಟವೇ ಒಂದು ರಸದೂಟ ಆ ದೈತ್ಯಾಧಮರ ಹಸಿದ ಕಂಗಳಿಗೆ. ಅವಳನ್ನು ಕಂಡ ಕೂಡಲೇ ಅವರಿಬ್ಬರ ಮನಸ್ಸು ಸೋತು ಮದೋನ್ಮತ್ತರಾದ ಸೋದರರಿಬ್ಬರೂ ಕಾಮೋನ್ಮಾದದಿಂದ ಪರಸ್ಪರ ನುಡಿದರು.

**ಸುಂದ:-** ತಮ್ಮ ಉಪಸುಂದ, ನೀನು ಇವಳ ಆಸೆಯನ್ನು ಬಿಟ್ಟುಬಿಡು. ಇವಳನ್ನು ನಾನೇ ವರಿಸುವೆ.

**ಉಪಸುಂದ:-** ಅಣ್ಣ, ದಯಮಾಡಿ ನೀನು ಈ ಮೋಹನಾಂಗಿಯ ಬಳಿಗೆ ಬರಬೇಡ. ಅವಳು ನನ್ನ ಸೊತ್ತು. ನಾನು ಅವಳ ರೂಪಕ್ಕೆ ಮಾರುಹೋಗಿದ್ದೇನೆ. ಅವಳ ಮಂದಹಾಸದ ಅಂದವನ್ನು ನೋಡಿ ಹುಚ್ಚನಾಗಿದ್ದೇನೆ. ಅವಳನ್ನು ನಾನೇ ನನ್ನ ಬಾಳಸಂಗಾತಿಯನ್ನಾಗಿ ಮಾಡಿಕೊಳ್ಳುತ್ತೇನೆ.

ಹೀಗೆ ಆ ಇಬ್ಬರೂ ದೈತ್ಯ ಸೋದರರು ತಿಲೋತ್ತಮೆ ತನಗೆ ಬೇಕು. ನನಗೆ ಬೇಕು ಎಂದು ವಾದಿಸಿ ಸಾಧಿಸಿದರು. ಕೊನೆಗೆ ಅವರ ಈ ಕಲಹ ಕದನದ ರೂಪ ತಾಳಿತು. ಪ್ರಚಂಡ ಶಕ್ತಿ ಸಂಪನ್ನರಾದ ಅವರಿಬ್ಬರೂ ಕಾಮೋನ್ಮಾದದಿಂದ ಕೆರಳಿ ಕಾಡು ಕೋಣಗಳಂತೆ ಹಣಾಹಣಿ ಹೋರಾಡಿ ಪರಸ್ಪರ ಆಘಾಥ ಪ್ರತ್ಯಾಘಾತಗಳಿಂದ ಜರ್ಜರಿತರಾಗಿ ಇಬ್ಬರೂ ಸತ್ತುಬಿದ್ದರು. ಅದನ್ನು ಕಂಡು ಹೌಹಾರಿದ ಅವರ ಸೈನಿಕರೆಲ್ಲರೂ ಪಲಾಯನ ಗೈದರು. ತಿಲೋತ್ತಮೆಯು ಬ್ರಹ್ಮದೇವರು ಹೇಳಿದ ದೇವತಾ ಕಾರ್ಯ (ಸುಂದೋಪಸುಂದ ಸಂಹಾರ)ವನ್ನು ಮಾಡಿ ಮುಗಿಸಿ ದಶದಿಕ್ಕುಗಳನ್ನು ಬೆಳಗುತ್ತ ಆಕಾಶಕ್ಕೆ ಏರಿದಳು.

ಆಗ ಬ್ರಹ್ಮದೇವರು ಅವಳ ಮೇಲೆ ಸುಪ್ರಸನ್ನರಾಗಿ ಸೂರ್ಯನ ರಥದಲ್ಲಿ ಮುಂದೆ ಸ್ಥಾನವನ್ನು ಹೊಂದು. ಸೂರ್ಯಚಂದ್ರರು ಈಗ ಇರುವವರೆಗೆ ಅಮರಾವತಿಯಲ್ಲಿ ಇದ್ದು ಸುಖೋಪಭೋಗಗಳನ್ನು ಅನುಭವಿಸು ಎಂದು ಆಶೀರ್ವದಿಸಿದ. ರಾಜನೇ, ಮಾಘ ಸ್ನಾನದ ಪುಣ್ಯದಿಂದ ವಿಧವೆಯಾದ ಕುಬ್ಜಿಕೆಯು ಬ್ರಹ್ಮಮಾನಸ ಪುತ್ರಿಯಾದ ಅಪ್ಸರಾಂಗನೆಯಾಗಿ ದೇವಲೋಕದಲ್ಲಿ ಗೌರವದ ಸ್ಥಾನಮಾನ ಪಡೆದು ಧನ್ಯಳಾಗಿದ್ದಾಳೆ. ಮಾಘ ಸ್ನಾನದಿಂದ ನಾಶವಾಗದ ಪಾಪವಿಲ್ಲ. ಅದರಿಂದ ಬಾರದ ಪುಣ್ಯವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಕಾರ್ತವೀರ್ಯಾರ್ಜುನ ಮತ್ತು ದತ್ತಾತ್ರೇಯ ಸಂವಾದ, ಮಾಘ ಸ್ನಾನದ ಮಹಿಮೆ*
*ಎಂಬ ನೂರ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



**ಕಾರ್ತವೀರ್ಯ:-** ಮಹಾನುಭಾವರೇ, ಮಾಘ ಸ್ನಾನವು ಇಷ್ಟು ಅತ್ಯದ್ಭುತವೂ ಪುಣ್ಯಪ್ರದವೂ ಹೇಗೆ ಆಯಿತು? ಪ್ರಭಾವವು ಏನು? ಇದೆಲ್ಲವನ್ನೂ ಇನ್ನೂ ವಿಸ್ತಾರಪೂರ್ವಕವಾಗಿ ನನಗೆ ತಾವು ನಿರೂಪಿಸಬೇಕು.

**ದತ್ತಾತ್ರೇಯ:-** ನೀರು ಸ್ವಭಾವತಃ ಪವಿತ್ರ. ಆಪಃ ಸ್ವಭಾವತೋ ಮೇಧ್ಯಾಃ ಎಂದೂ ಹಿರಿಯರು ಹೇಳಿದ್ದಾರೆ. ''ಆಪೋ ನಾರಾಯಣೋ ದೇವಃ'' ಸಾಕ್ಷಾತ್ ನಾರಾಯಣನೇ ಜಗತ್ತನ್ನು ಪವಿತ್ರೀಕರಿಸುತ್ತಿದ್ದಾನೆ ಎಂದು ಎಲ್ಲ ವೇದಗಳಲ್ಲಿಯೂ ಹೇಳಲಾಗಿದೆ. ಗೃಹಗಳಿಗೂ ಮತ್ತು ಆಕಾಶದಲ್ಲಿರುವ ಎಲ್ಲ ನಕ್ಷತ್ರ ನೀಹಾರಿಕೆಗಳಿಗೂ ಸೂರ್ಯನು ಹೇಗೆ ಅಧಿರಾಜನು ಆಗಿರುವನೋ ಹಾಗೆ ಮಾಘಮಾಸವು ಎಲ್ಲ ಮಾಸಗಳಿಗೂ ಅಧಿರಾಜ ಆಗಿರುತ್ತದೆ.

ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನ ಮಾಡುವಾಗ ಸಂಕಲ್ಪ ಮಾಡಿ,

**ಮಕರಸ್ಥೇ ರವೌ ಮಾಗೇ ಗೋವಿಂದಾಚ್ಯುತ ಮಾಧವ ।**
**ಸ್ನಾನೇನಾನೇನ ಭೂದೇವ ಯಥೋಕ್ತಫಲದೋದ್ಭವ ॥**

ಎಂದು ಮೇಲಿಂದ ಮೇಲೆ ಹರಿಸ್ಮರಣೆಯನ್ನು ಮಾಡಬೇಕು. ಮನೆಯಲ್ಲಿ ಬಿಸಿ ನೀರಿನಿಂದ ಆರು ವರ್ಷ ಸ್ನಾನ ಮಾಡಿದ ಪುಣ್ಯವು ಒಂದು ದಿನ ಬಾವಿಯ ನೀರಿನ ಸ್ನಾನ ಮಾಡುವದರಿಂದ ಲಭಿಸುವದು. ಹನ್ನೆರಡು ವರ್ಷ ಬಾವಿ, ಹೊಕ್ಕರಣಿ, ಹೊಂಡ ಮುಂತಾದವುಗಳಲ್ಲಿ ಸ್ನಾನ ಮಾಡಿದ ಪುಣ್ಯದ ಎರಡು ಪಟ್ಟು ಪುಣ್ಯವು ಮಾಘಮಾಸದಲ್ಲಿ ಸರೋವರದಲ್ಲಿ ಮೀಯುವದರಿಂದ ಬರುದದು. ಇದರ ನಾಲ್ಕು ಪಟ್ಟು ಪುಣ್ಯ ನದಿಯಲ್ಲಿ ಮಾಘ ಸ್ನಾನದಿಂದ, ಅದರ ನಾಲ್ಕು ಪಟ್ಟು ಪುಣ್ಯ ಮಹಾನದಿಗಳ ಸಂಗಮದಲ್ಲಿ ಸ್ನಾನ ಮಾಡುವದರಿಂದ, ಅದರ ಸಾವಿರ ಪಟ್ಟು ಪುಣ್ಯ ಮಾಘಮಾಸದಲ್ಲಿ ಗಂಗಾಸ್ನಾನ ಮಾಡುವದರಿಂದ. ಮಾಘದಲ್ಲಿ ಗಂಗೆಯಲ್ಲಿ ಮಿಂದವರು ಪ್ರತಿದಿನ ಸಾವಿರ ತೊಲೆ ಬಂಗಾರವನ್ನು ದಾನ ಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾರೆ. ಈ ಗಂಗಾಸ್ನಾನದ ಪುಣ್ಯದ ಸಾವಿರ ಪಟ್ಟು ಪುಣ್ಯವು ಗಂಗಾ-ಯಮುನಾ ಸಂಗಮದಲ್ಲಿ ಮಾಘ ಮಾಸದಲ್ಲಿ ಸ್ನಾನ ಮಾಡುವದರಿಂದ ಲಭಿಸುವದು.

ಪಾಪದ ಭಾರದಿಂದ ಕುಸಿಯುತ್ತಲಿರುವ ಪ್ರಜೆಗಳ ದುರಿತ ರಾಶಿಯನ್ನೆಲ್ಲ ಸುಟ್ಟುಹಾಕಲಿಕ್ಕಾಗಿಯೇ ಬ್ರಹ್ಮದೇವರು ಈ ಪ್ರಯಾಗ ಕ್ಷೇತ್ರವನ್ನೂ ಹಾಗೂ ಮಾಘಮಾಸವನ್ನೂ ನಿರ್ಮಾಣ ಮಾಡಿದ್ದಾರೆ.

ಈ ಮಾಘಮಾಸದಲ್ಲಿ ಬ್ರಹ್ಮ, ವಿಷ್ಣು, ರುದ್ರ ಮುಂತಾದ ದೇವತೆಗಳು ಈ ತ್ರಿವೇಣೀ ಸಂಗಮದಲ್ಲಿ ಸನ್ನಿಹಿತರಾಗಿರುತ್ತಾರೆ. ಲಕ್ಷ್ಮಿ, ಸರಸ್ವತಿ, ಪಾರ್ವತಿ, ಶಚಿ, ಅದಿತಿ, ಮೇನಾ ಮುಂತಾದ ಸುರಸ್ತ್ರೀಯರೂ ಪಿತೃಗಳು, ಋಷಿಗಳೂ ಮಾಘಮಾಸದಲ್ಲಿ ತ್ರಿವೇಣಿ ಸ್ನಾನಕ್ಕಾಗಿ ಈ ಪ್ರಯಾಗ ಕ್ಷೇತ್ರಕ್ಕೆ ಬರುತ್ತಾರೆ. ಪೂರ್ವಕಾಲದಲ್ಲಿ ಕಾಂಚನಮಾಲಿನಿಯು ಮೂರುದಿನ ತಾನು ಮಾಘಸ್ನಾನ ಮಾಡಿದ ಪುಣ್ಯವನ್ನು ನೀಡಿ ಓರ್ವ ರಾಕ್ಷಸನನ್ನು ಉದ್ಧರಿಸಿದಳು.

**ಕಾರ್ತವೀರ್ಯ:-** ಪೂಜ್ಯರೇ, ಯಾರು ಆ ರಾಕ್ಷಸ? ಕಾಂಚನಮಾಲಿನಿಯಾದರೂ ಯಾರು? ಅವಳು ಹೇಗೆ ತನ್ನ ಪುಣ್ಯವನ್ನು ರಾಕ್ಷಸನಿಗೆ ನೀಡಿದಳು? ಅವನಿಗೆ ಹೇಗೆ ಸದ್ಗತಿ ಉಂಟಾಯಿತು?

**ದತ್ತಾತ್ರೇಯ:-** ಪೂರ್ವಕಾಲದಲ್ಲಿ ಕಾಂಚನಮಾಲಿನಿಯೆಂಬ ಅಪ್ಸರೆಯು ರೂಪವತಿಯಾದ ರಮಣಿಯರಲ್ಲಿ ಸಾಕ್ಷಾತ್ ರತಿದೇವಿ ಎಂದು ಖ್ಯಾತಿ ಪಡೆದಿದ್ದಳು. ಅವಳು ಪರಮ ಹರಭಕ್ತಳು. ಒಂದು ಸಲ ಅವಳು ಪ್ರಯಾಗ ಕ್ಷೇತ್ರದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿ ಕೈಲಾಸ ಪರ್ವತಕ್ಕೆ ಹೊರಟಿದ್ದಳು. ದಾರಿಯಲ್ಲಿ ಬೆಟ್ಟದಂಥ ಬೃಹದಾಕಾರದ ರೂಪದಿಂದ ಒಂದು ಕಾಡಿನಲ್ಲಿಯ ಲತಾಕುಂಜದಲ್ಲಿ ಕುಳಿತುಕೊಂಡಿದ್ದ ಓರ್ವ ರಕ್ಕಸ. ಗಂಗಾ-ಯಮುನಾ ಸಂಗಮ ತೀರ್ಥದಲ್ಲಿ ಮಿಂದು ನೆನೆದ ಬಟ್ಟೆಯಿಂದಲೇ ಶಿವಮಂದಿರಕ್ಕೆ ಹೊರಟ ಆ ಸುಂದರಾಂಗಿಯ ಚೈಲಾಂಚನದಿಂದ ತೊಟ್ಟಿಕ್ಕುವ ಆ ನೀರಿನ ಹನಿಗಳು ಆ ರಾಕ್ಷಸನ ಮೇಲೆ ಬಿದ್ದವು. ಅವಳ ಬಟ್ಟೆಯಿಂದ ತೊಟ್ಟಿಕ್ಕಿದ ಜಲಬಿಂದುಗಳು ಆ ರಕ್ಕಸನ ಬೆಟ್ಟದಂಥ ದೇಹದ ಮೇಲೆ ಬಿದ್ದ ಕೂಡಲೇ ಆ ದೈತ್ಯನಲ್ಲಿ ಒಮ್ಮೆಲೇ ದೈವೀಭಾವವು ಉದಿಸಿತು. ಮನಸ್ಸೂ ಪ್ರಸನ್ನವಾಯಿತು. ಅವನು ಕೇಳಿದ - ''ಕಮಲಗಣ್ಣಿನಕಾಮಿನಿಯೋ, ನೀನು ಯಾರು? ಎಲ್ಲಿಂದ ಬಂದೆ? ನಿನ್ನ ಬಟ್ಟೆಯು ಏಕೆ ತೊಯ್ದಿದೆ? ನಿನ್ನ ಹೆರಳಿನಿಂದ ನೀರು ಹನಿಗಳು ಏಕೆ ಉದುರುತ್ತಿವೆ? ನಿನ್ನ ಬಟ್ಟೆಯ ನೀರು ನನ್ನ ತಲೆಯ ಮೇಲೆಬಿದ್ದ ಕೂಡಲೇ ನನ್ನ ರಾಕ್ಷಸ ಸಹಜವಾದ ಕ್ರೌರ್ಯವು ಕಳೆದಿದೆ. ಮನಸ್ಸಿನಲ್ಲಿ ಏನೋ ಒಂದು ನೆಮ್ಮದಿ ಉಂಟಾಗಿದೆ. ಇದು ಯಾವ ನೀರಿನ ಮಹಿಮೆ?''

**ಅಪ್ಸರೆ:-** ರಾಕ್ಷಸ, ನಾನು ಕಾಮರೂಪಿಣಿಯಾದ ಅಪ್ಸರೆ. ನನ್ನ ಹೆಸರು ಕಾಂಚನಮಾಲಿನಿ. ಪ್ರಯಾಗದ ತ್ರಿವೇಣೀ ಸಂಗಮದಲ್ಲಿ ಸ್ನಾನ ಮಾಡಿ ನಾನು ಕೈಲಾಸ ಪರ್ವತಕ್ಕೆ ಹೊರಟಿದ್ದೆ ಶಿವಾರ್ಚನೆಗಾಗಿ. ಆರ್ದ್ರ ವಸ್ತ್ರದಿಂದ ಹೊರಟ ನನ್ನ ಚೇಲಾಂಚನದ ಕತಿಪಯ ಬಿಂದುಗಳು ನಿನ್ನ ನಡುನೆತ್ತಿಯ ಮೇಲೆ ಬಿದ್ದುದರಿಂದ ನಿನ್ನ ರಾಕ್ಷಸೀಭಾವ ಕಳೆದುಹೋಗಿದೆ. ದೈವೀಭಾವ ಈಗ ನಿನ್ನಲ್ಲಿ ಜಾಗೃತವಾಗಿದೆ. ನಾನು ಸುಮೇಧ ಎಂಬ ಗಂಧರ್ವನ ಮಗಳಾಗಿ ಹುಟ್ಟಿ ಇಂಥ ದಿವ್ಯ ಸೌಂದರ್ಯವನ್ನು ಪಡೆಯಲು ಕಾರಣವನ್ನು ಹೇಳುತ್ತೇನೆ ಕೇಳು.

ಹಿಂದಿನ ಜನ್ಮದಲ್ಲಿ ನಾನೊಬ್ಬ ವೇಶ್ಯೆ. ನನ್ನ ಲಾವಣ್ಯ ಚೇತೋಹಾರಿ. ಕಾಂತಿ ಕಾಮನ ಕಾಮಿನಿಗಿಂತ ಕಮನೀಯ. ನಾನು ನನ್ನ ಚಲುವಿಕೆಯಿಂದ ಕಳಿಂಗ ದೇಶದ ರಾಜನ ಮನಸ್ಸನ್ನು ಸೂರೆಗೊಂಡೆ. ಆ ದೊರೆ ನನ್ನ ಸೌಂದರ್ಯದ ದಾಸಾನುದಾಸ. ಅದರಿಂದ ನನ್ನ ಮನದಲ್ಲಿ ಯಾವಾಗಲೂ ಗರ್ವ ಉಕ್ಕುತ್ತಲಿತ್ತು. ಆ ನಾಡಿನ ನವತರುಣರೆಲ್ಲರೂ ನನ್ನ ರೂಪಸಂಪತ್ತಿನಿಂದ ಮುಗ್ಧರಾಗಿ ನನ್ನ ಕಣ್ಣಿನ ಸಂಕೇತದಂತೆ ಕುಣಿಯುತ್ತಿದ್ದರು. ಆ ನನ್ನ ರೂಪರಾಶಿಯಿಂದ ನಾನು ಗಳಿಸಿದ ರತ್ನ, ಮುತ್ತು, ನಗನಾಣ್ಯಗಳು ಅಗಣ್ಯ. ಐಶ್ವರ್ಯ ಆಪಾರ. ನನ್ನ ಮೇಲಿನ ಸ್ಪರ್ಧೆಯಿಂದ ಹೊಡೆದಾಡಿ ಎಷ್ಟೋ ಯುವಕರು ಮರಣ ಹೊಂದಿದರು. ಹೀಗೆ ಎಲ್ಲರನ್ನು ವಂಚಿಸುತ್ತ ಹಾವಭಾವದಿಂದ ತರುಣ ಜನಾಂಗವನ್ನೇ ಮರಳುಗೊಳಿಸುತ್ತ ನಾನು ನನ್ನ ತಾರುಣ್ಯವನ್ನೆಲ್ಲ ಕಳೆದೆ. ಇಷ್ಟೆಲ್ಲ ಐಶ್ವರ್ಯಬಂದರೂ ನಾನು ಒಮ್ಮೆಯೂ ದೇವರನ್ನು ಪೂಜಿಸಲಿಲ್ಲ. ದಾನವನ್ನು ನೀಡಲಿಲ್ಲ. ಹೋಮಹವನ

ಮಾಡಿಸಲಿಲ್ಲ. ದುರ್ಗಾದೇವಿಯ ಪೂಜೆಯನ್ನು ಮಾಡಲಿಲ್ಲ. ಇದರಿಂದ ಮುಪ್ಪಿನ ಕಾಲದಲ್ಲಿ ನನಗೆ ಬಹಳೇ ಪಶ್ಚಾತ್ತಾಪವಾಯಿತು. ಪಾಪ ಕೃತ್ಯಗಳಿಗಾಗಿ ಬಹಳ ಮರುಗಿದೆ. ಕೃತಕರ್ಮಗಳಿಗಾಗಿ ದುಃಖಪಟ್ಟೆ.

ಕೊನೆಗೆ ವೇದಶಾಸ್ತ್ರ ವಿದ್ವಾಂಸನಾದ ರಾಜಪುರೋಹಿತನಿಗೆ ಶರಣುಹೋದೆ. ''ಪೂಜ್ಯರೇ, ನಾನು ಪಾಪದ ಕೆಸರಿನಲ್ಲಿಯೇ ಮುಳುಗಿಬಿಟ್ಟಿದ್ದೇನೆ. ಇದರಿಂದ ನನ್ನ ಉದ್ಧಾರ ಆಗುವ ಬಗೆ ಹೇಗೆ? ನೀವೇ ನನ್ನ ಮೇಲೆ ಕರುಣೆಯ ನೀರನ್ನು ಸಿಂಪಡಿಸಬೇಕು. ಸಜ್ಜನರ ಮೇಲೆ ಎಲ್ಲರೂ ದಯೆದೋರುತ್ತಾರೆ. ಆದರೆ ದುರ್ಜನರ ಮೇಲೆ ದಯಾದೃಷ್ಟಿಯನ್ನು ನೀಡಿದವರೇ ನಿಜವಾದ ಮಹಾತ್ಮರು'' ಎಂದು ಅಂಗಲಾಚಿ ಬೇಡಿಕೊಂಡಳು. ಆಗ ಆ ಪುಣ್ಯಪುರುಷರು ಕಣ್ಣು ತೆರೆದು ಅನುಗ್ರಹ ಪೂರ್ಣದೃಷ್ಟಿಯಿಂದ ನನ್ನನ್ನು ನೋಡಿ ನುಡಿದರು.

**ರಾಜಪುರೋಹಿತ:-** ಸುಂದರಿ, ನನಗೆ ನಿನ್ನ ಕರಾಳವಾದ ಕಾಮುಕ ಚರಿತ್ರೆಯೆಲ್ಲವೂ ಚೆನ್ನಾಗಿ ಗೊತ್ತು. ಅದಕ್ಕೆ ಬೇರೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಈಗ ನಿನಗೆ ಉಳಿದಿರುವ ಉಪಾಯ ಒಂದೇ. ನೀನು ಪ್ರಯಾಗ ಕ್ಷೇತ್ರಕ್ಕೆ ಹೋಗು. ಅಲ್ಲಿ ಮಾಘ ಮಾಸದಲ್ಲಿ ಗಂಗಾ-ಯಮುನಾ ಸಂಗಮ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡು. ಅದರಿಂದ ನಿನ್ನ ಪಾಪಗಳೆಲ್ಲವೂ ಸುಟ್ಟು ಹೋಗುವವು ನಿನಗೆ ಮುಂದೆ ಸ್ವರ್ಗಲೋಕ ಪ್ರಾಪ್ತಿ ನಿಶ್ಚಿತವಾಗಿಯೂ ಆಗುವದು.

ಪೂರ್ವಕಾಲದಲ್ಲಿ ದೇವೇಂದ್ರನು ಗೌತಮ ಪತ್ನಿಯಾದ ಅಹಲ್ಯೆಯ ಸಹವಾಸದಿಂದ ಗೌತಮರ ಶಾಪಕ್ಕೆ ಈಡಾದ. ದೇಹದ ತುಂಬ ಅವನಿಗೆ ಸಾವಿರಾರು ಭಗಚಿನ್ಹೆಗಳು ಉಂಟಾದವು. ಆದ್ದರಿಂದ ಜನರಿಗೆ ಮುಖತೋರಲೂ ನಾಚಿಕೆ. ಕೊನೆಗೆ ಅವನು ಮೇರು ಪರ್ವತದ ಶೃಂಗಾಂಗಣದಲ್ಲಿ ಇದ್ದ ನೂರು ಯೋಜನ ವಿಸ್ತಾರವಾದ ಒಂದು ಸರೋವರದ ಒಂದು ಕಮಲಪುಷ್ಪದ ದೇಟಿನ ಬುಡದಲ್ಲಿ ಅಡಗಿ ಕುಳಿತ. ಇಂದ್ರನನ್ನು ಕಾಣದೇ ಹೌಹಾರಿದ ಶಚೀದೇವಿಯೂ ಉಳಿದ ದೇವತೆಗಳೂ ಆ ಸರೋವರದ ದಂಡೆಗೆ ಬಂದರು. ದೇವೇಂದ್ರನನ್ನು ಹೊರಗೆ ಬಾ ಎಂದು ಬೃಹಸ್ಪತ್ಯಾಚಾರ್ಯರು ಕರೆಕೊಟ್ಟು ಆಮಂತ್ರಿಸಿದರು.

ಆಗ ದೇವೇಂದ್ರನು ಹೊರಬಂದು ಈ ತನ್ನ ದೈಹಿಕವಾದ ವೈರೂಪ್ಯದ ಪರಿಹಾರಕ್ಕೆ ಮಾರ್ಗ ಯಾವದು? ಎಂದು ಕೇಳಿದ. ಅದಕ್ಕೆ ಬೃಹಸ್ಪತ್ಯಾಚಾರ್ಯರು ಪ್ರಯಾಗ ಸ್ನಾನವನ್ನು ಮಾಘಮಾಸದಲ್ಲಿ ಮಾಡು ಎಂದು ಆದೇಶವಿತ್ತರು. ಗುರುಗಳ ಆದೇಶವನ್ನು ತಲೆಯ ಮೇಲೆ ಹೊತ್ತು ಆ ಸುರರಾಜ ಬಂದ ಗಂಗಾ-ಯಮುನಾ ಸಂಗಮ ತೀರ್ಥಕ್ಕೆ. ಆ ಪುಣ್ಯೋದಕದಲ್ಲಿ ಭಕ್ತಿಯಿಂದ ಮಿಂದ. ಅದರಿಂದ ಕೂಡಲೇ ಅವನ ಮೈತುಂಬ ಲಾಂಛಿತವಾದ ಸಹಸ್ರ ಭಗಚಿಹ್ನಗಳು ಮಾಯವಾಗಿ ಸಾವಿರ ತಾವರೆಗಣ್ಣುಗಳು ಅರಳಿನಿಂತವು. ಎಲ್ಲ ದೇವತೆಗಳೂ ಋಷಿಗಳೂ ದೇವೇಂದ್ರನನ್ನು ಹೊಗಳಿ ಹಾಡಿದರು. ದೇವೇಂದ್ರನು ಪ್ರಯಾಗ ಕ್ಷೇತ್ರವನ್ನು ಹೊಗಳಿ ಹಾಡಿದ. ಬೃಹಸ್ಪತ್ಯಾಚಾರ್ಯರು ಮಾಘಮಾಸವನ್ನು ಹಾಡಿಹೊಗಳಿದರು.

ಆದುದರಿಂದ ಶುಭಾಂಗಿಯೇ, ನೀನು ಕೂಡ ಪ್ರಯಾಗಕ್ಕೆ ಹೋಗು. ಅಲ್ಲಿ ಗಂಗಾ ಯಮುನಾ ಸಂಗಮದಲ್ಲಿ ಸ್ನಾನಮಾಡು. ಅದರಿಂದ ನಿನ್ನ ಪಾಪ ಪರಿಹಾರವಾಗುತ್ತದೆ.

ರಾಜಪುರೋಹಿತರ ಈ ಆದೇಶದಂತೆ ಮನೆ, ಮಾರು, ಬಂಧು, ಬಳಗ, ಐಶ್ವರ್ಯ, ದಾಸದಾಸಿಯರು ಎಲ್ಲವನ್ನೂ ತೊರೆದು ಪ್ರಯಾಗ ಕ್ಷೇತ್ರಕ್ಕೆ ಧಾವಿಸಿದೆ. ಪಶ್ಚಾತ್ತಾಪದಗ್ಧಳಾಗಿ ಆ ಸಂಗಮ ತೀರ್ಥದಲ್ಲಿ ಸ್ನಾನಮಾಡಿದೆ. ಮೂರೇ ಮೂರು ದಿನಗಳಲ್ಲಿ ನನ್ನ ಸಂಚಿತವಾದ ಪಾಪರಾಶಿಯೆಲ್ಲವೂ ಭಸ್ಮವಾಗಿ ಹೋಯಿತು. ಮುಂದೆ ಇಪ್ಪತ್ತೇಳು ದಿನ ನಾನು ತಪ್ಪದೇ ಆ ಪ್ರಯಾಗ ತೀರ್ಥದ ಪುಣ್ಯೋದಕದಲ್ಲಿ ಮುಳುಗಿದೆ. ಆ ಪುಣ್ಯದಿಂದ ನಾನು ಇಂಥ ದಿವ್ಯ ದೇಹವನ್ನು ಹೊಂದಿ ದೇವತಾ ಕುಲದಲ್ಲಿ ಜನಿಸಿ ಬಂದಿದ್ದೇನೆ. ಪಾರ್ವತಿ ನನ್ನ ಪ್ರೀತಿಯ ಗೆಳತಿ. ಈ ಪ್ರಯಾಗ ಸ್ನಾನದ ಮಹಿಮೆಯಿಂದ ಜನ್ಮಾಂತರದ ನೆನಪು ಮಾಸಿಲ್ಲ. ನಾನು ಈಗಲೂ ಪ್ರತಿವರ್ಷ ಮಾಘಮಾಸದಲ್ಲಿ ಒಂದು ತಿಂಗಳ ಕಾಲ ಪ್ರಯಾಗ ಸ್ನಾನವನ್ನು ತಪ್ಪಿಸುವದಿಲ್ಲ. ಪ್ರತಿದಿನವೂ ಪ್ರಾತಃಸ್ನಾನ ಮಾಡಿ ಕೈಲಾಸಕ್ಕೆ ಹೋಗಿ ಶಿವನನ್ನು ಪೂಜಿಸಿ ಬರುತ್ತೇನೆ. ಇಂದು ನಾನು ಸ್ನಾನಮಾಡಿ ಕೈಲಾಸಕ್ಕೆ ಹೋಗುವಾಗ ನನ್ನ ತೊಯ್ದು ಬಟ್ಟೆಯ ತುದಿಯಿಂದ ತೊಟ್ಟಿಕ್ಕಿದ ತೋಯ ಬಿಂದುಗಳು ನಿನ್ನ ತಲೆಯ ಮೇಲೆ ಬಿದ್ದುದರಿಂದ ನಿನ್ನ ರಾಕ್ಷಸಭಾವವು ತೊಲಗಿ ಹೋಯಿತು. ರಾಕ್ಷಸ ನೀನು ಕೇಳಿದ್ದರಿಂದ ನಾನು ನನ್ನ ಚರಿತ್ರೆಯನ್ನೆಲ್ಲ ನಿನಗೆ ಹೇಳಿದೆ. ಇನ್ನು ನಿನ್ನ ಕಥೆಯನ್ನೆಲ್ಲ ನನಗೆ ನಿರೂಪಿಸು. ಇಂಥ ಕ್ರೂರ ಹಾಗೂ ವಿಕಾರ ಮುಖದ ಅಸಹ್ಯ ರಾಕ್ಷಸ ಯೋನಿಯು ನಿನಗೆ ಬರಲು ಏನು ಕಾರಣ?

**ರಾಕ್ಷಸ:-** ಸುಂದರಿ, ನಾನು ಹಿಂದೆ ಕಾಶೀ ಪಟ್ಟಣದಲ್ಲಿ ವೇದ ವೇದಾಂತ ಪಾರಂಗತನಾದ ಋಗ್ವೇದಿ ಬ್ರಾಹ್ಮಣನಾಗಿದ್ದೆ. ನಾನು ಹುಟ್ಟಿದ್ದು ದೊಡ್ಡ ಕುಲ. ಓದಿದ್ದು ಸರ್ವ ಶಾಸ್ತ್ರಭಂಡಾರ ಆದರೆ ದುಡ್ಡಿನ ದಾಹ ನನಗೆ ಪಿಶಾಚಿಯಂತೆ ಆಗಲೇ ಬೆನ್ನು ಹತ್ತಿತ್ತು. ದ್ರವ್ಯದ ಲೋಭದಿಂದ ನಾನು ಆ ಕಾಶೀಪಟ್ಟಣಕ್ಕೆ ಬರುವ ಎಲ್ಲ ಪಾಪಿಗಳಿಂದಲೂ ಹಣವನ್ನು ಸೆಳೆಯುತ್ತಿದ್ದೆ. ಅದರೊಡನೆ ಎಲ್ಲ ಪಾಪಿಗಳ ಪಾಪವನ್ನೂ ಎಳೆಯುತ್ತಿದ್ದೆ. ಆ ನಗರದ ಹಿರಿಯರು ನನಗೆ ಬಗೆಬಗೆಯಿಂದ ಬುದ್ಧಿ ಹೇಳಿದರು. ಛೀ ಮಾಡಿದರು. ಆದರೂ ಆಸೆಯ ಬೆನ್ನು ಹತ್ತಿದ ನಾನು ಯಾರ ಮಾತನ್ನೂ ಕೇಳದೇ ದ್ರವ್ಯ ಸಂಗ್ರಹವನ್ನು ಮಾಡುತ್ತಲೇ ಇದ್ದೆ. ವಿಪ್ರ, ವೈಶ್ಯ, ಚಂಡಾಲ, ರಂಡಾಗರ್ಭಿ, ಕುಡಕ, ಕೊಲೆಗಡುಕ ಯಾರನ್ನೂ ನಾನು ಬಿಡಲಿಲ್ಲ ಹಣ ಕಿತ್ತಿದ್ದೇ ಕಿತ್ತಿದ್ದು. ಇದರಂತೆ ನಾನು ಇನ್ನೂ ಅನೇಕಾನೇಕ ಪಾಪಕೃತ್ಯಗಳನ್ನು ಮಾಡುತ್ತಲೇ ಕಾಲ ಕಳೆದೆ. ಒಟ್ಟಾರೆ ಆ ಜನ್ಮದಲ್ಲಿ ನಾನು ಮಾಡದೇ ಇರುವ ಪಾಪ ಕಾರ್ಯವೇ ಇಲ್ಲ.

ಹೀಗೆ ಅನ್ಯಾಯ ಮೋಸ ವಂಚನೆ ಕಪಟ ಕಳವು ವ್ಯಭಿಚಾರ ಮುಂತಾದ ಘೋರಪಾತಕಗಳನ್ನು ಅನುಷ್ಠಾನಗೈಯುತ್ತಲೇ ನಾನು ಆ ಜನ್ಮ ನೀಗಿದೆ. ಕಾಶೀಮರಣದ ಪ್ರಭಾವದದಿಂದ ನಾನು ನರಕಕ್ಕೆ ಮಾತ್ರ ಹೋಗಲಿಲ್ಲ. ಆದರೆ ಹಿಂದಿನ ಜನ್ಮದ ಅಸಂಖ್ಯ ಪಾಪಾಚಾರಗಳ ಫಲವಾಗಿ ನಾನು ಎರಡು ಸಲ ಗಿಡುಗನಾಗಿ ಮೂರು ಸಲ ಹುಲಿಯಾಗಿ, ಎರಡು ಬಾರಿ ಹಾವು, ಒಮ್ಮೆ ಗೂಗೆ, ಒಮ್ಮೆ ಹಂದಿಯಾಗಿ ಜನಿಸಿ ಹತ್ತನೇ ಜನ್ಮದಲ್ಲಿ ನಾನು ರಾಕ್ಷಸನಾಗಿ ಜನಿಸಿದೆ. ಇದೇ ನನ್ನ ಹತ್ತನೆಯ ರಕ್ಕಸ ಜನ್ಮ. ನಾನು ರಾಕ್ಷಸ ಜನ್ಮ ತಾಳಿದ ಬಳಿಕ ಈಗ ಒಂದುಸಾವಿರ ವರ್ಷಗಳು ಕಳೆದಿವೆ. ನಾನಿದ್ದ ಈ ವನ ಮೊದಲು ಬಗೆಬಗೆಯ ಹೂ ಬಳ್ಳಿ ಮರಕಂಟಿ ಕುಸುಮ ಕುಂಜಗಳಿಂದಲೂ, ಪಶುಪಕ್ಷಿ ಖಗಮೃಗ ಪ್ರಾಣಿ

ಗಳಿಂದಲೂ ಒಂದು ಮಹಾಉಪವನದಂತೆ ಶೋಭಿಸುತ್ತಿತ್ತು. ನಾನು ಇಲ್ಲಿ ಪ್ರವೇಶಿಸಿದ ಬಳಿಕ ಇಲ್ಲಿಯ ಪಶು, ಮೃಗ, ಖಗಗಳನ್ನೆಲ್ಲ ಕೊಂದು ಲತಾ ವೃಕ್ಷಗಳನ್ನು ಹಾಳುಗೆಡವಿ, ಇದರ ಸುತ್ತಲಿನ ಮೂರು ಯೋಜನ ಪ್ರದೇಶವನ್ನೆಲ್ಲ ನಾನು ಬೆಂಗಾಡಾಗಿ ಮಾಡಿಬಿಟ್ಟಿದ್ದೇನೆ. ನಿರಪರಾಧಿಗಳಾದ ಮಾನವರನ್ನೂ ಪಶುಪಕ್ಷಿಗಳನ್ನೂ ನಾನು ವಿನಾಕಾರಣ ಕೊಂದು ತಿಂದೆ. ಈ ನನ್ನ ಘೋರ ಪಾಪ ಕೂಪದಿಂದ ನನಗೆ ಉದ್ಧಾರವೇ ಇದ್ದಂತಿಲ್ಲ. ಮನಸ್ಸಿಗೆ ಶಾಂತಿಯಂತೂ ಇಲ್ಲವೇಇಲ್ಲ.

ಆದರೆ ಇಂದು ಮಾತ್ರ ನಿನ್ನನ್ನು ಕಂಡ ಬಳಿಕ ನನ್ನ ಮನಸ್ಸಿಗೆ ಅಪೂರ್ವ ಶಾಂತಿ ಉಂಟಾಗಿದೆ. ನಿನ್ನ ದರ್ಶನದ ಸುಧಾಸಿಂಚನದಿಂದ ನನ್ನ ಅಂತರಂಗವು ತಂಪಿನ ತಾಣವಾಗಿದೆ.

"ತೀರ್ಥಂ ಫಲತಿ ಕಾಲೇನ ಸದ್ಯಃ ಸಾಧು ಸಮಾಗಮಃ"

ತೀರ್ಥಗಳು ಕಾಲಾಂತರದಿಂದ ಫಲಕೊಡುತ್ತವೆ. ಆದರೆ ಸಜ್ಜನರ ಸಮಾಗಮವು ಆಗಲೇ ಕೂಡಲೇ ಫಲವನ್ನು ನೀಡುವದು. ನಿನ್ನ ದರ್ಶನದ ಕ್ಷಣದಲ್ಲಿಯೇ ನನ್ನ ಹೃದಯಕ್ಕೆ ಶಾಂತಿಯ ಅಮೃತ ಸೇಚನವಾಗಿದೆ. ಆದುದರಿಂದ ನನ್ನ ಉದ್ಧಾರವಾಗಲಿಕ್ಕೆ ಏನು ಮಾಡಬೇಕು ಎಂಬುದನ್ನು ನೀನೇ ಯೋಚಿಸಿ ಮಾಡು.

**ಕಾಂಚನ ಮಾಲಿನಿ:-** ರಾಕ್ಷಸ, ಭಯಪಡಬೇಡ. ನಿನ್ನ ಉದ್ಧಾರಕ್ಕಾಗಿ ನಾನು ಪ್ರಯತ್ನ ಮಾಡುತ್ತೇನೆಂದು ಈಗಲೇ ಪ್ರತಿಜ್ಞೆ ತೊಟ್ಟಿದ್ದೇನೆ. ಬ್ರಹ್ಮಕ್ಷೇತ್ರ ಎಂದು ಹೆಸರಾದ ಪ್ರಯಾಗದಲ್ಲಿ ನಾನು ಈ ಮೊದಲು ಅನೇಕಾನೇಕ ವರ್ಷ ಮಾಘಸ್ನಾನವನ್ನು ಶ್ರದ್ಧೆಯಿಂದ ಮಾಡಿದ್ದೇನೆ. ಆ ಪುಣ್ಯವನ್ನು ನಾನು ನಿನಗೆ ಈಗ ನಿನ್ನ ಉದ್ಧಾರ್ಕಕಾಗಿ ನೀಡುತ್ತೇನೆ. ನಿನ್ನಂಥ ಆರ್ತ ದೀನರಿಗೆ ಕೊಟ್ಟರೆ ಮಾತ್ರ ಪುಣ್ಯಕ್ಕೆ ಸಾರ್ಥಕ್ಯ. ಸಮುದ್ರದಲ್ಲಿ ಮೋಡ ಮಳೆ ಸುರಿದರೆ ಏನು ಫಲ? ಬಿರಿದುನಿಂತ ಭೂಮಿಯ ಹೊಲದೊಡಲಲ್ಲಿ ಮಳೆಗರೆದರೆ ಭೂದೇವಿ ಸುಜಲಾ ಸುಫಲಾ ಆಗಿ ಕಂಗೊಳಿಸುವಳು.

ಹೀಗೆ ನುಡಿದು ಆ ಕಾಂಚನಮಾಲಿನಿಯು ಸಂಗಮ ತೀರ್ಥದಲ್ಲಿ ತೊಯ್ದ ತನ್ನ ಬಟ್ಟೆಯನ್ನು ಹಿಂಡಿ ಆ ನೀರಿನಿಂದ ರಾಕ್ಷಸನಿಗೆ ತನ್ನ ಮಾಘಸ್ನಾನದ ಪುಣ್ಯವನ್ನು ಸಂಕಲ್ಪ ಪೂರ್ವಕವಾಗಿ ದಾನ ನೀಡಿದಳು.

ಕೂಡಲೇ ಆ ರಕ್ಕಸನ ರಾಕ್ಷಸದೇಹ ಅಳಿದು ದಿವ್ಯ ದೇಹ ಬಂದಿತು. ಸೂರ್ಯನಂತೆ ತೇಜಃಪುಂಜನಾದ ದೇವತಾದೇಹದಿಂದ ಅವನು ಕಂಗೊಳಿಸತೊಡಗಿದ. ಅವನನ್ನು ಕರೆಯಲಿಕ್ಕೆ ದೇವಲೋಕದಿಂದ ಸುರವಿಮಾನ ಬಂದಿತು. ದೇವದೂತರು ದಿವ್ಯ ಶರೀರ ತಳೆದು ದೇವತಾ ಪುರುಷನಾಗಿ ದೇದೀಪ್ಯಮಾನನಾದ ಆ ರಾಕ್ಷಸನಿಗೆ ವಿಮಾನವನ್ನು ಆರೋಹಣ ಮಾಡಬೇಕೆಂದು ಕೇಳಿಕೊಂಡರು. ಆಗ ದಿವ್ಯ ದೇಹಧಾರಿಯಾದ ಆ ರಾಕ್ಷಸನು ಕಾಂಚನಮಾಲಿನಿಯ ಬಳಿಗೆ ಬಂದು ಕೃತಜ್ಞತೆಯನ್ನು ಸೂಚಿಸಿ ಅವಳ ಅಭಿನಂದನೆಗೈದು ಹೇಳಿದ.

**ದಿವ್ಯಪುರುಷ:-** ಕಲ್ಯಾಣಿ, ನಾನು ನಿನ್ನ ಉಪಕಾರವನ್ನು ಎಂದಿಗೂ ಮರೆಯಲಾರೆ. ನನ್ನ ಮನಸ್ಸು ಮುಂದಾದರೂ ಎಂದೂ ದುರ್ಮಾರ್ಗದಲ್ಲಿ ಪ್ರವೃತ್ತವಾಗದಂತೆ ಉಪದೇಶವನ್ನು ನೀಡು. ನಿನ್ನಿಂದ ನೀತಿ ಧರ್ಮಪ್ರಧಾನವಾದ ಹಿತೋಕ್ತಿಯ ಸಮುಪದೇಶವನ್ನು ಕೇಳಿದ ಬಳಿಕವೇ ನಾನು ಸ್ವರ್ಗಕ್ಕೆ ಹೋಗುತ್ತೇನೆ.

ಕಾಂಚನ ಮಾಲಿನೀ:-

ಧರ್ಮಂ ಭಜಸ್ವ ಸತತಂ ತ್ಯಜ ಭೂತಹಿಂಸಾಂ ।
ಸೇವಸ್ವ ಸಾಧು ಪುರುಷಾನ್ ಜಹಿ ಕಾಮ ಶತ್ರುಮ್ ॥

ಅನ್ಯಸ್ಯ ದೋಷಗುಣಕೀರ್ತನ ಮಾಶು ಹಿತ್ವಾ ।
ಸತ್ಯಂ ವದಾರ್ಚಯ ಹರಿಂ ವ್ರಜ ದೇವಲೋಕಮ್ ॥

ದೇಹೇಸ್ಥಿ ಮಾಂಸರುಚಿರೇ ಸ್ವಮತಿಂ ತ್ಯಜ ತ್ವಂ ।
ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।
ಪಶ್ಯಾನಿಶಂ ಜಗದಿದಂ ಕ್ಷಣಭಂಗುರಂ ಹಿ ॥
ವೈರಾಗ್ಯ ಭಾಗ್ಯ ರಸಿಕೋ ಭವಯೋಗ ನಿಷ್ಠಃ ।

ನೀನು ಯಾವಾಗಲೂ ಧರ್ಮ ಮಾರ್ಗವನ್ನೇ ಅನುಸರಿಸು. ಪ್ರಾಣಿ ಹಿಂಸೆಯನ್ನು ಸರ್ವಥಾ ಮಾಡಬೇಡ. ಸಜ್ಜನರ ಸೇವೆ ಮಾಡು. ಕಾಮ ಎಂಬ ವೈರಿಯನ್ನು ಗೆಲ್ಲು. ಇನ್ನೊಬ್ಬರ ಗುಣದೋಷಗಳನ್ನು ಹೇಳಬೇಡ. ಸತ್ಯವನ್ನು ನುಡಿ. ಶ್ರೀಹರಿಯನ್ನು ಪೂಜಿಸು. ಸದ್ಗತಿಯನ್ನು ಹೊಂದು. ಮಾಂಸ ಮೂಳೆಗಳಿಂದ ನಿರ್ಮಿತವಾದ ಈ ದೇಹವೇ ನಾನು ಎಂಬ ಬುದ್ಧಿಯನ್ನು ಬಿಡು. ಮಡದಿ ಮಕ್ಕಳಲ್ಲಿ ಮಮತ್ವ ಬುದ್ಧಿಯನ್ನು ತ್ಯಜಿಸು. ಈ ಜಗತ್ತೆಲ್ಲವೂ ಕ್ಷಣ ಭಂಗುರ ಎಂದು ತಿಳಿ. ವೈರಾಗ್ಯದ ಸವಿಯನ್ನು ಅನುಭವಿಸುವ ರಸಿಕನಾಗು. ಯೋಗನಿಷ್ಠನಾಗಿ ಶ್ರೀಹರಿಯನ್ನು ಆರಾಧಿಸು.

ಕಾಂಚನ ಮಾಲಿನಿಯ ಈ ಉಪದೇಶವನ್ನು ಕೇಳಿ ಕೃತಾರ್ಥನಾದ ರಾಕ್ಷಸನು ಅವಳನ್ನು ಮತ್ತೆ ವಂದಿಸಿ ವಿಮಾನಾರೂಢನಾಗಿ ಸ್ವರ್ಗಕ್ಕೆ ತೆರಳಿದ. ಆಗ ಗಂಧರ್ವ ಕನ್ಯೆಯರು ಪುಷ್ಪ ವೃಷ್ಟಿಗೈದು ಕಾಂಚನ ಮಾಲಿನಿಯನ್ನು ಆಲಿಂಗಿಸಿಗೊಂಡು ರಾಕ್ಷಸನನ್ನು ಉದ್ಧರಿಸಿದ ಅವಳ ಪುಣ್ಯಕಾರ್ಯವನ್ನು ಪ್ರಶಂಸಿಸಿದರು. ಅನಂತರ ಕಾಂಚನ ಮಾಲಿನಿಯು ಅಲ್ಲಿಂದ ಕೈಲಾಸ ಪರ್ವತಕ್ಕೆ ತೆರಳಿದಳು ಶಿವಾರ್ಚನೆಗಾಗಿ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಮಾಘ ಸ್ನಾನದ ವಿಧಿ ವರ್ಣನೆ ಎಂಬ ನೂರ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*



**ವಶಿಷ್ಠ:-** ದತ್ತಾತ್ರೇಯನು ಹೇಳಿದ ಮಾಘ ಮಾಹಾತ್ಮ್ಯವನ್ನು ಈ ವರೆಗೆ ನಾನು ನಿಮಗಾಗಿ ಹೇಳಿದೆ. ಈಗ ಮಾಘಸ್ನಾನದ ಫಲವನ್ನು ಹೇಳುತ್ತೇನೆ ಕೇಳು. ಮಾಘಸ್ನಾನವು ಎಲ್ಲ ಯಜ್ಞ ದಾನ ತಪೋವ್ರತಗಳ ಪುಣ್ಯವನ್ನು ಸ್ನಾನಮಾಡಿದವರಿಗೆ ನೀಡುವದು. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತೇನೆ.

ಹಿಂದೆ ಸುಖಸಂಗೀತ ಎಂಬ ಗಂಧರ್ವನಿಗೆ ಪ್ರಮೋದಿನೀ ಎಂಬ ಕನ್ಯೆ ಇದ್ದಳು. ಸುಶೀಲ ಗಂಧರ್ವನ ಮಗಳು ಸುಶೀಲೆ. ಸುಸ್ವರೆಯು ಸ್ವರವೇದಿ ಗಂಧರ್ವನ ಕುವರಿ. ಚಂದ್ರಕಾಂತನ ಮಗಳೇ ಸುತಾರೆ. ಸುಪ್ರಭ ಗಂಧರ್ವನಿಗೆ ಚಂದ್ರಿಕಾ ಎಂಬ ಕನ್ಯಾಮಣಿ ಇದ್ದಳು. ಈ ಐವರೂ ಗಂಧರ್ವಕನ್ಯೆಯರೂ ಚಂದ್ರ ಮಂಡಲದಿಂದ ಚಿಮ್ಮಿ ಬಂದವರಂತೆ, ಮಿಂಚಿನ ಗೊಂಚಲಗಳಿಂದಲೇ ಮೂಡಿ ಮಿನುಗಿದಂತೆ ಚೆಲ್ವಿಕೆಯ ಚಾರು ಪ್ರತೀಕಗಳಾಗಿ ಕಂಗೊಳಿಸುತ್ತಿದ್ದರು.

ಒಂದು ಸಮಯದಲ್ಲಿ ಬೆಟ್ಟ ಬಯಲುಗಳಲ್ಲೆಲ್ಲ ವಸಂತಾವತಾರ. ಗಿಡಬಳ್ಳಿಗಳಲ್ಲೆಲ್ಲ ಚಿಗಿತ ಚಿಗುರು. ಲತಾಕುಂಜ ನಿಕುಂಜಗಳ ಮೇಲೆಲ್ಲ ಹೂವಿನ ಹೊಗರು. ಕಾತಹೂತ ಕಾನನದ ಕಾವಣದ ತುಂಬ ಕಂಪು. ಮಧುಮಾಸದ ಈ ಮನೋಹರ ಸನ್ನಿವೇಶದಲ್ಲಿ ಗಂಧರ್ವ ಕುಲದ ಆ ಐವರೂ ಕನ್ನೆಯರೂ ಹೂ ಕೊಯ್ಯಲಿಕ್ಕಾಗಿ ವನಾಂತ ಪ್ರದೇಶಕ್ಕೆ ಆಟವಾಡುತ್ತ ಬಂದರು. ಪ್ರಾಯ ಸೂಸುವ ಆ ಪಂಚ ಪ್ರಮದಾಮಣಿಗಳೂ ಅಲ್ಲಿಯ ಹೂವಿನ ಸುಗ್ಗಿಯನ್ನು ಕಂಡು ಹಿಗ್ಗಿ ಆ ಸುಮಸಾಮ್ರಾಜ್ಯದಲ್ಲಿ ನುಗ್ಗಿದರು. ಮಧುರ ಕಂಠದಿಂದ ಕೋಗಿಲೆಯಂತೆ ಕುಕಿಲಿದರು. ನವಿಲಿನಂತೆ ಕುಣಿದರು. ಗಿಳಿಯಂತೆ ಉಲಿದರು. ಜೇನುಂಡ ದುಂಬಿಗಳಂತೆ ಗೀತಗುಂಜಾರವಗೈಯುತ್ತ ನಾಟ್ಯವಾಡಿದರು, ತಂಬೂರಿ ಮೀಟಿದರು, ತಬಲ ನುಡಿಸಿದರು, ಕೊಳಲುಬಾರಿಸಿದರು, ಹಾಡಿ ಪಾಡಿ ಕುಣಿದು ಕುಪ್ಪಳಿಸುತ್ತ ವನವನ ತಿರುಗಿದರು. ಹೂಗಳನ್ನು ಆಯ್ದರು, ಮೊಗ್ಗೆಗಳನ್ನು ಕೊಯ್ದರು. ಅನಂತರ ಅಚ್ಛೋದ ಸರೋವರಕ್ಕೆ ಬಂದರು, ಆ ತಿಳಿನೀರಲ್ಲಿ ಮಿಂದರು. ಅಲ್ಲಿಯ ಪುಲಿನ ಪೀಠದಲ್ಲಿ ಕುಳಿತು ಮಳಲಿನಿಂದಲೇ ಒಂದು ಪಿಂಡಿಕೆ ಮಾಡಿ ಅದರಲ್ಲಿ ಉಸುಕಿನಿಂದಲೇ ಗೌರಿಯ ಒಂದು ಪ್ರತಿಮೆಮಾಡಿ ಕೂಡಿಸಿ, ಅರಿಷಿಣ ಕುಂಕುಮ ಚಂದನ ಹೂ ಮೊಗ್ಗೆಮಾಲೆಗಳಿಂದ ಗೌರೀಪೂಜೆಯನ್ನು ಮಾಡಿದರು. ಅನಂತರ ಗೌರಿಯ ಗುಣಗಾನದ ಗುಂಗಿನಲ್ಲಿ ಇಂಚರ ಬಂಚರ ನಾದಲಹರಿಗಳ ಗಿರಡಿ-ಗಾರುಡಿಯ ತಾನ ವಿತಾನ ಹೊರಡಿಸುತ್ತ ಸಂಗೀತ ಸೇವೆಯನ್ನು ಸಲ್ಲಿಸಿದರು. ನರ್ತನ ಸೇವೆಯನ್ನೂ ಅರ್ಪಿಸಿದರು.

ಹೀಗೆ ಆ ಪಂಚಕನ್ನೆಯರೂ ಗೌರೀದೇವಿಗೆ ಗೀತಾರಾಧನೆ ಕಾವ್ಯಾರಾಧನೆ ನಾಟ್ಯಾರಾಧನೆಗಳನ್ನು ಸಲ್ಲಿಸುತ್ತಿರುವಾಗಲೇ ಅಲ್ಲಿಗೆ ವೇದನಿಧಿ ಮಹರ್ಷಿಗಳ ಮಗನಾದ ಸುತಪ ಎಂಬ ತರುಣ ತಪಸ್ವಿಕುಮಾರನು ಆಗಮಿಸಿದ.

ಕಮನೀಯನೂ ರಾಮನಂತೆ ರಮಣೀಯನೂ ಆದ ರೂಪಸಿರಿಯನ್ನು ಕಂಡು ಅವರು ಕಾಮಮೋಹಿತರಾದರು. ತಮ್ಮ ಬಗೆಬಗೆಯ ಬಿಂಕಬಿನ್ನಾಣ ಹಾವಭಾವ ವಿಲಾಸ ವಿಭ್ರಮ ಗಳಿಂದ ಅವನನ್ನು ಒಲಿಸಿ ನಲಿಸಿ ಮರುಳುಗೊಳಿಸಬೇಕೆಂದು ಶತಪ್ರಯತ್ನ ಮಾಡಿದರು.

ಅದನ್ನು ಕಂಡು ಜಿತೇಂದ್ರಿಯನಾದ ಆ ಸುತಪ ಮಹರ್ಷಿಯು ಹೆಣ್ಣಿನ ಕಡೆಗಣ್ಣಿನ ಅಂಬುಗಳಿಗೆ ಇಂಬುಗೊಡುವದು ಸರಿಯಲ್ಲವೆಂದು ಯೋಚಿಸಿ ಅವರು ತನ್ನ ಸಮೀಪಕ್ಕೆ ಬರುವದಕ್ಕಿಂತ ಮೊದಲೇ ಅದೃಶ್ಯನಾಗಿ ಬಿಟ್ಟ.

ಅದನ್ನು ಕಂಡು ನಿರಾಶರಾದ ಆ ನಾರೀಮಣಿಗಳು ಅವನ ವಿರಹದಿಂದ ವಿಹ್ವಲಚಿತ್ತರಾಗಿ ಮನೆಗೆ ಮರಳಿದರು. ಅಂದಿನ ಇಡೀ ಹಗಲು ರಾತ್ರಿ ವಿರಹವ್ಯಾಕುಲತೆಯಲ್ಲಿ ಬೆಂದು ಕಾಮಾತುರರಾಗಿ ಪರಿತಪಿಸಿ ಮರುದಿನ ಮತ್ತೆ ಅದೇ ಅಚ್ಛೋದ ಸರೋವರಕ್ಕೆ ಮೀಯಲಿಕ್ಕೆ ಬಂದರು. ಆ ತಾಪಸಕುವರನೂ ಸ್ನಾನಕ್ಕೆಂದು ಬಂದಿದ್ದ. ಅವನನ್ನು ಕಂಡ ಕೂಡಲೇ ಕಾಮಾಂಧರಾದ ಆ ಕಾಮಿನಿಯರು ಅವನ ಮೇಲೆ ಮುಗಿಬಿದ್ದರು. ಒಬ್ಬಳು ಕೈ ಹಿಡಿದಳು. ಮತ್ತೊಬ್ಬಳು ಕಾಲು ಹಿಡಿದಳು. ಮಗದೊಬ್ಬಳು ಗದ್ದ ಮುಟ್ಟಿದಳು. ಇನ್ನೊಬ್ಬಳು ತುಟಿಗೆ ಬೆರಳು ತಗಲಿಸಿದಳು. ಮತ್ತೊಬ್ಬಳು ಬಳ್ಳಿದೋಳುಗಳಿಂದ ಕೊರಳು ಬಳಿಸಿದಳು. ಅನಂತರ ಅವರೈವರೂ ಅಂಗಲಾಚುತ್ತ ಅವನನ್ನು ಬೇಡಿಕೊಂಡರು.

**ಕನ್ನೆಯರು:-** ಧೂರ್ತ, ನಿನ್ನೆ ನಮ್ಮ ಹೃದಯವನ್ನು ಕದ್ದುಕೊಂಡು ಎಲ್ಲಿಗೆ ಹೋಗಿದ್ದೆ? ಇಂದು ನಾವು ನಿನ್ನನ್ನು ಬಿಡಲಾರೆವು. ನಾವು ನಿನ್ನನ್ನೇ ನಿನ್ನೆಯೇ ಒರಿಸಿದ್ದೇವೆ. ಇಂದೂ ಅರಸಿ ಬಂದಿದ್ದೇವೆ. ನಮ್ಮನ್ನು ತಿರಸ್ಕರಿಸಬೇಡ.

**"ದಿವ್ಯೌಷಧಂ ಬ್ರಹ್ಮರಸಾಯನಂ ಚ ಸಿದ್ಧಿರ್ನಿಧೇಃ ಸಾಧುಕಲಾ ವರಾಂಗನಾಃ ।**
**ಮಂತ್ರಸ್ತಥಾ ಸಿದ್ಧಿರಸಶ್ಚ ಧರ್ಮತೋ ನೇಮಾ ನಿಷೇಧ್ಯಾಃ ಸುಧಿಯಾ ಸಮಾಗತಾಃ॥**

ದಿವ್ಯವಾದ ಔಷಧ, ಬ್ರಹ್ಮರಸಾಯನ, ಸಿದ್ಧಿ, ದ್ರವ್ಯದ ನಿಧಿ, ಒಳ್ಳೊಳ್ಳೆ ಕಲಾ, ಸುಂದರ ಸ್ತ್ರೀಯರು, ಮಂತ್ರ, ಸಿದ್ಧ ರಸ ಇವು ತಾವಾಗಿ ಬಂದರೆ ವಿವೇಕಿಗಳಾದವರು ನಿಷೇಧಿಸಬಾರದು ಎಂದು ಹಿರಿಯರು ಹೇಳುತ್ತಾರೆ. ಆದುದರಿಂದ ಒಲಿದು ಬಂದ ನಮ್ಮಂಥ ಗಂಧರ್ವ ಸುಂದರಿಯರನ್ನು ಬೇಡ ಎನ್ನಬೇಡ. ನಾವು ಹೇಗೂ ಗಂಧರ್ವ ಕನ್ನೆಯರು. ಗಂಧರ್ವವಿಧಿಯಿಂದಲೇ ನಮ್ಮನ್ನು ಮದುವೆಯಾಗಿಬಿಡು. ಇಲ್ಲದಿದ್ದರೆ ನಾವು ಬದುಕಿ ಉಳಿಯಲಾರೆವು."

ಎಂದು ಅಂಗಲಾಚಿದರು. ಅದಕ್ಕೆ ಆ ಸುತಪಮುನಿಯು ಸಿಡಿದು ನಿಂತು ಹೇಳಿದ.

**ಸುತಪ:-** "ನಾನಿನ್ನೂ ಬ್ರಹ್ಮಚಾರಿ. ನನ್ನ ವೇದ ಶಾಸ್ತ್ರಗಳ ಅಧ್ಯಯನ ಮುಗಿದಿಲ್ಲ. ಈಗಲೇ ನನಗೆ ಮದುವೆ ಆಗುವ ವಿಚಾರವಿಲ್ಲ. ನೀವು ನನ್ನನ್ನು ಬಿಟ್ಟು ದೂರ ಹೋಗಿರಿ."

ಹೀಗೆ ಅವನು ನಿಷೇಧಿಸಿದರೂ ಕೇಳಿದೆ ಆ ಸುರಲೋಕದ ತರಳೆಯರು ಕಾಮಾತುರರಾಗಿ ಅವನನ್ನು ಭರದಿಂದ ಬಿಗಿದಪ್ಪಿದರು. ಸಂಭ್ರಮದಿಂದ ಚುಂಬಿಸಿದರು. ತಮ್ಮ ಬಳ್ಳಿದೋಳುಗಳನ್ನು ಮಾಲೆ ಮಾಡಿ ಅವನ ಕೊರಳಿಗೆ ತೊಡಿಸಿದರು.

ವಾಮ ಮಾರ್ಗಹಿಡಿದ ಆ ವಾಮೆಯರ ಕಾಮಾಕ್ರಮಣದ ಈ ಅಕ್ರಮ ವಿಕ್ರಮವನ್ನು ಕಂಡು ಕನಲಿ ಹೋದ ಆ ಮುನಿ ಪುಂಗವ. ಐವರು ಹೆಣ್ಣುಗಳ ದಾಳಿಗೆ ತುತ್ತಾದ ತನ್ನ ದೇಹವನ್ನು ಬಲವಾಗಿ ಒಮ್ಮೆ ಕೊಡವಿ ಮೆಲೆದ್ದು ಕ್ರುದ್ಧ ಮುಖಮುದ್ರೆಯಿಂದ ನುಡಿದ.

**ಸುತಪ:-** ನೀವು ಐವರೂ ಪಿಶಾಚಿಗಳಂತೆ ನನ್ನ ಮೇಲೆ ಮದನಾಕ್ರಾಂತರಾಗಿ ಎರಗಿರುವಿರಿ. ಆದುದರಿಂದ ನೀವು ಪಿಶಾಚಿಗಳೇ ಆಗಿರಿ.

ಸುತಪ ಮುನಿಯ ಈ ಶಾಪಾಕ್ಷರಗಳ್ನ ಕೇಳಿ ಹಿಂದೆ ಅವನಿಗೆ ಒಲಿದ ನಾರಿಯರೆಲ್ಲರೂ ಈಗ ಮುನಿದುಮಾರಿಯರಾಗಿ "ನಿರಪರಾಧಿಗಳಾದ ನಮ್ಮನ್ನು ಪಿಶಾಚಿಯರಾಗಿರಿ ಎಂದು ಶಪಿಸಿದ ಮೊದಲು ನೀನೂ ಪಿಶಾಚನಾಗು" ಎಂದು ಪ್ರತಿ ಶಾಪಕೊಟ್ಟರು.

ಹೀಗೆ ಪರಸ್ಪರ ಶಾಪಾಕ್ಷರಗಳನ್ನು ಎಸೆದಾಡಿ ಮಸದಾಡಿ ಆ ಐವರೂ ಗಂಧರ್ವ ಕನ್ನೆಯರೂ ಅವರಿಂದ ಶಪಿತನಾದ ಸುತಪಮುನಿಯೂ ಪಿಶಾಚರಾಗಿ ಕೈಲಾಸ ಪರ್ವತದ ಅಚ್ಛೋದ ಸರೋವರದ ದಂಡೆಯ ಮೇಲೆ ಅಲೆದಾಡತೊಡಗಿದವು. ಹೀಗೆ ಬಹುಕಾಲ ಹಸಿವೆ ಬಾಯಾರಿಕೆ ದಣಿವು ದುಃಖ ದುರ್ದಶೆಗಳಿಂದ ಅವರೆಲ್ಲರೂ ಗೋಳಾಡುತ್ತಲಿರುವಾಗ ಒಮ್ಮೆ ಅಲ್ಲಿಗೆ ತಪೋವೃದ್ಧರೂ ಜ್ಞಾನವೃದ್ಧರೂ ವಯೋವೃದ್ಧರೂ ಆದ ಲೋಮಶ ಮಹರ್ಷಿಗಳು ಆಗಮಿಸಿದರು. ಅವರ ದರ್ಶನಕ್ಕಾಗಿ ವೇದನಿಧಿ ಮುನಿಗಳು ಬಂದು ತಮ್ಮ ಮಗನಾದ ಸುತಪ ಮತ್ತು ಪಂಚಾಪ್ಸರೆಯರು ಪಿಶಾಚರಾದ ಕತೆಯನ್ನು ಹೇಳಿ ಅವರೆಲ್ಲರ ಉದ್ಧಾರದ ಉಪಾಯವನ್ನು ಹೇಳಿರಿ ಎಂದು ಬಿನ್ನವಿಸಿದರು. ಅದನ್ನು ಕೇಳಿ ತಪೋಧನ ಧುರೀಣರಾದ ಲೋಮಶ ಮಹರ್ಷಿಗಳು ನುಡಿದರು.

**ಲೋಮಶ :-** ಈ ಎಲ್ಲ ಪಿಶಾಚಗಳೂ ನನ್ನ ಜೊತೆಗೆ ಪ್ರಯಾಗದಲ್ಲಿ ಮಾಘಸ್ನಾನವನ್ನು ಮಾಡಲಿ. ಅದರಿಂದ ಅವರ ಶಾಪ ಮೊದಲಾದ ಪಾಪವೆಲ್ಲವೂ ಅಳಿದು ಈ ದುರ್ಯೋನಿಯಿಂದ ಬಿಡುಗಡೆಯು ಖಂಡಿತವಾಗಿಯೂ ಆಗುವದು. ಈ ಮಾಘಸ್ನಾನವು ಹಿಂದಿನ ಏಳು ಜನ್ಮಗಳ ಪಾಪಗಳನ್ನೆಲ್ಲ ತೊಳೆದು ಬಿಡುವದು.

ಹಿಂದೆ ಅವಂತಿಯಲ್ಲಿ ವೀರಸೇನ ಎಂಬ ಅರಸನಿದ್ದ. ಅವನು ನರ್ಮದಾ ನದಿಯ ದಂಡೆಯ ಮೇಲೆ ಹದಿನಾರು ಅಶ್ವಮೇಧಯಾಗಗಳನ್ನು ಬಹಳ ವೈಭವದಿಂದ ಪ್ರಭೂತವಾದ ದಾನದಕ್ಷಿಣೆ ನೀಡಿ ಸಂಭ್ರಮದಿಂದ ಆಚರಿಸಿದ. ಅದೇ ಊರಲ್ಲಿ ಭದ್ರಕ ಎಂಬ ಆಚಾರ ಭ್ರಷ್ಟನಾದ ಬ್ರಾಹ್ಮಣ ಅವ್ಯಾಪಾರ ದುರ್ವ್ಯಾಪಾರ ದುರಾಚಾರ ಅನಾಚಾರ ಎಲ್ಲವನ್ನೂ ಮಾಡಿ ಮುಗಿಸಿ ಕೊನೆಗೆ ಮೂರು ದಿನ ಪ್ರಯಾಗದಲ್ಲಿ ಮಾಘಸ್ನಾನಮಾಡಿ ಮರಣ ಹೊಂದಿದ. ವೀರಸೇನರಾಜನೂ ಕಾಲಪ್ರಾಪ್ತ ಮರಣವನ್ನೈದಿದ. ಮುಂದೆ ಸ್ವರ್ಗದಲ್ಲಿ ಇಬ್ಬರಿಗೂ ಸಮಾನವಾದ ಸ್ಥಾನಮಾನಗಳು ದೊರೆತವು. ಮಾಘಸ್ನಾನ ಅನೇಕ ಅಶ್ವಮೇಧ ಯಾಗಗಳಿಂತ ಮಿಗಿಲಾದ ಪುಣ್ಯಪ್ರದವಾಗಿದೆ. ಆದುದರಿಂದಲೇ ನರ್ಮದೆಯಲ್ಲಿ ಹದಿನಾರು ಅಶ್ವಮೇಧ ಯಜ್ಞಗಳನ್ನು ಮಾಡಿ, ಸುವರ್ಣ ದಕ್ಷಿಣೆ ನೀಡಿ, ನೂರಾರು ಕೆರೆ ಕಾಲುವೆ ತೋಡಿಸಿ, ಸಾವಿರಾರು ಕಡೆ ಅನ್ನ ಛತ್ರ ಇಡಿಸಿ, ಬದುಕಿ ಇರುವವರೆಗೂ ಅನ್ನದಾನ, ಜಲದಾನ, ಹೋಮ ಹವನ ಮುಂತಾದ ಪುಣ್ಯಕರ್ಮಗಳನ್ನು ಮಾಡಿದ ವೀರಸೇನ ರಾಜನಿಗೂ, ಮಾಘ ಮಾಸದ ಮೂರು ದಿನ ಪ್ರಯಾಗ ಕ್ಷೇತ್ರದಲ್ಲಿ ಪ್ರಾತಃಸ್ನಾನ ಮಾಡಿದ ಆಚಾರಭ್ರಷ್ಟ, ಧರ್ಮದ್ವೇಷಿ ಭದ್ರಕ ಬ್ರಾಹ್ಮಣನಿಗೂ ಸ್ವರ್ಗದಲ್ಲಿ ಸಮಾನವಾದ ಸಿರಿ ಸೌಭಾಗ್ಯಗಳು ದೊರೆತವು. ಇಬ್ಬರಿಗೂ ಅಮರಾವತಿ ನಗರದಲ್ಲಿ ಸರಿ ಸಮಾನವಾದ ತೇಜಸ್ಸು, ಸೌಂದರ್ಯ, ಶಕ್ತಿ, ಸ್ತ್ರೀಸುಖ, ದೇವಮಾನ, ಮಂದಾರ ಮಾಲೆ, ನಂದನ ವಿಹಾರ, ಸುರಸಂಗೀತ, ಅಪ್ಸರಾ ನೃತ್ಯ ಮುಂತಾದ ಸ್ವರ್ಗೀಯ ಸುಖಸಂಪದ ಸೌಭಾಗ್ಯಗಳು ಏಕಪ್ರಕಾರವಾಗಿಯೇ ಪ್ರಾಪ್ತವಾದವು. ಪ್ರಯಾಗ ಕ್ಷೇತ್ರದ ಮೂರು ನೂರು ಮಾರು ವಿಸ್ತಾರದ ಸಂಗಮ ತೀರ್ಥದಲ್ಲಿ ಎಲ್ಲಿಯಾದರೂ ಸ್ನಾನ ಮಾಡಿದ

ಮನುಷ್ಯನು, ಶಾಸ್ತ್ರೋಕ್ತವಾಗಿ ಭೂಲೋಕದಲ್ಲಿ ರಾಜಸೂಯಯಾಗ ಮಾಡಿ
ಸಾರ್ವಭೌಮನಿಗೆ ಸಮಾನವಾದ ಪುಣ್ಯಫಲವನ್ನು ಪಡೆಯುತ್ತಾನೆ. ಮಾಘಮಾಸದಲ್ಲಿ
ಗಂಗಾ-ಯಮುನಾ ಸಂಗಮದ ತರಂಗಗಳ ಮೇಲೆ ಬೀಸಿ ಬಂದ ಸೂಸು ಗಾಳಿಯೂ ಕೂ
ಮಹಾಪಾತಕವನ್ನು ನಾಶಮಾಡಲು ಸಮರ್ಥವಾಗಿದೆ. ಈ ವಿಷಯದಲ್ಲಿ ಪ್ರಾಚೀನ ಕಾಲ
ಒಂದು ಪಿಶಾಚಿಮೋಚನ ಸಮಾಚಾರವನ್ನು ನಿನಗೆ ಹೇಳುತ್ತೇನೆ ಕೇಳು. ಅದನ್ನು ನಿ
ಮಗನಾದ ಈ ಸುತಪನೂ ಅವನಿಂದ ಶಪಿತರಾಗಿ ಪಿಶಾಚಿಯೋನಿಯನ್ನು ಹೊಂದಿ
ಈ ಪಂಚಕನ್ಯೆಯರೂ ಶ್ರವಣ ಮಾಡಲಿ.

ಪೂರ್ವಕಾಲದಲ್ಲಿ ದೇವದ್ಯುತಿ ಎಂಬ ಓರ್ವ ವಿಷ್ಣುಭಕ್ತ ಬ್ರಾಹ್ಮಣನಿದ್ದ. ವೇ
ವೇದಾಂತಗಳಲ್ಲಿ ಪಾರಂಗತನಾದ ಆ ಧರ್ಮಾತ್ಮನು ಸರಸ್ವತಿ ತೀರದಲ್ಲಿರು
ಪ್ರಕ್ಷಪಾಶ್ರವಣ ಎಂಬ ತೀರ್ಥದ ತಡಿಯಲ್ಲಿ, ಸುಂದರವಾದ ಪರಿಸರದಲ್ಲಿ ಒಂದ
ಆಶ್ರಮವನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದ. ಸಾಲ, ತಾಲ, ತಮಾಲ, ಬಕುಲ
ಮಂದಾರ ಮುಂತಾದ ಹೆಮ್ಮರಗಳಿಂದ ಬಹಳ ರಮಣೀಯವಾಗಿದ್ದಿತು ಆ ಸಿದ್ಧಾಶ್ರಮ
ಅಲ್ಲಿಯ ಲತಾ ಕುಂಜ ನಿಕುಂಜಗಳ ಮೇಲೆ ಕುಸುಮಗಳ ಖಂಡನುಂಡು ಝೇಂಕರಿಸು
ದುಂಬಿಗಳ ಗೀತ ಗುಂಜಾರವದಿಂದ ಮುಖರಿತವಾದ ಆ ವನಪ್ರಾಂತದಲ್ಲಿ ಮಹರ್ಷಿಗ
ಭಯದಿಂದ ಗಾಳಿಯೂ ಕೂಡ ವೇಗದಿಂದ ಬೀಸುತ್ತಿರಲಿಲ್ಲ. ಸೂರ್ಯನು ಅಲ್ಲಿಯ ಮ
ಬಳ್ಳಿಗಳೂ ಬಾಡದಂತೆ ತನ್ನ ಬಿಸಿಲನ್ನು ಬೀಳಿಸುತ್ತಲಿದ್ದ. ಮೋಡಗಳು ಎಂದೂ ಅಲ್ಲಿ
ಅತೀ ವೃಷ್ಟಿಯನ್ನು ಕರೆದು ಅನಾಹುತ ಮಾಡುತ್ತಿರಲಿಲ್ಲ. ಪ್ರಾಣಿಗಳೂ ಪರಸ್ಪ
ವೈರಭಾವವನ್ನು ಮರೆತು ತಮ್ಮ ಶತ್ರು ಜಾತಿಯ ಪ್ರಾಣಿಗಳೊಂದಿಗೆ ಒಡನಾಟವನ್ನು
ಆಡುತ್ತಿಲಿದ್ದವು. ಸುದೈವದಿಂದ ಆ ದೇವದ್ಯುತಿ ಮಹರ್ಷಿಗೆ ನಾರಾಯಣನ ದಯದಿಂ
ಸುಮಿತ್ರ ಎಂಬ ತಪಸ್ವಿಯಾದ ಗಂಡು ಮಗನಿದ್ದ. ಅವನೂ ಕೂಡ ತನ್ನ ತಂದೆಯಂತೆಯೆ
ತೇಜಸ್ವಿ, ತಪಸ್ವಿ ಮತ್ತು ಮನಸ್ವೀ ಮನೀಷಿ ಮುನಿಕುಮಾರನೇ ಆಗಿದ್ದ.

ಆ ದೇವದ್ಯುತಿ ಮಹರ್ಷಿಯ ತಪಸ್ಸು ತೀವ್ರ ಇದ್ದಷ್ಟೇ ತೀಕ್ಷ್ಣವೂ ಆಗಿತ್ತು
ಬೇಸಿಗೆಯಲ್ಲಿ ಪಂಚಾಗ್ನಿ ಸಾಧನೆಮಾಡಿಕೊಂಡು ಸೂರ್ಯನಲ್ಲಿ ದೃಷ್ಟಿನೆಟ್ಟು ಅತ್ಯುಗ್ರವಾದ
ತಪಸ್ಸನ್ನು ಅವ್ಯಗ್ರಮನಸ್ಸಿನಿಂದ ಆಚರಿಸುತ್ತಲಿದ್ದ. ತಪಸ್ಸಗೈಯುತ್ತಿದ್ದ ಹೇಮಂತ
ಋತುವಿನಲ್ಲಿ ಅಲ್ಲಿಯ ಸರಸ್ವತಿ ಸರೋವರದಲ್ಲಿ ಆಕಂಠಜಲದಲ್ಲಿ ಕುಳಿತು
ತಪೋನುಷ್ಠಾನ ಮಾಡುತ್ತಲಿದ್ದನು. ಹೀಗೆ ಆ ದೇವದ್ಯುತಿ ಮಹರ್ಷಿಯು ಒಂದು ಸಾವಿ
ವರ್ಷ ತೀಕ್ಷ್ಣ ತಪಸ್ಸನ್ನು ಅನುಷ್ಠಾನಗೈದ. ವ್ರತೋಪವಾಸಗಳಿಂದ ಹಾಗೂ ಸಂತತ
ಜಪತಪೋನುಷ್ಠಾನಗಳಿಂದ ಕೊರಗಿ ಸೊರಗಿ ಒಣಗಿ ಕಟ್ಟಿಗೆಯಂತಾದ. ಅವನ ಕಾಮವ
ಮೂಳೆಯ ಹಂದರದಂತೆ ಕಾಣುತ್ತಲಿತ್ತು. ಹೀಗೆ ದಧೀಚಿ ಮಹರ್ಷಿಯಿಂದ
ವಿದ್ಯೋಪದೇಶವನ್ನೂ ತಪೋನುಷ್ಠಾನವನ್ನೂ ಕಲಿತು ಕೊಂಡ ಆ ಮಹರ್ಷಿಯು ವಿಷ್ಣು
ಪ್ರೀತ್ಯರ್ಥವಾಗಿ ವೇದಮಂತ್ರವನ್ನು ಹಗಲಿರುಳು ಪಠಿಸುತ್ತ ವಿಷ್ಣು ಸಹಸ್ರನಾಮ
ಸ್ತೋತ್ರವನ್ನು ಹೇಳಿ ಶ್ರೀಹರಿಗೆ ಸಹಸ್ರ ಪುಷ್ಪ ಸೇವೆಯನ್ನು ಸಲ್ಲಿಸುತ್ತ ತನ್ನ ಜನ್ಮವನ್ನು
ಸಾರ್ಥಕಪಡಿಸಿಕೊಂಡಿದ್ದ. ಹೀಗೆ ಆ ಮಹಾಮಹರ್ಷಿಯ ನಿತ್ಯ ನಿರಂತರವಾದ ಸೇವಾ
ಸದ್ಭಾವನೆ ಹಾಗೂ ಸಶ್ರದ್ಧ ಸಮಾರಾಧನೆಗಳಿಂದ ಸಂಪ್ರೀತನಾದ ಶ್ರೀಹರಿ. ವೈಶಾಖ ಶುಕ್ಲ

ಏಕಾದಶಿ ದಿನ ಪರಮ ಭಕ್ತಿಯಿಂದ ಶ್ರೀಹರಿಯ ಪೂಜೆಮಾಡಿ ಗದ್ಗದಿತ ಕಂಠದಿಂದ ಭಗವಂತನ ಗುಣಗಾನ ಮಾಡಿ ಪ್ರಾರ್ಥನೆಯನ್ನು ಸಲ್ಲಿಸಿದ ದೇವದ್ಯುತಿ ಮಹರ್ಷಿಯ ಅದ್ಭುತವಾದ ತಪಸ್ಸಿನಿಂದ ಸುಪ್ರಸನ್ನನಾದ ಶ್ರೀಹರಿಯು ಅವನು ಬೇಡಿದ ಅವ್ಯಭಿಚರಿತ ನಿಶ್ಚಲ ಭಕ್ತಿರೂಪ ವರವನ್ನು ಕರುಣಿಸಿ ಹೀಗೆ ಹೇಳಿದ. ಭಕ್ತಾಗ್ರೇಸರ, ನೀನು ಇದೀಗ ನನ್ನನ್ನು ಸ್ತುತಿಸಿ ರಚಿಸಿದ ದಿವ್ಯ ಸ್ತೋತ್ರವನ್ನು ಪಠಿಸುವವರಿಗೆ ನನ್ನಲ್ಲಿ ನಿಶ್ಚಲವಾದ ಅವ್ಯಭಿಚರಿತ ಭಕ್ತಿಯು ಉತ್ಪನ್ನವಾಗುತ್ತದೆ. ಹಾಗೂ ಈ ಸ್ತೋತ್ರ ಪಾಠ ಮಾಡುವವರ ಧರ್ಮಕಾರ್ಯಗಳೆಲ್ಲವೂ ನಿರ್ವಿಘ್ನವಾಗಿ ನೆರವೇರುತ್ತವೆ. ಹಾಗೂ ಅವರಿಗೆ ಭಗವದ್ ಜ್ಞಾನದಲ್ಲಿ ನಿಷ್ಠೆಯೂ ಉತ್ಪನ್ನವಾಗುತ್ತದೆ.

ಹೀಗೆ ಹೇಳಿ ಖಗವಾಹನನಾದ ಭಗವಾನ್ ಶ್ರೀಹರಿಯು ಅಲ್ಲಿಯೇ ಅಂತರ್ಹಿತನಾದ. ಅಂದಿನಿಂದ ದೇವದ್ಯುತಿ ಮಹರ್ಷಿಯು ನಾರಾಯಣ ನಿಷ್ಠನಾಗಿ ನಿತ್ಯ ನಿರಂತರವೂ ತಾನು ಮಾಡಿದ ನಾರಾಯಣ ಸ್ತೋತ್ರವನ್ನು ಪಠಿಸುತ್ತ ಜಪಿಸುತ್ತ ಇರುತ್ತಿದ್ದ. ಆ ದೇವದ್ಯುತಿ ಮಹರ್ಷಿಯು ರಚಿಸಿದ ಸ್ತೋತ್ರವು ಹೀಗೆ ಇರುತ್ತದೆ.

ಓಂ ನಮೋ ವಾಸುದೇವಾಯ ನಮೋ ವಿಶ್ವಾಸ ಚಕ್ರಿಣೇ ।
ಭಕ್ತಿಪ್ರಿಯಾಯ ಕೃಷ್ಣಾಯ ಜಗನ್ನಾಥಾಯ ಶಾರ್ಙ್ಗಿಣೇ ॥

ಚಕ್ರವದ್ ಭ್ರಮತೇ ಸರ್ವಂ ತ್ರೈಲೋಕ್ಯಂ ಸಚರಾಚರಮ್ ।
ಅತಸ್ತ್ವಂ ಗೀಯಸೇ ದೇವ ಚಕ್ರಪಾಣಿರ್ವರಾಯುಧಃ ॥

ಬ್ರಹ್ಮಾದಿ ಬ್ರಹ್ಮ ವಿಷ್ಣುಸ್ತ್ವಂ ತ್ವಮೇವ ಸಕಲಾಶ್ರಯಃ ।
ಸ್ರಷ್ಟಾ ಬ್ರಹ್ಮನಿದಾನಂ ಚ ಶುದ್ಧಂ ಬ್ರಹ್ಮ ತ್ವಮೇವ ಚ ॥

ವಿಶೋಕಂ ವಿಗುಣಂ ಚೈಕಮ್ ಚಿನ್ಮೂರ್ತಿ ರಖಿಲಂ ಜಗತ್ ।
ಕವೀನಾಂ ಭಾತಿ ಯತ್ ತತ್ತ್ವಂ ತಂ ವಿಷ್ಣುಂ ನೌಮಿ ನಿರ್ಮಲಂ ॥

ಬ್ರಹ್ಮಾಹಮಿತಿ ಗಾಯಂತಿ ಯಂ ಜ್ಞಾತ್ವೈಕಂ ವರಾ ದ್ವಿಜಾಃ ।
ಪಶ್ಯಂತೋ ನ ತ್ವಯಾ ತುಲ್ಯಂ ದೇವ ತಂ ನೌಮಿ ಮಾಧವಮ್ ॥

ಮೋಹಾನಲ ಲಸಜ್ವಾಲಾ ಜ್ವಲಲ್ಲೋಕೇಷು ಸರ್ವದಾ ।
ಯತ್ಪದಾಂ ಭೋರುಹ ಛಾಯಾಂ ಪ್ರವಿಷ್ಟಶ್ಚ ನ ದಹ್ಯತೇ ॥

ನಾರಾಯಣೋ ಜಗದ್ವ್ಯಾಪೀ ಯದಿ ವೇದಾದಿ ಸಮ್ಮತಃ ।
ಸತ್ಯೇನ ತೇನ ನಿರ್ವಿಘ್ನಾ ವಿಷ್ಣು ಭಕ್ತಿರ್ಮಮಾಸ್ತು ವೈ ॥

ಭೂತಯೋಗಜ ಚೈತನ್ಯಂ ಚಾರ್ವಾಕು ಯಮುಪಾಸತೇ ।
ಸೌಗತಾ ಬ್ರುವತೇ ತರ್ಕೈಸ್ತ್ವಾಂ ಬುದ್ಧಿಂ ಕ್ಷಣಂಗುರಾಮ್ ॥

ಶರೀರ ಪರಿಮಾಣಂ ತ್ವಾಂ ಮನ್ಯಂತೇ ಜಿನ ದೇವತಾಃ ।
ಧ್ಯಾಯಂತಿ ಪುರುಷಂ ಸಾಂಖ್ಯಾಸ್ತ್ವಾಮೇವ ಪ್ರಕೃತಿಂ ಪರಂ ॥

**ಜನ್ಮಾದಿ ರಹಿತಃ ಪೂರ್ವಂ ಯಸ್ಮಾದಾನಂದ ಲಕ್ಷಣಃ ।**
**ತ್ವಾಮೇವೋಪನಿಷದ್ ಬ್ರಹ್ಮ ಚಿಂತಯಂತಿ ಪರಸ್ಪರಂ ॥**

**ಸ್ಥೂಲಂ ವಿಲಾಪ್ಯ ಮುನಯಃ ಪ್ರವಿಶಂತಿ ಯತ್ರ ತತ್ ಕಾರಣಂ**
**ಕರಣ ಕಾರಣ ವರ್ಜಿತೇ ಚ ।**
**ಇದ್ಧಂ ವಿಲಾಪ್ಯ ಮುನಯಃ ಪ್ರವಿಂತಿ ಯತ್ತತ್ ತಸ್ಮೈ ನಮೋಸ್ತು**
**ಹರಯೇ ಮುನಿಸೇವಿತಾಯ ॥**

**ಚರಾಚರಾಣಿ ಭೂತಾನಿ ಸರ್ವಾಣಿ ಚ ಹರೇರ್ವಶೇ ।**
**ತೇನ ಸತ್ಯೇನ ಮೇ ರೂಪಂ ಪ್ರದರ್ಶಯತು ಕೇಶವಃ ॥**

**ಭಕ್ತಿರ್ಯಥಾ ಹರೌಮೇಸ್ತಿ ತದ್‌ವರಿಷ್ಠ ಗುರೌ ಯದಿ ।**
**ಮಮಾಸ್ತಿ ತೇನ ಸತ್ಯೇನ ಸ್ವಂ ದರ್ಶಯತು ಕೇಶವಃ ॥**

ದೇವದ್ಯುತಿ ಮಹರ್ಷಿಯು ಶಪಥಪೂರ್ವಕವಾಗಿ ಮಾಡಿದ ಈ ಸ್ತೋತ್ರದಿಂದ ಶ್ರೀಹರಿಯು ಸುಪ್ರಸನ್ನನಾಗಿ ಅವನಿಗೆ ವರವನ್ನು ನೀಡಿ ಅಲ್ಲಿಂದ ಅಂತರ್ಧಾನವನ್ನು ಹೊಂದಿದ. ವಾಸುದೇವ ಪರಾಯಣನಾದ ಆ ದೇವದ್ಯುತಿಯು ಈ ಸ್ತೋತ್ರವನ್ನು ಪಠಿಸುತ್ತ ಅಲ್ಲಿಯೇ ಶಿಷ್ಯರೊಂದಿಗೆ ಬಹುಕಾಲ ವಾಸಮಾಡಿದ. ದೇವದ್ಯುತಿ ಮಹರ್ಷಿ ಪ್ರಣೀತವಾದ ಈ ಸ್ತೋತ್ರಕ್ಕೆ 'ಯೋಗಸಾರ' ಎಂದು ಹೆಸರು. ಇದನ್ನು ಭಕ್ತಿಯಿಂದ ಪಠಿಸಿದವರು ವಿಷ್ಣುಲೋಕವನ್ನು ಕುರಿತು ಪ್ರಯಾಣ ಮಾಡುತ್ತಾರೆ. ಇದರ ಅನಂತರ ಪಿಶಾಚಮೋಚನ ತೀರ್ಥದ ಮಹಿಮೆಯನ್ನು ತಿಳಿಸುತ್ತೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಮಾಘಸ್ನಾನದ ಫಲದ ಬಣ್ಣನೆ ಎಂಬ ಒಂದು ನೂರ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*



## ಚಿತ್ರರಾಜನ ಉಪಾಖ್ಯಾನ — ಅಧ್ಯಾಯ - ೧೨೬

**ವಶಿಷ್ಠ :-** ಈ ದೇವದ್ಯುತಿ ಮಹರ್ಷಿಯಿಂದ ಉದ್ಧೃತರಾದ ಪಿಶಾಚಿಗಳ ಆಖ್ಯಾನವನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ದ್ರಾವಿಡ ದೇಶದಲ್ಲಿ ಚಿತ್ರ ಎಂಬ ಹೆಸರಿನ ಮಹಾರಾಜನು ಚಂದ್ರವಂಶದಲ್ಲಿ ಹುಟ್ಟಿದ್ದ. ವಿದ್ಯೆಯಲ್ಲಿ ಪಾರಂಗತ, ಶಾಸ್ತ್ರ ವಿದ್ಯೆಯಲ್ಲಿಯೂ ಪರಿಣತ ಈ ಚಿತ್ರರಾಜ. ಯುದ್ಧ ಕಲೆಯಲ್ಲಿ ವಿಶಾರದ. ಮಹಾ ಪರಾಕ್ರಮಶಾಲಿ. ಸಮೃದ್ಧವಾದ ಐಶ್ವರ್ಯದಿಂದ ಸಂಪನ್ನ. ಆದರೆ ವಿಷ್ಣು ದ್ವೇಷಿ. ಮಹಾನಾಸ್ತಿಕ, ಸ್ತ್ರೀ ಲಂಪಟ, ಯಾವಾಗಲೂ ಹದಿಹರೆಯದ ಹೆಣ್ಣುಗಳ ಮಧ್ಯದಲ್ಲಿ ವಿಲಾಸ-ಲಾಲಸನಾಗಿ ಶೃಂಗಾರಕೇಳಿ ಲೋಲುಪನಾಗಿಯೇ ಕಾಲ ಕಳೆಯುತ್ತಲಿದ್ದ. ವಿಷ್ಣುಭಕ್ತರನ್ನು ಕಂಡರೆ ಗೋಳು ಹೊಯ್ದುಕೊಳ್ಳುತ್ತಿದ್ದ. ನೀತಿಭ್ರಷ್ಟನಾಗಿ ಪ್ರಜೆಗಳನ್ನು ವಿನಾಕಾರಣ ದಂಡಶಾಸನಗಳನ್ನು ವಿಧಿಸಿ ಹಿಂಸೆಗೊಳಿಸುತ್ತಲಿದ್ದ. ಉದ್ದಂಡ ಪಾಖಂಡಿಯಾದ ಆ ಚಿತ್ರರಾಜನು ಆಚಾರಭ್ರಷ್ಟನಾಗಿ, ಧರ್ಮದ್ರೋಹಿಯಾಗಿ

ಮರಣಹೊಂದಿದ. ಅನಂತರ ಯಮಲೋಕದಲ್ಲಿ ಎಲ್ಲ ವಿಧವಾದ ನರಕಯಾತನೆಯನ್ನು ಭೋಗಿಸಿ ವಿಷ್ಣುದ್ವೇಷದ ಪ್ರಭಾವದಿಂದ ೨೦ಯುಗಗಳವರೆಗೆ ನರಕವಾಸ ದುಃಖವನ್ನು ಅನುಭವಿಸಿದ. ಅನಂತರ ಪರ್ವತದಲ್ಲಿ ಪಿಶಾಚನಾಗಿ ಹಸಿವೆ ಬಾಯಾರಿಕೆಗಳಿಂದ ಕಂಗೆಟ್ಟು ಅಲೆಯತೊಡಗಿದ. ಪ್ಲಕ್ಷ ಪಾಸ್ರವಣ ಎಂಬ ಪರ್ವತಕ್ಕೆ ಬಂದ. ಅಲ್ಲಿ ಒಂದು ಹೆಮ್ಮರದಡಿಯಲ್ಲಿ ನಿಡಿದಾದ ನಿಟ್ಟುಸಿರು ಬಿಡುತ್ತ ಕುಳಿತ. ಮತ್ತು ದೊಡ್ಡ ಧ್ವನಿ ತೆಗೆದು ರೋಧಿಸತೊಡಗಿದ.

**ಪಿಶಾಚ:-** ನಾನು ಪಾಪದ ಸಾಗರದಲ್ಲಿಯೇ ಮುಳುಗಿದ್ದೇನೆ. ನನಗೆ ಹಸ್ತಾವಲಂಬನ ಕೊಟ್ಟು ಕೈ ಹಿಡಿದು ಮೇಲಕ್ಕೆ ಎತ್ತಿ ಉದ್ಧರಿಸುವ ಪುಣ್ಯಾತ್ಮರು ಯಾರು?

ಹೀಗೆ ದೈನ್ಯದಿಂದ ಶೋಕ ಮಾಡುತ್ತಲಿದ್ದ ಆ ಪಿಶಾಚದ ಆರ್ತ ರೋದನ ಧ್ವನಿಯು ಅಲ್ಲಿಯೇ ಸ್ತೋತ್ರಪಾಠ, ವೇದಾಧ್ಯಯನ, ವಿಷ್ಣುಸ್ತುತಿ ಮುಂತಾದವುಗಳನ್ನು ಪಾರಾಯಣ ಮಾಡುತ್ತ ಕುಳಿತ ದೇವದ್ಯುತಿ ಋುನಿಪುಂಗವನ ಕಿವಿಗಿ ಬಿದ್ದಿತು. ಆ ಮಹರ್ಷಿಯು ಉದ್ದ ಕಾಲಿನ, ಶುಷ್ಕ ಮುಖದ, ಹಾಳುಗಣ್ಣಿನ ವಿಕಾರ ರೂಪದ, ಎಲುಬಿನ ಹಂದರದಂತಿರುವ ಆ ಪಿಶಾಚವನ್ನು ಕೌತುಕದಿಂದ ನೋಡಿದನು.

**ದೇವದ್ಯುತಿ:-** ಅಯ್ಯಾ, ನೀನು ಯಾರು? ನಿನಗೆ ಇಂಥ ವಿಕಾರವಾದ ಆಕಾರ ಹೇಗೆ ಬಂದಿತು? ಇಂಥ ದುರವಸ್ಥೆ ಬರಲು ಕಾರಣವೇನು? ಇಷ್ಟು ದೀನ ದಾರುಣವಾಗಿ ಏಕೆ ವಿಲಪಿಸುತ್ತಿರುವೆ? ನಾನು ನಿನಗಾಗಿ ಏನು ಮಾಡಲಿ? ನನ್ನ ಆಶ್ರಮದಲ್ಲಿ ಕಾಲಿರಿಸಿದ ಯಾವ ಜೀವಜಂತುವೂ ದುಃಖಪಡಬಾರದು. ವಿಷ್ಣುವಿನ ಮನೆಯಲ್ಲಿ ಇದ್ದಂತೆ ವಿಷ್ಣುಭಕ್ತನಾದ ನನ್ನ ಆಶ್ರಮದಲ್ಲಿ ಇದ್ದವರು ಆನಂದದಿಂದ ನಕ್ಕು ನಲಿಯುತ್ತಿರಬೇಕು. ಆದುದರಿಂದ ನಿನ್ನ ಈ ದಾರುಣವಾದ ದುಃಖ ದುರವಸ್ಥೆ ದೌರ್ಭಾಗ್ಯಗಳ ಕಾರಣವನ್ನು ತಿಳಿಸು.

**ಪಿಶಾಚ:-** ಪುಣ್ಯಾತ್ಮ, ನಿನ್ನ ಮಾತು ಇಷ್ಟು ದಿನ ನನ್ನ ಸರ್ವಾಂಗಗಳನ್ನು ಸುಡುವ ಮನಃಸಂತಾಪವನ್ನು ಶಾಂತಗೊಳಿಸಿದೆ. ಮಳೆಗಾಲದ ಮೋಡದ ಧಾರಾವೃಷ್ಟಿಯಿಂದ ಬೇಸಿಗೆಯ ಕಾಡ್ಗಿಚ್ಚು ಶಾಂತವಾಗುವಂತೆ ನಿನ್ನ ವಾಚೋಮೃತದಿಂದ ನನ್ನ ಅಂತರಂಗದಲ್ಲಿ ಅಮೃತ ಸೇಚನವಾಗಿದೆ. ಹಿಂದಿನ ಜನ್ಮದಲ್ಲಿ ನಾನು ಏನು ಪುಣ್ಯಮಾಡಿದ್ದೆನೋ ! ಇದರಿಂದಲೇ ನಿನ್ನ ದರುಶನವಾಗಿದೆ. ಜನ್ಮಾಂತರದಲ್ಲಿ ಪುಣ್ಯ ಮಾಡದೇ ಇರುವ ಜನರಿಗೆ ಇಂಥ ಸಜ್ಜನ ಸಹವಾಸವು ತಾನಾಗಿಯೇ ದೊರಯಲಾರದು. ಪೂಜ್ಯರೇ, ನಾನು ಹಿಂದಿನ ಜನ್ಮದಲ್ಲಿ ವಿಷ್ಣುದ್ವೇಷ ಮಾಡಿದ್ದರಿಂದ ನನಗೆ ಇಂಥ ದುರ್ದಶೆ ಒದಗಿಬಂದಿದೆ. ಸರ್ವಾಂತರ್ಯಾಮಿಯೂ ಸರ್ವ ಜಗದ್‌ರಕ್ಷಕನೂ ಆದ ಶ್ರೀಹರಿಯಲ್ಲಿ ನನಗೆ ದುರ್ದೈವದಿಂದ ಎಂದೂ ಇಲ್ಲದ ದ್ವೇಷ ಉಂಟಾಗಿತ್ತು. ಅದರಿಂದ ನಾನು ಜನ್ಮಜನ್ಮಾಂತರಗಳಲ್ಲಿ ಸತ್ ಕರ್ಮಾನುಷ್ಠಾನಗಳಿಂದ ಗಳಿಸಿದ ಪುಣ್ಯವು ತೊಳೆದುಹೋಯಿತು. ಅದರಿಂದ ನನಗೆ ಈಗ ಪರಮ ಪಶ್ಚಾತ್ತಾಪವಾಗಿದೆ. ಸುದೈವದಿಂದ ಹೇಗಾದರೂ ಮಾಡಿ ನಾನು ಈ ದುರ್‌ಯೋನಿಯಿಂದ ಮುಕ್ತನಾದರೆ ಎಂದೂ ನಾರಾಯಣ, ದ್ವೇಷವನ್ನು ಮಾಡುವದಿಲ್ಲ. ಶ್ರೀಹರಿಯ ಹೊರತು ಬೇರೆ ದೇವರನ್ನು ಪೂಜಿಸುವದಿಲ್ಲ. ಹಿಂದೆ ನಾನು ಮಾಡಿದ ಹರಿದ್ವೇಷದ ಫಲವಾಗಿ ಬಹುಕಾಲ ನಾನು ನರಕ ಯಾತನೆಗಳನ್ನು ಅನುಭವಿಸಿ ಪಿಶಾಚನಾಗಿ ಹುಟ್ಟಿದ್ದೇನೆ. ಈಗ ನನ್ನ ಪಿಶಾಚಭಾವವು

ತೊಲಗಿಹೋಗಲು ಯಾವ ಕರ್ಮವನ್ನು ಮಾಡಬೇಕು? ಯಾವ ವ್ರತವನ್ನು ಆಚರಿಸಬೇಕು? ಹೇಳು.

**ದೇವದ್ಯುತಿ:-** ಅಬ್ಬಾ ! ಏನು ಘೋರವಾಗಿದೆ ಈ ವಿಷ್ಣುದ್ವೇಷ ! ಆ ಭಗವನ್ ನಿಂದೆಯಿಂದ ಈ ದ್ರಾವಿಡ ರಾಜನು ಘೋರ ನರಕದಲ್ಲಿ ನವೆದು ಈಗ ಪಿಶಾಚ ಯೋನಿಯಲ್ಲಿ ತೊಳಲುತ್ತಲಿದ್ದಾನೆ.

**ತಸ್ಮಾದ್ ದ್ವೇಷಂ ಹಿ ದೇವೇಶ್ಯೈ ಬ್ರಾಹ್ಮಣೇಷು ವಿಶೇಷತಃ ।**
**ಸಂತ್ಯಜೇತ್ ಪುಣ್ಯ ಕಾಮೇತಾ ವೇದ ಬಾಹ್ಯಂ ಕ್ರಿಯಾಂ ತ್ಯಜೇತ್ ॥**

ಆದುದರಿಂದ ಮಾನವರು ದೇವಬ್ರಾಹ್ಮಣರಲ್ಲಿ ದ್ವೇಷವನ್ನು ಮಾಡಬಾರದು. ಪುಣ್ಯ ಬಯಸುವ ಮನುಷ್ಯರು ವೇದ ಶಾಸ್ತ್ರಗಳಲ್ಲಿ ನಿಷಿದ್ಧವಾದುದನ್ನು ಮಾಡಕೂಡದು. ಹೀಗೆ ತನ್ನ ಮನದಲ್ಲಿ ಚಿಂತಿಸಿ ಆ ದೇವದ್ಯುತಿ ಬ್ರಾಹ್ಮಣನು ಆ ಪಿಶಾಚವನ್ನು ಉದ್ದೇಶಿಸಿ ಸ್ಪಷ್ಟವಾಗಿ ಹೇಳಿದ - ''ಪಿಶಾಚ, ನೀನು ಪ್ರಯಾಗ ತೀರ್ಥಕ್ಕೆ ಹೋಗು. ಮಾಘಮಾಸದಲ್ಲಿ ಒಂದು ತಿಂಗಳವರೆಗೆ ಗಂಗಾ-ಯಮುನಾ ಸಂಗಮದಲ್ಲಿ ಸ್ನಾನಮಾಡು. ಇದರಿಂದ ನಿನಗೆ ಪಿಶಾಚ ಯೋನಿಯಿಂದ ಮುಕ್ತಿ ನಿಶ್ಚಿತ. ಮುಂದೆ ಸದ್ಗತಿಯೂ ನಿರ್ಣೀತ. ಅಲ್ಲಿಯ ನೀರಿನಲ್ಲಿ ಮಿಂದವರು ಸ್ವರ್ಗವನ್ನು ಕುರಿತು ಹೋಗುತ್ತಾರೆಂದು ''ಸಿತಾಸಿಷೇ ಸರಿತೇ ಸಂಗತೇನೆ । ಯತ್ರಪತಾಸೋ ದಿವಂ ಮುತ್ ಪತಂತಿ ।।'' ಎಂದು ವೇದವಾಣಿಯೇ ಹೇಳುತ್ತದೆ. ಪ್ರಯಾಗ ಸ್ನಾನದಿಂದ ಅಳಿಯದ ಪಾಪವೇ ಇಲ್ಲ. ಈ ಪ್ರಯಾಗ ಸ್ನಾನವು ಸರ್ವ ಪಾಪಗಳಿಗೂ ಪ್ರಾಯಶ್ಚಿತ್ತ ರೂಪ. ಸರ್ವಮೋಕ್ಷಗಳಿಗೆ ಇದೇ ಹೆಬ್ಬಾಗಿಲು. ಇದೇ ತೆರೆದ ಬಾಗಿಲು. ಈ ಕರಿಬಿಳಿ ಹೊಳೆಗಳು ವಿಧ್ಯೊ ಮಿಲನ ಹೊಂದಿದ ಈ ಸಂಗಮ ತೀರ್ಥದ ಮಹಿಮೆಯನ್ನು ಬಣ್ಣಿಸುವದು ನನ್ನ ಅಳಿವಿಗೆ ಮೀರಿದ್ದು. ಈ ಸಂಗಮ ತೀರ್ಥದ ಒಂದು ಹನಿ ಮಾತ್ರದಿಂದಲೇ ಕೇರಳದ ಬ್ರಾಹ್ಮಣನು ಮುಕ್ತನಾದ.

**ಪಿಶಾಚ:-** ಪೂಜ್ಯರೇ, ಯಾರು ಆ ಕೇರಳದ ಬ್ರಾಹ್ಮಣ? ಅವನು ಹೇಗೆ ಗಂಗಾ-ಯಮುನಾ ಸಂಗಮದ ತೀರ್ಥದ ನೀರಿನಿಂದ ಉದ್ಧಾರವನ್ನು ಹೊಂದಿದ? ಈ ಸಮಾಚಾರವನ್ನು ದಯವಿಟ್ಟು ತಿಳಿಸಿರಿ.

**ದೇವದ್ಯುತಿ:-** ಪಿಶಾಚನೇ, ಕೇಳು. ಹೇಳುತ್ತೇನೆ. ಪೂರ್ವ ಕಾಲದಲ್ಲಿ ಕೇರಳ ದೇಶದಲ್ಲಿ 'ವಸು' ಎಂಬ ಹೆಸರಿನ ಒಬ್ಬ ಬ್ರಾಹ್ಮಣ. ವೇದವೇದಾಂತಗಳಲ್ಲಿ ಪಾರಂಗತ. ಅವನ ದಾಯಾದಿಗಳು ಅವನಲ್ಲಿದ್ದ ಹಣವನ್ನೆಲ್ಲ ಕಿತ್ತುಕೊಂಡರು. ಊರು ಬಿಟ್ಟು ಹೊರಗೆ ಹಾಕಿದರು. ದೇಶಭ್ರಷ್ಟನಾದ ಆ ಬ್ರಾಹ್ಮಣ ದೇಶ ದೇಶಾಂತರಗಳಲ್ಲಿ ತಿರುಗುತ್ತ, ವನವನಗಳಲ್ಲಿ ಅಲೆಯುತ್ತ, ವಿಂಧ್ಯ ಪರ್ವತಕ್ಕೆ ಬಂದ. ಆ ಕಾಲದಲ್ಲಿ ಆ ವಿಂಧ್ಯಾಚಲದ ಪರಿಸರದಲ್ಲಿ ಘೋರ ಕ್ಷಾಮ. ಆ ದುರ್ಭಿಕ್ಷದಲ್ಲಿ ಅವನಿಗೆ ಎಲ್ಲಿಯೂ ಅನ್ನ ನೀರು ದೊರಕಲಿಲ್ಲ. ಹಸಿವೆಯ ಕಸಿವಿಸಿಯಿಂದ ಸಂಕಟಪಡುತ್ತ ಆ ಬ್ರಾಹ್ಮಣನು ವಿಂಧ್ಯ ಪರ್ವತದಲ್ಲಿಯೇ ಮರಣಹೊಂದಿದ. ಅವನಿಗೆ ಅಂತ್ಯ ಸಂಸ್ಕಾರದ ಕಾರ್ಯಕಲಾಪ ಯಾವುದೂ ದೊರಕಲಿಲ್ಲ. ವೇದೋಕ್ತ ಅಂತ್ಯ ಸಂಸ್ಕಾರ ಲಭಿಸದ್ದರಿಂದ ಅವನು ಅದೇ ವಿಂಧ್ಯಾದ್ರಿಯಲ್ಲಿ ಪ್ರೇತನಾಗಿ ಬಹುಕಾಲ ವಾಸಮಾಡಿದ. ಹಸಿವೆ, ನೀರಡಿಕೆ, ಬಾಯಾರಿಕೆ, ಬಳಲಿಕೆ, ಚಿಂತೆ, ಸಂತಾಪಗಳಿಂದ ಖಿನ್ನ ವಿಷಣ್ಣನಾದ ಆ ಪ್ರೇತವು, ಅನ್ನ ನೀರು ಇಲ್ಲದೆ

ಬರಿಗಾಲು ಬರಿಮೈ ಬಕ್ಕನೆತ್ತಿಯಿಂದ ಹಾಯ್ ಹಾಯ್ ಎಂದು ನಿಟ್ಟುಸಿರು ಬಿಡುತ್ತ ಗೊಂಡಾರಣ್ಯದಲ್ಲಿ ಅಂಡಲೆಯಿತು. ಮತ್ತು ತನ್ನ ದುಷ್ಟ ಕರ್ಮಗಳಿಗೆ ಪಶ್ಚಾತ್ತಾಪ ಪಡುತ್ತ ಹೀಗೆ ಯೋಚಿಸುತ್ತಿದ್ದ. "ಅಗ್ನಿಯಲ್ಲಿ ಶ್ರೀಹರಿಯನ್ನು ಉದ್ದೇಶಿಸಿ ಹೋಮ ಮಾಡದವರು, ಶ್ರೀಹರಿಯನ್ನು ಪೂಜಿಸದವರು, ವೇದಾಂತವನ್ನು ಓದದವರು, ತೀರ್ಥಕ್ಷೇತ್ರ ಯಾತ್ರೆ ಮಾಡದವರೂ, ದೀನ ದುಃಖಿತರಿಗೆ ಅನ್ನ, ನೀರು, ಬಟ್ಟೆ, ಬಂಗಾರ ಮುಂತಾದವುಗಳನ್ನು ದಾನ ನೀಡದವರೂ, ಸ್ತ್ರೀ ಧನವನ್ನು ಎತ್ತಿ ಹಾಕುವವರೂ, ವಿಷ ಹಾಕುವವರೂ, ಬೆಂಕಿ ಹಚ್ಚಿದವರೂ, ಸುಳ್ಳು ಸಾಕ್ಷಿ ನುಡಿಯುವವರೂ, ವ್ಯಭಿಚಾರ ಮಾಡುವವರೂ, ಪಿಶಾಚ ಯೋನಿಯನ್ನು ಹೊಂದುತ್ತಾರೆ. ತಾಯಿ, ತಂದೆ, ಮಗ, ಸೊಸೆ, ಹೆಂಡತಿ ಇವರನ್ನು ಕಾರಣವಿಲ್ಲದೆ ಬಿಟ್ಟು ಬಿಡುವವರು, ಗುರು ದೇವತೆಗಳನ್ನು ನಿಂದಿಸುವವರು, ಹೆರವರ ಮೇಲೆ ಸುಳ್ಳು ಅಪವಾದ ಹೊರಿಸುವವರು, ಮಹಾಕ್ಷೇತ್ರಗಳಲ್ಲಿ ದಾನ ಕೊಳ್ಳದವರು, ಪ್ರಾಣಿ ಹಿಂಸಕರು, ಪ್ರೇತ ರಾಕ್ಷಸ ಜನ್ಮವನ್ನು ಹೊಂದುತ್ತಾರೆ. ನಾನು ಕೂಡ ಇಂಥ ಘೋರ ಪಾಪಗಳ ಫಲವಾಗಿ ಇಂಥ ಪಿಶಾಚ ಜನ್ಮವನ್ನು ಹೊಂದಿದ್ದೇನೆ. ನನಗೆ ಇದರಿಂದ ಮುಕ್ತಿ ದೊರೆಯುವ ಬಗೆ ಯಾವದು?

ಹೀಗೆ ಆ ಪ್ರೇತವು ತನ್ನಲ್ಲಿ ತಾನೆ ಮಾತನಾಡಿಕೊಳ್ಳುತ್ತ ನಿಂತುಕೊಂಡಾಗ ಒಬ್ಬ ಯಾತ್ರಿಕ ಎರಡು ನೀರು ತುಂಬಿದ ಬಿಂದಿಗೆಗಳನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ಭಗವನ್‌ನಾಮಸ್ಮರಣೆ ಮಾಡುತ್ತ ಪ್ರಯಾಣ ಮಾಡುತ್ತಲಿದ್ದ. ಗಂಗಾ-ಯಮುನಾ ಸಂಗಮದ ನೀರನ್ನು ಎರಡು ಕೊಡಗಳಲ್ಲಿ ತುಂಬಿಕೊಂಡು ಅವೆರಡನ್ನೂ ಎರಡು ಬುಟ್ಟಿಗಳಲ್ಲಿ ಇಟ್ಟುಕೊಂಡು ಭಗವನ್ ನಾಮಸ್ಮರಣೆ ಮಾಡುತ್ತ ಮಾರ್ಗವನ್ನು ಕ್ರಮಿಸುತ್ತಲಿದ್ದ ಆ ಯಾತ್ರಿಕ. ಪ್ರೇತರೂಪ ಹೊಂದಿದ ಆ ಕೇರಳ ಬ್ರಾಹ್ಮಣ ಆ ಯಾತ್ರಿಕನ ಎದುರು ದಾರಿಗೆ ಅಡ್ಡವಾಗಿ ನಿಂತುಕೊಂಡ. ಮತ್ತು ಅವನಿಗೆ ಹೇಳಿದ.

**ಪ್ರೇತ:-** ಹೆದರಬೇಡ ಯಾತ್ರಿಕ, ನಾನು ನಿನಗೆ ಏನೂ ಮಾಡುವದಿಲ್ಲ. ನೀನು ಹೊತ್ತುಕೊಂಡು ನಡೆದ ಕರಂಡಕದಿಂದ ನನಗೆ ತುಸು ನೀರನ್ನು ಕೊಡು. ನೀನು ನೀರನ್ನು ಕೊಡದಿದ್ದರೆ ನಾನು ಬದುಕಿ ಉಳಿಯಲಾರೆ.

**ಯಾತ್ರಿಕ:-** ಅಯ್ಯಾ, ನೀನು ಯಾರು? ಎಷ್ಟು ಕೃಶನಾಗಿರುವೆಯಲ್ಲಾ ! ಬರಿಮೈ, ಬತ್ತಲೆ ದೇಹ, ಭೀಕರ ಆಕಾರ, ಕೊರಗಿ ಸೊರಗಿ ದುಃಖ ಪಡುತ್ತಲಿರುವ ನೀನು ಇಂಥ ದುರ್‌ಯೋನಿಯನ್ನು ಹೊಂದಲು ಕಾರಣವೇನು? ನಿನ್ನ ಕಾಲು ನೆಲಕ್ಕೆ ಹತ್ತುವದಿಲ್ಲ. ನಿನ್ನ ಹೊಳ್ಳ ತೋಳುಗಳಲ್ಲಿ ಮಾಂಸವೇ ಇಲ್ಲ ಹೊಗೆದುಂಬಿದಂತಹ ಕಪ್ಪದಪ್ಪವಾದ ಅಭಾಸ ಮಾತ್ರ ನಿನ್ನ ಶರೀರ. ಇಂಥ ದುರ್‌ಯೋನಿಯನ್ನು ಹೊಂದಿದ ನೀನು ಮೊದಲು ಏನು ಆಗಿದ್ದೆ?

**ಪ್ರೇತ:-** ಯಾತ್ರಿಕ, ನಾನು ಹಿಂದೆ ಬ್ರಾಹ್ಮಣನಾಗಿದ್ದೆ. ಪರಮ ಲೋಭಿ. ದುಷ್ಟ ಕಾರ್ಯಗಳಲ್ಲಿ ನನಗೆ ಆಸಕ್ತಿ. ನನ್ನ ಜನ್ಮದಲ್ಲಿ ನಾನು ಯಾರಿಗೂ ಎಂದೂ ಒಂದು ಬಿಡಿಕಾಸನ್ನೂ ದಾನನೀಡಲಿಲ್ಲ. ಒಂದು ಪುಣ್ಯಕಾರ್ಯವನ್ನೂ ಮಾಡಲಿಲ್ಲ. ಒಂದು ದಿನವೂ ನಾನು ನನ್ನ ಮನೆಯಲ್ಲಿ ಊಟ ಮಾಡಲಿಲ್ಲ ಪರಾನ್ನದಿಂದಲೇ ನನ್ನ ಹೊಟ್ಟೆ ಸುಟ್ಟು ಹೋಗಿತ್ತು. ನಾನು ಒಂದು ದೇವರನ್ನೂ ಎಂದೂ ಪೂಜಿಸಲಿಲ್ಲ ತಂದೆ ತಾಯಿಗಳ ಶ್ರಾದ್ಧ

ಮಾಡಲಿಲ್ಲ. ಅತಿಥಿಗಳಿಗೆ ಮನೆಯಲ್ಲಿ ಒಮ್ಮೆಯೂ ಪ್ರವೇಶ ಕೊಡಲಿಲ್ಲ. ಗೋಗ್ರಾಸವನ್ನು ನೀಡಲಿಲ್ಲ. ಕಾರ್ತಿಕದಲ್ಲಿ ದೀಪ ಹಚ್ಚಲಿಲ್ಲ. ಮಾಘದಲ್ಲಿ ಸ್ನಾನ ಮಾಡಲಿಲ್ಲ. ಸೂರ್ಯ ಸಿಂಹರಾಶಿಗೆ ಬಂದಾಗ ಗೋದಾವರಿಯಲ್ಲಿ ಮೀಯಲಿಲ್ಲ. ಕನ್ಯಾರಾಶಿಗೆ ರವಿ ಬಂದಾಗ ಕೃಷ್ಣಾನದಿಯಲ್ಲಿ ಸ್ನಾನ ಮಾಡಲಿಲ್ಲ ಏಕಾದಶಿ ದಿನ ಎಂದೂ ಉಪವಾಸ ಮಾಡಲಿಲ್ಲ. ಆದುದರಿಂದ ನಾನು ಇಂಥ ಘೋರವಾದ ಪಿಶಾಚಯೋನಿ ಹೊಂದಿದ್ದೇನೆ. ನನ್ನಂತೆ ದಾನ ನೀಡದೇ, ಧರ್ಮ ಮಾಡದೇ, ದೇವರನ್ನು ಪೂಜಿಸದೆ, ಗುರುಗಳನ್ನು ಸೇವಿಸದೆ ಭೂತ ಪ್ರೇತ ಪಿಶಾಚ ರಾಕ್ಷಸ ಯೋನಿ ಹೊಂದಿದ ಸಾವಿರಾರು ರಾಕ್ಷಸರು ಈ ಅರಣ್ಯದಲ್ಲಿ ಇರುತ್ತವೆ.

ಯಾತ್ರಿಕ, ಇದನ್ನು ಕೇಳಿ ನೀನು ಮತ್ತಿಷ್ಟು ಗಾಬರಿಯಾಗಬೇಡ. ಶ್ರೀಹರಿಯ ಪರಮ ಭಕ್ತನಾದ ನಿನ್ನನ್ನು ನೋಡಲಿಕ್ಕೂ ಕೂಡ ಶಕ್ತಿ ಇಲ್ಲ ಈ ಎಲ್ಲ ಭೂತ ಪ್ರೇತಪಿಶಾಚ ರಾಕ್ಷಸರಿಗೆ. ವಿಷ್ಣು ಭಕ್ತನಾದ ಬ್ರಾಹ್ಮಣನನ್ನು ಯಾವ ಗ್ರಹ ಯಕ್ಷ ಭೂತ ಬೇತಾಳ ದೈತ್ಯ ಭೂತ ಶಾಕಿನಿ, ಢಾಕಿನಿ, ರೇವತಿ, ಕ್ರುದ್ಧ ರೇವತಿ, ಮಾತೃಗ್ರಹ ಮುಂತಾದ ಯಾವ ದುಷ್ಟಶಕ್ತಿಯೂ ಕಾಡಲಾರವು, ಪೀಡಿಸಲಾರವು. ನಾಲಿಗೆ ತುದಿಯಲ್ಲಿ ನಾರಾಯಣ ನಾಮ, ಹೃದಯದಲ್ಲಿ ನಾಮ, ಮೆದುಳಿನಲ್ಲಿ ವೇದಾಂತ, ಮನಸ್ಸಿನಲ್ಲಿ ಭಗವನ್ ಮೂರ್ತಿ ನಲಿಯುತ್ತಲಿರುವ ನಿನಗೆ ಯಾತರ ಭಯ? ನಾನು ಮಾತ್ರ ಹಿಂದೆ ಮಾಡಿದ ಪಾಪದ ಫಲವನ್ನು ಅನುಭವಿಸುತ್ತ ದುಃಖ ಪಡುತ್ತಲಿದ್ದೇನೆ. ಆದರೆ ಜಬಾಲಿನಿ ನದಿಯ ತೀರದಲ್ಲಿ ಒಂದು ಸಾರಸಪಕ್ಷಿಯು ಹೇಳಿದ ಮಾತನ್ನು ಕೇಳಿ ಆಗುವಷ್ಟು ದುಃಖ ಮಾತ್ರ ನನಗೆ ಯಾವುದರಿಂದಲೂ ಆಗಿಲ್ಲ.

**ಯಾತ್ರಿಕ:-** ಸಾರಸವು ಹೇಳಿದ ಮಾತು ಯಾವದು? ನೀನು ಏನನ್ನು ಕೇಳಿದೆ? ಅದನ್ನು ಹೇಳು.

**ಪ್ರೇತ:-** ಈ ಪರ್ವತದಲ್ಲಿ ಧೂಸರಾ ಎಂಬ ಒಂದು ನದಿಯು ಹರಿಯುತ್ತಲಿದೆ. ನಾನು ಆ ನದಿಯ ದಂಡೆಯಲ್ಲಿ ಇರುವ ಗಹನ ವನಾಂತರದಲ್ಲಿ ಹೊಕ್ಕು ಹಣ್ಣು ಹಂಪಲಗಳನ್ನು ತಿನ್ನಬೇಕೆಂದು ಹೊರಟಿದ್ದೆ. ಆ ಕಾಲದಲ್ಲಿ ಒಂದು ಸಾರಸಪಕ್ಷಿಯು ಒಂದು ಹೆಣ್ಣು ಸಾರಸಿಯೊಂದಿಗೆ ಕೂಡಿಕೊಂಡು ಅನೇಕ ಸಹಸಖ ಪಕ್ಷಿಗಳೊಂದಿಗೆ ಕೂಡಿ ಅಲ್ಲಿಯ ಮರಳರಾಶಿಗೆ ಬಂದಿತು. ಆ ನದಿಯ ನೀರನ್ನೇ ಕುಡಿದು ತನ್ನ ಸಾರಸ ಸುಂದರಿಯೊಂದಿಗೆ ರಮಣಗೈದು ತನ್ನ ಎಡ ರೆಕ್ಕೆಯಲ್ಲಿ ತಲೆಯನ್ನು ಸೇರಿಸಿ ಮಲಗಿಕೊಂಡಿತು ಮಡದಿಯೊಂದಿಗೆ. ಆಗ ಮೈ ತುಂಬ ಕೂದಲು ಹಾಗೂ ಉದ್ದಬಾಲ ಉಳ್ಳ ಒಂದು ದುಷ್ಟ ಕಪಿಯು ಆ ಗಿಡದಿಂದ ಇಳಿದು ಅಲ್ಲಿಗೆ ಬಂದಿತು. ಕೆಂಪಗಿನ ಕಣ್ಣು, ಬಿರುಸಾದ ಉಗುರು, ಕೆಂಪು ಮುಖ, ಚಂಚಲ ಚೇಷ್ಟೆ ಉಳ್ಳ ಆ ಮರ್ಕಟವು ಸಾರಸ ಪಕ್ಷಿಯು ಮಲಗಿದಲ್ಲಿಗೆ ಬಂದು ಅದನ್ನು ತನ್ನ ಕಾಲಿನಲ್ಲಿ ಎರಗಿ ಹಿಡಿದುಕೊಳ್ಳಬಂದಿತು. ಅದನ್ನು ನೋಡಿ ಉಳಿದ ಎಲ್ಲ ಪಕ್ಷಿಗಳು ಹಾರಿ ಹೋದವು. ಆದರೆ ಅದರ ಪ್ರೇಯಸಿಯಾದ ಸಾರಸಿಯು ಮಾತ್ರ ಆ ಸ್ಥಳದಿಂದ ಕದಲದೇ ಚೀರಿಕೊಂಡಿತು. ಮನದನ್ನೆಯ ಕರುಳು ಕೊರೆಯುವ ಕರುಣೆಯ ಕೂಗಿನಿಂದ ಎಚ್ಚತ್ತ ಸಾರಸ ಹಕ್ಕಿಯು ತಲೆಯೆತ್ತಿ ನೋಡಿತು. ದೈತ್ಯಕಪಿಯೊಂದು ತನ್ನ ಮೇಲೆ ಆಕ್ರಮಣ ನಡೆಸಲಿಕ್ಕೆ ಸಿದ್ಧವಾಗಿ ಬರುತ್ತಿರುವದನ್ನು ಗಮನಿಸಿ ಗಾಬರಿಗೊಂಡು ದೀನದನಿಯಿಂದ ನಡಗುತ್ತ ನುಡಿಯಿತು.

**ಸಾರಸ:-** ಕಪೀಶ್ವರ, ನೀನೇಕೆ ನನ್ನನ್ನು ಕೊಲ್ಲಬಂದಿರುವೆ? ನಾನು ಏನು ತಪ್ಪು ಮಾಡಿದ್ದೇನೆ? ಯಾವ ತಪ್ಪೂ ಇಲ್ಲದೇ ನನ್ನನ್ನು ಹಿಂಸೆ ಮಾಡುವದು ನಿನ್ನಂಥ ಮಹಾಪುರುಷರಿಗೆ ಶೋಭಿಸುವದಿಲ್ಲ. ಮನುಷ್ಯ ಜಾತಿಯಲ್ಲಿ ಹುಟ್ಟಿದ ರಾಜರೂ ಕೂಡ ಅಪರಾಧ ಮಾಡಿದವರನ್ನು ಮಾತ್ರ ವಧಿಸುತ್ತಾರೆ. ನಾವು ನಿರಪರಾಧಿಗಳು ಮಾತ್ರವಲ್ಲ. ನಿರುಪದ್ರವಿಗಳೂ ಕೂಡ. ನಮ್ಮಿಂದ ಈ ಜಗತ್ತಿನಲ್ಲಿ ಯಾರಿಗೂ ಕೇಡಿಲ್ಲ. ಕೆಡಕೂ ಇಲ್ಲ.

ತೊರೆಯಲ್ಲಿ ಹರಿಯುವ ನೀರನ್ನು ಕುಡಿಯುತ್ತೇವೆ. ಕಮಲದ ದೇಟನ್ನು ತಿನ್ನುತ್ತೇವೆ. ಅರಣ್ಯದಲ್ಲಿ ವಾಸಿಸುತ್ತೇವೆ. ಪರಸ್ತ್ರೀಯರನ್ನು ಎಂದಿಗೂ ಕಣ್ಣೆತ್ತಿ ನೋಡುವದಿಲ್ಲ. ಇಂಥ ನಿರಪರಾಧಿಗಳನ್ನು ಪೀಡಿಸುವದು ನಿನಗೆ ಯೋಗ್ಯವಲ್ಲ. ಆದುದರಿಂದ ನಮ್ಮನ್ನು ಬಿಟ್ಟುಬಿಡು. ನಾನು ನಿನ್ನ ಜನ್ಮಾಂತರದ ಸಮಾಚಾರವನ್ನು ಚೆನ್ನಾಗಿ ಬಲ್ಲೆ. ಆದರೆ ನಿನಗೆ ಮಾತ್ರ ನನ್ನ ವೃತ್ತಾಂತವು ತಿಳಿದಿಲ್ಲ.

ಈ ಮಾತನ್ನು ಕೇಳಿದ ಕೂಡಲೇ ಆ ಚಂಚಲವಾದ ವಾನರವು ಆ ಸಾರಸವನ್ನು ತನ್ನ ಹಿಡಿತದಿಂದ ಬಿಟ್ಟಿತು. ಮತ್ತು ಅದನ್ನು ಕುರಿತು ಮಾತನಾಡಿತು.

**ವಾನರ:-** ಪಕ್ಷಿರಾಜ, ನೀನು ನನ್ನ ಜನ್ಮಾಂತರದ ಸಮಾಚಾರವನ್ನು ಹೇಗೆ ಅರಿತಿರುವೆ? ನೀನು ಕೂಡ ನನ್ನಂತೆ ಜ್ಞಾನಹೀನನಾದ ಪಕ್ಷಿ. ನಾನು ವನಚರನಾದ ಒಬ್ಬ ಸಾಮಾನ್ಯ ಕಪಿ. ನಿನಗೆ ನನ್ನ ಜನ್ಮಾಂತರದ ಸಮಾಚಾರವು ತಿಳಿದದ್ದು ಹೇಗೆ?

**ಸಾರಸಪಕ್ಷಿ:-** ನಾನು ನಿನ್ನ ಜನ್ಮಾಂತರದ ಕತೆಯನ್ನೆಲ್ಲ ಚೆನ್ನಾಗಿ ಬಲ್ಲೆ. ನೀನು ಹಿಂದಿನ ಜನ್ಮದಲ್ಲಿ ವಿಂಧ್ಯಾದ್ರಿಯ ಪರಿಸರದ ಅಧೀಶವರನು ಆಗಿದ್ದೆ. ಪರ್ವತೇಶ್ವರನಾದ ನಿನಗೆ ನಾನು ಕುಲಪುರೋಹಿತ. ನಿನ್ನ ಮನೆತನದ ಜನತೆಗೆಲ್ಲ ಪೂಜ್ಯನಾದ ಆಚಾರ್ಯ ನಾನು ಆಗಿದ್ದೆ. ಆದುದರಿಂದ ನಿನ್ನನ್ನು ಈಗಲೂ ನಾನು ಚೆನ್ನಾಗಿ ಗುರುತಿಸುತ್ತೇನೆ ರಾಜನಾಗಿ ಇದ್ದಾಗ ದ್ವೇಷ ಭ್ರಷ್ಟನಾದ ನೀನು ಪ್ರಜೆಗಳನ್ನೆಲ್ಲ ಪೀಡಿಸಿದೆ. ಹಣವನ್ನು ಸಂಪಾದಿಸಲಿಕ್ಕಾಗಿ ಎಲ್ಲ ಜನರನ್ನು ಹಿಂಡಿ ಹಿಪ್ಪಿ ಮಾಡಿದೆ. ನಿನ್ನನ್ನೇ ನಂಬಿದ ನಿರಪರಾಧಿಗಳಾದ ಪ್ರಜೆಗಳನ್ನು ಅತಿಶಯವಾಗಿ ಕಾಡಿಸಿ ಪೀಡಿಸಿ ಸಂತಾಪಗೊಳಿಸಿದ್ದರ ಉತ್ಕಟ ಪಾಪದಿಂದ ಮರಣಾನಂತರ ನೀನು ಕುಂಭೀಪಾಕ ಮುಂತಾದ ನರಕಗಳಲ್ಲಿ ತೊಳಲಿ ಬಳಲಿ ಸಂತಪ್ತನಾಗಿ ತೀವ್ರತರವಾದ ಯಮಯಾತನೆಯನ್ನು ಅನುಭವಿಸಿದೆ. ಈಗ ವಾನರ ಜನ್ಮ ಹೊಂದಿ ಇಲ್ಲಿ ಹುಟ್ಟಿ ಬಂದಿರುವೆ. ಹಿಂದಿನ ಜನ್ಮದಲ್ಲಿ ಓರ್ವ ಬ್ರಾಹ್ಮಣನ ಉಪವನದ ಕಲಿತ ಬಾಳೆಹಣ್ಣುಗಳನ್ನು ಕದ್ದು ತಂದು ಮಾರಿ ಹಣಗಳಿಸಿದ್ದರಿಂದ ನಿನಗೆ ಈಗ ಈ ಕೋತಿ ಜನ್ಮವು ಬಂದಿರುತ್ತದೆ.

**ವಾನರ:-** ನನ್ನ ಕತೆ ಈಗ ನಿನ್ನಿಂದ ತಿಳಿದಂತಾಯಿತು. ಆದರೆ ನಮ್ಮ ಪೂರ್ವಜನ್ಮದ ಕುಲಾಚಾರ್ಯನಾದ ನಿನ್ನಂತಹ ವಿಪ್ರೋತ್ತಮನು ಪಕ್ಷಿಯಾಗಿ ಜನಿಸಲು ಕಾರಣವೇನು?

**ಸಾರಸ:-** ಪೂರ್ವ ಜನ್ಮದಲ್ಲಿ ನೀನೂ ಸೂರ್ಯ ಗ್ರಹಣದ ಸಮಯದಲ್ಲಿ ನರ್ಮದಾ ತೀರಕ್ಕೆ ಹೋಗಿದ್ದೆ. ನರ್ಮದೆಯಲ್ಲಿ ಸ್ನಾನ ಮಾಡಿದ ಬಳಿಕ ಒಮ್ಮೆಲೇ ಕ್ಷಣಿಕವಾದ ದಾನ ಮಾಡಬೇಕೆಂಬ ಇಚ್ಛೆ ಹುಟ್ಟಿತು. ಉತ್ತತ್ತಿಯ ನೂರಾರು ಮೂಟೆಗಳನ್ನು ತರಿಸಿ ಎಲ್ಲ ಬ್ರಾಹ್ಮಣರಿಗೂ ನೀಡಿದೆ. ಆಗ ರಾಜಪುರೋಹಿತನಾದ ನಾನು

ನಿನ್ನ ಕಡೆಯಿಂದ ಬ್ರಾಹ್ಮಣರಿಗೆ ಹಂಚಿಕೊಡುತ್ತೇನೆಂದು ಹೇಳಿ ಎಲ್ಲ ಉತ್ತತ್ತಿಯ ರಾಶಿಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಎಲ್ಲ ಬ್ರಾಹ್ಮಣರಿಗೂ ಅಲ್ಪಸ್ವಲ್ಪ ಉತ್ತತ್ತಿಗಳನ್ನು ಕೈಗೆಹಚ್ಚಿ ಉಳಿದೆಲ್ಲವನ್ನು ನಾನೇ ಎತ್ತಿಹಾಕಿದೆ. ಬ್ರಾಹ್ಮಣರಿಗೆ ಎಂದು ನೀನು ನೀಡಿದ್ದನ್ನು ಅವರಿಗೆ ಕೊಡದೆ ಕುತಂತ್ರದಿಂದ ಎಲ್ಲವನ್ನು, ವಿಪ್ರರನ್ನೆಲ್ಲ ವಂಚಿಸಿ ಕಳ್ಳತನದಿಂದಾ ಸ್ವೀಕರಿಸಿ ಬಿಟ್ಟೆ. ಆ ಪಾಪದಿಂದ ಕಾಲಸೂತ್ರ ಎಂಬ ನರಕದಲ್ಲಿ ರಕ್ತದ ಕೆಸರಿನಲ್ಲಿ ಹರಿದಾಡುವ ಕ್ರಿಮಿಗಳಿಂದ ಕಡಿಸಿಕೊಂಡು ಅಲ್ಲಿಯ ಹೊಲಸನ್ನೇ ನೆಕ್ಕುತ್ತಾ ಅನೇಕ ವರ್ಷ ಕಷ್ಟಪಟ್ಟೆ. ಹೀಗೆ ಸಾವಿರಾರು ವರ್ಷ ನರಕದಲ್ಲಿ ನೊರಜು ಆಗಿ ದುಃಖದ ದಾವಾಗ್ನಿಯಲ್ಲಿ ಬೆಂದು ಈಗ ಇಂಥ ಸಾರಸ ಜನ್ಮವನ್ನು ಹೊಂದಿದ್ದೇನೆ.

ಪೌರೋಹಿತ್ಯವು ಒಂದು ಘೋರ ಪಾಪ. ರಾಜರ ದಾನವನ್ನು ಕೊಂಡು ಬ್ರಾಹ್ಮಣರು ದಗ್ಧರಾಗಿ ಹೋಗಿರುತ್ತಾರೆ. ಅಂಥವರ ದ್ರವ್ಯವನ್ನು ಕೂಡ ಬಿಡುವದಿಲ್ಲ ಪುರೋಹಿತ. ಆದ್ದರಿಂದ ಪೌರೋಹಿತ್ಯ ಮಾಡುವವರಿಗೆ ನರಕ ತಪ್ಪಿದ್ದಲ್ಲ. ''ರಾಜಾ ಯತ್ ಕುರುತೇ ಪಾಪಂ ಪುರಾ ದೇಹೇನ ಧೀಯತೆ ತಸ್ಯ ತೇನ ಪುರೋಧಾಶ್ಚ ಗೀಯತೇ ತತ್ವದರ್ಶಿಭಿಃ ॥'' ರಾಜನು ಮಾಡಿದ ಪಾಪವನ್ನೆಲ್ಲ ತನ್ನ ಪುರಾ ಎಂದರೆ ದೇಹದಿಂದ ಧರಿಸುತ್ತಾನೆ. ಆದುದರಿಂದ ಪುರೋಹಿತನು, ಪುರೋಧಾ ಎಂದು ಕರೆಯಲ್ಪಡುತ್ತಾನೆ. ಅಂತೂ ಹೇಗೋ ನಾನು ನರಕ ದುಃಖ ಸಾಗರದಿಂದ ಹೇಗೋ ಮೇಲೆ ಎದ್ದು ಬಂದು ಈಗ ಸಾರಸ ಪಕ್ಷಿಯಾಗಿ ಜನಿಸಿದ್ದೇನೆ. ಹಿಂದಿನ ಜನ್ಮದಲ್ಲಿ ನಾನು ಒಂದು ಕಾಜಿನ ಪಾತ್ರೆಯನ್ನು ತಂಗಿಯ ಮನೆಯಿಂದ ಕದ್ದು ಜೂಜಾಟವಾಡಿ ಸೋತಿದ್ದೆ. ಆದರಿಂದ ನನಗೆ ಸಾರಸ ಜನ್ಮವು ಬಂದಿರುತ್ತದೆ. ಇದರಂತೆ ನನ್ನ ಮಡದಿಯೂ ಪೂರ್ವದಲ್ಲಿ ಬ್ರಾಹ್ಮಣಿಯಾಗಿದ್ದು ಕಂಡವರ ಮನೆಯಿಂದ ಕಂಚಿನ ಪಾತ್ರೆಯನ್ನು ಕದಿಯುತ್ತಿದ್ದಳು. ಆದರಿಂದ ಈಗ ಹೆಣ್ಣು ಸಾರಸಪಕ್ಷಿಯ ಜನ್ಮ ಬಂದಿರುತ್ತದೆ.

ವಾನರಾ, ಹೇಗೆ ನಿನಗೆ ನನ್ನ ನಿನ್ನ ಹಿಂದಿನ ಮತ್ತು ಇಂದಿನ ಅರ್ಥಾತ್ ಭೂತ ವರ್ತಮಾನ ಕಾಲದ ಸಮಾಚಾರವನ್ನು ತಿಳಿಸಿದ್ದೇನೆ. ಇನ್ನು ಮುಂದಣದನ್ನು ಹೇಳುತ್ತೇನೆ ಕೇಳು.

ಮುಂದಿನ ಜನ್ಮದಲ್ಲಿ ನಾನು ಹಂಸವಾಗುತ್ತೇನೆ. ನೀನೂ ಕೂಡ ಹಂಸವಾಗುತ್ತಿ. ಈಗ ನನ್ನ ಮಡದಿಯಾದ ಈ ಸಾರಸಿಯೂ ಕೂಡ ಹಂಸಿ ಆಗಿಯೇ ಜನಿಸುವಳು. ಕಾಮರೂಪ ಎಂಬ ದೇಶದಲ್ಲಿ ನಾವು ಸುಖವಾಗಿ ವಾಸಮಾಡುವ ಮನುಷ್ಯ ಜನ್ಮ ಹೊಂದುತ್ತೇವೆ. ಈ ಮನುಷ್ಯ ಜನ್ಮ ಬಂದಾಗ ಉತ್ಕರ್ಷ ಅಥವಾ ಅಪಕರ್ಷ ಉನ್ನತಿ ಅಥವಾ ಅಧೋಗತಿ, ಶ್ರೇಯಸ್ಕರ ಅಥವಾ ಪಾಪಕರವಾದ ಕಾರ್ಯಗಳನ್ನು ಮಾಡುವದು ಮನುಷ್ಯರ ಕೈಯಲ್ಲಿ ಇರುತ್ತದೆ. ಹೀಗೆ ಪರಮೇಶ್ವರನು ತನ್ನ ಮಾಯೆಯಿಂದ ಎಲ್ಲ ಜನರನ್ನು ಮೋಹಗೊಳಿಸಿ ಸುಖವನ್ನಾಗಲಿ ದುಃಖವನ್ನಾಗಲಿ ಅನುಭವಿಸಲಿಕ್ಕೆ ಹಚ್ಚುತ್ತಾನೆ ಜನರು ಮಾಡಿದ ಚಿಕ್ಕ ದೊಡ್ಡ ಅಥವಾ ಕ್ಷುದ್ರ ಮಹತ್ತರವಾದ ಕೆಲಸಗಳಿಗೆ ಪರಮೇಶ್ವರನು ದೇಶ ಕಾಲಕ್ಕೆ ಅನುಗುಣವಾಗಿ ಫಲ ನೀಡುತ್ತಾನೆ. ಹೀಗೆ ಮಹೇಶ್ವರನ ಮಾಯೆಯು ಮಾಡಬೇಕಾದುದನ್ನೆಲ್ಲ ಮಾಡುತ್ತದೆ. ಈ ಪರಮೇಶ್ವರನ ಮಾಯೆಯ ವಿಧಿಯ ಕರ್ಮವನ್ನು ಬಲ್ಲವರು ದುಃಖಪಡುವದಿಲ್ಲ. ಎಂದೂ ಪಶ್ಚಾತ್ತಾಪ ಪಡುವದಿಲ್ಲ. ಅವರಿಗೆ ಈ ವಿಷಯದಲ್ಲಿ ಇನಿತೂ ವ್ಯಥೆ ಇರುವದಿಲ್ಲ. ಪೂರ್ವ ಕರ್ಮಗಳ ಪರಿಣಾಮವನ್ನು

ಯಾವ ಉಪಾಯದಿಂದಲೂ ಎಂಥ ಬುದ್ಧಿಮತ್ತೆಯಿಂದಲೂ ತಪ್ಪಿಸಲಿಕ್ಕೆ ಆಗುವದಿಲ್ಲ. ನೀನು ಹಿಂದೆ ರಾಜನಾಗಿ ಮರಣಹೊಂದಿ ನರಕದಲ್ಲಿ ಬಿದ್ದು ಈಗ ವಾನರನು ಆಗಿರುವೆ. ಶೌಕ್ಯ ಮೃಗವೇ, ನೀನು ಈಗ ಶೋಕವನ್ನು ಬಿಟ್ಟುಬಿಡು. ಈ ಅರಣ್ಯದಲ್ಲಿ ಕಾಲ ಪ್ರತೀಕ್ಷೆಯನ್ನು ಮಾಡುತ್ತ ನೆಲಿಸು.

**ವಾನರ:-** ಪಕ್ಷಿರಾಜನೆ, ನಾನು ನಿನ್ನನ್ನು ಪೂಜಿಸಿದ್ದೇನೆ. ಈಗ ನೀನು ಜಾತಿಸ್ಮರನಾಗಿ ರೂಪಗೊಂಡಿರುವೆ. ನಾನು ಹಿಂದೆ ಮಾಡಿದ ಪಾಪಗಳೆಲ್ಲವೂ ಈಗ ಸ್ಮರಣಕ್ಕೆ ಬಂದಿವೆ. ನಿನ್ನ ಮಡದಿಯಾದ ಸಾರಸಿಯಿಂದ ಸಹಿತನಾದ ನಿನಗೆ ಕಲ್ಯಾಣವಾಗಲಿ. ನಿನ್ನ ಮಾತಿನಿಂದ ಮೋಹದ ಮಂಜಿನ ಪರೆ ಹರಿಯಿತು. ಸತ್ಯದ ಕಣ್ಣು ತೆರೆಯಿತು. ಇನ್ನು ನಾನು ಆನಂದದಿಂದ ಮನಬಂದ ಕಡೆ ಸ್ವಚ್ಛಂದದಿಂದ ಸಂಚರಿಸುತ್ತೇನೆ.

**ಪ್ರೇತ:-** ಈ ಸಾರಸ ಪಕ್ಷಿ ಹಾಗೂ ವಾನರಗಳ ವಿಚಿತ್ರವೂ ಪವಿತ್ರವೂ ರಮಣೀಯವೂ ಶ್ರವಣೀಯವೂ ಆದ ಸಂವಾದವನ್ನು ಕೇಳಿ ನನಗೂ ಕೂಡ ಅರಿವು ಮೂಡಿತು. ನನ್ನ ದುಃಖವೂ ಅಡಗಿತು ದುಗುಡ ಕಳೆಯಿತು. ಈಗ ಪ್ರಕೃತದಲ್ಲಿ ನಾನು ತಿಳಿದಿದ್ದು ಇಷ್ಟು. ಗಂಗೆಗೆ ಸಮಾನವಾದ ಪವಿತ್ರ ಜಲ ಇರುವದಿಲ್ಲ. ಗಂಗೆಯ ಮಹಿಮೆ ಅದ್ಭುತ. ಅದರ ಪ್ರಭಾವ ವರ್ಣನಾತೀತ. ಅದರ ಮಾಹಾತ್ಮ್ಯ ಅತ್ಯದ್ಭುತ. ಇದನ್ನೇ ತಿಳಿದು ನಾನು ನಿನಗೆ ನಿನ್ನ ಕಲಶದಲ್ಲಿರುವ ಗಂಗಾಜಲವನ್ನು ಯಾಚಿಸುತ್ತಿದ್ದೇನೆ. ನಾನು ಈಗ ಅನುಭವಿಸುತ್ತಿರುವ ಈ ಪ್ರೇತ ಜನ್ಮದಲ್ಲಿ ಯಾವಾಗಲೂ ನನಗೆ ತೀರದ ಹಸಿವೆಯ ದಾಹ. ಎಂದಿಗೂ ಆರದ ಬಾಯಾರಿಕೆ. ಇದೇ ಪರ್ವತದಲ್ಲಿ ನಾನು ಗಂಗಾಜಲದ ಮಹಾ ಮಹಿಮೆಯನ್ನು ಕಣ್ಣಿಂದ ನೋಡಿದ್ದೇನೆ. ಆದುದರಿಂದ ಹೇಗಾದರೂ ಮಾಡಿ ಪವಿತ್ರವಾದ ಆ ದೇವ ನದಿಯ ಪುಣ್ಯೋದಕವನ್ನು ಪಾನಮಾಡಬೇಕೆಂಬ ಹಂಬಲ ಬಲವತ್ತರವಾಗಿ ನನ್ನನ್ನು ಹಿಡಿದಿದೆ. ಮಂದಾಕಿನಿಯ ಪಾವನ ಸಲಿಲ ಮಹಿಮೆ ಹೇಳಿದಷ್ಟು ಅಪಾರ. ತಿಳಿದಷ್ಟು ಅಗಾಧ.

ಹಿಂದೆ ಪಾರಿಯಾತ್ರ ಪರ್ವತದ ಪರಿಸರದಲ್ಲಿ ಓರ್ವ ವಿದ್ವಾನ್ ಬ್ರಾಹ್ಮಣ ನೆಲೆಸಿದ್ದ. ಅವನಿಗೆ ಹಣದ ಆಸೆ ಬಹಳ. ಹೇಗಾದರೂ ಮಾಡಿ ಹೇರಳವಾಗಿ ಹಣವನ್ನು ಗಳಿಸಬೇಕು. ತನ್ನ ಬೊಕ್ಕಸ ಭಾಂಡಾರ ಬೆಳೆಸಬೇಕು, ಎಂಬ ಹುಚ್ಚು ಹವ್ಯಾಸದಲ್ಲಿ ಅವನು ಊರೂರು ಅಲೆಯುತ್ತಿದ್ದ. 'ಇಷ್ಟು ಹಣವನ್ನು ಕೊಡಬೇಕೆಂದು' ಕರಾರು ಮಾಡಿ ಮದುವೆ, ಮುಂಜಿವೆ, ಶ್ರಾದ್ಧ, ಅಂತ್ಯೇಷ್ಟಿ ಮುಂತಾದ ಸವ್ಯ ಅಪಸವ್ಯದ ಕಾರ್ಯವನ್ನು ಸಂಕೋಚವಿಲ್ಲದೆ ಮಾಡಿಸುತ್ತಿದ್ದ. ಅವರನ್ನು ಕಾಡಿಸಿ ಪೀಡಿಸಿ ದ್ರವ್ಯವನ್ನು ಕಿತ್ತುತ್ತಿದ್ದ. ಹೀಗೆ ಬದುಕಿ ಇರುವವರೆಗೂ ದ್ರವ್ಯದ ಲೋಭದಿಂದ ಅಕಾರ್ಯ, ದುಷ್ಟಕಾರ್ಯಗಳನ್ನು ಮಾಡಿದ. ಆ ಬ್ರಾಹ್ಮಣ ವಿಂಧ್ಯ ಪರ್ವತದಲ್ಲಿ ಬ್ರಹ್ಮರಾಕ್ಷಸನಾಗಿ ಹುಟ್ಟಿದ. ಅನಂತರ ಅವನ ಮಗನು ತನ್ನ ತಂದೆಯ ಮರಣಾನಂತರ ಅವನ ಮೂಳೆಗಳನ್ನು ಆಯ್ದು ಕನಬಲಕ್ಷೇತ್ರದಲ್ಲಿ ಗಂಗೆಯ ನೀರಿನಲ್ಲಿ ತಂದು ಹಾಕಿದ. ಅದರಿಂದ ಕ್ಷಣಾರ್ಧದಲ್ಲಿ ಅವನ ತಂದೆಯು ಘೋರವಾದ ಆ ಬ್ರಹ್ಮರಾಕ್ಷಸ ಜನ್ಮದಿಂದ ಮುಕ್ತನಾಗಿ ಸದ್ಗತಿ ಹೊಂದಿದ. ಇದನ್ನು ನಾನು ಸ್ವಯಂ ಕಣ್ಣಿನಿಂದಲೇ ನೋಡಿದ್ದೇನೆ. ಅದಕ್ಕಾಗಿಯೇ ಗಂಗೆಯ ನೀರನ್ನು ಕೊಡಲಿಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ. ಹಿಂದೆ ನಾನು ಬ್ರಾಹ್ಮಣನಾಗಿದ್ದಾಗ ತೀರ್ಥ ಕ್ಷೇತ್ರದಲ್ಲಿ ಬಂದ ಯಾತ್ರಿಕರ ಕಡೆಯಿಂದ ವಿಚಾರ ಮಾಡದೆ ಹಣವನ್ನು ತೆಗೆದುಕೊಂಡು ಅದರ ಪರಿಹಾರಕ್ಕಾಗಿ

ಅದಕ್ಕೆ ಮಾಡಬೇಕಾದ ಜಪ, ಉಪವಾಸ, ವ್ರತ, ಹರಿಸ್ಮರಣ ಮುಂತಾದ ಯಾವುದೇ ಪ್ರಾಯಶ್ಚಿತ್ತ ವಿಧಿಯನ್ನು ಮಾಡಿಕೊಳ್ಳಲಿಲ್ಲ. ಅದರಿಂದ ನಾನು ಬ್ರಹ್ಮರಾಕ್ಷಸನಾಗಿ ಇಲ್ಲಿ ಹುಟ್ಟಿ ಒಂದು ಸಾವಿರ ವರ್ಷಗಳಿಂದ ಅನ್ನ, ನೀರು ಇಲ್ಲದೆ ಬಳಲುತ್ತಿದ್ದೇನೆ. ಅದಕ್ಕಾಗಿ ನಾನು ನಾಚಿಕೆ ಬಿಟ್ಟು ನಿನ್ನ ಎದುರು ನನ್ನ ದುರಾಚಾರ ಪಾಪಾಚಾರದ ಸಮಾಚಾರವನ್ನೆಲ್ಲ ತಿಳಿಸಿದ್ದೇನೆ. ಆದುದರಿಂದ ಕೂಡಲೇ ಭಾಗೀರಥಿಯ ಸವಿನೀರನ್ನು ಕೊಟ್ಟು ಕುತ್ತಿಗೆಗೆ ಬಂದ ನನ್ನ ಪ್ರಾಣಗಳನ್ನು ಉಳಿಸು. ನನಗೆ ಪ್ರೇತತ್ವ ಬಂದಿದ್ದರೂ ಸಾಯಲಿಕ್ಕೆ ನಾನು ಇನ್ನೂ ಸಿದ್ಧನಿಲ್ಲ. ಬದುಕುವ ಆಸೆ ಪ್ರಾಣಿಗಳಿಗೆ ಎಂದೂ ಅಳಿಯುವದಿಲ್ಲ.

ಪ್ರೇತದ ಈ ಮಾತುಗಳನ್ನು ಕೇಳಿ ಅತ್ಯಾಶ್ಚರ್ಯ ಆ ಪಥಿಕನಿಗೆ. ಅವನು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ನಂತರ ಗಟ್ಟಿಯಾಗಿ ನುಡಿದ - ''ಪಾಪ ಪುಣ್ಯಗಳ ಫಲಾಫಲಗಳು ಪ್ರಾಣಿಗಳಿಗೆ ಈ ಜಗತ್ತಿನಲ್ಲಿ ಪ್ರತ್ಯಕ್ಷವಾಗಿಯೇ ಕಂಡುಬರುತ್ತವೆ. ಐಶ್ವರ್ಯ ದಾರಿದ್ರ್ಯ. ಪಾಂಡಿತ್ಯ ಮೂರ್ಖತೆ, ಆರೋಗ್ಯ ರೋಗ, ದೃಷ್ಟಿ ಪಾಟವ ಕುರುಡು ಇವೆಲ್ಲವೂ ದಾನಧರ್ಮ ಮತ್ತು ಪಾಪಕರ್ಮಗಳ ಪರಿಣಾಮ ರೂಪದಿಂದ ಪ್ರತ್ಯಕ್ಷವಾಗಿಯೇ ಕಂಡು ಬರುತ್ತಲಿವೆ. ಸತ್ಕರ್ಮ ಮಾಡಿದವರೂ ಸತ್ಪಾತ್ರದಲ್ಲಿ ದಾನ ನೀಡಿದವರೂ ಸತ್ಕುಲಪ್ರಸೂತರಾಗಿ ಆರೋಗ್ಯ, ಐಶ್ವರ್ಯ, ವಿದ್ಯೆ, ಸಂತಾನ, ಮನೆ, ಹೊಲ, ಸ್ಥಿರಚರ ಆಸ್ತಿ, ಔದಾರ್ಯ, ಚಾತುರ್ಯ ಮುಂತಾದವುಗಳನ್ನು ಹೊಂದಿ ಈ ಲೋಕದಲ್ಲಿ ಸುಖಸಂಪನ್ನವಾದ ಬಾಳನ್ನು ಬದುಕುತ್ತಾರೆ. ಬದುಕಿ ಇದ್ದಾಗ ಏನೂ ದಾನ ಮಾಡದವರು ಕೀಳು ಕುಲದಲ್ಲಿ ಹುಟ್ಟಿ ಬೇನೆ, ಬಡತನ, ಮೂರ್ಖತನ, ಗುಲಾಮಗಿರಿ, ಅಪಕೀರ್ತಿ, ಕಿವುಡು, ಕುರುಡು, ವ್ಯಂಗ್ಯತೆ ಮುಂತಾದವುಗಳಿಂದ ಗೋಳಿನ ಬಾಳನ್ನು ಬದುಕುತ್ತಾರೆ. ಆದುದರಿಂದ ಮನುಷ್ಯರು ಜೀವಿಸಿದ್ದಾಗಲೇ ಯಥಾಶಕ್ತಿ, ಗೋದಾನ, ಭೂದಾನ, ಹಿರಣ್ಯದಾನ, ಕನ್ಯಾದಾನ, ಅನ್ನದಾನ, ವಿದ್ಯಾದಾನ, ಗೃಹದಾನ, ಜಲದಾನ ಮುಂತಾದ ದಾನಗಳನ್ನು ನೀಡಬೇಕು. ಅಂದರೆ ಮಾತ್ರ ಜನ್ಮಾಂತರದಲ್ಲಿ ಅಧಿಕಾರ, ಐಶ್ವರ್ಯ, ಮುತ್ತು, ರತ್ನ, ಕಲಾಕೌಶಲ್ಯ, ಮಂದಿರ, ಹಸು, ಹೆಂಡತಿ, ಛತ್ರ, ಚಾಮರ, ವೈದುಷ್ಯ, ವೈಭವ ಮುಂತಾದವುಗಳನ್ನು ಪಡೆದು ಸುಖೀ ಜೀವನವನ್ನು ನಡೆಸುತ್ತಾನೆ. ಆದುದರಿಂದ ಸರ್ವಪ್ರಯತ್ನಮಾಡಿ ಮಾನವರು ದಾನಮಾಡಬೇಕು.

**ಪ್ರೇತ:-** ಯಾತ್ರಿಕ, ನಿನ್ನ ಮಾತುಗಳನ್ನು ಕೇಳಿದರೆ ನೀನು ಧರ್ಮದ ಮರ್ಮವನ್ನು ಚೆನ್ನಾಗಿ ಅರಿತಿರುವೆ ಎಂಬುದು ಸುಸ್ಪಷ್ಟ. ಆದುದರಿಂದ ಚಾತಕದಂತೆ ನೀರಡಿಸಿ ನಿಂತ ನನಗೆ ನೀರು ಕೊಡು, ತಡ ಮಾಡಬೇಡ.

**ಯಾತ್ರಿಕ:-** ಪ್ರೇತ, ನಿನ್ನ ಕಥೆ, ವ್ಯಥೆ ಎಲ್ಲವನ್ನೂ ಕೇಳಿ ನನಗೆ ಕೆಡುಕೆನಿಸಿದೆ. ಭೃಗುಕ್ಷೇತ್ರದಲ್ಲಿ ನನ್ನ ತಾಯಿ-ತಂದೆಗಳು ಇರುತ್ತಾರೆ. ಆ ನನ್ನ ಮುಪ್ಪಿನ ಮಾತಾಪಿತೃಗಳಿಗೆ ಕೊಡಲಿಕ್ಕಾಗಿ ನಾನು ಬಹಳ ಕಷ್ಟಪಟ್ಟು ಗಂಗಾ-ಯಮುನಾ ಸಂಗಮದ ಈ ನೀರನ್ನು ಹೆಗಲ ಮೇಲೆ ಹೊತ್ತು ಒಯ್ಯುತ್ತಲಿರುವೆ. ಈಗ ಇಲ್ಲಿ ಮಾರ್ಗಮಧ್ಯದಲ್ಲೇ ನೀನು ನೀರನ್ನು ಕೇಳುತ್ತಲಿರುವಿ. ನನಗೆ ಈಗ ಧರ್ಮ ಸಂದೇಹ, ನಾನೇನು ಮಾಡಲಿ? ಯಾವುದು ಯೋಗ್ಯ? ಈ ಸಂಗಮದ ಗಂಗೋದಕವನ್ನು ತಾಯಿ-ತಂದೆಗಳಿಗೆ ಒಯ್ದು ಮುಟ್ಟಿಸಲೋ, ದಾರಿಯಲ್ಲಿಯೇ ಬಾಯ್ತೆರೆದು ಕುಳಿತಿರುವ ಈ ಪ್ರೇತಕ್ಕೆ ಹನಿಸಲೋ?

ಯಾವುದು ಧರ್ಮ? ಯಾವುದು ಅಧರ್ಮ? ಇವೆರಡರ ಬಲಾಬಲ ವಿಚಾರವನ್ನು ವೇದಶಾಸ್ತ್ರಾನುಸಾರವಾಗಿ ನಾನೇ ಮಾಡಬೇಕಾಗಿದೆ.

**ಹಯಮೇಧಾದಿ ಯಜ್ಞೇಭ್ಯಃ ಸರ್ವೇಭ್ಯೋಽಪ್ಯಧಿಕಂ ಮತಂ ।**
**ಋಷಿಭಿರ್ದೇವತಾಭಿಶ್ಚ ಪ್ರಾಣಿನಾಂ ಪ್ರಾಣರಕ್ಷಣಂ ॥**

ಅಶ್ವಮೇಧಾದಿ ಯಜ್ಞ ಹಾಗೂ ದೇವಪೂಜೆ, ಋಷಿತರ್ಪಣ, ಉಳಿದೆಲ್ಲ ಪುಣ್ಯ ಕರ್ಮಗಳಿಗಿಂತಲೂ ಪ್ರಾಣಿಗಳ ಪ್ರಾಣರಕ್ಷಣವು ಶ್ರೇಷ್ಠವಾದ ಧರ್ಮ ಹಾಗೂ ಅವಶ್ಯ ಕರ್ತವ್ಯವಾದ ಪುಣ್ಯಕಾರ್ಯ. ಆದುದರಿಂದ ಈಗ ನಾನು ನನ್ನ ಕೈಯಲ್ಲಿರುವ ಈ ಗಂಗೋದಕವನ್ನು ಈ ಪ್ರೇತನಿಗೆ ಕೊಟ್ಟು ಇದರ ಪ್ರಾಣ ರಕ್ಷಣೆ ಮಾಡಿ ನನ್ನ ತಂದೆ-ತಾಯಿಗಳ ಸಲುವಾಗಿ ಮತ್ತೊಮ್ಮೆ ಪ್ರಯಾಗ ಕ್ಷೇತ್ರಕ್ಕೆ ಹೋಗಿ ಆ ತೀರ್ಥಜಲವನ್ನು ತಂದುಕೊಡುತ್ತೇನೆ. ಇದೇ ಎಲ್ಲಕ್ಕಿಂತ ಶ್ರೇಷ್ಠವಾದ ಶುದ್ಧ ಧರ್ಮ.

**ಪರೋಪಕರಣಾದನ್ಯತ್ ಸರ್ವ ಮಲ್ಪಂ ಸ್ಮೃತಂ ಬುಧೈಃ ।**
**ಪರೋಪಕಾರಿಭಿರ್ದತ್ತಾ ಅಪಿಪ್ರಾಣಾನ್ನೃಭಿರ್ಮುದಾ ॥**

"ಪರೋಪಕಾರದ ಹೊರತು ಉಳಿದೆಲ್ಲ ಧರ್ಮಗಳೂ ಅಲ್ಪ ಧರ್ಮಗಳೇ. ಪರೋಪಕಾರವೇ ಶ್ರೇಷ್ಠ ಧರ್ಮ. ಅನೇಕ ಜನರು ಪರೋಪಕಾರಕ್ಕಾಗಿ ತಮ್ಮ ಪ್ರಾಣಗಳನ್ನೇ ಸಂತೋಷದಿಂದ ನೀಡಿದ್ದಾರೆ."

ಅಂದಬಳಿಕ ಈಗ ನನಗೆ ನನ್ನ ಕೈಯಲ್ಲಿಯ ಕೇವಲ ನೀರನಿಂದಲೇ ಅಂಥ ಪರೋಪಕಾರವನ್ನು ಸಾಧಿಸಲು ಬರುತ್ತಿದ್ದರೆ ನಾನೇಕೆ ಮಾಡಬಾರದು? ಪೂರ್ವಕಾಲದಲ್ಲಿ ತಮ್ಮ ಮೈಯಲ್ಲಿಯ ಮೂಳೆಗಳನ್ನೇ ದಾನನೀಡಿದ ದಧೀಚಿ ಮುನಿಗಳು ಹೇಳಿದ ಒಂದು ಶ್ಲೋಕವು ನನಗೆ ಈಗ ಒಳ್ಳೇ ಮಾರ್ಗದರ್ಶಕವಾಗಿರುತ್ತದೆ.

**ಸರ್ವ ಧರ್ಮ ಮಯಃ ಸಾರಃ ಸರ್ವಧರ್ಮಜ್ಞ ಸಮ್ಮತಃ ।**
**ಪರೋಪಕಾರಃ ಕರ್ತವ್ಯಃ ಪ್ರಾಣೈರಪಿ ಧನೈರಪಿ ॥**

"ಎಲ್ಲ ಧರ್ಮದರ್ಶಿಗಳಾದ ಋಷಿಮುನಿಗಳಿಗೆ ಸಮ್ಮತವಾದ ಸರ್ವಧರ್ಮದ ಸಾರ ಎಂದರೆ ಮನುಷ್ಯರು ತಮ್ಮ ಮತ್ತು ದ್ರವ್ಯಗಳಿಂದ ಪರರಿಗೆ ಉಪಕಾರವನ್ನು ಮಾಡತಕ್ಕದ್ದು."

ಹೀಗೆ ಅರ್ಧ ಪ್ರೇತವನ್ನು ಕುರಿತು, ಅರ್ಧ ತನ್ನನ್ನೇ ಕುರಿತು ನುಡಿದಂತೆ ಮಾಡಿ ಧರ್ಮಿಷ್ಠನಾದ ಆ ಯಾತ್ರಿಕನು ಗಂಗಾ-ಯಮುನಾ ಸಂಗಮ ತೀರ್ಥದಿಂದ ತಾನು ಹೊತ್ತು ತಂದ ಪುಣ್ಯ ಜಲವನ್ನು ಆ ಪ್ರೇತದ ಪ್ರಾಣರಕ್ಷಣೆಗಾಗಿ ನೀಡಿದನು. ಆ ಪ್ರೇತವು ಆನಂದದಿಂದ ಯಾತ್ರಿಕನು ನೀಡಿದ ನೀರನ್ನು ಮೈತುಂಬಾ ಸುರಿದು ಕೊಂಡು ಸ್ನಾನಮಾಡಿ, ಯಥೇಚ್ಛವಾಗಿ ಗಂಗಾಜಲವನ್ನು ಪಾನಮಾಡಿ ತಕ್ಷಣದಲ್ಲಿ ರಾಕ್ಷಸ ಶರೀರದಿಂದ ಹೊರಬಂದು ದಿವ್ಯದೇಹವನ್ನು ಹೊಂದಿತು. ರಾಕ್ಷಸದೇಹವನ್ನು ಪಡೆದ ಆ ಕೇರಳದ ಬ್ರಾಹ್ಮಣನು ಪ್ರೇತಜನ್ಮದಿಂದ ಕೂಡಲೇ ಮುಕ್ತನಾಗಿ ತನಗೆ ಬಂದ ದೈವೀ ದೇಹವನ್ನು ಮತ್ತೆ ಅಡಿಯಿಂದ ಮುಡಿಯವರೆಗೆ, ಮುಡಿಯಿಂದ ಅಡಿಯವರೆಗೆ ಮತ್ತೆ ಮತ್ತೆ ಪರಿಕಿಸಿ, ಇರುಕಿಸಿ ನೋಡಿ ಆತ್ಯಾಶ್ಚರ್ಯದಿಂದ ಪುಳುಕಿತನಾಗಿ ಗದ್ಗದ ಕಂಠದಿಂದ ನುಡಿದನು.

**ಕೇರಳ ಬ್ರಾಹ್ಮಣ:-**

**ಬ್ರಹ್ಮಾಪಿ ನೈವ ಶ್ನೋತಿ ಮನ್ಯೇ ವಕ್ತುಮಪಾಂ ಗುಣಮ್ ।**
**ಗಂಗಾ ತೋಯಂ ಮಹಾದೇವೋ ಧತ್ತೇ ಕೇ ಕಥಮನ್ಯಥಾ ॥**

ಗಂಗೆಯ ನೀರಿನ ಗುಣವನ್ನು ಬ್ರಹ್ಮದೇವನಿಗೂ ಬಣ್ಣಿಸಲಾಗದು ಎಂದು ನನ್ನ ಅಭಿಪ್ರಾಯ. ಇಲ್ಲದಿದ್ದರೆ ಈ ಗಂಗೆಯ ನೀರನ್ನು ಮಹಾದೇವನು ಏಕೆ ತನ್ನ ತಲೆಯಲ್ಲಿ ಹೊತ್ತು ನಿಲ್ಲುತ್ತಿದ್ದ?

**ನ ಗಂಗಾ ಸದೃಶೀ ಸಿದ್ಧಿ: ನ ಗಂಗಾ ಸದೃಶೀ ಮತಿಃ ।**
**ನ ಗಂಗಾ ಸದೃಶೀ ಮುಕ್ತಿ: ಗಂಗಾ ಸರ್ವಾಧಿಕಾ ಮತಾ ॥**

''ಗಂಗೆಯಂಥ ಸಿದ್ಧಿಯಿಲ್ಲ. ಗಂಗೆಯಂಥ ಬುದ್ಧಿಯಿಲ್ಲ. ಗಂಗೆಯಂಥ ಮುಕ್ತಿಯಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿದೆ ಈ ಗಂಗೆಯ ನೀರು.''

ಪುಣ್ಯಾತ್ಮ ! ನೀನು ಆಯುಷ್ಯವಂತನಾಗು. ಧರ್ಮಿಷ್ಠನಾಗು. ಗಂಗೆಯ ನೀರನ್ನು ನನಗೆ ನೀಡಿ ನನ್ನ ಉದ್ಧಾರವನ್ನೇ ಮಾಡಿದಿ. ಹೀಗೆ ಹೇಳಿ ದಿವ್ಯದೇಹ ಧರಿಸಿದ ಆ ಕೇರಳದ ಪಿಶಾಚವು ನಮಸ್ಕಾರಮಾಡಿ ಶುಭಾಶಂಸನೆಗೈದು ಸ್ವರ್ಗಲೋಕಕ್ಕೆ ಪ್ರಯಾಣ ಬೆಳಿಸಿದ.

ಇತ್ತ ಆ ಪಾರಿಯತ್ರ ಪರ್ವತದ ನಿವಾಸಿಯಾದ ಯಾತ್ರಿಕನು ತಾನು ತಂದ ಗಂಗಾಜಲದಿಂದ ಆ ಪ್ರೇತವನ್ನು ಉದ್ಧರಿಸಿ ತನ್ನ ತಾಯ್ತಂದೆಗಳಿಗಾಗಿ ಗಂಗೋದಕತರಲು ಮತ್ತೆ ತಾನು ಪ್ರಯಾಗ ಕ್ಷೇತ್ರಕ್ಕೆ ತೆರಳಿದ.

**ವಶಿಷ್ಠ:-** ಹೀಗೆ ಪ್ರಯಾಗ ಕ್ಷೇತ್ರದ ಮಹಾಮಹಿಮೆಯನ್ನು ಕೇಳಿ ಭಕ್ತಿಯಿಂದ ಮಹಾಮುನಿಗೆ ನಮಸ್ಕರಿಸಿ ತಾನೂ ಸಹ ಪ್ರಯಾಗ ಕ್ಷೇತ್ರಕ್ಕೆ ಹೋಯಿತು. ಮಾಘಮಾಸದಲ್ಲಿ ಆ ಗಂಗಾ-ಯಮುನಾ ಸಂಗಮ ಕ್ಷೇತ್ರದಲ್ಲಿ ಸ್ನಾನ ಮಾಡಿತು. ಆ ಸಂಗಮ ತೀರ್ಥದ ಮಾಘಸ್ನಾನದ ಪುಣ್ಯದಿಂದ ರಾಕ್ಷಸಜನ್ಮವನ್ನು ಹೊಂದಿದ ಆ ದ್ರವಿಡ ದೇಶದ ದೊರೆಯ ಪಾಪರಾಶಿಯೆಲ್ಲವೂ ಕರಗಿಹೋಯಿತು. ಕೂಡಲೇ ಆ ರಾಜನು ಪಿಶಾಚ ಜನ್ಮವನ್ನು ನೀಗಿದ. ಅವನಿಗೆ ದಿವ್ಯದೇಹದ ಪ್ರಾಪ್ತವಾಯಿತು. ಭಕ್ತಿಯಿಂದ ಶ್ರೀಮನ್ನಾರಾಯಣನನ್ನು ಸ್ತೋತ್ರ ಮಾಡತೊಡಗಿದ. ದಿವ್ಯ ದೇಹವನ್ನು ಪಡೆದ ಆ ದ್ರವಿಡ ಭೂಪಾಲನನ್ನು ಕರೆಯಲು ಸ್ವರ್ಗಲೋಕದಿಂದ ದಿವ್ಯ ವಿಮಾನಬಂದಿತು. ಅವನು ಗಂಗೆಯನ್ನೂ, ಹಾಗೂ ಗಂಗಾಜನಕನಾದ ಶ್ರೀಹರಿಯನ್ನೂ ಸ್ತೋತ್ರ ಮಾಡುತ್ತ ಆ ಸುರಪುರದ ವಿಮಾನವನ್ನು ಆರೋಹಣ ಮಾಡಿದ. ಸುರಲೋಕದ ಅಮರೇಶ್ವರರು ಅವನ ಮೇಲೆ ಹೂಮಳೆಗೆರೆದರು. ಅಮರಾವತಿಯ ಅಪ್ಸರೆಯರು ಆರತಿ ಎತ್ತಿದರು. ಗಂಧರ್ವರು ಗೀತ ಗಾನಗಳಿಂದ ಅವನನ್ನು ಹೊಗಳಿದರು. ಹೀಗೆ ಪ್ರಯಾಗದ ಸಂಗಮ ತೀರ್ಥದಲ್ಲಿ ಮಾಘಸ್ನಾನ ಮಹಿಮೆಯಿಂದ ಪಿಶಾಚ ಭಾವವನ್ನು ನೀಗಿ ಆ ದ್ರವೀಡೇಶ್ವರನು ಇಂದ್ರಪುರಿಗೆ ಪ್ರಯಾಣ ಬೆಳೆಸಿದ.

ವಿಪ್ರೋತ್ತಮ, ಈ ಪ್ರಯಾಗಕ್ಷೇತ್ರದ ಮಹಾಮಹಿಮಾರೂಪವಾದ ಪ್ರಾಚೀನ ಇತಿಹಾಸವನ್ನು ನಾನು ನಿನಗೆ ಯಥಾವತ್ತಾಗಿ ವಿವರಿಸಿದೆ. ಈಗ ನೀವೆಲ್ಲರೂ ಗಂಗಾ-ಯಮುನಾ ನದಿಗಳು ಸಂಗಮಿಸಿದ ತೀರ್ಥರಾಜ ಪ್ರಯಾಗದ ಮಾಹಾತ್ಮ್ಯವನ್ನು ಸಾದ್ಯಂತವಾಗಿ ಕೇಳಿದ್ದೀರಿ. ಈಗ ಈ ಎಲ್ಲ ಕನ್ನೆಯರೂ, ನಿನ್ನ ಮಗನೂ, ನೀನು ಎಲ್ಲರೂ

ನನ್ನೊಡನೆ ಪ್ರಯಾಗ ಕ್ಷೇತ್ರಕ್ಕೆ ಬನ್ನಿರಿ. ಎಲ್ಲರೂ ಕೂಡಿಯೇ ಆ ದಿವ್ಯ ತೀರ್ಥದಲ್ಲಿ ಪುಣ್ಯಕರ ಮಾಘಸ್ನಾನ ಮಾಡೋಣ. ಅದರಿಂದ ಇವರೆಲ್ಲರ ಪಿಶಾಚಭಾವವು ತಾನಾಗಿ ತೊಲಗಿಹೋಗುವದು.

**ಪರಮೇಶ್ವರ:-** ದಿಲೀಪರಾಜ, ಹೀಗೆ ವಶಿಷ್ಠರ ಮುಖಾರವಿಂದದಿಂದ ಸಂಗಮ ತೀರ್ಥದ ಮಹಾಮಹಿಮೆಯ ಮಧುರಕಥಾರಸವನ್ನು ಪಾನಮಾಡಿ ಎಲ್ಲರೂ ಹರ್ಷಪುಲಕಿತರಾದರು. ಪಾಪವಿರಹಿತರಾದರು, ಹಾಗೂ ಅವರೆಲ್ಲರೂ ಬ್ರಹ್ಮರ್ಷಿಗಳಾದ ವಶಿಷ್ಠರೊಡನೆಯೇ ಆಕಾಶಮಾರ್ಗದಲ್ಲಿ ಆನಂದದಿಂದ ಪ್ರಯಾಗ ಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಬಂದ ಬಳಿಕ ಮಹರ್ಷಿ ಲೋಮಶರು ಆಗಸದ ಅಂಗಳದಲ್ಲಿಯೇ ಇದ್ದು ಗಂಗಾ-ಯಮುನಾ ಸಂಗಮದ ತೀರ್ಥವನ್ನು ತೋರುಬೆರಳಿನಿಂದ ತೋರಿಸಿ ನುಡಿದರು.

**ಲೋಮಶ:-** ಎಲ್ಲರೂ ತೀರ್ಥರಾಜವಾದ ಆ ಪ್ರಯಾಗವನ್ನು ನೋಡಿ. ಬ್ರಹ್ಮಜ್ಞಾನದಿಂದಲೇ ಮೋಕ್ಷವೆಂದು ಶಾಸ್ತ್ರದಲ್ಲಿ ಹೇಳಿದೆ. ಆದರೆ ಅದಿಲ್ಲದೇ ಮೋಕ್ಷ ದೊರೆಯುವ ಒಂದೇ ಉಪಾಯ ಈ ಪ್ರಯಾಗಸ್ನಾನ.

**ವಿನಾ ಜ್ಞಾನಂ ಪ್ರಯಾಗೇಸ್ಮಿನ್ ಮುಚ್ಯಂತೇ ಸರ್ವ ಜಂತವಃ ।**

ಪೂರ್ವಕಾಲದಲ್ಲಿ ಬ್ರಹ್ಮದೇವರು ಈ ಪ್ರಯಾಗದಲ್ಲಿ ಸ್ನಾನ ಮಾಡಿಯೇ ಜಗತ್ತಿನ ಸೃಷ್ಟಿಮಾಡುವ ಪೂರ್ಣ ಜ್ಞಾನವನ್ನು ಪಡೆದ. ನಾರಾಯಣನು ಇಲ್ಲಿ ಮಿಂದು ಹಾಲ್ಗಡಲಿನ ಮಗಳಾದ ಲಕ್ಷ್ಮೀಯನ್ನು ಪಡೆದ. ಮಹಾದೇವನು ಇಲ್ಲಿಯ ತ್ರಿವೇಣೀ ಸಂಗಮದಲ್ಲಿ ಆರುತಿಂಗಳು ಸ್ನಾನಮಾಡಿ ತ್ರಿಪುರಾಸುರನನ್ನು ಸಂಹಾರಮಾಡಲು ಪರ್ಯಾಪ್ತವಾದ ಸಾಮರ್ಥ್ಯ ಪಡೆದ. ಈ ಪುಣ್ಯತೀರ್ಥದಲ್ಲಿ ಸ್ನಾನಮಾಡುವವನು ಎಂದಿಗೂ ನರಕದಲ್ಲಿ ಬಳಲುವದಿಲ್ಲ.

ಹಿಂದೆ ಋಚೀಕ ಮುನಿಯ ಶಾಪದಿಂದ ಕಾಗೆಯಾದ ಓರ್ವ ಗಂಧರ್ವನು ಇಲ್ಲಿ ಸ್ನಾನಮಾಡಿ ಶಾಪಮುಕ್ತನಾದ. ಊರ್ವಶಿಯು ಇಂದ್ರನ ಶಾಪದಿಂದ ಸ್ವರ್ಗ ಭ್ರಷ್ಟಳಾಗಿ ಭೂಲೋಕಕ್ಕೆ ಬಂದಾಗ ಇಲ್ಲಿ ಮಿಂದು ಶಾಪಮುಕ್ತಳಾಗಿ ಸ್ವರ್ಗಕ್ಕೆ ತೆರಳಿದಳು. ನಹುಷ ಪುತ್ರನಾದ ಯಯಾತಿ ಮಹಾರಾಜನು ಇಲ್ಲಿ ಸ್ನಾನಮಾಡಿ ಶಿವನನ್ನೇ ಪುತ್ರನನ್ನಾಗಿ ಪಡೆದ. ಇಂದ್ರನು ಇಲ್ಲಿ ಮಿಂದು ಸ್ವರ್ಗೈಶ್ವರ್ಯ ಪಡೆದ. ಕಶ್ಯಪ, ಭರದ್ವಾಜ, ಮುಂತಾದ ಮುನಿಗಳು ಇಲ್ಲಿ ಸ್ನಾನ ಮಾಡಿಯೇ ತಪಸ್ಸಿದ್ಧಿ ಪಡೆದರು.

ಹೀಗೆ ಲೋಮಶ ಮುನಿಗಳ ಮುಖಾರವಿಂದದಿಂದ ಪ್ರಯಾಗ ತೀರ್ಥದ ಮಹಾಮಹಿಮೆಯನ್ನು ಕೇಳಿ ಸಂತುಷ್ಟಚಿತ್ತರಾದ ವೇದನಿಧಿ ಮಹರ್ಷಿ ಮತ್ತು ಅವನ ಮಗನಾದ ಸುತಪಾ, ಅವನನ್ನು ಕಾಮಿಸಿ ಬಂದ ಐವರು ಕನ್ನೆಯರು ಎಲ್ಲರೂ ಸಂತೋಷದಿಂದ ಮತ್ತು ಭಕ್ತಿಯಿಂದ ತ್ರಿವೇಣೀ ಸಂಗಮದಲ್ಲಿ ಸ್ನಾನಮಾಡಿದರು. ಕೂಡಲೇ ಆ ಸಂಗಮಸ್ನಾನದ ಪುಣ್ಯದಿಂದ ಅವರೆಲ್ಲರೂ, ಪಿಶಾಚರಾದ ಆ ಐವರೂ ಕನ್ನೆಯರೂ ಪಿಶಾಚನಾದ ವೇದನಿಧಿಯ ಪುತ್ರನೂ ತಮ್ಮ ಆ ಪಿಶಾಚ ಜನ್ಮದಿಂದ ಮುಕ್ತರಾಗಿ ತಮ್ಮ ತಮ್ಮ ಮೊದಲಿನ ಉತ್ತಮ ದೇಹವನ್ನು ಹೊಂದಿದರು.

ಪ್ರಮೋದಿನೀ, ಸುಶೀಲಾ, ಸುಸ್ವರಾ, ಸುತಾರಾ, ಚಂದ್ರಿಕಾ ಎಂಬ ಐವರು ಗಂಧರ್ವ ಕನ್ನೆಯರೂ, ವೇದನಿಧಿ ಮುನಿಯ ಮಗನಾದ ಅಗ್ನಿಪನನ್ನು ಮರುಳು ಮಾಡ ಹೋಗಿ ಅವನ

ಶಾಪದಿಂದ ಪಿಶಾಚಿಯರಾಗಿದ್ದರು. ಈ ಗಂಧರ್ವ ಕನ್ನೆಯರ ಶಾಪದಿಂದ ಅಗ್ನಿಪನೂ ಪಿಶಾಚನಾಗಿದ್ದ. ವೇದನಿಧಿಗಳ ಮುಖದಿಂದ ಅವರ ಮಗ ಹಾಗೂ ಆ ಗಂಧರ್ವ ಕನ್ನೆಯರ ಈ ದುರವಸ್ಥೆಯನ್ನು ಕೇಳಿ ಕರುಣೆದುಂಬಿದ ಲೋಮಶ ಮಹರ್ಷಿಗಳು ಅವರೆಲ್ಲರಿಗೂ ಗಂಗಾ-ಯಮುನಾ ಸಂಗಮ ತೀರ್ಥದ ಮಹಾಮಹಿಮೆಯನ್ನು ಹೇಳಿ ಅವರೆಲ್ಲರನ್ನೂ ಕರೆದು ತಂದು ಪ್ರಯಾಗ ಕ್ಷೇತ್ರದಲ್ಲಿ ಅವರೆಲ್ಲರಿಗೂ ಸ್ನಾನ ಮಾಡಿಸಿದ್ದರಿಂದ ಪಿಶಾಚಭಾವವು ತಕ್ಷಣದಲ್ಲಿ ತೊಲಗಿ ಆ ಪಂಚಕನ್ನೆಯರಿಗೆ ತಮ್ಮ ಮೊದಲಿನ ಗಂಧರ್ವ ದೇಹವೂ, ಅಗ್ನಿಪ ಮುನಿಗೆ ತನ್ನ ಮೊದಲಿನ ಋಷಿಕುಮಾರ ರೂಪವೂ ಪ್ರಾಪ್ತವಾದವು. ಆದರಿಂದ ವೇದನಿಧಿ ಮಹರ್ಷಿಗಳಿಗೆ ಪರಮಾನಂದವಾಗಿ ಅವರು ಲೋಮಶ ಮಹರ್ಷಿಗಳನ್ನು ಸ್ತುತಿಸಿ, ನಮಿಸಿ, ಆದರಿಸಿ, ಸತ್ಕರಿಸಿ, ಕೇಳಿದರು.

**ವೇದನಿಧಿ:-** ಋಷಿಶ್ರೇಷ್ಠರೇ, ತಮ್ಮ ಅನುಗ್ರಹದಿಂದ ನನ್ನ ಮಗನ ಪೈಶಾಚ್ಯಭಾವವು ಕಳೆದುಹೋಯಿತು. ಈ ಬಾಲೆಯರು ಪಿಶಾಚಿ ಯೋನಿಯಿಂದ ಮುಕ್ತರಾದರು. ಇನ್ನು ಮುಂದೆ ಅವರೇನು ಮಾಡಬೇಕು? ತಾವೇ ಅಪ್ಪಣೆ ನೀಡಿ.

**ಲೋಮಶ:-** ನಿಮ್ಮ ಮಗನಾದ ಈ ಅಗ್ನಿಪನು ಈಗಾಗಲೇ ವೇದ ವೇದಾಂತಗಳನ್ನು ಅಧ್ಯಯನಿಸಿ ಮಹಾ ಪಂಡಿತನಾಗಿದ್ದಾನೆ. ಅವನ ಸ್ವಾಧ್ಯಾಯ ವ್ರತವು ಪೂರ್ಣಗೊಂಡಿದೆ. ಕುಮಾರನಾದ ಅವನು ಈಗ ಅವರನ್ನು ಮೆಚ್ಚಿ ಬಂದ ಈ ಐವರೂ ಗಂಧರ್ವ ಸುಂದರಿಯರನ್ನು ವಿಧಿಪೂರ್ವಕವಾಗಿ ಮದುವೆಯಾಗಲಿ. ಅವನಿಗಾಗಿ ಈ ಐವರೂ ಕನ್ಯಾಮಣಿಗಳೂ ಕಡುಕಷ್ಟಪಟ್ಟಿದ್ದಾರೆ. ಇವರು ಅವನಿಗೆ ತಕ್ಕ ಧರ್ಮಪತ್ನಿಯರು. ಅವನು ಈ ಐವರೂ ಐದೆಯರಿಗೆ ಯೋಗ್ಯನಾದ ವರ. ಇವರ ಮದುವೆಯ ಮಂಗಳ ಮಹೋತ್ಸವವನ್ನು ನೀವು ಬೇಗ ನೆರವೇರಿಸಿರಿ.

ಲೋಮಶ ಮುನಿಗಳ ಮಾತು ಒಪ್ಪಿಗೆಯಾಯ್ತು ವೇದನಿಧಿ ಮಹರ್ಷಿಗಳಿಗೆ. ಅವರು ಆ ಮಹರ್ಷಿಗಳ ಆದೇಶದಂತೆ ಐವರೂ ಕನ್ನೆಯರ ಹಡೆದ ತಂದೆಗಳಾದ ಸುಖಸಂಗೀತಿ, ಸುಶೀಲ, ಸ್ವರವೇದಿ, ಚಂದ್ರಕಾಂತ, ಸುಪ್ರಭ, ಎಂಬ ಗಂಧರ್ವರಿಗೆ ಹೇಳಿಕಳುಹಿಸಿದರು. ಆ ಐವರೂ ಗಂಧರ್ವ ದಂಪತಿಗಳು ತಮ್ಮ ಪರಿವಾರದೊಂದಿಗೆ ಸಂಗಮಕ್ಷೇತ್ರಕ್ಕೆ ಆಗಮಿಸಿ ಎಲ್ಲ ಮುನಿಶ್ರೇಷ್ಠರಾದ ತಪಸ್ವೀ, ಮಹರ್ಷಿ, ಬ್ರಹ್ಮರ್ಷಿಗಳಿಂದ ಒಡಗೂಡಿ ವೈಭವದಿಂದ ತಮ್ಮ ಐವರೂ ಕನ್ಯಾಮಣಿಗಳಾದ ಪ್ರಮೋದಿನಿ, ಸುಶೀಲ, ಸುಸ್ವರಾ, ಸುತಾರಾ, ಚಂದ್ರಿಕಾ ಎಂಬವರನ್ನು ವೇದನಿಧಿ ಕುಮಾರನಾದ ಅಗ್ನಿಪನಿಗೆ ಕೊಟ್ಟು ವಿಜೃಂಭಣೆಯಿಂದ ವಿವಾಹ ಮಂಗಳ ಮಹೋತ್ಸವವನ್ನು ನೆರವೇರಿಸಿದರು. ಅದರಿಂದ ಆ ಪಂಚಕನ್ಯೆಯರ ಬಹುದಿನದ ಹೆಬ್ಬಯಕೆ ಪೂರ್ಣವಾಯಿತು. ಋಷಿಕುಮಾರನಾದ ಅಗ್ನಿಪನೂ ಸುರಲೋಕದ ಸರ್ವಅಪ್ಸರೆಯರನ್ನೂ ಮೀರಿಸುವ ಚೆಲವು, ಒಲವುಗಳನ್ನು ಹೊತ್ತ ಆ ಕನ್ಯಾಮಣಿಗಳನ್ನು ಮದುವೆಯಾಗಿ ಪರಮಪ್ರೀತನಾದ. ಅನಂತರ ಆ ನವ ವಧೂವರರೂ, ವೇದನಿಧಿ ಮುನಿಯೂ ಲೋಮಶ ಮಹರ್ಷಿಗಳಿಗೆ ನಮಸ್ಕರಿಸಿ, ಕೃತಜ್ಞತೆಯನ್ನು ಅರ್ಪಿಸಿ ಅಭಿನಂದಿಸಿದ ಬಳಿಕ ಲೋಮಶರು ಮೇರುಪರ್ವತದಲ್ಲಿರುವ ತಮ್ಮ ಆಶ್ರಮಕ್ಕೆ ತಪಸ್ಸಿಗಾಗಿ ತೆರಳಿದರು. ಇತ್ತ ವೇದನಿಧಿ ಮಹರ್ಷಿಯು ತನ್ನ ಐವರೂ ಸೊಸೆಯರು ಹಾಗೂ ಮಗನನ್ನು ಕರೆದುಕೊಂಡು ಕುಬೇರನ ರಾಜಧಾನಿಯಾದ ಅಲಕಾ ಪಟ್ಟಣಕ್ಕೆ ಪ್ರಯಾಣ ಬೆಳೆಸಿದರು.

ದಿಲೀಪ, ಮಾಘಮಾಸದಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಲೋಮಶ ಮಹರ್ಷಿಗಳ ವಚನದಿಂದ ಸ್ನಾನಮಾಡಿ ದುರ್ಯೋನಿಯಿಂದ ಮುಕ್ತರಾಗಿ ತಮ್ಮ ಮನೋರಥ ಸಿದ್ಧಿಯನ್ನು ಪಡೆದು ಪರಮಾನಂದದಿಂದ ದಾಂಪತ್ಯ ಜೀವನವನ್ನು ಬಹುಕಾಲ ಪರ್ಯಂತರ ನಡೆಸಿದರು. ಪ್ರಯಾಗ ಕ್ಷೇತ್ರದ ಈ ಪರಮಪವಿತ್ರವಾದ ಕಥೆಯನ್ನು ಕೇಳಿದವರು ವಿಪುಲ ಪುಣ್ಯವನ್ನು ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಚಿತ್ರರಾಜನ ಉಪಾಖ್ಯಾನ ಎಂಬ ನೂರ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು*

—o—

## ವಿಷ್ಣುವಿನ ಮಹಿಮೆ

ಅಧ್ಯಾಯ - ೧೨೭

**ಪಾರ್ವತಿ:-** ಪ್ರಭು ಪರಮೇಶ್ವರ, ನಾನು ನಿನ್ನ ಮುಖದಿಂದ ಕಾರ್ತೀಕ ಮಾಹಾತ್ಮ್ಯವನ್ನೂ ಮಾಘ ಮಾಹಾತ್ಮ್ಯವನ್ನೂ ಕೇಳಿದೆ. ಈಗ ಮುಕ್ತಿದಾಯಕವಾದ ಉತ್ತಮ ಕರ್ಮವಾವುದು? ಶ್ರೇಷ್ಠವಾದ ಭಕ್ತಿಯೆಂದರೇನು? ಇದನ್ನು ನನಗೆ ತಿಳಿಸಿ ಹೇಳು.

**ಮಹಾದೇವ:-** ಭಕ್ತಿಯ ಮೂರು ವಿಧವಾಗಿದೆ. ಸಾತ್ವಿಕ, ರಾಜಸ, ತಾಮಸ ಎಂದು, ಸಾತ್ವಿಕ ಭಕ್ತಿ ಉತ್ತಮ. ರಾಜಸ ಭಕ್ತಿ ಮಧ್ಯಮ, ತಾಮಸ ಭಕ್ತಿ ಕನಿಷ್ಠ. ಅಹಂಕಾರ, ದಂಭ, ಮಾತ್ಸರ್ಯ, ಲೋಭ, ಮೋಹಗಳಿಂದ ಮಾಡಿದ ಭಕ್ತಿಯು ಮತ್ತು ಇನ್ನೊಬ್ಬರನ್ನು ನಾಶಪಡಿಸಲು ಮಾಡಿದ ಭಕ್ತಿಯು ತಾಮಸ ಭಕ್ತಿ ಎನಿಸುತ್ತದೆ. ಇದಕ್ಕೆ ಕನಿಷ್ಠ ಭಕ್ತಿ ಎಂದೂ ಹೆಸರು. ಐಶ್ವರ್ಯ, ವಿಷಯ, ಸುಖ, ರಾಜ್ಯ, ಅಧಿಕಾರ, ಮುಂತಾದವುಗಳ ಅಪೇಕ್ಷೆಯಿಂದ ದೇವರಲ್ಲಿ ಭಕ್ತಿ ಮಾಡಿ ಪ್ರತಿಮಾ ಪೂಜಾದಿಗಳನ್ನು ಮಾಡುವದು ರಾಜಸ ಭಕ್ತಿಯೆನಿಸುತ್ತದೆ. ಇದು ಮಧ್ಯಮ ಭಕ್ತಿ. ರಾಗದ್ವೇಷ ವರ್ಜಿತನಾಗಿ ವೇದಾಧ್ಯಯನತತ್ಪರನಾಗಿ ಯಾವ ಫಲಾಪೇಕ್ಷೆಯನ್ನೂ ಮಾಡದೇ ಶಂಖಚಕ್ರಾದಿ ಚಿಹ್ನಗಳನ್ನು ಧರಿಸಿ, ವೇದಶಾಸ್ತ್ರೋಕ್ತ ವಿಹಿತ ಕರ್ಮಾನುಷ್ಠಾನ ಮಾಡುತ್ತ ಶ್ರೀಹರಿಯನ್ನು ಆರಾಧಿಸುವದು ಸಾತ್ವಿಕ ಭಕ್ತಿಯೆನಿಸುತ್ತದೆ.

ವಿಷ್ಣುವಿನಲ್ಲಿ ಭಕ್ತಿಮಾಡದೇ ಕೇವಲ ವೇದಾಧ್ಯಯನ ಹಾಗೂ ಯಜ್ಞ ಯಾಗಾದಿಗಳನ್ನು ಮಾಡುವವರು ವಿಷ್ಣುಧರ್ಮ ವಿಮುಖರಾಗಿ ಅಗ್ನಿಹೋತ್ರಾದಿಗಳನ್ನು ಮಾಡುವವರೂ, ವಿಷ್ಣುನಿಂದಕರೂ, ವಿಷ್ಣುಭಕ್ತದ್ವೇಷಿಗಳೂ, ಚಂಡಾಲರು ಎನ್ನಿಸುತ್ತಾರೆ. ಇವರು ಬ್ರಾಹ್ಮಣರಾದರೂ ವೇದಬಾಹ್ಯರೇ ಸರಿ. ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿಮಾಡಿ ಹಗಲಿರುಳೂ ಭಗವದ್ಧ್ಯಾನಮಾಡುವ ಹರಿಭಕ್ತರಿಗೆ ಋಷಿಗಳೂ, ಮುನಿಗಳೂ, ದೇವತೆಗಳೂ ಕ್ಷೇಮವನ್ನು ಕರುಣಿಸುತ್ತಾರೆ. ಲಕ್ಷ್ಮಿಯು ಅವರ ಮಂದಿರದಲ್ಲಿ ಸ್ಥಿರವಾಗಿ ನೆಲೆಸುತ್ತಾಳೆ. ಗಂಗಾ, ಗಯಾ, ನೈಮಿಷ ಪುಷ್ಕರ, ಕಾಶೀ, ಪ್ರಯಾಗ ಮುಂತಾದ ಎಲ್ಲ ತೀರ್ಥಕ್ಷೇತ್ರಗಳೂ ಗೋವಿಂದಭಕ್ತರ ದೇಹದಲ್ಲಿ ನೆಲೆಸಿರುತ್ತವೆ. ಮಾನವರು ಯಾವುದೇ ಜಾತಿಯವನಿರಲಿ ಹರಿಯಲ್ಲಿ ಭಕ್ತಿಮಾಡಿದರೆ ಮುಕ್ತನಾಗುವುದು ನಿಶ್ಚಿತ.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ವಿಷ್ಣುವಿನ ಮಹಿಮೆ ಎಂಬ ನೂರ ಇಪ್ಪತ್ತೇಳನೇಯ ಅಧ್ಯಾಯ ಮುಗಿದುದು*

—o—

## ಶಾಲಿಗ್ರಾಮ ಪೂಜೆಯ ಮಹತ್ವ

ಅಧ್ಯಾಯ - ೧೨೮

**ಪಾರ್ವತಿ:-** ಭೂಲೋಕದಲ್ಲಿ ಶುದ್ಧ ಶಾಲಿಗ್ರಾಮದ ಹರಿಪ್ರತೀಕಗಳು ವಿಪುಲವಾಗಿ ಇರುತ್ತವೆ. ಆ ಶಾಲಿಗ್ರಾಮಗಳನ್ನು ಯಾರು, ಎಷ್ಟು ಹೇಗೆ ಪೂಜೆಮಾಡಬೇಕು ತಿಳಿಸಿರಿ.

**ಮಹಾದೇವ:-** ಶಾಲಿಗ್ರಾಮ ಶಿಲೆಯು ಪರಮಪವಿತ್ರ, ಪುಣ್ಯದಾಯಕ. ಅದರ ದರ್ಶನ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಪಾಪಗಳು ತೊಳೆದುಹೋಗುತ್ತವೆ. ಶಾಲಿಗ್ರಾಮದ ಕಲ್ಲು ಇದ್ದ ಮನೆ ಒಂದು ಪರಮಪವಿತ್ರ ತೀರ್ಥ.

**ಬ್ರಾಹ್ಮಣೈಃ ಪಂಚ ಪೂಜ್ಯಾಃ ಸ್ಯುಶ್ಚತಸ್ರಃ ಕ್ಷತ್ರಿಯೈಃಸ್ತಥಾ ।**
**ವೈಶ್ಯೈಸ್ತ್ರಿಸ್ತಥಾ ಪೂಜ್ಯಾ ಏಕಾ ಪೂಜ್ಯಾ ಪ್ರಯತ್ನತಃ ॥**

ಬ್ರಾಹ್ಮಣರು ಐದು ಶಾಲಿಗ್ರಾಮಗಳನ್ನು ಪೂಜಿಸಬೇಕು. ಕ್ಷತ್ರಿಯರು ನಾಲ್ಕು, ವೈಶ್ಯರು ಮೂರು. ಕೊನೆಗೆ ಒಂದು ಶಾಲಿಗ್ರಾಮವನ್ನಾದರೂ ಎಲ್ಲರೂ ಪ್ರಯತ್ನ ಪೂರ್ವಕವಾಗಿ ಪೂಜಿಸಲೇಬೇಕು. ಅದರ ದರ್ಶನದಿಂದಲೂ ಭಕ್ತರಿಗೆ ಮುಕ್ತಿಯಾಗುವದು.

**ದಾಸಭಾವೇನ ಯೇ ಶೂದ್ರಾಃ ಸ್ವರ್ಚನಂ ಕುರ್ವತೇ ಸದಾ ।**
**ತೇಷಾಂ ಪುಣ್ಯಂ ನ ಜಾನಂತಿ ಬ್ರಹ್ಮಾದ್ಯಾಶ್ಚ ಸುರೇಶ್ವರಿ ॥**

"ದೇವತೆಗಳಿಗೆಲ್ಲ ಒಡತಿಯಾದ ಪಾರ್ವತಿ ! ಶೂದ್ರರೂ ಸಹ ದಾಸ್ಯಭಾವದಿಂದ ಭಗವಂತನ ಅರ್ಚನೆಯನ್ನೂ ಶ್ರೀಹರಿಯ ಆರಾಧನೆಯ್ನನೂ ಸದಾ ಮಾಡಿದರೆ ಬ್ರಹ್ಮಾದಿ ದೇವತೆಗಳೂ ಗೌರವಿಸುವಂಥ ಪುಣ್ಯವನ್ನು ಪಡೆಯುತ್ತಾರೆ."

ಶಂಖಚಕ್ರಾದಿ ವಿಷ್ಣುವಿನ ಲಾಂಛನಗಳನ್ನು ಧರಿಸಿ ಶ್ರೀಹರಿಯನ್ನು ನಿತ್ಯವೂ ಪೂಜೆಮಾಡುವ ವೈಷ್ಣವನ ದರ್ಶನ ಮಾತ್ರದಿಂದಲೇ ಮಹಾಪಾತಕ, ಉಪಪಾತಕ ಕಾಯಿಕ, ವಾಚಿಕ, ಮಾನಸಿಕ, ಮೂರು ವಿಧ ತಾಪ, ಹಿಂಸಾಜನ್ಯ ಪಾಪ, ಮುಂತಾದ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಇಂಥ ವಿಷ್ಣುಭಕ್ತರಾದ ವೈಷ್ಣವರ ದರ್ಶನ ಮಾತ್ರದಿಂದ ಸೇವೆ, ಪೂಜೆ, ಭೋಜನಾದಿಗಳನ್ನು ಮಾಡಿಸುವದರಿಂದ ಹರಿಪ್ರೀತಿಯಾಗಿ ವಿಷ್ಣುಲೋಕ ಪ್ರಾಪ್ತಿಯಾಗುವದು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ*
*ಶಾಲಿಗ್ರಾಮ ಪೂಜೆಯ ಮಹತ್ವ ಎಂಬ ಒಂದುನೂರ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

—o—

**ಪಾರ್ವತಿ:-** ಪ್ರಿಯಕರ, ವಾಸುದೇವನ ಸ್ಮರಣವು ಎಷ್ಟು ವಿಧವಾಗಿದೆ? ಹೇಗೆ ಮಾಡಬೇಕು? ಯಾರು ಇದನ್ನು ಮಾಡುತ್ತಾರೆ? ಎಲ್ಲವನೂ ತಿಳಿಸು.

**ಮಹಾದೇವ:-** ದೇವಿ, ಶ್ರೀಹರಿ ಸ್ಮರಣೆಯ ತತ್ವವನ್ನು ನಾನು ಚೆನ್ನಾಗಿ ತಿಳಿದು ಪ್ರತಿನಿತ್ಯವೂ ಅವನನ್ನು ಸ್ಮರಿಸುತ್ತೇನೆ.

**ಹಿಮೇ ನಾಕುಲಿತಂ ವಿಶ್ವಂ ಸ್ಮರತ್ಯಗ್ನಿಂ ಯಥಾ ತಥಾ ।**
**ತೃಷಾತುರೋ ಯಥಾ ವಾರಿ ತದ್ವತ್ ವಿಷ್ಣುಂ ಸ್ಮರಾಮ್ಯಹಮ್ ॥**

ನೀರಡಿಸಿದವನು ನೀರು ಕುಡಿಯುವಂತೆ ನಾನು ಶ್ರೀಹರಿಯ ಸ್ಮರಣ ಮಾಡುತ್ತೇನೆ. ಚಳಿಯಿಂದ ನಡಗುವವರು ಬೆಂಕಿಯನ್ನು ನೆನೆಯುವಂತೆ ನಾನು ವಿಷ್ಣುವಿನನ್ನು ನೆನೆಸುತ್ತೇನೆ.

**ಪತಿವ್ರತಾ ಯಥಾ ನಾರೀ ತತಿಂ ಸ್ಮರತಿ ನಿತ್ಯಶಃ ।**
**ತಥಾ ಸ್ಮರಾಮಿ ಲೋಕೇಶಂ ವಿಷ್ಣುಂ ವಿಶ್ವೇಶ್ವರೇಶ್ವರಮ್ ॥**

ಪತಿವ್ರತೆಯಾದ ಪತ್ನಿಯು ನಿತ್ಯವೂ ಗಂಡನನ್ನು ಸ್ಮರಿಸುವಂತೆ ನಾನೂ ಸಹ ಜಗದೊಡೆಯನೂ ವಿಶ್ವೇಶ್ವರನಾದ ನನಗೂ ಈಶ್ವರನಾದ ವಿಷ್ಣುವನ್ನು ಸ್ಮರಿಸುತ್ತೇನೆ.

ದೂರದ ಅರಣ್ಯ ಮಾರ್ಗದಲ್ಲಿ ಮಾರ್ಗಾಯಾಸದಿಂದ ಬಳಲುವ ಪಥಿಕನು ಮನೆಯನ್ನು ನೆನೆಯುವಂತೆ ಹಂಸಪಕ್ಷಿಗಳು ಮಾನಸ ಸರೋವರವನ್ನು ನೆನೆಯುವಂತೆ ಭ್ರಮರಗಳು ಪುಷ್ಪವನ್ನೂ, ಚಕ್ರವಾಕಗಳು ಸೂರ್ಯನನ್ನೂ ಕತ್ತಲೆಯಲ್ಲಿದ್ದವರು ದೀಪವನ್ನೂ ಬಳಲಿದವರು ವಿಶ್ರಾಂತಿಯನ್ನೂ ಆನೆ ಸಿಂಹಗಳು ಪರ್ವತವನ್ನೂ ಕನ್ನೈದಿಲೆಯು ಚಂದ್ರನನ್ನೂ ಬಯಸುವಂತೆ ನಾನೂ ಸಹ ಶ್ರೀಹರಿಯಲ್ಲಿ ಭಕ್ತಿಯನ್ನು ಬಯಸಿ ನಿತ್ಯವೂ ಅವನನ್ನು ಸ್ಮರಣೆ ಮಾಡುತ್ತೇನೆ.

**ಗೋಪೀಭಿರ್ಜಾರಬುದ್ಧ್ಯಾಚ ವಿಷ್ಣೋಶ್ಚ ಸ್ಮರಣಂ ಕೃತಂ ।**
**ತಾಶ್ಚ ಸಾಯುಜ್ಯತಾಂ ನೀತಾಸ್ತಥಾ ವಿಷ್ಣುಂ ಸ್ಮರಾಮ್ಯಹಮ್ ॥**

ಗೋಪಿಕಾಸ್ತ್ರೀಯರು ಮೊದಲು ಜಾರಬುದ್ಧಿಯಿಂದ ಅನಂತರ ಶುದ್ಧಭಕ್ತಿಯಿಂದ ಆ ವಿಷ್ಣುವನ್ನು ನೆನೆದರು. ಅದರಿಂದ ಆ ಎಲ್ಲ ಬಲ್ಲ ಸ್ತ್ರೀಯರಿಗೆ ಶ್ರೀಹರಿಯು ತನ್ನ ಸಾಯುಜ್ಯ ಮೋಕ್ಷವನ್ನು ಕರುಣಿಸಿದ. ಆದುದರಿಂದ ಅಂಥ ವಿಷ್ಣುವನ್ನು ನಾನು ಸ್ಮರಿಸುವೆ. ಶ್ರೀಹರಿಯನ್ನು ಕೆಲವರು ದುಷ್ಟಭಾವನೆಯಿಂದ, ಕೆಲವರು ದಂಭದಿಂದ, ಮತ್ತೆ ಹಲವರು ಲೋಭದಿಂದ ಕೆಲವರು ದ್ವೇಷದಿಂದ, ಇನ್ನೂ ಎಷ್ಟೋ ಜನರು ಸ್ನೇಹದಿಂದ, ಭಕ್ತಿಯಿಂದ, ಸ್ವಾಮಿತ್ವ ಭಾವದಿಂದ, ನಿಸ್ಪೃಹಬುದ್ಧಿಯಿಂದ ಶ್ರೀಹರಿಯ ಆರಾಧನೆ ಮಾಡಿ ಉದ್ಧೃತರಾಗಿದ್ದಾರೆ. ಆದುದರಿಂದ ನಾನು ಶ್ರೀಹರಿಯನ್ನು ನಿತ್ಯವೂ ಸ್ಮರಿಸುತ್ತೇನೆ.

ಆ ಶ್ರೀಹರಿಯು ಬರೀ ದ್ರವ್ಯದಿಂದಾಗಲೀ, ಜ್ಞಾನದಿಂದಾಗಲೀ, ಒಲಿಯುವದಿಲ್ಲ ಕೇವಲ ಭಕ್ತಿಯೋಗದಿಂದ ಮಾತ್ರ ಅವನ ದರ್ಶನವು ಸಾಧ್ಯ. ಹಂಸಪಕ್ಷಿಯು ಹಾಲು,

ನೀರನ್ನು ಬೆರೆಸಿಟ್ಟರೂ ನೀರನ್ನು ಬಿಟ್ಟು ಹಾಲನ್ನು ಮಾತ್ರ ಸ್ವೀಕರಿಸುವಂತೆ ಮಾನವರು ಉಳಿದ ಎಲ್ಲ ಧರ್ಮಗಳನ್ನೂ ತ್ಯಜಿಸಿ ವಿಷ್ಣುಭಕ್ತಿಯನ್ನು ಮಾತ್ರ ಆಶ್ರಯಿಸಬೇಕು. ವಿಷ್ಣುವಿನಲ್ಲಿ ಭಕ್ತಿಯಿಲ್ಲದೇ ಮಾನವರು ಮಾಡಿದ ಎಲ್ಲ ಕರ್ಮಗಳೂ ವಸ್ತ್ರದಲ್ಲಿ ಕಟ್ಟಿಹಾಕಿದ ನೀರಿನಂತೆ ಸೋರಿಹೋಗುವದು. ಕೈಯಿಂದಲೇ ಈಸಿ ಸಾಗರವನ್ನು ದಾಟುವದು ಎಷ್ಟು ಮೂರ್ಖತನ. ಬೆಂಕಿಯು ಅತ್ಯಲ್ಪವಾದರೂ ಕಾಡನ್ನೆಲ್ಲ ಸುಟ್ಟುಹಾಕುವಂತೆ ವಿಷ್ಣುಭಕ್ತಿಯು ಕಿಂಚಿತ್ತಾದರೂ ಪಾಪರಾಶಿಯನ್ನೆಲ್ಲ ನಾಶಮಾಡುವದು.

ಅಜಾಮಿಳನು ತನ್ನ ಬ್ರಾಹ್ಮಣೋಚಿತವಾದ ಧರ್ಮ ಕರ್ಮಗಳನ್ನೆಲ್ಲ ತೊರೆದು, ದಾಸೀಸಂಸರ್ಗ ಮಾಡಿ ಮಹಾಪಾಪ ಮಾಡಿದನು. ಆದರೆ ಮುಂದೆ ಮರಣಕಾಲದಲ್ಲಿ ನಾರಾಯಣನ ನಾಮವನ್ನು ನೆನೆದು ತೃಪ್ತಿಹೊಂದಿದನು. ಅಶ್ವಮೇಧಾದಿ ನೂರಾರು ಯಜ್ಞಗಳನ್ನು ಮಾಡಿ ಅನೇಕ ರಾಜಮಹಾರಾಜರು ಸ್ವರ್ಗಕ್ಕೆ ತೆರಳಿದರು. ಕೆಲದಿನ ಅಲ್ಲಿ ಸುಖೋಪಭೋಗ ಅನುಭವಿಸಿ ಪುಣ್ಯ ಕ್ಷೀಣವಾದ ಬಳಿಕ ಮತ್ತೆ ಭೂಮಿಗೆ ಮರಳಿದರು. ಆದರೆ ವಿಷ್ಣುವಿನಲ್ಲಿ ಭಕ್ತಿಮಾಡಿ ವೈಕುಂಠಕ್ಕೆ ಹೋದವರು ಮರಳಿಬಂದದ್ದನ್ನು ಮಾತ್ರ ಇಂದಿನವರೆಗೂ ಯಾರೂ ಕೇಳಿಲ್ಲ. ಒಂಟೆಯು ಚಂದನ, ಕರ್ಪುರ, ಅಗರು ಮುಂತಾದ ಪರಿಮಳ ದ್ರವ್ಯಗಳನ್ನು ಹೊತ್ತೊಯ್ಯುತ್ತಿದ್ದರೂ ಅದರ ಗಂಧಪರಿಮಳದ ಜ್ಞಾನವು ಮಾತ್ರ ಅದಕ್ಕಿರುವದಿಲ್ಲ. ಅದರಂತೆ ವಿಷ್ಣುವಿನಿಂದ ವಿಮುಖರಾದವರಿಗೆ ಅವನ ಮಹಾಮಹಿಮೆಗೊತ್ತಾಗುವದಿಲ್ಲ.

**ಭಕ್ತಿಹೀನೈಃ ಚತುರ್ವೇದೈಃ ಪಠಿತೈಃ ಕಿಂ ಪ್ರಯೋಜನಂ ।**
**ಶ್ವಪಚೋ ಭಕ್ತಿಯುಕ್ತಸ್ತು ತ್ರಿದಶೈರಪಿ ಪೂಜ್ಯತೇ ॥**

ಶ್ರೀಹರಿಯಲ್ಲಿ ಭಕ್ತಿಹೀನರಾದ ಬ್ರಾಹ್ಮಣರು ನಾಲ್ಕು ವೇದಗಳನ್ನು ಓದಿದರೂ ಏನು ಪ್ರಯೋಜನ? ಆದರೆ ವಿಷ್ಣುವಿನಲ್ಲಿ ಭಕ್ತಿಮಾಡುವ ಚಂಡಾಲನೂ ದೇವತೆಗಳಿಂದ ಪೂಜ್ಯನಾಗುತ್ತಾನೆ.

ಮಾನವರೆಲ್ಲರೂ ವರ್ಣಾಶ್ರಮ ಧರ್ಮವನ್ನು ಮತ್ತೆ ತಮತಮಗೆ ವಿಹಿತವಾದ ಕರ್ಮಗಳನ್ನು ತಪ್ಪದೇ ಮಾಡಬೇಕು.

**ಆಶ್ರಮೇಣ ವಿನಾ ಮೂಢೋ ನೈವ ಸಿದ್ಧಿವ ವಾಪ್ನುಯಾತ್ ।**
**ಬ್ರಹ್ಮಣಾ ನಿರ್ಮಿತಾ ವರ್ಣಾಃ ಸ್ವೇ ಸ್ವೇ ಧರ್ಮೇ ನಿಮೋಜಿತಾಃ ॥**

ಬ್ರಹ್ಮದೇವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನೂ ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ, ಸನ್ಯಾಸ, ಎಂಬ ನಾಲ್ಕು ಆಶ್ರಮಗಳನ್ನೂ ನಿರ್ಮಿಸಿರುತ್ತಾರೆ. ಎಲ್ಲ ವರ್ಣದವರೂ ವೇದಶಾಸ್ತ್ರಗಳಲ್ಲಿ ವಿಧಿಸಿದ ತಮ್ಮ ತಮ್ಮ ವರ್ಣಧರ್ಮಗಳನ್ನೂ, ಆಶ್ರಮಧರ್ಮಗಳನ್ನೂ ಪರಿಪಾಲಿಸಬೇಕು. ಈ ವರ್ಣಾಶ್ರಮ ಧರ್ಮಗಳನ್ನು ಪಾಲಿಸದ ಮೂರ್ಖನು ಯಾವ ಸಿದ್ಧಿಯನ್ನು ಪಡೆಯಲಾರ.

**ಸ್ವಧರ್ಮೇಣಾಗತಂ ದ್ರವ್ಯಂ ಶುಕ್ಲದ್ರವ್ಯಂ ತದುಚ್ಯತೇ ।**
**ಶುಕ್ಲದ್ರವ್ಯೇಣ ಯದ್ದಾನಂ ದೀಯತೇ ಶ್ರದ್ಧಯಾನ್ವಿತಂ ॥**
**ಸ್ವಲ್ಪೇನಾಪಿ ಮಹಾಪುಣ್ಯಂ ತಸ್ಯ ಸಂಖ್ಯಾ ನ ವಿದ್ಯತೇ ॥**

ಸ್ವಧರ್ಮದಿಂದ ಸಂಪಾದಿಸಿದ ದ್ರವ್ಯವು ಶುದ್ಧ ದ್ರವ್ಯವೆನಿಸುತ್ತದೆ. ಅಂಥ ಶುದ್ಧ ದ್ರವ್ಯವನ್ನು ಶ್ರದ್ಧೆಯಿಂದ ಸ್ವಲ್ಪ ಮಾತ್ರ ದಾನನೀಡಿದರೂ ಅಸಂಖ್ಯ ಪುಣ್ಯವು ಪ್ರಾಪ್ತವಾಗುತ್ತದೆ.

**ನೀಚಸಂಗೇನ ಯದ್ದ್ರವ್ಯಂ ಅನೀತಂ ಗೃಹಕರ್ಮಸು ।**
**ತೇನ ದ್ರವ್ಯೇಣ ಯದ್ದಾನಂ ಕೃತಂವೈ ಮನುಜಾದಿಭಿಃ ॥**
**ತತ್ಫಲಂ ನಭವೇತ್ತ್ವೈವೈ ನೈವ ತತ್ಫಲ ಭಾಗಿನಃ ।**

ದುರ್ಜನ ಸಹವಾಸದಿಂದ ಮತ್ತು ಪಾಪಿಗಳ ಕೈಯಲ್ಲಿ ಕೆಲಸಮಾಡಿ ಗಳಿಸಿದ ಹಣವನ್ನು ದಾನ ಮಾಡಿದರೆ ಯಾವ ಪುಣ್ಯವೂ ಬರುವದಿಲ್ಲ.

ಇಲ್ಲಿ ಈಗ ಮಾಡಿದ ಕರ್ಮಗಳ ಫಲವನ್ನು ಮುಂದೆ ಪರಲೋಕ ಪರಜನ್ಮಗಳಲ್ಲಿ ಮನುಷ್ಯನು ಉಣ್ಣುತ್ತಾನೆ. ಈಗ ಒಳ್ಳೊಳ್ಳೇ ಪರೋಪಕಾರ ದಾನ, ಧರ್ಮ, ಯಜ್ಞ, ಯಾಗ, ಪೂಜೆ, ಪುರಸ್ಕಾರ, ಮುಂತಾದ ಪುಣ್ಯ ಕರ್ಮಗಳನ್ನೇ ಮಾಡುವ ಮನುಷ್ಯನಿಗೆ ದುಃಖವು ಒದಗಿ ಬಂದರೆ ಮನಸ್ಸನ್ನು ಕಿಂಕರ ಮಾಡಿಕೊಳ್ಳಬಾರದು. ಈಗ ಒದಗಿದ ದುಃಖವು ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಕರ್ಮದ ಫಲವೆಂದು ತಿಳಿಯಬೇಕು. ಈಗ ಪಾಪಾಚರಣವನ್ನು ಮಾಡುವ ದುಷ್ಟ, ಭ್ರಷ್ಟ, ಧೂರ್ತ, ವಂಚಕ, ನಾಸ್ತಿಕ, ಪರದ್ರೋಹಿ ಮನುಷ್ಯರಿಗೆ ಸುಖ, ಸಂಪದ, ಅಧಿಕಾರ, ಐಶ್ವರ್ಯ ಮುಂತಾದ ವೈಭೋಗದಲ್ಲಿ ತೇಲಾಡುತ್ತಿದ್ದರೆ, ಅದೆಲ್ಲ ಅವನು ಜನ್ಮಾಂತರದಲ್ಲಿ ಮಾಡಿದ ಪುಣ್ಯರಾಶಿಯ ಫಲವೆಂದು ತಿಳಿದುಕೊಳ್ಳಬೇಕು. ಹಗ್ಗದಲ್ಲಿ ಪಶುಗಳನ್ನು ಕಟ್ಟಿ ಮನಬಂದಲ್ಲಿ ಎಳೆದುಕೊಂಡು ಹೋಗುವಂತೆ ಕರ್ಮಬಂಧದಿಂದ ದೇವರು ಎಲ್ಲ ಮಾನವರನ್ನು ಸುಖದುಃಖಗಳಿಗೆ ಒಳಪಡಿಸುತ್ತಾನೆ. ಋಷಿಗಳೂ, ಮಾನವರೂ, ದೇವತೆಗಳೂ ಸಹ ಕರ್ಮಬಂಧನವನ್ನು ಮೀರಲು ಸಮರ್ಥರಾಗುವದಿಲ್ಲ. ಮಹಾದೇವರ ದೇಹದಲ್ಲಿ ಓಡಾಡುವ ಹಾವುಗಳೂ ಸಹ ವಿಷಮುಕ್ತವಾಗಿಲ್ಲ. ಅಮೃತವನ್ನು ಅವು ಪಾನಮಾಡಲಾರವು. ತನ್ನ ದೇಹವನ್ನು ಆಶ್ರಯಿಸಿದ ಸರ್ಪಗಳ ವಿಷವನ್ನು ಕಳೆಯಲು ಶಿವನಿಗೂ ಸಹ ಶಕ್ಯವಾಗಿಲ್ಲ.

**ಆರೋಗ್ಯಂ ಭಾಸ್ಕರಾದಿಚ್ಛೇತ್ ।**

ಆರೋಗ್ಯ ಬೇಕಾದವರು ಸೂರ್ಯನ ಆರಾಧನೆ ಮಾಡಬೇಕು ಎಂದು ಹಿರಿಯರ ಹಾಗೂ ಪುರಾಣಗಳ ಹೇಳಿಕೆ. ಆದರೆ ಅದೇ ಸೂರ್ಯನು ತನ್ನ ರಥದಲ್ಲಿ ಸಾರಥಿಯಾಗಿ ಕುಳಿತ ಕುಂಟ ಅರುಣನ ಕಾಲುಗಳನ್ನು ಸರಿಪಡಿಸಲು ಸಮರ್ಥನಾಗಿಲ್ಲ. ಇದರ ಮೇಲಿಂದ ಪ್ರಾಣಿಗಳ ಕರ್ಮಬಂಧನವನ್ನು ತಪ್ಪಿಸುವ ಶಕ್ತಿ ಋಷಿಗಳಿಗೂ ದೇವತೆಗಳಿಗೂ ಇರುವದಿಲ್ಲ.

ಆದರೆ ಇಂದ್ರದ್ಯುಮ್ನ ಎಂಬ ರಾಜರ್ಷಿಯು ತನ್ನ ಕರ್ಮದಿಂದ ಆನೆಯ ಜನ್ಮವನ್ನು ಹೊಂದಿದ್ದ. ಅದನ್ನು ಮೊಸಳೆ ಹಿಡಿದಾಗ ಶ್ರೀಹರಿಯು ಬಂದು ಆ ನಕ್ರವನ್ನು ಕೊಂದು ಆನೆಯನ್ನು ಕರ್ಮಬಂಧನದಿಂದ ಬಿಡಿಸಿದ. ಹೀಗೆ ಕರ್ಮಪಾಶದಿಂದ ಬಿಡುಗಡೆ ಮಾಡಿಸಲು ಈ ಪ್ರಪಂಚದಲ್ಲಿ ಶ್ರೀಹರಿ ಒಬ್ಬನೇ ಸಮರ್ಥ. ರುದ್ರ ಬ್ರಹ್ಮಾದಿ ದೇವತೆಗಳೂ, ಅಸುರರೂ, ಮಾನವರೂ ಕರ್ಮಬದ್ಧರೇ.

**ಕರ್ಮಾಧೀನಂ ಜಗತ್ಸರ್ವಂ ವಿಷ್ಣುನಾ ನಿರ್ಮಿತಂ ಪುರಾ ।**
**ತತ್ಕರ್ಮ ಕೇಶವಾಧೀನಂ ರಾಮನಾಮ್ನಾ ವಿನಶ್ಯತಿ ॥**

**ರುದ್ರ ಬ್ರಹ್ಮಾದಯೋ ದೇವಾ ಮಾನವಾಶ್ಚಾಸುರಾಶ್ಚ ಯೇ ।**
**ತೇ ಸರ್ವೇ ಕರ್ಮಬದ್ಧಾಶ್ಚ ವಿಚರಂತಿ ಮಹೀತಲೇ ॥**

ಬ್ರಹ್ಮದೇವ, ಮಹಾದೇವ ಮೊದಲಾದ ಸುರಾಸುರ ನರರೆಲ್ಲರೂ ಕರ್ಮಬದ್ಧರೇ. ಸರ್ವ ಜಗತ್ತೇ ಕರ್ಮದ ಅಧೀನವಾಗುವಂತೆ ಸ್ವಾಮಿ ಶ್ರೀಹರಿ ನಿರ್ಮಿಸಿದ್ದಾನೆ. ಆ ಕರ್ಮವು ಕೇಶವನ ಅಧೀನ. ರಾಮನಾಮದ ಉಚ್ಚಾರದಿಂದ ಎಂಥ ದುಷ್ಕರ್ಮವೂ ನಷ್ಟವಾಗುತ್ತದೆ.

ಆದುದರಿಂದ ಮಾನವರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ವೇದಶಾಸ್ತ್ರೋಕ್ತ ಕರ್ಮಗಳನ್ನೇ ನಿಷ್ಕಾಮಬುದ್ಧಿಯಿಂದ ಆಚರಿಸಿ ಸರ್ವಕರ್ಮಗಳನ್ನೂ ಶ್ರೀಹರಿಗೆ ಅರ್ಪಿಸಬೇಕು. ಕಾಮ್ಯಕರ್ಮಗಳನ್ನು ಮಾಡಬಾರದು. ಸ್ವರ್ಗಕಾಮನೆಯಿಂದ ಮಾಡಿದ ಯಜ್ಞಾದಿಗಳು ಕೂಡ ಅಲ್ಪ, ಅಸ್ಥಿರ, ಸುಖವನ್ನು ನೀಡುತ್ತವೆ. ಶಾಶ್ವತವಾದ ಸುಖವು ಬೇಕಾದರೆ ನಿಷ್ಕಾಮಕರ್ಮವನ್ನು ಶ್ರೀಹರಿಯಲ್ಲಿ ಮಾಡಬೇಕು, ಮತ್ತು ಈ ಪ್ರಪಂಚವೆಲ್ಲ ಅಶಾಶ್ವತ ಹೇಯವೆಂದು ತಿಳಿದು ಶ್ರೀಹರಿಯೇ ಸರ್ವಸ್ವಾಮಿ, ಸರ್ವನಿಯಾಮಕ ಎಂದು ಚೆನ್ನಾಗಿ ಅರಿತು ಅವನಲ್ಲಿ ನಿರ್ವ್ಯಾಜ ನಿಶ್ಚಲ ಭಕ್ತಿಯನ್ನು ಮಾಡಬೇಕು. ಬಕಪಕ್ಷಿಯು ನೀರಿನಲ್ಲಿ ಎಲ್ಲ ಜಲಚರಗಳನ್ನು ತಿಂದರೂ ಮೊಸಳೆಯ ತಂಟೆಗೆ ಬರುವದಿಲ್ಲ. ಅದರಂತೆ ಯಮ ಮತ್ತು ಅವನ ದೂತರು ಭೂಲೋಕದಲ್ಲಿ ಎಲ್ಲ ಪ್ರಾಣಿಗಳನ್ನು ಸೆಳೆದೊಯ್ದರೂ ಹರಿಭಕ್ತರನ್ನು ಮುಟ್ಟುವದಿಲ್ಲ. ಯಾವುದೇ ಜಾತಿ, ಧರ್ಮದವರೂ ಪಾಮರರೂ, ಕೀಳು ಕುಲದವರೂ ಭಕ್ತಿಯಿಂದ ಧ್ಯಾನಮಾಡಿದರೂ ಶ್ರೀಹರಿಯು ಅವರನ್ನು ಕೈಹಿಡಿದು ಕಾಪಾಡುವನು. ತನ್ನನ್ನು ಹೊಡೆದ ಬೇಡನಿಗೂ ಬೇಡಿ ಬಯಸಿದ ಕುಬ್ಜೆಗೂ ಮುಕ್ತಿಕೊಟ್ಟ ಹರಿ ಯಾವ ಭಕ್ತರನ್ನೂ ಕೈಬಿಡಲಾರ.

**ಬ್ರಹ್ಮಾದ್ಯೈಃ ದುರ್ಲಭಃ ಸ್ವಪ್ನೇ ಸುಲಭೋ ಗೋಪಮಂದಿರೇ ।**
**ಗೋಪೋಚ್ಛಿಷ್ಟಂ ಯದಾ ಭುಕ್ತಂ ತದಾ ತೇ ತಾರಿತಾ ಸ್ವಯಂ ॥**

ಬ್ರಹ್ಮಾದಿ ದೇವತೆಗಳಿಗೂ ಕನಸಿನಲ್ಲಿ ಕೂಡ ದುರ್ಲಭನಾದ ಶ್ರೀಹರಿಯು ದನಕಾಯುವ ಗೋಪಾಲಕರ ಮನೆಯಲ್ಲಿ ಸುಲಭವಾಗಿ ದೊರಕಿದ, ಅಂಥ ಗೋಪಾಲ ಕೃಷ್ಣನ ಉಚ್ಛಿಷ್ಟವನ್ನು ಊಟಮಾಡಿ ಆ ಬ್ರಹ್ಮಾದಿ ದೇವತೆಗಳೆಲ್ಲರೂ ಉದ್ಧೃತರಾದರು.

*ಇತಿ ಪದ್ಮ ಮಹಾಪುರಾಣ ಭಾಗ-೩ರ ಉತ್ತರಖಂಡದಲ್ಲಿನ ಶ್ರೀ ವಿಷ್ಣುವಿನ ಮಾಹಾತ್ಮ್ಯ ವರ್ಣನೆ ಎಂಬ ನೂರ ಇಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*



*ಉತ್ತರಖಂಡವು ಭಾಗ-೪ರಲ್ಲಿ ಮುಂದುವರೆದಿದೆ, ಹಾಗೂ ಪದ್ಮಮಹಾಪುರಾಣ ಭಾಗ-೪ರಲ್ಲಿ ಸಂಪೂರ್ಣವಾಗಿದೆ.*

*ಸರ್ವೇಜನಾಃ ಸುಖಿನೋ ಭವಂತು*
*ಓಂ ಶಾಂತಿಃ ಶಾಂತಿಃ ಶಾಂತಿಃ*

